# ಬ್ರಿಟಿಷರ ಚರಿತ್ರೆ

ಕಂದಾಡೆ ಕೃಷ್ಣಯ್ಯಂಗಾರ್, ಬಿ.ಎ.
ಅಧ್ಯಾಪಕ, ದೇಶೀಯ ವಿದ್ಯಾಶಾಲೆ
ಬೆಂಗಳೂರು

ಪ್ರಭಾಕರ್ ಬುಕ್ ಡಿಪೊ
ಕೋಟೆ, ಬೆಂಗಳೂರು ಸಿಟಿ

1942 ] [ ಮೂರು ರೂ.

# ಪೀಠಿಕೆ

ಇಂಗ್ಲಿಷರ ಚರಿತ್ರೆಯನ್ನು ಕನ್ನಡದಲ್ಲಿ ಮೊದಲು ಬರೆಸಿದವರು ಮಿಷನರಿಗಳು. ಆ ಪುಸ್ತಕಗಳು ಈಗ ಗುಜರಿಗಳಲ್ಲಿಯೂ ಕಾಣುವುದಿಲ್ಲ.

ತರುವಾಯ ಹುಟ್ಟಿಕೊಂಡವು ಭಾಷಾಂತರಗಳು. ಕನ್ನಡದಲ್ಲಿಯೇ ವಿದ್ಯಾರ್ಥಿಗಳಿಗೆ ಪಾಠನಡೆಯುವ ಸಮಯವೊದಗಿದಾಗ ಟೌಟ್‌ಪಂಡಿತನ ಗ್ರಂಥವೊಂದರ ಅನುವಾದ ಪಠ್ಯಪುಸ್ತಕವೆಂದು ಗೊತ್ತಾಯಿತು. ಆ ಗ್ರಂಥ ಸರ್ವಸಮರ್ಪಕವಾಗಿಲ್ಲ. ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಅದರಿಂದ ತೊಂದರೆಯೇ ಆಗಿದೆ.

ಈ ಪುಸ್ತಕ ಭಾಷಾಂತರವಲ್ಲ. ಸ್ವತಂತ್ರವಾದುದೂ ಅಲ್ಲ. ಇಂಗ್ಲಿಷ್ ಭಾಷೆಯಲ್ಲಿ ನೂರಾರು ಗ್ರಂಥಗಳುಂಟು. ಅವುಗಳ ಪ್ರಭಾವ ಈ ಪುಸ್ತಕದಲ್ಲಿ ಅಲ್ಲಲ್ಲಿ ಕಾಣದಿರಲು ಸಾಧ್ಯವಿಲ್ಲ. ಭಾಷಾಂತರವಲ್ಲವಾದುದರಿಂದ ಸ್ವತಂತ್ರವೆಂದು ಭಾವಿಸಬಹುದು.

ಇಂಗ್ಲಿಷ್ ಬಾಲಕರಿಗೆಂದು ತಾನು ಬರೆದ ಪುಸ್ತಕವನ್ನು ಭಾರತೀಯ ಬಾಲಕರಿಗೂ ಗೊತ್ತುಮಾಡಿದ ಸಂಗತಿಯನ್ನು ತಿಳಿದಾಗ ಟೌಟ್ ಪಂಡಿತನೇ ಚಕಿತನಾದನು. ಭಾರತೀಯರಿಗಾಗಿ ಬೇರೊಂದು ಪುಸ್ತಕ ಬರೆದಿಟ್ಟನು. ಇಂಗ್ಲಂಡಿನಲ್ಲಿ ಉಪಯೋಗವಾಗಲೆಂದು ಬರೆದುದು ಭಾರತೀಯರಿಗೆ ದಾನ್ತವವಾಗಿ ಅಪಥ್ಯ.

ಬ್ರಿಟಿಷರ ಚರಿತ್ರೆಯೆಂಬುದು 25 ವರ್ಷಗಳ ಹಿಂದಿದ್ದ ಹಾಗಿಲ್ಲವೇ ಇಲ್ಲ. ಐರೋಪ್ಯಯುದ್ಧದ ತರುವಾಯ ದೃಷ್ಟಿಯೇ ಬದಲಾಯಿತು. ಈಚೆಗೆ ಇಂಗ್ಲಿಷ್ ಭಾಷೆಯಲ್ಲಿ ತೋರಿಕೊಂಡಿರುವ ಪುಸ್ತಕಗಳಲ್ಲಿ ಈ ಭೇದ ಸ್ಫುಟವಾಗಿ ಕಾಣುವುದು. ಬ್ರಿಟಿಷರ ಚರಿತ್ರೆಯನ್ನು ತಿಳಿಯುತ್ತ ತಿಳಿಯುತ್ತ ಒಟ್ಟು ಜಗತ್ತಿನ ಚರಿತ್ರೆಯನ್ನೇ ತಿಳಿಯಬೇಕಾಗಿರುವುದು ಮಾತ್ರವಲ್ಲ. ಬ್ರಿಟಿಷರಲ್ಲದವರ ದೃಷ್ಟಿಗೂ ಹೊಂದಿಕೊಂಡಿರಬೇಕಾದ ಅವಶ್ಯವುಂಟು.

ಈ ಸಣ್ಣ ಪುಸ್ತಕವನ್ನು ಬರೆಯುವುದರಲ್ಲಿ ಟೌಟ್, ಹ್ಯಾಸೆಲ್, ವಾರ್ನರ್ ಮಾರ್ಟೆನ್, ಫ್ಲೆಚರ್, ಹ್ಯಾಸ್ಕಿಟ್, ಕೋಲ್ ಮುಂತಾದವರ ಗ್ರಂಥಗಳನ್ನಲ್ಲದೆ ವೆಲ್ಸ್, ಸ್ಲಾಸನ್, ಫಿಷರ್, ನೆಹರು, ಕರ್ಟಿಸ್ ಮುಂತಾದವರ ಗ್ರಂಥಗಳನ್ನೂ ಉಪಯೋಗಿಸಿಕೊಂಡಿರುತ್ತೇನೆ. ಎರಡುವರ್ಷಗಳ ಹಿಂದೆಯೇ ಪ್ರಾರಂಭಮಾಡಿದಾಗ್ಯೂ ಕಾರಣಾಂತರಗಳಿಂದ ಈವರೆಗೂ ಮುಗಿಸಲಾಗಲಿಲ್ಲ. ನಕ್ಷೆಗಳನ್ನೂ ಚಿತ್ರಗಳನ್ನೂ ಸೇರಿಸಿದ್ದರೆ ಎಷ್ಟೋ ಮೇಲಾಗಿತ್ತು. ಆದರೆ ಈಗಿನ ಸ್ಥಿತಿಯಲ್ಲಿ ಸಾಧ್ಯವಲ್ಲ.

ಪುಸ್ತಕವನ್ನು ಈ ಅಚ್ಚಿನಲ್ಲಿ ಸಾಧಿಸುವುದು ಸುಲಭವಲ್ಲ; ಅದನ್ನು ಕೈಗೊಂಡು ಅಂದತುಂಬಿ ನಿರ್ವಹಿಸಿದ ಬಿ. ಬಿ. ಡಿ. ಮುದ್ರಣಕಾರರ ಸಾಧನೆಗೆ ಗ್ರಂಥಕರ್ತನಂತೆಯೆ ಇತರರೂ ಕೃತಜ್ಞರಾಗಿರಬೇಕು.

ವಿಷಯವನ್ನು ಇಲ್ಲಿ ನಿರೂಪಿಸಿರುವ ಬಗೆ ಓದುಗರಿಗೆ ಸುಲಭವೆಂದು ತೋರಿದರೆ ನನ್ನ ಪ್ರಯತ್ನ ಸಾರ್ಥಕ.

**ಕಂ. ಕೃಷ್ಣಯ್ಯಂಗಾರ್.**

# ಅನುಕ್ರಮಣಿಕೆ


| | | |
|---|---|---|
| I | **ಪೂರ್ವವೃತ್ತಾಂತ** .. ... | **1** |
| II | **ಟ್ಯೂಡರ್ ವಂಶ** ... . | **22** |
| | ಏಳನೆ ಹೆನ್ರಿ . . | ” |
| | ಎಂಟನೆ ಹೆನ್ರಿ .. . | 34 |
| | ಆರನೆ ಎಡ್ವರ್ಡ್ . ... | 63 |
| | ಮೇರಿ . .. | 71 |
| | ಎಲಿಸಬೆತ್ ರಾಣಿ . . | 79 |
| | ಟ್ಯೂಡರ್ ಕಾಲದ ಮಹಿಮೆ . | 116 |
| III | **ಸ್ಟ್ಯುಯರ್ಟ್ ವಂಶ** .. | **123** |
| | ಹಿರೇ ಜೇಮ್ಸ್ .. . | ” |
| | ಹಿರೇ ಚಾರ್ಲ್ಸ್ . .. | 136 |
| | ರಾಜರಹಿತರಾಷ್ಟ್ರ . ... | 161 |
| | ಎರಡನೆ ಚಾರ್ಲ್ಸ್ . . | 176 |
| | ಎರಡನೆ ಜೇಮ್ಸ್ . | 190 |
| | ರಕ್ತಪಾತರಹಿತರಾಷ್ಟ್ರಪಲ್ಲಟ . | 197 |
| | ಮೂರನೆ ವಿಲಿಯಂ ... | 203 |
| | 14ನೆ ಲೂಯಿಯೊಡನೆ ಹೋರಾಟ | 205 |
| | ಆನ್ ರಾಣಿ . . | 221 |
| | ಸ್ಟ್ಯುಯರ್ಟ್ ದೊರೆಗಳ ಕಾಲಮಹಿಮೆ . | 229 |
| IV | **ಹ್ಯಾನೊವರ್ ವಂಶದ ದೊರೆಗಳ ಕಾಲ** | **238** |
| | ಹಿರೇಕಿರೇ ಜಾರ್ಜ್ ದೊರೆಗಳು, ವ್ಹಿಗ್ಗರು .. | 239 |
| | ಜಾಕೋಬೈಟ್ ದಂಗೆಗಳು ... ... | 241 |
| | ವ್ಹಿಗ್ ಮಂತ್ರಿಗಳ ಆಡಳಿತ . ... | 244 |
| | ಸಂಧಿವಿಗ್ರಹ 1713–1763 . . | 251 |
| | ಮೂರನೆ ಜಾರ್ಜ್ ದೊರೆ, ಮಂತ್ರಿಗಳು 1760—1783 | 268 |
| | ಅಮೆರಿಕದ ಸ್ವಾತಂತ್ರ್ಯ ಸಾಧನೆ .. | 273 |
| | ಫ್ರಾನ್ಸಿನ ಮಹಾಪಲ್ಲಟ . ... | 281 |
| | ನಪೋಲಿಯನ್ ಬೋನಪಾರ್ಟ್ .... | 289 |
| | ದೊರೆಯು ಮಂತ್ರಿಗಳು 1783—1820 .... | 303 |

ಐರ್ಲಂಡ್ 1691—1800 ... ... 309
ವ್ಯಾಪಾರ ಸಾಮ್ರಾಜ್ಯ, ಹಿಂದುಸ್ತಾನ್ .. 318
ವ್ಯವಸಾಯ ಕೈಗಾರಿಕೆಗಳ ಪರಿವರ್ತನ . 325
ಮತಶಾಖೆಗಳು, ಧಾರ್ಮಿಕವಿಚಾರಗಳು .... 331

**V ನಾಲ್ಕಡಿ ಜಾರ್ಜ್ ನಾಲ್ಕಡಿ ವಿಲಿಯಂ ದೊರೆಗಳು .. 336**

ಒಳಾಡಳಿತ 1820—1841 .... .. 337
ಸಂಧಿವಿಗ್ರಹ 1815—1851 ... .. 353

**VI ವಿಕ್ಟೋರಿಯ .. .... 367**

ಒಳಾಡಳಿತ 1837—1867 .. ... 373
ಸಂಧಿವಿಗ್ರಹ 1851—1890 . ... 381
ಒಳಾಡಳಿತ 1868—1901 .. .. 394
ಐರ್ಲಂಡ್ 1800—1922 .. . 403
ಹಿಂದುಸ್ತಾನ್ .. . 415
ಅಮೆರಿಕದ ಅಭಿವೃದ್ಧಿ, ಕನಡ ಡುಮಿನಿಯನ್ . 419
ಆಸ್ಟ್ರೇಲಿಯ, ನ್ಯೂಸೀಲಂಡ್ .. 429
ಆಫ್ರಿಕದಲ್ಲಿ .... . 433
ಏಷ್ಯದಲ್ಲಿ ... ... 448
19ನೆ ಶತಮಾನ-ಕಾಲಸ್ಥಿತಿ . .... 453

**VII ಇಪ್ಪತ್ತನೆ ಶತಮಾನ .... ... 462**

ಒಳಾಡಳಿತ 1901—1914 ... . „
ಸಂಧಿವಿಗ್ರಹ 1900—1914 .... ... 468
ಐರೋಪ್ಯಯುದ್ಧ 1914—1918 .... 474
ಶಾಂತಿಸ್ಥಾಪನೆ, ಒಪ್ಪಂದಗಳು .... 482

**VIII ಯುದ್ಧದ ತರುವಾಯ .... . 486**

ಒಳಾಡಳಿತ .... .... „
ಡುಮಿನಿಯನ್ನುಗಳು .... .... 491
ಇತರ ರಾಷ್ಟ್ರಗಳು .... .... 493
ಯುದ್ಧದ ಋಣ ತಪ್ಪುಕಾಣಿಕೆಗಳು .... 497
ಸರ್ವರಾಷ್ಟ್ರಕೂಟ .... .... 499

# ಪೂರ್ವ ವೃತ್ತಾಂತ

## 1. ಐರೋಪ್ಯರು

ಪರಂಗಿಯವರೆಂದೋ ಬಿಳಿಜನರೆಂದೋ ಕೆಂಪುಜನರೆಂದೋ ಕರೆಯುತ್ತಿದ್ದವರನ್ನು ಈಚಿಗೆ ಐರೋಪ್ಯರೆಂದು ಕರೆಯುತ್ತೇವೆ. ಐರೋಪ್ಯರೆಂದರೆ ಯೂರೋಪಿನ ನಿವಾಸಿಗಳು. ಯೂರೋಪಿನ ನಕ್ಷೆ ನೋಡಿದರೆ ಸಾಕು ಆ ಭೂಭಾಗದಲ್ಲಿ ಅನೇಕಾನೇಕದೇಶಗಳು ಸಹಜಸಿದ್ಧವಾದ ಮೇರೆಗಳಿಂದ ಬೇರೆಬೇರೆಯಾಗಿರುವ ಅಂಶ ಸ್ಪಷ್ಟವಾಗುತ್ತದೆ. ಪೋರ್ಚುಗಲ್, ಸ್ಪೈನ್, ಫ್ರಾನ್ಸ್, ಇಟಲಿ, ಸ್ವಿಟ್ಸರ್ಲೆಂಡ್, ಬೆಲ್ಜಿಯಂ, ಹಾಲೆಂಡ್, ಡೆನ್ಮಾರ್ಕ್, ಜರ್ಮನಿ, ನಾರ್ವೆ, ಸ್ವೀಡೆನ್ ಮುಂತಾದ ನಾನಾ ದೇಶಗಳ ನಿವಾಸಿಗಳೆಲ್ಲರೂ ಐರೋಪ್ಯರೆಂಬ ದೊಡ್ಡರಾಶಿಗೆ ಸೇರಿದ್ದರೂ ಪ್ರತಿದೇಶದವರೂ ಬೇರೆಬೇರೆಯಾದವರೇ. ಯೂರೋಪಿನ ಪಡುವಲಿಗಿರುವ ಬ್ರಿಟಿಷ್‌ದ್ವೀಪಗಳ ನಿವಾಸಿಗಳೂ ಐರೋಪ್ಯರೇ.

ಬ್ರಿಟಿಷ್‌ದ್ವೀಪಗಳೆಂಬ ಗುಂಪಿನಲ್ಲಿ ಗ್ರೇಟ್‌ಬ್ರಿಟನ್ ಮತ್ತು ಐರ್ಲೆಂಡೆಂಬ ಎರಡು ದೊಡ್ಡದ್ವೀಪಗಳೂ ಅನೇಕ ಸಣ್ಣದ್ವೀಪಗಳೂ ಸೇರಿವೆ. ಈ ಬ್ರಿಟಿಷ್ ದ್ವೀಪಗಳೆಂಬ ರಾಶಿಯು ಯೂರೋಪಿಗೆ ಸೇರಿಯೂ ಇದೆ, ಸೇರದೆಯೂ ಇದೆ. ಬ್ರಿಟಿಷರು ಐರೋಪ್ಯರೊಡನೆ ಸೇರಿಯೂ ಸೇರಬಹುದು, ಸೇರದೆಯೂ ಇರಬಹುದು ಎನ್ನುವಂತಿದೆ. ಬ್ರಿಟಿಷ್‌ದ್ವೀಪಗಳ ನಿವಾಸಿಗಳೆಲ್ಲರಿಗೂ ಬ್ರಿಟಿಷರೆಂದು ಹೆಸರು. ಬೇರೆ ಬೇರೆ ಭಾಗಗಳವರಿಗೆ ಬೇರೆ ಬೇರೆ ಹೆಸರುಗಳುಂಟು—**ಇಂಗ್ಲಿಷ್, ವೆಲ್ಷ್, ಸ್ಕಾಚ್, ಐರಿಷ್, ಮ್ಯಾನ್ಕ್ಸ್** ಇತ್ಯಾದಿ. ಬಹುಕಾಲ ಇವರು ಪ್ರತ್ಯೇಕರಾಗಿ ಪರಸ್ಪರವೈರಿಗಳಾಗಿಯೇ ಇದ್ದು ಕಾಲಾನಂತರದಲ್ಲಿ ಐಕಮತ್ಯವನ್ನು ರೂಢಿಸಿಕೊಂಡು ಪೃಥ್ವಿಯ ಇತರಭಾಗಗಳನ್ನು ಗೆದ್ದು 'ರವಿಮುಳುಗದ ಸಾಮ್ರಾಜ್ಯ'ವನ್ನು ಕಟ್ಟಿ ಇಡೀ ಜಗತ್ತಿಗೇ ಅಗ್ರಗಣ್ಯರಾದರು. ಹತ್ತುಸಾವಿರ ದ್ವೀಪಗಳನ್ನೂ ಎರಡುಸಾವಿರ ನದಿಗಳನ್ನೂ ಭೂಮಂಡಲದ ನಾಲ್ಕನೇ ಭಾಗವನ್ನೂ ಸಂಪಾದಿಸಿದರು. ತಮ್ಮ ಸ್ವಂತದೇಶದ ತೊಂಭತ್ತರಷ್ಟು ವಿಸ್ತಾರವಾದ ಭೂಭಾಗಗಳನ್ನು ವಶಪಡಿಸಿಕೊಂಡರು. ಇದು ಹೇಗಾಯಿತೆಂಬುದನ್ನು ಇವರ ಚರಿತ್ರೆಯಲ್ಲಿ ಕಾಣಬೇಕು.

**ಬ್ರಿಟಿಷರು**

ಯೂರೋಪ್ ಖಂಡದಲ್ಲಿ ಮೊದಲು ಸಭ್ಯತೆಪಡೆದವರು ಭೂಮಧ್ಯಸಮುದ್ರದ ಮೂಡಲಲ್ಲಿದ್ದ ಗ್ರೀಕರು; ಅವರನ್ನೇ ನಾವು ಯವನರೆಂದು ಕರೆಯುತ್ತಿದ್ದುದು. ರಾಮಾಯಣಭಾರತಗಳಂತಿರುವ **ಇಲಿಯಡ್** (Iliad) **ಅಡಿಸ್ಸಿ** (Odyssey) ಕಾವ್ಯಗಳು ಅವರ **ಹೋಮರ್** (Homer) ಕವಿಯು ಬರೆದುದು. ಜಗಜ್ಜೇತನೆಂದೆನಿಸಿ

**ಕೊಂಡ ಸಿಕಂದರನು** (Alexander the Great) ಅವರಲ್ಲಿ ಹುಟ್ಟಿದವನು. ಅವನು ಕಟ್ಟಿದ ಸಾಮ್ರಾಜ್ಯವು ಕ್ಷೀಣವಾದಾಗ ಇಟಲಿಯಲ್ಲಿ ರೋಮಕರೆಂಬುವವರು ಪ್ರಾಬಲ್ಯಕ್ಕೇರಿ ಕ್ರಮವಾಗಿ ಭೂಮಧ್ಯಸಮುದ್ರದ ಸುತ್ತಣಭಾಗಗಳೆಲ್ಲವನ್ನೂ ಆಕ್ರಮಿಸಿಕೊಂಡು ರೋಮಕ ಸಾಮ್ರಾಜ್ಯವೆಂಬುದನ್ನು ಕಟ್ಟಿದರು. ರ್ಹೈನ್ ಮತ್ತು ಡಾನ್ಯೂಬ್‌ನದಿಗಳಿಂದ ಸಹರಾ ಮರುಭೂಮಿಯವರೆಗೂ ಅಟ್ಲಾಂಟಿಕ್‌ಸಾಗರದಿಂದ ಯೂಫ್ರೆಟೀಸ್ ಟೈಗ್ರಿಸ್ ನದಿಗಳವರೆಗೂ ಆ ಸಾಮ್ರಾಜ್ಯವು ನೆಲೆಸಿತ್ತು. **ಜೂಲಿಯಸ್‌ಸೀಸರ್, ಆಗಸ್ಟಸ್** ಮುಂತಾದವರು ರೋಮಕರು. ಲ್ಯಾಟಿನ್ ಅವರ ಭಾಷೆ. ಆ ಸಾಮ್ರಾಜ್ಯದ ಕಾಲದಲ್ಲಿಯೇ ಕ್ರೈಸ್ತಧರ್ಮವು ಜುಡೇಯ (Judaea) ಎಂಬ ದೇಶದಲ್ಲಿ ಹುಟ್ಟಿ ಯೂರೋಪಿನಲ್ಲೆಲ್ಲ ಹರಡುವಂತಾಯಿತು. ರೋಮಕಸಾಮ್ರಾಜ್ಯದಲ್ಲೆಲ್ಲ ಕ್ರೈಸ್ತಮತವು ಸ್ವೀಕೃತವಾಯಿತು.

**ಗ್ರೀಕರು**

**ರೋಮಕರು**

ಸಾಮ್ರಾಜ್ಯವು ಅತಿವಿಸ್ತಾರವಾಯಿತೆಂದು ಕೆಲವರು ಭಾವಿಸಿದ್ದರು. ಅದನ್ನನುಸರಿಸಿ ಒಬ್ಬಸಮ್ರಾಟನು ಸಾಮ್ರಾಜ್ಯವನ್ನು ಎರಡುಪಾಲಾಗಿ ಹಂಚಿಕೆ ಮಾಡಿದನು. ಪಡುವಲವಿಭಾಗಕ್ಕೆ **ರೋಮಕನಗರವು** ರಾಜಧಾನಿಯಾಯಿತು; ಮೂಡಲ ವಿಭಾಗಕ್ಕೆ **ಕಾನ್‌ಸ್ಟಾಂಟಿನೋಪಲ್** ರಾಜಧಾನಿಯಾಯಿತು. ಈ ವಿಭಾಗಗಳನ್ನನುಸರಿಸಿದ ಹಾಗೆ ಕ್ರೈಸ್ತಧರ್ಮದ ಆಚಾರವಿಚಾರಗಳಲ್ಲಿಯೂ ಭೇದಗಳು ತೋರಿಕೊಂಡು ಪಡುವಲರೀತಿಗೆ ರೋಮಕವೆಂದೂ ಮೂಡಲರೀತಿಗೆ ಗ್ರೀಕೆಂದೂ ರೂಢಿಯಾಯಿತು.

**ಸಾಮ್ರಾಜ್ಯವಿಭಾಗ**

ಪಡುವಲಸಾಮ್ರಾಜ್ಯ ಕ್ರಿ. ಶ. 476ರಲ್ಲಿ ಹಾಳಾಯಿತು. ಅನಾಗರಿಕರಾಗಿ ಉತ್ತರದಿಕ್ಕಿನಲ್ಲಿದ್ದ ನಾನಾಕುಲಗಳವರು ಪದೇಪದೇ ತೊಂದರೆಯನ್ನುಂಟುಮಾಡುತ್ತಲಿದ್ದು ಆ ವರ್ಷ ರೋಮಕಪಟ್ಟಣವನ್ನು ಮುತ್ತಿ ಹಿಡಿದುಬಿಟ್ಟರು. ಈಗಿನ ಇಟಲಿ, ಸ್ಪೈನ್, ಫ್ರಾನ್ಸ್, ಜರ್ಮನಿ ದೇಶಗಳಲ್ಲಿ ಈ ರೂಕ್ಷಜನರೇ ಪ್ರಬಲರಾಗಿ ಅವಾಂತರವನ್ನು ಮಾಡಿಬಿಟ್ಟರು. ಅವರಲ್ಲಿ ಮನೆ ಮಠ ಉದ್ಯೋಗ ಶಾಂತಿಗಳು ತೋರಿ ಸ್ಥಿರಜೀವನವು ನೆಲೆಯಾಗುವುದಕ್ಕೆ ಸುಮಾರು 500 ವರ್ಷಗಳ ಕಾಲ ಬೇಕಾಯಿತು. ಕ್ರೈಸ್ತಧರ್ಮವನ್ನು ಒಪ್ಪಿಕೊಂಡತರುವಾಯ ಅವರಲ್ಲಿ ನೀತಿಯು ಬೆಳೆಯಿತು.

ಯೇಸುವಿಗೆ ಆಪ್ತಶಿಷ್ಯರು ಹನ್ನೆರಡುಮಂದಿ. ಅವರಲ್ಲಿ **ಸೆಂಟ್ ಪೀಟರ್** ಎಂಬಾತನು ರೋಮಕನಗರದಲ್ಲಿ ಉಪದೇಶಮಾಡಿದ್ದನು; ಆ ಕಾರಣದಿಂದ ರೋಮಕನಗರದಲ್ಲಿ ಆತನ ಪೀಠವೆಂದು ಗೊತ್ತಾಗಿ ಆ ಪೀಠವನ್ನಲಂಕರಿಸಿದವರಿಗೆ **ಪೋಪ್**‌ಎಂಬ ಹೆಸರೂ ಪರಮಶ್ರೇಷ್ಠತೆಯ ಗುರುತ್ವವೂ ಪ್ರಾಪ್ತಿಯಾಗಿ ಜಗದ್ಗುರು

ಪತನವಿಯು ಸಂದಿತು. ಪೋಪರ ಪ್ರಯತ್ನದಿಂದಲೇ ನಾನಾರೂಪ್ಕ ಜನರೂ ಅವರ ಅಧಿಪತಿಗಳೂ ಕ್ರೈಸ್ತರಾದರು; ಆ ಕಾರಣದಿಂದ ಎಲ್ಲರೂ

**ಪಡುವಲ ಕ್ರೈಸ್ತರು**

ಆತನ ಶಿಷ್ಯರೆನಿಸಿ ಆಜ್ಞಾಧಾರಕರಾದರು. ಪೋಪನನ್ನು ಗೌರವಿಸಿಕೊಂಡು ಪಡುವಲ ಐರೋಪ್ಯರು ಕಳೆದ ಕಾಲವನ್ನು ಸಾಮಾನ್ಯವಾಗಿ **ಮಧ್ಯಮಕಾಲ**(Medieval Age)ವೆನ್ನುವರು. ಅದಕ್ಕೆ ಹಿಂದಿನದು ಅವಾಂತರದ ಕಾಲ; ಅದನ್ನು **ಅಂಧಕಾರಯುಗ**(Dark Ages)ವೆನ್ನುವರು.

ಮಧ್ಯಮಕಾಲವು ಕ್ರಿ. ಶ. 800ರಿಂದ ಮೊದಲಾಯಿತು. ಅದೇ ವೇಳೆಗೆ ಮುಸಲ್ಮಾನಮತಸ್ಥರು ಜುಡೇಯ ಎಂಬ ಕ್ರೈಸ್ತ ಪುಣ್ಯಭೂಮಿಯನ್ನು ಗೆದ್ದಿದ್ದರು; ಆಫ್ರಿಕಾಖಂಡದ ಉತ್ತರಭಾಗವನ್ನು ಗೆದ್ದು ಸ್ಪೈನ್‌ಪರ್ಯಾಯದ್ವೀಪವನ್ನೂ ಆಕ್ರಮಿಸಿದ್ದರು. ತಮ್ಮ ಪವಿತ್ರಯಾತ್ರಾಸ್ಥಳಗಳು ಅನ್ಯಮತಸ್ಥರ ಪಾಲಾಯಿತೆಂದು ಹಾಹಾಕಾರಪಡುತ್ತ ಐರೋಪ್ಯರು ಮುಸಲ್ಮಾನರ ಮೇಲೆ

**ಇಸ್ಲಾಮೀ ಸಂಪರ್ಕ**

ಯುದ್ಧಗಳನ್ನು ನಡೆಸಿದರು. ಕ್ರೈಸ್ತ ಮುಸ್ಲಿಂ ಯುದ್ಧಗಳು ಪದೇಪದೇ ನಡೆಯುತ್ತಲಿದ್ದವು; ಅವುಗಳನ್ನು **ಕ್ರುಸೇಡು**ಗಳೆಂದು ಕರೆಯುತ್ತಾರೆ. ಅವುಗಳಿಂದ ಪುಣ್ಯಭೂಮಿಯೇನೋ ಕ್ರೈಸ್ತರಿಗೆ ಸಿಕ್ಕದೆ ಹೋದರೂ ವ್ಯಾಪಾರ ಮತ್ತು ಶಾಸ್ತ್ರಜ್ಞಾನಗಳು ದೊರೆತವು. ವೈದ್ಯ, ಗಣಿತ, ರಸಾಯನ ಮುಂತಾದ ಶಾಸ್ತ್ರಗಳು ಅರಬ್ಬಿಯವರ ಮೂಲಕ ಐರೋಪ್ಯರಿಗೆ ತಿಳಿದವು. ಭಾರತವೇ ಮುಂತಾದ ಮೂಡಣ ದೇಶಗಳ ಸರಕುಗಳ ಉಪಯೋಗವೂ ಉಂಟಾಯಿತು.

14ನೆ ಶತಮಾನದ ವೇಳೆಗೆ ಕ್ರೈಸ್ತರು ತಮ್ಮ ಪುಣ್ಯಭೂಮಿಯ ಬಿಡುಗಡೆಗಾಗಿ ಪ್ರಯತ್ನಮಾಡುವುದನ್ನು ನಿಲ್ಲಿಸಿದರು. ಪಡುವಲ ನಾಡುಗಳ ಐರೋಪ್ಯರೆಲ್ಲರಿಗೂ ಪೋಪನು ಜಗದ್ಗುರುವಾಗಿ ಮತಾಚಾರವಿಚಾರಗಳಲ್ಲಿ ಸರ್ವಶ್ರೇಷ್ಠನಾಗಿದ್ದನು. ಇಟಲಿ, ಫ್ರಾನ್ಸ್, ಬ್ರಿಟನ್, ನೆದರ್ಲಂಡ್ಸ್, ಜರ್ಮನಿ, ಆಸ್ಟ್ರಿಯ, ಸ್ವಿಟ್ಸರ್ಲೆಂಡ್ ದೇಶಗಳು ಪ್ರತ್ಯೇಕರಾಷ್ಟ್ರಗಳಾಗಿ ಪರಸ್ಪರವಾಗಿ ವ್ಯವಹರಿಸುತ್ತ ಕೆಲವೇಳೆಮೈತ್ರಿಯಿಂದಲೂ ಕೆಲವೇಳೆವಿರೋಧದಿಂದಲೂ ಕೂಡಿರುತ್ತಿದ್ದವು. ರಾಜರು ತಮ್ಮ ರಾಜ್ಯಗಳನ್ನು ರೂಢಿಸಿಕೊಳ್ಳುವುದೇ ಕಷ್ಟವಾಗಿತ್ತು. ರಾಜಬಂಧು

**ಶ್ರೀಮಂತರು**

ಗಳೂ ರಾಜನಮಿತ್ರವರ್ಗದವರೂ ದೇಶದ ಜಮೀನಿನಲ್ಲಿ ದೊಡ್ಡದೊಡ್ಡ ಭಾಗಗಳನ್ನು ಪಡೆದು ಶ್ರೀಮಂತರೆನಿಸಿ ಉತ್ತಮಕುಲಸ್ಥರೆಂಬ ಹೆಮ್ಮೆಯಿಂದ ಕೂಡಿ ವಂಶಪರಂಪರೆಯಾಗಿ ತಮ್ಮ ಹಕ್ಕುಗಳನ್ನು ರಕ್ಷಿಸಲು ಹವಣಿಸುತ್ತಿದ್ದರು. ರಾಜನಿಗೂ ಶ್ರೀಮಂತರಿಗೂ ಸಾಧಾರಣವಾಗಿ ಸದಾ ಜಗಳಗಳೇ ನಡೆಯುತ್ತಿದ್ದವು. ಶ್ರೀಮಂತರಾದವರು ಉಪರಾಜರಂತೆಯೋ ಪಾಳೆಯಗಾರರಂತೆಯೋ ವರ್ತಿಸುತ್ತ ತಮ್ಮಲ್ಲಿಯೇ ಕಲಹಗಳನ್ನಾಡಿಕೊಳ್ಳುತ್ತಲಿದ್ದರು. ಅನೇಕ

ವೇಳೆ ರಾಜನಿಗೆ ವಿರೋಧಿಗಳಾಗಿ ರಾಜ್ಯದಲ್ಲಿ ಸಾಮಾನ್ಯಜನರಿಗೆ ತೊಂದರೆಕೊಡುತ್ತಲಿದ್ದರು. ಕೆಲವೇಳೆ ರಾಜರು ದುಷ್ಟರಾಗಿದ್ದಾಗ ಆ ದೌಷ್ಟ್ಯವನ್ನು ಶ್ರೀಮಂತರು ತಡೆಯುತ್ತಿದ್ದರು; ರಾಜನು ಅಸಮರ್ಥನಾದಾಗ ಶ್ರೀಮಂತರು ದುಷ್ಟರಾಗಿ ತಾವೇ ತಾವಾಗಿರುತ್ತಿದ್ದರು.

**ಶ್ರೀಮಂತವರ್ಗಗಳು**

ಹೀಗೆ ರಾಜ್ಯವೆಂಬುದರಲ್ಲಿ ರಾಜ, ಆ ತರುವಾಯ ಶ್ರೀಮಂತವರ್ಗದವರು, ಆ ತರುವಾಯ ಇತರರು ಸೇರಿದ್ದರು. ಇಂಗ್ಲಂಡಿನಲ್ಲಿಯೂ ಶ್ರೀಮಂತವರ್ಗವೆಂಬುದು ರೂಢಿಯಾಯಿತು. ಆ ವರ್ಗದಲ್ಲಿಯೂ ಹೆಚ್ಚುಕಡಿಮೆಗಳುಂಟು. ಶ್ರೀಮಂತವರ್ಗದಲ್ಲಿ ಮೊದಲನೆ ತರಗತಿಯುವರಿಗೆ **ಡ್ಯೂಕ**(Duke)ರೆಂದು ಬಿರುದು; ಅನಂತರ ಕ್ರಮವಾಗಿ **ಮಾರ್ಕ್ವಿಸ್** (Marquis), **ಅರ್ಲ್** (Earl), **ಬ್ಯಾರನ್** (Baron) ಎಂಬ ತರಗತಿಗಳುಂಟು. ಈ ಬಿರುದುಗಳು ವಂಶಪಾರಂಪರ್ಯವಾಗಿರತಕ್ಕವು; ರಾಜರಿಂದ ದತ್ತವಾಗತಕ್ಕವು. ಸಾಮಾನ್ಯವರ್ಗದ ಜಮೀನ್ದಾರರಲ್ಲಿ ರಾಜನನ್ನು ಮೆಚ್ಚಿಸಿ ಆಜೀವಪರ್ಯಂತಮಾತ್ರ ಒಂದು ಬಿರುದನ್ನು ಪಡೆಯುವ ಪದ್ಧತಿಯೂ ಹಿಂದಿನಿಂದ ಬಂದುದೇ. ಅದನ್ನೇ **ನೈಟ್‌ಹುಡ್** (Knighthood) ಎಂದು ಕರೆಯುವುದು. ಈ ಬಿರುದನ್ನು ಪಡೆದವರ ಹೆಸರಿಗೆ ಸರ್ ಎಂದು ಸೇರುವುದು. ಶ್ರೀಮಂತ ವರ್ಗದವರನ್ನು ಲಾರ್ಡ್ (Lord) ಎಂದು ಕರೆಯುವುದು ಸಾಮಾನ್ಯ. ಶ್ರೀಮಂತರಿಗೆ ಸ್ಥಳದ ಹೆಸರು ಮತ್ತು ಬಿರುದು ಕೂಡಿದುದೇ ರೂಢಿಯ ಹೆಸರು.

## 2. ಇಂಗ್ಲಂಡ್ ರಾಜ್ಯ (ಕ್ರಿ. ಶ. 1485ರವರೆಗೆ)

ಮೊದಲು ಈ ದ್ವೀಪದಲ್ಲಿ ನೆಲೆಸಿದ ಜನರು **ಕೆಲ್ಟ್** (Celt) **ಕುಲದ** ಬ್ರಿಟನ್ನರು. ರೋಮಕಸಾಮ್ರಾಜ್ಯವು ವಿಸ್ತಾರಗೊಂಡಾಗ ಬ್ರಿಟನ್ನರು ರೋಮಕರಿಗೆ ಸೋತು ಕ್ರೈಸ್ತಮತವನ್ನು ಒಪ್ಪಿಕೊಂಡರು. **ರೋಮಕರು** ಕ್ರಿ. ಶ. 410ರವರೆಗೆ ಬ್ರಿಟನ್ನಿನಲ್ಲಿ ಆಳಿ ಆ ತರುವಾಯ ಆಳಲಾರದೆ ಬಿಟ್ಟುಬಿಟ್ಟರು.

**ನೆಲೆಸಿದ ಜನರು**

ಸಾಮ್ರಾಜ್ಯಕ್ಕೆ ವಿಪತ್ಕಾಲವೊದಗಿ ಕ್ರಿ. ಶ. 476ರಲ್ಲಿ ರೋಮಕ ಪಟ್ಟಣವೇ ರೂಕ್ಷಜನರ ವಶವಾಯಿತು. ಆ ಕಾಲದಲ್ಲಿ ಜರ್ಮನಿಯ ಉತ್ತರಭಾಗದಿಂದ ಟ್ಯೂಟನ್ ಕುಲಕ್ಕೆ ಸೇರಿದ **ಆಂಗ್ಲ, ಸ್ಯಾಕ್ಸನ್, ಜೂಟ್** ಎಂಬ ಪಂಗಡದವರು ಜರ್ಮನ್ ಸಮುದ್ರವನ್ನು ದಾಟಿಬಂದು ಬ್ರಿಟನ್ನಿನಲ್ಲಿ ನೆಲೆಸಿಬಿಟ್ಟರು. ಆಂಗ್ಲರಿಂದ ಇಂಗ್ಲಂಡ್ ಎಂಬ ಹೆಸರಾಯಿತು. ಈ ಆಂಗ್ಲೊಸ್ಯಾಕ್ಸನರ ಹಿಂದೆಯೇ **ಡೇನರೆಂ**ಬ ಪಂಗಡದವರು ಕಾಣಿಸಿಕೊಂಡು ಮೊದಲು ಕೊಳ್ಳೆ ಹೊಡೆಯುತ್ತಿದ್ದು ಆಮೇಲೆ ಇಂಗ್ಲಂಡನ್ನು ಗೆದ್ದು ತಮ್ಮ ರಾಜ್ಯವನ್ನಾಗಿ ಮಾಡಿಕೊಂಡರು. **ಕನ್ಯೂಟ್** (Canute) ಎಂಬ ದೊರೆ ಆ ಕಾಲದವನು. ಡೇನರೂ ಆಂಗ್ಲೊಸ್ಯಾಕ್ಸನರೂ ಬೆರೆತುಹೋದರು.

ಇಂಗ್ಲಂಡ್ ಫ್ರಾನ್ಸಿಗೆ ಅತಿಸಮೀಪ. ಫ್ರಾನ್ಸಿನಲ್ಲಿಯೂ ಮೊದಲು ಕೆಲ್ಟರೂ ಆಮೇಲೆ ಫ್ರಾಂಕ್‌ಪಂಗಡದವರೂ ನೆಲೆಸಿದರು. ಇಂಗ್ಲಂಡಿಗೆ ಡೇನರು ಬಂದು ಮುತ್ತಿಕೊಂಡಂತೆ ಫ್ರಾನ್ಸಿನಲ್ಲಿ **ನಾರ್ಮನ**ರೆಂಬ ಪಂಗಡದವರು ಅದೇಕಾಲದಲ್ಲಿ ಮುತ್ತಿಗೆ ನಡೆಸಿ ವಾಯುವ್ಯಭಾಗದಲ್ಲಿ ನೆಲೆಸಿದರು. ಆ ಭಾಗವೇ

**ನಾರ್ಮನರ ಗೆಲುವು**

**ನಾರ್ಮಂಡಿ.** ಅಲ್ಲಿಗೆ ಮುಖಂಡನಾದವರು ಫ್ರಾನ್ಸ್ ರಾಜನ ಶ್ರೀಮಂತನೆನಿಸಿದ್ದನು. 1066ರಲ್ಲಿ ನಾರ್ಮಂಡಿಯ ಡ್ಯೂಕನಾಗಿದ್ದ **ವಿಲಿಯಂ** ಎಂಬಾತನು ತನಗೆ ಬಂಧುತ್ವದಿಂದ ಇಂಗ್ಲಂಡ್ ಬರಬೇಕೆಂಬ ನೆಪದಿಂದ ಇಂಗ್ಲಂಡನ್ನು ಮುತ್ತಿ ಇಂಗ್ಲಿಷ್ ದೊರೆಯನ್ನು ಕೊನೆಗಾಣಿಸಿದನು. ವಿಲಿಯುಮನ ವಂಶವೇ ಇಂಗ್ಲಂಡಿನಲ್ಲಿ ಸ್ಥಾಪನೆಯಾಯಿತು. ನಾರ್ಮನ್‌ವಂಶವೆಂದು ಅದಕ್ಕೆ ಹೆಸರು.

ಹಿರಿಯವಿಲಿಯಂ ಸಮರ್ಥನಾದುವರಿಂದ ಗೆದ್ದ ರಾಜ್ಯವನ್ನು ರೂಢಿಗೆ ತಂದುಕೊಂಡನು. ತನ್ನ ಆಪ್ತರಿಗೆ ಶ್ರೀಮಂತಪದವಿಗಳನ್ನೂ ಭೂಮಿಗಳನ್ನೂ ಕೊಡಿಸಿ ಅವರ ಬೆಂಬಲದಿಂದ ಭದ್ರನಾದನು. ಅವನ ತರುವಾಯ ಆಳಿದ

**ನಾರ್ಮನ್ ವಂಶ**

ಅವನ ಮಗ ಕೆಂಚವಿಲಿಯಂ (William Rufus) ಅಥವಾ **ಇಮ್ಮಡಿ ವಿಲಿಯಂ** ಸ್ವಾರ್ಥಪರನಾಗಿ ಶ್ರೀಮಂತರನ್ನೂ ಸಾಮಾನ್ಯಜನರನ್ನೂ ಹೆದರಿಸಿ ಹಿಂಸಿಸಿ ಪಿಶಾಚನಂತಿದ್ದು ಅಪಮೃತ್ಯುವಿಗೆ ಸಿಕ್ಕಿದನು. ಆ

ಬಳಿಕ ಪಟ್ಟಪಡೆದವನು ಅವನ ತಮ್ಮ **ಹಿರಿಯಹೆನ್ರಿ**ಯೆನಿಸಿದವನು. ಈ ಹೆನ್ರಿ ಜಾಣ, ವಿವೇಕಿ, ನ್ಯಾಯವಂತ; ರಾಜ್ಯದಲ್ಲಿ ನ್ಯಾಯವನ್ನೂ ಸರಿಯಾದ ಆಯ ವ್ಯಯವನ್ನೂ ನೆಲೆಗೊಳಿಸಿದನು. ಹೆನ್ರಿಗೆ ಗಂಡುಮಕ್ಕಳಿಲ್ಲದೆಹೋಯಿತು. ಆಗ **ಸ್ಟೀವರ್** (Stephen) ಎಂಬವನು ರಾಜನಾದನು. ಸ್ಟೀವನ್ನನಿಗೆ ದಕ್ಷತೆಯಿರಲಿಲ್ಲ; ಹೇಡಿತನವಿತ್ತು. ರಾಜನು ಹೇಡಿಯಾಗಿರಲು ಶ್ರೀಮಂತರು ಬಲಿಷ್ಠರಾಗಿ ಕೋಟೆ ಕಟ್ಟಿಸಿಕೊಂಡು ಸೈನ್ಯಕೂಡಿಹಾಕಿ ದುರಾಸೆಗಳನ್ನು ಬೆಳೆಸಿದರು. ಪ್ರತಿ ಶ್ರೀಮಂತನೂ ಪಾಳೆಯಗಾರನಾಗಿ ಸಾಮಾನ್ಯಜನರನ್ನು ಹಿಂಸಿಸುತ್ತ ನೆರೆಯ ಶ್ರೀಮಂತನೊಡನೆ ಕಾದಾಡುತ್ತ ರಾಜನನ್ನು ತಿರಸ್ಕರಿಸುತ್ತ ಇದ್ದುಬಿಟ್ಟನು. ಕೈಲಾಗದ ಈ ದೊರೆ ಕಡೆಗೆ ರಾಜ್ಯವನ್ನು ಮುಂದಿನ ಹಕ್ಕುದಾರನಿಗೆ ಬಿಟ್ಟುಕೊಟ್ಟನು. ನಾರ್ಮನ್ ವಂಶದ ನಾಲ್ವರು ದೊರೆಗಳು 1154ರ ವರೆಗೆ ಆಳಿದರು.

**ಆಂಜೆವಿನ್ ವಂಶ**

ಮುಂದೆ ದೊರೆತನಕ್ಕೆ ಬಂದ ಹೆನ್ರಿಯೆಂಬಾತನು ಹಿರಿಯ ಹೆನ್ರಿಯ ದೌಹಿತ್ರ. ಆ ವಂಶಕ್ಕೆ **ಆಂಜೆವಿನ್** (Anjevin) ಅಥವಾ ಪ್ಲಾಂಟಾಜೆನೆಟ್ (Plantagenet) ಎಂದು ಹೆಸರು. ಆಂಜೆವಿನ್ವಂಶದ 8 ದೊರೆಗಳು ಇಂಗ್ಲಂಡನ್ನು 1154ರಿಂದ 1399ರ ವರೆಗೆ ಆಳಿದರು. ಮೊದಲನೆಯವನಾದ **2ನೆ ಹೆನ್ರಿ**ಯು ಒಂದುಕಡೆ ಫ್ರಾನ್ಸ್‌ರಾಜ್ಯದಲ್ಲಿ ಆಂಜೂ, ಆಕ್ವಿತೇನ್, ನಾರ್ಮಂಡಿ ಭಾಗಗಳ ಶ್ರೀಮಂತನಾಗಿಯೂ ಮತ್ತೊಂದುಕಡೆ ಇಂಗ್ಲಂಡಿಗೆ ದೊರೆಯಾಗಿಯೂ ಇದ್ದನು. ಈತನ ವಂಶಸ್ಥರು ಅದೇರೀತಿಯಲ್ಲಿ ಫ್ರಾನ್ಸಿನ ವಾಯವ್ಯಭಾಗವನ್ನೂ ಆಳುತ್ತಲಿದ್ದರು. ರಾಜನ ಆಪ್ತರಾಗಿ ಮಂತ್ರಿಗಳಾಗಿರುತ್ತಿದ್ದವರು ಶ್ರೀಮಂತವರ್ಗದವರು ಮತ್ತು ಪುರೋಹಿತವರ್ಗದವರು.

**ಮತಾಧಿಕಾರಿಗಳು**

ಯೂರೋಪಿನ ಪಡುವಲ ದೇಶಗಳಲ್ಲಿ ರೂಢಿಯಾದ ಕ್ರೈಸ್ತಮತಕ್ಕೆ **ರೋಮನ್ ಕ್ಯಾಥೊಲಿಕ್** ಎಂಬ ಹೆಸರು. ರೋಮುಕಪಟ್ಟಣದ **ಪೋಪ**ನೇ ಆ ಮತಕ್ಕೆ ಶ್ರೇಷ್ಠ ತಮಗುರು. ಆ ಮತದಲ್ಲಿ ಪುರೋಹಿತರಾದವರು ವ್ರತಗಳನ್ನು ಸ್ವೀಕರಿಸಿ ಸಂನ್ಯಾಸದೀಕ್ಷೆಯನ್ನು ತಾಳಬೇಕಾಗಿತ್ತು. ಊರೂರಿನಲ್ಲಿಯೂ ಪ್ರಾರ್ಥನಾಮಂದಿರಗಳನ್ನು ಕಟ್ಟಿಕೊಂಡಿದ್ದರು. ಚರ್ಚುಗಳೆಂಬ ಆ ಮಂದಿರಗಳನ್ನು ಯಥಾಶಕ್ತಿ ಅಲಂಕಾರಗೊಳಿಸುತ್ತಲೂ ಇದ್ದರು. ಅವುಗಳಲ್ಲಿ ಪುರೋಹಿತರಿದ್ದುಕೊಂಡು ನಾಮಕರಣ, ದೀಕ್ಷಾಸ್ನಾನ, ವಿವಾಹ, ಉತ್ತರಕ್ರಿಯಾದಿಗಳನ್ನು ನಡೆಸುತ್ತಿದ್ದರು. ಪ್ರಾರ್ಥನೆಗಳು ಲ್ಯಾಟಿನ್ ಭಾಷೆಯಲ್ಲಿ ಇದ್ದುವು. ಈ ಪುರೋಹಿತರಲ್ಲಿಯೂ ವರ್ಗಗಳು ತೋರಿಕೊಂಡವು. **ಪೋಪ**ನ ತರುವಾಯ **ಕಾರ್ಡಿನಲ್** (Cardinal) ಎಂಬ ಬಿರುದನ್ನು ಧರಿಸಿದವರಿದ್ದರು. ಪ್ರತಿರಾಜ್ಯದಲ್ಲಿಯೂ ಜಿಲ್ಲಾವಿಭಾಗಗಳಾಗಿ ಜಿಲ್ಲೆಗೊಬ್ಬ **ಬಿಷಪ್** (Bishop) ಎಂಬ ಅಧಿಕಾರಿಯಿರುತ್ತಿದ್ದನು. ಆ ಜಿಲ್ಲೆಯ ಪುರೋಹಿತರೆಲ್ಲರೂ ಬಿಷ

ಪ್ಪನ ಆಜ್ಞಾಧಾರಕರು. ದೇಶದಲ್ಲಿ ಎಷ್ಟು ಜಿಲ್ಲೆಗಳೋ ಅಷ್ಟು ಬಿಷಪ್ಪರು; ಆ ಬಿಷಪ್ಪರನ್ನು ಪೋಪನೇ ನಿಯಮಿಸುತ್ತಿದ್ದನು. ಬಿಷಪ್ಪರಿಗೆಲ್ಲ ನಾಯಕನಾದವನು **ಆರ್ಚ್‌ಬಿಷಪ್** (Archbishop) ಎನ್ನಿಸುತ್ತಿದ್ದನು. ಇಂಗ್ಲಂಡಿನಲ್ಲಿ **ಕ್ಯಾಂಟರ್ಬರಿ** (Canterbury) ಮತ್ತು **ಯಾರ್ಕ್** (York) ಎಂಬ ಎರಡು ವಿಭಾಗಗಳು. ಆ ವಿಭಾಗಗಳಿಗೆ ಇಬ್ಬರು ಆರ್ಚ್‌ಬಿಷಪ್ಪರುಗಳು. ಅವರ ಕೈಕೆಳಗೆ ಜಿಲ್ಲಾಧಿಕಾರಿಗಳಂತೆ ಬಿಷಪ್ಪರುಗಳೂ ಬಿಷಪ್ಪರ ಅಧೀನದಲ್ಲಿ ಸಾಮಾನ್ಯಪುರೋಹಿತರೂ ಇದ್ದು ಮತಸಂಪ್ರದಾಯಗಳನ್ನು ನೋಡಿಕೊಳ್ಳುತ್ತ ನಡೆಸಿಕೊಡುತ್ತ ಇದ್ದರು. ಕಾಲಕಳೆಯುತ್ತ ಪ್ರಾರ್ಥನಾಮಂದಿರಗಳಿಗೆ ಜನರು ದಾನಗಳನ್ನು ಕೊಟ್ಟರು; ಆಸ್ತಿ ಸೇರಿತು. ಚರ್ಚುಗಳ ಅಧಿಕಾರಿಗಳು ಧನವಂತರಾದರು. ಆ ಧನವು ದೇವಸ್ವದಂತಿದ್ದು ಪೋಪನ ಅಧೀನದಲ್ಲಿತ್ತು. ಮೂಢಭಕ್ತಿಯು ಸಾಮಾನ್ಯವಾಗಿದ್ದುದರಿಂದ ಜನರಿಗೆ ಪುರೋಹಿತವರ್ಗದವರಲ್ಲಿ ವಿಶ್ವಾಸಗೌರವಗಳಿದ್ದವು. ಪುರೋಹಿತವರ್ಗದವರು ಪೋಪನ ಅಧೀನರಾದುದರಿಂದ ರಾಜನಿಗಾಗಲಿ ಶ್ರೀಮಂತರಿಗಾಗಲಿ ಅಂಜುತ್ತಿರಲಿಲ್ಲ.

**ಇಮ್ಮಡಿ ಹೆನ್ರಿ**

ಅಂಜೆವಿನ್ ವಂಶಕ್ಕೆ ಮೊದಲನೆ ದೊರೆಯಾದ 2ನೆ ಹೆನ್ರಿಗೆ **ಥಾಮಸ್ ಬೆಕೆಟ್** (Pecket) ಎಂಬ ಹೆಸರಿನ ಮಿತ್ರನಿದ್ದನು. ದೊರೆಯು ಅವನನ್ನೇ ಮಂತ್ರಿಪದವಿಯಲ್ಲಿಟ್ಟುಕೊಂಡನು. ಹೆನ್ರಿಗೆ ತನ್ನ ಅಧಿಕಾರವನ್ನು ಹೆಚ್ಚಿಸಿಕೊಳ್ಳಬೇಕೆಂದಿತ್ತು. ಅದಕ್ಕೆ ಬೆಕೆಟ್ ಅನುಕೂಲನಾದಾನೆಂದು ಭಾವಿಸಿದ್ದನು. ಆದರೆ ಆರ್ಚ್‌ಬಿಷಪ್‌ಪದವಿಗೇರಿದ್ದ ಬೆಕೆಟ್ ರಾಜಾಧಿಕಾರವನ್ನು ವಿರೋಧಿಸಿದನು. ಹೆನ್ರಿ ಬೆಕೆಟ್ಟನ್ನು ಶತ್ರುವಂತೆ ಕಾಣುವ ಹಾಗಾಯಿತು. ಆಗ ರಾಜನ ಕಡೆಯು ಮಲ್ಲರುಕೆಲವರು ಆಕಸ್ಮಿಕವಾಗಿ ಬೆಕೆಟ್ಟನಬಳಿಗೆ ನುಗ್ಗಿ ಅವನನ್ನು ಕಡಿದುಹಾಕಿಬಿಟ್ಟರು. ಈ ವಧೆಯಾದುದಕ್ಕೆ ಹೆನ್ರಿಯು ಸಾಮಾನ್ಯನಂತೆ ಪ್ರಾಯಶ್ಚಿತ್ತಕ್ಕೊಳಗಾಗಬೇಕಾಯಿತು. ಪುರೋಹಿತವರ್ಗದವರ ದರ್ಪವನ್ನು ಹೆನ್ರಿ ಮುರಿಯಲಾಗಲಿಲ್ಲ; ಆದರೆ ಶ್ರೀಮಂತರ ಪುಂಡುತನವನ್ನು ನಾಶಮಾಡಿ ಸಾಮಾನ್ಯಜನರನ್ನು ಅವರ ಹಾವಳಿಯಿಂದ ರಕ್ಷಿಸಿದನು.

**ಹಿರಿಯ ರಿಚರ್ಡ್**

2ನೆಹೆನ್ರಿಯ ತರುವಾಯ ಪಟ್ಟವನ್ನೇರಿದ ಆತನ ಹಿರಿಯಮಗ **ರಿಚರ್ಡ್** ಎಂಬಾತನು ಶೂರಾಗ್ರೇಸರನಾಗಿ ಯುದ್ಧಮಾಡಬೇಕೆಂಬ ಆಸೆಯನ್ನೇ ಬೆಳೆಸಿಕೊಂಡನು. ಆ ಕಾಲದಲ್ಲಿ ರಾಜರುಗಳೂ ಶ್ರೀಮಂತರೂ ತುರುಷ್ಕರೊಡನೆ ಹೋರಾಡಲು ಪ್ಯಾಲೆಸ್ಟೈನಿ(Palestine)ಗೆ ಹೊರಡುತ್ತಿದ್ದರು. ರಿಚರ್ಡ್ ಅವರನ್ನು ಸೇರಿಕೊಂಡು **ಸಲಾ ಉದ್ದೀನ್ ಸುಲ್ತಾನನೊಡನೆ** (Saladin) ಯುದ್ಧನಡೆಸಿ ಹಿಂತಿರುಗಿದನು. ರಿಚರ್ಡನ ತಮ್ಮ ಜಾನ್ ಎಂಬುವನು ಅತಿನೀಚನಾಗಿದ್ದನು. ಅಣ್ಣನು ದೇಶದಲ್ಲಿಲ್ಲದಿದ್ದಾಗ ತಾನೇ ರಾಜನಾಗಲು ಪಿತೂರಿಗಳನ್ನು ನಡೆಸುತ್ತಿದ್ದನು. ಹಿಂತಿರುಗಿದ ಮೇಲೆ ಆ ಅಣ್ಣನು ಪುನಃ

ಬೇರೊಂದು ಯುದ್ಧಕ್ಕೆ ಹೊರಟು ಆ ಯುದ್ಧದಲ್ಲಿಯೇ ಪ್ರಾಣಬಿಟ್ಟನು. ಆಗ **ಜಾರ್ಜ ದೊರೆಯಾಗಿ** ಮಾಡಬಾರದ ಕೆಲಸಗಳನ್ನು ಮಾಡಿಬಿಟ್ಟನು. ಸಾಮಾನ್ಯ ಜನರನ್ನೂ ಶ್ರೀಮಂತರನ್ನೂ ಅತಿಯಾಗಿ ಹಿಂಸಿಸಿದ್ದಲ್ಲದೆ ಪುರೋಹಿತ ವರ್ಗದವರನ್ನೂ ರೇಗಿಸಿದನು. ಇವನನ್ನು ಭ್ರಷ್ಟನೆನ್ನುತ್ತ ಪೋಪ್ ಬಹಿಷ್ಕಾರವನ್ನೇ ಹಾಕಿದನು. ಕಡೆಗೆ ಶ್ರೀಮಂತರು ಒಟ್ಟುಗೂಡಿ ಸಾಮಾನ್ಯಜನರನ್ನು ಹಿಂದಿಟ್ಟುಕೊಂಡು ದಂಗೆಯೆದ್ದು ಜಾರ್ಜದೊರೆಯನ್ನು ಎದುರಿಸಿ ಸೋಲಿಸಿಬಿಟ್ಟರು. ಆ ಸಮಯದಲ್ಲಿ ದೊರೆ ನಿರ್ಬಂಧಕ್ಕೊಳಗಾಗಿ ಒಂದು ಪತ್ರಕ್ಕೆ ಒಪ್ಪಿಕೊಂಡನು. ಆ ಪತ್ರವನ್ನು **ಭಾರಿ ಸನ್ನದೆ**ನ್ನುತ್ತಾರೆ. (Magna Carta). ರಾಜನು ಇನ್ನು ಮೇಲೆ ಅನ್ಯಾಯ ನಡೆಸುವುದಿಲ್ಲವೆಂದೂ ಆಪಾದಿತರನ್ನು ಕ್ರಮವಾದ ನ್ಯಾಯದಿಂದಲೇ ವಿಚಾರಿಸುತ್ತೇನೆಂದೂ ಪ್ರಮಾಣಮಾಡಬೇಕಾಯಿತು. ಮಂತ್ರಾಲೋಚಕಸಭೆಯ ಅನುಮತಿಪಡೆಯದೆ ತೆರಿಗೆ ಸುಂಕಗಳನ್ನು ಎತ್ತುವುದಿಲ್ಲವೆಂದು ಒಪ್ಪಿಕೊಳ್ಳಬೇಕಾಯಿತು. ಇದರಿಂದ ರಾಜಾಧಿಕಾರಕ್ಕೆ ಮೇರೆಯು ನಿರ್ದೇಶವಾದುದಲ್ಲದೆ ರಾಜ್ಯದಲ್ಲಿ ಜನರಿಗೆ ಅಸಮಾಧಾನವಾದಾಗ ದಂಗೆಯೇಳುವ ಪಾಠವನ್ನು ಕಲಿಸಿದಹಾಗಾಯಿತು. ಭ್ರಷ್ಟನೂ ನೀಚನೂ ಆದ ಆ ದೊರೆಯು ಪ್ರಮಾಣವನ್ನು ಮುರಿದದ್ದಲ್ಲದೆ ಪೋಪನನ್ನು ಅಲಕ್ಷ್ಯಮಾಡಿದನು. ಆಗ ನೆರೆ ರಾಜನಾದ ಫ್ರಾನ್ಸ್ ದೊರೆಯು ಪೋಪನ ಆಜ್ಞೆಯಿಂದ ಜಾರ್ಜ ದೊರೆಯನ್ನು ದಂಡಿಸಲು ಯುದ್ಧವನ್ನು ಕಾದಿ ಗೆದ್ದನು. ಆ ಸಮಯದಲ್ಲಿಯೇ ಜಾರ್ಜದೊರೆ ಸತ್ತನು. ಆ ಹೆಸರಿನವನು ಅವನೊಬ್ಬನೇ ದೊರೆ.

**ಜಾನ್**

ಜಾರ್ಜದೊರೆ ತರುವಾಯ ಅವನ ಮಗ **ಮೂರನೆ ಹೆನ್ರಿ**ಯೆಂಬಾತನು ಆಳಿದನು. ಆತನ ಆಳಿಕೆಯಲ್ಲಿ ಶ್ರೀಮಂತರೊಡನೆ ಭಾರಿ ಜಗಳ ಹುಟ್ಟಿಕೊಂಡು ರೇಗಿತು. ರಾಜಾಧಿಕಾರವನ್ನು ಕಡಿಮೆಮಾಡುವ ಉದ್ದೇಶದಿಂದ ಶ್ರೀಮಂತರು ಹೆಣಗಾಡಿದರು. ಅವರ ನಾಯಕನಾಗಿದ್ದವನು ಜಾಣನಾಗಿ ಜನಸಾಮಾನ್ಯರನ್ನು ತನ್ನ ಕಡೆ ಸೇರಿಸಿಕೊಳ್ಳಲು ಮಂತ್ರಾಲೋಚಕಸಭೆಗೆ ಪಟ್ಟಣಗಳ ಮತ್ತು ಜಿಲ್ಲೆಗಳ ನಿವಾಸಿಗಳ ಪ್ರತಿನಿಧಿಗಳನ್ನು ಕರೆಸಿದನು. ಇದೇ **ಪಾರ್ಲಿಮೆಂಟ್** ಎಂಬುದರ ಮೊದಲು. ಹಿಂದಿನಿಂದಲೂ ಮಂತ್ರಾಲೋಚನೆಗಾಗಿ ರಾಜರು ಶ್ರೀಮಂತರೆಲ್ಲರನ್ನೂ ಸಭೆಸೇರಿಸುತ್ತಿದ್ದರು. ಈಗ ಅಂತಹ ಸಭೆಗೆ ಸಾಮಾನ್ಯಜನರ ಪ್ರತಿನಿಧಿಗಳೂ ಸೇರುವಹಾಗಾಯಿತು. ಈ ಪದ್ಧತಿಯನ್ನು ಮೂರನೆ ಹೆನ್ರಿಯ ತರುವಾಯ ಆಳಿದ ಆತನ ಮಗ **ಹಿರಿಯ ಎಡ್ವರ್ಡ**ನು ಅವಲಂಬಿಸಿದನು. ತಾನು ಕೈಕೊಂಡ ಕೆಲಸಕಾರ್ಯಗಳಿಗೆ ಜನರ ಬೆಂಬಲವನ್ನು ಸಂಪಾದಿಸಿಕೊಳ್ಳುವುದಕ್ಕೂ ಬೇಕಾದ ತೆರಿಗೆಸುಂಕಗಳನ್ನು ತೊಂದರೆಯಿಲ್ಲದೆ ಪಡೆದುಕೊಳ್ಳುವುದಕ್ಕೂ ಜನರ ಪ್ರತಿನಿಧಿಗಳು ಸೇರಿ ಸಭೆನಡೆಸಿ ಅವರ ಇಷ್ಟಾನಿಷ್ಟಗಳನ್ನು ತಿಳಿಸುವಂತೆ

**ಮುಮ್ಮಡಿ ಹೆನ್ರಿ**

ಏರ್ಪಡಿಸಿದನು. ಹಿರಿಯ ಎಡ್ವರ್ಡ್ ಕಾಲದಲ್ಲಿ ಮೊದಲಾದ ಈ ಏರ್ಪಾಟನ್ನು ಇತರ ರಾಜರೂ ಅನುಸರಿಸುತ್ತ ಬಂದರು. ಪಟ್ಟಣನಿವಾಸಿಗಳೂ

**ಹಿರಿಯ ಎಡ್ವರ್ಡ್**

ಜಿಲ್ಲೆಗಳನಿವಾಸಿಗಳೂ ತಮ್ಮ ಪ್ರತಿನಿಧಿಗಳನ್ನು ಚುನಾಯಿಸುವ ಪದ್ಧತಿಗಳನ್ನು ರೂಢಿಗೆ ತಂದುಕೊಂಡರು. ಸಭೆಸೇರಿದಾಗ ಕ್ರಮವಾಗಿಯೂ ಗೌರವವಾಗಿಯೂ ಕೆಲಸನಡೆಯುವಂತೆ ಸಭಾಸಂಪ್ರದಾಯಗಳನ್ನು ನೆಲೆಗೊಳಿಸಿಕೊಂಡರು. ಕಾಲಕಳೆಯುತ್ತ ರಾಜರು ನಡೆಸಿದ ಅನ್ಯಾಯವನ್ನೋ ಅಕ್ರಮದಿಂದೆತ್ತಿದ ತೆರಿಗೆಗಳನ್ನೋ ಅಡ್ಡಿಮಾಡುವುದಕ್ಕೆ ಸಭಿಕರು ತೊಡಗಿದರು. ತೆರಿಗೆಗಳನ್ನು ಹೊರೆಸುವ ಮೊದಲು ಸಭೆಯವರ ಒಪ್ಪಿಗೆಯನ್ನು ಪಡೆಯುವುದು ಪದ್ಧತಿಯಾಯಿತು. ಹಣಕೊಡಿಸಲೊಪ್ಪುವ ಮೊದಲು ತಮ್ಮ ಅಸಮಾಧಾನಕ್ಕೆ ಕಾರಣವೇನಿದ್ದರೂ ಅದರ ಚರ್ಚೆಯೂ ಇತ್ಯರ್ಥವೂ ಆಗತಕ್ಕದ್ದೆಂದು (redress before supply) ಪಾರ್ಲಿಮೆಂಟಿನವರು ಸ್ಥಾಪಿಸಿಕೊಂಡರು.

ಪಾರ್ಲಿಮೆಂಟ್ ಎಂಬುದು ಎರಡು ಸಭೆಗಳಿಗೆ ಒಟ್ಟಾದ ಹೆಸರು. ಶ್ರೀಮಂತ ವರ್ಗದವರ ಸಭೆಯೇ **ಲಾರ್ಡ್ಸ್‌ಸಭೆ** (House of Lords); ಅಲ್ಲಿಯ ಸಭಿಕರು ವಂಶಪಾರಂಪರ್ಯೆಯಾಗಿರತಕ್ಕವರು. ಜನಸಾಮಾನ್ಯರ

**ಪಾರ್ಲಿಮೆಂಟ್**

ಪ್ರತಿನಿಧಿಗಳು ಸೇರುತ್ತಿದ್ದುದು **ಕಾಮನ್ಸ್‌ಸಭೆ** ( House of Commons ) ಯಲ್ಲಿ. ಪಾರ್ಲಿಮೆಂಟನ್ನು ಕರೆಸುವುದೂ ಮುಕ್ತಾಯಗೊಳಿಸುವುದೂ ರಾಜನ ಅಧಿಕಾರ. ಪಾರ್ಲಿಮೆಂಟ್ ಸಭೆಗಳ ಅಧಿಕಾರ ಮಾತ್ರವಲ್ಲದೆ ಸಭಾಸಂಪ್ರದಾಯಗಳೂ 14 ಮತ್ತು 15ನೆ ಶತಮಾನಗಳಲ್ಲಿ ರೂಢಿಯಾದವು.

ಹಿರಿಯಎಡ್ವರ್ಡ್‌ದೊರೆ ವಿವೇಕಶಾಲಿಯಾಗಿದ್ದುದಲ್ಲದೆ ಸಮರ್ಥನೂ ಆಗಿದ್ದನು. **ವೇಲ್ಸ್** ಭಾಗವು ಈತನ ಕಾಲದಲ್ಲಿಯೇ ಇಂಗ್ಲಂಡಿಗೆ

**ವೇಲ್ಸ್ ಗೆಲುವು**

ಸೇರಿತು. ಯುವರಾಜನಿಗೆ **ಪ್ರಿನ್ಸ್ ಆಫ್ ವೇಲ್ಸ್** ಎಂಬ ಬಿರುದಿನ ವಾಡಿಕೆಯೂ ಈತನ ಕಾಲದಲ್ಲಿ ಮೊದಲಾಯಿತು. ವೇಲ್ಸನ್ನು ಗೆದ್ದ ಈ ರಾಜನಿಗೆ **ಸ್ಕಾಟ್ಲೆಂಡನ್ನೂ** ಗೆಲ್ಲಬೇಕೆಂಬ ಆಸೆಯಿತ್ತು. ಸ್ಕಾಟ್ ಜನರು ಕೆಲ್ಟ್ ಕುಲಸ್ಥರೇ ಆಗಿದ್ದರು. ಆ ದೇಶದಲ್ಲಿ ಪಟ್ಟದ ಜಗಳ ಹುಟ್ಟಿಕೊಂಡಿತ್ತು. ಹಿರಿಯಎಡ್ವರ್ಡ್ ನ್ಯಾಯವಂತನೆಂದುಕೊಂಡು ಅವರು ತಮ್ಮ ಜಗಳವನ್ನು ತೀರ್ಮಾನಿಸಲು ಕೇಳಿದರು. ಆಗ ಎಡ್ವರ್ಡ್ ಉಪಾಯವನ್ನು ಯೋಚಿಸಿ ದುರ್ಬಲನಾಗಿದ್ದ ಹಕ್ಕುದಾರನನ್ನು ಗೊತ್ತುಮಾಡಿ ಆಮೂಲಕ ತನ್ನ ಅಧಿಕಾರವನ್ನು ನೆಲೆಗೊಳಿಸಲು ಯತ್ನಿಸಿದನು. ಸ್ಕಾಟರಿಗೆ ದೇಶಭಕ್ತಿಯಿದ್ದುದರಿಂದ ಅದನ್ನು ಅವರು ವಿರೋಧಿಸಿದರು. **ವ್ಯಾಲೇಸ್** (Wallace)ಎಂಬ ಶೂರನು ಇಂಗ್ಲಿಷರನ್ನು ಸಾಧ್ಯವಾದಂತೆಲ್ಲ ಎದುರಿಸಿ

ಕಡೆಗೆ ಸೆರೆ ಸಿಕ್ಕಿದನು. ಅವನನ್ನು ಇಂಗ್ಲಿಷ್ ದೊರೆ ಗಲ್ಲಿಗೇರಿಸಿದನು. ವ್ಯಾಲೇಸನ ದುರ್ಮರಣದಿಂದ ಇತರ ಸ್ಕಾಟರಿಗೆ ರೋಷಸಾಹಸಗಳು

**ಸ್ಕಾಟ್ಲೆಂಡಿನ ಸ್ವಾತಂತ್ರ್ಯ**

ಬಂದವು. **ರಾಬರ್ಟ್ ಬ್ರೂಸ್** (Robert Bruce) ಎಂಬ ರಾಜಕುಮಾರನು ತನ್ನ ದೇಶವನ್ನು ಇಂಗ್ಲಿಷರಿಂದ ಬಿಡಿಸಿಕೊಳ್ಳಲು ಅನೇಕ ಕಷ್ಟಗಳನ್ನು ಅನುಭವಿಸಿ ಸಾಹಸಿಯೆನಿಸಿದನು. ಹಿರಿಯ ಎಡ್ವರ್ಡ್ ತರುವಾಯ ಆಳಿದ **ಇಮ್ಮಡಿ ಎಡ್ವರ್ಡ್** ಶೂರನಾಗಿರಲಿಲ್ಲ. ರಾಬರ್ಟ್ ಬ್ರೂಸನು ಉಪಾಯವಾಗಿ ತನ್ನ ದೇಶದ ಕೋಟೆಗಳನ್ನು ಹಿಡಿದು ಕಡೆಗೆ ಇಂಗ್ಲಿಷ್ ದೊರೆಯನ್ನು **ಬ್ಯಾನಕ್‌ಬರ್ನ್** (Bannockburn) ಎಂಬ ಕದನದಲ್ಲಿ ಚನ್ನಾಗಿ ಸೋಲಿಸಿದನು. ಸ್ಕಾಟ್ಲೆಂಡಿನ ರಾಜರು ಅಲ್ಲಿಂದ ಮುಂದಕ್ಕೆ ಸ್ವತಂತ್ರರಾಗಿದ್ದು ಬಿಟ್ಟರು. ಇಂಗ್ಲಿಷರಿಗೂ ಸ್ಕಾಟರಿಗೂ ದ್ವೇಷವು ನೆಲೆಸಿತು. ಸೋತ ಇಮ್ಮಡಿಎಡ್ವರ್ಡ್ ಸ್ವಂತರಾಜ್ಯವನ್ನೂ ಯೋಗ್ಯನಾಗಿ ಆಳಲಿಲ್ಲ. ಶ್ರೀಮಂತರು ಅವನನ್ನು ಪಟ್ಟದಿಂದ ತಳ್ಳಿ ಅವನ ಮಗನಿಗೆ ರಾಜ್ಯವನ್ನೊಪ್ಪಿಸಿದರು. ಮೂರನೆ ಎಡ್ವರ್ಡನು ರಾಜನಾದನು.

**ಮೂರನೆ ಎಡ್ವರ್ಡ್** ಸಮರ್ಥನಾದವನು. ಪಟ್ಟವನ್ನೇರಿದಮೇಲೆ ಶ್ರೀಮಂತರನ್ನೂ ಇತರರನ್ನೂ ಸಮಾಧಾನಪಡಿಸಿಟ್ಟುಕೊಂಡು ಸಮಯವೊದಗಿಬರಲು ಫ್ರಾನ್ಸ್ ರಾಜ್ಯದೊಂದಿಗೆ ಭಾರಿಜಗಳವನ್ನೇ ಮೊದಲುಮಾಡಿದನು. ಆ ರಾಜ್ಯಕ್ಕೆ ತನ್ನ ಹಕ್ಕಿದೆಯೆಂದು ಹೇಳಿ ಯುದ್ಧಕ್ಕೆ ಹೊರಟನು. ಇದನ್ನು

**ಮುಮ್ಮಡಿ ಎಡ್ವರ್ಡ್**

( Hundred Year's War ) **ನೂರು ವರ್ಷದ ಜಗಳ**ವೆನ್ನುತ್ತಾರೆ. ಫ್ರಾನ್ಸಿನಲ್ಲಿ ಅನೇಕ ಭಾಗಗಳನ್ನು ಶ್ರೀಮಂತಪದವಿಯಿಂದ ಅನುಭವಿಸುತಲಿದ್ದ ಇಂಗ್ಲಿಷ್ ರಾಜನು ಈಗ ಒಟ್ಟು ಫ್ರಾನ್ಸ್ ರಾಜ್ಯಕ್ಕೆ ತಾನೇ ರಾಜನಾಗಲು ಹವಣಿಸಿದನು. ಮುಮ್ಮಡಿ ಎಡ್ವರ್ಡ್ ಕಾಲದಲ್ಲಿ ಈ ಜಗಳವು ತೀರಲೇ ಇಲ್ಲ. ಮೂರುಬಾರಿ ಎಡ್ವರ್ಡ್ ಫ್ರಾನ್ಸನ್ನು ಮುತ್ತಿ ಕದನಗಳನ್ನು ಹೂಡಿ ಗೆದ್ದನು. ಫ್ರಾನ್ಸಿನ ಜನರೂ ಹಟದಿಂದ ಹೋರಾಡುತ್ತಿದ್ದರು. ಯುದ್ಧವನ್ನು ಕಟ್ಟಿಕೊಂಡ ದೊರೆಗೆ ಹಣ ಬಹಳವಾಗಿ ಬೇಕಾಗಿತ್ತು ; ಅದಕ್ಕಾಗಿ ಪಾರ್ಲಿಮೆಂಟ್ ಸಭೆಯನ್ನು ಕರೆಸುತ್ತ ಅವರನ್ನು ತುಷ್ಟಿಗೊಳಿಸುತ್ತ ಇರಬೇಕಾಯಿತು.

ಮೂರನೆ ಎಡ್ವರ್ಡನಿಗೆ ಆರುಜನ ಗಂಡುಮಕ್ಕಳಿದ್ದರು. ಹಿರಿಯಮಗ ಮೊದಲೇ ಸತ್ತಿದ್ದನಾದುದರಿಂದ ಮೊಮ್ಮಗನಿಗೆ ಪಟ್ಟವಾಯಿತು. **ಇಮ್ಮಡಿ ರಿಚರ್ಡ್** ಎಂಬ ಈ ದೊರೆಯ ಕಾಲದಲ್ಲಿ ನಡೆದ ಒಂದೆರಡು ಸಂಗತಿಗಳು

**ಇಮ್ಮಡಿ ರಿಚರ್ಡ್**

ಜ್ಞಾಪಕಾರ್ಹ. ಯುದ್ಧದ ದೆಸೆಯಿಂದ ತೆರಿಗೆಸುಂಕಗಳು ಹೆಚ್ಚಾಗಿದ್ದವಲ್ಲದೆ ಆಗಿನ ಸ್ಥಿತಿಯಲ್ಲಿ ಬಡವರಾಗಿ ಕಷ್ಟದಿಂದ ಜೀವಿಸುತ್ತಿದ್ದವರಿಗೆ ಬರಬರುತ್ತ ಬದುಕು ನಡೆಯುವುದೇ ಅಸಾಧ್ಯವಾಗಿ ತೋರಿತು. ದಿನಸುಗಳ ಬೆಲೆಯೇರಿದಾಗ ಕೂಲಿನಾಲಿ ಮಾಡುತ್ತಿದ್ದ ಜನರು ಹೆಚ್ಚು ಕೂಲಿಯನ್ನು

ಕೇಳಿದರು; ಧನವಂತರೂ ಯಜಮಾನರೂ ಅದನ್ನು ತುಂಟತನವೆಂದು ಕರೆಯುತ್ತ ಹಿಂದಿನ ಕೂಲಿಗೇ ಕೆಲಸಕ್ಕೆ ಬಲವಂತಗೊಳಿಸುವಂತೆ ಪಾರ್ಲಿಮೆಂಟಿನಲ್ಲಿ ನಿಬಂಧನೆಯನ್ನು ರಚಿಸಿಕೊಂಡಿದ್ದರು. ಈ ರೀತಿಯಲ್ಲಿ ಧನವಂತರು ಇನ್ನೂ ಧನವಂತರಾಗುವ ಆಸೆಯಿಂದ ಬಡಜನರನ್ನು ಹಿಂಸಿಸುತ್ತಿದ್ದರು. ಅದರಿಂದ

**ರೈತರ ಬಂಡಾಯ**

ಇಮ್ಮಡಿರಿಚರ್ಡ್ ಪಟ್ಟವನ್ನೇರಿದಕೂಡಲೆ ರೈತಾಪಿ ಜನರೂ ಬಡಜನರೂ ದಂಗೆಯೆದ್ದರು. ದಂಗೆಯನ್ನೇನೋ ಹಾಗೂ ಹೀಗೂ ಅಡಗಿಸಿದ್ದಾಯಿತು. ಆದರೆ ಜನರಿಗೆ ಅತೃಪ್ತಿ ತೋರಿತು. ಇಮ್ಮಡಿರಿಚರ್ಡ್ ದೊಡ್ಡವನಾಗುತ್ತ ದುಷ್ಟನಾದನು; ಶ್ರೀಮಂತರನ್ನು ವೈರಿಗಳಾಗಿ ಮಾಡಿಕೊಂಡನು. ಪಿತೂರಿಗಳು ನಡೆದು ಕಡೆಗೆ ದೊರೆಯು ತಾನೇತಾನಾದನು. ನಿರಂಕುಶನಾಗಿ ಆಳಲು ಪ್ರಯತ್ನಿಸುತ್ತ ಜನರ ವಿರೋಧವನ್ನು ಕಟ್ಟಿಕೊಂಡು ಸೋತು ಈ ದೊರೆಯು ತನ್ನ ರಾಜ್ಯಾಧಿಕಾರವನ್ನು ತನ್ನ ಚಿಕ್ಕಪ್ಪನ ಮಗನಿಗೆ ಬಿಟ್ಟುಕೊಟ್ಟನು. ಇಮ್ಮಡಿರಿಚರ್ಡನೇ ಆಂಜೆವಿನ್ ವಂಶಕ್ಕೆ ಕಡೆಯ ದೊರೆ.

ಈ ರಿಚರ್ಡನ ಕಾಲದಲ್ಲಿಯೇ ಮತ್ತೊಂದು ಸಂಗತಿಯು ಮೊದಲಾಯಿತು. ಮತಾಧಿಕಾರಿಗಳಾದ ಬಿಷಪ್ಪರುಗಳು ಶ್ರೀಮಂತರಲ್ಲಿ ಗಣ್ಯರಾಗಿದ್ದರಷ್ಟೆ. ಬಿಷಪ್ಪರೂ ಪುರೋಹಿತರೂ ಬರಬರುತ್ತ ದರ್ಪಿಷ್ಠರಾಗಿದ್ದುದಲ್ಲದೆ ಮತಶ್ರದ್ಧೆಯನ್ನೂ ಕಳೆದುಕೊಳ್ಳುತ್ತಲಿದ್ದರು. ಇತರ ದೇಶಗಳಲ್ಲಿದ್ದಂತೆ ಇಂಗ್ಲಂಡಿನಲ್ಲಿಯೂ ಪುರೋಹಿತವರ್ಗದವರಲ್ಲದೆ ವಿರಕ್ತರ ಕೂಟಗಳೂ ಅವರ **ಮಠ**ಗಳೂ (Monasteries) ಇದ್ದುವು. ಯಾರೋ ಯತಿಗಳಿಂದ ಸ್ಥಾಪಿತವಾಗಿ ಬೆಳೆದಿದ್ದ ಆ ಕೂಟಗಳಲ್ಲಿ ದುಃಖಾರ್ತರಾದವರು ಸೇರಿಕೊಳ್ಳುತ್ತಿದ್ದರು. ಬಡಬಗ್ಗರಿಗೆ ಆ ಮಠಗಳಿಂದ ಸಹಾಯವಾಗುತ್ತಿತ್ತು. ಆ ಮಠಗಳಿಗೆ ಅನೇಕರು ಆಸ್ತಿಪಾಸ್ತಿಗಳನ್ನು ದಾನಮಾಡಿದ್ದುದರಿಂದ ಅವುಗಳಲ್ಲಿಯೂ ಧನವು ಸೇರಿತು. ಈ ವಿರಕ್ತರ ಗುಂಪುಗಳಲ್ಲಿಯೂ ಪುರೋಹಿತರ ಗುಂಪುಗಳಲ್ಲಿಯೂ ಸಚ್ಚರಿತ್ರರೂ ದುಶ್ಚರಿತ್ರರೂ ಇರುತ್ತಿದ್ದರು. ಪವಿತ್ರಸ್ಥಳಗಳಲ್ಲಿ ದುಶ್ಚರಿತ್ರರು ತೋರಿಕೊಂಡುದು ವಿಸ್ಮಯವಾಯಿತು. ಸೋಮಾರಿತನ, ಭೋಗಾಸಕ್ತಿಗಳು ಅವರಲ್ಲಿ ತೋರಿದುದಲ್ಲದೆ ಮತದ ಪರಿಜ್ಞಾನವೇ ಇಲ್ಲವೆನ್ನುವಂತಿತ್ತು. ಇದನ್ನು ಕಂಡು ವಿಕ್ಲಿಫ್ (Wycliffe) ಎಂಬುವನು ಆಕ್ಷೇಪಗಳನ್ನೆತ್ತಿದನು. ಆತನನ್ನೂ ಆತನ ಅನುಯಾಯಿಗಳನ್ನೂ ಅಧಿಕಾರಿಗಳು ದಂಡಿಸಿದರು. ಆದಾಗ್ಗೂ ಮತ

**ಮತದಲ್ಲಿ ಅತೃಪ್ತಿ**

ಗುರುಗಳೆನಿಸಿದವರ ದುರಾಸೆಯನ್ನೂ ಸೋಮಾರಿತನವನ್ನೂ ಕಂಡು ಜನರು ಅಸಮಾಧಾನಗೊಳ್ಳಲು ಪ್ರಾರಂಭವಾಯಿತು. ಮತಾಚಾರಗಳನ್ನು ತಿದ್ದುಪಡಿಮಾಡುವ ಉದ್ದೇಶವು ತೋರಲು ಇದೇ ಮೊದಲು.

1399ರಲ್ಲಿ ಇಮ್ಮಡಿ ರಿಚರ್ಡನು ತನ್ನ ವೈರಿಶ್ರೀಮಂತರೊಂದಿಗೆ ಹೆಣಗಾಡಲಾರದೆ ರಾಜ್ಯತ್ಯಾಗಮಾಡಿ ರಾಜ್ಯವನ್ನು ತನ್ನ ದಾಯಾದಿ ಲ್ಯಾಂಕಾಸ್ಟರ್ ಶ್ರೀಮಂತನಿ

ಗೊಪ್ಪಿಸಿದನು. ಈ ರಿಚರ್ಡನಿಗೆ ಮಕ್ಕಳಿರಲಿಲ್ಲ; ಇವನೇ ಆಂಜೆವಿರ್ ದೊರೆಗಳಲ್ಲಿ ಕಡೆಯವನು. ಲ್ಯಾಂಕಾಸ್ಟರಿನ ಡ್ಯೂಕ್ ಹೆನ್ರಿಯು ರಿಚರ್ಡನ ಚಿಕ್ಕಪ್ಪನ ಮಗನಾಗಿದ್ದನು; ಆ ಹೆನ್ರಿಯು **4ನೆ ಹೆನ್ರಿ**ಯಾದನು. ವರಸೆಯಾಗಿ ಆಳಿದ 4ನೆ ಹೆನ್ರಿ, 5ನೆ ಹೆನ್ರಿ, 6ನೆ ಹೆನ್ರಿಗಳು ಲ್ಯಾಂಕಾಸ್ಟರ್ ಮನೆತನದವರು. 4ನೆ ಹೆನ್ರಿಯು ಯುಕ್ತಿಶಾಲಿಯಾಗಿ ಆಳಿದನು. ಆ ಬಳಿಕ ಅವನ ಮಗ **5ನೆ ಹೆನ್ರಿ** ಶೂರನಾಗಿ ಫ್ರಾನ್ಸಿನೊಡನೆ ಯುದ್ಧಕ್ಕೆ ಹೊರಟು ಒಂದು ಕದನದಲ್ಲಿ ಫ್ರೆಂಚರನ್ನು ಸೋಲಿಸಿ ತಾನೇ ಫ್ರಾನ್ಸಿಗೆ ರಾಜನೆನಿಸಿಕೊಂಡನು. ಸೋತುಹೋದ ಫ್ರೆಂಚರಿಗಿದು ಸಮಾಧಾನವಾಗಲಿಲ್ಲ. 5ನೆ ಹೆನ್ರಿ ಬೇಗನೆ ತೀರಿಕೊಳ್ಳಲು ಅವನ ಮಗ 6ನೆ ಹೆನ್ರಿ ಪಟ್ಟವನ್ನೇರಿದನು. ಈ **6ನೆ ಹೆನ್ರಿ**ಯು ಅಷ್ಟು ಸಮರ್ಥನಾಗಿರಲಿಲ್ಲ. ಆಗ ಫ್ರೆಂಚರು ತಮ್ಮ ರಾಜರ ಪರವಾಗಿ ಹೋರಾಡಿದರು. ಇಂಗ್ಲಂಡಿನ ಶ್ರೀಮಂತರು ಫ್ರಾನ್ಸಿನಲ್ಲಿ ಯುದ್ಧಮಾಡಿ ಫ್ರೆಂಚರಿಗೆ ಕಷ್ಟಕೊಟ್ಟರು. ಫ್ರಾನ್ಸಿನ ಶ್ರೀಮಂತರು ಪರಸ್ಪರ ಅಸೂಯೆಯಿಂದ ವ್ಯಾಜ್ಯವಾಡುತ್ತಿದ್ದುದರಿಂದ ಅನುಕೂಲವಾಗಿತ್ತು. ಭಾರಿ ಶ್ರೀಮಂತನೊಬ್ಬನು ಇಂಗ್ಲಿಷರ ಕಡೆ ಸೇರಿಕೊಂಡಿದ್ದನು. ಫ್ರೆಂಚ್ ದೊರೆಗೆ ರಾಜ್ಯತಪ್ಪಿಹೋಗುವುದಲ್ಲದೆ ಇಂಗ್ಲಿಷ್ ದೊರೆಯೇ ದೇಶವನ್ನು ಗೆದ್ದುಕೊಳ್ಳುವ ಸಮಯವಾಗಿತ್ತು. ಆಗ ಒಂದು ಹಳ್ಳಿಯಲ್ಲಿ ಹುಟ್ಟಿಬೆಳೆದಿದ್ದ **ಜೋನ್** ಎಂಬ ತರುಣಿಯೊಬ್ಬಳು (Joan of Arc) ದೈವಭಕ್ತಿಯಿಂದ ಕೂಡಿ ಅತಿಧೈರ್ಯವಹಿಸಿ ತಾನೇ ಒಂದು ಸಣ್ಣ ದಳವನ್ನು ಶತ್ರುಗಳಮೇಲೆ ಒಯ್ದಳು. **ಆರ್ಲಿಯನ್ಸ್** (Orleans) ಎಂಬ ಪಟ್ಟಣವನ್ನು ಇಂಗ್ಲಿಷರು ಮುತ್ತಿದ್ದರು. ಆ ಮುತ್ತಿಗೆಯನ್ನು ಜೋನ್ ತಡೆದಳು. ಜೋನಳನ್ನು ಕಂಡು ಫ್ರೆಂಚ್‌ಜನರು ಅತ್ಯುತ್ಸಾಹಗೊಂಡರು. ಪುನಃ ಪುನಃ ಕಾಳಗಕ್ಕೆ ನಿಂತು ಇಂಗ್ಲಿಷರನ್ನು ಸೋಲಿಸಿಬಿಟ್ಟರು. ಕಡೆಗೆ ಫ್ರೆಂಚರು ಒಟ್ಟುಗೂಡಿ ತಮ್ಮ ದೇಶವನ್ನು ಬಿಡಿಸಿಕೊಂಡರು. ಇಂಗ್ಲಿಷ್ ದೊರೆಗಳು 1066ರಿಂದ ಆಳುತ್ತಿದ್ದ ನಾರ್ಮಂಡಿ ಭಾಗವೂ ನಷ್ಟವಾಯಿತು. **ಕಲೇ** (Calais) ಎಂಬ ತೀರಪಟ್ಟಣವೊಂದೇ ಇಂಗ್ಲಿಷ್ ದೊರೆಗೆ ಉಳಿಯಿತು.

**ಲ್ಯಾಂಕಾಸ್ಟರ್ ವಂಶ**

**ಫ್ರಾನ್ಸಿನಲ್ಲಿ ನಷ್ಟ**

6ನೆ ಹೆನ್ರಿದೊರೆಯು ಅಸಮರ್ಥಮಾತ್ರನಲ್ಲದೆ ರೋಗಪೀಡಿತನೂ ಆಗಿದ್ದನು. ಪ್ರಬಲವಾದ ಚಿತ್ತವೈಕಲ್ಯ ಆತನಿಗೆ ಪ್ರಾಪ್ತಿಯಾಯಿತು. ಆಗ ರಾಜ್ಯಾಧಿಕಾರವು ರಾಣಿಯಲ್ಲಿರತಕ್ಕದೆಂದು ದೊರೆಯೇನೋ ನಿಶ್ಚಯಮಾಡಿದನು. ಆ ನಿಶ್ಚಯಕ್ಕೆ ದೊರೆಯ ದಾಯಾದಿಯೂ ಪ್ರಬಲಶ್ರೀಮಂತನೂ ಆಗಿದ್ದ ಯಾರ್ಕಿನ ಡ್ಯೂಕ್ ರಿಚರ್ಡನು ಅಡ್ಡಿಯಾದನು. ಲ್ಯಾಂಕಾಸ್ಟರ್ ಪಕ್ಷವೊಂದು, ಯಾರ್ಕ್ ಪಕ್ಷವೊಂದು ಪರಸ್ಪರವಾಗಿ ಜಗಳಕ್ಕೆ ನಿಂತವು. ಪ್ರತಿಶ್ರೀಮಂತನೂ ಪ್ರತಿಯೋಧನೂ ಯಾವುದಾದರೊಂದು

**ಗುಲಾಬಿ ಜಗಳ**

ಪಕ್ಷಕ್ಕೆ ಸೇರಿಕೊಂಡನು. ಪುಂಡುಜನರಿಗೆ ಒಳ್ಳೆಯಕಾಲವಾಯಿತು; ರಾಜ್ಯದಲ್ಲಿ ಒಳ ಜಗಳವು ರೇಗಿ ಕ್ಷೇಮವೂ ಶಾಂತಿಯೂ ಮಾಯವಾದವು. 6ನೆ ಹೆನ್ರಿಯು ಸೆರೆಸಿಕ್ಕಿದನು; ಕಡೆಗೆ ಪ್ರಾಣವನ್ನೂ ಕಳೆದುಕೊಂಡನು. ಆತನ ಮಗನೂ ಹತನಾದನು. ಯಾರ್ಕಿನ ಡ್ಯೂಕ್ ರಿಚರ್ಡನ ಮಗ ಎಡ್ವರ್ಡ್ ಎಂಬಾತನು 4ನೆ ಎಡ್ವರ್ಡನೆಂದು ಪಟ್ಟವನ್ನೇರಿ ಯಾರ್ಕ್‌ವಂಶವನ್ನು ಸ್ಥಾಪಿಸಿದನು.

**4ನೆ ಎಡ್ವರ್ಡ್** ಸಮರ್ಥನಾದಾಗ್ಯೂ ಶ್ರೀಮಂತರ ಬೆಂಬಲವಿಲ್ಲದೆ ರಾಜ್ಯವನ್ನಾಳಲು ಅಶಕ್ತನಾಗಿದ್ದನು. ರಾಜನಾಗಲು ಸಹಾಯಮಾಡಿದ್ದ ಒಬ್ಬ ಭಾರಿ ಶ್ರೀಮಂತನು ವೈರಿಯಾದನು. ಅಂದಿನಿಂದ ಎಡ್ವರ್ಡನಿಗೆ ತೊಂದರೆಯೇ. ಲ್ಯಾಂಕಾಸ್ಟರ್‌ಪಕ್ಷದವರು ಯಥಾಶಕ್ತಿ ತೊಂದರೆ ಕೊಡುತ್ತಲೇ ಇದ್ದರು. ಹೀಗಿರುವಲ್ಲಿ 4ನೆ ಎಡ್ವರ್ಡ್ ಸತ್ತನು.

**ಯಾರ್ಕ್ ವಂಶ**

ಅವನಿಗಿಬ್ಬರು ಕುಮಾರರಿದ್ದರು; ಇಬ್ಬರೂ ಸಣ್ಣ ವಯಸ್ಸಿನವರು. ತಮ್ಮನೊಬ್ಬನಿದ್ದನು; ರಿಚರ್ಡ್ ಎಂದು ಅವನ ಹೆಸರು. ಈ ತಮ್ಮನು ಕುರೂಪಿಯೂ ಕುಟಿಲನೂ ಆಗಿದ್ದು ತಾನೇ ರಾಜನಾಗುವ ದುರಾಸೆಯಿಂದ ಅಣ್ಣನ ಮಕ್ಕಳನ್ನು ಗೋಪ್ಯವಾಗಿ ಕೊಲೆ ಮಾಡಿಸಿದನು. ದುಷ್ಟನೂ ನೀಚನೂ ಆಗಿ ಅನೇಕ ಶ್ರೀಮಂತರಿಗೆ ಅಸಮಾಧಾನವನ್ನುಂಟುಮಾಡಿದನು. ಆ ಶ್ರೀಮಂತರಲ್ಲಿ ಕೆಲವರು ಲ್ಯಾಂಕಾಸ್ಟರ್ ಪಕ್ಷಕ್ಕೆ ತಮ್ಮ ಬಲವನ್ನು ಕೊಟ್ಟರು. ಆ ಪಕ್ಷಕ್ಕೆ ನಾಯಕನೆನಿಸಿದ್ದ ಹೆನ್ರಿ ರಿಚ್ಮಂಡ್ ಎಂಬ ರಾಜಕುಮಾರನು ಅವರ ಬೆಂಬಲದಿಂದ **3ನೆ ರಿಚರ್ಡನನ್ನು ಬಾಸ್ವರ್ತ್‌ಫೀಲ್ಡ್** (Bosworth Field) ಎಂಬ ಕದನದಲ್ಲಿ ಎದುರಿಸಿ ಸೋಲಿಸಿದನು. ರಿಚರ್ಡ್ ಯುದ್ಧದಲ್ಲಿ ಮಡಿದನು; ಅವನಿಗೆ ಮಕ್ಕಳೂ ಇರಲಿಲ್ಲ. ಆಗ **ಹೆನ್ರಿ ರಿಚ್ಮಂಡ್** ಎಂಬವನೇ ಪಟ್ಟವನ್ನೇರಿ ಟ್ಯೂಡರ್‌ವಂಶದ ದೊರೆಗಳಲ್ಲಿ ಮೊದಲನೆಯವನಾದನು.

**ಟ್ಯೂಡರ್ ವಂಶ**ದವರ ಆಳಿಕೆಯು 1485ರಲ್ಲಿ ನೊದಲಾಯಿತು. ಅಲ್ಲಿಂದ ಮುಂದೆ ನಡೆದ ಕಾಲಕ್ಕೆ ಆಧುನಿಕಕಾಲವೆಂದು ಚರಿತ್ರೆಯಲ್ಲಿ ಹೆಸರು; ಅದಕ್ಕೆ ಹಿಂದಿನದು ಮಧ್ಯಮಕಾಲ. ಯೂರೋಪಿನ ಚರಿತ್ರೆಯಲ್ಲಾದರೆ ಆಧುನಿಕಕಾಲವೆಂಬುದು ನಡೆದುದು 1453ರಿಂದ. ಮಧ್ಯಮಕಾಲ ಮುಗಿದು ಆಧುನಿಕಕಾಲ ಮೊದಲಾದುದು ಒಂದು ವರ್ಷದಲ್ಲಲ್ಲ. ಗುರುತಿಗೆ ಮಾತ್ರ 1453 ಎಂದೋ 1485 ಎಂದೋ ಹೇಳಿಕೊಳ್ಳುವುದು. ಈ ಪರಿವರ್ತನೆಯು ನಡೆಯಲು ಮೂರು ಘಟನೆಗಳು ಮುಖ್ಯ. ಅವುಗಳನ್ನು ವಿವರವಾಗಿ ತಿಳಿದುಕೊಳ್ಳುವುದು ಅವಶ್ಯ. ಅವು ಯಾವುವೆಂದರೆ ರಿನೇಸಾನ್ಸ್, ಅಮೆರಿಕದ ಪರಿಚಯ ಮತ್ತು ನೂತನ ಉಪಾಯಸಾಧನೆಗಳು.

**ಹೊಸ ಕಾಲ**

## 3. ಆಧುನಿಕಕಾಲದ ಆರಂಭ

1453ರಲ್ಲಿ **ಉಸ್ಮಾನೀ** (Ottoman) ಗುಂಪಿನ ತುರುಷ್ಕರು ಕಪ್ಪುಸಮುದ್ರದ ಬಾಗಿಲಿನಲ್ಲಿನ **ಕಾನ್‌ಸ್ಟ್ಯಾಂಟಿನೋಪಲ್** ಪಟ್ಟಣವನ್ನು ಮುತ್ತಿ ಜಯಿಸಿದರು. ಆ ನಗರವು ಗ್ರೀಸ್ ಮತ್ತು ಏಷ್ಯಾಮೈನರುಗಳನ್ನೊಳಗೊಂಡ ಚಕ್ರಾಧಿಪತ್ಯದ ರಾಜಧಾನಿಯಾಗಿತ್ತು. ರಾಜಧಾನಿಯು ತುರುಷ್ಕರ ವಶವಾದಂದಿನಿಂದ ಯೂರೋಪಿನ ಆಗ್ನೇಯ ಭಾಗದಲ್ಲಿ ಕ್ರೈಸ್ತರ ಆಧಿಪತ್ಯವು ಖಿಲವಾಗಿ ತುರುಷ್ಕರ ಆಧಿಪತ್ಯವು ಮೊದಲಾಯಿತು. ಹಿಂದಿನಕಾಲದಲ್ಲಿ ಪ್ರೌಢಿಮೆಯಿಂದ ಮೆರೆದ ರೋಮಕಸಾಮ್ರಾಜ್ಯಕ್ಕೆ ಇದೇ ಕಡೆಯ ಮುರುಕು. ಆ ಭಾಗವು ಮುಸಲ್ಮಾನಮತಸ್ಥರ ಕೈಸೇರಿದಾಗ ಅಲ್ಲಿದ್ದ ಗ್ರೀಕ್ ಲ್ಯಾಟಿನ್ ಭಾಷಾ ಪಂಡಿತರು ನೆಲೆದಪ್ಪಿ ಇತರ ಐರೋಪ್ಯರಾಜ್ಯಗಳನ್ನು ಮರೆಹೊಕ್ಕರು. ಅವರ ಸಹವಾಸದಿಂದ ಇಟಲಿ, ಫ್ರಾನ್ಸ್ ಮುಂತಾದ ದೇಶಗಳಲ್ಲಿ ಲ್ಯಾಟಿನ್‌ಗ್ರೀಕ್ ಭಾಷೆಗಳ ವ್ಯಾಸಂಗವೂ ಗ್ರಂಥಪರಿಚಯವೂ ಜನರಿಗುಂಟಾಗಲು ಮಾರ್ಗವೇರ್ಪಟ್ಟಿತು. ಈ ಪರಿಣಾಮವನ್ನು ಚರಿತ್ರಕಾರರು **ರಿನೇಸಾನ್ಸ್** (Renaissance) ಎಂಬುದಾಗಿ ಕರೆದಿದ್ದಾರೆ. ಹಳೆಯ ವಿದ್ಯಾರಾಶಿಯನ್ನು ಹೊಸದಾಗಿ ದಕ್ಕಿಸಿಕೊಂಡು ಪುರಾತನಜ್ಞಾನ ಭಂಡಾರವನ್ನು ಕಣ್ಣುಬಿಟ್ಟು ನೋಡಿ ಪಾಶ್ಚಾತ್ಯದೇಶಗಳವರು ವಿದ್ಯಾರ್ಜನೆಗೂ ಜ್ಞಾನ ಸಾಧನೆಗೂ ಆ ಮೂಲಕ ತೊಡಗಿದರು.

**ಹಳೆ ವಿದ್ಯೆಯ ಲಾಭ**

ರಿನೇಸಾನ್ಸ್ ಎಂಬುದು ಕಾನ್‌ಸ್ಟ್ಯಾಂಟಿನೋಪಲ್ ಪಟ್ಟಣದ ಪತನದಿಂದ ನಡೆದುದೆಂಬುದು ರೂಢಿಯ ಮಾತಾದರೂ ವಾಸ್ತವವಾಗಿ ಇಟಲಿದೇಶದಲ್ಲಿ 14ನೇ ಶತಮಾನದಂತ್ಯದಲ್ಲಿಯೇ ಮೊದಲಾಯಿತೆಂದು ಹೇಳಬಹುದು. 14 ಮತ್ತು 15ನೆ ಶತಮಾನಗಳಲ್ಲಿ ಇಟಲಿಯ ಪಟ್ಟಣಗಳು ಧನಾಢ್ಯವಾದವು; ಪ್ರತಿಪಟ್ಟಣದಲ್ಲಿಯೂ ಭೋಗಾಪೇಕ್ಷೆಯೊಡನೆ ಕಲಾಪುಷ್ಟಿಯೂ ಹೆಚ್ಚಿತು. ಕಾವ್ಯ, ಶಿಲ್ಪ, ವಸ್ತು ಮತ್ತು ಚಿತ್ರಕಲೆಗಳಲ್ಲಿ ಇಟಲಿಯವರು ಸುಂದರವಾದ ಕೃತಿಗಳನ್ನು ರಚಿಸಿದರು. ಜನರಲ್ಲಿ ನವಚೈತನ್ಯವು ಮೂಡಿತ್ತು; ಆ ಚೈತನ್ಯಕ್ಕೆ ಕಾನ್‌ಸ್ಟ್ಯಾಂಟಿನೋಪಲಿನ ಪತನವು ಪುಷ್ಟಿಕಾರಕವಾಯಿತು. ಕಲಾಸಾಧನೆಯಲ್ಲಿ ತೋರಿದ ಚೈತನ್ಯವು ಶಾಸ್ತ್ರಶೋಧನೆಯಲ್ಲಿಯೂ ತೋರಿಕೊಂಡಿತು. ಇಟಲಿಯಲ್ಲಿ ಮೊದಲು ತೋರಿದ ಈ ಬಗೆಯ ಜ್ಞಾನೋದಯವು ಕಾಲಕ್ರಮದಲ್ಲಿ ನೆರೆಹೊರೆಯ ದೇಶಗಳಲ್ಲಿಯೂ ತೋರಿಕೊಂಡಿತು. ಲ್ಯಾಟಿನ್, ಗ್ರೀಕ್ ಭಾಷೆಗಳ ಉತ್ಕೃಷ್ಟ ಗ್ರಂಥಗಳನ್ನು ಓದಿಕೊಂಡು ತಮ್ಮ ಪೂರ್ವಜರು ಸಂಪಾದಿಸಿದ್ದ ಅಮೋಘವಿದ್ಯಾರಾಶಿಯನ್ನು ಐರೋಪ್ಯರು ಕಾಣತಕ್ಕವರಾದರು.

**ನವ ಚೈತನ್ಯ**

ಮಧ್ಯಮಕಾಲದಲ್ಲಿ ಓದುಬರಹ ಬರುತ್ತಿದ್ದುದು ಪಾದರಿಗಳಿಗೆ ಮಾತ್ರ. ಅವರಲ್ಲಿಯೂ 5-6 ಪುಸ್ತಕಗಳನ್ನಿಟ್ಟುಕೊಂಡು ಅವುಗಳನ್ನೋದಿದ್ದವನು ಘನವಿದ್ವಾಂಸನೆನಿಸುತ್ತಿದ್ದನು. ರಾಜರು, ಶ್ರೀಮಂತರು, ಬೇಸಾಯಗಾರರು, ಯೋಧರು ಮುಂತಾದವರೆಲ್ಲರೂ ನಿರಕ್ಷರರಾಗಿದ್ದು ಓದುಬರಹ ಪಾದರಿಗಳಿಗೆ ಸೇರಿದ್ದೆಂದುಕೊಂಡಿರುತ್ತಿದ್ದರು. ಪಾದರಿಗಳಲ್ಲಿಯೂ ಅನೇಕರು ಓದುಬರಹವನ್ನು ತಕ್ಕಮಟ್ಟಿಗೆ ಕಲಿತಿದ್ದಾಗ್ಗೂ ಪಾಂಡಿತ್ಯವನ್ನು ಸಂಪಾದಿಸಿರಲಿಲ್ಲ. ಒಂದು ಪುಸ್ತಕವನ್ನು ಮಾತ್ರ ಬರೆದಿಟ್ಟುಕೊಳ್ಳುವುದಕ್ಕೆ ಒಂದೆರಡು ವರ್ಷಗಳ ಕಾಲ ಬೇಕಾಗುತ್ತಿತ್ತು. ಮತಗ್ರಂಥವಾದ ಬೈಬಲ್ ಎಂಬುದೊಂದೇ ಪುಸ್ತಕವೆನಿಸಿತ್ತು. ಅದೂ ಲ್ಯಾಟಿನ್ ಭಾಷೆಯಲ್ಲಿತ್ತು. ಚರ್ಚುಗಳಲ್ಲಿ ನಡೆಯುತ್ತಿದ್ದ ಪ್ರಾರ್ಥನೆಗಳೆಲ್ಲವೂ ಅದೇ ಭಾಷೆಯಲ್ಲಿತ್ತು. ಆದ್ದರಿಂದ ಸಾಧಾರಣಜನರಿಗೆ ಅವುಗಳು ಅರ್ಥವಾಗುತ್ತಿರಲಿಲ್ಲ; ಮೂಢಭಕ್ತಿಯು ಭದ್ರವಾಗಿತ್ತು. ರಿನೇಸಾನ್ಸ್ ಮುಂದುವರಿಯುತ್ತ ಅಕ್ಷರಸ್ಥರು ಹೆಚ್ಚಿದರು, ಗ್ರಂಥವ್ಯಾಸಂಗದಲ್ಲಿ ಆಸಕ್ತಿ ಹೆಚ್ಚಿತು, ವಿಚಾರಪರತೆಯು ಪ್ರಾರಂಭವಾಯಿತು. ಇದಕ್ಕೆ ಸಹಾಯವಾಗಿ ಅಚ್ಚಿನಯಂತ್ರದ ಉಪಯೋಗವೂ 15ನೆ ಶತಮಾನದಲ್ಲಿಯೇ ಕೂಡಿಯೊದಗಿತು.

**ವ್ಯಾಸಂಗ**

ಅಚ್ಚಿನ ಯಂತ್ರವನ್ನು ಮೊದಲು ಸಾಧಿಸಿದವರು ಚೀನೀಜನರು. ಅವರಿಂದ ಅದನ್ನು ತಿಳಿದ ಮಂಗೋಲರೂ ಟಾರ್ಟರರೂ ಯೂರೋಪಿನ ಪೂರ್ವಭಾಗವನ್ನು ಮುತ್ತಿದಾಗ ಐರೋಪ್ಯರಿಗೆ ಅದರ ಸುಳಿವನ್ನು ತೋರಿದರು. ಕೊಳವಿಯಲ್ಲಿ ಮದ್ದನ್ನು ತುಂಬಿ ಉಡಾಯಿಸಿ ನಾಶಗೊಳಿಸುವ ಉಪಾಯಸಾಧನೆಯೂ ಇದರಂತೆಯೇ ಚೀನೀಜನರಲ್ಲಿ ಹುಟ್ಟಿ ಯೂರೋಪಿಗೆ ಬಂದಿತು. **ಮುದ್ರಣಯಂತ್ರ** ಮತ್ತು **ಫಿರಂಗಿಮದ್ದು**ಗಳ ಉಪಯೋಗವು ಮೊದಲಾಗಿ ಬೇಗನೆ ದೇಶದಿಂದದೇಶಕ್ಕೆ ಹರಡಿತು. ಜರ್ಮನಿ ಎಂಬ ಭಾಗದಲ್ಲಿ ಇವುಗಳನ್ನು ಮೊದಲು ರುಚಿ ನೋಡಿದರು; ಅಲ್ಲಿಂದ ಫ್ರಾನ್ಸ್, ಇಂಗ್ಲಂಡ್, ಸ್ಪೈನ್, ಇಟಲಿ ಮುಂತಾದ ಎಲ್ಲ ದೇಶಗಳಲ್ಲಿಯೂ ಸ್ವಲ್ಪಕಾಲದಲ್ಲಿಯೇ ಎರಡೂ ಸಾಮಾನ್ಯವಾದವು. ಎರಡರಿಂದಲೂ ಪರಮಾಶ್ಚರ್ಯಕರವಾದ ಪರಿಣಾಮಗಳು ನಡೆದವು. ಹಿಂದೆ ಪುಸ್ತಕದ ಒಂದು ಪ್ರತಿಬರೆದುಕೊಳ್ಳಲು ವರ್ಷಗಟ್ಲೆ ಹಿಡಿಯುತ್ತಿತ್ತು; ಅದೂ ಒಂದು ಪ್ರತಿ ಮಾತ್ರ. ಯಂತ್ರದಿಂದ ಸಾವಿರಾರು ಪ್ರತಿಗಳು ಈಗ ಹೊರಬೀಳಲಾರಂಭವಾಯಿತು. ಪುಸ್ತಕಗಳೇ ಅಪರೂಪವಾಗಿದ್ದ ದೇಶಗಳಲ್ಲಿ ಪುಸ್ತಕಗಳು ನೂರಾರು, ಸಾವಿರಾರು, ಲಕ್ಷಗಟ್ಟಲೆಯಾಗಿ ಹೋದವು. ಮಧ್ಯಮಕಾಲದಲ್ಲಿ ಬಿಲ್ಲುಬಾಣಗಳೂ ಕವಚಶೀರ್ಷಕಗುರಾಣಿಗಳೂ ಯುದ್ಧಕಾಲದಲ್ಲಿ ಮುಖ್ಯವಾಗಿದ್ದವು. ತುಪಾಕಿ ಫಿರಂಗಿಗಳು ತೋರಿದಮೇಲೆ ಅವೆಲ್ಲವೂ ನಿರುಪಯುಕ್ತವಾಗಿ ಸ್ವಲ್ಪಕಾಲದಲ್ಲಿಯೇ ಅಪರೂಪವಾದವು. ಯುದ್ಧದ ರೀತಿಯೇ ಬದಲಾಯಿಸಿತು.

**ಹೊಸ ಸಾಧನೆಗಳು**

ರಿನೇಸ್ಸಾನ್ಸ್ ಮತ್ತು ಈ ಉಪಾಯಸಾಧನೆಗಳಲ್ಲಿ ಯಾವುದಾದರೊಂದು ಮಾತ್ರವೇ ತೋರಿದ್ದರೂ ಪರಿಣಾಮವು ಅದ್ಭುತವೆನಿಸುವಂತಿತ್ತು. ಈ ಎರಡು ಭಾರಿ ಘಟನೆಗಳ ಜತೆಗೆ ಇನ್ನೂ ಭಾರಿಯೆನಿಸಬಹುದಾದ ಮತ್ತೊಂದೂ ನಡೆಯಿತು. ಅದೇ ನೆಂದರೆ ಅಮೆರಿಕಾಖಂಡದ ಪರಿಚಯ. 1492ರಲ್ಲಿ ಸ್ಪೈನ್ ದೇಶದಿಂದ ಪಶ್ಚಿಮ ದಿಕ್ಕಿಗೆ ಹಟಹಿಡಿದು ಸಮುದ್ರಯಾನಮಾಡಿ ವೆಸ್ಟಿಂಡೀಸ್ ಎಂಬ ದ್ವೀಪಗಳಲ್ಲೊಂದನ್ನು **ಕೊಲಂಬಸ್** (Columbus) ಎಂಬ ಇಟಲಿಯ ನಾವಿಕನೊಬ್ಬನು ತಲಪಿ ಅದೇ ನಮ್ಮ ಜನ್ಮ ಭೂಮಿಯಾದ ಭಾರತವೆಂದು ಭ್ರಾಂತಿಗೊಂಡನು. ಅಲ್ಲಿಂದ ಮುಂದೆ ಉತ್ತರ ಅಮೆ ರಿಕಾಖಂಡವೇ ಐರೋಪ್ಯರ ಕಣ್ಣುಗಳಿಗೆದುರಾಯಿತು. ಎಲ್ಲ ದೇಶಸ್ಥರೂ ಬೆಜ್ಜರ ಗೊಂಡರು. ಭೂಮಧ್ಯಸಮುದ್ರವೇ ಜಗತ್ತಿಗೆ ಕೇಂದ್ರವೆಂದೂ ಅದರ ಸುತ್ತಮುತ್ತ ಲಿನ ದೇಶಗಳೇ ಜಗತ್ತೆಂದೂ ಐರೋಪ್ಯರು ಭಾವಿಸಿದ್ದರು. ಪೃಥ್ವಿಯೆಷ್ಟಿದೆಯೆಂಬ ಅಂಶವು ಈಗ ಅವರಿಗೆ ಗೋಚರವಾಯಿತು; ಕತ್ತಲೆಯ ಗವಿಯಿಂದ ಹಟಾತ್ತಾಗಿ ಹೊರಗೆಬಿದ್ದು ಸೂರ್ಯರಶ್ಮಿಯನ್ನು ಕಂಡಂತಾಯಿತು. ಆ ಕೊಲಂಬಸ್ಸನು ಭಾರತ ಭೂಮಿಯನ್ನು ತಲಪಲೇಕಾಸೆಪಡಬೇಕು? ಪಶ್ಚಿಮದಿಕ್ಕಿಗೆ ಹೋಗಿ ಅಮೆರಿಕಾ ಭೂಭಾಗದ ಮುರುಕನ್ನು ಇಂಡಿಯವೆಂದೇಕೆ ಕರೆಯಬೇಕು? ಇವೆಂತಹ ಭ್ರಾಂತಿ! ತಲೆಕೆಳಗು ಪ್ರಯತ್ನವೆಂದೀಗ ತೋರುವುದಲ್ಲವೇ? ಆದರೆ ಕೊಲಂಬಸ್ ಹುಚ್ಚನಲ್ಲ, ಅತಿಸಾಹಸಿಯಾದ ನಾವಿಕ.

**ಅಮೆರಿಕಾ ಪರಿಚಯ**

ಬಲುಹಿಂದಿನ ಕಾಲದಿಂದಲೂ ಭೂಮಧ್ಯಸಮುದ್ರದ ಸುತ್ತಮುತ್ತಣ ದೇಶ ಗಳು ಭಾರತದೇಶದ ವಸ್ತುಗಳಿಗಾಸೆಪಟ್ಟು ಹೇರಳವಾಗಿ ಹಣಕೊಟ್ಟು ಅವುಗಳನ್ನು ಕೊಳ್ಳುತ್ತಿದ್ದವು. ಸಂಬಾರದ ಪದಾರ್ಥಗಳು, ವಸ್ತ್ರಗಳು, ಲೋಹದ ಪದಾರ್ಥಗಳು, ರತ್ನಾಭರಣಗಳು ಐರೋಪ್ಯದೇಶಗಳಿಗೆ ಮೂಡಣದಿಕ್ಕಿನಿಂದಲೇ ದೊರಕಬೇಕಾಗಿತ್ತು. ಮಧ್ಯಮಕಾಲದಲ್ಲೆಲ್ಲ ಏಷ್ಯದ ಪಡುವಣ ವಿಭಾಗವು ಅರಬ್ಬಿ ಅಥವಾ ತುರುಷ್ಕಜನರ ಸ್ವಾಧೀನದಲ್ಲಿತ್ತು. ಕ್ರುಸೇಡ್ಸ್ ಎಂಬ ಯುದ್ಧಗಳ ಕಾಲದಲ್ಲಿ ಐರೋಪ್ಯದೇಶಸ್ಥರಿಗೆ ಈ ವಸ್ತುಗಳ ಬಳಕೆಯುಂಟಾಗಿ ವ್ಯಾಪಾ ರವು ಹೆಚ್ಚಿತು. ಭಾರತದ ಪಶ್ಚಿಮತೀರದಿಂದ ಈ ಸರಕು ಗಳನ್ನು ಅರಬ್ಬಿಜನರು ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ಒಯ್ದು ಭೂಮಧ್ಯಸಮುದ್ರದ ಮೂಡಣಭಾಗದ ಪಟ್ಟಣಗಳಲ್ಲಿ ರಾಶಿರಾಶಿಯಾಗಿ ವ್ಯಾಪಾರ ಕ್ಕಿಡುತ್ತಿದ್ದರು. ಇಟಲಿಯ ಪಟ್ಟಣಗಳ ವರ್ತಕರು ಅಲೆಕ್ಸಾಂಡ್ರಿಯ, ಸ್ಮರ್ನ, ಆಂಟಿ ಯಾಖ್ ಮುಂತಾದ ಪಟ್ಟಣಗಳಲ್ಲಿ ಆ ರಾಶಿಗಳನ್ನು ಮುಸ್ಲಿಮವ್ಯಾಪಾರಿಗಳಿಂದ ಕೊಂಡು ಸ್ಪೈನ್, ಫ್ರಾನ್ಸ್, ಜರ್ಮನಿ ಮುಂತಾದ ದೇಶಗಳ ವರ್ತಕರಿಗೆ ಮಾರಿ ಮಧ್ಯೆ ಅಪಾರಲಾಭವನ್ನು ಸಂಪಾದಿಸುತ್ತಿದ್ದರು. ಮಧ್ಯವರ್ತಿಗಳು ಹೆಚ್ಚಾಗಿದ್ದ ಕಾರಣ

**ಭಾರತೀಯ ವ್ಯಾಪಾರ**

ದಿಂದ ವಸ್ತುವಿನಬೆಲೆಯು ಭಾರತದಲ್ಲಿದ್ದುದರ 500-600 ರಷ್ಟಾಗುತ್ತಿತ್ತು. ಈ ವ್ಯಾಪಾರದ ಮಧ್ಯವರ್ತನೆಯಿಂದ ಇಟಲಿಯ ಪಟ್ಟಣಗಳ ವರ್ತಕರು ಯೂರೋಪಿಗೆಲ್ಲ ಧನಿಕರಾಗಿರುತ್ತಿದ್ದರು. **ವೆನಿಸ್,** (Venice) **ಮಿಲನ್,** (Milan) **ಫ್ಲಾರೆನ್ಸ್** (Florence) ಮುಂತಾದ ಪಟ್ಟಣಗಳೊಂದೊಂದರಲ್ಲೂ ಫ್ರಾನ್ಸಿನ ಅಥವಾ

**ಮಧ್ಯವರ್ತಿಗಳ ಲಾಭ**

ಇಂಗ್ಲಂಡಿನ ರಾಜನನ್ನು ಕೊಳ್ಳುವಷ್ಟು ಧನರಾಶಿ ಸೇರಿತು. ಈ ಐಶ್ವರ್ಯವೃದ್ಧಿಯನ್ನು ಕಂಡು ಇಟಲಿಯ ಒಂದುಭಾಗವನ್ನಾದರೂ ಜಯಿಸಿಕೊಳ್ಳುವ ಆಸೆ ನೆರೆಹೊರೆಯ ರಾಜರಲ್ಲಿ ಬಲವಾಗಿರುತ್ತಿತ್ತು. ಇಟಲಿಯ ಸ್ಥಾನಮಹಿಮೆಯೇ ಇದಕ್ಕೆ ಮೂಲಕಾರಣವಾಗಿತ್ತು. ಏಕೆಂದರೆ ಇಟಲಿಯೇ ಕ್ರೈಸ್ತ ಯೂರೋಪಿಗೆ ಗಡಿನಾಡಿನಂತಿತ್ತು; ಇಟಲಿ ದಾಟ ಪೂರ್ವಕ್ಕೆ ಹೊರಟರೆ ಮುಸ್ಲಿಮರ ರಾಜ್ಯಗಳು. ಹೀಗಿರುವಲ್ಲಿ ಸ್ಪೈನ್ ಪೋರ್ಚುಗಲ್ ಮುಂತಾದ ಇತರ ಐರೋಪ್ಯದೇಶಗಳಲ್ಲಿ ರಾಜರಿಗೂ ವರ್ತಕರಿಗೂ ಅಸೂಯೆ ಸಹಜವಾಗಿತ್ತು. "ಇಟಲಿಯವರ ಮತ್ತು ಮುಸ್ಲಿಮರ ಮಧ್ಯವರ್ತನೆಯಿಲ್ಲವಂತೆ ಭಾರತೀಯ ವ್ಯಾಪಾರವನ್ನು ಸಾಧಿಸಲಾರೆವೇ ನಾವು!" ಎಂದು ತಪಿಸುತ್ತಿದ್ದರು.

ಇಂತಹ ವೇಳೆಯಲ್ಲಿ ಜೆನೊವ (Genoa) ಪಟ್ಟಣದ ನಾವಿಕ ಕೊಲಂಬಸ್ ತನ್ನ ದೇಶಸ್ಥರಲ್ಲಿ ಅತೃಪ್ತಿಹೊಂದಿ ಸ್ಪೈನ್ ದೊರೆ ಫರ್ಡಿನೆಂಡೆಂಬಾತನ (Ferdinand) ಬಳಿಗೆ ಬಂದು ಸಮುದ್ರಮಾರ್ಗದಿಂದ ನೇರವಾಗಿ ಭಾರತವನ್ನು ತಲುಪಲು ಸಾಧ್ಯವೆಂದನು. ಆ ದೊರೆ ಅವನನ್ನು ನಂಬಲಿಲ್ಲ. ಆದರೆ ಆತನ ರಾಣಿ ಇಸಬೆಲ (Isabella) ಎಂಬಾಕೆಯು ನಂಬಿ ನೆರವಾದಳು. ಆಕೆಯ ಸಹಾಯದಿಂದ ಹೊರಟ ಕೊಲಂಬಸ್ ವೆಸ್ಟಿಂಡೀಸ್ ದ್ವೀಪಗಳನ್ನು ತಲಪಿ ಅದೇ ಭಾರತ

**ಪೂರ್ವಪಶ್ಚಿಮ ಸಾಹಸ**

ವೆಂದು ಭ್ರಮಿಸಿದನು. ಸ್ವಲ್ಪಕಾಲದಲ್ಲಿಯೇ ಅದು ಭಾರತವಲ್ಲವೆಂದು ತಿಳಿಯಿತು. 1498 ರಲ್ಲಿ, ಅಂದರೆ 6 ವರ್ಷಗಳ ತರುವಾಯ, ಪೋರ್ಚುಗೀಸ್ ನಾವಿಕ **ವಾಸ್ಕೊಡಿಗಾಮ** (Vasco da Gama) ಎಂಬುವವನು ಆಫ್ರಿಕಾಖಂಡವನ್ನು ಸುತ್ತುಹಾಕಿ ಹಿಂದೂಸಾಗರದಲ್ಲಿ ಯಾನಮಾಡಿ ಕೋಳಿಕೋಡನ್ನು ತಲಪಿ ಒಂದು ಹಡಗಿನ ತುಂಬ ಮೆಣಸನ್ನು ಹೇರಿಕೊಂಡು ಹಿಂತಿರುಗಿದನು. ಅಮೆರಿಕವೆಲ್ಲವೂ ತನಗೆ ಸೇರತಕ್ಕುದೆಂದು ಸ್ಪೈನ್ ರಾಜನು ನೆನೆದನು; ಯೂರೋಪಿಗೆ ಪಶ್ಚಿಮದ್ದು ಸ್ಪೈನಿಗಾದರೆ ಆಫ್ರಿಕದ ತೀರ ಮತ್ತು ಪೂರ್ವದಿಕ್ಕಿನ ಸಮಸ್ತದೇಶಗಳೂ ತನ್ನ ಪಾಲಿನವೆಂದು ಪೋರ್ಚುಗಲ್ ದೊರೆಯು ಭಾವಿಸಿದನು. ಇಬ್ಬರಿಗೂ ನ್ಯಾಯತೀರ್ಮಾನಮಾಡುತ್ತ 1509 ರಲ್ಲಿ ಪೋಪನೇ ಆ ರೀತಿ ನಿಶ್ಚಯಮಾಡಿಕೊಟ್ಟನು.

ಭಾರತೀಯವ್ಯಾಪಾರದ ಲಾಭದ ಆಸೆಯಿಂದ ಈ ರೀತಿ ಸಮುದ್ರಯಾನ ಸಾಹಸಗಳು 1400 ರಿಂದಲೂ ನಡೆಯುತ್ತಿದ್ದು 15 ನೆ ಶತಮಾನದಕೊನೆಗೆ ಪೃಥ್ವಿಯ

ಪರಿಚಯವಾಯಿತು. ಅಮೆರಿಕಾ ಖಂಡಗಳೆರಡೂ ಗೊತ್ತಾದವು. ಪೃಥ್ವಿಯು ತಟ್ಟೆಯಹಾಗಿಲ್ಲವೆಂಬುದು ಕಣ್ಣಿಗೆದುರಾಯಿತು. ಪೃಥ್ವಿಯು ದುಂಡಾಗಿರುವ ಅಂಶವು ಪ್ರತ್ಯಕ್ಷವಾಯಿತು.

**ಆಧುನಿಕ ಕಾಲದ ಆರಂಭ**

ರಿನೇಸಾನ್ಸ್, ಉಪಾಯಸಾಧನೆಗಳು, ಯಾನಸಾಹಸಗಳು ಮೂರೂ ಸರಿಸುಮಾರಾಗಿ 15ನೆ ಶತಮಾನದಲ್ಲಿ ನಡೆದವು. 1453ರಲ್ಲಿ ಮಧ್ಯಮಕಾಲ ಮುಗಿಯಿತೆನ್ನುವುದು ಗುರುತಿಗೆ ಮಾತ್ರ. ಪ್ರತಿ ದೇಶದಲ್ಲಿಯೂ ಜನಜೀವನವು ಮಾರ್ಪಾಟಾಗಲು ಕನಿಷ್ಠಪಕ್ಷ 20-25 ವರ್ಷಗಳಾದರೂ ಹಿಡಿಯಿತು. ಕೆಲವು ದೇಶಗಳಲ್ಲಿ ವೇಗವಾಗಿಯೂ ಕೆಲವು ದೇಶಗಳಲ್ಲಿ ಸಾವಕಾಶವಾಗಿಯೂ ನಡೆಯಿತು. ಇಟಲಿಗೆ ಫ್ರಾನ್ಸಿಗಿಂತ ದೂರವಾಗಿರುವ ಇಂಗ್ಲಂಡಿನಲ್ಲಿ ಮಧ್ಯಮಕಾಲವು ಕಳೆದು ಆಧುನಿಕಕಾಲದ ಲಕ್ಷಣಗಳು ತೋರಿಕೊಳ್ಳುವುದು ನಿದಾನವೇ ಆಯಿತು. ಇಂಗ್ಲಂಡಿನ ಚರಿತ್ರೆಯಲ್ಲಿ ಆಧುನಿಕಕಾಲವೆಂಬುದು ಟ್ಯೂಡರ್ ವಂಶದ ರಾಜರಿಂದ, ಅಂದರೆ 1485ರಿಂದ, ಮೊದಲಾಯಿತೆನ್ನುವುದು ರೂಢಿ.

# ಕಾಲಸೂಚೀ

| ಐರ್ಲಂಡ್ | ಸ್ಕಾಟ್ಲೆಂಡ್ | ಇಂಗ್ಲಂಡ್ | ಇತರ ಐರೋಪ್ಯಕ್ಷೇತ್ರಗಳು |
|---|---|---|---|
| | | ಶಿಲಾಯುಗ | |
| ಕೆಲ್ಟರು | ಕೆಲ್ಟರು | ಕೆಲ್ಟರನೆಲೆ | |
| | ಸ್ಕಾಟರು, ಪಿಕ್ಟರು | ಬ್ರಿಟರ್ | |
| | | | ಕ್ರಿ. ಪೂ. 31 ರೋಮಕಸಾಮ್ರಾಜ್ಯ |
| | | ಕ್ರಿ. ಶ. 85 ರೋಮಕರ ಆಳಿಕೆ | |
| | | | ಕ್ರಿ. ಶ. 395 ಸಾಮ್ರಾಜ್ಯವಿಭಾಗ |
| | | ಕ್ರಿ.ಶ. 410 ರೋಮಕರ ಆಳಿಕೆಯ ಕೊನೆ | |
| | | ಟ್ಯೂಟನ್ನರನೆಲೆ | |
| | | | ರೋಂ / ಕಾನ್‌ಸ್ಟಾಂಟಿನೋಪಲ್ |
| | | ಕ್ರೈಸ್ತಮತ | 476 ರೂಕ್ಷಜನರ ಹಾವಳಿ ಅಂಧಕಾರಯುಗ |
| | | 800 ಏಕರಾಜ್ಯ | 800 ಚಾರ್ಲ್‌ಮೇನ್ ಚಕ್ರವರ್ತಿ |
| | | 1000 ಡೇನರ ಆಕ್ರಮಣ | ಫ್ರಾನ್ಸ್ ನಾರ್ಮನರನೆಲೆ / ಜರ್ಮನಿ ಇತ್ಯಾದಿ / ಮೂಡಣ ಸಾಮ್ರಾಜ್ಯ |
| | | 1066 ಕಡೆ ಇಂಗ್ಲಿಷ್‌ದೊರೆ ನಾರ್ಮನ್‌ವಂಶ | |
| | | 1154 ಆಂಜೆವಿನ್ ವಂಶ | |
| (2ನೆ ಹೆನ್ರಿ) | ರಾಬರ್ಟ್ ಬ್ರೂಸ್ | | >< ಶತಮಾನದ ಜಗಳ ವಾಲ್ವಾವಂಶ / ಮಧ್ಯಮ ಕಾಲ |
| | | 1399 ಲ್ಯಾಂಕಾಸ್ಟರ್ ವಂಶ | |
| | ಸ್ಟೂಯರ್ಟ್ ವಂಶ | | 1453 ತುರುಷ್ಕರ ಜಯ |
| | | 1461 ಯಾರ್ಕ್ ವಂಶ | |
| | 4ನೆಜೇಮ್ಸ್ | 1485 ಟ್ಯೂಡರ್ ವಂಶ | ಆಧುನಿಕ ಕಾಲ |

# ಟ್ಯೂಡರ್ ವಂಶ

7ನೆ ಹೆನ್ರಿ, ಮ। ಯಾರ್ಕಿನ ಎಲಿಸಬೆತ್

(1485—1509)



# ಟ್ಯೂಡರ್ ಹಕ್ಕು



3ನೆ ಎಡ್ವರ್ಡ್
1327—1377
ಎಡ್ವರ್ಡ್ ಯುವರಾಜ
ಜಾನ್ ಆಫ್ ಗಾಂಟ್
ಎಡ್ಮಂಡ್, ಡ್ಯೂಕ್ ಆಫ್ ಯಾರ್ಕ್
ಇಮ್ಮಡಿ ರಿಚರ್ಡ್ (1377-1399)
4ನೆ ಹೆನ್ರಿ 1339-1413 ಲಾಂಕಾಸ್ಟರ್
ಜಾನ್ ಬ್ಯೂಫರ್ಟ್
ಜಾನ್ ಬ್ಯೂಫರ್ಟ್
ರಿಚರ್ಡ್
ರಿಚರ್ಡ್
5ನೆ ಹೆನ್ರಿ (1413-1422)
6ನೆ ಹೆನ್ರಿ (1422-1461)
4ನೆ ಎಡ್ವರ್ಡ್ (1461-1483) ಯಾರ್ಕ್
ಜಾರ್ಜ್ ಡ್ಯೂಕ್ ಆಫ್ ಕ್ಲಾರೆನ್ಸ್
3ನೆ ರಿಚರ್ಡ್ (1483-1485)
ಮಾರ್ಗರೆಟ್ (ಬರ್ಗಂಡಿಯ ಡಚೆಸ್)
ಎಡ್ವರ್ಡ್ ಅರ್ಲ್ ಆಫ್ ವಾರಿಕ್ [ಸಿಮ್ನೆಲ್]
ಮಾರ್ಗರೆಟ್ ಬ್ಯೂಫರ್ಟ್ (ಮ। ಎಡ್ಮಂಡ್ ಟ್ಯೂಡರ್)
7ನೆ ಹೆನ್ರಿ ............ ಎಲಿಸಬೆತ್
(1485-1509) ಟ್ಯೂಡರ್
5ನೆ ಎಡ್ವರ್ಡ್
ರಿಚರ್ಡ್ [ವಾರ್ಬೆಕ್]

## ಟ್ಯೂಡರ್ ವಂಶ

## 7ನೆ ಹೆನ್ರಿ (1485—1509)

ಜನನ 1456 ; ಯಾರ್ಕಿನ ಎಲಿಸಬೆತಳೊಂದಿಗೆ ವಿವಾಹ 1486 ; ಮರಣ 1509.

### ಸಮಕಾಲಿಕ ಪ್ರಭುಗಳು

| ಸ್ಕಾಟ್ಲೆಂಡ್ | ಫ್ರಾನ್ಸ್ | ಸಾಮ್ರಾಜ್ಯ | ಸ್ಪೈನ್ | ಪೋಪರು |
|---|---|---|---|---|
| 3ನೆ ಜೇಮ್ಸ್ | 8ನೆ ಚಾರ್ಲ್ಸ್ | 3ನೆ ಫ್ರೆಡ್ರಿಕ್ | ಫರ್ಡಿನೆಂಡ್ | 4ನೆ ಇನೊಸೆಂಟ್ |
| 1460—1488 | 1483—1498 | 1440—1493 | 1479—1515 | 1484—1492 |
| 4ನೆ ಜೇಮ್ಸ್ | 12ನೆ ಲೂಯಿ | 1ನೆ ಮಾಕ್ಸಿಮಿಲಿಯನ್ | ಮತ್ತು ಇಸಬೆಲ | 6ನೆ ಅಲೆಕ್ಸಾಂಡರ್ |
| 1488—1513 | 1498—1515 | 1493—1519 | 1474—1504 | 1492—1503 |
| | | | | 2ನೆ ಜೂಲಿಯಸ್ |
| | | | | 1503—1513 |

**ಪಟ್ಟ**

ಬಾಸ್ವರ್ತ್ ಕದನದಲ್ಲಿ ಜಯಶಾಲಿಯಾದ ಬಳಿಕ ರಾಜಕುಮಾರಹೆನ್ರಿಯು ಗೆದ್ದಕಾರಣದಿಂದಲೂ ಬಾಂಧವ್ಯದಬಲದಿಂದಲೂ ಇಂಗ್ಲಂಡಿನ ಪಟ್ಟವನ್ನೇರಲು ಸಿದ್ಧನಾದನು. ನಿರಂತರಕಲಹಗಳಲ್ಲಿ ಬೇಸತ್ತಿದ್ದ ಜನರಿಗೆ ಶಾಂತಿಯೊಂದೇ ಬೇಕಾಗಿತ್ತು. ಪಾರ್ಲಿಮೆಂಟ್‌ಸಭೆಗಳವರು ಹೆನ್ರಿಯೇ ಮುಂದಿನ ದೊರೆಯೆಂದು ಸಾರಿದರು. ಜನಸಾಮಾನ್ಯರೆಲ್ಲರೂ ಹೆನ್ರಿಯ ದೊರೆತನಕ್ಕೆ ತಲೆಬಾಗಿದರು. 1485ರಲ್ಲಿ ಹೆನ್ರಿ ಕಿರೀಟಧಾರಣೆ ನಡೆಸಿಕೊಂಡನು.

**ಜಾಣತನದ ಮದುವೆ**

ಲಾಂಕಾಸ್ಟರ್ ಪಕ್ಷಕ್ಕೆ ನಾಯಕನಾಗಿ ಯುದ್ಧಮಾಡಿದನಷ್ಟೆ ಹೆನ್ರಿ! ತನ್ನ ಬಾಂಧವ್ಯದ ಹಕ್ಕು ದುರ್ಬಲವಾದುದೆಂದು ಆತನಿಗೆ ತಿಳಿದಿದ್ದಿತು. ತನಗಿಂತಲೂ ಸಮೀಪಬಾಂಧವ್ಯವಿದ್ದವರಿಬ್ಬರಿದ್ದರು. ಒಬ್ಬನು 3ನೆ ರಿಚರ್ಡನ ಅಣ್ಣನ ಮಗ; ವಾರಿಕ್ಕಿನ ಶ್ರೀಮಂತನೆನಿಸಿದ್ದ **ಎಡ್ವರ್ಡ್** (Edward, Earl of Warwick) ಎಂಬಹುಡುಗ. ಲಂಡನ್ನಿಗೆ ಬಂದಕೂಡಲೇ ಹೆನ್ರಿ ಆ ಹುಡುಗನನ್ನು ಸೆರೆಹಿಡಿಸಿ ಟವರ್ ಎಂಬಲ್ಲಿ ಬಂಧನದಲ್ಲಿಡಿಸಿಬಿಟ್ಟನು. 3ನೆರಿಚರ್ಡಿನ ಹಿಂದೆ ಆಳಿದ್ದ ಅವನ ದೊಡ್ಡಣ್ಣ ನಾಲ್ಕನೆ ಎಡ್ವರ್ಡ್ ಎಂಬಾತನ ಮಗಳು **ಎಲಿಸಬೆತ್ತೆಂ**ಬ (Elizabeth of York) ರಾಜ

ಕುಮಾರಿಯೂ ಇದ್ದಳು. ಹೆನ್ರಿ ಜಾಣತನದಿಂದ ಎಲಿಸಬೆತ್ತಳನ್ನು ಮದುವೆಯಾಗಿ ತನ್ನ ರಾಣಿಯಾಗಿ ಮಾಡಿಕೊಂಡನು. ಇದರಿಂದ ಹೆನ್ರಿಗೆ ಪಟ್ಟವು ಸ್ಥಿರಪಟ್ಟಿತು. ಯಾರ್ಕ್‌ಪಕ್ಷದವರಿಗೂ ಲಾಂಕಾಸ್ಟರ್‌ಪಕ್ಷದವರಿಗೂ ಸಮಾಧಾನಸಂತೋಷಗಳಿಗೆ ಆಸ್ಪದವಾಯಿತು. ಯಾರ್ಕ್‌ಲಾಂಕಾಸ್ಟರ್ ಪಕ್ಷವಿಪಕ್ಷಗಳ ಕಚ್ಚಾಟವು ನಿಂತು ಹೋಗಿ ಇಂಗ್ಲಂಡಿನಲ್ಲಿ ಶಾಂತಿಕ್ಷೇಮಗಳು ಬೇರೂರುವಂತಾಯಿತು. ಜನಸಾಮಾನ್ಯರು ನೆಮ್ಮದಿಯ ದಿನಗಳು ಬಂದವೆಂದುಕೊಂಡರು.

ಶ್ರೀಮಂತವರ್ಗದಲ್ಲಿ ಜಗಳಗಂಟಿಗಳಾದವರು ಇರಲಿಲ್ಲ. ಅದುವರೆಗೂ ನಡೆದಿದ್ದ ಕದನಗಳಲ್ಲಿ ಅನೇಕರು ಪ್ರಾಣಗಳನ್ನು ಕಳೆದುಕೊಂಡಿದ್ದರು. ಯಾರ್ಕ್ ಪಕ್ಷದ ಶ್ರೀಮಂತರಲ್ಲಿ ಹೆನ್ರಿಗೆದುರುಬಿದ್ದು ತೊಂದರೆಕೊಡುವಷ್ಟು ಪ್ರಬಲರಾರೂ ಇರಲಿಲ್ಲ. ಒಬ್ಬ ಶ್ರೀಮಂತನು ಮಾತ್ರ ಆ ಪಕ್ಷವನ್ನು ಬಿಡದೆ ದಂಗೆಯೆದ್ದನು; ಆತನನ್ನು ಹೆನ್ರಿ ಹಿಡಿಸಿ ಗಲ್ಲಿಗೇರಿಸಿದನು. ಯಾರ್ಕ್ ಪಕ್ಷದವರು ದಂಗೆ ಏಳಬೇಕಾದರೂ ಯಾರಿಗಾಗಿ? ವಾರಿಕ್ಕಿನ ಶ್ರೀಮಂತನು ಆಗಲೇ ಸೆರೆಸಿಕ್ಕಿದ್ದನು. ಹೀಗಿದ್ದರೂ ಆ ಪಕ್ಷದಲ್ಲಿ ಪ್ರಬಲೆಯೆನಿಸಿದ್ದ **ಬರ್ಗಂಡಿಯ ಡಚೆಸ್ ಮಾರ್ಗರೆಟ್** (Margaret, Duchess of Burgundy) ಎಂಬಾಕೆಯು ತನ್ನ ಪಕ್ಷಕ್ಕೆ ಸೋಲನ್ನೊಪ್ಪಲಾರದೆ ಹೆನ್ರಿಗೆ ವಿರೋಧವಾಗಿ ಪಿತೂರಿಯನ್ನಾದರೂ ಕಟ್ಟಿ ತೃಪ್ತಿಪಡೆಯಲು ಉತ್ಸುಕಳಾದಳು. ವಾರಿಕ್ಕಿನ ಶ್ರೀಮಂತನು ಸೆರೆಯಲ್ಲಿದ್ದಾಗಲೆ ತಾನೇ ಅವನು ಎನ್ನುತ್ತ ಒಬ್ಬ ಹುಡುಗನು ಐರ್ಲಂಡಿನಲ್ಲಿ ಕಾಣಿಸಿಕೊಂಡನು. ಐರ್ಲಂಡಿನ ಶ್ರೀಮಂತರಲ್ಲಿ **ಕಿಲ್ಡೇರಿನ ಅರ್ಲನು** (Earl of Kildare) ಸ್ವತಂತ್ರನಾಗಲು ಒಳ್ಳೆ ಸಮಯವೆಂದುಕೊಂಡು ಆ ವೇಷಧಾರಿ ಠಕ್ಕನಿಗೆ ಸಹಾಯಮಾಡಿದನು. ಸ್ವಲ್ಪ ಸೈನ್ಯಕಟ್ಟಿಕೊಂಡು ಆ ಬಾಲಕನು ಇಂಗ್ಲಂಡಿನ ಪಡುವಣಮೂಲೆಯಲ್ಲಿ ಸಿದ್ಧನಾದನು. ಅವನ ಸಣ್ಣದಳವನ್ನು ಹೆನ್ರಿಯಕಡೆಯವರು ಸುಲಭವಾಗಿ ಸೋಲಿಸಿಬಿಟ್ಟು ಅವನನ್ನು ಹಿಡಿದು ಸೆರೆಗೊಯ್ದರು. ವಿಚಾರಣೆಯಲ್ಲಿ ಅವನ ನಿಜಾಂಶವು ಹೊರಬಿತ್ತು. ಆಕ್ಸ್‌ಫರ್ಡ್ ಪಟ್ಟಣದ ಸಾಮಾನ್ಯವ್ಯಾಪಾರಿಯೊಬ್ಬನ ಮಗ ಅವನು; **ಲಾಂಬರ್ಟ್ ಸಿಮ್ನೆಲ್** (Lambert Simnel) ಎಂದು ಹೆಸರು. ಸೆರೆಯಲ್ಲಿದ್ದ ನಿಜವಾದ ವಾರಿಕ್ಕಿನ ಅರ್ಲನ್ನು ಕದನಕ್ಕೆ ಮೊದಲೇ ಲಂಡನ್ ಪಟ್ಟಣಿಗರೆದುರಿಗೆ ತೋರಿಸಿ ಹೆನ್ರಿಯು ಸುಲಭವಾಗಿ ಈ ಸಿಮ್ನೆಲ್ ನಟನೆಯ ಪಿತೂರಿಯನ್ನು ಅಲ್ಲಗಳೆದನು. ತನ್ನ ತಿರಸ್ಕಾರವನ್ನು ಸೂಚಿಸುವಂತೆ ಸಿಮ್ನೆಲ್ಲನನ್ನು ಅರಮನೆಯ ಬಾಣಸಿಗರ ಊಳಿಗದ ಚಾಕರಿಗಿಟ್ಟನು.

**ಸಿಮ್ನೆಲ್ಲನ ಠಕ್ಕು**

ಸಿಮ್ನೆಲ್ ಪಿತೂರಿಯು ಹಾಳಾಯಿತು. ಆದರೆ ಹೆನ್ರಿಯ ವಿರೋಧಿಗಳು ಹಾಳಾಗಲಿಲ್ಲ. ಅತೃಪ್ತಿಗೊಂಡಿದ್ದ ಐರಿಷ ಶ್ರೀಮಂತನೊಂದುಕಡೆ, ಬರ್ಗಂಡಿಯ

ಡಚೆಸ್ಸೊಂದುಕಡೆ ಮತ್ತೊಂದು ಸಮಯವನ್ನು ನಿರೀಕ್ಷಿಸುವವರಾಗಿದ್ದರು. ಇವರಿಗಿಂತಲೂ ಪ್ರಬಲನಾಗಿದ್ದ ಫ್ರಾನ್ಸ್ ದೇಶದ ರಾಜ **8ನೆ ಚಾರ್ಲ್ಸ್** (Charles VIII) ಇಂಗ್ಲಿಷರ ಶತ್ರುವಾಗಿಯೇ ಇದ್ದನು. ಅವಿಧೇಯರಾಗಿದ್ದ ತನ್ನ ಶ್ರೀಮಂತರನ್ನು ಅಡಗಿಸಿಕೊಂಡು ಇಟಲಿಯ ಭಾಗಗಳನ್ನು ಮುತ್ತುವ ಆಸೆಯನ್ನು ಆ ಚಾರ್ಲ್ಸ್ ಬೆಳೆಸಿದ್ದನು. ಫ್ರಾನ್ಸಿನ ಪಡುವಲ ಭಾಗದಲ್ಲಿ **ಬ್ರಿಟನಿ**(Brittany)ಯೆಂಬ ಪ್ರಾಂತದ ಡ್ಯೂಕನು ರಾಜನನ್ನು ಲೆಕ್ಕಿಸದೆ ಕಂಟಕನಾಗಿಯೇ ಇರುತ್ತಿದ್ದನು. ಭೇದೋಪಾಯವನ್ನನುಸರಿಸಿ ಹೆನ್ರಿ ಆ ಶ್ರೀಮಂತನೊಡನೆ ಸ್ನೇಹಕಟ್ಟಿದನು. 1488ರಲ್ಲಿ ಆ ಶ್ರೀಮಂತನು ಸತ್ತನು. ಆತನ ಒಬ್ಬಳೇ ಮಗಳನ್ನು ಮದುವೆಯಾಗಿ ಚಿರಕಾಲದಿಂದ ತನ್ನ ರಾಜ್ಯದಲ್ಲಿದ್ದ ಒಡಕನ್ನು ಸರಿಪಡಿಸಿಕೊಳ್ಳಲು ಚಾರ್ಲ್ಸ್ ಇಷ್ಟಮಿತ್ರರೊಡಗೂಡಿ ಕ್ಷಿಪ್ರತೆಯಿಂದ ಸಂಧಾನಮಾಡತೊಡಗಿದನು. ಆ ಮದುವೆಯು ನಡೆದರೆ ಫ್ರಾನ್ಸ್‌ರಾಜ್ಯದಲ್ಲಿ ಒಳಜಗಳಗಳಿಲ್ಲದಂತಾಗಿ ರಾಜನು ಪ್ರಬಲನಾಗುವನೆಂದು ನೆರೆಹೊರೆಯವರಿಗೆ ಯೋಚನೆಯಾಯಿತು. ಮದುವೆಯಾಗದಂತೆ ಯತ್ನಿಸಲು ಸ್ಪೈನಿನ ರಾಜ **ಫರ್ಡಿನೆಂಡ**ನೂ (Ferdinand) ಆಸ್ಟ್ರಿಯ ಮತ್ತು ನೆದರ್ಲಂಡ್ಸ್‌ಗಳಿಗೆ ಅಧಿಪತಿಯಾಗಿದ್ದ **ಮಾಕ್ಸಿಮಿಲಿಯನ್** (Maximilian) ಎಂಬಾತನೂ ಹವಣಿಸಿದರು. ಹೆನ್ರಿಯು ಜಾಣ್ಮೆಯಿಂದ ಅವರಿಬ್ಬರೊಡನೆ ಮೈತ್ರಿಯನ್ನು ಕಟ್ಟಿದನು. ಮೂವರು ಪ್ರಭುಗಳೂ ಫ್ರಾನ್ಸನ್ನು ಮುತ್ತುವ ಯೋಚನೆ ಮಾಡಿದರು. ಇದನ್ನು ತಿಳಿದ ಚಾರ್ಲ್ಸ್ ಸಾವಕಾಶಮಾಡದೆ ಬ್ರಿಟನಿಯನ್ನು ಸೈನ್ಯಸಹಿತನಾಗಿ ಮುತ್ತಿ 1491ರಲ್ಲಿ ಆ ಶ್ರೀಮಂತಪುತ್ರಿ **ಆನ್** (Anne) ಎಂಬವಳನ್ನು ಮದುವೆಯಾದನು. ಮರುವರುಷ ಹೆನ್ರಿಯು ಒಂದು ಸೈನ್ಯದೊಡನೆ ಕಡಲ್ಗಾಲುವೆಯನ್ನು ದಾಟಿ ಫ್ರಾನ್ಸಿನಲ್ಲಿಳಿದನು. ಅಟ್ಟಮೇಲೆ ಒಲೆ ಉರಿಸಿದ ಹಾಗೆ ನಡೆಸಿದ ಹೆನ್ರಿಗೆ ವಾಸ್ತವವಾಗಿ ದೊಡ್ಡ ಜಗಳವನ್ನು ಕಟ್ಟಿಕೊಂಡು ಕದನಗಳನ್ನು ಕಾದಾಡಲು ಇಷ್ಟವಿರಲಿಲ್ಲ. ಈ ರಹಸ್ಯವನ್ನು ತಿಳಿದಿದ್ದ ಫ್ರೆಂಚ್ ದೊರೆಯು **ಎತಾಪಲ್** (Etaples) ಎಂಬೆಡೆಯಲ್ಲಿ ಹೆನ್ರಿಯನ್ನು ಕಂಡು, ತೃಪ್ತಿಯಾಗುವಷ್ಟು ಹಣವನ್ನು ಕೊಡಿಸಿ, ಸಮಾಧಾನದಿಂದ ಇಂಗ್ಲಂಡಿಗೆ ಹಿಂತಿರುಗುವಂತೆ ಮಾಡಿ, ತಾನು ಇಟಲಿಯ ಮುತ್ತಿಗೆಗೆ ಸಿದ್ಧನಾದನು. ಯಾವ ಯುದ್ಧವನ್ನೂ ಮಾಡದೆ ಫ್ರೆಂಚ್ ದೊರೆಯಿಂದ ಕಾಣಿಕೆಯನ್ನು ಪಡೆದೆನೆಂದು ಹೆನ್ರಿಯು ಹೇಳಿಕೊಂಡು ತನ್ನ ಉಪಾಯವನ್ನು ತನ್ನವರು ಮೆಚ್ಚುವಂತೆ ನೆರವೇರಿಸಿಕೊಂಡನು.

**ಫರಾನ್ಸಿನ ಸ್ನೇಹ ಸಂಪಾದನೆ**

ಎತಾಪಲ್ ಕರಾರಿನ ಸಂದರ್ಭದಲ್ಲಿ ಹೆನ್ರಿಯ ದೂರಾಲೋಚನೆಯನ್ನೂ ಸಂಧಾನಚಾತುರ್ಯವನ್ನೂ ಕಾಣಬಹುದು. ಇಂಗ್ಲಂಡಿಗೆ ಚಿರಶತ್ರುವಾಗಿದ್ದ ಫ್ರೆಂಚ್‌ದೊರೆಗೆ ತೊಂದರೆಕೊಟ್ಟು ಆತನಿಂದ ತನಗೆ ಮುಂದಕ್ಕೆ ತೊಂದರೆಯಿಲ್ಲ

**ಹೆನ್ರಿಯ ಯುಕ್ತಿ**

ದಂತೆ ನೆರವೇರಿಸಿಕೊಳ್ಳುವುದು ಒಂದು ಉದ್ದೇಶ. ಪ್ರಬಲಪ್ರಭುಗಳಾದ ಫರ್ಡಿನೆಂಡ್ ಮತ್ತು ಮಾಕ್ಸಿಮಿಲಿಯನರ ಸ್ನೇಹಬೆಂಬಲಗಳನ್ನು ಸಂಪಾದಿಸಿಕೊಳ್ಳುವುದು ಇನ್ನೊಂದು ಉದ್ದೇಶ. ಎರಡಕ್ಕೂ ಸಮಯವೊದಗಿತ್ತು. ಆದರೆ ಹೆನ್ರಿಗಿದ್ದಷ್ಟು ಆಸಕ್ತಿಯು ಸ್ಪೈನ್ ಮತ್ತು ಆಸ್ಟ್ರಿಯದ ಪ್ರಭುಗಳಿಗಿರಲಿಲ್ಲ. ಆಗ ಹೆನ್ರಿ ಏನುಮಾಡಬೇಕು! ಫ್ರೆಂಚರೊಡನೆ ಯುದ್ಧಸಮಯವೆಂದು ಹೇಳಿ ಕಳೆದುಳಿದ ಶ್ರೀಮಂತರನ್ನೂ ಧನಿಕರನ್ನೂ ಉತ್ಸಾಹಗೊಳಿಸಿ ಅವರಿಂದ ಯುದ್ಧದ ವೆಚ್ಚಕ್ಕೆಂದು ಹಣವನ್ನು ಪಡೆದನು. ಚಿಕ್ಕ ಸೈನ್ಯವನ್ನು ಫ್ರಾನ್ಸಿನಲ್ಲಿ ತೋರಿ ಯಾವ ಕದನವನ್ನೂ ಆಡದೆ ಫ್ರೆಂಚ್ ದೊರೆಯಿಂದ ಹಣವನ್ನು ಪಡೆದನು. ಈ ಒಂದು ಸಂದರ್ಭದಲ್ಲಿಯೇ ಹೆನ್ರಿಗೆಷ್ಟು ಜಾಣ್ಮೆಯಿತ್ತೆಂಬುದು ತಿಳಿಯುವುದು.

**ವಾರ್ಬೆಕ್ಕನ ಪಿತೂರಿ**

ಹೆನ್ರಿಗೆ ಪಟ್ಟವಾದುದನ್ನು ಸ್ವಲ್ಪವೂ ಸಹಿಸದಿದ್ದ ಬರ್ಗಂಡಿಯ ಮಾರ್ಗರೆಟ್ ಸುಮ್ಮನಿರಲಿಲ್ಲ. ಸಿಮ್ನೆಲ್ ಪಿತೂರಿ ಭಂಗವಾದಮೇಲೆ ಮತ್ತೊಂದು ಪಿತೂರಿಗೆ ಕೈಲಾದಷ್ಟು ಸಹಾಯ ನೀಡಿದಳು. ಅನುಭವದಿಂದ ತಕ್ಕಮಟ್ಟಿಗೆ ಎಚ್ಚರಿಕೆ ತಂದುಕೊಂಡು, ಜೀವಂತರಾಜಕುಮಾರನಹಾಗೆ ನಟಿಸುವುದಕ್ಕಿಂತ ಅನುಮಾನದ ಸಾವನ್ನು ಪಡೆದಿದ್ದ ರಾಜಕುಮಾರನಹಾಗೆ ನಟಿಸತಕ್ಕದ್ದು ಮೇಲೆಂದು ತಿಳಿದು ಅದರಂತೆಯೇ ಇನ್ನೊಂದು ಪಿತೂರಿಗಟ್ಟಿದರು. ಸಹಜಚತುರನಾಗಿದ್ದ **ಪರ್ಕಿನ್ ವಾರ್ಬೆಕ್** (Perkin Warbeck) ಎಂಬ ಟೂರ್ನೆ ಪಟ್ಟಣದ ಹುಡುಗನು ದೊರೆತನು. ಹಿಂದೆ 3ನೆ ರಿಚರ್ಡ್‌ದೊರೆಯು ತನ್ನಣ್ಣ 4ನೆ ಎಡ್ವರ್ಡನ ಇಬ್ಬರು ಪುತ್ರರನ್ನು ಗೋಪ್ಯವಾಗಿ ಸೆರೆಮನೆಯಲ್ಲಿ ಕೊಲ್ಲಿಸಿದನೆಂದೆಲ್ಲರೂ ನಂಬಿದ್ದರು; ಆ ಕೊಲೆಯನ್ನು ಕಂಡವರಾರೂ ಇರಲಿಲ್ಲ. ಈಗ ವಾರ್ಬೆಕ್ಕನಿಗೆ ತಕ್ಕಂತೆ ಹೇಳಿಕೊಟ್ಟು ಪಿತೂರಿಗಾರರು ಐರ್ಲಂಡಿಗೆ ಕಳುಹಿಸಿದರು. ಐರ್ಲಂಡಿನ ಶ್ರೀಮಂತರು ಕೆಲವರು ಯಾರ್ಕ್‌ಪಕ್ಷಪಾತಿಗಳೆಂದು ಹೆಸರುಪಡೆದಿದ್ದರು; ಹಿಂದೆ ಸಿಮ್ನೆಲ್ಲನಿಗೆ ನೆರವಾಗಿದ್ದರು. ಅವರೆದುರಿನಲ್ಲಿ ಕಾಣಿಸಿಕೊಂಡು ವಾರ್ಬೆಕ್ಕನು "ನಾನು 4ನೆ ಎಡ್ವರ್ಡ್ ದೊರೆಯ ಎರಡನೆ ಮಗ. ನನ್ನನ್ನೂ ನನ್ನಣ್ಣನನ್ನೂ ನಮ್ಮ ಚಿಕ್ಕಪ್ಪ ಸೆರೆಯಲ್ಲಿಟ್ಟಮೇಲೆ ಒಂದು ದಿನ ಕಟುಕರನ್ನು ನಮ್ಮ ಬಳಿಗಟ್ಟಿದನು. ಅವರು ನನ್ನಣ್ಣನನ್ನು ಕೊಂದುಬಿಟ್ಟರು. ಆ ವೇಳೆಗೆ ಅವರಲ್ಲೊಬ್ಬನಿಗೆ ನನ್ನ ಮೇಲೆ ಕನಿಕರ ಹುಟ್ಟಿತು. ನನ್ನನ್ನು ಬಚ್ಚಿಡುವುದಾಗಿ ಭರವಸೆಕೊಟ್ಟು ಇತರರನ್ನೊಪ್ಪಿಸಿ ರಹಸ್ಯವಾಗಿ ತನ್ನ ಮನೆಗೆ ಕರೆದೊಯ್ದನು. ಕೊಲೆಪಾತಕರೆಲ್ಲರೂ ಚಿಕ್ಕಪ್ಪನಿಗೆ ಸುಳ್ಳು ಹೇಳಿ ದಕ್ಕಿಸಿಕೊಂಡರು. ನಾನು ಸಮಯಕಾದು ಕೊಲೆಪಾತಕರ ಮನೆಯಿಂದ ತಪ್ಪಿಸಿಕೊಂಡು ತಲೆಮರೆಸಿಕೊಂಡು ದೇಶಾಂತರದಲ್ಲಿದ್ದೆ. ಚಿಕ್ಕಪ್ಪ ಸತ್ತ ಸುದ್ದಿ ಕೇಳಿ ಸ್ವದೇಶವನ್ನು ತಲಪಿ ನ್ಯಾಯವಾಗಿ ನನ್ನ

ದಾದ ರಾಜ್ಯವನ್ನು ಸಂಪಾದಿಸಿಕೊಳ್ಳೋಣವೆಂದು ಹೊರಟು ಬಂದಿದೇನೆ. ನೀವೆಲ್ಲರೂ ನಮ್ಮ ತಂದೆಯಲ್ಲಿ ಋಣಿಗಳಾದವರು. ನಿಮ್ಮ ಸಹಾಯವಿದ್ದರೆ ನನ್ನ ರಾಜ್ಯ ನನ್ನ ಕೈಗೆ ಬರಲಾರದೇ?" ಎಂಬ ಮಾತುಗಳನ್ನಾಡಿದನು. ಇವನಲ್ಲಿ ನಂಬಿಕೆ ಹುಟ್ಟುವಂತಿದ್ದರೂ ಐರಿಷ್‌ಶ್ರೀಮಂತರಲ್ಲಿ ಮುಖ್ಯನಾಗಿದ್ದ ಕಿಲ್ಡೇರಿನ ಅರ್ಲನು ಹೆನ್ರಿಯ ಕ್ಷಮೆಯನ್ನು ಪಡೆದು ಆತನ ವಿಶ್ವಾಸವೇ ಮೇಲೆಂದು ಭಾವಿಸಿದ್ದುದರಿಂದ ವಾರ್ಬೆಕ್ಕನ್ನು ಪುರಸ್ಕರಿಸಲಿಲ್ಲ. ಐರಿಷರು ಸಹಾಯಮಾಡಲಾರರೆಂದು ತಿಳಿದು ವಾರ್ಬೆಕ್ ಐರ್ಲಂಡನ್ನು ಬಿಟ್ಟು ಫ್ರಾನ್ಸ್ ರಾಜ್ಯಕ್ಕೆ ಹೊರಟನು.

ಫ್ರಾನ್ಸ್‌ರಾಜನು ಇಂಗ್ಲಿಷರ ಚಿರವೈರಿಯಾದುದರಿಂದ ತನಗೆ ಸಹಾಯ ಮಾಡುವನೆಂದು ವಾರ್ಬೆಕ್ ನಂಬಿದ್ದನು. ಆದರೆ ಆ ವೇಳೆಗೆ ಎತಾಪಲ್ ಕರಾರು ನಡೆದಿತ್ತು; 8ನೆ ಚಾರ್ಲ್ಸ್ ದೊರೆಯ ದೃಷ್ಟಿ ಇಟಲಿಯಮೇಲಿತ್ತು. ಆದ್ದರಿಂದ ಆ ದೊರೆಯು ಸಹಾಯಮಾಡಲಿಲ್ಲ. ಆದರೂ ನಿರಾಶನಾಗದೆ ವಾರ್ಬೆಕ್ ಫ್ರಾನ್ಸಿಗೆ ಉತ್ತರದಲ್ಲಿ ಬರ್ಗಂಡಿಯನ್ನು ಸೇರಿಕೊಂಡನು. ಅಲ್ಲಿಯ ಮಾರ್ಗರೆಟ್ ಅವನನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು ಇಂಗ್ಲಂಡಿನಲ್ಲಿ ಒಳಸಂಚು ನಡೆಸಿದಳು. ಆಕೆಯ ಪ್ರಯತ್ನಗಳು ಕಡೆಗೆ ಕೆಟ್ಟುಹೋದವು. ಆದರೂ ವಾರ್ಬೆಕ್ ತನ್ನ ಪ್ರಯತ್ನವನ್ನು ಬಿಡಲಿಲ್ಲ. ಸ್ಕಾಟ್ಲಂಡಿನ ರಾಜನ ಸಹಾಯವನ್ನು ಸಂಪಾದಿಸುವ ಯೋಚನೆ ಮಾಡಿದನು.

**ಸ್ಕಾಟರ ದೊರೆ**

ಪೂರ್ವದಿಂದಲೂ ಸ್ಕಾಟ್ಲಂಡಿನವರು ಇಂಗ್ಲಂಡಿನವರಿಗೆ ವೈರಿಗಳು. ಸಮಯ ತೋರಿದಾಗಲೆಲ್ಲ ಜಗಳವಾಡುತ್ತಲೇ ಇದ್ದರು. ಸ್ಕಾಟ್ಲಂಡಿನಲ್ಲಿ **4ನೆ ಜೇಮ್ಸ್** (James IV) ಎಂಬಾತನು ರಾಜನಾಗಿದ್ದನು. ಆತನ ವಂಶಕ್ಕೆ **ಸ್ಟೂಯರ್ಟ್** (Stuart) ವಂಶವೆಂದು ಹೆಸರು. ಇಂಗ್ಲಂಡಿನೊಡನೆ ದ್ವೇಷಸಾಧನೆಯೇ ತಲೆತಲಾಂತರಗಳಿಂದ ನಡೆದುಬಂದ ನೀತಿಯಾಗಿದ್ದುದರಿಂದ ಜೇಮ್ಸ್ ವಾರ್ಬೆಕ್ಕನ್ನು ಆದರದಿಂದ ಸ್ಕಾಟ್ಲಂಡಿಗೆ ಬರಮಾಡಿಕೊಂಡನು; ಅತಿವಿಶ್ವಾಸವನ್ನು ತೋರಿ ತನ್ನ ಬಂಧುವರ್ಗದ ಹೆಣ್ಣನ್ನು ಅವನಿಗೆ ಕೊಟ್ಟು ಮದುವೆ ಮಾಡಿಸಿದನು. ಬಳಿಕ ದುರಾಕ್ರಮಣದಿಂದ ರಾಜನಾಗಿದ್ದ ಹೆನ್ರಿಯನ್ನು ದಂಡಿಸುತ್ತೇನೆಂದು ತನ್ನ ಸೈನ್ಯದೊಡನೆ ಇಂಗ್ಲಂಡಿನ ಉತ್ತರಭಾಗವನ್ನು ಮುತ್ತಿದನು. ಸ್ಕಾಟ್‌ಜನರನ್ನು ದ್ವೇಷಿಸುತ್ತಿದ್ದ ಇಂಗ್ಲಿಷ್ ಜನರು ಜೇಮ್ಸನನ್ನು ನಂಬಲಿಲ್ಲ. ಹೆನ್ರಿಯು ನಿರಾತಂಕನಾಗಿದ್ದುದಲ್ಲದೆ ಯುದ್ಧಸಿದ್ಧನಾಗುತ್ತಿರುವನೆಂಬ ಸುದ್ದಿ ಕೇಳಿ ಜೇಮ್ಸ್ ತನ್ನ ಉದ್ದೇಶವನ್ನು ತೊರೆದು ತಟಸ್ಥನಾದನು. ವಾರ್ಬೆಕ್ಕನಿಗೆ "ನಾವು ಮಾಡಿದ ಪ್ರಯತ್ನ ಫಲಿಸಲಿಲ್ಲ. ಇನ್ನು ಮುಂದಿನ ಪ್ರಯತ್ನವನ್ನು ನೀನೇ ಮಾಡಿಕೊಳ್ಳಬೇಕು. ಈ ರಾಜ್ಯದಿಂದ ಸಹಾಯವನ್ನು

ನಿರೀಕ್ಷಿಸಬೇಡ. ನೀನಿಲ್ಲಿಯೇ ಇರುವುದಾದರೆ ತೊಂದರೆಯೇ ವಿನಾ ಪ್ರಯೋಜನ ವಿಲ್ಲ. ಐರ್ಲಂಡಿನಲ್ಲಿಯೋ ಇಂಗ್ಲಂಡಿನಲ್ಲಿಯೋ ಯತ್ನಿಸು" ಎಂದು ಹೇಳಿ ತನ್ನ ದೇಶದಿಂದ ಹೊರಕ್ಕೆ ಕಳುಹಿಸಿಬಿಟ್ಟನು. ಈ ರೀತಿಯಲ್ಲಿ ಸ್ಕಾಟ್ಲಂಡಿನ ಕಡೆಯಿಂದ ಒದಗಬಹುದಾಗಿದ್ದ ತೊಂದರೆ ತಾನಾಗಿ ತಪ್ಪಿದಂತಾಯಿತು.

ರಾಜಕುಮಾರನಾಗಿ ಹುಟ್ಟಿದಿದ್ದರೂ ರಾಜಕುಮಾರಯೋಗ್ಯವಾದ ಧೈರ್ಯ ಸಾಹಸಗುಣಗಳನ್ನು ವಾರ್ಬೆಕ್ ಪಡೆದಿದ್ದನು. ಸ್ಕಾಟ್ಲಂಡಿನಿಂದ ಐರ್ಲಂಡಿಗೆ ಹೋಗಿ ಅಲ್ಲಿ ಮತ್ತೊಮ್ಮೆ ಯತ್ನಿಸಿದನು. ಏನೂ ಸಫಲವಾಗಲಿಲ್ಲ. ಆಗ ಹೆನ್ರಿಯ ಪ್ರಜೆಗಳಲ್ಲಿಯೇ ಕೆಲವರು ನೈರುತ್ಯ ಜಿಲ್ಲೆಗಳವರು ಹೆನ್ರಿಯು ಹೊಸದಾಗಿ ಎತ್ತಿದ್ದ ತೆರಿಗೆಗಳಿಂದ ಅಸಮಾಧಾನಪಟ್ಟುದನ್ನು ತಿಳಿದು ವಾರ್ಬೆಕ್ ಕಾರ್ನ್ವಾಲ್(Cornwall) ಜಿಲ್ಲೆಯಲ್ಲಿಳಿದು ಜನರನ್ನು ತನ್ನ ಕಡೆ ಒಲಿಸಿಕೊಳ್ಳಲು ಉದ್ಯಮಿಸಿದನು. ದಂಗೆಯೆದ್ದಿದ್ದವರಲ್ಲಿ ಕೆಲವರು ಇವನನ್ನು ಸೇರಿದರು. ಅವ

**ವಾರ್ಬೆಕ್ಕನ ಕೊನೆ**

ರೊಡನೆ ಲಂಡನ್‌ಕಡೆಗೆ ಹೊರಟ ವಾರ್ಬೆಕ್ **ಟಾನ್ಟನ್** (Taunton) ಬಳಿ ಹೆನ್ರಿಯ ಸೈನ್ಯಕ್ಕೆದುರಾದನು. ಜಯ ಪ್ರಾಪ್ತಿಯಾಗುವಂತಿರಲಿಲ್ಲ. ಆಗ ವಾರ್ಬೆಕ್ ಎದೆಗೆಟ್ಟು ಯುದ್ಧಮಾಡುವುದನ್ನು ಬಿಟ್ಟು ಸಮೀಪದಲ್ಲಿದ್ದ ಒಂದು ಮಠವನ್ನು ಸೇರಿ ಅಲ್ಲಿಯ ಸನ್ಯಾಸಿಗಳ ಆಶ್ರಯ ವನ್ನು ಬೇಡಿದನು. ದಂಗೆಕೋರರು ನಾಯಕನಿಲ್ಲದೆ ಚದರಿಹೋದರು. ವಾರ್ಬೆಕ್ಕನ ಜೀವಕ್ಕೆ ಹಾನಿಯಿಲ್ಲವೆಂದು ಹೇಳಿಸಿ ಸನ್ಯಾಸಿಗಳು ಅಧಿಕಾರಿಗಳಿಗೆ ಅವನನ್ನೊಪ್ಪಿಸಿದರು. ವಾರ್ಬೆಕ್ಕನೀರೀತಿಯಲ್ಲಿ ಸೆರೆಯಾಗಿ ಲಂಡನ್ನಿನ ಟವರಿನಲ್ಲಿ ವಾರಿಕ್ಕಿನ ಅರ್ಲನ ಜೊತೆಯ ಖೈದಿಯಾದನು.

ಸಿಮ್ನೆಲ್ಲನಿಗಿಂತ ಸಾಹಸಿಯೂ ಯುಕ್ತಿಪರನೂ ಆದ ವಾರ್ಬೆಕ್ಕನ ಉದ್ಯಮವು 1497ರಲ್ಲಿ ಈರೀತಿಕೊನೆಗಂಡಿತು. ಸೆರೆಸಿಕ್ಕಮೇಲೆ ವಾರ್ಬೆಕ್ ತನ್ನ ನಿಜವೃತ್ತಾಂತ ವನ್ನು ಬಿಚ್ಚಿಹೇಳಿದನು. ವಾರಿಕ್ಕಿನ ಅರ್ಲನಂತೆ ಎರಡುವರ್ಷಕಾಲ ಖೈದಿ ಯಾಗಿಯೇ ಇದ್ದನು. ಇವರಿಬ್ಬರು ಜೀವಂತರಾಗಿರುವವರೆಗೆ ತನ್ನ ಪಟ್ಟಕ್ಕೆ ತೊಂದರೆಯಾಗಬಹುದೆಂದು ಯೋಚಿಸುತ್ತ ಹೆನ್ರಿಯು ಸಮಯಕಾದಿದ್ದು 1499ರಲ್ಲಿ ತಪ್ಪಿಸಿಕೊಂಡುಹೋಗಲು ಸಂಚುನಡೆಸಿದರೆಂಬ ಆಪಾದನೆಯನ್ನಿಟ್ಟು ಇಬ್ಬರನ್ನೂ ಮರಣದಂಡನೆಗೆ ಗುರಿಪಡಿಸಿದನು. ಗುಲಾಬಿಯುದ್ಧಗಳೆಂಬ ಪಟ್ಟದ ಜಗಳಗಳು ಈ ಎರಡು ಸಾವುಗಳೊಂದಿಗೆ ಮುಕ್ತಾಯವಾದವು.

ಸೆರೆಗೆ ಬೀಳುವವರೆಗೂ ಪರ್ಕಿನ್‌ವಾರ್ಬೆಕ್ ಹೆನ್ರಿಗೆ ತುಂಬಾ ತೊಂದರೆ ಕೊಟ್ಟಿದ್ದನು. ತೊಂದರೆಗಳು ತೋರಿಕೊಳ್ಳಲು ಅನ್ಯರಾಜರು ಆಗಿಂದಾಗ್ಗೆ ವಾರ್ಬೆಕ್ಕನಿಗೆ ಕೊಟ್ಟ ಬೆಂಬಲವು ಮೂಲವಾಗಿತ್ತು. ಇತರ ರಾಜರು ತನ್ನ ವಿರೋಧವಾಗಿ

ದ್ದರೆಷ್ಟು ತೊಂದರೆಯೆಂದು ತಿಳಿದ ಹೆನ್ರಿ ಸರ್ವಪ್ರಯತ್ನದಿಂದಲೂ ನೆರೆಹೊರೆದೊರೆಗಳ ಮೈತ್ರಿಯನ್ನು ಕಟ್ಟಿದನು. ಫ್ರಾನ್ಸ್‌ರಾಜನ ಮೈತ್ರಿ ಸಂಪಾದಿಸಿ ವಾರ್ಬೆಕ್ಕನಿಗೆ ಅಲ್ಲಿ ಆಸ್ಪದವಿಲ್ಲದಂತೆ ಮಾಡಿಕೊಂಡಾಗ್ಗೂ ಫ್ರಾನ್ಸಿನ ಉತ್ತರದಲ್ಲಿ **ನೆದರ್ಲಂಡ್ಸಿ** (Netherlands)ನಲ್ಲಿ ವಾರ್ಬೆಕ್ಕಿಗೆ ಆಶ್ರಯದೊರಕುವಂ

**ನೆದರ್ಲಂಡ್ಸ್ ಕರಾರು**

ತಿತ್ತು. ಅದನ್ನು ನಿಲ್ಲಿಸಲು ಹೆನ್ರಿ ಉಪಾಯಮಾಡಿ ಅಲ್ಲಿಗೆ ಪ್ರಭುವೆನಿಸಿದ್ದ ಮಾಕ್ಸಿಮಿಲಿಯನ್ನಿನೊಡನೆ ವ್ಯಾಪಾರದ ಒಪ್ಪಂದ ನಡೆಸಿದನು. ಆ ಪ್ರಾಂತದಲ್ಲಿ ವಾಸ್ತವವಾಗಿ ಆಳುತ್ತಿದ್ದವನು ಮಾಕ್ಸಿಮಿಲಿಯನ್ ಮಗ **ಆರ್ಚ್‌ಡ್ಯೂಕ್ ಫಿಲಿಪ್** (Archduke Philip) ಎಂಬಾತನು. ಸಮುದ್ರಯಾನದಲ್ಲಿರುವಾಗ್ಗೆ ಹಡಗೊಡೆದು ಆ ಆರ್ಚ್‌ಡ್ಯೂಕನು ಇಂಗ್ಲಂಡಿನಲ್ಲಿ ಕಾಲಕಳೆಯಬೇಕಾಗಿ ಬಂತು. ಆಗ ಹೆನ್ರಿ ಉಪಾಯವಾಗಿ ಆತನನ್ನು ಬಂಧಿಸಿಕೊಂಡು ಇಂಗ್ಲಿಷವ್ಯಾಪಾರಿಗಳಿಗೆ ಹೆಚ್ಚು ಅನುಕೂಲವಾಗುವಂತೆ ಕರಾರನ್ನು ಬರೆಸಿಕೊಂಡನು. ಈ ರೀತಿಯಲ್ಲಿ ಫ್ರಾನ್ಸ್, ಆಸ್ಟ್ರಿಯ, ನೆದರ್ಲಂಡ್ಸ್ ರಾಷ್ಟ್ರಗಳಲ್ಲಿ ತನ್ನ ಶತ್ರುಗಳಿಗೆ ಆಸ್ಪದವಿಲ್ಲದಂತೆ ಹೆನ್ರಿ ನೆರವೇರಿಸಿದನು.

ಫ್ರಾನ್ಸಿಗೆ ದಕ್ಷಿಣದಲ್ಲಿರುವುದು ಸ್ಪೈನ್ ದೇಶ. ಅಲ್ಲಿ ಬಹುಕಾಲ ಮುಸಲ್ಮಾನರ ಪ್ರಾಬಲ್ಯವೇ ನಡೆಯುತ್ತಿತ್ತು. ಕ್ರೈಸ್ತಮತದವರ ರಾಜ್ಯಗಳು ಕೆಲವಿದ್ದಾಗ್ಗೂ ಚಿಕ್ಕವಾಗಿದ್ದುವಲ್ಲದೆ ಸದಾ ಕಲಹಗಳಲ್ಲಿ ತೊಡಗಿದ್ದವು. ಹೆನ್ರಿ ಪಟ್ಟವನ್ನೇರಿದ ಕಾಲದಲ್ಲಿ ಆ ಸಣ್ಣ ರಾಜ್ಯಗಳಲ್ಲಿ ಹೆಸರುವಾಸಿಯಾಗಿದ್ದ **ಕಾಸ್ಟೀಲ್** (Castile) ಮತ್ತು **ಅರಗನ್** (Aragon) ಎಂಬೆರಡು ರಾಜ್ಯಗಳು ಒಟ್ಟುಗೂಡಿ ಏಕರಾಜ್ಯವಾಯಿತು. ದಕ್ಷಿಣದಲ್ಲಿ **ಗ್ರನಡ** (Granada) ಎಂಬ ಭಾಗವನ್ನು ಮುಸಲ್ಮಾನರಿಂದ ಕಿತ್ತು ಸೇರಿಸಿಕೊಳ್ಳುವಂತಾಯಿತು. ಅರಗನ್ನಿನ ರಾಜ ಫರ್ಡಿನೆಂಡೆಂಬಾತನು ಕ್ಯಾಸ್ಟೀಲಿನ ರಾಣಿ ಇಸಬೆಲ ಎಂಬಾಕೆಯನ್ನು ಮದುವೆಯಾದನು. ಈ ಬಗೆಯಲ್ಲಿ ಸ್ಪೈನ್ ಐಕ್ಯತೆಯನ್ನು ಪಡೆಯಿತು. ಕೊಲಂಬಸ್ ಮೂಲಕ ಅಮೆರಿಕಾಖಂಡದ ಭಾಗಗಳ ಸಂಪಾದನೆಯೂ ಆಯಿತು. ನೆರೆಹೊರೆ ರಾಜ್ಯಗಳಿಗಿಂತ ಸ್ಪೈನ್

**ಸ್ಪೈನ್ ರಾಜ್ಯ**

ಪ್ರಬಲವಾಗುವಂತೆ ತೋರುತ್ತಿತ್ತು. ಇದನ್ನು ಆಲೋಚಿಸಿ ಹೆನ್ರಿಯು ಸ್ಪೈನ್‌ರಾಜನ ಆಪ್ತತೆಯನ್ನು ಕಟ್ಟಿಕೊಳ್ಳಲು ತವಕಪಟ್ಟನು. ಫ್ರೆಂಚರು ತತ್ಕಾಲದಲ್ಲಿ ಮಿತ್ರರಾಗಿದ್ದರೂ ಎಂದಾದರೂ ಇಂಗ್ಲಂಡಿನ ಶತ್ರುಗಳಾಗತಕ್ಕವರೇ ಆದುದರಿಂದ ಇಂಗ್ಲಂಡ್ ಮತ್ತು ಸ್ಪೈನ್ ಪರಸ್ಪರ ಸ್ನೇಹದಿಂದಿದ್ದ ಪಕ್ಷದಲ್ಲಿ ಫ್ರಾನ್ಸಿನ ಪ್ರಾಬಲ್ಯಕ್ಕೆ ಅಡ್ಡಿಯಾಗಿ ಇಂಗ್ಲಂಡಿಗೆ ಫ್ರಾನ್ಸಿನಿಂದ ಬಾಧೆ ಕಡಿಮೆಯಾದೀತೆಂದು ಹೆನ್ರಿ ಯೋಚಿಸಿದನು. ಇಷ್ಟು ದೂರಾಲೋಚನೆಯಿದ್ದುದರಿಂದ ಹೆನ್ರಿ ಫರ್ಡಿನೆಂಡ್‌ರಾಜನಿಗೆ ಬೇಕಾದವನೆನಿಸಿಕೊಂಡು ಆ .ರಾಜನ ಮಗಳನ್ನು ತನ್ನ ಯುವರಾಜ **ಆರ್ಥರ್** (Arthur)ಗೆ ತಂದುಕೊಳ್ಳುವ ಪ್ರಸ್ತಾಪ

ಮಾಡಿದನು. ಐದು ವರ್ಷ ಮಾತುಕಥೆಗಳಾದವು. 1501ರಲ್ಲಿ ಹೆನ್ರಿಯ ಸಂಧಾನವು ಫಲಿಸಿ ಆರ್ಥರನಿಗೂ ಫರ್ಡಿನೆಂಡನ ಎರಡನೆ ಮಗಳಾದ **ಕಥರೀನ್** (Catharine) ಎಂಬಾಕೆಗೂ ಮದುವೆ ನಡೆಯಿತು. ಆದರೆ ಮದುವೆಯಾದ ಒಂದು ವರುಷದೊಳಗಾಗಿ ಆರ್ಥರ್ ತೀರಿಹೋದನು. ಅತಿಪ್ರಯಾಸದಿಂದ ಹೊಂದಿಸಿಕೊಂಡಿದ್ದ ಸಂಬಂಧವನ್ನು ಕಳೆದುಕೊಳ್ಳಲು ಹೆನ್ರಿಗೆ ಸ್ವಲ್ಪವಾದರೂ ಸಮಾಧಾನವಿರಲಿಲ್ಲ. ತನ್ನ ಎರಡನೆ ಮಗನಾದ ಹೆನ್ರಿಗೆ ಅವನಣ್ಣನ ವಿಧವೆಯಾದರೂ ಕಥರೀನಳನ್ನು ಮದುವೆ ಮಾಡಿಸಬೇಕೆಂದು ಯೋಚನೆ ಮಾಡಿದನು. ಅಣ್ಣನ ವಿಧವೆಯನ್ನು ತಮ್ಮನು ಮದುವೆಯಾಗುವುದು ಸದಾಚಾರವೆನಿಸಿರಲಿಲ್ಲ. ಆದಾಗ್ಗೂ ಹೆನ್ರಿ ಪೋಪನ ಬಳಿಗೆ ನಿಯೋಗಿಗಳನ್ನು ಕಳುಹಿಸಿ ಆತನಿಂದ ಮದುವೆಗೆ 'ತಥಾಸ್ತು' ಎನ್ನಿಸಿದನು. ಕಥರೀನಳು ಈಗ ಯುವರಾಜನಾಗಿದ್ದ ಹೆನ್ರಿಯನ್ನು ಮದುವೆಯಾದಳು.

**ವಿವಾಹ ಸಂಬಂಧ**

7ನೆ ಹೆನ್ರಿಯ ರಾಣಿ ಎಲಿಸಬೆತ್ 1503ರಲ್ಲಿ ಕಾಲವಾಗಿದ್ದಳು. ವಿಧುರನಾದ ರಾಜನು ಸ್ಪೈನ್ ಸಂಬಂಧವನ್ನು ಆದಷ್ಟು ಕಟ್ಟಿಕೊಳ್ಳುವ ಆಸೆಯಿಂದಿದ್ದನು. ಆದ್ದರಿಂದ ಅಪಸ್ಮಾರರೋಗಕ್ಕೆ ಸಿಕ್ಕಿದ್ದ ಹೆಣ್ಣನ್ನು ತಾನು ಮದುವೆಯಾಗುವ ಯೋಚನೆಯನ್ನು ಮಾಡಿದನು. ಕಥರೀನಳ ಅಕ್ಕ **ಜೋನ್** (Joan) ಎಂಬಾಕೆಯನ್ನು ಮಾಕ್ಸಿಮಿಲಿಯನ್ ಮಗ ಫಿಲಿಪ್ಪನಿಗೆ ಕೊಟ್ಟಿತ್ತು. ಫಿಲಿಪ್ ಮೃತನಾಗಿ ಜೋನ್ ವಿಧವೆಯಾಗಿದ್ದಳು; ಅದರಮೇಲೆ ಚಿತ್ತಸ್ವಾಸ್ಥ್ಯತಪ್ಪಿ ಹುಚ್ಚಿಯಾಗಿದ್ದಳು. ಆಕೆಯನ್ನು ಮದುವೆಯಾಗುವುದಕ್ಕೂ ಈ ರಾಜನು ಸಿದ್ಧನಾದನು. ಕಾರಣವೇನೆಂದರೆ ಜೋನ್ ಸ್ಪೈನಿಗೆ ಹಿರಿಯ ಕುವರಿ; ಫರ್ಡಿನೆಂಡಿಗೆ ಜೋನ್, ಕಥರೀನ್ ಎಂಬಿಬ್ಬರೇ ಸಂತಾನ. ಇಬ್ಬರೂ ಇಂಗ್ಲಂಡಿಗೆ ಸೊಸೆಯರಾದರೆ ಮುಂದೆ ಸ್ಪೈನ್ ರಾಜ್ಯ ಇಂಗ್ಲಂಡಿಗೆ ಸೇರಿಬಿಡಬಹುದೆಂಬ ಆಸೆ ರಾಜನನ್ನು ಹಿಡಿದಿತ್ತು. ಆದರೆ ಅಪರವಯಸ್ಸಿನ ರಾಜನಿಗೂ ಹುಚ್ಚು ಹಿಡಿದಿದ್ದ ವಿಧವೆಗೂ ವಿವಾಹ ನಡೆಯಲಿಲ್ಲ.

**ಹೆನ್ರಿಯ ದೂರಾಲೋಚನೆ**

ಇಷ್ಟು ದೂರಾಲೋಚನೆಯನ್ನೂ ಉಪಾಯವನ್ನೂ ಸಾಧಿಸುತ್ತಿದ್ದ ಏಳನೆ ಹೆನ್ರಿಯು ತನ್ನ ಉಪಾಯದ ಬಲೆಯಲ್ಲಿ ಸ್ಕಾಟ್ಲೆಂಡ್ ರಾಜ್ಯವನ್ನೂ ಸಿಕ್ಕಿಸಿಕೊಂಡನು. ಅಲ್ಲಿಯ ದೊರೆ 4ನೆ ಜೇಮ್ಸನಿಗೆ ತನ್ನ ಹಿರಿಯಮಗಳಾದ **ಮಾರ್ಗರೆಟ್** (Margaret) ಎಂಬವಳನ್ನು ಕೊಟ್ಟು ಮದುವೆ ನಡೆಸಿದನು. ಈ ಸಂಬಂಧ ನಡೆಸುವಾಗಲೂ ಹೆನ್ರಿಯ ದೃಷ್ಟಿ ದೂರದೃಷ್ಟಿ. ಸ್ಕಾಟ್‌ದೊರೆಗಳು ಫ್ರೆಂಚರೊಡನೆ ಸೇರಿ ಸಾಧ್ಯವಾದಾಗಲೆಲ್ಲ ಇಂಗ್ಲಿಷರಿಗೆ ಕಿರುಕುಳ ಕೊಡುವುದೇ ಹಿಂದಿನ ಪದ್ಧತಿ

**ಸ್ಕಾಟ್ ದೊರೆಯ ಸಂಬಂಧ**

ಯಾಗಿತ್ತು. ಈ ಸಂಬಂಧದ ಪರಿಣಾಮವಾಗಿ ಸ್ಕಾಟ್‌ದೊರೆಗಳು ಫ್ರೆಂಚರ ಗೆಳೆತನ ಬಿಟ್ಟು ಇಂಗ್ಲಿಷರೊಡನೆ ಸಖ್ಯವನ್ನು ಕಟ್ಟಿಕೊಂಡಾರೆಂಬುದು ಹೆನ್ರಿಯ ಆಲೋಚನೆ. ಈ ನೆಂಟತನದಿಂದ ಗೆಳೆತನವೇನೋ ಹುಟ್ಟದಾಯಿತು. ಆದರೆ ಮೂರುನಾಲ್ಕು ತಲೆಗಳು ಕಳೆಯುವುದರಲ್ಲಿ ಇಂಗ್ಲಂಡ್ ಸ್ಕಾಟ್ಲಂಡ್ ಏಕರಾಜ್ಯವಾಗಲು ಅನುಕೂಲವಾಯಿತು.

ಈ ಮದುವೆಗಳ ಏರ್ಪಾಟಿನಿಂದಲೇ ಹೆನ್ರಿಯು ಎಷ್ಟು ದೂರಾಲೋಚನಾಪರನೂ ಯುಕ್ತಿಶಾಲಿಯೂ ಆಗಿದ್ದನೆಂಬುದು ತಿಳಿಯುವುದು. ಚಿಕ್ಕಂದಿನಲ್ಲಿ ಸೆರೆಯಲ್ಲಿ ಸಿಕ್ಕಿದ್ದು ಆ ಬಳಿಕ ಕೆಲಕಾಲ ದೇಶಾಂತರದಲ್ಲಿದ್ದುದರಿಂದ ಹೆನ್ರಿ ಸಾಮಾನ್ಯವಾಗಿ ತನ್ನ ಗುಟ್ಟನ್ನು ಬಚ್ಚಿಟ್ಟುಕೊಳ್ಳುವ ಅಭ್ಯಾಸವನ್ನು ಮಾಡಿದ್ದನು. ಹೆಚ್ಚು ಮಾತನಾಡತಕ್ಕವನಲ್ಲ, ಉತ್ಸಾಹಶಾಲಿಯಲ್ಲ, ಮುಂಗೋಪಿಯಲ್ಲ. ಆದರೆ ತನ್ನ ಸ್ವಂತವಿಷಯದಲ್ಲಿ ಬಲು ಎಚ್ಚರಿಕೆ; ಸುಲಭವಾಗಿ ಇತರರನ್ನು ನಂಬತಕ್ಕವನಲ್ಲ, ಶತ್ರುಗಳನ್ನು ಮೂಲೋತ್ಪಾಟನೆಗೊಳಿಸುವವರೆಗೂ ಬಿಡತಕ್ಕವನಲ್ಲ. ದುಂದುಗಾರಿಕೆಯೆಂಬುದಕ್ಕೊ ಅವನಿಗೂ ಬಲು ದೂರ. ಎಷ್ಟು ಕಷ್ಟಗಳನ್ನಾದರೂ ಹಣವಿದ್ದರೆ ದಾಟಬಹುದೆಂಬುದನ್ನು ಚನ್ನಾಗಿ ತಿಳಿದಿದ್ದನಾದುದರಿಂದ ನಾನಾ ಉಪಾಯಗಳಿಂದ ಹಣವನ್ನು ಸೇರಿಸಿದನು. ತನ್ನ ಪಟ್ಟವನ್ನು ಭದ್ರಗೊಳಿಸಿಕೊಳ್ಳುವುದು ಆತನಿಗೆ ದೊಡ್ಡ ಉದ್ದೇಶವಾಗಿತ್ತು. ಅನ್ಯರಾಜರೊಡನೆ ಸಂಧಾನ ನಡೆಸುವುದರಲ್ಲಿ ಅದೇ ಆತನ ಗುರಿ; ಸ್ವಂತ ರಾಜ್ಯವನ್ನಾಳುವ ವಿತರಣೆಯಲ್ಲಿಯೂ ಅದೇ ಮುಖ್ಯಲಕ್ಷ್ಯ.

**ಹೆನ್ರಿಯ ಸ್ವಭಾವ**

ಫ್ರಾನ್ಸ್, ನೆದರ್ಲಂಡ್ಸ್, ಸ್ಪೈನ್, ಸ್ಕಾಟ್ಲಂಡ್ ದೇಶಗಳೊಡನೆ ಸರಿಸಮಾನ ರೀತಿಯಲ್ಲಿ ಸಂಧಾನಗಳನ್ನು ನಡೆಸುತ್ತ ಹೆನ್ರಿ ಇಂಗ್ಲಂಡ್‌ರಾಜ್ಯಕ್ಕೆ ನಷ್ಟವಾಗಿದ್ದ ಗೌರವವನ್ನು ಪುನಃ ತಂದಿಟ್ಟುದು ನಿಜ. ಆದರೆ ಅನ್ಯರಾಜ್ಯಸಂಬಂಧಗಳಲ್ಲಿ ಹೆನ್ರಿ ತೋರಿದ ನೈಪುಣ್ಯಕ್ಕಿಂತ ಒಳಾಡಳಿತದಲ್ಲಿ ತೋರಿದ ನೈಪುಣ್ಯವು ಹೆಚ್ಚು ಫಲಕಾರಿಯಾಯಿತು. ತಾನು ಲಾಂಕಾಸ್ಟರ್ ಪಕ್ಷದವನಾಗಿದ್ದರೂ ನಿರಂತರವ್ಯಾಜ್ಯಗಳಿಂದ ಜನರು ಬೇಸತ್ತಿದ್ದುದನ್ನು ಮನಗಂಡು ಭದ್ರವಾದ ಉಪಾಯದಿಂದ ಆ ಅಂತಃಕಲಹಗಳನ್ನು ಕೊನೆಗಾಣಿಸಿ ತಾನು ಎಲ್ಲರಿಗೂ ಬೇಕಾದವನಂತೆ ವರ್ತಿಸಿದನು. ಜನರಿಗೆ ಬೇಕಾದುದು ಶಾಂತಿಕ್ಷೇಮಗಳೆಂದರಿತು ರಾಜಾಧಿಕಾರವನ್ನು ಬಲಗೊಳಿಸಿಕೊಂಡನು. ಪಾರ್ಲಿಮೆಂಟನ್ನು ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಕರೆಸಿ ಉಪಾಯವಾಗಿ ತನ್ನ ಕೆಲಸವನ್ನು ನೆರವೇರಿಸಿಕೊಳ್ಳುತ್ತಿದ್ದನು. ಬಲವಂತದ ಸಾಲಗಳು, ದಂಡಗಳು, ಕಾಣಿಕೆಗಳು ಮುಂತಾದ ಬಗೆಗಳಲ್ಲಿ ಆಗಾಗ್ಗೆ ಹಣವನ್ನೆತ್ತಿ ಪಾರ್ಲಿಮೆಂಟನ್ನು ಹೆಚ್ಚು ಆಶ್ರಯಿಸದೆ ತನ್ನ ಬಲವನ್ನು ಹೆಚ್ಚಿಸಿಕೊಂಡನು.

**ನೈಪುಣ್ಯ**

ಈ ದೊರೆಗೆ ವಿಶ್ವಾಸಯೋಗ್ಯರಾದ ಸಹಾಯಕರು ಮಂತ್ರಿಸ್ಥಾನದಲ್ಲಿದ್ದರು. ಮೊದಮೊದಲು **ಕಾರ್ಡಿನಲ್ ಮಾರ್ಟಿನ್** (Cardinal Morton) ಎಂಬಾತನು ಕ್ಯಾಂಟರ್ಬೆರಿಯ ಆರ್ಚ್‌ಬಿಷಪ್ಪಾಗಿಯೂ ಲಾರ್ಡ್‌ಚಾನ್ಸೆಲರಾಗಿಯೂ ಇದ್ದು ಹೆನ್ರಿಗೆ ಬಹು ಅನುಕೂಲನಾದ ಮಂತ್ರಿಯಾಗಿದ್ದನು. ರಾಜನಿಗಾಗಿ ಹಣವನ್ನೆತ್ತುವುದರಲ್ಲಿ ಈತನು ಉಪಾಯವನ್ನೂ ಕಾಠಿಣ್ಯವನ್ನೂ ತೋರಿ ರಾಜನಿಗೆ ಪರಮವಿಶ್ವಾಸಯೋಗ್ಯನಾಗಿದ್ದರೂ ಜನರಲ್ಲಿ ಮಾತ್ರ ಒಳ್ಳೆಹೆಸರನ್ನು ಸಂಪಾದಿಸಲಾರದಾದನು. 1500ರಲ್ಲಿ ಮಾರ್ಟಿನ್ ತೀರಿಹೋದನು. ಆ ತರುವಾಯ ಚಾನ್ಸೆಲರ್ ಪದವಿಯಲ್ಲಿ ಬೇರೆಯವರಿದ್ದಾಗ್ಯೂ ರಾಜನಿಗೆ ಪರಮಭೃತ್ಯರಾಗಿದ್ದವರು ಇಬ್ಬರು ವಕೀಲರು. **ಎಂಪ್ಸನ್** (Empson) ಮತ್ತು **ಡಡ್ಲಿ** (Dudley) ಎಂದು ಅವರಿಬ್ಬರ ಹೆಸರು. ಇಬ್ಬರೂ ಸೇರಿ ನಾನಾ ಬಗೆಗಳಲ್ಲಿ ಹಣವನ್ನು ಜನರಿಂದ ವಸೂಲ್ಮಾಡಿ ರಾಜನ ಬೊಕ್ಕಸವನ್ನು ತುಂಬಿದರು.

**ಮಂತ್ರಿಗಳು**

ಸಂದಾಯವಾದ ಹಣದಲ್ಲಿ ತಾವು ರಹಸ್ಯವಾಗಿ ಸ್ವಲ್ಪ ಭಾಗವನ್ನು ಎತ್ತಿಟ್ಟುಕೊಳ್ಳುತ್ತಲೂ ಇದ್ದರು. ಜನರು ಇವರಿಬ್ಬರನ್ನು ನೀಚರೆಂದೂ ರಾಜನ ಜಿಗಣೆಗಳೆಂದೂ ಆಡಿಕೊಳ್ಳುತ್ತಿದ್ದರು. ಇವರ ಸಹಾಯದಿಂದ ಹೆನ್ರಿ ಬೊಕ್ಕಸದಲ್ಲಿ ಹಣವನ್ನು ತುಂಬಿಕೊಂಡುದಲ್ಲದೆ ರಾಜಾಧಿಕಾರವನ್ನು ರೂಢಿಸಿಕೊಂಡು ಬಲಪಡಿಸಿಕೊಂಡನು. ಒಂದೊಂದುವೇಳೆ ಹೆನ್ರಿಯ ಆಳಿಕೆಯಲ್ಲಿ ಸುಲಿಗೆಯು ಹೆಚ್ಚೆಂದು ಕಂಡರೂ ಜನರು "ಇದುವರೆಗೂ ನಮ್ಮನ್ನು ಸುಲಿದು ಹಿಂಸೆಪಡಿಸುತ್ತಿದ್ದ ಪುಂಡುಜನರೆಲ್ಲರನ್ನೂ ಈ ದೊರೆ ಅಡಗಿಸಿದ್ದಾನೆ. ಅನೇಕ ಸುಲಿಗೆಖೋರರ ಹಿಂಸೆಯನ್ನನುಭವಿಸುವುದಕ್ಕಿಂತ ಒಬ್ಬ ಸುಲಿಗೆಗಾರನ ಹಿಂಸೆಯೆಷ್ಟೋ ಮೇಲು" ಎಂದುಕೊಂಡರು.

ಸಾಮಾನ್ಯಜನರು ಹೆನ್ರಿಯನ್ನು ಹೆಚ್ಚು ಪ್ರೀತಿಸದಿದ್ದರೂ ಗೌರವಿಸಿ ವಿಶ್ವಾಸದಿಂದ ಕಾಣುತ್ತಿದ್ದರು. ಹೆನ್ರಿಗೆ ತೊಂದರೆ ತೋರಬಹುದಾಗಿದ್ದುದು ಜನಸಾಮಾನ್ಯರಿಂದಲ್ಲ; ಶ್ರೀಮಂತವರ್ಗದವರಿಂದ. ಅದನ್ನು ಹೆನ್ರಿ ಚನ್ನಾಗಿ ತಿಳಿದಿದ್ದನು. ಅದಕ್ಕಾಗಿಯೇ ಶ್ರೀಮಂತರನ್ನು ಅಡಗಿಸಲು ತೊಡಗಿದನು. ಗುಲಾಬಿಯುದ್ಧಗಳ ಕಾಲದಲ್ಲಿ ರಾಜನು ಅವರ ಕೈಗೊಂಬೆಯಾಗಿದ್ದನು. ಶ್ರೀಮಂತರು ಸ್ವಂತಸೈನ್ಯಗಳನ್ನು ಕಟ್ಟಿಕೊಂಡು ತಮ್ಮಲ್ಲಿಯೇ ದ್ವೇಷಸಾಧಿಸಿ ಪರಸ್ಪರವಾಗಿ ಕಾದಾಡುತ್ತಲಿದ್ದುದಲ್ಲದೆ ಸಮಯಬಂದಾಗ ರಾಜನಿಗೆದುರುಬಿದ್ದು ರಾಜ್ಯವನ್ನು ಹಾವಳಿಮಾಡುತ್ತಿದ್ದರು. ಅವರಲ್ಲಿ ಪ್ರಬಲರಾದವರು ಗುಲಾಬಿ ಯುದ್ಧಗಳಲ್ಲಿ ಪ್ರಾಣಗಳನ್ನೋ ಆಸ್ತಿಗಳನ್ನೋ ಕಳೆದುಕೊಂಡಿದ್ದರು. ಹಾಗಿದ್ದರೂ ಉಳಿದಿದ್ದವರು ತಮ್ಮ ಪಾಳೆಯಗಾರತನವನ್ನು ಬಿಟ್ಟುಕೊಡದೆ ದರ್ಪಿಷ್ಠರಾಗಿಯೂ ಪುಂಡರಾಗಿಯೂ ಇರುತ್ತಿದ್ದರು. ಅನ್ನಬಟ್ಟೆಗಳನ್ನು ಉಚಿತವಾಗಿ ಕೊಟ್ಟು ಪ್ರತಿಶ್ರೀಮಂತನೂ ಸ್ವಂತಪರಿವಾರವೆಂದು ಪುಂಡರ

**ಶ್ರೀಮಂತರ ದಮನ**

ತಂಡವನ್ನು ಕಟ್ಟಿಕೊಂಡಿರುತ್ತಿದ್ದನು. ಒಬ್ಬೊಬ್ಬ ಶ್ರೀಮಂತನೂ ತನ್ನ ಗುರುತು ತೋರುವಹಾಗೆ ತನ್ನ ಪರಿವಾರದವರಿಗೆ ವಿಶೇಷವಸ್ತ್ರಗಳನ್ನು ತೊಡಿಸುತ್ತಿದ್ದನು. ಪರಿವಾರದವರು ಪುಂಡುತನಮಾಡಿ ಯಾವುದಾದರೂ ನ್ಯಾಯಸ್ಥಾನದಲ್ಲಿ ವಿಚಾರಣೆಗೆ ಸಿಕ್ಕುವ ಸಂದರ್ಭ ಬಂದರೆ ಆ ಶ್ರೀಮಂತನು ಸರ್ವೋಪಾಯಗಳಿಂದ ತನ್ನವರನ್ನು ಉಳಿಸಿಕೊಳ್ಳುತ್ತಿದ್ದನು. ಶ್ರೀಮಂತನೇ ಪುಂಡುಗಾರಿಕೆಯಲ್ಲಿ ಸಿಕ್ಕಿಬಿದ್ದು ವಿಚಾರಣೆಗೆ ಗುರಿಯಾಗುವ ಸಂದರ್ಭವೊದಗಿದಾಗ ಆ ಶ್ರೀಮಂತನು ಸೈನ್ಯದಂತಹ ಪರಿವಾರದೊಡನೆ ಬಂದು ನ್ಯಾಯಾಧಿಕಾರಿಯನ್ನು ಬೆದರಿಸಿಬಿಡುತ್ತಿದ್ದನು. ಶ್ರೀಮಂತವರ್ಗದವರು ಜನರ ವಿಶ್ವಾಸವನ್ನಾಗಲಿ ರಾಜನವಿಶ್ವಾಸವನ್ನಾಗಲಿ ಸಂಪಾದಿಸದಿದ್ದರು. ಇವರನ್ನಡಗಿಸಲು ಮೊದಲು ಹೆನ್ರಿಯು 1497ರಲ್ಲಿಯೇ **ಪರಿವಾರಪೋಷಣೆ**ಯನ್ನೂ **ವಿಶೇಷ ವಸ್ತ್ರದಾನ**ವನ್ನೂ ನಿಲ್ಲಿಸಲು ಒಂದು **ಕಾನೂನ**ನ್ನು (Law against Maintenance and Livery) ಹೊರಡಿಸಿ, ಅದನ್ನತಿಕ್ರಮಿಸಿದವರನ್ನು ದಂಡಿಸಲು ಹೊಸ ನ್ಯಾಯಸ್ಥಾನವೊಂದನ್ನು ಸ್ಥಾಪಿಸಿದನು. ಅಲ್ಲಿಯ ನ್ಯಾಯಾಧಿಕಾರಿಗಳು ದೊಡ್ಡ ಪದವಿಯುಳ್ಳವರೂ ಪ್ರಬಲರೂ ಆಗಿದ್ದುದರಿಂದ ಶ್ರೀಮಂತರ ಬೆದರಿಕೆಗೆ ಹೆದರತಕ್ಕವರಾಗಿರಲಿಲ್ಲ. ಈ ನ್ಯಾಯಸ್ಥಾನದಲ್ಲಿ ಸಿಕ್ಕಿಕೊಂಡ ಶ್ರೀಮಂತರೆಲ್ಲರೂ ತೀವ್ರ ದಂಡನೆಗೆ ಗುರಿಯಾದರು. ದೊರೆಯ ಸತ್ಕಾರಕ್ಕಾಗಿ ಆಕ್ಸ್‌ಫರ್ಡ್ ಶ್ರೀಮಂತನು ಗೌರವದಾಸೆಯಿಂದ ಹೆಚ್ಚು ಪರಿವಾರದವರನ್ನು ಮೆರೆಸಿದನು; ಸತ್ಕಾರ ಮುಗಿದ ಮೇಲೆ ಆತನಮೇಲೆ ಅಧಿಕಪರಿವಾರಪೋಷಣೆಯ ತಪ್ಪು ಹೊರೆಸಿ ದೊರೆ £10,000 ದಷ್ಟು ಭಾರಿ ಮೊಬಲಗನ್ನು ದಂಡವಾಗಿ ಸೆಳೆದನು. ಇದು ಒಂದು ದೃಷ್ಟಾಂತ. ಕಾಲಕ್ರಮದಲ್ಲಿ ಈ ನ್ಯಾಯಸ್ಥಾನಕ್ಕೆ **ಸ್ಟಾರ್ ಚೇಂಬರ್ ಕೋರ್ಟ್**(Star Chamber Court) ಎಂಬ ಹೆಸರು ರೂಢಿಯಾಯಿತು. ಶ್ರೀಮಂತರ ಬಲವನ್ನು ಮುರಿಯುವುದರಲ್ಲಿ ಆ ಕೋರ್ಟು ರಾಜನ ಕೈಲಿದ್ದ ಶಕ್ತಿಸ್ವರೂಪವಾಗಿ ಪರಿಣಮಿಸಿತು.

**ವೇಲ್ಸ್**

ಇಂಗ್ಲಂಡಿನಲ್ಲಿ ಶಾಂತಿಯನ್ನು ನೆಲೆಗೊಳಿಸಿದಂತೆಯೇ ಹೆನ್ರಿ ವೇಲ್ಸಿನಲ್ಲಿಯೂ ನೆಮ್ಮದಿಯನ್ನುಂಟುಮಾಡಿದನು. ಹೆನ್ರಿಯ ತಂದೆಯು ವೆಲ್ಷ್. ವೇಲ್ಸಿನಲ್ಲಿ ತನಗೆ ಹೆಚ್ಚು ಅಭಿಮಾನವಿರುವುದಾಗಿ ಹೆನ್ರಿ ಹೇಳುತ್ತ ವೇಲ್ಸಿನ ಜನರನ್ನು ವಶವರ್ತಿಗಳನ್ನಾಗಿ ಮಾಡಿಕೊಂಡನು.

**ಐರ್ಲಂಡ್**

ಐರ್ಲಂಡಿನ ಪರಿಸ್ಥಿತಿ ಬೇರೆ ರೀತಿಯದಾಗಿತ್ತು. ಅಲ್ಲಿ ಜನರು ಭಾಷಾವೇಷಗಳಲ್ಲಿಯೂ ಕುಲ, ಆಚಾರ, ಸಂಪ್ರದಾಯಗಳಲ್ಲಿಯೂ ಬೇರೆಯಾದವರು. ಪೂರ್ವ ತೀರದಲ್ಲಿ ಮಾತ್ರ (The Pale) ಇಂಗ್ಲಿಷ ಜನರು ನೆಲೆಮಾಡಿಕೊಂಡಿದ್ದರು. ಐರ್ಲಂಡಿನಲ್ಲಿಯೂ ಶ್ರೀಮಂತರು ಪ್ರಬಲರಾಗಿದ್ದರು. ಅವರಲ್ಲಿ ಪ್ರಮುಖನಾಗಿದ್ದ **ಕಿಲ್ಡೇರಿನ ಅರ್ಲ**ನು ಯಾರ್ಕ್‌ಪಕ್ಷಪಾತಿಯಾಗಿದ್ದು ಸಿಮ್ನೆಲ್ಲಿಗೆ ಸಹಾಯಮಾಡಿದುದನ್ನು

ಆಗಲೇ ಕಂಡೆವು. ಅದು ರಾಜದ್ರೋಹವಾದಾಗ್ಗೂ ಹೆನ್ರಿ ಆತನನ್ನು ದಂಡಿಸಿ ಆತನ ಕಡೆಯವರ ದ್ವೇಷವನ್ನು ಸಂಪಾದಿಸಿಟ್ಟುಕೊಳ್ಳುವುದಕ್ಕಿಂತ ಆತನವಿಶ್ವಾಸವನ್ನು ಕಟ್ಟಿಕೊಳ್ಳುವುದೇ ಮೇಲೆಂದು ಯೋಚಿಸಿ ಆತನಿಗೆ ಮನ್ನಣೆಯನ್ನೂ **ಲಾರ್ಡ್ ಡೆಪ್ಯುಟಿ** ಎಂಬ ರಾಜಪ್ರತಿನಿಧಿಯ ಅಧಿಕಾರವನ್ನೂ ಕೊಡಿಸಿದ್ದನು. ಮನ್ನಣೆದೊರೆತಮೇಲೆ ಆ ಶ್ರೀಮಂತನು ವಿರೋಧವನ್ನೇ ಬಗೆಯದಿದ್ದನು. ಅದರೂ ವಾರ್ಬೆಕ್ಕನು ಪ್ರಯತ್ನ ಪಡುತ್ತಿದ್ದಾಗ ಹೆನ್ರಿ ಕಿಲ್ಡೇರ್‌ಶ್ರೀಮಂತನಿಗೆ ಅಧಿಕಾರವನ್ನು ತಪ್ಪಿಸಿ **ಸರ್ ಎಡ್ವರ್ಡ್ ಪಾಯ್ನಿಂಗ್ಸ್** (Sir Edward Poynings) ಎಂಬ ಇಂಗ್ಲಿಷಿನವನನ್ನು ಗೊತ್ತುಮಾಡಿದನು. ಆತನು ಡಬ್ಲಿನ್ನಿನಲ್ಲಿ ಸೇರುತ್ತಿದ್ದ ಐರಿಷ್‌ಪಾರ್ಲಿಮೆಂಟಿನ ವಿಷಯವಾಗಿ ಎರಡು **ಕಾನೂನು**ಗಳನ್ನು ಮಾಡಿಸಿದನು. ಒಂದನೆಯದಾಗಿ ಆ ಪಾರ್ಲಿಮೆಂಟಿನಲ್ಲಿ ಚರ್ಚೆಯಾಗತಕ್ಕ ಮಸೂದೆಗಳು ಮೊದಲೇ ರಾಜನ ಸಮ್ಮತಿಪಡೆಯಬೇಕು; ಎರಡನೆಯದಾಗಿ ಇಂಗ್ಲಿಷ್‌ಪಾರ್ಲಿಮೆಂಟಿನಲ್ಲಿ ರೂಪಗೊಂಡ ಕಾನೂನುಗಳಿಗೆ ಐರಿಷ್ ಪಾರ್ಲಿಮೆಂಟ್ ತಲೆಬಾಗಿ ವರ್ತಿಸಬೇಕು. ಈ ರೀತಿಯಲ್ಲಿ ಐರಿಷ್‌ಪಾರ್ಲಿಮೆಂಟಿಗೆ ಯಾವಬಗೆಯ ಸ್ವಾತಂತ್ರ್ಯವೂ ಇಲ್ಲದಾಯಿತು. ಪಾಯ್ನಿಂಗ್ಸ್ ಐರ್ಲಂಡಿನಲ್ಲಿ ಬಹುಕಾಲ ಇರಲಾಗಲಿಲ್ಲ. ಐರಿಷ್ ಶ್ರೀಮಂತರನ್ನು ಹದ್ದಿನಲ್ಲಿಡಲು ಇಂಗ್ಲಿಷ್ ಅಧಿಕಾರಿಗೆ ಅಸಾಧ್ಯವಾಗಿತ್ತು. ಅದನ್ನು ತಿಳಿದು ಹೆನ್ರಿ ಪುನಃ ಕಿಲ್ಡೇರಿನಅರ್ಲನನ್ನೇ ಲಾರ್ಡ್‌ಡೆಪ್ಯುಟಿಸ್ಥಾನಕ್ಕೆ ಗೊತ್ತುಪಡಿಸಿದನು.

ಈರೀತಿ ಪಟ್ಟವನ್ನು ಸಂಪಾದಿಸಿ ತನ್ನ ವಂಶವನ್ನು ಸರ್ವೋಪಾಯಗಳಿಂದ ಭದ್ರಗೊಳಿಸಿದ 7ನೆ ಹೆನ್ರಿಯು 1509ರಲ್ಲಿ ತೀರಿಹೋದನು. ಆತನ ಮಕ್ಕಳಲ್ಲಿ ಹಿರಿಯ

**ಮಕ್ಕಳು**

ಮಗಳು **ಮಾರ್ಗರೆಟ್** ಸ್ಕಾಟ್ಲೆಂಡಿನ ರಾಣಿಯಾಗಿದ್ದಳು; ಕಿರಿಯವಳು **ಮೇರಿ** ಇನ್ನೂ ಅವಿವಾಹಿತೆಯಾಗಿದ್ದಳು. ಹಿರಿಯ ಮಗ **ಆರ್ಥರ್** ತಂದೆಗೆ ಮೊದಲೇ ಮೃತಪಟ್ಟಿದ್ದನು; ಆದ್ದರಿಂದ ಎರಡನೆ ಮಗ **ಹೆನ್ರಿ**ಯೇ ಮುಂದಿನ ರಾಜನಾದನು.

# 8ನೆ ಹೆನ್ರಿ (1509—1547)

1491ರಲ್ಲಿ ಜನನ

ಒಂದಾದ ಮೇಲೊಂದು ಆರು ಮದುವೆಗಳು

- 1509 ಕಥರೀನ್, ವಿಯೋಗ 1533, ಮರಣ 1536
- 1533 ಆನ್ ಬೊಲೇನ್, ಶಿರಚ್ಛೇದನ 1536
- 1536 ಜೇನ್ ಸೀಮೂರ್, ಮರಣ 1537
- 1540 ಕ್ಲೀವ್ಸ್ ಆನ್, ವಿಯೋಗ 1540
- 1540 ಕಥರೀನ್ ಹಾವರ್ಡ್, ಶಿರಚ್ಛೇದನ 1542
- 1542 ಕಥರೀನ್ ಪಾರ್

| ಸ್ಕಾಟ್ಲೆಂಡ್ | ಫ್ರಾನ್ಸ್ | ಸಾಮ್ರಾಜ್ಯ | ಪೋಪರು | ಸ್ಪೈನ್ |
|---|---|---|---|---|
| 4ನೆ ಜೇಮ್ಸ್ | 12ನೆ ಲೂಯಿ | ಮ್ಯಾಕ್ಸಿಮಿಲಿಯನ್ | 2ನೆ ಜೂಲಿಯಸ್ | ಫರ್ಡಿನೆಂಡ್ |
| 1488—1513 | 1498—1515 | 1493—1519 | | 1479—1515 |
| | | | 10ನೆ ಲಿಯೊ | |
| 5ನೆ ಜೇಮ್ಸ್ | ಹಿರಿಯ ಫ್ರಾನ್ಸಿಸ್ | 5ನೆ ಚಾರ್ಲ್ಸ್ | | ಹಿರೇ ಚಾರ್ಲ್ಸ್ |
| 1513—1542 | 1515—1547 | 1519—1555 | 6ನೆ ಎಡ್ರಿಯನ್ | 1516—1556 |
| ಮೇರಿ | | | 7ನೆ ಕ್ಲೆಮೆಂಟ್ | (1519ರಲ್ಲಿ |
| 1542—1587 | | | | ಚಕ್ರವರ್ತಿ) |
| | | | 3ನೆ ಪಾಲ್ | |

ಹದಿನೆಂಟನೆ ವರುಷದಲ್ಲಿ ಪಟ್ಟವನ್ನೇರಿದ ಈ ಹೆನ್ರಿಯು ತಂದೆಗೆ ಎರಡನೆ ಮಗ. ಈತನನ್ನು ಕ್ಯಾಂಟರ್ಬರಿಯ ಆರ್ಚ್‌ಬಿಷಪ್ ಪದವಿಯಲ್ಲಿಡಬೇಕೆಂಬ ಉದ್ದೇಶದಿಂದ ಚಿಕ್ಕಂದಿನಲ್ಲಿ ತಂದೆ ಒಳ್ಳೆವಿದ್ಯಾಭ್ಯಾಸಮಾಡಿಸಿದ್ದನು. ಆರ್ಥರ್ ಚಿಕ್ಕವಯಸ್ಸಿನಲ್ಲಿಯೇ ಕಾಲವಶನಾಗಲು ಹೆನ್ರಿಯೇ ಯುವರಾಜನೆನಿಸಿದನು; ಪಟ್ಟವನ್ನೇರಿದ ಸ್ವಲ್ಪಕಾಲದಲ್ಲಿಯೇ ತನ್ನಣ್ಣನ ವಿಧವೆ ಕಥರೀನಳನ್ನು ಆಗಲೇನಿಶ್ಚಿತವಾದಂತೆ ಮದುವೆಯಾದನು.

**ಸ್ವಭಾವ**

ಪಟ್ಟವನ್ನೇರಿದವೇಳೆಯಲ್ಲಿ ಹೆನ್ರಿಗೆ ಪ್ರಾಯ, ರೂಪ, ಶರೀರದಾರ್ಢ್ಯಗಳೆಲ್ಲವೂ ಉತ್ತಮವಾಗಿದ್ದವು. ತನ್ನ ದರ್ಪಗಾಂಭೀರ್ಯಗಳನ್ನು ಮರೆಯದೆ ಆಟಪಾಟಗಳಲ್ಲಿಯೂ ವಿನೋದಗಳಲ್ಲಿಯೂ ಸಹಜವಾಗಿ ವರ್ತಿಸುತ್ತಿದ್ದನು. ವಿದ್ವಾಂಸರ ಸಹವಾಸದಲ್ಲಿ ಇಷ್ಟವುಳ್ಳವನಾಗಿದ್ದನು. ತಂದೆಯಂತೆ ಲೋಭಿಯಲ್ಲ; ಉದಾರಿ. ಕೋಪಬಂದಾಗ ಅತಿಕ್ರೂರಿ. ಜನರ ಮೆಚ್ಚುಗೆಯನ್ನು ಎಚ್ಚರಿಕೆಯಿಂದ ಸದಾ ಸಂಪಾದಿಸುತ್ತಿದ್ದಾಗ್ಯೂ ಈ ದೊರೆ ಅನೇಕವೇಳೆ ಸ್ವಾರ್ಥಿಯಾಗಿ ದುರಾಸೆಯನ್ನೂ ಕಾಠೋರ್ಯವನ್ನೂ ತಾಳಿ ನಿರ್ಘೃಣನಂತೆ ಆಡುತ್ತಿದ್ದನು. ಆಳಿಕೆಯ ಕಡೆಕಡೆಗೆ ರಾಕ್ಷಸ

ನನ್ನು ಕಂಡಂತೆ ಈತನಲ್ಲಿ ಜನರು ಅಂಜುತ್ತಿದ್ದರು. ನಿರ್ದಯನೂ ಕಠಿಣನೂ ಆಗಿದ್ದಾಗ್ಗೂ ಬಲಿಷ್ಠನಾಗಿದ್ದು ತನ್ನ ಉದ್ದೇಶಗಳನ್ನು ಈ ದೊರೆ ಸಾಧಿಸಿಕೊಂಡನು. ಇಂಗ್ಲಂಡಿನ ದೊರೆಗಳಲ್ಲಿ ಈತನು ಬಲಿಷ್ಠರಲ್ಲಿ ಗಣ್ಯನಾಗತಕ್ಕವನು.

ಪಟ್ಟಕ್ಕಾಗಿ ಜಗಳವಾಡತಕ್ಕವರಾರೂ ಇರಲಿಲ್ಲ. ತಂದೆ ಅತಿಪಿಶುನನಾಗಿ ಹೇರಳವಾದ ಧನವನ್ನು ಕೂಡಿಟ್ಟು ಮೃತನಾಗಿದ್ದನು. ಇಂತಹಸ್ಥಿತಿಯಲ್ಲಿ ಈ ದೊರೆಯು ಭಾರಿಕನಸುಗಳನ್ನು ಕಂಡನು; ಯೂರೋಪಿನ ರಾಜರುಗಳ ಮಧ್ಯೆ ತಾನು ಪ್ರಬಲನೆನಿಸಿಕೊಳ್ಳುವ ಉಪಾಯಗಳನ್ನು ಮನಸ್ಸಿನಲ್ಲಿ ನೆನೆದನು. ಆದರೆ ಸ್ವಂತಪ್ರಜೆಗಳ ವಿಶ್ವಾಸವೇ ಎಲ್ಲಕ್ಕೂ ಮೂಲವೆಂದು ಚನ್ನಾಗಿ ಅರಿತಿದ್ದವನಾದುದರಿಂದ ಜನರಮೆಚ್ಚುಗೆಗಾಗಿ ಅನ್ಯಾಯವನ್ನಾದರೂ ಮಾಡಲು ಹಿಂಜರಿಯುತ್ತಿರಲಿಲ್ಲ. ಜಿಗಣೆಗಳೆನಿಸಿ ಜನರದ್ವೇಷಕ್ಕೆ ಗುರಿಯಾಗಿದ್ದ ಎಂಪ್ಸನ್ ಮತ್ತು ಡಡ್ಲಿ ಎಂಬ ಹಿಂದಿನ ಮಂತ್ರಿಗಳನ್ನು ರಾಜದ್ರೋಹವೆಂಬ ಆಪಾದನೆಗೆ ಗುರಿಮಾಡಿ

**ಮಂತ್ರಿಗಳು**

ಹೆನ್ರಿ ಪಟ್ಟವೇರಿದಕೂಡಲೆ ತಲೆಹೊಡಿಸಿಬಿಟ್ಟನು. ಇವರಿಬ್ಬರನ್ನು ಬಲಿಗೊಟ್ಟಬಳಿಕ ಹಿಂದಿನಮಂತ್ರಿಗಳನ್ನೇ ಕೆಲಕಾಲ ದೊರೆ ಇಟ್ಟುಕೊಂಡನು. ಆದರೆ ದೊರೆಯ ದೊಡ್ಡಆಸೆಗಳಿಗೆ ಅವರು ತಕ್ಕವರಾಗಿರಲಿಲ್ಲ. ನೈಪುಣ್ಯವನ್ನೂ ವಿಧೇಯತೆಯನ್ನೂ ಸಮನಾಗಿ ಪಡೆದಿದ್ದ ಮಂತ್ರಿಯು ದೊರೆಗೆ ಬೇಕಾಗಿತ್ತು. ಆದ್ದರಿಂದ **ಥಾಮಸ್ ವುಲ್ಸಿ** (Thomas Wolsey) ಎಂಬ ಸಮವಯಸ್ಕಯುವಕನಲ್ಲಿ ದೊರೆ ವಿಶ್ವಾಸಬೆಳೆಸಿ ಬೇಗಬೇಗ ಅವನಿಗೆ ದೊಡ್ಡಹುದ್ದೆಗಳನ್ನು ಕೊಡಿಸಿ ಕಡೆಗೆ 1515ರಲ್ಲಿ ತನ್ನ ಆಪ್ತಮಂತ್ರಿಯನ್ನಾಗಿಟ್ಟುಕೊಂಡನು.

**ಇಪ್ಸಿಚ್** (Ipswich) ಪಟ್ಟಣದ ವರ್ತಕನೊಬ್ಬನಮಗನಾಗಿ **ಆಕ್ಸ್‌ಫರ್ಡಿನಲ್ಲಿ** ವಿದ್ಯಾವಂತನಾಗಿದ್ದ ವುಲ್ಸಿ ಅತಿಚತುರನೆನಿಸಿ ಹಿಂದಿನಮಂತ್ರಿಗಳ ಮೆಚ್ಚುಗೆಯನ್ನು ಪಡೆದಿದ್ದನು. ಹೆನ್ರಿ ದೊರೆಯಾದಾಗ ಲಿಂಕನ್ನಿನ (Lincoln) ಡೀನ್ (Dean) ಪದವಿಯನ್ನು ಪಡೆದನು. 1514ರಲ್ಲಿ **ಲಿಂಕನ್ನಿನ ಬಿಷಪ್** ಹುದ್ದೆಯನ್ನೇರಿ ಅದೇ ವರ್ಷದಲ್ಲಿಯೇ **ಯಾರ್ಕಿನ ಆರ್ಚ್‌ಬಿಷಪ್** (Archbishop of York) ಆದನು. 1515ರಲ್ಲಿ ದೊರೆಯಮೆಚ್ಚುಗೆಯಿಂದ **ಲಾರ್ಡ್ ಚಾನ್ಸೆಲ್ಲರ್** (Lord Chancellor) ಪದವಿಯನ್ನು ಪಡೆದನು; **ಪೋಪನೂ** ಈತನನ್ನು ಮೆಚ್ಚಿ ಅದೇವರ್ಷದಲ್ಲಿಯೇ **ಕಾರ್ಡಿನಲ್** (Cardinal) ಬಿರುದನ್ನು ಕೊಡಿಸಿದನು. ಬುದ್ಧಿಶಕ್ತಿಯಿಂದಲೇ ಉತ್ತಮ ಪದವಿಗೇರಿ ಚರ್ಚಿನಲ್ಲಿಯೂ ರಾಜ್ಯದಲ್ಲಿಯೂ ಭಾರಿಅಧಿ

**ಕಾರ್ಡಿನಲ್ ವುಲ್ಸಿ**

ಕಾರಿಯಾಗಿ ಧನವಂತನಾದ ವುಲ್ಸಿ ಆಡಂಬರದಿಂದ **ಜೀವಿಸ** ಲುಪಕ್ರಮಿಸಿದನು. ಹೆನ್ರಿ ಮತ್ತು ವುಲ್ಸಿ ಬಾಲ್ಯಸ್ನೇಹಿತರಂತೆ ಸದಾ ಒಟ್ಟಿಗಿರಲು ಮೊದಲಾಯಿತು. ಶ್ರೀಮಂತವರ್ಗದವರು ವುಲ್ಸಿಯಲ್ಲಿ ಅಸೂಯೆಗೊಂಡರು; ಆದರೆ ದೊರೆಯ ಆಪ್ತಮಂತ್ರಿಯೆಂದು ಅಂಜುತ್ತಿದ್ದರು. ವುಲ್ಸಿ

ಬಡತನದಿಂದ ದೊಡ್ಡ ಅಧಿಕಾರಕ್ಕೇರಿ ದರ್ಪದಿಂದ ವರ್ತಿಸಿದಾಗ್ಗೂ ಬಡಜನರನ್ನಾಗಲಿ ವಿದ್ಯಾವಂತರನ್ನಾಗಲಿ ಮರೆಯಲಿಲ್ಲ. ದೂರಾಲೋಚನೆಯುಳ್ಳವನೂ ವಿಚಾರಪರನೂ ಆಗಿದ್ದು ಆಯಾಸವೆಂದೆಣಿಸದೆ ಕೆಲಸಮಾಡಬಲ್ಲವನಾಗಿದ್ದುದರಿಂದ ಹೆನ್ರಿಯ ಹೆಬ್ಬಯಕೆಗಳ ಸಾಧನೆಗೆ ತಕ್ಕ ಮಂತ್ರಿಯಾಗಿದ್ದನು.

ಇತರರಾಜರೊಂದಿಗೆ ಸೇರಿ ಯುದ್ಧಗಳನ್ನಾಡಿ ಯಶಸ್ವಿಯಾಗುವ ಆಸೆ ಹೆನ್ರಿಗೆ ಬಲವಾಗಿತ್ತು. ಯುದ್ಧಗಳಲ್ಲಿ ಜಯವನ್ನು ಪಡೆದು ತನಗೂ ತನ್ನ ದೇಶಕ್ಕೂ ದೊಡ್ಡ ಹೆಸರು ಕಟ್ಟಬೇಕೆಂಬ ಇಷ್ಟವನ್ನು ಪೂರಯಿಸಲು ಸ್ಥಿತಿಗತಿಗಳು ಅಷ್ಟು ಅನುಕೂಲವಾಗಿರಲಿಲ್ಲ. ಫ್ರಾನ್ಸಿನ 8ನೆ ಚಾರ್ಲ್ಸ್ ಇಟಲಿಯ ಉತ್ತರಭಾಗವನ್ನು ಮುತ್ತಿ ಜಯಶಾಲಿಯೆನಿಸಿದಮೇಲೆ ಮೃತಪಟ್ಟನು; **12ನೆ ಲೂಯಿ** (Louis XII) ಎಂಬಾತನು ಫ್ರೆಂಚರ ದೊರೆಯಾಗಿ ಇಟಲಿಯ ಉತ್ತರದಲ್ಲಿ ಪ್ರಬಲನಾಗಿದ್ದನು. ಹೆನ್ರಿಯ ಮಾವನಾದ ಸ್ಪೈನಿನ**ಫರ್ಡಿನೆಂಡ**ನಿಗೆ ಇಟಲಿಯದಕ್ಷಿಣಭಾಗದಲ್ಲಿ ಪ್ರಾಬಲ್ಯವಿತ್ತು.

**ಇಟಲಿಯಲ್ಲಿ ಸ್ಪರ್ಧೆ** ಇಟಲಿದೇಶದಲ್ಲಿ ಒಂದುರಾಜ್ಯವೆಂಬುದೇ ಇರಲಿಲ್ಲ; ಮೂಡಣ ವ್ಯಾಪಾರದಿಂದ ಧನಾಢ್ಯವಾದ ಪ್ರತಿಯೊಂದುಪಟ್ಟಣವೂ ಒಂದೊಂದು ರಾಷ್ಟ್ರವಾಗಿತ್ತು. ಇವುಗಳ ಐಶ್ವರ್ಯದ ಆಸೆಯಿಂದ ಐರೋಪ್ಯಪ್ರಭುಗಳು ನಾನುತಾನೆಂದು ಮುಂದಾಗಿ ಆ ಪಟ್ಟಣಗಳನ್ನು ಮುತ್ತಲುಕಾತರರಾಗಿ ತಮ್ಮಲ್ಲಿಯೇ ಅಸೂಯೆಪಡುತ್ತಿದ್ದರು. ಲೂಯಿ ಫರ್ಡಿನೆಂಡಿಬ್ಬರೂ ಒಬ್ಬರಲ್ಲೊಬ್ಬರು ಅಸೂಯೆಯಿಂದಿದ್ದರು. ಆ ಪಟ್ಟಣಗಳಲ್ಲಿ ಅತ್ಯೈಶ್ವರ್ಯದಿಂದ ಕೂಡಿದ್ದುದು **ವೆನಿಸ್** (Venice) ನಗರ; ಅಲ್ಲಿಯವರು ಭೇದೋಪಾಯದಲ್ಲಿ ಅತಿನಿಪುಣರಾಗಿದ್ದವರು. ಯುಕ್ತಿಯಿಂದ ವೆನಿಸ್ಸಿನವರ್ತಕಜನರು ಐರೋಪ್ಯರಾಜರಲ್ಲಿ ಕಲಹಗಳನ್ನು ಹುಟ್ಟಿಸಿ ಅವರನ್ನು ದುರ್ಬಲಗೊಳಿಸುತ್ತಿದ್ದರು. ಆಗ ಫರ್ಡಿನೆಂಡ್ ಮತ್ತು ಲೂಯಿ ತಮ್ಮ ಪರಸ್ಪರವೈಷಮ್ಯವನ್ನು ವೆನಿಸ್ಸಿನವರಭಯದಿಂದಮರೆತು ಆಸ್ಟ್ರಿಯದಪ್ರಭು **ಮ್ಯಾಕ್ಸಿಮಿಲಿಯನ್** ಎಂಬಾತನನ್ನು ತಮ್ಮ ಕಡೆ ಸೆಳೆದುಕೊಂಡು ವೆನಿಸ್ಸಿಗೆ ವಿರೋಧವಾಗಿ ಒಂದು ವ್ಯೂಹಗಟ್ಟಿದರು. ಈ ಮೂವರಲ್ಲೊಬ್ಬರಾದರೂ ಇಂಗ್ಲಂಡಿನರಾಜನನ್ನು ಗಣಿಸಲೇ ಇಲ್ಲ. ಯಾವಕಡೆಯಾದರೂ ಸೇರಿ ಯುದ್ಧದಲ್ಲಿ ಯಶಸ್ಸುಪಡೆಯಬೇಕೆಂದಿದ್ದ ಹೆನ್ರಿಗೆ ಅವಕಾಶವೇ ಇಲ್ಲದಾಗಿತ್ತು. ಆದರೆ ಸ್ವಲ್ಪಕಾಲದಲ್ಲಿ ವೆನಿಸ್ಸಿನವರು ತಮ್ಮೆದುರುಸೇರಿದ್ದ ಮೂವರುಪ್ರಭುಗಳಲ್ಲಿ ಅಸೂಯೆಹೆಚ್ಚಿಸಿ ಜಾಣತನದಿಂದ ಅವರ ವ್ಯೂಹವನ್ನೊಡೆದರು. ಈಮಧ್ಯೆ ಜಗದ್ಗುರು ಪೋಪನು ತನ್ನ ಸಂಸ್ಥಾನಕ್ಕೆ ಫ್ರೆಂಚರೆಲ್ಲಿ ನುಗ್ಗುವರೋ ಎಂಬ ಭಯದಿಂದ ಫರ್ಡಿನೆಂಡ್, ಮ್ಯಾಕ್ಸಿಮಿಲಿಯನ್ ಮುಂತಾದವರನ್ನು ಲೂಯಿಯಸ್ನೇಹದಿಂದ ತಪ್ಪಿಸಿ ಲೂಯಿಯ ಮೇಲೆತ್ತಿಕಟ್ಟಿದನು. ವೆನಿಸ್ಸಿನವರಿಗೆ ಫ್ರೆಂಚರನ್ನು ಇಟಲಿಯಿಂದ ಹೊರಗೋಡಿಸುವುದು ಇಷ್ಟವಾಗಿತ್ತು.

ಇದನ್ನು **ಪವಿತ್ರವ್ಯೂಹ**(Holy League)ವೆಂದು ಕರೆಯುತ್ತ ಅವರು ಫ್ರೆಂಚ ರೊಡನೆ ಕಾದಾಡಲು ಹವಣಿಸಿದರು. ಈ ಸನ್ನಿವೇಶದಲ್ಲಿ

**ಹೋಲಿ ಲೀಗ್**

ಹೆನ್ರಿಯು ಪ್ರವೇಶಕ್ಕಾಸ್ಪದವಾಯಿತು. ಚಿರಶತ್ರುಗಳಾದ ಫ್ರೆಂಚರೊಡನೆ ಕಾದಾಡಲು ಇಂಗ್ಲಿಷರಿಗೆ ಉತ್ಸಾಹತೋರಿತು. ಪೋಪಿನಪರವಾಗಿ ಫ್ರಾನ್ಸನ್ನು ಮುತ್ತಲು ಫರ್ಡಿನೆಂಡ್ ಮತ್ತು ಮ್ಯಾಕ್ಸಿಮಿಲಿಯನ್ನರ ಸಮಾನಸ್ಕಂಧನಾಗಿ ಹೆನ್ರಿ ಸನ್ನದ್ಧನಾದನು.

ಮೊದಲು ಕೊಟ್ಟುಕಳುಹಿಸಿದ ಸೈನ್ಯವು ಫ್ರಾನ್ಸಿನ ದಕ್ಷಿಣಭಾಗದಲ್ಲಿ ಮುತ್ತಲು ಯತ್ನಿಸಿತು. ಏನೂ ಸಫಲವಾಗಲಿಲ್ಲ. 1513ರಲ್ಲಿ ಹೆನ್ರಿಯೇ ಸೇನಾಪತಿಯಾಗಿ ಹೊರಟು ಕಲೇ (Calais) ಮಾರ್ಗವಾಗಿ ಫ್ರಾನ್ಸಿನಉತ್ತರಭಾಗದಲ್ಲಿ ನುಗ್ಗಿದನು. ಚಕ್ರವರ್ತಿಬಿರುದುಪಡೆದಾಗ್ಯೂ ಧನಹೀನನಾಗಿದ್ದ ಮ್ಯಾಕ್ಸಿಮಿಲಿಯನ್ ಮಾತ್ರ ಅಲ್ಪ ಸೈನ್ಯದೊಡನೆ ಬಂದು ಸೇರಿಕೊಂಡನು. ಫ್ರೆಂಚರ ಸೈನ್ಯವೊಂದು **ಗೀನ್ಗೆಟ್** (Guinegatte) ಎಂಬೆಡೆಯಲ್ಲಿ ಎದುರಾಗಿ ಕದನವೆದ್ದು

**ಫರಾನ್ಸೀ ಯುದ್ಧ**

ಬೇಗನೆ ಮುಗಿದುಹೋಯಿತು. ಸ್ಥೈರ್ಯದಿಂದ ನಿಂತು ಹೋರಾಡದೆ ಫ್ರೆಂಚರು ಕುದುರೆಗಳಮೇಲೇರಿ ಪಲಾಯನ ಮಾಡಿದರೆಂದು ಈ ಕದನಕ್ಕೆ **ಸ್ಪರ್ಸ್ ಕದನ** (Battle of the Spurs)ವೆಂದು ಹೆಸರಾಯಿತು. ಇದು ಭಾರಿಕದನವೇ ಅಲ್ಲ; ಚಿಲ್ಲರೆಕದನ. ಯುದ್ಧದಕೀರ್ತಿಗೆ ಅವಕಾಶವೇ ಇಲ್ಲವಾಯಿತು. ಆದ್ದರಿಂದ ಹೆನ್ರಿಯ ಕೀರ್ತಿಯಆಸೆಯು ಕೈಗೂಡಲಿಲ್ಲ. ವಾಸ್ತವವಾಗಿ ಫ್ರೆಂಚ್‌ದೊರೆ 12ನೆ ಲೂಯಿ ಇಳಿಗಾಲದಲ್ಲಿದ್ದು ಯುದ್ಧ ವಿಮುಖನಾಗಿದ್ದನು. ಹೆನ್ರಿಯನ್ನು ಪ್ರೋತ್ಸಾಹಿಸಿದ ಫರ್ಡಿನೆಂಡ್ ಸ್ವಾರ್ಥಪರನಾಗಿ ತೆಪ್ಪಗೆ ದೂರವಾಗಿದ್ದುಬಿಟ್ಟನು. ಯಾರಿಗೂ ಹೆಚ್ಚುಮನಸ್ಸಿಲ್ಲದ ಈ ಹೋರಾಟದಲ್ಲಿ ಹೆನ್ರಿಯೊಬ್ಬನೇ ಮುಂದೆಬಿದ್ದು ಅಸಮಾಧಾನಪಡಬೇಕಾಯಿತು.

ಫ್ರಾನ್ಸ್‌ದೇಶದಮೇಲೆ ಹೆನ್ರಿ ದಂಡೆತ್ತಿಹೊರಟಾಗ ಸ್ಕಾಟ್ಲೆಂಡಿನದೊರೆಗೆ ಫ್ರೆಂಚರ ಪಕ್ಷವನ್ನು ಹಿಡಿದು ಇಂಗ್ಲಂಡನ್ನು ಮುತ್ತಬೇಕೆಂದೆನ್ನಿಸಿತು. ಹೆನ್ರಿಗೆ ಭಾವನಾಗಿದ್ದರೂ ಸ್ಕಾಟ್‌ದೊರೆ **4ನೆ ಜೇಮ್ಸಿ**ಗೆ ಇಂಗ್ಲಂಡಿನಲ್ಲಿಹಗೆತನವೇ ಕರ್ತವ್ಯವಾಗಿತೋರಿತು. 1513ನೆ ವರ್ಷದಲ್ಲಿ ಜೇಮ್ಸ್ ತನ್ನ ಸೈನ್ಯವನ್ನು ನಡೆಸಿಕೊಂಡು ಟ್ವೀಡ್‌ನದಿಯನ್ನು ದಾಟಿ ಇಂಗ್ಲಂಡನ್ನು ಪ್ರವೇಶಿಸಿದನು. ಆಗ **ಸರ್ರೆಯ ಅರ್ಲ್** (Earl of Surrey) ಇಂಗ್ಲಿಷ್‌ದಳವನ್ನೆತ್ತಿ ಸ್ಕಾಟರನ್ನು ಎದುರಿಸಲು ಹೊರಟು

**ಸ್ಕಾಚ್ ಯುದ್ಧ**

**ಫ್ಲಾಡೆನ್** (Flodden) ಎಂಬ ಹೆಸರಿನ ಮೈದಾನದಲ್ಲಿ ಕದನಕ್ಕೆ ನಿಂತನು. ಕದನವು ಜೋರಾಗಿ ರೇಗಿತು. ಜೇಮ್ಸ್‌ಕಡೆಯವರು ಎಷ್ಟು ಸಾಹಸಪಟ್ಟರೂ ಗೆಲುವಾಗಲಿಲ್ಲ. ಜೇಮ್ಸಿಗಿಂತಲೂ ಸರ್ರೆಯು ದಳಪತಿತನದಲ್ಲಿ ಮೇಲಾಗಿದ್ದನು. ಸ್ಕಾಟರ ಸೈನ್ಯವು ನಾಶವನ್ನೇ ಹೊಂದಿತು;

ಜೇಮ್ಸ್‌ದೊರೆಯು ತನ್ನ ಆಪ್ತೇಷ್ಟರೊಡನೆ ಯುದ್ಧಭೂಮಿಯಲ್ಲಿ ಒರಗಿದನು. ಅನೇಕ ಸ್ಕಾಟ್‌ಶ್ರೀಮಂತರೂ ಮಡಿದರು. ಮರಾಟೆಯವರ ಚರಿತ್ರೆಯಲ್ಲಿ ಮೂರನೆ ಪಾಣಿಪಟಕದನ ಹೇಗೋ ಸ್ಕಾಟರಚರಿತ್ರೆಯಲ್ಲಿ ಈ ಫ್ಲಾಡೆನ್‌ಕದನ ಹಾಗೆ.

ಸ್ಕಾಟ್ಲೆಂಡಿನ 4ನೆ ಜೇಮ್ಸ್ ಈರೀತಿಮೃತನಾದಾಗ ಆತನಿಗಿದ್ದುದು ಒಂದು ಗಂಡುಮಗು. ಆ ಮಗು **5ನೆ ಜೇಮ್ಸ್** ಎಂಬ ಹೆಸರಿನ ದೊರೆಯಾಗಬೇಕಾಯಿತು. ಆಗ ರಾಣಿಯಾಗಿದ್ದ **ಮಾರ್ಗರೆಟ್ ರೀಜಂಟ್** ಆದಳು. ಆಕೆಯು ಕೂಡಲೆ ಒಪ್ಪಂದಮಾಡಿಕೊಂಡು ಜಗಳವನ್ನು ನಿಲ್ಲಿಸಿದಳು. ಅತ್ತ ಪೋಪನಪರವಾಗಿ ಫ್ರೆಂಚರೊಡನೆ ಹೆನ್ರಿ ಸ್ವಯಂ ನಡೆಸಿದ ಯುದ್ಧದಲ್ಲಿ ಸತ್ಕೀರ್ತಿ ದೊರೆಯಲಿಲ್ಲ; ಸಹಾಯಕ್ಕೆ ಬರುತ್ತೇವೆಂದು ಹೇಳಿದ್ದ ಇತರಪ್ರಭುಗಳು ಸ್ವಾರ್ಥಪರರಾಗಿ ದೂರವಾಗಿದ್ದುಬಿಟ್ಟರು. ಯುದ್ಧವನ್ನು ಪ್ರೇರಿಸಿದ **2ನೆ ಜೂಲಿಯಸ್** (Julius II) ಎಂಬ ಹೆಸರಿನ **ಪೋಪನು** ಸತ್ತನು; **10ನೆ ಲಿಯೊ** (Leo X) ಎಂಬ ಹೊಸ **ಪೋಪನು** ಯುದ್ಧವನ್ನು ನಿಲ್ಲಿಸಬೇಕೆಂದಿದ್ದನು. ಫ್ರೆಂಚ್‌ದೊರೆ 12ನೆ ಲೂಯಿ ಇಟಲಿಯನ್ನು ಕಳೆದುಕೊಂಡವನಾಗಿ ತನ್ನ ಕಡೆಗಾಲವನ್ನು ಸಮಾಧಾನವಾಗಿಕಳೆಯಲು ಇಷ್ಟಪಡುತ್ತಿದ್ದನು. ನಡೆದ ಯುದ್ಧದಿಂದ ತೃಪ್ತಿಯಾಗದಿದ್ದರೂ ಹೆನ್ರಿ ಒಪ್ಪಂದಕ್ಕೆ ಮನಕೊಡಬೇಕಾಯಿತು. 1514 ರಲ್ಲಿ ಸ್ಕಾಟ್ಲೆಂಡಿನೊಡನೆಯೂ ಫ್ರಾನ್ಸಿನೊಡನೆಯೂ ಸಮಾಧಾನವಾಯಿತು. ಸ್ನೇಹವನ್ನು ಭದ್ರಪಡಿಸುವಂತೆ ಹೆನ್ರಿ ತನ್ನ ತಂಗಿ **ಮೇರಿಯನ್ನು** ಫ್ರೆಂಚ್‌ದೊರೆ ಲೂಯಿಗೆ ಕೊಟ್ಟು ಮದುವೆನಡೆಸಿದನು. ಇಬ್ಬರು ಸೋದರಿಯರು ಸ್ಕಾಟ್ಲೆಂಡ್‌ಫ್ರಾನ್ಸ್‌ಗಳಲ್ಲಿ ರಾಣಿಯರಾದಮೇಲೆ ಜಗಳವೆಲ್ಲ ನಿಂತಂತಾಯಿತು. ಏಳುವರ್ಷಕಾಲ ಸಮಾಧಾನಸ್ಥಿತಿಯಿತ್ತು.

**ಸಮಾಧಾನ**

ಮುದುಕನಾಗಿದ್ದ 12ನೆ ಲೂಯಿ ಎಷ್ಟುಕಾಲ ಬದುಕಿದ್ದಾನು? 1515ರಲ್ಲಿಯೇ ಆತನು* ತೀರಿಹೋದನು. ಫ್ರಾನ್ಸಿಗೆ **ಹಿರೇ ಫ್ರಾನ್ಸಿಸ್** (Francis I) ಎಂಬ ಹೊಸ ರಾಜನಾದನು. ಯೌವನಸಾಮರ್ಥ್ಯಸಾಹಸಗಳಿಂದ ಕೂಡಿದ್ದ ಫ್ರಾನ್ಸಿಸ್ ಪಟ್ಟವನ್ನೇರಿದಕೂಡಲೆ ಇಟಲಿಯಕಡೆ ದಂಡೆತ್ತಿಹೊರಟು **ಮರಿಗ್ನೇನೊ** (Marignano) ಎಂಬ ಭಾರಿಕದನದಲ್ಲಿ ಜಯಶಾಲಿಯಾಗಿ 12ನೆ ಲೂಯಿ ಕಳೆದುಕೊಂಡಿದ್ದ **ಮಿಲನ್** (Milan) ಪ್ರಾಂತವನ್ನು ತನ್ನರಾಜ್ಯಕ್ಕೆ ಸೇರಿಸಿಕೊಂಡನು. ಇಟಲಿಯಲ್ಲಿ ಫ್ರೆಂಚರ ಪ್ರಾಬಲ್ಯವು ಪುನಃ ತೋರಿಕೊಂಡಿತು. 1516ರಲ್ಲಿ ಸ್ಪೈನಿನರಾಜ ಫರ್ಡಿನೆಂಡ್ ಸತ್ತನು. ಆತನ ಹಿರೇಮಗಳಮಗ **ಚಾರ್ಲ್ಸ್** (Charles) ಎಂಬ ಯುವಕನು

---

* ಈ ವೃದ್ಧನನ್ನು ಮದುವೆಯಾಗಿದ್ದ **ಮೇರಿ** ಇಂಗ್ಲಂಡಿಗೆ ಹಿಂತಿರುಗಿಬಂದಮೇಲೆ ಸಫಕ್ಕಿನ ಡ್ಯೂಕನನ್ನು ಮದುವೆಯಾದಳು.

ಸ್ಪೈನಿನ ಪಟ್ಟವನ್ನೇರಿದನು. ಈ ಚಾರ್ಲ್ಸ್ ಫ್ರಾನ್ಸಿನದೊರೆಯಂತೆಯೇ ಯೌವನ ಸಾಮರ್ಥ್ಯಗಳಿಂದ ಕೂಡಿದ್ದನು. ತಾಯಿಯಕಡೆ ಫರ್ಡಿನೆಂಡಿಗೂ ತಂದೆಯಕಡೆ ಮ್ಯಾಕ್ಸಿಮಿಲಿಯನ್ನಿಗೂ ಮೊಮ್ಮಗನಾಗಿ ಇಬ್ಬರಿಗೂ ಏಕಮಾತ್ರವಾರಸುದಾರನಾದವನು.

**ಯುವಕ ಪ್ರಭುಗಳು**

1519 ರಲ್ಲಿ ಚಕ್ರವರ್ತಿ ಮ್ಯಾಕ್ಸಿಮಿಲಿಯನ್ನನೂ ಕಾಲವಶನಾದನು. ಆಗ ಚಾರ್ಲ್ಸ್ ಯೂರೋಪಿಗೆಲ್ಲ ಅತಿಪ್ರಬಲ ಪ್ರಭುವಾದನು. ಮ್ಯಾಕ್ಸಿಮಿಲಿಯನ್ನಿನಿಂದ ಆಸ್ಟ್ರಿಯ, ಹಂಗರಿ ಮುಂತಾದ ಮಧ್ಯಯೂರೋಪ್‌ರಾಜ್ಯಗಳನ್ನೂ ಫ್ರಾನ್ಸಿಗೆ ಉತ್ತರದಲ್ಲಿ ನೆದರ್ಲಂಡ್ಸ್ ಎಂಬ ಪ್ರದೇಶವನ್ನೂ ಪಡೆದನು. ಫರ್ಡಿನೆಂಡಿನಿಂದ ಸ್ಪೈನ್, ನೇಪಲ್ಸ್‌ಗಳನ್ನಲ್ಲದೆ *ದಿನೇದಿನೇ ವಿಸ್ತಾರವಾಗುತ್ತಿದ್ದ ಅಮೆರಿಕಾಖಂಡದಲ್ಲಿನ ಸಾಮ್ರಾಜ್ಯವನ್ನೂ ಪಡೆದನು.




*ಕೊಲಂಬಸ್ ಕಂಡ ದ್ವೀಪಾಂತರಪ್ರದೇಶಗಳು ಸ್ಪೈನಿಗೆ ಸೇರಿದವು. ವೆಸ್ಟಿಂಡೀಸ್, ಮೆಕ್ಸಿಕೋ, ಮಧ್ಯಅಮೆರಿಕಾ ಮುಂತಾದ ಕ್ಷೇತ್ರಗಳನ್ನು ಸ್ಪಾನಿಷರು ಜಯಿಸಿ ಸಾಮ್ರಾಜ್ಯವನ್ನು ಕಟ್ಟಿ ವಿಸ್ತರಿಸುತ್ತಿದ್ದರು. ಪೋಪನ ತೀರ್ಮಾನದಂತೆ ಅಮೆರಿಕವೆಲ್ಲವೂ ಅವರದೇ ಆಗಿತ್ತು.

ಅತಿಸ್ವಲ್ಪಕಾಲದಲ್ಲಿಯೇ ಫ್ರಾನ್ಸಿಸ್ I ಮತ್ತು ಚಾರ್ಲ್ಸ್ V ಎಂಬಿಬ್ಬರಿಗೆ ದೊಡ್ಡ ಸ್ಪರ್ಧೆ ತೋರಿತು. ಇಟಲಿಯನ್ನು ಗೆದ್ದುಕೊಳ್ಳುವ ಆಸೆಯೊಂದೇ ನಿರಂತರ ವ್ಯಾಜ್ಯಕ್ಕೆ ಸಾಕಾದಷ್ಟು ಕಾರಣವಾಗಿತ್ತು. ಹಾಗಿರುವಲ್ಲಿ ಚಕ್ರವರ್ತಿಬಿರುದಿಗೆ ಇಬ್ಬರೂ ಆಸೆಪಟ್ಟು ಚುನಾವಣೆಗೆ ನಿಂತರು. ಚುನಾವಣೆಗೊಳಗಾದ ಈ ಚಕ್ರವರ್ತಿ ಪದವಿಯು ಹಿಂದಿನಿಂದ ಯೂರೋಪಿನಲ್ಲಿ ನಡೆದುಬಂದಿದ್ದ ಒಂದು ವಿಚಿತ್ರಪದ್ಧತಿ. ಬಿರುದುವಿನಾ ಮತ್ತೇನೂ ಚುನಾವಣೆಗೊಳಗಾಗಿರಲಿಲ್ಲ. ಸಾಧಾರಣವಾಗಿ **ಹ್ಯಾಪ್ಸ್ ಬುರ್ಗ್** (Hapsburg) ವಂಶದಲ್ಲಿಯೇ ಆ ಪದವಿಯು ನಡೆದುಬರುತ್ತಿತ್ತು. ಆ ವಂಶಕ್ಕೆಸೇರಿದಚಾರ್ಲ್ಸ್ ಚಕ್ರವರ್ತಿಪದವಿಗೇರಿದ್ದೇಆದರೆ ಅನೇಕರಾಜ್ಯಗಳಿಗೊಡೆಯು ನಾಗಿ ಮೊದಲೇ ಪ್ರಬಲನಾದಾತನು ಇನ್ನೂ ಪ್ರಬಲನಾಗಿ ಸಣ್ಣಪುಟ್ಟ ರಾಜ ರನ್ನು ಮುಳುಗಿಸಿಬಿಡಬಹುದೆಂಬ ಅಂಜಿಕೆ ಅನೇಕರಲ್ಲಿ ಹುಟ್ಟಿತು. ಫ್ರಾನ್ಸಿಸ್ ಆ ಪದವಿಯನ್ನು ಹೊಂದಿದರೆ ಚಾರ್ಲ್ಸ್‌ಗೆಸಮನಾದ ಒಬ್ಬ ವೈರಿಯಾದರೂ ಇದ್ದು ಚಾರ್ಲ್ಸ್ ಅತಿಯಾಗಿವರ್ತಿಸದಂತೆ ಅಡ್ಡಿಮಾಡಬಲ್ಲನೆಂಬ ಆಸೆ ಅವರಿಗೆ.

**ಅತಿಪ್ರಾಬಲ್ಯ ನಿವಾರಣೆ**

ಅನೇಕ ರಾಜರು ನೆರೆಹೊರೆಯವರಾಗಿ ಬಾಳುವ ಸಂದರ್ಭದಲ್ಲಿ ಯಾರಾದರೊಬ್ಬರು ಅತಿಪ್ರಬಲರಾದರೆ ಇತರರೆಲ್ಲರಿಗೂ ಆಪತ್ತು. ಅಂತಹ ಆಪತ್ತು ತೋರದಿರಲು ಸಂಧಾನಮಾಡಿ ಅತಿಪ್ರಾಬಲ್ಯಕ್ಕೆ ಯಾರೂ ಏರದಂತೆ ನೆರವೇರಿಸುವ ಭೇದೋಪಾಯ ವೊಂದೇ ಜಾಣ್ಮೆಯ ದಾರಿ. ಈ ಅತಿಪ್ರಾಬಲ್ಯನಿವಾರಣೆಯನ್ನು ಐರೋಪ್ಯಚರಿತ್ರೆ ಯಲ್ಲಿ **ಬ್ಯಾಲೆನ್ಸ್ ಆಫ್ ಪವರ್** (Balance of Power) ಅಥವಾ ಪ್ರಾಬಲ್ಯ ಸಮತ್ವವೆಂದು ಕರೆಯುವರು. ಆ ಉದ್ದೇಶವೂ ಅದಕ್ಕೆ ತಕ್ಕ ಉಪಾಯಸಾಧನೆ ಗಳೂ ಫ್ರಾನ್ಸಿಸ್ ಚಾರ್ಲ್ಸ್ ಪ್ರಭುಗಳ ಹಗೆತನದವೇಳೆಯಲ್ಲಿಯೇ ಎಲ್ಲ ರಾಜರಿಗೂ ಅಗತ್ಯವಾಯಿತು.

ದೂರಾಲೋಚನಾಪರನಾದ ವುಲ್ಸಿಗೆ ಈ ಜಾಣತನದ ದಾರಿಯೊಪ್ಪಿತು. ಪರಸ್ಪರ ಸ್ಪರ್ಧಿಗಳಿಬ್ಬರೂ ಸರಿಸಮಾನರಾಗಿರುವಂತೆ ಉಪಾಯಮಾಡುತ್ತಿರಬೇಕೆಂಬ ನೀತಿ ಯನ್ನು ವುಲ್ಸಿ ಹಿಡಿದು ಹೆನ್ರಿಗೆ ಅದರಂತೆಯೇ ಸಲಹೆ ಕೊಟ್ಟನು. ಇಂಗ್ಲಂಡನ್ನು ಮಧ್ಯಸ್ಥಾನದಲ್ಲಿಟ್ಟು ಸಮಯೋಚಿತವಾಗಿ ಫ್ರಾನ್ಸಿನಕಡೆಯೋ ಸ್ಪೈನಿನಕಡೆಯೋ ಸೇರಿಸುತ್ತಲಿದ್ದರೆ ಅನಾಹುತಗಳನ್ನು ನಿವಾರಿಸಬಹುದೆಂಬ ಮಾತಿಗೆ ಹೆನ್ರಿ ಕಿವಿ ಗೊಟ್ಟನು. ಇತ್ತಸೇರುತ್ತೇವೆ, ಅತ್ತಸೇರುತ್ತೇವೆ ಎನ್ನುತ್ತ ಹೆನ್ರಿ ವುಲ್ಸಿ ಇಬ್ಬರೂ ಉಪಾಯವನ್ನು ಸಾಧಿಸುತ್ತಿದ್ದು ಫ್ರಾನ್ಸಿಸ್-ಚಾರ್ಲ್ಸ್ ಪ್ರಭು ಗಳಿಗೆ ಮಧ್ಯೆನಿಂತು ಇಂಗ್ಲಂಡಿಗೆ ಗೌರವ ತಂದರು. ಚುನಾ ವಣೆಯಲ್ಲಿ ಜಯಶಾಲಿಯಾಗಿ ಚಕ್ರವರ್ತಿಯಾದ ಚಾರ್ಲ್ಸ್ ಎದುರಿನಲ್ಲಿ ದುರ್ಬಲನಾದ ಫ್ರಾನ್ಸಿಸ್ಸನಪಕ್ಷವನ್ನು ಮೊದಲು ಸೇರಿದರು. 1520 ರಲ್ಲಿ

**ಸಂಧಾನಚಾಪಲ್ಯ**

ಹೆನ್ರಿ ಮತ್ತು ಫ್ರಾನ್ಸಿಸ್ **ಕಲೇಪಟ್ಟಣಕ್ಕೆ** ಸ್ವಲ್ಪದೂರದಲ್ಲಿ ಸೇರಿ (Field of the Cloth of Gold) ಸೋದರರೆಂದೊಬ್ಬರನ್ನೊಬ್ಬರು ಕರೆದು ವೈಭವದಿಂದ ಮೆರೆದು ಪರಸ್ಪರವಾಗಿ ಔತಣವಿನೋದಗಳನ್ನು ನಡೆಸಿದರು. ಆದರೆ ಹೆನ್ರಿಗೆ ಫ್ರೆಂಚ ರಲ್ಲಿ ನಿಜವಾದ ವಿಶ್ವಾಸವಿರಲಿಲ್ಲ. ಚಾರ್ಲ್ಸ್‌ಕಡೆ ಸೇರಿಕೊಂಡರೆ ಚಿರಶತ್ರುಗಳಾದ ಫ್ರೆಂಚರನ್ನು ಚನ್ನಾಗಿಸೋಲಿಸಿ ಹಿಂದೆ ಇಂಗ್ಲಂಡಿಗೆ ಸೇರಿದ್ದ ಪ್ರದೇಶಗಳನ್ನು ಗೆದ್ದು ಕೊಂಡು ರಣದಲ್ಲಿ ಕೀರ್ತಿಪಡೆಯಬಹುದೆಂಬ ಆಸೆಯಿತ್ತು. ಇದರಿಂದ ಕಲೇಬಳಿ ಫ್ರಾನ್ಸಿಸ್ಸಿನೊಡನೆ ಪ್ರಮಾಣಪೂರ್ವಕಸ್ನೇಹಕಟ್ಟಿದ ಸ್ವಲ್ಪಕಾಲದಲ್ಲಿಯೇ **ಗ್ರಾವಲೀನ್ಸ್** (Gravelines) ಎಂಬೆಡೆಯಲ್ಲಿ ಹೆನ್ರಿಯು ಚಾರ್ಲ್ಸ್ ಪ್ರಭುವನ್ನು ಕಂಡು ಆತನೊಡನೆ ಆಪ್ತತೆಯನ್ನು ಕಟ್ಟಿಕೊಂಡನು. ಚಾರ್ಲ್ಸ್ ಹೆನ್ರಿಗೆ ಬಂಧುವಾಗಿದ್ದನು. ಚಾರ್ಲ್ಸ್ ಕಡೆ ಸೇರಿದರೆ ಪ್ರಯೋಜನವೂ ಕಂಡಿತು. ಆದ್ದರಿಂದ ಮೊದಲುಹಿಡಿದ ನ್ಯಾಯ ಸ್ಥಾಪನೆಯ ಮಾರ್ಗವನ್ನು ತೊರೆದನು. ಫ್ರಾನ್ಸಿನೊಡನೆ ಯುದ್ಧಮಾಡಲು ಹೆನ್ರಿ ಸಿದ್ಧನಾದನು. ಚಿರಶತ್ರುವಾದ ಫ್ರಾನ್ಸ್‌ದೇಶದ ಮೈತ್ರಿಯನ್ನು ಕಟ್ಟಿಕೊಳ್ಳುವ ಯೋಚನೆಯನ್ನು ಹೆನ್ರಿ ವುಲ್ಸಿ ಇಬ್ಬರೂ ತಾತ್ಕಾಲಿಕವಾಗಿ ತೊರೆದರು.

ಪ್ರಬಲವೈರಿಗಳಾದ ಚಾರ್ಲ್ಸ್‌ಫ್ರಾನ್ಸಿಸ್ಸರಿಗೆ 1521ರಲ್ಲಿ ಯುದ್ಧ ಮೊದಲಾ ಯಿತು. ಅತಿಪ್ರಬಲನಾಗಿದ್ದ ಚಾರ್ಲ್ಸ್ ಇಟಲಿಯಲ್ಲಿ ಫ್ರೆಂಚರನ್ನು ಎದುರಿಸಿದನು. ಆತನಿಗೆ ಸಹಾಯಮಾಡಲು ಹೆನ್ರಿ ತನ್ನಸೈನ್ಯಗಳನ್ನು ಫ್ರಾನ್ಸಿನಲ್ಲಿ ನುಗ್ಗಿಸಿದನು. 1525 ರಲ್ಲಿ ಚಾರ್ಲ್ಸ್ ಇಟಲಿಯಲ್ಲಿ **ಪೇವಿಯ** (Pavia) ಎಂಬೆಡೆಯಲ್ಲಿ ಫ್ರೆಂಚ್ ದೊರೆಯೊಡನೆ ಕದನವಾಡಿ ಭಾರಿಜಯಪಡೆದನು. ಫ್ರಾನ್ಸಿಸ್ ಪೂರಾಸೋತು ತನ್ನ ಪ್ರಬಲವೈರಿಯ ಕೈಸೆರೆಯಾದನು. ಯುದ್ಧಕೀರ್ತಿಯೆಲ್ಲವೂ ಚಾರ್ಲ್ಸ್‌ಕಡೆ ಸೇರಿತು. ಇಂಗ್ಲಿಷ್

**ಫ್ರಾನ್ಸಿಸ್ಸನ ಸೋಲು**

ಸೈನ್ಯಗಳು ಫ್ರಾನ್ಸಿನಲ್ಲಿ ಯಾವ ಕೀರ್ತಿಯನ್ನೂ ಸಂಪಾದಿಸದಾದವು. ಎಷ್ಟೋ ಆಸೆ ಯಿಂದ ಸೇರಿ ನಡೆಸಿದ ಯುದ್ಧಪ್ರಯತ್ನಗಳಲ್ಲಿ ಕೀರ್ತಿಲಾಭಗಳು ಅನ್ಯರಿಗಾದವೆಂದು ಹೆನ್ರಿ ಖಿನ್ನನಾಗಬೇಕಾಯಿತು. ಸ್ವಂತಶಕ್ತಿಯಿಂದ ಜಯಶಾಲಿಯಾದ ಚಾರ್ಲ್ಸ್ ಹೆನ್ರಿಯನ್ನು ವಿಶೇಷವಾಗಿ ಪುರಸ್ಕರಿಸಲಿಲ್ಲ.

ಆಗ ವುಲ್ಸಿ ಪುನಃ ಹೆನ್ರಿಯ ಮನಸ್ಸನ್ನೊಲಿಸಿಕೊಂಡು ತನ್ನ ಉಪಾಯವನ್ನು ಸಾಧಿಸಲು ಪ್ರಯತ್ನಮಾಡಿದನು. ಫ್ರಾನ್ಸಿಸ್‌ದೊರೆಯನ್ನು ಸೆರೆಮಾಡಿ ಇಟಲಿಯನ್ನು ಸ್ವಾಧೀನಪಡಿಸಿಕೊಳ್ಳುತಲಿದ್ದ ಚಾರ್ಲ್ಸ್ ಯೂರೋಪಿಗೆಲ್ಲ ದೊಡ್ಡರಾಕ್ಷಸನಂತೆ ಇರು ವನೆಂದೂ ದುರ್ಬಲನಾದ ಫ್ರಾನ್ಸಿಸ್ಸನಪಕ್ಷವನ್ನು ಹಿಡಿಯಬೇಕೆಂದೂ ಉಪದೇಶಮಾಡಿ ದನು. ಆಶಾಭಂಗವನ್ನುಹೊಂದಿದ್ದ ಹೆನ್ರಿ ಅದಕ್ಕೊಪ್ಪಿ ಚಾರ್ಲ್ಸ್ ಪಕ್ಷವನ್ನು ತ್ಯಜಿಸಿ ಫ್ರೆಂಚರೊಡನೆ ಸಮಾಧಾನಮಾಡಿಕೊಂಡನು. 1526ರಲ್ಲಿ ಸೆರೆಯಿಂದ ಬಿಡುಗಡೆ ಹೊಂದಿದ್ದ ಫ್ರಾನ್ಸಿಸ್ ತನ್ನ ರಾಜ್ಯವನ್ನುಸೇರಿಕೊಂಡಬಳಿಕ ಏನಾದರೂಮಾಡಿ ನಷ್ಟ

ವಾಗಿದ್ದ ಮಿಲನ್‌ಪ್ರಾಂತವನ್ನು ಸಾಧಿಸಿಕೊಳ್ಳಬೇಕೆಂದಿದ್ದನು. ಇಂಗ್ಲಿಷರು ತನಗೆ ಸಹಾಯವಾಗುವ ಅಂಶವು ಆತನಿಗೆ ಸಂತೋಷಕ್ಕೆ ಕಾರಣವಾದುದೇ. ಆದರೆ ಹಿಂದಿನಸಮಯದಲ್ಲಿ ಕೈಬಿಟ್ಟ ಇಂಗ್ಲಿಷರಮಾತನ್ನು ಮಾತ್ರ ನಂಬಿಕೊಂಡಿರುವುದು ಹೇಗೆಂದು ಆತನಿಗೆ ಸಹಜಚಿಂತೆ. ಆದ್ದರಿಂದ ಇಂಗ್ಲಿಷರಮಾತನ್ನು ಹೆಚ್ಚಾಗಿ ನಂಬದೆ

**ಇಂಗ್ಲಂಡಿನಲ್ಲಿ ಅಲಕ್ಷ್ಯ**

ಇಟಲಿಯಲ್ಲಿ ಪೋಪನೇ ಮುಂತಾದ ಸಣ್ಣಸಂಸ್ಥಾನಿಕರನ್ನು ಒಟ್ಟುಗೂಡಿಸಿ ಚಾರ್ಲ್ಸ್‌ನಮೇಲೆತ್ತಿಗಟ್ಟಲು ಫ್ರಾನ್ಸಿಸ್ ಯತ್ನಿಸಿದನು. ಚಾರ್ಲ್ಸ್‌ನಲ್ಲಿ ಅವರೆಲ್ಲರಿಗೂ ಭಯವಿತ್ತು. ಆದರೆ ಚಕ್ರವರ್ತಿಚಾರ್ಲ್ಸ್‌ಬಲದೆದುರಿಗೆ ಅವರ ಬಲವು ಧ್ವಂಸವಾಗಿ ಹೋಯಿತು. 1527ರಲ್ಲಿ ಚಕ್ರವರ್ತಿಯ ಸೈನ್ಯವು **ರೋಮಕಪಟ್ಟಣ** (Rome)ವನ್ನು ಮುತ್ತಿ ಜಗದ್ಗುರು ಪೋಪನನ್ನು ಸೆರೆಮಾಡಿತು. ಚಾರ್ಲ್ಸ್‌ ಪ್ರಾಬಲ್ಯಕ್ಕೆದುರೇ ಇಲ್ಲದಾಯಿತು. 1529ರವರೆಗೆ ಹಾಗೂಹೀಗೂ ಹೆಣಗಾಡುತ್ತಿದ್ದು ಫ್ರಾನ್ಸಿಸ್ ತನ್ನ ಸೋಲನ್ನೊಪ್ಪಿಕೊಂಡು ಇಟಲಿಯ ಭಾಗವನ್ನು ಹ್ಯಾಪ್ಸ್‌ಬುರ್ಗ್ ಚಾರ್ಲ್ಸ್‌ಗೆ ಬಿಟ್ಟುಕೊಟ್ಟು ಸಮಾಧಾನವನ್ನು ತಂದುಕೊಂಡನು. ಸಹಾಯಮಾಡುವೆವೆಂದು ಮಾತುಕೊಟ್ಟ ಇಂಗ್ಲಿಷರು ಸಮಯದಲ್ಲಿ ಬಾರದಾದರೆಂದು ಎರಡನೆಬಾರಿ ಸಹಜವಾಗಿ ಫ್ರಾನ್ಸಿಸ್ ಎಣಿಸಿದನು. ಅತ್ತ ಚಾರ್ಲ್ಸ್‌ ಇಂಗ್ಲಿಷರ ಶತ್ರುವಾಗಿಯೇ ಇದ್ದು ಪ್ರಚಂಡಜಯಗಳನ್ನು ಪಡೆದನು; ಈ ರೀತಿಯಲ್ಲಿ ಇಬ್ಬರು ಐರೋಪ್ಯಪ್ರಭುಗಳೂ ಇಂಗ್ಲಂಡನ್ನು ತಿರಸ್ಕಾರಮಾಡುವವರಾದರು.

ವುಲ್ಸಿಯ ಯೋಚನೆಗಳೇನೋ ನ್ಯಾಯಪೂರಿತವಾಗಿದ್ದುವು. ಚಿರಕಾಲದ ಶತ್ರುವಾಗಿದ್ದ ಫ್ರೆಂಚ್‌ದೊರೆಯ ಮೈತ್ರಿಯನ್ನು ಕಟ್ಟುವ ಯೋಚನೆಯು ನ್ಯಾಯಸಮ್ಮತವಾದುದಲ್ಲದೆ ದೂರಾಲೋಚನೆಗೊಪ್ಪತಕ್ಕುದಾಗಿಯೂ ಇತ್ತು. ಆದರೆ ದೊರೆಯನ್ನೊಡಂಬಡಿಸುವುದು ಮಾತ್ರ ವುಲ್ಸಿಗೆ ಕಷ್ಟವಾಯಿತು. ದೊಡ್ಡದೊಡ್ಡ ಆಸೆ

**ಆಶಾಭಂಗ**

ಗಳನ್ನು ಬೆಳೆಸಿಕೊಂಡು ಮಹಾಯುದ್ಧಗಳಲ್ಲಿ ಕೀರ್ತಿಯನ್ನು ಪಡೆಯುತ್ತೇವೆಂದು ಹೇಳಿಕೊಂಡ ಮಾತುಗಳು ಪರಿಣಾಮದಲ್ಲಿ ಬಣಜಂಬದ ಮಾತುಗಳಾಗಿ ಹೋದವು. ಬಾರಿಬಾರಿಗೂ ನಡೆಸಿದ ಸಂಧಾನಚಮತ್ಕಾರದಿಂದಾಗಲಿ ಯುದ್ಧಪ್ರಯತ್ನದಿಂದಾಗಲಿ ಗೋಷ್ಪಾದದಷ್ಟು ಲಾಭವಾಗಲಿಲ್ಲ. ಹೆಸರು ಬರುವ ಬದಲು ಕೆಟ್ಟಿತು. ಅತಿಪ್ರಾಬಲ್ಯನಿವಾರಣೆಯು ರಾಜ್ಯಗಳ ಕ್ಷೇಮಕ್ಕೆ ಅವಶ್ಯವೆಂಬ ನೀತಿಯೊಂದು ಮಾತ್ರ ವುಲ್ಸಿಯ ಹೆಸರಿಗೆ ನಿಂತಿತು. ಆತನ ಸಲಹೆಯನ್ನು ತನಗೆ ಸರಿದೋರಿದಾಗ ಮಾತ್ರ ಕೇಳಿದ ದೊರೆ ಕಡೆಕಡೆಗೆ ತನ್ನ ಅತೃಪ್ತಿಗೆ ವುಲ್ಸಿಯನ್ನೇ ನಿಷ್ಠುರಮಾಡುವವನಾದನು.

7ನೆಹೆನ್ರಿ ತುಂಬಿಟ್ಟಿದ್ದ ಬೊಕ್ಕಸವು ಬೇಗಬೇಗನೇ ಬರಿದಾಗುತ್ತಬಂತು. ಪದೇಪದೇ ಯುದ್ಧವಾಡಬೇಕೆಂದು ಹೊರಡುವುದರಲ್ಲಿ ಹಣವೆಚ್ಚವಾಗದೆ ಇರು

ತ್ತದೆಯೋ? 1512 ರಲ್ಲಿಯೇ ಹೆನ್ರಿಗೆ ಹಣದ ಕಷ್ಟ ತೋರಿತು. ಫ್ರಾನ್ಸಿನೊಡನೆ ಯುದ್ಧವೆಂದು ಹೇಳಿ ಪಾರ್ಲಿಮೆಂಟಿನಲ್ಲಿ ಹಣವನ್ನು ಬಯಸಿದಾಗ ರಾಜಭಕ್ತಿ ಪೂರಿತರಾಗಿದ್ದ ಸಭಿಕರು ಕೇಳಿದಷ್ಟನ್ನು ಕೊಡಿಸಿದರು. ಪುನಃ 1522-23ರಲ್ಲಿ ಹೆನ್ರಿ ಹೇರಳವಾಗಿ ಹಣವನ್ನು ಬಯಸಿದನು. ಹೆಚ್ಚು ಹೆಚ್ಚು ತೆರಿಗೆ ಕೊಡಲೊಪ್ಪುವುದಕ್ಕೆ ಜನರಿಗಿಷ್ಟವಿರಲಿಲ್ಲ. ಪಾರ್ಲಿಮೆಂಟಿನವರು ಗೊಣಗುಟ್ಟಿದರು; ವುಲ್ಸಿ ತಾನಾಗಿ ಸಭೆಗೆ ಹೋಗಿ ಸಭಿಕರಿಗೆ ತಕ್ಕಂತೆ ಹೇಳಿದಮೇಲೆ ಸ್ವಲ್ಪವಾಗಿ ಹಣವನ್ನು ಕೊಡಲೊಪ್ಪಿದರು. ಅಸಮಾಧಾನತೋರಿದ ಪಾರ್ಲಿಮೆಂಟ್ ಸಭೆಯನ್ನು ಕರೆಸದೆಯೇ ರಾಜಾಮಂತ್ರಿಗಳಿಬ್ಬರೂ ಆರುವರ್ಷ ಕಳೆದರು. 1525 ರಲ್ಲಿ ಯುದ್ಧಸಮಯ ಪುನಃ ಪ್ರಾಪ್ತವಾಯಿತು. ಭಾರಿಸೈನ್ಯಕಟ್ಟಬೇಕೆಂದು ದೊರೆ ಆಸೆಪಟ್ಟನು. ಆಗ ಪ್ರತಿ ಪ್ರಜೆಯೂ ತನ್ನ ಸಂಪಾದನೆಯಲ್ಲಿ ಆರನೆಯೊಂದುಪಾಲನ್ನು **ಉಚಿತಸಾಲ**ವಾಗಿ ಕೊಡತಕ್ಕುದೆಂದು ಪ್ರಕಟಿಸಿದನು. ಇದಕ್ಕೆಲ್ಲೆಲ್ಲಿಯೂ ಆಕ್ಷೇಪವೇ. ಅಸಮಾಧಾನವು ಬರಬರುತ್ತ ವಿರೋಧವಾಗಿ ಪರಿಣಮಿಸುವಹಾಗಾಯಿತು. ವುಲ್ಸಿ ಎಷ್ಟು ಸಮಾಧಾನ ಹೇಳಿದರೂ ಜನರ ಅಸಂತೋಷ ಕಡಿಮೆಯಾಗಲಿಲ್ಲ. ಕಡೆಗೆ ಹೆನ್ರಿ ಆ ಉಚಿತ ಸಾಲದ ಯೋಚನೆಯನ್ನು ಬಿಡಬೇಕಾಯಿತು. ಜನರು ಕೊಟ್ಟಷ್ಟು ಹಣದಿಂದ ತೃಪ್ತನಾಗಬೇಕಾಯಿತು. ಈ ಸಂದರ್ಭದಲ್ಲಿಯೂ ವುಲ್ಸಿ ನಿಂದೆಗೆ ಸಿಕ್ಕಿದನು. ಶ್ರೀಮಂತ ವರ್ಗದವರಂತೂ ಅವನು ಮಂತ್ರಿಯಾದುದನ್ನು ಸಹಿಸದೆ ಮೊದಲಿನಿಂದಲೂ ದ್ವೇಷಿಸುತ್ತಿದ್ದರು. ವುಲ್ಸಿಯ ಡಾಂಭಿಕಜೀವನವನ್ನು ಕಂಡು ಶ್ರೀಮಂತರು ಅಸೂಯೆಗೊಂಡರು. ಚರ್ಚಿನಲ್ಲಿ ಸೇರಿದವನಿಗೆ ಆಟೋಪವೈಭವಗಳೇಕೆನ್ನುತ್ತಿದ್ದ ಸಾಮಾನ್ಯ ಜನರು ರಾಜನಸುಲಿಗೆಗೆ ವುಲ್ಸಿಯೇ ಕಾರಣನೆಂದು ಭಾವಿಸಿ ದೂಷಿಸಿದರು.

**ಹಣದ ತೊಂದರೆ**

ವುಲ್ಸಿ ಜನಸಾಮಾನ್ಯರಲ್ಲಿ ಹುಟ್ಟಿ ವಿದ್ವಾಂಸನಾದವನು. ಯೂರೋಪಿನಲ್ಲಿ ಆಗಲೇ ತೋರಿಕೊಂಡಿದ್ದ ರಿನೇಸಾನ್ಸ್ ಎಂಬುದು ಇಂಗ್ಲಂಡಿನಲ್ಲಿಯೂ ಮೊದಲಾದುದಕ್ಕೆ ವುಲ್ಸಿಯೇ ನಿದರ್ಶನ. ಮುದ್ರಣಯಂತ್ರವೆಂಬುದು 4ನೆ ಎಡ್ವರ್ಡ್ ಕಾಲದಲ್ಲಿ ಇಂಗ್ಲಂಡಿನಲ್ಲಿ ಮೊದಲಾಗಿತ್ತು. ಪುಸ್ತಕಗಳು ಹೆಚ್ಚಾದವು; ಓದುವವರೂ ಹೆಚ್ಚಿದರು. ಮಧ್ಯಮಕಾಲದ ಗ್ರಂಥಗಳನ್ನಲ್ಲದೆ ಓದಿದವರು ಪುರಾತನವಾದ ಲ್ಯಾಟಿನ್ ಗ್ರೀಕ್ ಗ್ರಂಥಗಳನ್ನೂ ಓದಿದರು. ಅವುಗಳನ್ನು ಓದಿದ ತರುವಾಯ ಸ್ವತಂತ್ರವಾಗಿ ವಿಚಾರಮಾಡಲುಪಕ್ರಮಿಸಿದರು. ತಮ್ಮ ಸ್ಥಿತಿಗತಿಗಳಲ್ಲಿ ಕವಿದಿದ್ದ ಮೌಢ್ಯವನ್ನೂ ಬೆಳೆದಿದ್ದ ದೋಷಗಳನ್ನೂ ಚನ್ನಾಗಿ ಗುರುತಿಸಬಲ್ಲವರಾದರು. ವುಲ್ಸಿಯಂತೆ ವಿದ್ಯಾವಂತರಾದವರು ಮುಖ್ಯವಾಗಿ ತಮ್ಮ ಮತಾಚಾರವಿಚಾರಗಳಲ್ಲಿ ಅನೇಕಾನೇಕ ದೋಷಗಳನ್ನು ಕಾಣುವವರಾದರು.

**ರಿನೇಸಾನ್ಸ್**

ಯೂರೋಪಿನ ಪಶ್ಚಿಮಭಾಗದಲ್ಲೆಲ್ಲ ವ್ಯಾಪಿಸಿ ಮಧ್ಯಮಕಾಲದಲ್ಲಿ ಪ್ರಬಲವಾಗಿದ್ದುದು **ರೋಮನ್ ಕ್ಯಾಥಲಿಕ್** ಮತವ್ಯವಸ್ಥೆ.* ಇದಕ್ಕೆ ರೋಮುಕಪಟ್ಟಣದಲ್ಲಿರುತ್ತಿದ್ದ **ಪೋಪನೇ** ಸರ್ವಶ್ರೇಷ್ಠ. ಆತನ ತರುವಾಯ **ಕಾರ್ಡಿನಲ್, ಆರ್ಚ್ ಬಿಷಪ್, ಬಿಷಪ್** ಎಂಬುವವರು ಆತನಿಂದ ನಿಯುಕ್ತರಾಗಿ ಚರ್ಚುಗಳ ಅಧಿಕಾರಿಗಳಾಗಿರುತ್ತಿದ್ದರು. ಇಂಗ್ಲಂಡಿನಲ್ಲಿ ಊರೂರಿಗೂ ಒಂದೊಂದು ಚರ್ಚಾದರೂ ಇರುತ್ತಿತ್ತು. ದೊಡ್ಡ ಪಟ್ಟಣವಾದರೆ ದೊಡ್ಡ ಚರ್ಚಿರುತ್ತಿತ್ತು.

**ಮತವ್ಯವಸ್ಥೆ**

**ಚರ್ಚು**ಗಳಲ್ಲದೆ ಮತಸಂಬಂಧಪಡೆದ ಬೇರೆ ಸಂಸ್ಥೆಗಳೂ ಇದ್ದವು. ಅವು **ಮಠ**ಗಳು. ಮಧ್ಯಮಕಾಲದಲ್ಲಿ ದೈವಭಕ್ತಿವಿಶೇಷದಿಂದ ಪ್ರೇರಿತರಾದ ಅನೇಕರು ವಿರಾಗಿಗಳ ಗುಂಪುಗಳನ್ನು ಕಟ್ಟಿದರು. ಅವುಗಳನ್ನು ಇತರಭಕ್ತರಲ್ಲದೆ ವ್ಯಸನದಷ್ಟರಾದವರೂ ಸೇರಿ ತಮ್ಮ ಜೀವಿತವನ್ನು ಪ್ರಾರ್ಥನೆ ಪ್ರಾಯಶ್ಚಿತ್ತ ಬಡಜನರ ಆಪನ್ನಿವಾರಣೆಗಳಲ್ಲಿ ಕಳೆಯುತ್ತಿದ್ದರು. ಇಂಗ್ಲಂಡಿನಲ್ಲಿ ಇಂತಹ ಮಠಗಳೂ ಹೇರಳವಾಗಿದ್ದವು. ಅವುಗಳಿಗೂ ಆಸ್ತಿಪಾಸ್ತಿಗಳು ಹೆಚ್ಚಾಗಿ ಕೂಡಿದ್ದವು. ಪ್ರಸಿದ್ಧಯತಿಗಳಿಂದ ಸ್ಥಾಪಿತವಾದ ಗುಂಪುಗಳ ಸನ್ಯಾಸಿಗಳಿಗೆ ಸೇರಿದ ಈ ಮಠಗಳಲ್ಲಿ ಪೋಪಿನಮಾತಿಗೆ ಗೌರವವಿರುತ್ತಿತ್ತು. ಆದರೆ ಪೋಪನ ಅಧಿಕಾರಕ್ಕೆ ಚರ್ಚುಗಳ ಉದ್ಯೋಗಸ್ಥರು ಅಧೀನರಾಗಿದ್ದಂತೆ ಮಠಗಳ ಸನ್ಯಾಸಿಸನ್ಯಾಸಿನಿಯರು ಅಧೀನರಾಗಿರಲಿಲ್ಲ. ರಾಜರಿಗಂತೂ ಚರ್ಚುಗಳ ಮೇಲಾಗಲಿ ಮಠಗಳ ಮೇಲಾಗಲಿ ಅಧಿಕಾರವಿರಲಿಲ್ಲ. ಚರ್ಚುಗಳಲ್ಲಿ ದೊಡ್ಡ ಉದ್ಯೋಗಸ್ಥರನ್ನು ನಿಯಮಿಸುವಾಗ ರಾಜನ ಇಷ್ಟವನ್ನು ಕೇಳುವ ಆಚರಣೆಯಿದ್ದಿತಾದರೂ ಮತಾಚಾರವಿಚಾರಗಳಲ್ಲಿ ಪೋಪನದೇ ಸರ್ವಾಧಿಕಾರವಾಗಿತ್ತು. ಮತಸಂಸ್ಥೆಗಳಿಂದ ಪೋಪನಿಗೆ ಹೇರಳವಾದ ವರಮಾನವು ಸಲ್ಲುತ್ತಲೇ ಇತ್ತು.

ಹಿಂದಿನಕಾಲದಲ್ಲಿ ಪೋಪನಿಗೆ ರಾಜರಮೇಲೆ ಅಧಿಕಾರವಿದ್ದುದು ಆ ಕಾಲಕ್ಕೆ ಅನುಗುಣವಾಗಿತ್ತು. 15ನೆ ಶತಮಾನದಿಂದ ಪೋಪರಲ್ಲಿಯೂ ಮತಾಧಿಕಾರಿಗಳಲ್ಲಿಯೂ ಕ್ಷೀಣತೆಯು ತೋರಿಕೊಂಡಿತು. ಅನೇಕ ಮತಾಧಿಕಾರಿಗಳು ನಿರಕ್ಷರರಾಗಿದ್ದರು; ಕೆಲವರು ದುಷ್ಟರಾಗಿಯೂ ಇದ್ದರು. ಪೋಪನಾದವನು ಜಗದ್ಗುರುವಾಗಿದ್ದು ಕ್ರೈಸ್ತಮತಸ್ಥರನ್ನೆಲ್ಲ ಒಟ್ಟುಗೂಡಿಸಿಕೊಂಡಿರುವುದರ ಬದಲಾಗಿ ಇಟಲಿಯಲ್ಲಿ ಒಂದು ಸಣ್ಣ ಸಂಸ್ಥಾನವನ್ನು ಕಟ್ಟಿಕೊಂಡು ಆ ಸಂಸ್ಥಾನದ ವಿಸ್ತಾರಪ್ರಾಬಲ್ಯಗಳಿಗಾಗಿ ತಪಿಸತಕ್ಕವನಾದನು. ಲೌಕಿಕಜೀವನದ ಆಡಂಬರ ವೈಭವಗಳು ಕ್ರಮವಾಗಿ ಹೆಚ್ಚಿದುವು. ಜಗದ್ಗುರುಸ್ಥಾನದಲ್ಲಿದ್ದಾತನು ಚಿಕ್ಕಸಂಸ್ಥಾನಾಧಿಪತಿಯಾಗಿ ಸಂಧಾನಪರನಾಗಿ ರಾಜರಲ್ಲಿ ತಾನೂ ಒಬ್ಬನಾದನು. ಪೋಪರು ಯುದ್ಧಮಾಡತೊಡಗಿದರು, ಧನಕ್ಕೆ

**ಕ್ಷೀಣತೆ**

* ಈ ವಿವರವನ್ನು ಹಿಂದಿನ ಪುಟಗಳಲ್ಲಿಯೂ (6—7) ಕಾಣಬೇಕು.

ಕೈಯೊಡ್ಡಿದರು, ನೀಚತನವನ್ನೂ ಕಟ್ಟಿಕೊಂಡರು. ಸೋಮಾರಿತನ, ದುರ್ನೀತಿ, ಅತ್ಯಾಚಾರ, ಪಕ್ಷಪಾತ ಮುಂತಾದ ದೋಷಗಳು ವರ್ಧಿಸಿದವು. ಇಂತಹ ಸಮಯದಲ್ಲಿ ರಿನೇಸಾನ್ಸ್ ಎಂಬುದು ಪ್ರಾರಂಭವಾಯಿತು. ಇಟಲಿಯಲ್ಲಿ ಮೊದಲು ತೋರಿಕೊಂಡು ಇತರ ದೇಶಗಳಿಗೂ ಗ್ರೀಕ್‌ಲಾಟಿಗ್ರಂಥಗಳ ವ್ಯಾಸಂಗವು ಹರಡಿತು. ಉತ್ತರಭಾಗದ ದೇಶಗಳಲ್ಲಿ ಗ್ರೀಕ್‌ಲಾಟಿಗ್ರಂಥಗಳ ವ್ಯಾಸಂಗವು ಕಾಲಾನುಕ್ರಮವಾಗಿ **ಮತಾಚಾರಗಳ ಪರೀಕ್ಷೆಗೂ ದೋಷಗಳ ಖಂಡನೆಗೂ** ದೂರ ಕಾರಣವಾಯಿತು.

**ವುಲ್ಸಿಯ ಸಂಸ್ಕಾರ ಪ್ರಯತ್ನ**

ವುಲ್ಸಿ ಸ್ವತಃ ವಿದ್ಯಾವಂತನಾಗಿದ್ದವನು. ಚರ್ಚುಗಳಲ್ಲಿದ್ದ ಹುದ್ದೆದಾರರ ಮೌಢ್ಯವನ್ನೂ ಆಚಾರಗಳ ಅವಿಚಾರತೆಯನ್ನೂ ತಿಳಿದವನು. ಪೋಪನಕಡೆಯವನಾದುದರಿಂದ ನಿದಾನವಾಗಿಯೂ ಕ್ರಮವಾಗಿಯೂ ದೋಷಗಳನ್ನು ದೂರಮಾಡುವ ಮನಸ್ಸು ಆತನಿಗೆ. ಮುಖ್ಯಮಂತ್ರಿಯಾಗಿದ್ದುದರಿಂದ ಈ ಮತಾಚಾರಗಳ ಪರಿಷ್ಕಾರಕ್ಕೆ ಆತನಿಗೆ ಹೊತ್ತು ಇರಲಿಲ್ಲ; ಏನುಮಾಡಿದರೂ ಶ್ರೀಮಂತರ ಅಸೂಯೆ ಹಿಂದೆಯೇ ಇರುತ್ತಿತ್ತು. ಹೀಗಿದ್ದುದರಿಂದ ವುಲ್ಸಿ ಯಾರನ್ನೂರೇಗಿಸದಂತೆ ಉಪಾಯವಾಗಿ ವರ್ತಿಸುವ ಉದ್ದೇಶದಿಂದ ಕೆಲವುಮಠಗಳನ್ನು ಮುಚ್ಚಿಸಿದನು. ಪುರೋಹಿತರಾದವರು ವಿದ್ಯಾವಂತರಾಗಲೆಂಬ ಉದ್ದೇಶದಿಂದ ಒಂದು ಶಾಲೆಯನ್ನು ಸ್ಥಾಪಿಸಿದನು. ಇಷ್ಟುಮಾತ್ರಕ್ಕೆ ಪುರೋಹಿತವರ್ಗದವರು ವುಲ್ಸಿಯನ್ನು ತಮ್ಮ ವೈರಿಯೆಂದು ಭಾವಿಸಿದರು. ಈರೀತಿಯಲ್ಲಿ ಮನವಿದ್ದರೂ ವುಲ್ಸಿ ಹೆಚ್ಚು ಕೆಲಸವನ್ನು ಕೈಕೊಳ್ಳದಿದ್ದನು.

**ವಿದ್ವಾಂಸರ ದಾರಿ**

ವುಲ್ಸಿಯಂತೆಯೇ ಇತರ ವಿದ್ವಾಂಸರು ಕೆಲವರು ಇಂಗ್ಲೆಂಡಿನಲ್ಲಿದ್ದರು. ಅವರಲ್ಲೆಲ್ಲ **ಇರಾಸ್ಮಸ್** (Erasmus) ಎಂಬ ಘನವಿದ್ವಾಂಸನು ಫ್ಲಾಂಡರ್ಸ್‌ಪ್ರಾಂತದವನಾದರೂ ಇಂಗ್ಲಂಡಿನಲ್ಲಿ ವ್ಯಾಸಂಗವನ್ನು ಮಾಡಿ ಬೋಧೆಯನ್ನೂ ಸ್ವಲ್ಪಕಾಲ ಮಾಡಿದನು. ಈತನು " **ಮೂರ್ಖಸ್ತುತಿ** " (In Praise of Folly) ಎಂಬ ಗ್ರಂಥವನ್ನು ಬರೆದು ಮತಾಧಿಕಾರಿಗಳ ವಿಚಾರಹೀನತೆಯನ್ನು ವರ್ಣಿಸಿ ಹಾಸ್ಯಮಾಡಿದವನು. ಈತನಿಗೆ ಸ್ನೇಹಿತನಾಗಿದ್ದು ಇಂಗ್ಲಂಡಿಗೆಲ್ಲ ಭೂಷಣನಾಗಿದ್ದ **ಸರ್ ಥಾಮಸ್ ಮೋರ್** (Sir Thomas More) ಎಂಬ ಇಂಗ್ಲಿಷ ವಕೀಲನೊಬ್ಬಾತನು '**ಯುಟೋಪಿಯ**' (Utopia) ಎಂಬ ಪುಸ್ತಕವನ್ನು ಬರೆದನು. ಆ ಪುಸ್ತಕದಲ್ಲಿ ತನ್ನ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ದುಸ್ಸ್ಥಿತಿಯನ್ನು ಸೂಚಿಸಿ ಆದರ್ಶಸ್ಥಿತಿಯು ಹೇಗಿರಬಹುದೆಂಬುದನ್ನು 'ಎಲ್ಲಿಯೂ ಇಲ್ಲದ ದೇಶ' ವೊಂದರ ವರ್ಣನೆಯಲ್ಲಿ ತೋರಿದನು.

ಮೋರನಂತೆಯೇ ಇನ್ನು ಕೆಲವರು ಇಂಗ್ಲಿಷ್ ವಿದ್ವಾಂಸರು ಧಾರ್ಮಿಕಸ್ಥಿತಿಯ ದೋಷಗಳನ್ನು ತಿಳಿದು ಅವುಗಳನ್ನು ನಿದಾನವಾಗಿ ಸರಿಪಡಿಸಲು ಮನಸ್ಸುಳ್ಳವರಾಗಿದ್ದರು.

ಇಂತಹ ಕಾಲದಲ್ಲಿ ಜರ್ಮನಿಯ ಭಾಗದಲ್ಲಿ **ಮಾರ್ಟಿನ್ ಲ್ಯೂಥರ್** (Martin Luther) ಎಂಬ ಯುವಕನು ಅತಿಶಯವಾದ ದೈವಭಕ್ತಿಯಿಂದ ಕೂಡಿದವನಾಗಿ ವೈರಾಗ್ಯತಾಳಿ ಒಂದು ಮಠವನ್ನು ಸೇರಿದ್ದನು. 1508ರಲ್ಲಿ ಅಲ್ಲಿ ಸರಿಬೀಳದೆ ಲ್ಯೂಥರ್ ಅದನ್ನು ತ್ಯಜಿಸಿ ವಿಟೆನ್ಬರ್ಗಿನಲ್ಲಿ ಪಾಠಕನಾದನು. 1510ರಲ್ಲಿ ರೋಮುಕಪಟ್ಟಣಕ್ಕೆ ಪ್ರಯಾಣಮಾಡಿ ಸ್ವತಃ ಅಲ್ಲಿಯ ಗುರುಗಳ ಅಶ್ರದ್ಧೆಯನ್ನೂ ಅಯೋಗ್ಯತೆಯನ್ನೂ ಕಂಡು ಖತಿಗೊಂಡು ಹಿಂತಿರುಗಿದನು. ಬೈಬಲ್ ಗ್ರಂಥವನ್ನು ಪುನಃಪುನಃ ಓದಿ ಸಮಾಧಾನವನ್ನು ತಂದುಕೊಂಡುದಲ್ಲದೆ ಶುದ್ಧಾಚಾರವಿಚಾರಗಳು ಹೇಗಿರಬೇಕೆಂಬುದನ್ನು ಸ್ಥಿರಪಡಿಸಿಕೊಂಡನು. ಆ ವೇಳೆಗೆ ಹಣವನ್ನು ಕೂಡಿಸಲು ಪೋಪನ ಪರವಾಗಿ ಬಂದ ಗುರುವೊಬ್ಬನು ಪ್ರಾಯಶ್ಚಿತ್ತನಿವಾರಕವಾದ **ಇಂಡಲ್ಜೆನ್ಸಸ್** (Indulgences) ಎಂಬ ಪತ್ರಗಳನ್ನು ಮಾರಲು ಜರ್ಮನಿಯಲ್ಲಿ ಸಂಚಾರಮಾಡಿದನು. ತಪ್ಪುಮಾಡಿದವರು ಪ್ರಾಯಶ್ಚಿತ್ತವನ್ನು ಕೂಡ ತಪ್ಪಿಸಿಕೊಂಡು ಹಣವನ್ನು ಸಲ್ಲಿಸಿ ಕ್ಷಮೆಪಡೆದು ಪುನೀತರಾಗುವ ಈ ವ್ಯಾಪಾರವನ್ನು ಕಂಡು ಲ್ಯೂಥರ್ ಸಹಿಸದಾದನು. ಈರೀತಿ ಕ್ಷಮಾದಾನವು ಸಮ್ಮತವೇ ಅಸಮ್ಮತವೇ ವಾದಮಾಡಬೇಕೆಂದು ಅಲ್ಲಿಯ ಚರ್ಚಿನ ಬಾಗಲಿಗೆ ಚೀಟಿಹಚ್ಚಿ ಪೋಪನಕಡೆಯವರನ್ನು ವಾದಕ್ಕೆ ಕರೆದನು. ದೋಷಗಳನ್ನು ಆಚರಿಸುತ್ತಿದ್ದವರು ವಾದಕ್ಕೆ ಬಂದಾರೇ! ಲ್ಯೂಥರನು ಅಪರಾಧಿಯೆಂದು ಪೋಪನು ಸಾರಿ ಬಹಿಷ್ಕಾರ ಹಾಕಿದನು. ಲ್ಯೂಥರನು ಹೆದರತಕ್ಕವನಾಗಿದ್ದರೆ ಮೂಲೆಯಲ್ಲಿ ಅಡಗಿರಬಹುದಾಗಿತ್ತು; ನಿರ್ಭೀತನೂ ಸತ್ಯವ್ರತನೂ ಆಗಿದ್ದುದರಿಂದ "ಪೋಪನಿಗೆ ಇಂತಹ ಅಧಿಕಾರವೆಲ್ಲಿಂದ ಬಂತು?" ಎಂದು ಆರಂಭಿಸಿ ರೋಮನ್ ಕ್ಯಾಥಲಿಕ್ ಮತವ್ಯವಸ್ಥೆಯನ್ನೇ ಆಕ್ಷೇಪಿಸಿ ದೋಷಗಳನ್ನು ಹೊರಗೆಡಹಿದನು. ಅನೇಕರು ಲ್ಯೂಥರನ ಪಕ್ಷವನ್ನೊಪ್ಪಿಕೊಂಡರು. **ಪ್ರಾಟೆಸ್ಟೆಂಟರು** (Protestants) ತಾವೆಂದು ಪೋಪನ ಅಧಿಕಾರವನ್ನೂ ರೋಮನ್‌ಕ್ಯಾಥಲಿಕ್ ಆಚಾರಗಳನ್ನೂ ವರ್ಜಿಸಿ ಪ್ರತ್ಯೇಕರಾಗಲು ಸಿದ್ಧರಾದರು.

**ಲ್ಯೂಥರ್**

**ಆಕ್ಷೇಪಕರ ಗುಂಪು**

ಲ್ಯೂಥರನ ಮಾರ್ಗ*ವನ್ನು ಒರಟುತನವೆಂದು ಭಾವಿಸಿದವರಲ್ಲಿ ಮುಳ್ಸಿಯೊಬ್ಬನು. ದೊರೆಯಾದ ಹೆನ್ರಿ ಕೂಡ ಸುಶಿಕ್ಷಿತನಾದವನಲ್ಲವೇ? ಲ್ಯೂಥರ್ ಪೋಪನನ್ನು ಪ್ರತಿ

* ಲ್ಯೂಥರನಂತೆಯೇ ರೋಮನ್‌ಕ್ಯಾಥಲಿಕ್ ವ್ಯವಸ್ಥೆಯಿಂದ ಬೇರೆಯಾದವರಲ್ಲಿ **ಅಲ್ರಿಕ್ ಜ್ವಿಂಗ್ಲಿ** (Ulrich Zwingle) ಮತ್ತು **ಜಾನ್‌ಕ್ಯಾಲ್ವಿನ್** (John Calvin) ಎಂಬುವವರೂ ಪ್ರಸಿದ್ಧರು. ಸ್ವಿಟ್ಸರ್ಲಂಡ್ ಮತ್ತು ಫ್ರಾನ್ಸ್ ಭಾಗಗಳಲ್ಲಿ ಅವರ ಅನುಯಾಯಿಗಳಿದ್ದರು.

ಘಟಿಸುತ್ತಿದ್ದಾಗ ಹೆನ್ರಿ ಪೋಪನಪಕ್ಷವನ್ನು ಹಿಡಿದು ಲ್ಯೂಥರಿಗೆ ವಿರೋಧವಾಗಿ ಒಂದು ಪುಸ್ತಕವನ್ನು ಪ್ರಕಟಿಸಿ ಪೋಪನಿಂದ ಒಂದು ಬಿರುದು

**ರಾಜದೃಷ್ಟಿ**

(Feidi Defensor) ಸಂಪಾದಿಸಿಕೊಂಡಿದ್ದನು. ವಾಸ್ತವವಾಗಿ ಹೆನ್ರಿಗೆ ಪೋಪನಲ್ಲಿ ಅವ್ಯಾಜವಾದ ಭಕ್ತಿಯೇನೂ ಇರಲಿಲ್ಲ; ತನಗೆ ಪ್ರಯೋಜನ ತೋರಿದಂತೆ ವರ್ತಿಸುತ್ತಿದ್ದನು. ಮತಾಚಾರಪರಿಷ್ಕರಣದಲ್ಲಿ ನಿದಾನವಾಗಿಯೂ ಉಪಾಯವಾಗಿಯೂ ವರ್ತಿಸಬೇಕೆಂದಿದ್ದ ವುಲ್ಸಿಗೆ ಹೆನ್ರಿಯ ಉದ್ದುರುಟುತನದಿಂದಲೇ ವಿಷಮುಸಮಸ್ಯೆಯೊಂದುಂಟಾಯಿತು. ಯಾವುದೋ ಅಲ್ಪವಿಷಯವು ಮಹತ್ಪರಿಣಾಮಕಾರಕವಾಯಿತು.

ಹೆನ್ರಿ ಕಥರೀನಳನ್ನು ಮದುವೆಯಾಗಿದ್ದನಷ್ಟೆ. ಆ ರಾಣಿಯು ಧರ್ಮಿಷ್ಠೆಯಾಗಿದ್ದಳು. ರಾಜನು ಸ್ಪೈನಿನಸ್ನೇಹವನ್ನು ಬಿಟ್ಟು ಫ್ರಾನ್ಸಿನಸ್ನೇಹಕಟ್ಟಿದಾಗಮಾತ್ರ ವುಲ್ಸಿಯಸಲಹೆಗೆ ವಿರೋಧವನ್ನು ತೋರಿದ್ದಳು. ಬೇರಾವ ವಿಷಯದಲ್ಲಿಯೂ ಆಕೆ ವಿರೋಧವನ್ನು ತೋರಿದವಳಲ್ಲ. ಈ ರಾಣಿಯೊಡನೆ ಸಂಸಾರಕಟ್ಟಿ 17ವರ್ಷಗಳಾಗಿದ್ದವು. **ಮೇರಿ** ಎಂಬ ಮಗಳೊಬ್ಬಳುಮಾತ್ರ ಹುಟ್ಟಿದವರಲ್ಲಿ ಬದುಕಿದ್ದಳು. ಹೀಗಿದ್ದ ಸಂಸಾರದಲ್ಲಿ ಹೆನ್ರಿ ಬೇಸರಗೊಂಡನು. ಅರಮನೆಯಲ್ಲಿ ರಾಣಿಯಗೆಳತಿಯರ ಗುಂಪಿನಲ್ಲಿ ಓಡಾಡುತ್ತಿದ್ದ ಆನ್‌ಬೊಲೇನ್ (Anne Boleyn) ಎಂಬಾಕೆಯನ್ನು ಹೆನ್ರಿ ಕಂಡು ಮೋಹಿಸಿದುದೇ ಆ ಬೇಸರಕ್ಕೆ ಮುಖ್ಯಕಾರಣ.

**ಆನ್‌ಬೊಲೇನ್**

ಆನಳನ್ನು ಮದುವೆಯಾಗಲು ದಾರಿ* ಯಾವುದು? ಆಗ ತಾನು ಮಾಡಿಕೊಂಡಿದ್ದ ಮದುವೆಯು ಅಧರ್ಮವೆಂದು ಹೆನ್ರಿಗೆ ತೋರಿತು; ಆ ಕಾರಣದಿಂದ ಕಥರೀನಳನ್ನು ತ್ಯಾಗಮಾಡಬೇಕೆಂದು ಹೇಳತೊಡಗಿದನು. ತನ್ನ ಅಣ್ಣನ ವಿಧವೆಯನ್ನು ತಾನು ಮದುವೆಯಾದುದು ಅಧರ್ಮವಾಯಿತೆಂದೂ ಆ ಅಧರ್ಮದಿಂದಲೇ ಪುತ್ರಸಂತಾನವಿಲ್ಲವಾಯಿತೆಂದೂ ವುಲ್ಸಿಯೊಡನೆ ಹೇಳಿಕೊಂಡನು. "ಆ ಮದುವೆಗೆ ಹಿಂದಣ ಜಗದ್ಗುರು ಒಪ್ಪಿಗೆ ಕೊಟ್ಟಿರಲಿಲ್ಲವೇ?" ಎಂದರೆ "ಆ ಗುರುಗಳು ತಪ್ಪುಮಾಡಿಬಿಟ್ಟರು. ಪೋಪರೂ ತಪ್ಪುಮಾಡಿ ತಿದ್ದಿಕೊಳ್ಳುವುದಿಲ್ಲವೇ? ಒಬ್ಬ ಪೋಪ್ ಮಾಡಿದುದನ್ನು ಮತ್ತೊಬ್ಬಾತನು ತೊಡೆದುಹಾಕಬಹುದು" ಎನ್ನುವವನಾದನು. ಹೇಗಾದರೂ ಪೋಪನನ್ನೊಪ್ಪಿಸಿ ಕಥರೀನಳನ್ನು ತ್ಯಾಗಮಾಡಿಸುವಂತಹ ಶ್ರೀಮುಖವನ್ನು ಶೀಘ್ರವಾಗಿ ತರಿಸುವಂತೆ ದೊರೆ ವುಲ್ಸಿಯನ್ನು ಕೇಳಿದನು.

---

*ಕ್ರೈಸ್ತರಲ್ಲಿ ಏಕವಿವಾಹವೇ ಸದಾಚಾರ. ಇಬ್ಬರು ಹೆಂಡಂದಿರನ್ನು ಕಟ್ಟಿಕೊಳ್ಳುವುದು ನಿಷೇಧ. ಮುಸಲ್ಮಾನರಲ್ಲಿ ಬಹುಪತ್ನೀತ್ವವುಂಟು; ಹಿಂದೂಮತದಲ್ಲಿ ಸಾಮಾನ್ಯವಲ್ಲವಾದರೂ ಅದಕ್ಕೆ ಆಕ್ಷೇಪವಿಲ್ಲ. ಕ್ರೈಸ್ತಮತಸ್ಥರಲ್ಲಿ ದುರಾಚಾರವೆನಿಸಿದ ಕಾರಣದಿಂದ ಅವರಲ್ಲಿ ಸಾಪತ್ನ್ಯವೆಂಬುದು ಕನಸಿನಲ್ಲಿಯೂ ಇಲ್ಲ.

1527 ರಲ್ಲಿ **7ನೆ ಕ್ಲೆಮೆಂಟ್** (Clement VII) ಎಂಬ ಹೆಸರಿನ ಪೋಪನ ಬಳಿಗೆ ಈ ವಿನಂತಿಯು ತಲಪಿತು. ಆ ವೇಳೆಯಲ್ಲಿ ಪೋಪನು ಚಕ್ರವರ್ತಿಚಾರ್ಲ್ಸ್‌ನ ಸೆರೆಯಾಳಾಗಿದ್ದನು. ಕಥರೀನ್ ಆ ಚಾರ್ಲ್ಸ್‌ಗೆ ಚಿಕ್ಕಮ್ಮನಾದವಳು; ಅಲ್ಲದೆ ಆಗತಾನೆ ಹೆನ್ರಿ ಚಕ್ರವರ್ತಿಯವೈರಿಯೊಡನೆ ಸಖ್ಯವನ್ನು ಕಟ್ಟಿದ್ದನು. ಹೆನ್ರಿಯು ಇಷ್ಟವನ್ನು ಸಲ್ಲಿಸಿಕೊಟ್ಟರೆ ಚಕ್ರವರ್ತಿಚಾರ್ಲ್ಸ್‌ಗೆ ಕೋಪ, ಸಲ್ಲಿಸದೆಹೋದಲ್ಲಿ ಮುಂದೆಂದಾದರೂ ತನ್ನ ಬಿಡುಗಡೆಗೆ ಸಹಾಯಮಾಡಬಹುದಾದ ಹೆನ್ರಿಯಂಥ ರಾಜನಿಗೆ ಅಸಮಾಧಾನ—ಈ ರೀತಿ ಪೋಪನಿಗೆ ಉಭಯ

**ಪೋಪನ ಸಂಕಟ**

ಸಂಕಟ ತೋರಿತು. ನಡೆದ ಮದುವೆಯು ಶಾಸ್ತ್ರಸಂಪ್ರದಾಯಗಳಿಗೆ ನಿಜವಾಗಿ ವಿರುದ್ಧವಾಗಿದ್ದಿತೇ, ಹಿಂದಿನ ಪೋಪ್ ಮಾಡಿದ ನಿಶ್ಚಯವು ತಪ್ಪಾಗಿದ್ದಿತೇ ಮುಂತಾದ ವಿಚಾರಗಳ ಚಿಂತನೆಯು ಪೋಪನ ಮನಸ್ಸಿಗೆ ರಾಜಕೀಯಯೋಚನೆಗಳಷ್ಟು ಹಿಡಿಯಲೇ ಇಲ್ಲ. ಉಭಯಸಂಕಟದ ಸಮಯದಲ್ಲಿ ಆದಷ್ಟು ನಿದಾನವಮಾಡುವುದೇ ಉಪಾಯವೆಂದು ಆ ಪೋಪ್ ನಿಶ್ಚಯಿಸಿದನು. ಪೂರ್ವದಲ್ಲಿ ನಡೆದುದನ್ನೆಲ್ಲ ಪರೀಕ್ಷಿಸಿ ಅಕ್ರಮವೇನಾದರೂ ಕಂಡುಬಂದಲ್ಲಿ ಮದುವೆಯು ಅಧರ್ಮವೆಂದು ನಿಶ್ಚಯಿಸಲು ಒಂದು ವಿಚಾರಣಾಸಭೆಯನ್ನು 1528 ರಲ್ಲಿ ಗೊತ್ತುಪಡಿಸಿದನು. **ಕಾರ್ಡಿನಲ್ ವುಲ್ಸಿ** ಮತ್ತು **ಕಾರ್ಡಿನಲ್ ಕ್ಯಾಂಪೆಗಿಯೋ** (Cardinal Campeggio) ಎಂಬಿಬ್ಬರನ್ನು ಸಭಿಕರಾಗಿ ನಿಯಮಿಸಿ ಅವರಿಬ್ಬರೂ ಲಂಡನ್ನಿನಲ್ಲಿಯೇ **ವಿಚಾರಣೆ**ನಡೆಸಬೇಕೆಂದು ತೀರ್ಮಾನಿಸಿದನು. ತನ್ನ ಆಶ್ರಯದಲ್ಲಿರತಕ್ಕವರೇ ಸಭಿಕರಾದಾಗ ಅನುಕೂಲವಾಗುವು

**ವಿಲಂಬಿತ ವಿಚಾರಣೆ**

ದೆಂದು ಹೆನ್ರಿ ನಂಬಿದನು. ಆದರೆ ಪೋಪನು ಕ್ಯಾಂಪೆಗಿಯೋವಿಗೆ ವಿಚಾರಣೆಯನ್ನು ಆದಷ್ಟು ವಿಳಂಬವಾಗಿ ನಡೆಸತಕ್ಕುದೆಂದು ಗೋಪ್ಯವಾಗಿ ಅಪ್ಪಣೆಕೊಟ್ಟನು. ಅದನ್ನನುಸರಿಸಿ ಆ ಕಾರ್ಡಿನಲ್ 1529ರ ವರೆಗೂ ತಡಮಾಡಿ ಕಡೆಗೆ ಸಭೆ (Decretal Commission) ಯನ್ನು ಮೊದಲು ಮಾಡಿದನು. ಯಾವುದಾದರೂ ಮಠದಲ್ಲಿ ವಿರಕ್ತೆಯಂತೆ ಸೇರಿಬಿಟ್ಟರೆ ಎಲ್ಲ ತೊಂದರೆಯೂ ತಪ್ಪೀತೆಂದು ಕಥರೀನಳಿಗೆ ಸೂಚನೆಕೊಡಿಸಿದರು. ಆಕೆ ಒಪ್ಪಲಿಲ್ಲ. ಆಕೆಗೆ ನ್ಯಾಯಕೊಡಿಸಬೇಕೆಂಬ ಯೋಚನೆಯೇ ಯಾರಿಗೂ ಇರಲಿಲ್ಲ. ಅಂತಹ ವೇಳೆಯಲ್ಲಿ ಪೋಪನು ರೋಮುಕಪಟ್ಟಣದಲ್ಲಿಯೇ ವಿಚಾರಣೆನಡೆಯತಕ್ಕುದೆಂದು ಆಜ್ಞೆಕೊಟ್ಟನು. ರಾಜನಿಗೆ ಕೈಗೆಬಂದ ತುತ್ತು ಬಾಯಿಗಿಲ್ಲದಂತಾಗಿ ವುಲ್ಸಿಯಮೇಲೆ ಕೋಪಬಂತು. ವುಲ್ಸಿ ಮನಸ್ಸುಮಾಡಲಿಲ್ಲವೆಂದು ಬಗೆದು ದೊರೆ ರೇಗಿದನು.

ನಿಜವಾಗಿ ವುಲ್ಸಿ ದೊರೆಗೆ ಅನುಕೂಲಮಾಡಿಕೊಡಬೇಕೆಂದೇ ಯತ್ನಿಸಿದ್ದನು. ನಿದಾನವಾದುದಕ್ಕೆ ವುಲ್ಸಿ ಬಾಧ್ಯನಲ್ಲ. ವುಲ್ಸಿಯ ಮನಸ್ಸಿಗೆ ರಾಜನು ಕಥರೀನಳನ್ನು ತ್ಯಾಗಮಾಡುವುದು ಹಿತವಾಗಿ ತೋರಿದರೂ ಆನ್‌ಬೊಲೇನಳನ್ನು ಮದುವೆಯಾಗು

ವುದು ಹಿತವಾಗಿ ತೋರಲಿಲ್ಲ. ಫ್ರಾನ್ಸ್‌ದೇಶದಮೈತ್ರಿಯನ್ನು ಕಟ್ಟಬೇಕೆಂದಿದ್ದ ವುಲ್ಸಿಗೆ ಫ್ರೆಂಚ್‌ರಾಜಪುತ್ರಿಯನ್ನು ತಂದು ರಾಜನಿಗೆ ಮದುವೆ ಮಾಡಿಸಬೇಕೆಂದಿತ್ತು. ಹೇಗಿದ್ದರೇನು? ಎಷ್ಟು ದೂರಾಲೋಚನಾಪರನಾಗಿದ್ದರೇನು? ಹುಲಿಯಂತಹ ರಾಜನ ಕೋಪಕ್ಕೆ ಸಿಕ್ಕಿದಮೇಲೆ ಉಳಿವೆಲ್ಲಿಯದು? ರಾಜನೊಬ್ಬನನ್ನು ನೆಚ್ಚಿ ವುಲ್ಸಿ ಎಲ್ಲರ ವಿರೋಧವನ್ನೂ ಕಟ್ಟಿಕೊಂಡಿದ್ದನು. ಶ್ರೀಮಂತರು ಅವನಲ್ಲಿ ಅಸೂಯೆಪಡುತ್ತಿದ್ದರು. ಪುರೋಹಿತವರ್ಗದವರು ದ್ವೇಷಿಸುತ್ತಿದ್ದರು. ಜನಸಾಮಾನ್ಯರು ಅವನನ್ನು ಪರಮಡಾಂಭಿಕನೆಂದು ಬಗೆದಿದ್ದರು. ರಾಜನು ಇದನ್ನರಿತಿದ್ದು ಎಲ್ಲರಪರವಾಗಿ ತಾನು ನ್ಯಾಯಮಾಡುವವನಂತೆ ವುಲ್ಸಿಯನ್ನು ಮಂತ್ರಿಪದವಿಯಿಂದ ತೆಗೆದುಹಾಕಿ ಆತನ ಆಸ್ತಿಯನ್ನು ಕಿತ್ತುಕೊಂಡನು. ವುಲ್ಸಿ ಆ ಸಮಯದಲ್ಲಿ ನಮ್ರನಾಗಿ ಯಾರ್ಕ್ ಪಟ್ಟಣಕ್ಕೆಹೊರಟು ಅದುವರೆಗೂ ಆಚರಿಸದಿದ್ದ ವ್ರತನಿಯಮಗಳನ್ನು ಕಠೋರವಾಗಿ ಆಚರಣೆಯಲ್ಲಿ ತಂದುಕೊಂಡನು. ಸ್ವಲ್ಪಕಾಲದಲ್ಲಿಯೇ ಪುನಃ ಅಧಿಕಾರ ಪಡೆಯುವ ಪಿತೂರಿಗೆ ಕಿವಿಗೊಟ್ಟುದರಿಂದ ಹೆನ್ರಿಗೆ ಈತನನ್ನು ಸರ್ವನಾಶಗೊಳಿಸಲು ಆಸ್ಪದ ದೊರಕಿತು. ರಾಜನು ರಾಜದ್ರೋಹದ ಆಪಾದನೆ ಹೊರೆಸಿ ವುಲ್ಸಿಯನ್ನು ಹಿಡತರಿಸಿದನು. ಲಂಡನ್ನಿಗೆ ಪ್ರಯಾಣಮಾಡುತ್ತ ವುಲ್ಸಿ ಅಸ್ವಸ್ಥತೆಯಿಂದ ನರಳುತ್ತ "ದೊರೆಯ ಸೇವೆಯಲ್ಲಿ ನಾತೋರಿದ ಶ್ರದ್ಧೆಯಲ್ಲಿ ಒಂದುಪಾಲನ್ನಾದರೂ ದೇವರ ಸೇವೆಯಲ್ಲಿ ತೋರಿದ್ದರೆ ಈ ವೃದ್ಧಾಪ್ಯದಲ್ಲಿ ಭಗವಂತನು ನನ್ನ ಕೈಬಿಡುತ್ತಿರಲಿಲ್ಲ" ಎನ್ನುತ್ತ ದಾರಿಯಲ್ಲಿ ಪ್ರಾಣಬಿಟ್ಟನು. ಸ್ವಾರ್ಥಪರನಾದ ಹೆನ್ರಿ ವುಲ್ಸಿಯನ್ನು ಕೆಟ್ಟವನೆನಿಸಿ ತಾನೊಳ್ಳೆಯವನೆನಿಸಿದನು. ತನಗೆ ಪ್ರಯೋಜನತೋರಿದಾಗ ತನ್ನ ಸೇವಕರಲ್ಲಿ ಕೃತಘ್ನನಾಗಲು ಹೆನ್ರಿಯು ಹಿಂಜರಿಯುತ್ತಿರಲಿಲ್ಲ.

**ವುಲ್ಸಿಯ ಪತನ**

ವುಲ್ಸಿಯನ್ನೇನೋ ಕೆಲಸದಿಂದ ತಪ್ಪಿಸಿದ್ದಾಯಿತು. ಆದರೆ ರಾಜನು ತನ್ನಿಷ್ಟವನ್ನು ಸಫಲಗೊಳಿಸಿಕೊಳ್ಳುವುದು ಹೇಗೆ? ಹೇಗಾದರೂ ತನಗನುಕೂಲವಾಗಿ ತೀರ್ಮಾನಮಾಡುವಂತೆ ಪೋಪನನ್ನು ಬಲವಂತಗೊಳಿಸಲು ಹೆನ್ರಿ ಇತರ ಮಾರ್ಗಗಳನ್ನು ಯೋಚಿಸಿದನು. ಫ್ರೆಂಚ್‌ರಾಜನ ಸ್ನೇಹವನ್ನು ದೃಢಪಡಿಸಿಕೊಂಡು ಆ ಮೂಲಕ ಪೋಪನನ್ನು ಬಲವಂತಗೊಳಿಸುವ ಪ್ರಯತ್ನವು ನೆರವೇರಲಿಲ್ಲ. ಏಕೆಂದರೆ ಫ್ರಾನ್ಸಿಸ್ ದೊರೆಗೆ ಅದರಿಂದ ಯಾವಪ್ರಯೋಜನವೂ ತೋರಲಿಲ್ಲ. ಮನಬಂದಮಿತ್ರನಾಗಿದ್ದ ಹೆನ್ರಿಗೋಸ್ಕರ ಚಕ್ರವರ್ತಿಚಾರ್ಲ್ಸ್‌ನ ಹಗೆತನವನ್ನು ಹೊಸದಾಗಿ ಏತಕ್ಕೆ ಕಟ್ಟಿಕೊಳ್ಳಬೇಕೆಂದು ಫ್ರಾನ್ಸಿಸ್ ಮುಂದೆಬೀಳಲಿಲ್ಲ. ತರುವಾಯ ಹೆನ್ರಿಯು ತನ್ನ ಪಕ್ಷವಾಗಿ ವಿದ್ಯಾನಿಲಯಗಳ ಪಂಡಿತವರ್ಗದವರನ್ನೂ ಇಂಗ್ಲಂಡಿನ ಪಂಡಿತಪುರೋಹಿತವರ್ಗದವರನ್ನೂ ಕಟ್ಟಲು ತೊಡಗಿ ಆ ಮೂಲಕವಾದರೂ ಪೋಪನಿಂದಾಗಬೇಕಾಗಿದ್ದ ಕೆಲಸ

**ವಿಚ್ಛೇದದ ಸಾಧನೆ**

ವನ್ನು ಸಾಧಿಸಲು ಯೋಚಿಸಿದನು. ವಿಧೇಯರೂ ಭಯಸ್ಥರೂ ಆದ ಪ್ರಜೆಗಳು ತಮ್ಮ ರಾಜನ ಅಭಿಮತಕ್ಕೆ ತಲೆಬಾಗಿದರು. ಆಗಲೂ ಪೋಪನು ಅನುಕೂಲನಾಗಿ ಕಾಣಿಸಲಿಲ್ಲ. ಕಡೆಗೆ ಪೋಪನ ಅಧಿಕಾರವನ್ನೇ ತನ್ನ ರಾಜ್ಯದಲ್ಲಿ ತಪ್ಪಿಸುವ ಆಲೋಚನೆಯನ್ನು ಹೆನ್ರಿ ಬೆಳೆಸಿದನು.

ತಾನು ಹಿಡಿದ ಹಟದಲ್ಲಿ ತನ್ನ ಪ್ರಜೆಗಳ ಬೆಂಬಲವುಂಟೆಂದು ಕಾಣಿಸಿಕೊಡಲು ಹೆನ್ರಿ 1529ರಲ್ಲಿ ಪಾರ್ಲಿಮೆಂಟ್‌ಸಭೆಯನ್ನು ಕರೆಸಿ ದೇವಮಂದಿರಗಳಲ್ಲಿಯೂ ಪುರೋಹಿತವರ್ಗದವರಲ್ಲಿಯೂ ನೆಲೆಸಿದ್ದ ಕೆಲವು ದುರಾಚಾರಗಳನ್ನು ನಿಲ್ಲಿಸತಕ್ಕ ನಿಬಂಧನೆಗಳನ್ನು ರೂಪಗೊಳಿಸಿದನು. ಪ್ರಜಾಪ್ರಮುಖರು ಭಯಭಕ್ತಿಗಳಿಂದ ಕೂಡಿದವರಾಗಿ ರಾಜನ ಇಷ್ಟದಂತೆ ನಡೆದುಕೊಂಡರು. ತರುವಾಯ ರಾಜನು ಪುರೋಹಿತವರ್ಗದವರ ಕೂಟವನ್ನು ಕರೆಸಿ ಅವರ ವರ್ತನೆಯಲ್ಲಿದ್ದ ಯಾವುದೋ ಹಲಕೆಲವು ಅಕ್ರಮಗಳನ್ನೆತ್ತಿ ತನ್ನಲ್ಲಿ ಅವರೆಲ್ಲರೂ ಅಪರಾಧಿಗಳೆಂದು ಸಾಧಿಸಿದನು. ಅವರೆಲ್ಲರೂ ಭಯಪಟ್ಟು ಮಾಡಿದ ತಪ್ಪಿಗಾಗಿ ದಂಡವನ್ನು ತೆರಲೊಪ್ಪಿದರು. ಆದರೆ ರಾಜನು ಅವರನ್ನಷ್ಟುಮಾತ್ರಕ್ಕೇ ಬಿಡಲಿಲ್ಲ. ಇಂಗ್ಲಂಡಿನ ಚರ್ಚುಗಳ ವ್ಯವಸ್ಥೆಯಲ್ಲಿ ರಾಜನೇ ಸರ್ವಶ್ರೇಷ್ಠಾಧಿಕಾರಿ(Royal Supremacy) ಎಂಬಂಶವನ್ನು ಅವರೆಲ್ಲರೂ ಒಪ್ಪಬೇಕಾಗಿಬಂತು. ಪೋಪನ ಅಧಿಕಾರವನ್ನೂ ಆದಾಯವನ್ನೂ ನಷ್ಟಗೊಳಿಸಿದಲ್ಲಿ ಕ್ಲೆಮೆಂಟನು ಅಂಜಿಕೊಂಡು ತನ್ನ ಇಷ್ಟಾರ್ಥವನ್ನು ಸಲ್ಲಿಸಿಕೊಡಬಹುದೆಂದು ಭಾವಿಸಿ ರಾಜನು ಪಾರ್ಲಿಮೆಂಟ್‌ಸಭೆಯಲ್ಲಿ ಆದಾಯವನ್ನು ನಷ್ಟಗೊಳಿಸಲು ಮೊದಲಿಟ್ಟನು. 1532ರಲ್ಲಿ **ಆನೇಟ್ಸ್** (Annates—ಅಂದರೆ ಹೊಸದಾಗಿ ಉದ್ಯೋಗವನ್ನು ಸಂಪಾದಿಸಿಕೊಂಡ ಪುರೋಹಿತವರ್ಗದವರು ಪೋಪಿಗೆ ಕಾಣಿಕೆಯಾಗಿ ಕೊಡುತ್ತಿದ್ದ ಮೊದಲನೆ ವರ್ಷದ ವರಮಾನಗಳು) ಇನ್ನುಮೇಲೆ ರಾಜನಿಗೆ ಸಂದಾಯವಾಗಬೇಕೆಂದು ಕಾನೂನಾಯಿತು. 1533ರಲ್ಲಿ **ಅಪ್ಪೀಲುಗಳ** (Appeals) ಕಾನೂನೆಂಬುದು ರಚನೆಯಾಯಿತು. ಚರ್ಚುಗಳ ಸಂಬಂಧವಾಗಿ ನಡೆಯುತ್ತಿದ್ದ ನ್ಯಾಯವಿಚಾರಣೆಗಳಲ್ಲಿ ಅದುವರೆಗೂ ಕಡೆಯ ತೀರ್ಮಾನದ ಅಧಿಕಾರವು ಪೋಪನದಾಗಿತ್ತು. ಆತನಲ್ಲಿಗೆ ಅನೇಕ ಫಿರ್ಯಾದುಗಳನ್ನು ಜನರೂ ಪುರೋಹಿತರೂ ಹೊರುತ್ತಿದ್ದರು. ಇನ್ನುಮೇಲೆ ಹಾಗೆ ಮಾಡಬಾರದಾಯಿತು. ಈ ಎರಡಂಶಗಳಲ್ಲಿಯೂ ಪೋಪನಿಗೆ ದ್ರವ್ಯನಷ್ಟವಾಯಿತು. ಆಗ ಕ್ಲೆಮೆಂಟ್‌ಪೋಪನು ಕೋಪವನ್ನು ತಾಳಿ ಹೆನ್ರಿಗೆ ವಿರೋಧವನ್ನು ತೋರಿ ಕಥರೀನ್‌ರಾಣಿಯವಿವಾಹವು ಶಾಸ್ತ್ರೀಯವಾದುದೆಂದು ಹೇಳಿ ಕಾಲವಾದನು; ಆತನ ತರುವಾಯ ಪೋಪನ ಪದವಿಗೆ ಬಂದ 3ನೆ ಪಾಲ್ (Paul III) ಎಂಬಾತನು ಹೆನ್ರಿಗೆ ಬಹಿಷ್ಕಾರಹಾಕುವುದಾಗಿ ಹೆದರಿಸಿದನು. ಆಗ ಹೆನ್ರಿಯೂ ಕುಪಿತನಾಗಿ 1534ರಲ್ಲಿ **ಸೂಪ್ರೆಮಸಿ ಕಾನೂನು**

**ರಿಫರ್ಮೇಷನ್ ಪಾರ್ಲಿಮೆಂಟ್** 1529—1534

(Act of Supremacy) ಎಂಬುದನ್ನು ಪಾರ್ಲಿಮೆಂಟಿನಲ್ಲಿ ರಚನೆಗೊಳಿಸಿ ಜಾರಿಗೆ ತಂದನು. ಇಂಗ್ಲಂಡಿನ ಚರ್ಚುಗಳ ವಿಷಯದಲ್ಲಿ ರಾಜನ ಸರ್ವಾಧಿಕಾರವನ್ನೊಪ್ಪದಿದ್ದವರು ರಾಜದ್ರೋಹಿಗಳೆನಿಸುವಂತಾಯಿತು.

ಕ್ಯಾಂಟರ್ಬರಿಯ ಆರ್ಚ್‌ಬಿಷಪ್ ಕೆಲಸವು ಖಾಲಿಬಿತ್ತು. ಆ ಉದ್ಯೋಗಸ್ಥನೇ ಇಂಗ್ಲಂಡಿನ ಪುರೋಹಿತವರ್ಗದವರೆಲ್ಲರಿಗೂ ಅಧ್ಯಕ್ಷನಾದವನು; ರಾಜಾಸ್ಥಾನದಲ್ಲಿ ಹಿಂದಿನಕಾಲದಲ್ಲಿ ಪ್ರಧಾನನಾಗಿದ್ದವನು. ಆ

**ವಿಚ್ಛೇದ ಪ್ರಾಪ್ತಿ**

ಪದವಿಗೆ ರಾಜನು **ಥಾಮಸ್ ಕ್ರ್ಯಾನ್ಮರ್** (Thomas Cranmer) ಎಂಬೊಬ್ಬ ಇಂಗ್ಲಿಷ್‌ವಿದ್ವಾಂಸನನ್ನು ಗೊತ್ತುಮಾಡಿದನು. ಈತನು ಲ್ಯೂಥರನ ಮಾರ್ಗದಲ್ಲಿ ಮನಸ್ಸಿಟ್ಟವನು, ಒಳ್ಳೆ ವಿದ್ವಾಂಸ, ಶ್ರದ್ಧಾಭಕ್ತಿಗಳಿಂದ ಕೂಡಿ ವ್ರತನಿಷ್ಠನಾದವನು; ಆದರೆ ಹೆನ್ರಿಗೆ ಅಂಜುತ್ತಲಿದ್ದವನು. ಈತನನ್ನು ಗೊತ್ತುಮಾಡುವವೇಳೆಯಲ್ಲಿಯೇ ಹೆನ್ರಿ ಆನ್‌ಬೊಲೇನಳನ್ನು ಗೋಪ್ಯವಾಗಿ ಮದುವೆಮಾಡಿಕೊಂಡನು. ಆರ್ಚ್‌ಬಿಷಪ್‌ಪದವಿಗೆ ಬಂದ ಕ್ರ್ಯಾನ್ಮರ್ ಪ್ರಮುಖ ಪಾದ್ರಿಗಳಸಭೆಸೇರಿಸಿ ಕಥರೀನ್‌ರಾಣಿಯ ಎರಡನೆಮದುವೆಯು ಧರ್ಮವಿರುದ್ಧವೆಂದು ನಿಶ್ಚಯಿಸಿ ಪ್ರಕಟಿಸಿದನು; ಆತನ ತೀರ್ಮಾನವೇ ಕಟ್ಟಕಡೆಯ ತೀರ್ಮಾನವಾಗಿ ಏರ್ಪಟ್ಟಿದ್ದಕಾರಣದಿಂದ ಯಾವ ಆಕ್ಷೇಪಣೆಯನ್ನೂ ಎತ್ತದೆ ಎಲ್ಲರೂ ಅದನ್ನೊಪ್ಪಬೇಕಾಯಿತು. ಆರು ವರ್ಷಗಳಿಂದ ಇತ್ಯರ್ಥವಾಗದಿದ್ದ ವಿವಾಹವಿಚ್ಛೇದದ ವಿಚಾರವು ಈ ರೀತಿಯಲ್ಲಿ ನಿರ್ಧರವಾಯಿತು. ಹೆನ್ರಿ ತನ್ನಿಷ್ಟವನ್ನು ಸಾಧಿಸಿಕೊಳ್ಳುವುದರಲ್ಲಿ ಪೋಪನಅಧಿಕಾರವನ್ನೂ ಅದರೊಂದಿಗೆ ರೋಮನ್‌ಕ್ಯಾಥೊಲಿಕ್‌ಚರ್ಚಿನ ಸಂಬಂಧವನ್ನೂ ಇಂಗ್ಲಂಡಿನಲ್ಲಿ ನಾಶಮಾಡಿದನು.

ಇಂಗ್ಲಂಡಿನ ಚರ್ಚುಗಳು ಈ ರೀತಿಯಲ್ಲಿ ಪ್ರತ್ಯೇಕವೂ ಸ್ವತಂತ್ರವೂ ಆದವು. ಜರ್ಮನಿಯಲ್ಲಿ ಲ್ಯೂಥರನ ಮಾರ್ಗದವರು ಪ್ರತ್ಯೇಕರಾದಂತೆ ಇಂಗ್ಲಂಡಿನಲ್ಲಿಯೂ ನಡೆದಹಾಗೆತೋರಿತು. ಆದರೆ ಹೆನ್ರಿಗೆ ಪ್ರಾಟೆಸ್ಟೆಂಟ್‌ಮತಸುಧಾರಣೆಗಳಲ್ಲಿ ಶ್ರದ್ಧೆಯಾಗಲಿ ಅಂಗೀಕಾರವಾಗಲಿ ಇರಲಿಲ್ಲ. ಲ್ಯೂಥರನ ಶಿಷ್ಯರನ್ನು ಉಗ್ರಗಾಮಿಗಳೆಂದೂ ಪೋಪನಭಕ್ತರನ್ನು ಮೂಢರೆಂದೂ ಹೇಳುತ್ತ

**ಹೆನ್ರಿಯ ದಾರಿ**

ಹೆನ್ರಿ ತಾನುಹಿಡಿದ ಮಾರ್ಗವೇ ಹಿತವೆಂದೂ **ಮಧ್ಯಮಾರ್ಗ** (Via Media) ವೆಂದೂ ಹೇಳಲಾರಂಭಿಸಿದನು. ಪೋಪನ ಅಧಿಕಾರವನ್ನು ಕಿತ್ತುಹಾಕಿದುದು ರಾಜಕೀಯರೀತಿಯ ತಿದ್ದುಪಡಿಮಾತ್ರ. ರಾಜ್ಯದ ಸ್ವತ್ತು ರಾಜ್ಯಕ್ಕೇ ಉಳಿಯಿತು; ದ್ರವ್ಯವು ಹೊರಗೋಡುವುದು ನಿಂತಿತು. ಆದರೆ ರಾಜಕೀಯವಾಗಿ ಮೊದಲಾದುದು ಅಲ್ಲಿಗೇ ನಿಲ್ಲಲಿಲ್ಲ. ಕ್ರ್ಯಾನ್ಮರ್ ಮುಂತಾದ ಕೆಲವರಿಗೆ ಪ್ರಾಟೆಸ್ಟೆಂಟ್ ತತ್ತ್ವಗಳಲ್ಲಿ ಆದರವಿತ್ತು. ಆದರೆ ಅನೇಕ ವಿದ್ವಾಂಸರಿಗೂ ಪುರೋಹಿತರಿಗೂ ಪೋಪನ ಶ್ರೇಷ್ಠತೆಯನ್ನು ಒಪ್ಪದಿರುವುದು ಪಾತಕವಾಗಿತೋರಿತ್ತು.

ಸಾಮಾನ್ಯಜನರಂತೂ ಅಜ್ಞಾನದಲ್ಲಿದ್ದು ವಿಚಾರಹೀನರಾಗಿದ್ದರು. ಹುಲಿಯಂತಾಡಿದ ಹೆನ್ರಿ ತನ್ನ ಇಷ್ಟಾರ್ಥಸಾಧನೆಯಲ್ಲಿ ಅಸಮಾಧಾನಗೊಂಡವರನ್ನು ದಂಡನೆಗೆ ಗುರಿ ಮಾಡಿದನು. ರಾಜಾಧಿಕಾರವು ಈ ಸಂದರ್ಭದಲ್ಲಿ ಪರಮೋನ್ನತಿಯನ್ನು ಪಡೆಯಿತು; ಎಲ್ಲ ವಿಷಯಗಳಲ್ಲಿಯೂ ಸರ್ವಶ್ರೇಷ್ಠವಾಯಿತು.

ರಾಚೆಸ್ಟರಿ( Rochester )ನಲ್ಲಿ ಬಿಷಪ್ಪಾಗಿದ್ದ **ಫಿಷರ್** ( Fisher )ಎಂಬಾತನು ಜ್ಞಾನವೃದ್ಧನೂ ವಯೋವೃದ್ಧನೂ ಆಗಿದ್ದನು. ವಿದ್ವಾಂಸನೂ ಆಚಾರ ನಿಷ್ಠನೂ ಆಗಿ ಪೂಜ್ಯನಾಗಿದ್ದನು. ಆತನಿಗೆ ರಾಜನವರ್ತನೆಯು ಸರಿದೋರಲಿಲ್ಲ. ವುಲ್ಸಿ ತೀರಿಹೋದತರುವಾಯ ಚಾನ್ಸೆಲರ್ ಪದವಿಯಲ್ಲಿದ್ದ **ಸರ್ ಥಾಮಸ್ ಮೋರ್** (Sir Thomas More) ಎಂಬ ಪ್ರಸಿದ್ಧವಿದ್ವಾಂಸನಿಗೂ ರಾಜನ ವರ್ತನೆಯು ಹುಷ್ಟವೆನ್ನಿಸಿತು. ಮೋರನು ರಾಜನ ಸರ್ವಶ್ರೇಷ್ಠಾಧಿಕಾರವನ್ನೊಪ್ಪಿಕೊಂಡು ಅಧಿಕಾರದಲ್ಲಿರುವುದಕ್ಕಿಂತ ಅಧಿಕಾರವನ್ನು ಬಿಟ್ಟುಕೊಡುವುದೇ ಮೇಲೆಂದು ನಿಶ್ಚಯಿಸಿ ತನ್ನ ಹುದ್ದೆಯನ್ನು ತ್ಯಜಿಸಿದನು. ಎಲ್ಲರ ಗೌರವಕ್ಕೂ ಪಾತ್ರರಾಗಿದ್ದ ಈ ಇಬ್ಬರು ವಿದ್ವಾಂಸರಿಗೆ ತೊಂದರೆ ಬಂತು. 1533ರಲ್ಲಿ ಆನ್‌ಬೊಲೇನಳಿಗೆ **ಎಲಿಸಬೆತ್** (Elizabeth) ಎಂಬ ಮಗಳು ಹುಟ್ಟಿದಳು. ವಿಯೋಗಕ್ಕೆ ಗುರಿಯಾಗಿದ್ದ ಕಥರೀನಳ ಮಗಳಾದ ಮೇರಿಗೆ ಯಾವಹಕ್ಕೂ ಇಲ್ಲವೆಂದೂ ಮುಂದೆ ಪಟ್ಟಕ್ಕೆ ಎಲಿಸಬೆತ್ತಿಗೆಮಾತ್ರವೇ ಹಕ್ಕುಂಟೆಂದೂ ಸಾಧಿಸಿದ ರಾಜನು 1534ರಲ್ಲಿ ಪಟ್ಟದಧಿಕಾರವನ್ನು ಗೊತ್ತುಮಾಡುವ ಒಂದು ಕಾನೂನನ್ನು ಪಾರ್ಲಿಮೆಂಟಿನಲ್ಲಿ ರಚಿಸಿದನು. ಇದಲ್ಲದೆ ರಾಜಾಧಿಕಾರವನ್ನೊಪ್ಪದಿದ್ದವರು ರಾಜದ್ರೋಹದದಂಡನೆಗೆ ಗುರಿಯಾಗತಕ್ಕುದೆಂಬ ಶಾಸನವೂ ರೂಪಗೊಂಡಿತು. ಮೋರ್ ಮತ್ತು ಫಿಷರ್ ಇಬ್ಬರೂ ಎಲಿಸಬೆತ್ತಿಗಿದ್ದ ಅಧಿಕಾರವು ಮೇರಿಗಿಲ್ಲವೆಂದು ಪ್ರಮಾಣಮಾಡಬೇಕಾಗಿ ಬಂತು. ಎಲಿಸಬೆತ್ ಹಕ್ಕನ್ನು ಅವರು ಒಪ್ಪಿದರು; ಮೇರಿಗೆ ಯಾವಹಕ್ಕೂ ಇಲ್ಲವೆಂದಾಗಲಿ ಪೋಪಿಗೆ ಶ್ರೇಷ್ಠತೆಯಿಲ್ಲವೆಂದಾಗಲಿ ಒಪ್ಪದಾದರು. ಇವರಂತೆಯೇ ಲಂಡನ್ನಿನಲ್ಲಿದ್ದ ಒಂದಾನೊಂದು ಮಠದಸನ್ಯಾಸಿಗಳೂ ರಾಜನಶ್ರೇಷ್ಠತೆಯನ್ನು ಒಪ್ಪಲಿಲ್ಲ. ಇವರೆಲ್ಲರನ್ನೂ ರಾಜನು ರಾಜದ್ರೋಹಿಗಳೆಂದು ಮರಣದಂಡನೆಗೆ ಗುರಿಮಾಡಿದನು. ಜನರು ಹಾಹಾಕಾರಪಡುವಂತಾಯಿತು. ಆದರೆ ಹುಚ್ಚುಹುಲಿಯಂತೆ ತೋರಿದ ಹೆನ್ರಿಯನ್ನು ಕಂಡು ಭಯಪಟ್ಟರು. ಹೆನ್ರಿಯಾದರೋ ತನ್ನ ಅಧಿಕಾರಕ್ಕೆ ಯಾವಬಗೆಯ ಅಡ್ಡಿಯೂ ವಿರೋಧವೂ ತೋರದಂತೆ ನೆರವೇರಿಸಲು ಮನಸ್ಸುಮಾಡಿಕೊಂಡನು.

**ವಿರೋಧಿಗಳ ದಂಡನೆ**

ಈ ಕೆಲಸಕ್ಕಾಗಿ ರಾಜನು ಹೊಸಮಂತ್ರಿಯೊಬ್ಬನನ್ನು ಗೊತ್ತುಮಾಡಿಕೊಂಡನು. ವುಲ್ಸಿಯ ಕೈಕೆಳಗೆ ಉದ್ಯೋಗಸ್ಥನಾಗಿದ್ದ **ಥಾಮಸ್ ಕ್ರಾಮ್ವೆಲ್** (Thomas Cromwell) ಎಂಬಾತನು ಸಮರ್ಥನಾಗಿಯೂ ವಿಧೇಯನಾಗಿಯೂ

ಇದ್ದನು. ಆತನನ್ನು ತನ್ನ ಬಳಿಯಲ್ಲಿಟ್ಟುಕೊಂಡು ರಾಜನು ಮಠಗಳ ಸ್ಥಿತಿಗತಿಗಳ ವಿಚಾರಣೆಯನ್ನು ನಡೆಸುವುದೆಂದು ನಿಯೋಗಿಸಿದನು. ಕ್ರಾಮ್ವೆಲ್ ವಿದ್ವಾಂಸನೇನೋ ಅಲ್ಲ; ಆದರೆ ತನ್ನ ಮೇಲ್ಮೆಯನ್ನು ಸಾಧಿಸುವುದರಲ್ಲಿ ಜಾಣನಾಗಿಯೂ ಕೈಕೊಂಡ ಕೆಲಸದಲ್ಲಿ ದಕ್ಷನಾಗಿಯೂ ಇದ್ದನು. ದೊರೆಯ ಇಂಗಿತವನ್ನು ತಿಳಿದು ಈತನು ಮಠಗಳ ಆಸ್ತಿಪಾಸ್ತಿಗಳನ್ನೂ ಅಲ್ಲಿಯ ವಿರಕ್ತರವರ್ತನೆಯನ್ನೂ ತನಿಖೆಮಾಡಲು ಮೊದಲಿಟ್ಟನು. ಹಿಂದಣಕಾಲದಲ್ಲಿ ಶ್ರೀಮಂತರೂ ಇತರಜನರೂ ಈ ವಿರಕ್ತರಮಠ (Monasteries)ಗಳಿಗಾಗಿ ಅನೇಕದಾನಗಳನ್ನು ಮಾಡಿದ್ದರು. ವಿರಕ್ತರು ಮಠಗಳಲ್ಲಿದ್ದುಕೊಂಡು ಸುತ್ತಮುತ್ತಣ ಜನರಿಗೆ ಅನ್ನದಾನಜ್ಞಾನದಾನಮಾಡುತ್ತ ಶ್ರದ್ಧಾಭಕ್ತಿಗಳಿಂದಿದ್ದು ಧರ್ಮವನ್ನು ಕಾಪಾಡುತ್ತಿದ್ದರು. ವಿರಕ್ತರಕೂಟಗಳೂ ಅನೇಕವಾಗಿದ್ದವು. ಅವರು ತಮ್ಮತಮ್ಮ ಗುಂಪಿನ ಕಟ್ಟಳೆಗಳಿಗೊಳಗಾಗಿ ಯೂರೋಪಿನ ಬೇರೆಬೇರೆಡೆಗಳಲ್ಲಿದ್ದ ಮುಖ್ಯಪೀಠಗಳ ಗುರುಗಳ ವಶವರ್ತಿಗಳಾಗಿರುತ್ತಿದ್ದರು. 15ನೆ ಶತಮಾನದಿಂದೀಚೆಗೆ ಹಲಕೆಲವುಕಾರಣಗಳಿಂದ ವಿರಕ್ತರಗುಂಪುಗಳು ಪ್ರಾಬಲ್ಯವನ್ನು ನೀಗುತ್ತಿದ್ದವು. ವಿರಕ್ತರಾದವರನೇಕರಲ್ಲಿ ಅಜ್ಞಾನವೂ ಅಶ್ರದ್ಧೆಯೂ ತೋರಿಕೊಂಡುದಲ್ಲದೆ ಮಠಗಳಿಗೆ ಜನರು ದಾನಮಾಡುವುದೂ ಕಡಿಮೆಯಾಯಿತು. ವುಲ್ಸಿಯೇ ಇದನ್ನು ತಿಳಿದು ಕೆಲವು ಮಠಗಳ ಆಸ್ತಿಗಳನ್ನು ಕಿತ್ತುಕೊಂಡು ಆ ಮೂಲಕ ಒಂದೆರಡು ಪಾಠಶಾಲೆಗಳನ್ನು ಸ್ಥಾಪಿಸಿದ್ದನು. ವುಲ್ಸಿಯ ಮನಸ್ಸಿನಲ್ಲಿದ್ದುದು ವಿರಕ್ತರ ದುಷ್ಟ ಜೀವನಕ್ಕೆ ಚಿಕಿತ್ಸೆ; ರಾಜನ ಮನಸ್ಸಿನಲ್ಲಿದ್ದುದು ತನ್ನ ಶ್ರೇಷ್ಠಾಧಿಕಾರಸ್ಥಾಪನೆ. ಮಠಗಳಲ್ಲಿದ್ದ ಸನ್ಯಾಸಿಸನ್ಯಾಸಿನಿಯರು ದೇಶದ ಹೊರಗಿದ್ದ ತಮ್ಮ ಗುರುಗಳ ಯಾಜಮಾನ್ಯದಲ್ಲಿದ್ದವರೇ ವಿನಾ ರಾಜನ ಅಧೀನದಲ್ಲಿರಲಿಲ್ಲ: ಪೋಪನಿಗೆ ವಶವರ್ತಿಗಳಲ್ಲದಿದ್ದಾಗ್ಗೂ ಪೋಪನಲ್ಲಿ ಅತಿಶಯಭಕ್ತಿವಿನಯಗಳನ್ನು ಪೋಷಿಸುತ್ತಿದ್ದರು. ತನ್ನ ಅಧಿಕಾರದ ಹೊರಗಿದ್ದವರನ್ನು ಧ್ವಂಸಮಾಡಿಬಿಡುವ ಉದ್ದೇಶದಿಂದ ರಾಜನು ಕ್ರಾಮ್ವೆಲ್ಲನನ್ನು ನಿಯೋಗಿಸಿದನು.

**ವಿರಕ್ತರ ಮಠಗಳು**

ಕ್ರಾಮ್ವೆಲ್ಲನ ಯಾಜಮಾನ್ಯದಲ್ಲಿ ಮಠಗಳತನಿಖೆ 1535ರಲ್ಲಿ ನಡೆಯಿತು. ಅನೇಕೆಡೆಗಳಲ್ಲಿ ವಿರಕ್ತರು ಅಯೋಗ್ಯರಾಗಿ ನೀತಿಹೀನರಾಗಿದ್ದರು. ದೋಷಾರೋಪಣೆಗಾಗಿಯೇ ನಿಯುಕ್ತರಾದ ಅಧಿಕಾರಿಗಳು ಕೆಲವೇಳೆ ಇಲ್ಲದ ದೋಷಗಳನ್ನೂ ಹೊರೆಸಿ ರಾಜನ ಮನಸ್ಸನ್ನು ಮೆಚ್ಚಿಸಿದರು. ಮಠಗಳೆಲ್ಲ ಪಾಪಕೂಪಗಳೆಂದು ಪ್ರಕಟಪಡಿಸಿ ರಾಜನೂ ಮಂತ್ರಿಯೂ 1536ರಲ್ಲಿ ಪಾರ್ಲಿಮೆಂಟಿನಲ್ಲಿ ಮಠಗಳನಾಶಕ್ಕೆ ತಕ್ಕಂತೆ ಶಾಸನಮಾಡಿಸಲು ಉದ್ಯುಕ್ತರಾದರು. £200ಕ್ಕಿಂತ ಕಡಿಮೆ ವಾರ್ಷಿಕವರಮಾನವಿದ್ದ ಮಠಗಳನ್ನು ಕಿತ್ತುಹಾಕಬೇಕೆಂದು ಕಾನೂನಾಯಿತು. ಆ ಮಠಗಳ ಆಸ್ತಿ

**ಮಠಗಳ ನಾಶ**

ಪಾಸ್ತಿಗಳು ರಾಜಸ್ವಕ್ಕೆ ಸೇರಿದವು; ಅಲ್ಲಿಯ ಸನ್ಯಾಸಿವರ್ಗದವರು ಚಲ್ಲಾಪಿಲ್ಲಿಯಾದರು. ಇದರಿಂದ ಜನಸಾಮಾನ್ಯರ ಮನಸ್ಸಿನಲ್ಲಿ ಕಳವಳದೋರಿತು. ಉತ್ತರ ಭಾಗದ ಮಠಗಳಲ್ಲಿ ಯೋಗ್ಯರಾದ ಸನ್ಯಾಸಿಗಳೇ ಇದ್ದು ಜನರಿಗೆ ನಾನಾರೀತಿಯ ಸೇವೆಯನ್ನು ಸಲ್ಲಿಸುತ್ತಿದ್ದರು. ಅಲ್ಲಿಯ ಜನರೂ ಭಯಭಕ್ತಿಯುತರಾಗಿದ್ದರು. ಮಠಗಳು ಹಾಳಾದುದನ್ನು ಕಂಡು ಅವರು ಸಹಿಸದೆಹೋದರು. ಯಾರ್ಕ್‌ಷೈರಿನ ಜನರ ಅಸಮಾಧಾನವು ದಿನೇದಿನೇ ಹೆಚ್ಚಿ ಜನರು ಗುಂಪುಗೂಡಿದರು. **ರಾಬರ್ಟ್ ಆಸ್ಕ್** (Robert Aske) ಎಂಬಾತನು ಅವರ ಮುಖಂಡನಾದನು. ಎಲ್ಲರೂ ಸೇರಿ **ರಾಜನ ಬಳಿಗೆ ಯಾತ್ರೆ** ಹೊರಟಂತೆ ಹೊರಟು ಪೂರ್ವಸ್ಥಿತಿಯನ್ನು ಉದ್ಧರಿಸಿಕೊಡಬೇಕೆಂದು ಅರಿಕೆಮಾಡಿಕೊಳ್ಳುವ ನಿಶ್ಚಯಕ್ಕೆ (Pilgrimage of Grace) ಬಂದರು.

**ಪಿಲ್ಗ್ರಿಮೇಜ್ ಆಫ್ ಗ್ರೇಸ್**

ರಾಜನೊಳ್ಳೆಯವನೆಂದೂ ಮಂತ್ರಿಗಳು ನೀಚರೆಂದೂ ಈ ಜನರ ನಂಬಿಕೆ; ಏಕೆಂದರೆ ರಾಜಭಕ್ತಿಯು ಅವರಲ್ಲಿ ವಿಶೇಷವಾಗಿತ್ತು. ಉತ್ತರದ ಕಡೆಯಿಂದ ಸಾವಿರಾರು ಜನ ಗುಂಪುಕೂಡಿ ಲಂಡನ್ನಿಗೆ ಹೊರಟ ಸುದ್ದಿ ಕೇಳಿ ರಾಜನು ನಾರ್ಫಕ್ಕಿನ ಡ್ಯೂಕ(Duke of Norfolk)ನನ್ನು ಅವರಿಗೆ ಸಮಾಧಾನ ಹೇಳುವಂತೆ ನಿಯೋಗಿಸಿದನು. ಆ ಶ್ರೀಮಂತನು ದಾರಿಯಲ್ಲಿಯೇ ಆ ಜನರನ್ನೆದುರುಗೊಂಡು ಅವರ ಕಷ್ಟಗಳನ್ನು ರಾಜನು ವಿಚಾರಿಸಿ ಪರಿಹರಿಸುವನೆಂದು ಹೇಳಿ ಸಮಾಧಾನಪಡಿಸಿದನು. ಈ ರೀತಿಯಲ್ಲಿ ಜನರ ಗುಂಪು ಚದರಿಹೋಯಿತು. ಇದನ್ನೇ ನೆಪಮಾಡಿಕೊಂಡು ರಾಜನು ಯಾರ್ಕಿನಲ್ಲಿ ಹೊಸದಾಗಿ ನ್ಯಾಯಸ್ಥಾನವೊಂದನ್ನು ಏರ್ಪಡಿಸಿದನು. ತನ್ನ ಉದ್ದೇಶದಲ್ಲಿ ಲೇಶವನ್ನೂ ರಾಜನು ಇದರಿಂದ ಬಿಡಲಿಲ್ಲ. ಆದರೆ ರಾಜನು ಹಿಡಿದಮಾರ್ಗವು ಜನರಿಗೆ ಒಪ್ಪಲಿಲ್ಲವೆಂಬ ಅಂಶವು ಈ ವಿಚಿತ್ರಯಾತ್ರೆಯಿಂದ ಸ್ಫುಟವಾಯಿತು.

ಸ್ವಲ್ಪಕಾಲದಲ್ಲಿಯೇ ದೊಡ್ಡಮಠಗಳಿಗೆ ವಿನಾಶಕಾಲವೂ ಒದಗಿತು. 1536ರಲ್ಲಿ ಕ್ರಾಮ್ವೆಲ್ ಮುಂತಾದ ರಾಜಾಧಿಕಾರಿಗಳು ದೊಡ್ಡದೊಡ್ಡ ಮಠಗಳಲ್ಲಿಯೂ ತಪ್ಪುಗಳನ್ನು ಹುಡುಕಿ ಹೊರೆಸಿದರು; ಸುಳ್ಳುತಪ್ಪುಗಳನ್ನೂ ಆರೋಪಿಸಿದರು.

**ಮಠಗಳ ಆಸ್ತಿಯ ಪರಿಣಾಮ**

ಮೂರುವರ್ಷಗಳಲ್ಲಿ ಮಠಗಳ ಆಸ್ತಿಪಾಸ್ತಿಗಳೆಲ್ಲವೂ ರಾಜನ ಕೈಸೇರಿತು. ಪಾರ್ಲಿಮೆಂಟಿನವರು ಈ ಬಗೆಯ ಅಕ್ರಮಣಕ್ಕೆ ಒಪ್ಪಿದರು. ಹೀಗೆ ಸಿಕ್ಕಿದ ಆಸ್ತಿಯನ್ನು ಹೊಸಹಡಗುಗಳಿಗಾಗಿಯೂ ಹೊಸಬಿಷಪ್ಪರಿಗಾಗಿಯೂ ಉಪಯೋಗಿಸಬೇಕೆಂದು ಮೊದಮೊದಲುಹೇಳುತ್ತಿದ್ದು ಕಡೆಗೆ ರಾಜನು ಆ ಭೂಮಿಗಳಲ್ಲಿ ಕೆಲವನ್ನು ತನ್ನ ಇಷ್ಟಮಿತ್ರರಿಗಾಗಿ ಬಹುಮಾನವಾಗಿಹಂಚಿಬಿಟ್ಟು ಮತ್ತೆಕೆಲವನ್ನು ಮಾರಿಬಿಟ್ಟನು. ಒಟ್ಟುಆಸ್ತಿಯಲ್ಲಿ ಸ್ವಲ್ಪಭಾಗಮಾತ್ರ ಹಡಗುಗಳಿಗೂ ಚರ್ಚುಗಳ ಉದ್ಧಾರಕ್ಕಾಗಿಯೂ ವಿನಿಯೋಗವಾಯಿತು; ಬಹುಭಾಗವು ರಾಜನ ದುಂದುಗಾರಿ

ಕೆಗೆ ಪಾಲಾಯಿತು. ಶ್ರೀಮಂತಸಭೆಯಲ್ಲಿ ಮಠಗಳ ಅಧ್ಯಕ್ಷರು ಇಲ್ಲದಂತಾಯಿತು. ಅವರ ಸ್ಥಳಗಳಲ್ಲಿ ರಾಜನ ಆಶ್ರಿತರಾದ ಹೊಸಶ್ರೀಮಂತರು ಬಂದು ಕುಳಿತುಕೊಳ್ಳ ತಕ್ಕವರಾದರು. ಇದರಿಂದಲೂ ರಾಜನ ಅಧಿಕಾರವು ಬಲಗೊಂಡಿತು. ಆದರೆ ಮಠಗಳ ವಿನಾಶದಿಂದ ಜನಸಾಮಾನ್ಯರಿಗೆ ಕಷ್ಟಗಳುಂಟಾದವು. ಪವಿತ್ರಮಂದಿರ ಗಳು ಹಾಳಾಗಿ ಜನರ ಮನಸ್ಸಿನಲ್ಲಿ ಕಳವಳ ತೋರಿತು. ಮಠಗಳ ಭೂಮಿಗಳನ್ನು ಕೊಂಡ ಹೊಸಸ್ಥಿತಿವಂತರು ತಮ್ಮ ಲಾಭಕ್ಕೆಮಾತ್ರ ಆಸೆಪಟ್ಟು ಕೂಲಿನಾಲಿಮಾಡು ತ್ತಿದ್ದ ಬಡಜನರಿಗೆ ಆಶ್ರಯ ಕೊಡದಾದರು. ಬಡಬಗ್ಗರಿಗೆ ಸನ್ಯಾಸಿಗಳಿಂದ ಸಲ್ಲು ತ್ತಿದ್ದ ದಾನಧರ್ಮಗಳು ನಿಂತುಹೋದವು.

ವಿರಕ್ತರ ಕೂಟಗಳು ಧ್ವಂಸವಾದಮೇಲೆ ಮತಾಚಾರಗಳಲ್ಲಿ ಕೆಲವು ಬದಲಾವಣೆ ಗಳು ತೋರಿದವು. ಮಂದಿರಗಳಲ್ಲಿದ್ದ ಮೂರ್ತಿಗಳು ಮಾಯವಾದವು, ಹಿಂದಿನ ಕಾಲದ ಕೆಲವು ಹಬ್ಬಗಳು ನಿಷಿದ್ಧವಾದವು. ಕ್ರ್ಯಾನ್ಮರ್ ಮತ್ತು ಕ್ರಾಮ್ವೆಲ್ ಇಬ್ಬರೂ ಜರ್ಮನಿಯ ಪ್ರಾಟೆಸ್ಟೆಂಟರಂತೆ ತಾವೂ ನಡೆಸಬೇಕೆಂದು ತವಕಪಟ್ಟು ಚರ್ಚಿನ ಉದ್ಯೋಗಗಳಲ್ಲಿ ಪ್ರಾಟೆಸ್ಟೆಂಟರನ್ನು ನಿಯೋಗಿಸುವಂತೆ ದೊರೆಯನ್ನು ಪ್ರೇರಿಸಿದರು. ಹೆಸರುವಾಸಿಯಾದ **ಹ್ಯೂ ಲಾಟಿಮರ್** (Hugh Latimer) ಮುಂತಾದ ಹಲ ಕೆಲವರನ್ನು ರಾಜನು ಉದ್ಯೋಗಗಳಲ್ಲಿಡಿಸಿದನು. ಆದರೆ ರಾಜನು ಪ್ರಾಟೆಸ್ಟೆಂಟ ರನ್ನು ದಂಡಿಸುತ್ತಲೇ ಇದ್ದನು. ಲ್ಯೂಥರನ ಮಾರ್ಗವನ್ನು ಅವಲಂಬಿಸಿದವ ರನ್ನೂ ತನ್ನ ಸರ್ವಶ್ರೇಷ್ಠಾಧಿಕಾರವನ್ನು ಒಪ್ಪದಿದ್ದವರನ್ನೂ ರಾಜನು ಜೀವಸಹಿತ ಸುಡಿಸುತ್ತಿದ್ದನು; ಇಲ್ಲವೆ ತಲೆಕಡಿಸುತ್ತಿದ್ದನು. ರಾಜನು ನಡೆಸಿದ ಕೆಲಸಗಳಲ್ಲಿ ಪರಿಣಾಮಕಾರಿಯಾಗಿ ಶ್ಲಾಘ್ಯವೆನಿಸಿದುದು ಒಂದೇ. ಏನಂದರೆ **ಬೈಬಲ್ಲಿನ ಇಂಗ್ಲಿಷ್ ಭಾಷಾಂತರ.** **ಟಿಂಡಲ್** (Tyndall) ಎಂಬ ಭಕ್ತನು ಹಿಂದೆಯೇ ಬೈಬಲ್ಲನ್ನು ಇಂಗ್ಲಿಷ್ ಭಾಷೆಗೆ ಪರಿವರ್ತಿಸಿದ್ದನು. ಅದನ್ನು ಕ್ರ್ಯಾನ್ಮರ್ ಪರಿಷ್ಕಾರಗೊಳಿಸಿದಮೇಲೆ ರಾಜನು ಅದನ್ನು ಮುದ್ರಿಸಿ ಪ್ರತಿಚರ್ಚಿನಲ್ಲಿಯೂ ಇಡುವಂತೆ ಅಪ್ಪಣೆಮಾಡಿದನು. ಆದರೆ ಅದೇ ವೇಳೆಯಲ್ಲಿಯೇ ನೆದರ್ಲಂಡ್ಸಿನಲ್ಲಿದ್ದ ಟಿಂಡಲ್ಲನನ್ನು ಹಿಡಿದು ದಂಡಿ ಸುವಂತೆ ಅಲ್ಲಿಯಪ್ರಭು ಚಾರ್ಲ್ಸ್‌ಚಕ್ರವರ್ತಿಗೆ ಹೆನ್ರಿ ಸೂಚಿಸಿದನು. ಸ್ವಾರ್ಥ ಪರನೂ ಉಪಾಯಗಾರನೂ ಆದ ದೊರೆಯು ಪ್ರಾಟೆಸ್ಟೆಂಟರನ್ನು ಹೆಚ್ಚಾಗಿ ಪ್ರೋತ್ಸಾ ಹಿಸಿದರೆ ಜನರ ಅಸಮಾಧಾನಹೆಚ್ಚಿ ತನ್ನಲ್ಲಿ ಅವಿಶ್ವಾಸ ಬೆಳೆಯುವುದೆಂದು ತಿಳಿದನು. ತನ್ನ ಅಧಿಕಾರವನ್ನು ಸ್ಥಾಪಿಸಿ ಸಿಕ್ಕಿದಷ್ಟು ಆಸ್ತಿಪಾಸ್ತಿಯನ್ನು ಕಸಿದುಕೊಂಡಮೇಲೆ ಅತ್ತ ಪ್ರಾಟೆಸ್ಟೆಂಟನಾಗಿಯೂ ಆಗದೆ ಇತ್ತ ರೋಮನ್ ಕ್ಯಾಥಲಿಕ್ಕನಾಗಿಯೂ ಇರದೆ ಅಡ್ಡಗೋಡೆಮೇಲೆ ದೀಪವಿಟ್ಟಂತೆ ತನ್ನ ಮನಸ್ಸಿಗೆ ತೋರಿದಂತೆ ಇದ್ದುಕೊಂಡು 'ಮಧ್ಯಮಾರ್ಗ'ವೆಂದು ಹೇಳಿಕೊಳ್ಳುತ್ತ ಯಾವ ಅಡ್ಡಿಯೂ ಇಲ್ಲದಂತಿದ್ದನು.

**ಸುಧಾರಣೆ**

ಪಾರ್ಲಿಮೆಂಟಿನವರು ರಾಜನನ್ನು ಕಂಡು ಹೆದರಿಕೆಯಿಂದಿದ್ದರು. 1539ರಲ್ಲಿ ಮಠಗಳ ವಿನಾಶವು ಪೂರ್ತಿಯಾದಾಗ ರಾಜನು ತಾನೇ ಸ್ವಂತವಾಗಿ ಪ್ರಕಟನೆಗೊಟ್ಟು ಶಾಸನಗಳನ್ನು ರಚಿಸಬಹುದೆಂದು ಆ ಸಭೆಯವರು ಒಪ್ಪಿಬಿಟ್ಟರು. ಜನರ ಅವಿಶ್ವಾಸದ ಸೂಚನೆಗಳನ್ನು ಕಂಡ ಹೆನ್ರಿಯು ಕ್ರ್ಯಾನ್ಮರ್ ಲ್ಯಾಟಿಮರ್ ಮುಂತಾದವರಿಗೆ ಅದುವರೆಗೂ ಕೊಟ್ಟ ಪ್ರೋತ್ಸಾಹವನ್ನು ನಿಲ್ಲಿಸಿ ಪಾರ್ಲಿಮೆಂಟಿನಲ್ಲಿ* **ಆರಂಶಗಳ ಕಾನೂನು** (Six Articles) ಎಂಬುದನ್ನು ರೂಪಗೊಳಿಸಿ ಜಾರಿಯಲ್ಲಿ ತಂದನು. ರೋಮನ್ ಕ್ಯಾಥೊಲಿಕ್ಕರಿಗೆ ಅವಶ್ಯವೆಂದೂ ಪ್ರಾಟೆಸ್ಟೆಂಟರಿಗೆ ಮೌಢ್ಯವೆಂದೂ ತೋರಿದ ಆರು ಆಚಾರಗಳು ಅವು. ಆರಂಶಗಳಲ್ಲಿ ಹಿಂದಿನ ಆಚಾರಗಳೇ ಇರಬೇಕೆಂದೂ ಅದಕ್ಕೆ ವಿರೋಧತೋರಿದವರು ಅಪರಾಧಿಗಳೆಂದೂ ಕಾನೂನಿನಲ್ಲಿ ಗೊತ್ತಾಯಿತು. ಪ್ರಾಟೆಸ್ಟೆಂಟರಿಗೆ ಅಸಮಾಧಾನ ತೋರಿತು. ಲ್ಯಾಟಿಮರ್ ಕೆಲಸಬಿಟ್ಟು ಕೊಟ್ಟನು. ಹೊಸರೀತಿಯನ್ನು ಅವಲಂಬಿಸಿ ವಿವಾಹಿತನಾಗಬೇಕೆಂದು ಮನಮಾಡಿ ಮದುವೆಯಾಗಿದ್ದ ಕ್ರ್ಯಾನ್ಮರ್ ಆ ಸಂಗತಿಯನ್ನು ರಹಸ್ಯವಾಗಿ ಬಚ್ಚಿಟ್ಟು ತನ್ನ ಹೆಂಡತಿಯನ್ನು ದೇಶಾಂತರಕ್ಕೆ ಕಳುಹಿಸಿದನು. ಪ್ರಾಟೆಸ್ಟೆಂಟರು ವಿಧೇಯರಾಗದೆ ದಂಡನೆಗೊಳಗಾಗಿ ಸೆರೆಮನೆಗಳಲ್ಲಿ ಸೇರಿದರು. ಸ್ವಪ್ರಯೋಜನಸಾಧನೆಯಲ್ಲಿ ಗಟ್ಟಿಗನಾದ ಹೆನ್ರಿ ಜನಸಾಮಾನ್ಯರಲ್ಲಿ ತನ್ನ ಹೆಸರು ಕೆಡಬಹುದೆಂಬುದನ್ನು ತಿಳಿದು ಯಾವ ಸುಧಾರಣೆಗೂ ಅವಕಾಶಕೊಡದೆಹೋದನು.

**ಪೂರ್ವಾಚಾರಗಳ ಅವಲಂಬನೆ**

ಇತರ ಅಂಶಗಳಲ್ಲಿಯೂ ಹೆನ್ರಿ ಅತಿದುಷ್ಟನಾಗಿ ಕಂಡುಬಂದನು. ಆನ್‌ಬೊಲೇನಳನ್ನು ಮದುವೆಯಾಗಿ ಎಲಿಸಬೆತ್ ಎಂಬ ಕುವರಿಯನ್ನು ಪಡೆದ ಸ್ವಲ್ಪಕಾಲದಲ್ಲಿಯೇ ಆ ರಾಣಿಯಲ್ಲಿ ರಾಜನು ದೋಷಾರೋಪಣೆಮಾಡಿದನು. ಹಿರಿಯರಾಣಿಯಾಗಿ ಅನ್ಯಾಯಕ್ಕೆ ಗುರಿಯಾಗಿದ್ದ ಕಥರೀನ್‌ರಾಣಿಯು ದುಃಖದಲ್ಲಿಯೇ ಕೊರಗುತ್ತಿದ್ದು ಅದೇಸಮಯದಲ್ಲಿ ತೀರಿಹೋದಳು. ಅರಮನೆಯಲ್ಲಿ ಓಡಾಡುತ್ತಿದ್ದ **ಜೇನ್‌ಸೀಮೂರ್** (Jane Seymour) ಎಂಬಾಕೆಯನ್ನು ಮದುವೆಯಾಗಬೇಕೆಂದು ರಾಜನ ಮನಸ್ಸಿನಲ್ಲಿ ಆಸೆಹುಟ್ಟಿತ್ತು. 1536ರಲ್ಲಿ ಆನ್‌ರಾಣಿಯು ವಿಚಾರಣೆಗೆ ಗುರಿಯಾಗಿ ಶಿರಚ್ಛೇದ

**ಮೂರನೆ ಮದುವೆ**

---

*ಪೂರ್ವಾಚಾರಗಳಲ್ಲಿ ಮುಖ್ಯವೆನಿಸಿದವು — ಯೂಕರಿಸ್ಟ್ ಹಬ್ಬದಲ್ಲಿ ರೊಟ್ಟಿಮದ್ಯಗಳನ್ನು ಮಾಂಸರಕ್ತಗಳೆಂದು ಭಾವಿಸಿ ಸ್ವೀಕರಿಸುವುದು, ಪಾದ್ರಿಗಳು ಅವಿವಾಹಿತರಾಗಿ ಬ್ರಹ್ಮಚರ್ಯವನ್ನು ಪಾಲಿಸುವುದು, 'ಮ್ಯಾಸ್' ಎಂಬ ಪ್ರಾರ್ಥನೆಗಳನ್ನು ಆಗಿಂದಾಗ್ಗೆ ನಡೆಸುವುದು, ಅವಸಾನಕಾಲದಲ್ಲಿ ಪಾದ್ರಿಯ ಕಿವಿಯಲ್ಲಿ ತಾನುಮಾಡಿದ ಪಾಪಕೃತ್ಯಗಳನ್ನು ಹೇಳಿಕೊಂಡು ಆತನ ಕ್ಷಮೆಯನ್ನು ಪಡೆಯುವುದು; ಪ್ರಾಟೆಸ್ಟೆಂಟರ ದೃಷ್ಟಿಯಲ್ಲಿ ಇವು ದುಷ್ಟವಾದುವೆಂದು ನಿರ್ಣಯ.

ನಕ್ಕೆ ಸಿಕ್ಕಿದಳು. ಆನ್ ರಾಣಿಯು ತಲೆಕೊಟ್ಟ ಮರುದಿನವೇ ರಾಜನು ಜೇನ್ ಸೀಮೂರಳನ್ನು ಮದುವೆಯಾದನು. 1537ರಲ್ಲಿ ಜೇನ್ ಗಂಡುಮಗುವನ್ನು ಹೆತ್ತು ಸ್ವಲ್ಪ ಕಾಲದಲ್ಲಿಯೇ ಕಾಲವಾದಳು. ಗಂಡುಮಗು **ಎಡ್ವರ್ಡ**ನಿಗೇ ಮುಂದಿನ ರಾಜ್ಯಾಧಿಕಾರ ಸ್ಪಷ್ಟವಾಗಿದ್ದಾಗ್ಗೂ ಹೆನ್ರಿ ತವಕಪಟ್ಟು ಎಲಿಸಬೆತ್ ರಾಜಪುತ್ರಿಯ ಕಡೆಯಿಂದ ಅಡ್ಡಿತೋರದಂತೆ ನೆರವೇರಿಸಲು ಕ್ರ್ಯಾನ್ಮರನಿಂದ ಆನ್‌ಬೊಲೀನಳ ಮದುವೆಯು ಧರ್ಮವಿರುದ್ಧವಾದುದೆಂದು ಹೇಳಿಸಿದನು. ಈರೀತಿಯಲ್ಲಿ ಮೇರಿ ಮತ್ತು ಎಲಿಸಬೆತ್ ಇಬ್ಬರು ರಾಜಪುತ್ರಿಯರೂ ತಂದೆಯ ದೌಷ್ಟ್ಯದಿಂದ ಭ್ರಷ್ಟೆಯರೆನಿಸಬೇಕಾಯಿತು. ತನ್ನ ಮನಬಂದಂತೆ ಆಡುತ್ತ ಎದುರಾದವರನ್ನು ಬಲಿಯಿಡುತ್ತಲಿದ್ದ ರಾಜನ ಪ್ರವರ್ತನೆಯನ್ನು ಕಂಡು ಹಲಕೆಲವರು ಗೋಪ್ಯವಾಗಿ ಪಿತೂರಿಗಳನ್ನು ಕಟ್ಟಲು ಯತ್ನಿಸಿ ರಾಜನ ಕೈಗೆ ಸಿಕ್ಕಿ ಶಿರಚ್ಛೇದನಕ್ಕೆ ಗುರಿಯಾದರು. ಮತವಿಷಯದಲ್ಲಿ ರಾಜನ ಪ್ರವರ್ತನೆಯು ಅನೇಕರಿಗೆ ಅಸಮಾಧಾನವನ್ನುಂಟುಮಾಡಿತ್ತು. ಸ್ವಂತಜೀವನದಲ್ಲಂತೂ ರಾಜನು ರಾಕ್ಷಸನಹಾಗೆಯೇ ಕಂಡುಬಂದನು. ಅತ್ಯಂತ ವಿಧೇಯನಾಗಿ ನಡೆದುಕೊಂಡಿದ್ದ ಕ್ರಾಮ್ವೆಲ್ಲನಿಗೆ ಕೂಡ ದುರ್ಗತಿ ತಪ್ಪಲಿಲ್ಲ.

**ಕ್ರಾಮ್ವೆಲ್ಲನ ಯೋಚನೆ**

ಆರಂಶಗಳ ಕಾನೂನು ಜಾರಿಗೆ ಬಂದಮೇಲೆ ಕ್ರಾಮ್ವೆಲ್ಲಿಗೆ ಚಿಂತೆ ಹತ್ತಿತು. ರಾಜನ ವಿಶ್ವಾಸವು ಹಿಂದಿನಷ್ಟಿಲ್ಲದಿದ್ದುದನ್ನು ಕಂಡು ಅದನ್ನು ಭದ್ರಪಡಿಸಿಕೊಳ್ಳಲು ಆತನು ಒಂದು ಯುಕ್ತಿಯನ್ನು ಯೋಚಿಸಿದನು. ಇಂಗ್ಲಂಡಿನಲ್ಲಿ ಪೋಪನ ಅಧಿಕಾರ ತಪ್ಪಿದಮೇಲೆ ಹೊರಗಿನ ರಾಜರ ಮೈತ್ರಿಯು ದೂರದೂರವಾಯಿತು. ಪ್ರಬಲಪ್ರಭುಗಳಾಗಿದ್ದ ಫ್ರಾನ್ಸಿಸ್ ಮತ್ತು ಚಾರ್ಲ್ಸ್ ಇಬ್ಬರೂ ಪೋಪನ ಅಧಿಕಾರವನ್ನುಳಿಸಿಕೊಂಡು ಪ್ರಾಟೆಸ್ಟೆಂಟರಿಗೆ ವಿರೋಧಿಗಳಾಗಿದ್ದರು. ಹೆನ್ರಿಯು ನಡೆಸಿದ ಕೆಲಸವನ್ನು ಕಂಡು ಅವರಿಬ್ಬರೂ ಒಟ್ಟುಗೂಡಿ ಇಂಗ್ಲಂಡಿನಲ್ಲಿ ಪೋಪನಅಧಿಕಾರ ಹಿಂದಿನಂತೆ ಸ್ಥಾಪಿತವಾಗಲು ಪ್ರಯತ್ನಿಸುವ ಯೋಚನೆಮಾಡತೊಡಗಿದರು. ಆ ವೇಳೆಯಲ್ಲಿ ಜರ್ಮನಿಯ ಉತ್ತರಭಾಗದ ಸಂಸ್ಥಾನಿಕರು ಪ್ರಾಟೆಸ್ಟೆಂಟರಾಗಿದ್ದರು. ಇಂಗ್ಲಂಡಿನ ರಾಜನಿಗೂ ಆ ಸಂಸ್ಥಾನಿಕರಿಗೂ ಆಪ್ತತೆಯುಂಟಾದರೆ ಮೇಲೆಂದು ಕ್ರಾಮ್ವೆಲ್ಲಿಗೆ ತೋರಿತು. ಜೇನ್ ಸೀಮೂರ್ ರಾಣಿಯು ತೀರಿಹೋಗಿದ್ದಕಾರಣ ಹೆನ್ರಿಯು ವಿಧುರನಾಗಿದ್ದನು. ಪ್ರಾಟೆಸ್ಟೆಂಟ್ ಸಂಸ್ಥಾನಿಕರಲ್ಲೊಬ್ಬನಾದ **ಕ್ಲೀವ್ಸ್** ಶ್ರೀಮಂತನ(Duke of Cleves) ಮಗಳನ್ನು ಹೆನ್ರಿಗೆ ಮದುವೆಮಾಡಿಸಿದರೆ ತನಗೆ ರಾಜನ ವಿಶ್ವಾಸದ ಸಂಪಾದನೆಯೂ ನಡೆದೀತೆಂದು ಕ್ರಾಮ್ವೆಲ್ ಆಸೆಪಟ್ಟು ಸಂಬಂಧದ ಪ್ರಸ್ತಾಪವನ್ನು ನಡೆಸಿದನು. ರಾಜನು ಒಪ್ಪಿದನು. ಮದುವೆಯೂ ನಿಶ್ಚಿತವಾಗಿ ನಡೆಯಿತು. **ಕ್ಲೀವ್ಸ್ ಶ್ರೀಮಂತನ ಮಗಳು ಆನ್** (Anne of Cleves) ಎಂಬಾಕೆ ಇಂಗ್ಲಂಡಿಗೆ ಬಂದಳು. ಆಕೆಗೆ ಒಳ್ಳೆತನವಿತ್ತು; ರೂಪವಾಗಲಿ ಚಾತುರ್ಯವಾಗಲಿ ಕಾಣಲಿಲ್ಲ. ಆಕೆಯನ್ನು

ಕಂಡಮೇಲೆ ಹೆನ್ರಿಗೆ ಆ ಮದುವೆಬೇಡವಾಯಿತು. ಕ್ರ್ಯಾನ್ಮರನಿಂದ ವಿವಾಹವಿಚ್ಛೇದನವು ಸುಲಭವಾಗಿ ನಡೆದುಹೋಯಿತು. ಆ ಸಂಸ್ಥಾನಿಕರೂ ಅಪ್ತಮೈತ್ರಿಯನ್ನು ಕಟ್ಟಲು ಆತುರರಾಗಿರಲಿಲ್ಲ. ಹೆನ್ರಿಗೆ ಕ್ರಾಮ್ವೆಲ್‌ಮೇಲೆ ಕೋಪಬಂತು. ಅರಮನೆಯಲ್ಲಿ ಓಡಾಡುತ್ತಿದ್ದ **ಕಥರೀನ್ ಹಾವರ್ಡ್** (Katharine Howard) ಎಂಬೊಬ್ಬಾಕೆಯೂ ಆಕೆಯ ಬಂಧು ನಾರ್ಫಕ್ಕಿನ ಶ್ರೀಮಂತನೂ (Duke of Norfolk) ಸೇರಿ ಬೆಂಕಿಗೆಣ್ಣೆ ಚೆಲ್ಲಿದಂತೆ ಕೋಪವನ್ನು ಹೆಚ್ಚಿಸಿದರು. ಕ್ರಾಮ್ವೆಲ್ಲನ ಮೇಲೆ ರಾಜದ್ರೋಹವೆಂಬ ತಪ್ಪನ್ನು ಹೊರೆಸಿದರು. ರಾಜನನ್ನು ಕಂಡು ಹೆದರುತ್ತಿದ್ದುದರಿಂದ ಯಾರೂ ಅದನ್ನು ಅನ್ಯಾಯವೆಂದು ಅಡ್ಡಿಮಾಡಲಿಲ್ಲ. ಪಾರ್ಲಿಮೆಂಟ್ ಸಭೆಯವರೇ ರಾಜನ ಇಷ್ಟಕ್ಕೆ ಅನುಸಾರವಾಗಿ ಕ್ರಾಮ್ವೆಲ್ ರಾಜದ್ರೋಹಿಯೆಂದೂ ಮರಣದಂಡನೆಗೆ ಅರ್ಹನೆಂದೂ ನಿಶ್ಚಯಮಾಡಿಬಿಟ್ಟರು. 1540ರಲ್ಲಿ ರಾಜನ ರೋಷಕ್ಕೆ ಸಿಕ್ಕಿ ಕ್ರಾಮ್ವೆಲ್ ತಲೆಕೊಟ್ಟನು. ಆತನ ಶಿರಚ್ಛೇದನವಾದ ದಿನವೇ ರಾಜನು ಕಥರೀನ್ ಹಾವರ್ಡ್ ಎಂಬಾಕೆಯನ್ನು ಮದುವೆಮಾಡಿಕೊಂಡನು. ಈಕೆಯ ಬಂಧು ನಾರ್ಫಕ್ಕಿನ ಶ್ರೀಮಂತನು ಮಂತ್ರಿಪದವಿಯನ್ನು ಸಂಪಾದಿಸಿಕೊಳ್ಳಲು ಉದ್ಯುಕ್ತನಾದನು.

**4ನೆ 5ನೆ ವಿವಾಹಗಳು**

ಆಸ್ಥಾನದಲ್ಲಿ ಹೊಸರಾಣಿಯ ಕಡೆಯವರೊಂದುಕಡೆ, ಯುವರಾಜ ಎಡ್ವರ್ಡನ ಸೋದರಮಾವ **ಹಾರ್ಟ್‌ಫರ್ಡ್ ಶ್ರೀಮಂತನ** (Earl of Hertford) ಗುಂಪೊಂದುಕಡೆ ಮಂತ್ರಿತನವನ್ನು ದಕ್ಕಿಸಿಕೊಳ್ಳಲು ಯತ್ನಶೀಲರಾಗಿ ಪರಸ್ಪರ ವಿರೋಧಿಗಳಾದರು. ರಾಣಿಯ ಬೆಂಬಲದಿಂದ **ನಾರ್ಫಕ್ಕಿನ ಶ್ರೀಮಂತನು** ಪ್ರಬಲನಾದನು. ಕ್ರಾಮ್ವೆಲ್ ಕ್ರ್ಯಾನ್ಮರರ ಸುಧಾರಣೆಯ ಪ್ರಯತ್ನಗಳು ಅಲ್ಲಿಗೆ ನಿಂತುಹೋದವು. ರಾಜನು ಪ್ರಾಟೆಸ್ಟೆಂಟರನ್ನು ವಿರೋಧಿಸುತ್ತ ಪೂರ್ವಾಚಾರನಿಷ್ಠರಾದವರನ್ನೇ ಸಮೀಪದಲ್ಲಿ ಸೇರಿಸುತ್ತ ಇದ್ದುಬಿಟ್ಟನು. 1540ರ ತರುವಾಯ ಮತಸಂಬಂಧವಾದ ವಿಚಾರದಲ್ಲಿ ರಾಜನು ಪೂರ್ವಾಚಾರಪಕ್ಷಪಾತಿಯಾಗಿಯೇ ಇದ್ದನು.

**ಸೀಮೂರ್-ಹಾವರ್ಡ್ ಸ್ಪರ್ಧೆ**

ಅನ್ಯದೇಶಗಳೊಂದಿಗೆ ಸಂಧಿವಿಗ್ರಹನಡೆಸುವಾಗಲೂ ರಾಜನು ಹಳೆಯ ಪದ್ಧತಿಗಳನ್ನನುಸರಿಸಲು ತೊಡಗಿದನು. ಸ್ಕಾಟ್ಲೆಂಡಿನಲ್ಲಿ ಫ್ಲಾಡೆನ್ ಕದನದ ತರುವಾಯ ತನ್ನ ಮಗನಪರವಾಗಿ ರೀಜೆಂಟಾಗಿದ್ದ ಮಾರ್ಗರೆಟ್‌ರಾಣಿಯು *ಬೇರೆ ಮದುವೆ ಮಾಡಿಕೊಂಡು ಅಧಿಕಾರವನ್ನು ಕಳೆದುಕೊಂಡಳು. **5ನೆ ಜೇಮ್ಸ್** (James V)

*ಮಾರ್ಗರೆಟ್ ಮೊದಲನೆ ಗಂಡನನ್ನು ಕಳೆದುಕೊಂಡ ಬಳಿಕ ಆಂಗಸ್ಸಿನ ಅರ್ಲ್ (Earl of Angus) ಎಂಬ ಸ್ಕಾಟ್‌ಶ್ರೀಮಂತನನ್ನು ಮದುವೆಯಾದಳು. ಆ ಶ್ರೀಮಂತನ ವಂಶದಲ್ಲಿ ಹುಟ್ಟಿದವರಿಗೆ ರಾಜಬಾಂಧವ್ಯ ದೊರಕುವಂತಾಯಿತು.

ಎಂಬ ಹೆಸರಿನಿಂದ ಆಳಿದ ಆಕೆಯಮಗನು ಸಮರ್ಥನಾಗಿದ್ದು ಪೋಪನಲ್ಲಿ ಭಕ್ತನಾಗಿಯೂ ಫ್ರಾನ್ಸ್‌ರಾಜನ ಮಿತ್ರನಾಗಿಯೂ ವರ್ತಿಸಿದನು. ಗೀಸ್ ಎಂಬ ಪ್ರಬಲ ಫರಾನ್ಸಿಶ್ರೀಮಂತಮನೆತನದ ಹೆಣ್ಣನ್ನು ಮದುವೆಯಾದನು. ಇಂಗ್ಲಂಡಿನೊಡನೆ ಯುದ್ಧಮಾಡಬೇಕೆಂದೇ ಆತನ ಇಷ್ಟವಾಗಿತ್ತು. ದೊಡ್ಡಕದನಗಳಾವುವೂ ನಡೆಯುಲಿಲ್ಲ. 1542ರಲ್ಲಿ ಮಾತ್ರ **ಸಾಲ್ವೆಮೂಸ್** (Solway Moss) ಎಂಬೆಡೆಯಲ್ಲಿ ಒಂದು ಕದನವಾಯಿತು. ತನ್ನ ಶ್ರೀಮಂತರಸಹಾಯವಿಲ್ಲದೆ ಯುದ್ಧಮಾಡುತ್ತ ಜೇಮ್ಸ್ ಸುಲಭವಾಗಿ ಸೋತುಹೋದನು. ಅದೇ ದುಃಖದಿಂದ

**ಸ್ಕಾಟರೊಡನೆ ಯುದ್ಧ**

ಕೊರಗುತ್ತ ಆ ದೊರೆ ಸ್ವಲ್ಪಕಾಲದಲ್ಲಿಯೇ ಸತ್ತನು. ಆತನಿಗಿದ್ದುದು ಒಬ್ಬಳೇ ಮಗಳು; ಇನ್ನೂ ಕೂಸಾಗಿದ್ದಳು. **ಮೇರಿ ಸ್ಟ್ಯುಯರ್ಟ್** ಎಂಬ ಆ ಕೂಸನ್ನು ಇಂಗ್ಲಂಡಿನ ಯುವರಾಜ ಎಡ್ವರ್ಡನಿಗೆ ತಂದುಕೊಂಡು ಮದುವೆಮಾಡಿಬಿಡಬೇಕೆಂದು ಹೆನ್ರಿ ಯೋಚಿಸುತ್ತಿದ್ದನು. ಯುವರಾಜನ ಸೋದರಮಾವ ಹಾರ್ಟ್‌ಫರ್ಡ್ ಶ್ರೀಮಂತನು ಅದೇಸಮಯವೆಂದು ಸ್ಕಾಟ್ಲಂಡ್‌ಕಡೆ ಸೈನ್ಯದೊಡನೆ ನುಗ್ಗಿ ಅಲ್ಲಿಯ ಪ್ರದೇಶಗಳನ್ನು ಕೊಳ್ಳೆಹೊಡೆಸಿದನು. ಇದರಿಂದ ಸ್ಕಾಟ್‌ಜನರಿಗೆ ಇಂಗ್ಲಿಷಿನವರಮೇಲೆ ಕೋಪಬರುವಂತಾಯಿತೇವಿನಾ ಮತ್ತೇನೂ ಆಗಲಿಲ್ಲ.

ಇದೇಕಾಲದಲ್ಲಿ ಹೆನ್ರಿ ಫ್ರಾನ್ಸಿನೊಡನೆಯೂ ಜಗಳಕಟ್ಟಿದನು. 1544ರಲ್ಲಿ ಚಾರ್ಲ್ಸ್ ಚಕ್ರವರ್ತಿಯ ಸ್ನೇಹವನ್ನು ಸಂಪಾದಿಸಿ ಆತನ ಜತೆಗೂಡಿ ಫ್ರಾನ್ಸ್ ದೇಶವನ್ನು ಮುತ್ತಬೇಕೆಂದು ಸಿದ್ಧನಾದನು. ಹೆನ್ರಿಯ

**ಫ್ರಾನ್ಸಿನೊಡನೆ ಯುದ್ಧ**

ಸ್ನೇಹವನ್ನು ಸ್ವಲ್ಪಕಾಲದಲ್ಲಿಯೇ ಚಾರ್ಲ್ಸ್ ಬಿಟ್ಟನು. ಹೆನ್ರಿ ಯುದ್ಧವನ್ನು ಮೊದಲಿಟ್ಟು **ಬೊಲೋನ್** (Boulogne) ಎಂಬ ರೇವನ್ನು ಫ್ರೆಂಚರಿಂದ ಕಿತ್ತುಕೊಂಡನು. ಫ್ರಾನ್ಸ್‌ಜನರು ಕೋಪಗೊಂಡು ಇಂಗ್ಲಂಡನ್ನು ಮುತ್ತುವ ಸನ್ನಾಹಮಾಡಿ ಕಡೆಗೆ ಸಮಯ ಪ್ರತಿಕೂಲವೆಂದುಕೊಂಡು ಬೊಲೋನನ್ನು ಬಿಟ್ಟುಕೊಟ್ಟು ಸಂಧಿಮಾಡಿಕೊಂಡರು.

ಈ ಎರಡು ಜಗಳಗಳಲ್ಲಿ ಜಯವಾದರೂ ಲಾಭವಾಗಲೀ ಹೆಸರಾಗಲೀ ಬರಲಿಲ್ಲ. ವೆಚ್ಚ ಹೆಚ್ಚಾಗಿ ಹಣಕ್ಕೆ ತೊಂದರೆಯಾಯಿತು. ಹಣದಾಸೆಯಿಂದ ಹೆನ್ರಿಯು ನಾಣ್ಯಗಳನ್ನು ಬೆರಕೆಮಾಡಿಸಿ ನೋಡಿದನು; ಅದರಿಂದ ಉಪಯೋಗವಾಗಲಿಲ್ಲ. ತರುವಾಯ ಹಾಗೂಹೀಗೂ ಕಂಡು ಚರ್ಚುಗಳಿಗೆ ಸೇರಿದ್ದು ಅಲ್ಲಲ್ಲಿ

**ನಾರ್ಫಕ್ ಶ್ರೀಮಂತನ ಪತನ**

ಉಳಿದುಕೊಂಡಿದ್ದ ಆಸ್ತಿಗಳನ್ನು ರಾಜಸ್ವಕ್ಕೆ ಸೇರಿಸಿಕೊಂಡನು. ಈ ಸಂದರ್ಭದಲ್ಲಿ ರಾಜನು ಸುಧಾರಕರ ಗುಂಪಿಗೆ ಪ್ರೋತ್ಸಾಹಕೊಡುವವನಂತೆ ನಟಿಸಿದನು. ನಾರ್ಫಕ್ ಶ್ರೀಮಂತನ ಪ್ರಾಬಲ್ಯವು ಆ ಕಾರಣದಿಂದ ತಗ್ಗಿತು; ಹಾರ್ಟಫರ್ಡ್ ಶ್ರೀಮಂತನು ಪ್ರಬಲನಾಗು

ವಂತಾಯಿತು. ಇದಕ್ಕೆ ಇನ್ನೊಂದು ಸಂಗತಿಯೂ ಸಹಾಯವಾಯಿತು. 5ನೆ ರಾಣಿಯಾಗಿದ್ದ ಕಥರೀನ್‌ಹಾವರ್ಡಳ ವರ್ತನೆ ಚನ್ನಾಗಿರಲಿಲ್ಲ. ಆಕೆಯಮೇಲೆ ದೋಷಾರೋಪಣೆಯಾಗಿ ಶಿರಚ್ಛೇದನವೂ ಆಯಿತು. ಆಕೆ ತಲೆಕೊಟ್ಟ ಮೇಲೆ ರಾಜನು ಮತ್ತೊಮ್ಮೆ ಮದುವೆಯಾದನು. ವಿಧವೆಯಾಗಿ ಅರಮನೆಯಲ್ಲಿ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ **ಕಥರೀನ್ ಪಾರ್** (Katharine Parr) ಎಂಬಾಕೆ ರಾಜನ ಕಡೆಯ ಹೆಂಡತಿಯಾದಳು. ಉಪಾಯಶಾಲಿಯಾಗಿದ್ದುದರಿಂದ ಆಕೆಯು ರಾಜಕೀಯ ವಿಚಾರಗಳಗೋಜಿಗೆ ಬಾರದಿದ್ದು ಹೆನ್ರಿ ತೀರಿಹೋದಮೇಲೂ ಕೆಲವುಕಾಲ ಬದುಕಿದ್ದಳು.

ದೈತ್ಯನಂತೆ ಪರಿಣಮಿಸಿದ್ದ ರಾಜನಿಗೆ ಮುಪ್ಪು ಬಂದು ಆರೋಗ್ಯ ಕೆಡುತ್ತ ಬಂತು. ಆಸ್ಥಾನದಲ್ಲಿ ಹಾವರ್ಡ್‌ಮನೆತನದವರೂ ಸೀಮೂರ್‌ಮನೆತನದವರೂ ವಿರೋಧಿಗಳಾಗಿ ಮಂತ್ರಿಪದವಿಪ್ರಾಬಲ್ಯಗಳಿಗೆ ಹೆಣಗಾಡಿದರು. ಅದರಲ್ಲಿ ಹಾವರ್ಡ್ ಮನೆತನದ ನಾರ್ಫಕ್‌ಶ್ರೀಮಂತನು ಅಯೋಗ್ಯನೂ ದರ್ಪಿಷ್ಠನೂ ಆಗಿದ್ದನು; ಅವನ ಮಗನು ದರ್ಪದಲ್ಲಿ ತಂದೆಯನ್ನು ಮೀರಿಸಿದ್ದನು. ರಾಜನ ಆಯುಧಗಳನ್ನು ಹಿಡಿದನೆಂಬ ತಪ್ಪಿಗೆ ಗುರಿಯಾಗಿ ಆ ಮಗ ಮರಣದಂಡನೆಗೆ ಗುರಿಯಾದನು. ತಂದೆಗೂ ಅದೇ ದಂಡನೆ ವಿಧಿಸಿತ್ತು. ಆದರೆ ರಾಜನೇ ಮೊದಲು ಪ್ರಾಣಬಿಟ್ಟದ್ದರಿಂದ ನಾರ್ಫಕ್ ಶ್ರೀಮಂತನು ಜೀವಂತನಾಗಿ ಉಳಿದುಕೊಂಡನು. ಸುಧಾರಣೆಯಲ್ಲಿ ವಿಶ್ವಾಸಿಗಳಾಗಿದ್ದ ಸೀಮೂರ್‌ಮನೆತನದವರೇ ಪ್ರಾಬಲ್ಯವನ್ನು ಪಡೆದರು.

ಒಟ್ಟಿನಲ್ಲಿ ಈ ರಾಜನಕಾಲದಲ್ಲಿ ರಾಜಾಧಿಕಾರವು ಹೆಚ್ಚಾಗಿ ಭದ್ರಗೊಂಡಿತು. ಶ್ರೀಮಂತರ ದರ್ಪಪ್ರತಿಷ್ಠೆಗಳು ನಾಶವಾದವು. ಪಾರ್ಲಿಮೆಂಟಿನವರು ರಾಜನಿಗೆ ವಿಧೇಯರಾಗಿ ನಮ್ರರಾಗಿದ್ದರು. ರಾಜಾಧಿಕಾರಕ್ಕೆ ವಿರೋಧತೋರಿದವರು ಹಾಳಾದರು. ಅಧಿಕಾರಿವರ್ಗದವರು ರಾಜನಿಗೆ ಅತಿವಿಧೇಯರಾದರು. 7ನೆ ಹೆನ್ರಿ ಕೂಡಿಸಿದ್ದ ಹಣವು ವೆಚ್ಚವಾಗಿಹೋದುದಲ್ಲದೆ ಮಠಮಂದಿರಗಳ ಆಸ್ತಿಪಾಸ್ತಿಗಳೂ ರಾಜನ ಕೈಸೇರಿ ದುಂದುವೆಚ್ಚಕ್ಕೆ ಸಿಕ್ಕಿದವು. ತುಂಬಿದ ಬೊಕ್ಕಸವನ್ನಿಟ್ಟುಕೊಂಡು ಹೆಮ್ಮೆಯಿಂದಲೂ ಕೀರ್ತಿಯ ಆಸೆಯಿಂದಲೂ ಮೊದಲಿಟ್ಟು 8ನೆ ಹೆನ್ರಿಯು ಸ್ವಪ್ರಯೋಜನಧುರಂಧರನಾಗಿ ಕಡೆಕಡೆಗೆ ರಾಕ್ಷಸನಾಗಿಬಿಟ್ಟನು. ತನಗೆದುರುಬಿದ್ದವರನ್ನು ಕರುಣೆಯಿಲ್ಲದೆ ಬಲಿಗೊಟ್ಟನು. ಕೃತಜ್ಞತೆಯೂಇಲ್ಲದೆ ತನ್ನ ಇಷ್ಟದಂತೆ ನಡೆಸಿಕೊಟ್ಟ ಮಂತ್ರಿಗಳನ್ನು ಆಹುತಿಗೊಟ್ಟನು. ಆದಾಗ್ಗೂ ರಾಜಾಧಿಕಾರವನ್ನು ಬಲಗೊಳಿಸಿ ಪೋಪನ ಅಧಿಕಾರವನ್ನು ತೆಗೆದುಹಾಕಿದ ಕಾರಣದಿಂದ ಈ ರಾಜನು ಇಂಗ್ಲಂಡಿನ ಮೇಲ್ಮೆಯನ್ನು ಕಟ್ಟಿದಂತಾಯಿತು. ಪ್ರಜೆಗಳ ವಿಶ್ವಾಸದಲ್ಲಿ ಸದಾ ನಟ್ಟದೃಷ್ಟಿಯುಳ್ಳವನಾಗಿದ್ದುದರಿಂದ ಈ ಹೆನ್ರಿ ಜನಸಾಮಾನ್ಯರ ಮೆಚ್ಚುಗೆಯನ್ನು ಪಡೆದೇ ಇದ್ದನು.

ರಾಜಾಧಿಕಾರ

ಯೂರೋಪಿನ ಇತರಪ್ರಭುಗಳೊಂದಿಗೆ ಸೇರಿಕೊಂಡು ಯಶಸ್ವಿಯಾಗುವ ಆಸೆಯು ಮಣ್ಣುಪಾಲಾಗಿಹೋಯಿತು. ನ್ಯಾಯವಾದ ಉಪಾಯವನ್ನು ವುಲ್ಸಿ ಯೋಚಿಸಿದ್ದನು; ಅದರ ಅನುಸರಣೆಯು ಮಾತ್ರ ನಡೆಯಲಿಲ್ಲ. ಹೆನ್ರಿಯು ನಡೆಸಿದ ಕೆಲಸಗಳ ಪರಿಣಾಮವಾಗಿ ಫ್ರಾನ್ಸಿನರಾಜನಿಗಾಗಲಿ ಸ್ಪೈನ್‌ರಾಜನಿಗಾಗಲಿ ಇಂಗ್ಲಂಡಿನಲ್ಲಿ ವಿಶ್ವಾಸಗೌರವಗಳು ಹುಟ್ಟಲಿಲ್ಲ. ಬಂಧುವಾಗಿದ್ದ ಸ್ಕಾಟ್ಲೆಂಡಿನ ರಾಜನು ಆಪ್ತಮಿತ್ರನಾಗಿರದೆ ಬದ್ಧವೈರಿಯಾಗಿಯೇ ಇದ್ದುಬಿಟ್ಟನು. ದೂರಾಲೋಚನೆಯಿಂದ 7ನೆ ಹೆನ್ರಿಯು ನಡೆಸಿದ್ದ ವಿವಾಹಸಂಬಂಧಗಳ ಪರಿಣಾಮವು ಬೇರೆ ರೀತಿಯಲ್ಲಿಯೇ ಮೂಡಿದವು. ಗ್ರೇಟ್‌ಬ್ರಿಟನ್ ಮತ್ತು ಐರ್ಲಂಡುಗಳನ್ನು ಒಟ್ಟುಗೂಡಿಸಿ ಏಕರಾಜ್ಯವನ್ನಾಗಿ ರೂಪಗೊಳಿಸುವ ಯೋಚನೆಯಲ್ಲಿ

**ವೇಲ್ಸ್**

ಸ್ಕಾಟ್ಲೆಂಡನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕಾಯಿತು. ವೇಲ್ಸ್ ಮತ್ತು ಐರ್ಲಂಡುಗಳಲ್ಲಿ ಮಾತ್ರ 8ನೆ ಹೆನ್ರಿಯ ಕೆಲಸ ಕೆಡಲಿಲ್ಲ. ಈ ರಾಜನು ವೇಲ್ಸನ್ನು ಇಂಗ್ಲಂಡಿಗೆ ಸೇರಿಸಿಬಿಟ್ಟನು. 1536ರಲ್ಲಿ ಅಲ್ಲಿ 13 ಜಿಲ್ಲೆಗಳನ್ನು ವಿಂಗಡಿಸಿ ಅವುಗಳಿಂದ ಪ್ರತಿನಿಧಿಗಳು ಲಂಡನ್ನಿನ ಪಾರ್ಲಿಮೆಂಟ್ ಸಭೆಗೆಬರುವಂತೆ ನೆರವೇರಿಸಿದನು. ಇಂಗ್ಲಂಡ್ ಮತ್ತು ವೇಲ್ಸ್ ಏಕರಾಜ್ಯವಾಯಿತು.

ಐರ್ಲಂಡಿನಲ್ಲಿ ಮಾತ್ರ ಬೇರೆರೀತಿ. ಆ ದ್ವೀಪದ ಪೂರ್ವ ಮತ್ತು ಉತ್ತರ ಭಾಗಗಳಲ್ಲಿ ಮಾತ್ರ ಅಲ್ಪಸ್ವಲ್ಪ ಇಂಗ್ಲಂಡಿನ ಸಂಬಂಧವು ಕಾಣುತ್ತಿತ್ತು. ದಕ್ಷಿಣ ಪಶ್ಚಿಮ ವಿಭಾಗಗಳಲ್ಲಿ ಕೆಲ್ಟ್ ಕುಲಸ್ಥರೇ ಪ್ರಬಲರಾಗಿದ್ದರು. ಮೂಡಣ ಮತ್ತು ಬಡಗಣ ಭಾಗಗಳಲ್ಲಿ ಪ್ರಬಲರಾಗಿದ್ದ ಶ್ರೀಮಂತರಿಗೆ ಅಧಿಕಾರವಹಿಸಿ ಅವರ ಮೂಲಕ ಉಪಾಯವಾಗಿ ಇಂಗ್ಲಂಡಿನ ಶ್ರೇಷ್ಠಾಧಿಕಾರವನ್ನು ಕಾಪಾಡಿ

**ಐರ್ಲಂಡ್**

ಕೊಳ್ಳಬೇಕಾಗಿತ್ತು. ಆದರೆ ಆ ಶ್ರೀಮಂತರು ಸದಾ ವಶವರ್ತಿಗಳಾಗಿರಲಿಲ್ಲ. 1536ರಲ್ಲಿ ಅವರು ರಾಜನನ್ನು ಪ್ರತಿಭಟಿಸಿ ದಂಗೆಯೆದ್ದರು. ಹಾಗೂ ಹೀಗೂ ಹೆನ್ರಿ ಆ ದಂಗೆಯನ್ನಡಗಿಸಿದ ಬಳಿಕ ಆ ಶ್ರೀಮಂತರನ್ನು ವಶಪಡಿಸಿಕೊಳ್ಳಲು ಅವರಿಗೆ ಬಿರುದುಬಿಲ್ಲೆಗಳನ್ನೂ ಬಹುಮಾನಗಳನ್ನೂ ಕೊಡಿಸಿದನು. ಅವರ ಜಾತಿಭಕ್ತಿದೇಶಭಕ್ತಿಗಳನ್ನು ಮಾಯಗೊಳಿಸಲು ಯುಕ್ತಿಮಾಡಿದನು. ಐರಿಷ್ ಜಾತಿಯ ಅಭಿಮಾನವನ್ನು ಅವರು ಬಿಟ್ಟು ಇಂಗ್ಲಿಷ್ ಭಾಷೆ, ವೇಷ, ಭೂಷಣಗಳನ್ನು ಮೋಹಿಸುವಂತೆ ಉಪಾಯಗಳನ್ನು ಹೆಣೆದನು. ಈರೀತಿಯಲ್ಲಿ ಅವರನ್ನೊಲಿಸಿಕೊಂಡು ಮತವಿಷಯದಲ್ಲಿ ರಾಜನ ಸರ್ವಶ್ರೇಷ್ಠತೆಯನ್ನು ಇಂಗ್ಲಂಡಿನಲ್ಲಿ ಸ್ಥಾಪಿಸಿದಂತೆ ಐರ್ಲಂಡಿನಲ್ಲಿಯೂ ಸಾಧಿಸಿದನು. ಆದರೆ ಹೆಸರಿಗೆ ಮಾತ್ರ ರಾಜನ ಸರ್ವಶ್ರೇಷ್ಠತೆಯು ಐರ್ಲಂಡಿನಲ್ಲಿ ನಾಟಿದಂತೆ ತೋರಿಕೊಂಡಿತು. ಏಕಂದರೆ ಅಲ್ಲಿಯ ಜನರಿಗೆ ಪೂರ್ವಾಚಾರದಲ್ಲಿ ದೃಢನಿಷ್ಠೆ. ಆಗ ಹೆನ್ರಿ ತನ್ನ ಬಿರುದನ್ನು ಬದಲಾಯಿಸಿ **ಐರ್ಲಂಡಿನ ರಾಜ** (King of Ireland)

ಎಂಬುದನ್ನು ವಹಿಸಿದನು. ಐರ್ಲಂಡಿನ ವಶೀಕರಣವೇನೋ ಇದರಿಂದ ಸಿದ್ಧಿಸಲಿಲ್ಲ. ಮುಂದಿನಕಾಲದಲ್ಲಿ ಒದಗಬೇಕಾಯಿತು.

ರಾಜಾಧಿಕಾರವನ್ನು ಹೆಚ್ಚಿಸಿ ಮತವ್ಯವಸ್ಥೆಯಲ್ಲಿ ಇಂಗ್ಲಂಡನ್ನು ಸ್ವತಂತ್ರಗೊಳಿಸುವ ಹಟವನ್ನು ಹಿಡಿದು ಸಾಧಿಸಿದ ಈ ಹೆನ್ರಿದೊರೆಯು 1547ರಲ್ಲಿ ಕಾಲವಾದನು.

# 6ನೆ ಎಡ್ವರ್ಡ್ (1547—1553)

ಜನನ 1537

## ಸಮಕಾಲಿಕರು

| ಸ್ಕಾಟ್ಲೆಂಡ್ | ಫ್ರಾನ್ಸ್ | ಸಾಮ್ರಾಜ್ಯ | ಮತ್ತು | ಸ್ಪೈನ್ |
|---|---|---|---|---|
| ಮೇರಿ ಸ್ಟ್ಯುಯರ್ಟ್ (1542—1567) (ಕೂಸು) ಗೀಸಿನ ಮೇರಿ ರೀಜೆಂಟ್ | 2ನೆ ಹೆನ್ರಿ 1547—1559 | 5ನೆ ಚಾರ್ಲ್ಸ್ 1519—1556 | ಮತ್ತು | 1ನೆ ಚಾರ್ಲ್ಸ್ 1516—1556 |

8ನೆ ಹೆನ್ರಿ ತರುವಾಯ ಪಟ್ಟಕ್ಕೆಬಂದ ಎಡ್ವರ್ಡ್ ಇನ್ನೂ ಹತ್ತುವರ್ಷದವನಾಗಿ ರೋಗಿಷ್ಠಿಯಾಗಿದ್ದವನು. ವಯಸ್ಸುಬರುವವರೆಗೂ ರಾಜ್ಯಭಾರವನ್ನು ಹೊತ್ತಿರಲು **ರೀಜೆನ್ಸಿ ಕೌನ್ಸಿಲ್** (Council of Regency) ಒಂದು 8ನೆ ಹೆನ್ರಿಯಿಂದಲೇ ನಿರ್ಮಿತವಾಗಿತ್ತು. ಆ ಸಭೆಯಲ್ಲಿ ಪೂರ್ವಾಚಾರದವರೂ ನವೀನಾಚಾರದವರೂ ಸಮಬಲದಿಂದಿರುವಂತೆಯೇ ಗೊತ್ತಾಗಿತ್ತು. ಆದರೆ ಈ ರಾಜನಿಗೆ ಸುಧಾರಣೆಯಲ್ಲಿ ವಿಶ್ವಾಸವಿದ್ದುದರಿಂದ ಸ್ವಲ್ಪಕಾಲದಲ್ಲಿಯೇ ನವೀನಾಚಾರದವರು ಮೇಲ್ಗೈಯಾಗಿ ತಮ್ಮ ಮುಖಂಡನಿಗೆ **ಲಾರ್ಡ್ ಪ್ರೊಟೆಕ್ಟರ್** (Lord Protector) ಎಂಬ ಬಿರುದನ್ನೂ ಅತ್ಯಧಿಕವಾದ ಅಧಿಕಾರವನ್ನೂ ಕೊಡಿಸಿದರು. ಚಿಕ್ಕರಾಜನ ಸೋದರಮಾವನಾದ **ಎಡ್ವರ್ಡ್ ಸೀಮೂರ್** (Edward Seymour) ಎಂಬಾತನೇ ಆ ಪದವಿಯನ್ನು ಪಡೆದನು. ಹಿಂದಿನ ಆಳಿಕೆಯಲ್ಲಿ ಆತನು **ಹಾರ್ಟ್‌ಫರ್ಡ್ ಶ್ರೀಮಂತ** (Earl of Hertford) ನೆನಿಸಿದ್ದು ಈಗ **ಸಾಮರ್ಸೆಟ್ಟಿನ ಡ್ಯೂಕ** (Duke of Somerset) ನೆನಿಸಿದನು. ಯುದ್ಧದಲ್ಲಿ ಧೀರತನವನ್ನೂ ದೀನದರಿದ್ರರಲ್ಲಿ ಅನುಕಂಪವನ್ನೂ ಸಹಜವಾಗಿ ತೋರುತ್ತಿದ್ದ ಈತನಲ್ಲಿ ಜನರಿಗೆ ವಿಶ್ವಾಸವಿತ್ತು. ಪ್ರಾಟೆಸ್ಟೆಂಟ್ ಸುಧಾರಣೆಗಳಲ್ಲಿ ಈತನಿಗೆ ನಿಶ್ಚಲವಾದ ಆದರಶ್ರದ್ಧೆಗಳಿದ್ದುದರಿಂದ ಅಧಿಕಾರವಹಿಸಿದಾಗ ಸುಧಾರಣೆಗಳನ್ನು ಮುಂದುವರಿಸುವ ಉದ್ದೇಶವು ಬಲವಾಗಿತ್ತು. ಸದುದ್ದೇಶಗಳನ್ನು ಇಟ್ಟುಕೊಂಡು ಈತನು ಕೆಲಸದಲ್ಲಿ ತೊಡಗಿದನು. ಆದರೆ ಸ್ವಲ್ಪ ಮೂರ್ಖತನವೂ ಮನೋದೌರ್ಬಲ್ಯವೂ ಅಂಟಿಕೊಂಡಿದ್ದುದರಿಂದ ಉದ್ದೇಶಗಳು ಸಾರ್ಥಕವಾಗದೆಹೋದವು.

**ಸಾಮರ್ಸೆಟ್ಟಿನ ಸರ್ವಾಧಿಕಾರ**

ಅಧಿಕಾರವಹಿಸಿದಕೂಡಲೆ ಸಾಮರ್ಸೆಟ್ ಸ್ಕಾಟ್ಲೆಂಡಿನೊಡನೆ ಜಗಳವನ್ನು ಕಟ್ಟಿಕೊಳ್ಳಬೇಕಾಗಿಬಂತು. ಸಮಾಧಾನಶಾಂತಿಗಳನ್ನು ಕಾಪಾಡುವ ಉದ್ದೇಶವು ಕಾರ್ಯತಃ

ಸಾಧ್ಯವಾಗಲಿಲ್ಲ. 5ನೆ ಜೇಮ್ಸ್ ಒಂದುವರ್ಷದ ಮಗಳನ್ನು ಬಿಟ್ಟು ಸತ್ತುಹೋದನಷ್ಟೆ. ಆ ಕೂಸಿನ ಪರವಾಗಿ ಆತನ ರಾಣಿ **ಗೀಸಿನ ಮೇರಿ** (Mary of Guise) ಎಂಬಾಕೆ ರಾಜ್ಯಭಾರವನ್ನು ನಡೆಸುತ್ತಿದ್ದಳು. ಆದೇಸಮಯದಲ್ಲಿ ಸ್ಕಾಟ್ಲಂಡಿನಲ್ಲೂ ಪ್ರಾಟೆಸ್ಟೆಂಟ್ ಮತವು ಹರಡುತ್ತಿತ್ತು. ರೀಜೆಂಟ್‌ಮೇರಿಯಾದರೋ ಕ್ಯಾಥಲಿಕ್ ಮತಸ್ಥಳು. ಪ್ರಾಟೆಸ್ಟೆಂಟರಿಗೆ ಅವಕಾಶದೊರಕದಂತೆ ನೆರವೇರಿಸಲು ಆಕೆ ಅವರನ್ನು ಕ್ರೂರಶಿಕ್ಷೆಗಳಿಗೆ ಗುರಿಪಡಿಸಿದಳು. ಅವರು ರೀಜೆಂಟಿಗೆದುರಾಗಿ ದಂಗೆಯೆದ್ದು ಸಹಾಯಬೇಕೆಂದು ಇಂಗ್ಲಂಡಿನವರನ್ನು ಯಾಚಿಸಿದರು. ಸಾಮರ್ಸೆಟ್ಟಿಗೆ ಸಹಾಯ ನೀಡುವುದು ಕರ್ತವ್ಯವೆಂದುತೋರಿತು. ಈ ರೀತಿಯಲ್ಲಿ ವಿರೋಧವೇ ಕರ್ತವ್ಯವೆಂದು ಒಂದುಕಡೆಯಾದರೆ ಮತ್ತೊಂದುಕಡೆ ಸ್ಕಾಟ್ಲಂಡಿನರಾಜಪುತ್ರಿ ಮೇರಿಯನ್ನು ಎಡ್ವರ್ಡ್ ರಾಜನಿಗೆ ಮದುವೆಮಾಡಿಸಿ ಎರಡುರಾಜ್ಯಗಳನ್ನೂ ಒಟ್ಟುಗೂಡಿಸುವ ನೆಂಟತನದ ಯೋಚನೆ. ಎರಡೂ ಪರಸ್ಪರವಿರುದ್ಧ. ಯುದ್ಧಮಾಡಿ ಎರಡು ಉದ್ದೇಶಗಳನ್ನೂ ಸಾಧಿಸಬಹುದೆಂದುಯೋಚಿಸಿ 1547ರಲ್ಲಿ ಸಾಮರ್ಸೆಟ್ ಸೈನ್ಯಮೊಡನೆ ಹೊರಟು ಸ್ಕಾಟ್ಲಂಡನ್ನು ಮುತ್ತಿದನು. **ಪಿಂಕೀ** (Pinkie) ಎಂಬ ಮೈದಾನದಲ್ಲಿ ಕದನ ನಡೆಯಿತು. ಇಂಗ್ಲಿಷರಕಡೆಗೆ ಮೊದಲು ಸೋಲಾಗುವಹಾಗೆಯೇ ತೋರಿತ್ತು; **ವಾರಿಕ್ ಶ್ರೀಮಂತ**(Earl of Warwick)ನ ಸಾಹಸದಿಂದ ಕೈಬಿಟ್ಟುಹೋಗಿದ್ದ ಜಯವು ಲಭಿಸಿತು. ಜಯಲಾಭವಾದಮೇಲೆ ಸಾಮರ್ಸೆಟ್ಟನು ಸ್ಕಾಟ್ಲಂಡಿನ ತೆಂಕಣ ಪ್ರದೇಶಗಳನ್ನು ಕೊಳ್ಳೆಹೊಡೆಸಿದನು. ಸ್ಕಾಟ್‌ಜನರಿಗೆ ಸೋಲಾದುದಲ್ಲದೆ ನಷ್ಟವೂ ಆಯಿತು. ಇದೆಂತಹ ನೆಂಟತನವೆಂದು ಕೋಪವೂ ಉಂಟಾಯಿತು. ತಮ್ಮ ರಾಜಪುತ್ರಿಯನ್ನು ಈ ಸಂಬಂಧದಿಂದ ದೂರವಾಗಿಡಬೇಕೆಂದು ನಿಶ್ಚಯಿಸಿ ಅವರು ಆಕೆಯನ್ನು ಫ್ರಾನ್ಸಿಗೆ ಕಳುಹಿಸಿಕೊಟ್ಟರು. ಆ ಮೇರಿಯು ಫ್ರಾನ್ಸಿನಲ್ಲಿ ರೋಮನ್‌ಕ್ಯಾಥಲಿಕ್ ಮತಸ್ಥಳಾಗಿ ಬೆಳೆದು ಪ್ರಾಟೆಸ್ಟೆಂಟರಿಗೆ ವಿರೋಧಿಯಾದಳು. ಫ್ರಾನ್ಸಿನ ಯುವರಾಜನನ್ನೇ ಮುಂದೆ ಮದುವೆಯಾಗುವಂತೆ ಪ್ರಸ್ತಾಪಗಳೂ ನಡೆದವು. ಆಕೆಯ ತಾಯಿ ಗೀಸಿನಮೇರಿಯೇ ರೀಜೆಂಟಾಗಿ ಆಳಿಕೆಯನ್ನು ವಹಿಸಿದ್ದು ಪ್ರಾಟೆಸ್ಟೆಂಟರಿಗೆ ಆಸ್ಪದವಿಲ್ಲದಂತೆ ನೆರವೇರಿಸಿದಳು. ಸಾಮರ್ಸೆಟ್ಟನ ಆತುರತೆಯಿಂದ ಎರಡು ಉದ್ದೇಶಗಳೂ ಕೆಟ್ಟುದಲ್ಲದೆ ಸ್ಕಾಟ್ಲಂಡಿನಲ್ಲಿ ರೆಫರ್ಮೇಷನ್ ತಿದ್ದುಪಾಡು ರೂಪಗೊಳ್ಳುವುದು ನಿದಾನವಾಯಿತು.

**ಸ್ಕಾಟ್ಲಂಡಿನಲ್ಲಿ ಯುದ್ಧ**

ಸ್ಕಾಟ್ಲಂಡಿನಪರವಾಗಿ ಫ್ರಾನ್ಸ್‌ದೇಶದವರು ಇಂಗ್ಲಂಡಿನೊಡನೆ ಯುದ್ಧಕ್ಕೆ ನಿಂತರು. 8ನೆ ಹೆನ್ರಿ ಗೆದ್ದಿದ್ದ **ಬೊಲೋನ್** ಪಟ್ಟಣಕ್ಕೆ ಫ್ರೆಂಚರು ಮುತ್ತಿಗೆ ಹಾಕಿದರು. ಸಾಮರ್ಸೆಟ್ ಶ್ರೀಮಂತನಿಗೆ ಈ ಯುದ್ಧವನ್ನು ಸರಿಯಾಗಿ ನಡೆಸಲಾಗಲಿಲ್ಲ. ಕಡೆಗೆ **ಬೊಲೋನ್ ಪಟ್ಟಣವು ಇಂಗ್ಲಿಷರ ಕೈತಪ್ಪಿಹೋಯಿತು.**

**ಬೊಲೋನ್ ನಷ್ಟ**

ಸಾಮರ್ಸೆಟ್ಟಿಗೆ ಮತಾಚಾರಪರಿಷ್ಕಾರದಲ್ಲಿ ಅತಿಶಯವಾದ ಶ್ರದ್ಧೆಯಿತ್ತು. ಆರ್ಚ್‌ಬಿಷಪ್ ಕ್ರ್ಯಾನ್ಮರನು ಪ್ರಾಟೆಸ್ಟೆಂಟ್ ಮತದಲ್ಲಿ ಹೆಚ್ಚು ಹೆಚ್ಚು ಆದರವಿಶ್ವಾಸ ಗಳನ್ನು ಬಳೆಸಿಕೊಂಡಿದ್ದು ಸಾಮರ್ಸೆಟ್ಟಿಗೆ ಒಳ್ಳೆ ಸಹಾಯಕನಾದನು. ಚರ್ಚು ಗಳಲ್ಲಿಯೂ ಇತರಮಂದಿರಗಳಲ್ಲಿಯೂ ಪೂರ್ವಸಂಪ್ರದಾಯಗಳನ್ನು ನಿಲ್ಲಿಸಿ ನವೀನಾ ಚಾರಗಳನ್ನು ನೆಲೆಗೊಳಿಸಲು ಮೊದಲು ಪ್ರಯತ್ನ ನಡೆಯಿತು. ಲ್ಯಾಟಿನ್ ಭಾಷೆಯ ಪ್ರಾರ್ಥನೆಗಳಿಗೆ ಬದಲಾಗಿ ಇಂಗ್ಲಿಷ್ ಭಾಷೆಯ ಪ್ರಾರ್ಥನೆಗಳೂ ಉಪದೇಶಗಳೂ ನಡೆಯಬೇಕೆಂದು ಕ್ರ್ಯಾನ್ಮರ್ ಮುಂತಾದವರ ಇಷ್ಟವಾಗಿತ್ತು. ಚರ್ಚುಗಳ ತನಿಖೆ ಯಾಗಿ ವಿಗ್ರಹಾರಾಧನೆಮುಂತಾದ ಹಳೆಯಸಂಪ್ರದಾಯಗಳಿಗೆ ವಿಪತ್ತು ತೋರಿದಾಗ ಪೂರ್ವಾಚಾರಪರಾಯಣರಾಗಿದ್ದ ಪುರೋಹಿತವರ್ಗದವರು ಕಷ್ಟದಲ್ಲಿ ಸಿಕ್ಕಿದರು.

**ಸುಧಾರಣೆಗಳು**

ಅಂತಹವರಿಗೆ ಮುಖಂಡರಾಗಿದ್ದ **ಗಾರ್ಡಿನರ್** (Gardiner) ಮತ್ತು **ಬಾನರ್** (Bonner) ಎಂಬುವವರು ಉದ್ಯೋಗಗಳನ್ನು ಕಳೆದುಕೊಂಡದ್ದು ಮಾತ್ರವೇ ಅಲ್ಲದೆ ತಪ್ಪಿತಸ್ಥರೆನಿಸಿ ಸೆರೆ ಮನೆಗೂ ಸೇರಿದರು. ಸಾಮರ್ಸೆಟ್ ಕ್ರ್ಯಾನ್ಮರುಗಳ ಕೆಲಸವನ್ನು ಪಾರ್ಲಿಮೆಂಟಿ ನವರು ಮೆಚ್ಚಿದರು. ಆರಂಶಗಳ ಕಾನೂನು ರದ್ದಾಯಿತು. ಪುರೋಹಿತವರ್ಗದ ವರು ವಿವಾಹಿತರಾಗಿರಲು ಅವಕಾಶವೇರ್ಪಟ್ಟಿತು. ಚರ್ಚುಗಳಲ್ಲಿಯೂ ಮಂದಿರ ಗಳಲ್ಲಿಯೂ ತಿದ್ದುಪಾಡುನಡೆಯುತ್ತ ಕೆಲವು ಆಸ್ತಿಪಾಸ್ತಿಗಳು ರಾಜಾಧಿಕಾರಿಗಳ ಪಾಲಾದವು. ಅದರಲ್ಲಿ ಬಹುಭಾಗವು ದುರ್ವ್ಯಯವೇ ಆಯಿತು.

ಜನಸಾಮಾನ್ಯರಿಗೆ ಅರ್ಥವಾಗದಿದ್ದ ಲ್ಯಾಟಿನ್‌ಭಾಷೆಯ ಪ್ರಾರ್ಥನೆಗಳನ್ನು ನಿಲ್ಲಿಸಿ ಇಂಗ್ಲಿಷಿನಲ್ಲಿ ಪ್ರಾರ್ಥನೆಗಳೂ ವ್ಯಾಖ್ಯಾನಗಳೂ ನಡೆಯುವಂತೆ ಏರ್ಪಡಿಸಲು ಕ್ರ್ಯಾನ್ಮರ್ ಶ್ರಮಪಟ್ಟು ನಿತ್ಯನೈಮಿತ್ತಿಕಸಂದರ್ಭಗಳಿಗೆ ಉಪಯುಕ್ತವಾಗುವಂತೆ ಇಂಗ್ಲಿಷಿನಲ್ಲಿ ಒಂದು **ಪ್ರಾರ್ಥನಾಪುಸ್ತಕ**ವನ್ನು (Common Prayer Book) ಸಿದ್ಧಗೊಳಿಸಿದನು. 1549ರಲ್ಲಿ ಪಾರ್ಲಿಮೆಂಟಿನವರು ಇದನ್ನೊಪ್ಪಿ ಇನ್ನು ಮುಂದೆ ಪ್ರತಿಚರ್ಚಿನಲ್ಲಿಯೂ ಈ ಪುಸ್ತಕವನ್ನೇ ಪುರೋಹಿತವರ್ಗದವರು ಉಪಯೋಗಿಸಬೇ ಕೆಂದು ವಿಧಿಸಿದರು. ದೇಶದ ಎಲ್ಲಚರ್ಚುಗಳಲ್ಲಿಯೂ ಏಕರೀತಿಯಾಗಿ ನಡೆಯ ಬೇಕೆಂದು ಗೊತ್ತಾದುದರಿಂದ ಆ ಕಾನೂನಿಗೆ **ಯೂನಿಫಾರ್ಮಿಟಿ ಕಾನೂನು** (Act of Uniformity) ಎಂದು ಹೆಸರು. ಈ ಪುಸ್ತಕಕ್ಕೆ ಮೊದಲನೆಪ್ರಾರ್ಥನಾಪುಸ್ತಕವೆಂದು ಹೆಸರು. ಈ ತಿದ್ದುಪಾಡಿನಿಂದ ಚರ್ಚುಗಳಲ್ಲಿ ಲ್ಯಾಟಿನ್‌ಪ್ರಾರ್ಥನೆಗಳು ಮಾಯ ವಾದವು. ಇಂಗ್ಲಿಷಿನಲ್ಲಿಯೇ ಸಂಸ್ಕಾರಗಳು ನಡೆಯಲಾರಂಭವಾಯಿತು.

ಅತಿಶ್ರದ್ಧೆಯಿಂದ ಸಾಮರ್ಸೆಟ್‌ಶ್ರೀಮಂತನು ಈ ಸುಧಾರಣೆಗಳನ್ನು ಮುಂದು ವರಿಸಿದನು. ಆದರೆ ಆತನಿಗೆ ವಿಘ್ನಗಳೂ ತೊಂದರೆಗಳೂ ಎರಡುಬಗೆಯಲ್ಲಿ ತೋರಿ ಕೊಂಡವು. ಪವಿತ್ರವೆನಿಸಿದ್ದ ಲ್ಯಾಟಿನ್ ಶಬ್ದಗಳು ಮಾಯವಾಗಿ ಇಂಗ್ಲಿಷಿನಲ್ಲಿಯೇ

ಪ್ರಾರ್ಥನೆಗಳು ನಡೆಯುವುದು ಸಾಮಾನ್ಯಜನರಿಗೆ ಒಪ್ಪಲಿಲ್ಲ. **ಡೆವನ್‌ಜಿಲ್ಲೆಯ** (Devonshire) ಜನರು ಇಂಗ್ಲಿಷ್‌ಪ್ರಾರ್ಥನೆಗಳನ್ನು ಸಹಿಸಲಾರದೆ ಪ್ರಾರ್ಥನಾ ಪುಸ್ತಕವನ್ನು ವಿರೋಧಿಸಿ ದಂಗೆಯೆದ್ದರು. ಇನ್ನೊಂದುಕಡೆ

**ಡೆವನ್ ಜಿಲ್ಲೆಯ ದಂಗೆ**

ರೀಜೆನ್ಸಿಸಭೆಯಲ್ಲಿ ಸಾಮರ್ಸೆಟ್ಟನ್ನು ಕಂಡು ಅಸೂಯೆಗೊಂಡಿದ್ದವರು ಎದುರುಬಿದ್ದರು. ಆತನ ತಮ್ಮನೇ ಪಿತೂರಿ ಕಟ್ಟಿದನು. ಇವರನ್ನಡಗಿಸಿಬಿಡಬೇಕೆಂದು ಸಾಮರ್ಸೆಟ್ ನಿಶ್ಚಯಿಸಿಕೊಂಡು ತನ್ನ ತಮ್ಮನೆಂದು ದಾಕ್ಷಿಣ್ಯವನ್ನಿಡದೆ ತಪ್ಪುಹೊರೆಸಿ ಅವನನ್ನು ಶಿರಚ್ಛೇದನಕ್ಕೆ ಗುರಿಮಾಡಿಸಿದನು. 8ನೆ ಹೆನ್ರಿಗಿದ್ದ ದರ್ಪಪ್ರತಿಷ್ಠೆಗಳು ಸಾಮರ್ಸೆಟ್ಟಿಗೆ ಹೇಗಿದ್ದಾವು! ತಮ್ಮನತಲೆಬಿದ್ದಮೇಲೆ ಇತರರೂ ಶತ್ರುಗಳಾದರು. ಡೆವನ್‌ಜಿಲ್ಲೆಯ ದಂಗೆಯು ರೇಗುತ್ತಿದ್ದಾಗ **ನಾರ್ಫಕ್** (Norfolk) ಜಿಲ್ಲೆಯಲ್ಲಿ ಇನ್ನೂ ದೊಡ್ಡದಂಗೆಯೆದ್ದಿತು. ಡೆವನ್‌ಜಿಲ್ಲೆಯವರು ನವೀನಾಚಾರಸಂಪ್ರದಾಯಗಳನ್ನು ಸಹಿಸದೆ ಯೂನಿಫಾರ್ಮಿಟಿ ಕಾನೂನನ್ನು ಪ್ರತಿಭಟಿಸುತ್ತಿದ್ದರು. ನಾರ್ಫಕ್ ಜಿಲ್ಲೆಯವರು ಬೇರೆ ಕಾರಣಗಳಿಗಾಗಿ ದಂಗೆಯೆದ್ದರು. ಮಠಗಳ ಭೂಮಿ

**ನಾರ್ಫಕ್ ಜಿಲ್ಲೆಯ ದಂಗೆ**

ಗಳನ್ನು ಪಡೆದಿದ್ದ ಹೊಸ ಜಮೀನ್ದಾರರು ಸ್ವಲಾಭದಾಸೆಯಿಂದ ಆರಂಬವನ್ನು ಬಿಟ್ಟು ಭೂಮಿಗಳನ್ನು ಹುಲ್ಲುಗಾವಲುಗಳಾಗಿ ಮಾಡಿಕೊಂಡು ಅವುಗಳಿಗೆ ಬೇಲಿ ಕಟ್ಟಿ ಕುರಿಗಳನ್ನು ಸಾಕಲಾರಂಭಿಸಿದ್ದರು. ಬೇಸಾಯದಕೂಲಿಮಾಡುತ್ತಿದ್ದವರಿಗೆ ನಿರುದ್ಯೋಗವಾಯಿತು. ಬಡಬಗ್ಗರಿಗೆ ಹಿಂದಿನಸಹಾಯ ತಪ್ಪಿತು. ಕಳ್ಳಕಾಕರಹಾವಳಿ ಹೆಚ್ಚಿತು. ನಾರ್ಫಕ್ ಜಿಲ್ಲೆಯವರು ಈ ಬಗೆಯಕಷ್ಟಗಳಿಗೆಸಿಕ್ಕಿ ಸಹಿಸಲಾರದೆ ದಂಗೆಯೆಬ್ಬಿಸಿದರು. **ರಾಬರ್ಟ್ ಕೆಟ್** (Robert Ket) ಎಂಬ ಮುಖಂಡನನ್ನಿಟ್ಟುಕೊಂಡು ದಂಗೆಕೋರರು ಒಂದು ಸೈನ್ಯವನ್ನು ಕಟ್ಟಿ **ನಾರ್ವಿಚ್** (Norwich) ಪಟ್ಟಣವನ್ನು ಹಿಡಿದು ಅಲ್ಲಿದ್ದ ರಾಜಭಟರನ್ನು ಹೊಡೆದೋಡಿಸಿಬಿಟ್ಟರು.

ಸಾಮರ್ಸೆಟ್ಟಿಗೆ ನಾರ್ಫಕ್‌ಜಿಲ್ಲೆಯ ದಂಗೆಕೋರರಲ್ಲಿ ಅನುಕಂಪತೋರಿತು; ಡೆವನ್‌ಜಿಲ್ಲೆಯ ದಂಗೆಕೋರರಲ್ಲಿ ಆಗ್ರಹಹುಟ್ಟಿತು. ಎರಡು ದಂಗೆಗಳೂ ದಿನೇ ದಿನೇ ಬಲಗೊಂಡವು. ಅವುಗಳನ್ನಡಗಿಸಲು ಸಾಮರ್ಸೆಟ್ಟಿಗೆ ಆಗಲಿಲ್ಲ. ರೀಜೆನ್ಸಿಸಭೆಯ ಇತರಸಭಿಕರು ಮುಂದೆನುಗ್ಗಿ ದಂಗೆಗಳನ್ನಡಗಿಸಿದರು. ಡೆವನ್‌ಜಿಲ್ಲೆಯವರನ್ನು **ಬೆಡ್‌ಫರ್ಡ್ ಶ್ರೀಮಂತ** (Earl of Bedford)ನಾದಾತನು ಸೋಲಿಸಿದನು. **ವಾರಿಕ್ಕಿನ ಶ್ರೀಮಂತನು** ಕಾಠಿಣ್ಯತೋರಿ ನಾರ್ಫಕ್ ಜಿಲ್ಲೆಯ

**ಸಾಮರ್ಸೆಟ್ಟನ ಪತನ**

ದಂಗೆಯನ್ನು ಮುರಿದು ಬಲಿಷ್ಠನೆನಿಸಿಕೊಂಡನು. ಇದರಿಂದ ಸ್ವಲ್ಪಕಾಲದಲ್ಲಿಯೇ ಸಾಮರ್ಸೆಟ್‌ಶ್ರೀಮಂತನು ಅಸಮರ್ಥನೆನಿಸಿದನು. ಇತರಸಭಿಕರು ಆತನು ಅಯೋಗ್ಯನೆಂದೂ ಅಪರಾಧಿಯೆಂದೂ

ತೀರ್ಮಾನಮಾಡಿ ಸೆರೆಹಿಡಿಸಿಬಿಟ್ಟರು. ಈ ರೀತಿಯಲ್ಲಿ ಸಾಮರ್ಸೆಟ್‌ಶ್ರೀಮಂತನು ಬಲುಬೇಗನೆ ಅಧಿಕಾರವನ್ನು ಕಳೆದುಕೊಂಡನು.

ಅಧಿಕಾರವನ್ನು ತಮ್ಮಲ್ಲಿಯೇ ಇಟ್ಟುಕೊಳ್ಳಬೇಕೆಂದು ಸಭೆಯವರು ಮನ ಮಾಡಿದರು. ಪರಸ್ಪರ ಅಸೂಯಾವಿಷ್ಟರಾದ ಸಭಿಕರು ಒಟ್ಟುಗೂಡುವುದು ದುಸ್ತರ ವಾಯಿತು. ಇಂತಹಸ್ಥಿತಿಯಲ್ಲಿ ಮೆಲ್ಲಮೆಲ್ಲನೆ ವಾರಿಕ್‌ಶ್ರೀಮಂತನು ಪ್ರಾಬಲ್ಯಕ್ಕೇರಿ ದನು. ಇವನು ಸೈನ್ಯನಡೆಸುವುದರಲ್ಲಿ ಹೆಸರುಪಡೆದಿದ್ದನು. 7ನೆ ಹೆನ್ರಿಯ 'ಜಿಗಣೆ' ಗಳಲ್ಲೊಬ್ಬನಾಗಿ 8ನೆ ಹೆನ್ರಿಯಕಾಲದಲ್ಲಿ ತಲೆಯನ್ನುಕಳೆದುಕೊಂಡ ಡಡ್ಲಿ ಎಂಬಾತನ ಮಗನು. ಈತನು ಪರಮಸ್ವಾರ್ಥಿಯಾಗಿ ದುರಾಸೆಯನ್ನು ಬೆಳೆಸಿಕೊಂಡಿದ್ದನು. ಸಾಮರ್ಸೆಟ್ ತರುವಾಯ ಸಭಿಕರಲ್ಲಿ ಪ್ರಬಲನೆನಿಸಿದಮೇಲೆ ನವೀನಾಚಾರವಂತರ ಗುಂಪಿಗೆ ಸೇರಿಕೊಂಡರೆ ತನಗನುಕೂಲವೆಂದು ಈತನು ಯೋಚಿಸಿ ಮತಾಚಾರವಿಚಾರಗಳ ತಿದ್ದುಪಡಿಯನ್ನು ಮುಂದು ವರಿಸಿದನು. ಫ್ರಾನ್ಸ್ ಜರ್ಮನಿಗಳಲ್ಲಿ ಹಿಂಸೆಗೊಳಗಾಗಿ ಅಲ್ಲಿರ ಲಾರದೆ ಪ್ರಾಟೆಸ್ಟೆಂಟ್‌ವಿದ್ವಾಂಸರೂ ಪುರೋಹಿತರೂ ಇಂಗ್ಲಂ ಡಿಗೆ ಈ ಕಾಲದಲ್ಲಿ ಓಡಿಬಂದಿದ್ದರು. ಕ್ರ್ಯಾನ್ಮರ್‌ಕೂಡ ಲ್ಯೂಥರ್‌ಮಾರ್ಗದಿಂದ ತೃಪ್ತನಾಗದೆ ಇನ್ನೂ ಮುಂದೆಹೊರಟಿದ್ದ ಸ್ವಿಟ್ಸರ್ಲಂಡಿನ **ಸ್ವಿಂಗ್ಲಿ** (Ulrich Zwingle) ಯೆಂಬಾತನ ಪಂಥದಲ್ಲಿ ಹೆಜ್ಜೆಯಿಡುತ್ತಿದ್ದನು. ಆತನಜೊತೆಗೆ **ಲ್ಯಾಟಿಮರ್,** (Latimer) **ರಿಡ್ಲಿ,** (Ridley) **ಹೂಪರ್** (Hooper)ಮುಂತಾದ ಪ್ರಾಟೆಸ್ಟೆಂಟ್ ಗುರುಗಳು ಸೇರಿಕೊಂಡು ವಾರಿಕ್‌ಶ್ರೀಮಂತನಮೂಲಕ ಇನ್ನೂ ಹೆಚ್ಚು ತಿದ್ದುಪಾಡುಗಳನ್ನು ಸಾಧಿಸಲೆಳಸಿದರು. ಆಗ ಕೆಲವು ಬಿಷಪ್ಪರುಗಳಸ್ಥಾನಗಳನ್ನು ಕಿತ್ತುಹಾಕಿದ್ದಲ್ಲದೆ ಚರ್ಚುಗಳ ತನಿಖೆನಡೆಸಿ ವಾರಿಕ್‌ಮುಂತಾದವರು ಆಸ್ತಿಗಳನ್ನು ಕಿತ್ತುಕೊಂಡರು. ದುರಾಸೆಯಿಂದಕೂಡಿದ್ದ ಜನರಿಗೆ ಚರ್ಚಿನ ಉದ್ಯೋಗಗಳಾಗುತ್ತಬರಲು ಲ್ಯಾಟಿಮರ್ ಮುಂತಾದ ನೈಜಭಕ್ತರಿಗೆ ಅಸಮಾಧಾನವುಂಟಾಯಿತು. ಚಿಕ್ಕರಾಜನು ಲ್ಯಾಟಿಮರ ನನ್ನು ಅರಮನೆಗೆ ಬರಮಾಡಿಕೊಂಡು ಆತನ ಉಪದೇಶಗಳಿಗೆ ಆದರದಿಂದ ಕಿವಿ ಗೊಟ್ಟನು. ಆಗ ಒಳ್ಳೆಸಮಯವೆಂದು ಸಾಮರ್ಸೆಟ್ ಯೋಚಿಸಿಕೊಂಡನು. ಸ್ವಲ್ಪಕಾಲದಹಿಂದೆ ಆತನಿಗೆ ಸೆರೆಯಿಂದ ಬಿಡುಗಡೆಯಾಗಿತ್ತು. ವಾರಿಕ್‌ಮುಂತಾ ದವರಲ್ಲಿ ವಿಶ್ವಾಸತಪ್ಪುತ್ತಿದ್ದುದನ್ನುಕಂಡು ಸಮಯಸಾಧಿಸಿ ಪುನಃ ಅಧಿಕಾರಕ್ಕೆ ಬರಬೇಕೆಂದು ಸಾಮರ್ಸೆಟ್ ಪ್ರಯತ್ನಿಸಿ ದನು. ಆದರೆ ವಾರಿಕ್‌ಶ್ರೀಮಂತನು ಅರಮನೆಯಲ್ಲಿ ಅತಿ ಪ್ರಬಲನಾಗಿದ್ದನು. 1552ರಲ್ಲಿ ಸಾಮರ್ಸೆಟ್ ರಾಜದ್ರೋಹದ ಆರೋಪಣೆಗೆಸಿಕ್ಕಿ ಶಿರಚ್ಛೇದನಕ್ಕೆ ಗುರಿಯಾದನು. ವಾರಿಕ್‌ಶ್ರೀಮಂತನಿಗೆ ಎದು ರಿಲ್ಲದಂತಾಯಿತು. **ನಾರ್ದಂಬರ್ಲಂಡಿನ ಡ್ಯೂಕ** (Duke of Northumberland

ವಾರಿಕ್‌ಶ್ರೀಮಂತನ ಪ್ರಾಬಲ್ಯ

ಸಾಮರ್ಸೆಟ್ಟನ ದುರ್ಮರಣ

ನೆಂಬ ಹೆಚ್ಚಿನಪದವಿಯನ್ನು ಹೊಂದಿ ರಾಜನಿಗೆ ಏಕಮಾತ್ರಮಂತ್ರಿಯಾಗಿ ಸರ್ವಾಧಿಕಾರವನ್ನು ಪಡೆದನು.

1552ರಲ್ಲಿ ಮತಾಚಾರಸಂಸ್ಕರಣವು ಇನ್ನೂ ಮುಂದರಿಯಿತು. ಮೂರು ವರ್ಷಗಳ ಹಿಂದೆ ರಚಿತವಾಗಿದ್ದ ಪ್ರಾರ್ಥನಾಪುಸ್ತಕವು ಹಳೆಯರೀತಿಯದೆನಿಸಿತು. ಕ್ರ್ಯಾನ್ಮರ್ ಮುಂತಾದವರು ಅದನ್ನು ಪರಿಷ್ಕರಿಸಿ ಅನೇಕಬಗೆಗಳಲ್ಲಿ ತಿದ್ದಿದರು. ಈ **ಎರಡನೆ ಪ್ರಾರ್ಥನಾಪುಸ್ತಕ**( Second Book of Common Prayer )ವನ್ನೇ ರಾಜ್ಯದ ಎಲ್ಲೆಡೆಗಳಲ್ಲಿಯೂ ಬಳಸಬೇಕೆಂದು 1552ರಲ್ಲಿ ಹೊಸದಾಗಿ **ಯೂನಿಫಾರ್ಮಿಟಿ ಕಾನೂನು** (Act of Uniformity) ರೂಪಗೊಂಡು ಜಾರಿಯಾಯಿತು. ಮುಂದಿನವರ್ಷ ಆಚಾರಸಂಪ್ರದಾಯಗಳ ಸಂಬಂಧವಾಗಿ **ನಲವತ್ತೆರಡಂಶಗಳ ಕಾನೂನು** (Forty Two Articles of Religion) ಎಂಬುದೂ ಪ್ರಚಾರವಾಯಿತು. ಪ್ರಾಟೆಸ್ಟೆಂಟ್ ಮತವು ಯೂರೋಪಿನಲ್ಲಿದ್ದ ರೀತಿಯಲ್ಲಿಯೇ ಇಂಗ್ಲಂಡಿನಲ್ಲಿಯೂ ತೋರಿಕೊಳ್ಳುವಂತೆ ನೆರವೇರಿತು. ನಾರ್ದಂಬರ್ಲಂಡ್‌ಶ್ರೀಮಂತನ ಆಸೆ ನೆರವೇರಿದಹಾಗೆಯೇ ತೋರಿತು. ಆದರೆ ಅತಿಸ್ವಲ್ಪಕಾಲದಲ್ಲಿಯೇ ತೊಂದರೆ ತೋರಿಕೊಂಡಿತು.

**ಸುಧಾರಣೆಗಳು**

ಚಿಕ್ಕರಾಜನಿಗೆ ಹದಿನಾರುವರ್ಷ ಮಾತ್ರ ತುಂಬಿತ್ತು. ಬಾಲ್ಯದಲ್ಲಿ ಆಟಪಾಟಗಳನ್ನು ಬಿಟ್ಟು ಮತಾಚಾರವಿಚಾರಗಳಲ್ಲಿ ಆಸಕ್ತಿತೋರಿದ ಈ ರಾಜನಿಗೆ ಬುದ್ಧಿಯಿದ್ದಷ್ಟು ದೇಹದಾರ್ಢ್ಯವಿರಲಿಲ್ಲ. ಸದಾರೋಗಿಯಾಗಿದ್ದನು. 1553ರಲ್ಲಿ ಚಿಕ್ಕರಾಜನಿಗೆ ಕ್ಷಯರೋಗತಗಲಿತು. ಅಲ್ಪಾಯುವೆಂದು ನಿಶ್ಚಯವಾಯಿತು. ಅತ್ಯಾದರದಿಂದ ನಡೆಸಿದ್ದ ಮತಾಚಾರಪರಿಷ್ಕರಣವು ತನ್ನ ತರುವಾಯ ವ್ಯತ್ಯಸ್ತವಾದೀತೆಂಬ ಶಂಕೆ ರಾಜನ ಮನಸ್ಸಿನಲ್ಲಿ ಹುಟ್ಟಿತು. ಏಕಂದರೆ 8ನೆ ಹೆನ್ರಿಯು ಸಾಯುವ ಮೊದಲು ಪಟ್ಟದಕ್ರಮವನ್ನು ನಿರ್ಣಯಿಸಿ ಎಡ್ವರ್ಡ್ ಮಕ್ಕಳಿಲ್ಲದೆ ಸತ್ತರೆ ಮೇರಿಯೂ, ಆಕೆ ಸಂತಾನವಿಲ್ಲದೆ ತೀರಿಕೊಂಡರೆ ಎಲಿಸಬೆತ್ತಳೂ ಪಟ್ಟವನ್ನೇರತಕ್ಕುದೆಂದು ಉಯಿಲನ್ನು ಮಾಡಿದ್ದನು. ಮೂವರಿಗೂ ಮಕ್ಕಳಿಲ್ಲದಿದ್ದರೆ ತನ್ನ ತಂಗಿ ಮೇರಿಯ ಸಂತಾನಕ್ಕೆ ಪಟ್ಟಬರತಕ್ಕುದೆಂದು ಆ ಹೆನ್ರಿ ನಿರ್ಧರಿಸಿದ್ದನೇವಿನಾ ಸ್ಕಾಟ್ಲಂಡಿನಲ್ಲಿ ರಾಣಿಯಾಗಿ ಆಳಿದ ಮಾರ್ಗರೆಟ್ ಸಂತಾನಕ್ಕೆ ಆಸ್ಪದಕೊಡಲಿಲ್ಲ. ಇದರಂತೆ ಮುಂದೆ ರಾಣಿಯಾಗತಕ್ಕವಳು ಮೇರಿ. ಆ ಮೇರಿಗೆ ರೋಮನ್‌ಕ್ಯಾಥಲಿಕ್ ಮತದಲ್ಲಿ ಪರಮವಿಶ್ವಾಸ. ಆದ್ದರಿಂದ ತಾನುಮಾಡಿದಕೆಲಸ ತನ್ನ ತರುವಾಯ ಕೆಡುವುದೆಂದು ಎಡ್ವರ್ಡನಿಗೆ ಪರಿತಾಪತೋರಿತು. ನಾರ್ದಂಬರ್ಲಂಡನಿಗೆ ತನ್ನ ಅಧಿಕಾರ ತಪ್ಪುವುದೆಂಬ ಭಯ ತೋರಿತ್ತು. ಇಂತಹ ಸಂದರ್ಭದಲ್ಲಿ ಆ ಶ್ರೀಮಂತನು ದೊಡ್ಡ ಪಿತೂರಿಯೊಂದನ್ನು ಕಟ್ಟಿದನು.

**ಪಟ್ಟದ ಉಯಿಲು**

ತನ್ನ ತರುವಾಯ ಪ್ರಾಟೆಸ್ಟೆಂಟ್‌ಮತಕ್ಕೆ ಲೋಪಬಂದೀತೆಂದು ಚಿಂತಿಸುತ್ತಿದ್ದ ಚಿಕ್ಕರಾಜನೆದುರಿನಲ್ಲಿ ತಾನೂ ಪ್ರಾಟೆಸ್ಟೆಂಟ್‌ಮತದಲ್ಲಿ ಅತಿನಿಷ್ಠನೆಂದು ನಟಿಸುತ್ತ ನಾರ್ದಂಬರ್ಲಂಡ್ ಶ್ರೀಮಂತನು ಎಡ್ವರ್ಡನಿಗೆ "ತಮ್ಮ ತಂದೆಯವರು ಉಯಿಲು ಮಾಡಿದಂತೆ ತಾವೂ ಒಂದು ಉಯಿಲುಮಾಡಬಹುದಲ್ಲವೆ! ತಮ್ಮ ಸೋದರಿಯರಿಬ್ಬರಿಗೂ ಪಟ್ಟವನ್ನು ತಪ್ಪಿಸುವುದು ತಮಗೇನೂ ಕಷ್ಟವಲ್ಲ. ತಮ್ಮ ಸೋದರತ್ತೆ ಮೇರಿಯ ಮೊಮ್ಮಗಳಾದ ಲೇಡಿ ಜೇನ್ ಗ್ರೇ (Lady Jane Grey) ಎಂಬಾಕೆ ಎಷ್ಟು ವಿದುಷಿಯಾಗಿದ್ದಾಳೆ! ಪ್ರಾಟೆಸ್ಟೆಂಟ್ ಮತದಲ್ಲಿ ಎಷ್ಟು ನಿಷ್ಠೆಯಿಂದಿದ್ದಾಳೆ! ಆಕೆಗೆ ಪಟ್ಟವನ್ನು ಕೊಡಿಸಿದರೆ ಮತಾಚಾರವಿಚಾರಗಳು ಇನ್ನೂ ಶುದ್ಧಿಗೊಳ್ಳುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿದನು. ಈ ಮಾತಿನಂತೆಯೇ ರಾಜನು ಉಯಿಲು ಬರೆದು ಕೆಲವು ದಿನಗಳಲ್ಲಿ ತೀರಿಕೊಂಡನು.

**ನಾರ್ದಂಬರ್ಲಂಡನ ಪಿತೂರಿ**

ಲೇಡಿಜೇನ್‌ಗ್ರೇ ರಾಣಿಯಾಗಬೇಕೆಂದು ಸನ್ತಾಪಪಡಲು ನಾರ್ದಂಬರ್ಲಂಡನಿಗೆ ಮತನಿಷ್ಠೆಯು ಕಾರಣವಲ್ಲ. ಆಕೆ ತನ್ನ ಸೊಸೆಯಾಗಿದ್ದುದೇ ನಿಜವಾದಕಾರಣ. ಸೊಸೆಗೆ ಪಟ್ಟಬಂದರೆ ತನ್ನಧಿಕಾರವನ್ನು ಶಾಶ್ವತಗೊಳಿಸಿಕೊಳ್ಳಬಹುದೆಂಬ ದುರಾಲೋಚನೆಯೇ ಆ ಶ್ರೀಮಂತನ ತಲೆಯಲ್ಲಿತ್ತು. ಅದನ್ನು ಸಾಧಿಸಲು ರಾಜನಸಾವಿನ ಸುದ್ದಿಯನ್ನು ಎರಡುದಿನ ಗೋಪ್ಯವಾಗಿಟ್ಟು ಮುಖ್ಯಾಧಿಕಾರಿಗಳ ಬೆಂಬಲವನ್ನು ಸಂಪಾದಿಸಿ ಲೇಡಿಜೇನ್ ರಾಣಿಯೆಂಬುದಾಗಿ ಪ್ರಕಟಿಸಿದನು. ರಾಜಕುಮಾರಿ ಮೇರಿಯು (ಕಥರೀನ್‌ರಾಣಿಯ ಮಗಳು) ತಪ್ಪಿಸಿಕೊಂಡು ರಾಜ್ಯದ ಮೂಡಲಜಿಲ್ಲೆಗಳಿಗೆ ಓಡಿದಳು. ಅಲ್ಲಿಯ ಜನರು ಪ್ರಾಟೆಸ್ಟೆಂಟ್‌ಮತದಲ್ಲಿ ಆದರವುಳ್ಳವರಾದರೂ ಮೇರಿಯಲ್ಲಿ ಪರಮವಿಶ್ವಾಸವನ್ನು ತೋರಿದರು. ಮೇರಿಯನ್ನು ರಕ್ಷಿಸಿ ಸೈನ್ಯಕಟ್ಟಿ ಲಂಡನ್ನಿನ ಕಡೆ ಹೊರಟರು. ಜನರೆಲ್ಲರೂ ಮೇರಿಯಕಡೆಯವರಾದರು. ಶ್ರೀಮಂತವರ್ಗದವರೂ ನಾರ್ದಂಬರ್ಲಂಡನನ್ನು ತಿರಸ್ಕರಿಸಿದರು. ಹೀಗಿದ್ದಾಗ ಲೇಡಿಜೇನಳಿಗೆ ಪಟ್ಟ ಹೇಗೆ ನಡೆದೀತು?

**ರಾಜಕುಮಾರಿ ಮೇರಿ**

ಹತ್ತುದಿನಮಾತ್ರ ಲಂಡನ್ನಿನಲ್ಲಿ ಆಕೆ ರಾಣಿಯೆನಿಸಿದಳು. ನಾರ್ದಂಬರ್ಲಂಡಿಗೆ ಹೆದರಿ ಜನರು ಸುಮ್ಮನಿದ್ದರು. ಮೇರಿಬರುವ ಸಮಾಚಾರವನ್ನು ಕೇಳಿದಕೂಡಲೇ ಜನರು ಮೇರಿಗೆಜಯವಾಗಲೆಂದು ಕೂಗಲಾರಂಭಿಸಿದರು. ಒಬ್ಬೊಬ್ಬರಾಗಿ ಎಲ್ಲರೂ ನಾರ್ದಂಬರ್ಲಂಡನ ಕೈಬಿಟ್ಟರು. ಮೇರಿ ರಾಜಧಾನಿಯನ್ನು ಪ್ರವೇಶಿಸಿದಾಗ ಎಲ್ಲರೂ ಸಂತೋಷದಿಂದ ಬರಮಾಡಿಕೊಂಡರು. ಆಗ ಈ ಕೆಟ್ಟ ಶ್ರೀಮಂತನು ತಾನೂ ಒಂದೆಡೆ ನಿಂತು "ಮೇರಿಗೆ ಜಯವಾಗಲಿ" ಎಂದುಕೂಗಿ ಮೊದಲಿನಿಂದಲೂ ತಾನು

**ಹತ್ತುದಿನದ ರಾಣಿ**

ರೋಮನ್ ಕ್ಯಾಥಲಿಕ್ ಮತದಲ್ಲಿಯೇ ನಿಜವಾದ ಭಕ್ತಿಯುಳ್ಳವನೆಂದು ನಟಿಸಲಾರಂಭಿಸಿದನು. ಈ ಆಷಾಢಭೂತಿತನವು ನಡೆಯದಾಯಿತು. ಮೇರಿಯೇ ನ್ಯಾಯವಾದರಾಣಿಯೆಂದೆಲ್ಲರೂ ಒಪ್ಪಿ ನಲಿದಾಡಿದರು. ಆಕೆಯಕಡೆಯುವರು ಬಂದು ನಾರ್ದಂಬರ್ಲಂಡ್ ಶ್ರೀಮಂತನನ್ನು ಹಿಡಿದು ಸೆರೆಮನೆಗೊಯ್ದರು.



# ಮೇರಿ (1553—1558)

ಜನನ 1516 ; ಸ್ಪೈನಿನ ಫಿಲಿಪ್ಪನೊಡನೆ ವಿವಾಹ 1554 .

## ಸಮಕಾಲಿಕ ಪ್ರಭುಗಳು

| ಸ್ಕಾಟ್ಲೆಂಡ್ | ಫ್ರಾನ್ಸ್ | ಸಾಮ್ರಾಜ್ಯ | ಪೋಪರು | ಸ್ಪೈನ್ |
|---|---|---|---|---|
| ಮೇರಿ (ಸ್ಟ್ಯುಯರ್ಟ್) 1542—1567 | 2ನೆ ಹೆನ್ರಿ 1547—1559 | 5ನೆ ಚಾರ್ಲ್ಸ್ 1519—1556 | 3ನೆ ಜೂಲಿಯಸ್ 1550—1555 | 1ನೆ ಚಾರ್ಲ್ಸ್ (ಚಕ್ರವರ್ತಿ 5ನೆ ಚಾರ್ಲ್ಸ್) 1516—1555 |
| | | 1ನೆ ಫರ್ಡಿನೆಂಡ್ 1556—1564 | 4ನೆ ಪಾಲ್ 1555—1559 | 2ನೆ ಫಿಲಿಪ್ 1556—1598 |

ಇಂಗ್ಲಂಡಿನಲ್ಲಿ ಆಳಿಕೆಯನ್ನು ಹೊತ್ತ ರಾಣಿಯರಲ್ಲಿ ಮೇರಿಯೇ ಮೊದಲನೆಯಾಕೆ. ಪಟ್ಟವನ್ನೇರಿದಾಗ ಆಕೆಗೆ ಮೂವತ್ತೇಳು ವರ್ಷಗಳಾಗಿದ್ದವು. ಸ್ವಭಾವತಃ ಆಕೆ ಧೀರೆ; ತನ್ನ ಮತದಲ್ಲಿ ದೃಢವಾದ ಭಕ್ತಿಯನ್ನಿಟ್ಟಿದ್ದಳು. ಆದರೆ ತಾಯಿಗೊದಗಿದ ಕಷ್ಟಪರಂಪರೆಯಲ್ಲಿ ತಾನೂ ಸಿಕ್ಕಿ ಅನ್ಯಾಯಕ್ಕೆ ಗುರಿಯಾಗಿದ್ದುದರಿಂದ ಆಕೆಯ ಅಂತರಂಗದಲ್ಲಿ ಅದರ ನೆನಪಿದ್ದು ಆಗಾಗ್ಗೆ ಮನಸ್ಸು ಹುಳಿಹುಳಿಯಾಗುತ್ತಿತ್ತು. ಎಲ್ಲ ಟ್ಯೂಡರರಂತೆ ಆಕೆಯಲ್ಲಿಯೂ ದರ್ಪಪ್ರತಿಷ್ಠೆಗಳು ತಕ್ಕಮಟ್ಟಿಗಿದ್ದವು. ತಾಯಿಯ ಸ್ಮರಣೆಯಲ್ಲಿಯೂ ಪೂರ್ವಾಚಾರಗಳಲ್ಲಿಯೂ ವಿಶೇಷಗೌರವವನ್ನಿಟ್ಟುಕೊಂಡಿದ್ದ ಆಕೆಗೆ 6ನೆ ಎಡ್ವರ್ಡ್‌ಕಾಲದಲ್ಲಿ ನಡೆದ ತಿದ್ದುಪಾಡುಗಳೂ ಏರ್ಪಾಡುಗಳೂ ಒಪ್ಪಿಗೆಯಾಗಲಿಲ್ಲ. ಅನ್ಯಾಯಕ್ಕೆಸಿಕ್ಕಿ ಪಡಬಾರದಕಷ್ಟಗಳನ್ನು ಪಟ್ಟಿದ್ದವಳೆಂದು ಜನರೆಲ್ಲರೂ ಆಕೆಯಲ್ಲಿ ಅಮಿತವಾದ ಪ್ರೀತಿವಿಶ್ವಾಸಗಳನ್ನು ತೋರಿ ಪಟ್ಟವನ್ನೇರಿದಾಗ ಸಂತೋಷಪಟ್ಟರು.

**ಸ್ವಭಾವ**

ಪಟ್ಟಕ್ಕೆಬಂದಕೂಡಲೆ ಮೇರಿಯು **ನಾರ್ಫಕ್, ಗಾರ್ಡಿನರ್** (Gardiner), **ಬಾನರ್** (Bonner) ಮುಂತಾದವರನ್ನು ಸೆರೆಯಿಂದ ಬಿಡುಗಡೆಮಾಡಿಸಿ ಹತ್ತಿರದಲ್ಲಿಟ್ಟುಕೊಂಡಳು. ಏಕೆಂದರೆ ಅವರು ಪೂರ್ವಾಚಾರಪರಾಯಣರಾಗಿದ್ದು ಹಿಂದಿನದೊರೆಯ ಆಗ್ರಹಕ್ಕೆ ಗುರಿಯಾಗಿದ್ದವರು. ತನ್ನ ಪಕ್ಷದವರೆನ್ನ ಬಹುದಾಗಿದ್ದವರನ್ನು ಈರೀತಿ ಸನ್ಮಾನಿಸಿದಮೇಲೆ ರಾಣಿಗೆ ಮತವ್ಯವಸ್ಥೆಯಲ್ಲಿ ಹಿಂದಿನಸ್ಥಿತಿಯನ್ನು ಪುನಃ

**ಮಂತ್ರಿಗಳು**

ಸ್ಥಾಪಿಸಬೇಕೆಂಬ ಸಂಕಲ್ಪಹುಟ್ಟಿತು. ಲೇಡಿಜೇನಳ ಪರವಾಗಿ ಪಿತೂರಿಕಟ್ಟಿದ್ದ **ನಾರ್ದಂಬರ್ಲಂಡ್**ಶ್ರೀಮಂತನೂ ಇನ್ನು ಹಲಕೆಲವರೂ ತಲೆಕಳೆದುಕೊಂಡರು. **ಲೇಡಿ ಜೇನ್** ಮತ್ತು ಆಕೆಯ ಭರ್ತ **ಲಾರ್ಡ್ ಗಿಲ್ಡ್‌ಫರ್ಡ್ ಡಡ್ಲಿ** ಎಂಬಿಬ್ಬರಿಗೆ ಮರಣದಂಡನೆ ಗೊತ್ತಾದಾಗ್ಗೂ ಅವರನ್ನು ಸೆರೆಯಲ್ಲಿಯೇ ಇಟ್ಟಳು. ಅವರಮೇಲೆ ಮುಯ್ಯಿತೀರಿಸಿಕೊಳ್ಳುವ ಛಲವಷ್ಟೇನೂ ಮೇರಿಗಿರಲಿಲ್ಲ. ಆದರೆ ತನ್ನ ತಾಯಿ ಕಷ್ಟಕ್ಕೆಸಿಕ್ಕುವಮುನ್ನ ಹೇಗಿದ್ದಿತೋ ಹಾಗೆ ಮತವ್ಯವಸ್ಥೆಯನ್ನು ನೆಲೆಗೊಳಿಸಬೇಕೆಂಬುದರಲ್ಲಿ ಕಾತರತೆಯೂ ಆತುರವೂ ಇದ್ದವು. ಆದ್ದರಿಂದ ಪರದೇಶಗಳಿಂದ ಬಂದಿದ್ದ ಪ್ರಾಟೆಸ್ಟೆಂಟರನ್ನು ದ್ರೋಹಿಗಳೆಂದೂ ಭ್ರಷ್ಟರೆಂದೂ ಓಡಿಸಿದಳು. ಪಾರ್ಲಿಮೆಂಟ್ ಸಭಿಕರುಸೇರಿ ಮೇರಿಯನ್ನು ಆದರದಿಂದ ರಾಣಿಯೆಂದು ಸ್ವೀಕರಿಸಿದ್ದಲ್ಲದೆ ಆರನೆಎಡ್ವರ್ಡ್‌ಕಾಲದಲ್ಲಿ ಜಾರಿಗೆಬಂದಿದ್ದ ಮತಸಂಬಂಧವಾದ ಕಾನೂನುಕಟ್ಟುಪಾಡುಗಳನ್ನು ರದ್ದುಗೊಳಿಸಿ ಆರಂಶಗಳಕಾನೂನೇ ಮೊದಲಾದ ಹಿಂದಿನ ಕಟ್ಟುಪಾಡುಗಳನ್ನು ಪುನರುದ್ಧಾರಮಾಡಿದರು. ಎಂಟನೆ ಹೆನ್ರಿ ಕಾಲದಲ್ಲಿದ್ದ ಸ್ಥಿತಿಯನ್ನು ಬೇಗನೆ ಸ್ಥಾಪಿಸಿದ್ದಾಯಿತು. ಆದರೆ ಮೇರಿಗೆ ತಂದೆಯು ನಡೆಸಿದ್ದ ಏರ್ಪಾಟುಗಳುಕೂಡ ಅನಿಷ್ಟವಾಗಿದ್ದವು. ರೋಮನ್‌ಕ್ಯಾಥಲಿಕ್‌ವ್ಯವಸ್ಥೆಯನ್ನೂ ಹ್ಯಾಪ್ಸ್‌ಬುರ್ಗ್‌ವಂಶದ ಸ್ನೇಹ ಸಂಬಂಧಗಳನ್ನೂ ಉದ್ಧರಿಸುವ ಆಸೆ ಆಕೆಯ ಅಂತರಂಗದಲ್ಲಿತ್ತು. ಗಾರ್ಡಿನರ್ ಮುಂತಾದವರಿಗೆ ಹೆನ್ರಿಕಾಲದ ವ್ಯವಸ್ಥೆಯ ಪುನಸ್ಸ್ಥಾಪನೆಯು ಸಾಕೆನ್ನಿಸಿತು. ರಾಣಿಗಾದರೋ ಚಾರ್ಲ್ಸ್ ಚಕ್ರವರ್ತಿಯ ಆಪ್ತತೆಯನ್ನು ಕಟ್ಟಿಕೊಂಡು ಪೋಪನ ಅಧಿಕಾರವನ್ನೂ ಮಠಗಳನ್ನೂ ಹಿಂದಿನಂತೆ ಎತ್ತಿಹಿಡಿಯುವ ಉದ್ದೇಶವು ಬಲವಾಗಿತ್ತು.

**ಪಾರ್ಲಿಮೆಂಟ್**

ಯಾರಾದರೂ ಯೋಗ್ಯಇಂಗ್ಲಿಷ್‌ಶ್ರೀಮಂತನನ್ನು ಮೇರಿ ಮದುವೆಯಾಗಬೇಕೆಂಬುದು ಪಾರ್ಲಿಮೆಂಟಿನ ಇಷ್ಟವಾಗಿತ್ತು. ಮೇರಿಯ ಮನಸ್ಸಿನಲ್ಲಿ ತನ್ನ ತಾಯಿ ಕಡೆಯ ಬಂಧುವಾದ ಚಕ್ರವರ್ತಿ 5ನೆ ಚಾರ್ಲ್ಸ್ ಸೂಚಿಸಿದಂತೆ ಸ್ಪೈನಿನ ಯುವ ರಾಜನೂ ಆತನ ಮಗನೂ ಆದ **ಫಿಲಿಪ್** ಎಂಬಾತನನ್ನು ಮದುವೆಮಾಡಿಕೊಳ್ಳುವ ಉದ್ದೇಶವಿತ್ತು. ಫಿಲಿಪ್ ಹನ್ನೊಂದುವರ್ಷ ಚಿಕ್ಕವನು. ಅಲ್ಲದೆ ಫಿಲಿಪ್ಪನನ್ನು ಮದುವೆಯಾದರೆ ಸ್ಪೈನಿನಲ್ಲಿ ಇಂಗ್ಲಂಡ್ ಸೇರಿಹೋಗಿ ತನ್ನ ಪ್ರತ್ಯೇಕತೆಯನ್ನೂ ಸ್ವಾತಂತ್ರ್ಯವನ್ನೂ ಕಳೆದುಕೊಳ್ಳುವ ಸಂಭವವಿತ್ತು. ಆದರೆ ಫಿಲಿಪ್ ತನ್ನ ತಾಯಿಯ ಬಳಗದವನು. ಅಲ್ಲದೆ ರೋಮನ್‌ಕ್ಯಾಥಲಿಕ್‌ಮತದಲ್ಲಿ ಅತಿನಿಷ್ಠನೆನಿಸಿದ್ದವನು. ಆತನ ಸಹಾಯದಿಂದ ತನ್ನಾಶೆಗಳನ್ನು ಸುಲಭವಾಗಿ ಸಾಧಿಸಿಕೊಳ್ಳಲಾದೀತೆಂಬ ನಂಬಿಕೆಯಿಂದ ಪಾರ್ಲಿಮೆಂಟಿನ ಇಷ್ಟವನ್ನು ಅಸಡ್ಡೆಮಾಡಿ ಆ ವಿವಾಹದಕರಾರಿಗೆ ಮೇರಿ ಒಪ್ಪಿದಳು. ಈ ಸಮಾಚಾರ ಹರಡಿದಕೂಡಲೆ ಜನರಲ್ಲಿ ಅಸಮಾಧಾನವೂ

**ವಿವಾಹವಿಚಾರ**

ಅಸಮಾಧಾನದಿಂದ ವಿರೋಧವೂ ತೋರಿಕೊಂಡವು. ಕೆಂಟ್ ಮತ್ತು ಸಸೆಕ್ಸ್ ಜಿಲ್ಲೆಗಳ ಜನರನ್ನು **ಸರ್ ಥಾಮಸ್ ವಯಟ್** (Sir Thomas Wyatt) ಎಂಬಾತನು ಎತ್ತಿಕಟ್ಟಿ ಪ್ರಬಲವಾದ ದಂಗೆಯನ್ನೆಬ್ಬಿಸಿದನು; ಅದು ವಿಪತ್ಕಾರಕವಾಗಿಯೇ ತೋರಿಕೊಂಡಿತು. ಸಾವಿರಾರುಜನರೊಡಗೂಡಿ ವಯಟ್ ನುಗ್ಗಿಬಂದು ಲಂಡನ್‌ಪಟ್ಟಣದ ಒಂದುಭಾಗವನ್ನು ಆಕ್ರಮಿಸಿದನು. ರಾಣಿಯೇ ಸ್ವತಃ ಮುಂದಾಗಿ ಪಟ್ಟಣಿಗರನ್ನು ಉತ್ಸಾಹಗೊಳಿಸಿದಮೇಲೆ ದಂಗೆಯಡಗುವಂತಾಯಿತು. ವಯಟ್ ಮುಂತಾದವರು ಸೆರೆಸಿಕ್ಕಿದರು. ಈ ದಂಗೆಯಲ್ಲಿ ಸಿಕ್ಕಿಕೊಂಡವರಿಗೆ ಕ್ರೂರವಾದ ದಂಡನೆಗಳಾದವು. ವಯಟ್ಟನಿಗೆ ಶಿರಚ್ಛೇದನವಾಯಿತು. ಅದೇವೇಳೆಯಲ್ಲಿ ಲೇಡಿ ಜೇನ್ ಗ್ರೇ ಮತ್ತು ಲಾರ್ಡ್ ಗಿಲ್ಡ್‌ಫರ್ಡ್ ಡಡ್ಲಿ ಇಬ್ಬರಿಗೂ ಹಿಂದೆಗೊತ್ತಾಗಿದ್ದಂತೆ ಶಿರಚ್ಛೇದನವಾಯಿತು. ರಾಜಕುಮಾರಿಎಲಿಸಬೆತ್ತಳಿಗೆಕೂಡ ಕೆಲಕಾಲ ನಿರ್ಬಂಧವೊದಗಿತು. ದಂಗೆಯು ಈ ರೀತಿಯಲ್ಲಿ ನಿರ್ನಾಮವಾದಮೇಲೆ ರಾಣಿಯು ಫಿಲಿಪ್ಪನನ್ನು ಇಂಗ್ಲಂಡಿಗೆ ಬರಮಾಡಿಕೊಂಡು ಆತನ ಪಾಣಿಗ್ರಹಣಮಾಡಿದಳು.

**ವಯಟ್ ದಂಗೆ**

ಮದುವೆಯಾದಮೇಲೆ ಪೋಪನ ಅಧಿಕಾರವನ್ನು ಇಂಗ್ಲಂಡಿನಲ್ಲಿ ಪುನಃ ಸ್ಥಾಪಿಸಲು ರಾಣಿಯು ಪ್ರಯತ್ನಪಟ್ಟಳು. ಮುಖ್ಯಮಂತ್ರಿಯಂತಿದ್ದ ಬಿಷಪ್‌ಗಾರ್ಡಿನರನು ಮೊದಮೊದಲು ರಾಜನಶ್ರೇಷ್ಠಾಧಿಕಾರವೇ ಮೇಲೆಂದು ಹೇಳುತ್ತಿದ್ದು ಈಗ ಪೋಪನಶ್ರೇಷ್ಠಾಧಿಕಾರವೇ ಇರತಕ್ಕುದೆಂದು ಅಭಿಪ್ರಾಯಪಟ್ಟು ರಾಣಿಗೆ ಬೆಂಬಲವಿತ್ತನು. 1554ರಲ್ಲಿ ಪಾರ್ಲಿಮೆಂಟಿನವರು ಅತಿವಿಧೇಯತೆಯಿಂದ ರಾಣಿಯ ಇಷ್ಟಕ್ಕನುಸಾರವಾಗಿ ವರ್ತಿಸಿ ಸೂಪ್ರೆಮಸಿಕಾನೂನನ್ನು ರದ್ದುಗೊಳಿಸಿ ಮತಭ್ರಷ್ಟರನ್ನು ದಂಡಿಸಲು ಹಳೆಯಕಾನೂನುಗಳನ್ನು ಉದ್ಧರಿಸಿದರು. ಪಾರ್ಲಿಮೆಂಟಿನವರಾಗಲಿ ಸಾಮಾನ್ಯಜನರಾಗಲಿ ರಾಣಿಗೆ ವಿರೋಧತೋರಲಿಲ್ಲ. ಪ್ರಾಟೆಸ್ಟೆಂಟ್‌ಮತವನ್ನು ಅಂತಃಕರಣಪೂರ್ತಿಯಾಗಿ ಸ್ವೀಕರಿಸಿದ್ದವರಿಗೆ ಇದು ಸರಿಬೀಳಲಿಲ್ಲ. ಆದರೆ ಅವರು ಹೆಚ್ಚುಸಂಖ್ಯೆಯವರಾಗಿರಲಿಲ್ಲ. ಪೋಪನ ಅಧಿಕಾರಸ್ಥಾಪನೆಗೆ ವಿರೋಧ ಕಂಡುಬಂದುದು ಬೇರೆಗುಂಪಿನ ಜನರಿಂದ. ಮಠಗಳ ಸ್ವತ್ತುಗಳನ್ನು ಕೊಂಡುಕೊಂಡಿದ್ದ ಜನರು ತಮ್ಮಸ್ವತ್ತುಗಳೆಲ್ಲ ಕೈತಪ್ಪಿಯಾವೆಂಬಶಂಕೆಯಿಂದ ವಿರೋಧತೋರತಕ್ಕವರಾದರು. ಮಠಮಂದಿರಗಳ ಆಸ್ತಿಪಾಸ್ತಿಗಳು ಹಿಂದಿನಂತೆ ತನ್ನಅಧಿಕಾರಕ್ಕೆ ಸೇರಬೇಕೆಂಬ ಹಟವನ್ನು ಪೋಪ್‌ತೊಡದಂತೆ ಸಂಧಾನನಡೆದಮೇಲೆಯೇ ಇಷ್ಟುಮಾತ್ರವಾದರೂ ಸಾಧ್ಯವಾಯಿತು. ಆದರೆ ಆಸ್ತಿಪಾಸ್ತಿಗಳಿಲ್ಲದಿದ್ದ ಅಧಿಕಾರವನ್ನು ಕಟ್ಟಿಕೊಳ್ಳಲು ಪೋಪನಕಡೆಯವರಿಗೆ ಆತುರವೇನಿದ್ದೀತು? ರಾಣಿಯಾದರೋ ತನ್ನ ಹಟವನ್ನು ಬಿಡದೆ ಪಾರ್ಲಿಮೆಂಟನಲ್ಲಿ ಶಾಸನಮಾಡಿಸಿದಕೂಡಲೆ ಹಿಂದೆ ಗಡೀಪಾರಾಗಿದ್ದ

**ಪುನರುದ್ಧಾರ ಪ್ರಯತ್ನ**

**ಕಾರ್ಡಿನಲ್ ಪೋಲ್** (Cardinal Pole) ಎಂಬ **ಪೋಪಿನಕಡೆಯ ಅಧಿಕಾರಿ**ಯನ್ನು ಇಂಗ್ಲಂಡಿಗೆ ಬರಮಾಡಿಕೊಂಡಳು. ಪೋಪನದೂತನಾಗಿದ್ದ ಆತನು ಇಂಗ್ಲಂಡಿನಚರ್ಚುಗಳನ್ನು ಪುನಃ ತನ್ನ ಅಡಳಿತಕ್ಕೆ ಜಗದ್ಗುರುಪೋಪನು ಸೇರಿಸಿಕೊಂಡನೆಂದು ಪ್ರಕಟಿಸಿದನು. ಈರೀತಿ ಮೇರಿಯು ತನ್ನ ತಂದೆತಮ್ಮಂದಿರಕಾಲದಲ್ಲಿ ನಡೆದಿದ್ದ ಏರ್ಪಾಡುಗಳನ್ನು ಒಂದೆರಡುವರ್ಷಗಳಲ್ಲಿ ಭಂಗಪಡಿಸಿದಳು. ರಾಣಿಯ ಮದುವೆಯವಿಚಾರವಾಗಿ ಜನರಲ್ಲಿ ಅಸಮಾಧಾನತೋರಿತ್ತು; ರೋಮನ್ ಕ್ಯಾಥಲಿಕ್ ಮತದ ಪುನರುದ್ಧಾರದಲ್ಲಿ ಯಾವ ಅಸಮಾಧಾನವೂ ತೋರಲಿಲ್ಲ. ಆದ್ದರಿಂದ ರಿಫರ್ಮೇಷನ್ ಸಂಬಂಧವಾದ ಏರ್ಪಾಡುಗಳು ಜನರಿಗಿಷ್ಟವಿಲ್ಲವೆ ರಾಜರಬಲವಂತದಿಂದಮಾತ್ರ ನಡೆದಿದ್ದುವೆಂಬುದು ಸ್ಪಷ್ಟ.

ಕಾರ್ಡಿನಲ್ ಪೋಲ್, ಬಿಷಪ್ ಗಾರ್ಡಿನರ್, ಬಿಷಪ್ ಬಾನರ್ ಮುಂತಾದವರಸಹಾಯವನ್ನೂ ಸ್ಪೈನ್‌ರಾಜನಬೆಂಬಲವನ್ನೂ ಪಡೆದಿದ್ದ ರಾಣಿಯು ಪ್ರಾಟೆಸ್ಟೆಂಟ್‌ಮತಸ್ಥರನ್ನು ದಂಡಿಸಲು ಮೊದಲಿಟ್ಟಳು. ಪಾರ್ಲಿಮೆಂಟಿನವರು ಮತಭ್ರಷ್ಟರನ್ನು ದಂಡಿಸಬೇಕೆಂಬ ಕಾನೂನುಗಳನ್ನು ಉದ್ಧರಿಸಿದ್ದರು; ಪೋಪನ ಅಧಿಕಾರಸ್ಥಾಪನೆಯನ್ನು ಜನರು ಸಮಾಧಾನದಿಂದ ಒಪ್ಪಿದ್ದರು. ಪ್ರಾಟೆಸ್ಟೆಂಟ್ ಮತಭಕ್ತರನ್ನು ದಂಡಿಸಿದರೆ ತನ್ನ ಇಷ್ಟಾರ್ಥ ನೆರವೇರುವುದೆಂದು ಮೇರಿ ಆಲೋಚಿಸಿ ಮತಭ್ರಷ್ಟರ ವಿಚಾರಣೆಗಾಗಿ ಒಂದು ಸಭೆಯನ್ನು ಏರ್ಪಡಿಸಿದಳು. ಎಡ್ವರ್ಡ್‌ಕಾಲದಲ್ಲಿ ಇಂಗ್ಲಂಡಿಗೆ ಬಂದು ಸೇರಿಕೊಂಡಿದ್ದ ಪ್ರಾಟೆಸ್ಟೆಂಟರಲ್ಲಿ ದೇಶಾಂತರಹೊರಡದಿದ್ದವರೆಲ್ಲರಿಗೂ ಕಷ್ಟಕಾಲವೊದಗಿತು. ಮೊದಲು **ರಾಜರ್ಸ್** (Rogers) ಎಂಬ ಪ್ರಾಟೆಸ್ಟೆಂಟ್ ಪುರೋಹಿತನು ವಿಚಾರಣೆಗೆಸಿಕ್ಕಿ ತನ್ನ ಮತವನ್ನು ಬಿಡಲಾರದೆ ಬೆಂಕಿಯ ಉರಿಯಲ್ಲಿ ಪ್ರಾಣವನ್ನು ಕೊಟ್ಟನು. ತರುವಾಯ **ಹೂಪರ್** (Hooper) ಮತ್ತು **ಫೆರಾರ್** (Ferrar) ಎಂಬ ಬಿಷಪ್ಪರುಗಳಿಬ್ಬರು ಚಿತ್ರಹಿಂಸೆಗೊಳಗಾದರೂ ತಮ್ಮ ಮತವನ್ನು ಬಿಡದೆ ಕಡೆಗೆ ಮತಕ್ಕಾಗಿ ಬೆಂಕಿಯಲ್ಲಿ ಪ್ರಾಣ ಕೊಟ್ಟರು. ಅನಂತರ **ಲಾಟಿಮರ್, ರಿಡ್ಲಿ** ಮತ್ತು **ಕ್ರ್ಯಾನ್ಮರ್** ಎಂಬ ಪ್ರಾಟೆಸ್ಟೆಂಟ್ ಗುರುಗಳ ಸರದಿ ಬಂತು. ಅವರಲ್ಲಿಬ್ಬರು ನಾರ್ದಂಬರ್ಲಂಡ್ ನಡೆಸಿದ ಪಿತೂರಿಯಲ್ಲಿ ಸೇರಿಕೊಂಡಿದ್ದಾಗ್ಗೂ ಅವರ ಮೇಲೆ ರಾಜದ್ರೋಹದ ಆರೋಪಣೆಯಾಗಲಿಲ್ಲ. ಮತಭ್ರಷ್ಟತೆಯ ತಪ್ಪಿಗಾಗಿಯೇ ವಿಚಾರಣೆ ನಡೆಯಿತು. 1555ರಲ್ಲಿ ಆ ಮೂವರು ವಿದ್ವಾಂಸರನ್ನೂ ಕ್ಯಾಥಲಿಕ್‌ಮತದ ವಿದ್ವಾಂಸರು ವಾದಕ್ಕೆ ನಿಲ್ಲಿಸಿದರು. ವಾದದಲ್ಲಿ ಲ್ಯಾಟಿಮರ್ ಮತ್ತು ರಿಡ್ಲಿ ಸೋಲನ್ನೊಪ್ಪಿಕೊಳ್ಳಲಿಲ್ಲ. ಚಿತ್ರಹಿಂಸೆ ಮಾಡಿದರೂ ತಮ್ಮ ಮತವನ್ನು ಬಿಟ್ಟುಬಿಡಲೊಪ್ಪಲಿಲ್ಲ. ಸ್ವಲ್ಪಕಾಲದಲ್ಲಿಯೇ ಅವರಿಬ್ಬರೂ ಬೆಂಕಿಗಾಹುತಿಯಾಗಿಹೋದರು.

**ಪ್ರಾಟೆಸ್ಟೆಂಟರ ದಂಡನೆ**

**ಘೋರ ದಹನ**

ಕ್ರ್ಯಾನ್ಮರನ ದಂಡನೆಯು ಅಷ್ಟು ಶೀಘ್ರವಾಗಿ ನಡೆಯದಾಯಿತು. ಆತನು ಆರ್ಚ್‌ಬಿಷಪ್ ಪದವಿಯಲ್ಲಿದ್ದವನು. ಪ್ರಾಟೆಸ್ಟೆಂಟ್ ಮತವನ್ನು ಸೇರುವಮೊದಲು ಆತನು ಪೋಪನಿಂದಲೇ ದೀಕ್ಷೆಯನ್ನೂ ಗೌರವವನ್ನೂ ಪಡೆದಿದ್ದನು. ಐದುತಿಂಗಳ ಕಾಲ ಸೆರ್ಬಂಧದಲ್ಲಿದ್ದಮೇಲೆ ಆತನ ವಿಚಾರಣೆಯೆಂಬುದು ನಡೆದು ಮತಭ್ರಷ್ಟನೆಂದು ತೀರ್ಮಾನವಾಗಿ ಆಗಬಹುದಾದ ಅವಮಾನವೆಲ್ಲವೂ ನಡೆಯಿತು. ವೃದ್ಧಾಪ್ಯದಲ್ಲಿದ್ದ ಆತನನ್ನು ಮರಣಶಿಕ್ಷೆಗೆಂದುಕೊಟ್ಟರು. ಯಾವುದಾದರೂಬಗೆಯಿಂದ ಪ್ರಾಟೆಸ್ಟೆಂಟ್ ಮತವು ತಪ್ಪೆಂದು ಆತನಿಂದ ಹೇಳಿಸಿದರೆ ಜನರ ಮನಸ್ಸಿನಲ್ಲಿ ಒಳ್ಳೆ ಪರಿಣಾಮವಾಗು ವುದೆಂಬ ಆಸೆಯಿಂದ ಕ್ರ್ಯಾನ್ಮರನನ್ನು ಚಿತ್ರವಿಚಿತ್ರಹಿಂಸೆಗಳಿಗೆ ಗುರಿಮಾಡಿದರು. ಹಿಂಸೆಯನ್ನು ತಡೆಯಲಾರದೆ ಕ್ರ್ಯಾನ್ಮರನು ಪ್ರಾಟೆಸ್ಟೆಂಟ್ ಮತವು ದುಷ್ಟವೆಂಬು

**ವೃದ್ಧ ಕ್ರ್ಯಾನ್ಮರನ ಬಲಿ**

ದಾಗಿಯೂ ತಾನು ಅದನ್ನು ತ್ಯಜಿಸಿರುವುದಾಗಿಯೂ ಅರ್ಥ ಕೊಡುವ ಬಿಕ್ಕಲಗಳಿಗೆ ಸಹಿಹಾಕಿದನು. ಆದರೆ ಕಥರೀನ್ ರಾಣಿಗೆ ವಿರುದ್ಧವಾಗಿ ನಿರ್ಣಯಿಸಿದ್ದಾತನಿಗೆ ಕ್ಷಮೆಯೆಲ್ಲಿ ಯದು? ಮರಣದಂಡನೆಯೇ ಕಡೆಗೂ ಗೊತ್ತಾಯಿತು. ಕಂಬಕ್ಕೆ ಆತನನ್ನು ಕಟ್ಟಿ ಸುತ್ತಲೂ ಕೊಳ್ಳಿಗಳ ರಾಶಿಯನ್ನು ಪೇರಿಸಿದಾಗ ಅಲ್ಲಿ ನೆರೆದಿದ್ದ ಜನರಿಗೆ ತನ್ನ ಪತ್ರಗಳನ್ನು ಓದಿಹೇಳಬೇಕೆಂದು ಆತನನ್ನು ಬಲವಂತಪಡಿಸಿ ದರು. ಆಗಲಾಮುದುಕನಿಗೆ ಹಿಂದಿಲ್ಲದ ಧೈರ್ಯಬಂತು. "ವಿಚಾರಣೆಗೆ ಸಿಕ್ಕಿ ಅವಮಾನಪಟ್ಟಮೇಲೆ ನಾನು ಸಹಿಹಾಕಿದ ಪತ್ರಗಳೆಲ್ಲವೂ ಸುಳ್ಳು" ಎಂದು ಜನರಿಗೆ ಕೂಗಿಹೇಳಿ "ಸಹಿಹಾಕಿದ ಈ ಬಲಗೈ ಹೆಚ್ಚು ಅಪರಾಧಮಾಡಿದ್ದು, ಆದ್ದರಿಂದ ಅದಕ್ಕೆ ಮೊದಲು ಶಾಸ್ತಿಯಾಗಲಿ!" ಎಂದು ತನ್ನ ಬಲಗೈಯನ್ನು ಮೊದಲು ಬೆಂಕಿ ಯಲ್ಲಿಟ್ಟು ಪ್ರಾಣಬಿಟ್ಟನು. ಅತಿ ಧೈರ್ಯದಿಂದಲೂ ದೈವಭಕ್ತಿಯಿಂದಲೂ ಪ್ರಾಟೆ ಸ್ಟೆಂಟರು ಈರೀತಿ ಪ್ರಾಣಗಳನ್ನರ್ಪಿಸುತ್ತಿದ್ದುದನ್ನು ಜನರು ಕಣ್ಣಾರೆಕಂಡಾಗ ಮೊದಮೊದಲು ಭಯವಿಸ್ಮಯಗಳನ್ನುಪಟ್ಟು ತರುವಾಯ ಅನುಕಂಪದಿಂದ ಕಣ್ಣೀರಿಡುತ್ತಿದ್ದರು.

ಮುನ್ನೂರುಮಂದಿ ಪ್ರಾಟೆಸ್ಟೆಂಟ್ ಮತಭಕ್ತರನ್ನು ಮೂರುವರ್ಷಗಳಕಾಲ ದಲ್ಲಿ ಲಂಡನ್‌ಮುಂತಾದ ಪಟ್ಟಣಗಳ ಚೌಕಗಳಲ್ಲಿ ಜೀವಂತವಾಗಿ ಸುಡಿಸಿಬಿಟ್ಟರು. ಅವರೆಲ್ಲರೂ ಸತ್ಯನಿಷ್ಠರಾಗಿಯೂ ಮತಭಕ್ತರಾಗಿಯೂ ಇದ್ದು ತಮ್ಮ ಅಂತಃಕರಣ ಶುದ್ಧಿಯಿಂದ ಅನೇಕಹಿಂಸೆಗಳನ್ನು ಅನುಭವಿಸಿ ಕಡೆಗೆ ಪ್ರಾಣಗಳನ್ನು ಅರ್ಪಿಸಿ ದರು. ಅವರ ದಹನವನ್ನು ನೋಡುತ್ತಿದ್ದ ಜನರಲ್ಲಿ ಮೊದಲು ಭಯತೋರಿದರೂ ಸ್ವಲ್ಪಕಾಲದಲ್ಲಿಯೇ ಅನುತಾಪಪರಿತಾಪಗಳು ತೋರಿದವು. ನೋಡುತ್ತಿದ್ದ ಜನ ರೆಲ್ಲರೂ ಭಕ್ತನ ಕಷ್ಟವನ್ನು ಕಂಡು ಅಳುವವರೇ ಆದರು. "ಎಷ್ಟು ಸ್ಥಿರ ಇವರ ಸಂಕಲ್ಪ! ಎಷ್ಟು ಧೈರ್ಯ! ಮತದಲ್ಲಿ ಎಷ್ಟು ಭಕ್ತಿ! ಎಷ್ಟು ಒಳ್ಳೆಯವರು!

ಇಂತಹವರನ್ನು ಹಿಂಸಿಸುವುದು ಎಷ್ಟು ಪಾಪಕರ!" ಎನ್ನುವ ಯೋಚನೆಗಳು ಜನರ ಮನಸ್ಸಿನಲ್ಲಿ ಬಲವಾಗಿ ಪ್ರಾಟೆಸ್ಟೆಂಟ್ ಮತದಲ್ಲಿ ಹಿಂದಿಲ್ಲದಿದ್ದ ಗೌರವವಿಶ್ವಾಸಗಳು ಹುಟ್ಟಿಕೊಂಡವು. ಮೇರಿ, ಕಾರ್ಡಿನಲ್ ಪೋಲ್ ಮುಂತಾದವರು ನಿರೀಕ್ಷಿಸಿದ್ದೊಂದು, ಆದುದು ಬೇರೊಂದು. ಪ್ರಾಟೆಸ್ಟೆಂಟ್‌ಮತದ ಗುರುತೇ ಇಲ್ಲದಂತೆ ಸರ್ವನಾಶಗೊಳಿಸಬೇಕೆಂದುಮಾಡಿದ ಕೆಲಸದಿಂದ ಜನರೆಲ್ಲರಿಗೂ ಪ್ರಾಟೆಸ್ಟೆಂಟ್‌ಮತದ ಮಹತ್ವವನ್ನೆತ್ತಿ ತೋರಿದಂತಾಗಿಹೋಯಿತು. ಮೇರಿರಾಣಿಗೂ ಆಕೆಯ ಸಹಾಯಕರಿಗೂ ಕ್ರೂರಾತ್ಮರೆಂಬ ಕೆಟ್ಟ ಹೆಸರು ಶಾಶ್ವತವಾಗಿ ನಿಂತಿತು. ಮೇರಿಯನ್ನು **ಬ್ಲಡಿಮೇರಿ**ಯೆಂಬುದಾಗಿ ಕರೆಯುವುದುಂಟು. ಆದರೆ ಆಕಾಲದಲ್ಲಿ ಪರಮತವನ್ನು ಸಹಿಸಬೇಕೆಂಬ ಭಾವನೆಯೇ ಯೂರೋಪಿನಲ್ಲಿರಲಿಲ್ಲ. ತಾನು ಹಿಡಿದಿದ್ದ ಮತವೊಂದೇ ಸರಿಯಾದುದೆಂದೂ ಮತಭ್ರಷ್ಟರನ್ನು ಕೊಂದರೆ ಪುಣ್ಯಬರುವುದೆಂದೂ ನಂಬಿಕೆಯಾಗಿತ್ತು. ಪ್ರಾಟೆಸ್ಟೆಂಟರಾದವರು ಕ್ಯಾಥಲಿಕ್ಕರನ್ನು ಕೊಲ್ಲಿಸುವುದೂ ಕ್ಯಾಥಲಿಕ್ಕರು ಪ್ರಾಟೆಸ್ಟೆಂಟರನ್ನು ಕೊಲ್ಲಿಸುವುದೂ ಅವಶ್ಯಕರ್ತವ್ಯವೆಂದು ಜನರು ತಿಳಿದಿದ್ದರು. ಆದ್ದರಿಂದ ಮೇರಿ ಮುಂತಾದವರು ಸ್ವಭಾವತಃ ಪಿಶಾಚಿಗಳೆನ್ನುವುದು ತಪ್ಪು. ಅವರ ಮತಭಕ್ತಿಯು ವಿಪರೀತವಾಗಿ ಅನ್ಯಾಯವೇ ನ್ಯಾಯದಂತೆ ಕಂಡಿತು.

**ದಹನಗಳ ಪರಿಣಾಮ**

**ಅಸಹನವೇ ಧರ್ಮ**

ಮತವಿಚಾರದಲ್ಲಿ ಎಷ್ಟು ಪ್ರಯತ್ನಮಾಡಿದರೂ ಮೇರಿಯ ಆಸೆ ಸಲ್ಲದಾಯಿತು. ಪ್ರಾಟೆಸ್ಟೆಂಟರನ್ನು ಕ್ರೂರದಂಡನೆಗೆ ಗುರಿಮಾಡಿಸಿದುದಲ್ಲದೆ ಇತರಬಗೆಗಳಲ್ಲಿಯೂ ಪೋಪನಅಧಿಕಾರವನ್ನು ನೆಲೆಗೊಳಿಸಲು ಸದಾ ಪ್ರಯತ್ನಮಾಡುತ್ತಿದ್ದ ಆಕೆಗೆ ಸಂತೋಷವಾಗಲಿ ಸಮಾಧಾನವಾಗಲಿ ಇಲ್ಲದೆಹೋಯಿತು. ದೇಶಾಂತರ ಹೊರಟುಹೋದ ಪ್ರಾಟೆಸ್ಟೆಂಟರು ತಮ್ಮ ಕೈಲಾದಂತೆ ತೊಂದರೆಕೊಡಲು ಉದ್ಯಮಿಸುತ್ತಲೇ ಇದ್ದರು. ರಾಣಿಯ ಆರೋಗ್ಯವೂ ಕೆಡುತ್ತಬಂತು. ಕೈಹಿಡಿದ ಫಿಲಿಪ್ಪನು ಸ್ಪೈನಿನಲ್ಲಿಯೇ ಇದ್ದುಕೊಂಡು ರಾಣಿಯನ್ನು ಉದಾಸೀನಮಾಡಿಬಿಟ್ಟನು. 1553ರಲ್ಲಿ ಇಂಗ್ಲಂಡಿಗೆ ಬಂದು ಮದುವೆಮಾಡಿಕೊಂಡುಹೋದವನು ಪುನಃ 1557ರವರೆಗೂ ತನ್ನ ಹೆಂಡತಿಯ ಮುಖವನ್ನೇ ನೋಡಲಿಲ್ಲ. 1557ರಲ್ಲಿ ಇಂಗ್ಲಂಡಿಗೆ ಬಂದವನು ಮೇರಿಯನ್ನೂ ಇಂಗ್ಲಂಡನ್ನೂ ತನ್ನ ಜಗಳಗಳಲ್ಲಿ ಸೇರಿಸಿಬಿಟ್ಟು ಹೊರಟುಹೋದನು. ಫಿಲಿಪ್ಪಿಗಾಗಿ ಮೇರಿ ಒಂದು ಯುದ್ಧವನ್ನು ಕಟ್ಟಿಕೊಳ್ಳಬೇಕಾಗಿ ಬಂತು.

**ರಾಣಿಯ ದುಃಖ**

ಫ್ರಾನ್ಸಿನಲ್ಲಿ ಹಿರೇಫ್ರಾನ್ಸಿಸ್ 1547ರಲ್ಲಿ ತೀರಿಹೋದಮೇಲೆ ಆತನಮಗ **ಎರಡನೆ ಹೆನ್ರಿ**(Henry II) ಎಂಬ ಹೆಸರಿನ ರಾಜನಾಗಿ ತನ್ನ ರಾಜ್ಯದ ಪ್ರಾಬಲ್ಯವನ್ನು ಸ್ಥಾಪಿಸಿ

ಕೊಳ್ಳಲು ತೊಡಗಿದ್ದನು. ಚಕ್ರವರ್ತಿ 5ನೇ ಚಾರ್ಲ್ಸ್‌ಪ್ರಭುವೇ ಪರಮವೈರಿಯಾಗಿದ್ದವನು. ಎರಡನೆ ಹೆನ್ರಿಯು ಜಾಣತನದಿಂದ ಚಾರ್ಲ್ಸ್‌ನ ಶತ್ರುಗಳನ್ನು ತನ್ನ ಕಡೆ ಮಾಡಿಕೊಂಡು ಪ್ರಬಲನಾಗಿ ಚಾರ್ಲ್ಸ್‌ಗೆ ತೊಂದರೆಕೊಟ್ಟನು. ಚಾರ್ಲ್ಸ್ ವೃದ್ಧಾಪ್ಯದಲ್ಲಿದ್ದು ರೋಗಗ್ರಸ್ತನಾಗಿದ್ದುದರಿಂದ ಹೆಚ್ಚು ಶ್ರಮಿಸಲಾರದೆ 1556ರಲ್ಲಿ ರಾಜ್ಯತ್ಯಾಗಮಾಡಲು ನಿಶ್ಚಯಿಸಿ ತನ್ನ ರಾಜ್ಯಗಳನ್ನು ಎರಡುಪಾಲುಮಾಡಿ ತಮ್ಮನಿಗೊಂದನ್ನೂ ಮಗನಿಗೊಂದನ್ನೂ ಕೊಡಿಸಿದನು. ಜರ್ಮನಿ, ಹಂಗರಿ, ಬೊಹೀಮಿಯ ಮುಂತಾದ ಮಧ್ಯರಾಷ್ಟ್ರಗಳು ತಮ್ಮನಾದ **ಫರ್ಡಿನೆಂಡಿಗೆ** (Ferdinand) ಸಂದವು.

**ಫರಾನ್ಸೀ ಯುದ್ಧ**

ಸ್ಪೈನ್, ವೆಸ್ಟಿಂಡೀಸ್, ಇಟಲಿ, ನೆದರ್ಲಂಡ್ಸ್‌ಭಾಗಗಳು ಮಗನಾದ ಫಿಲಿಪ್ಪನ ಪಾಲಿಗೆ ಬಂದವು. **ಹಾಪ್ಸ್‌ಬುರ್ಗ್** (Hapsburg) ವಂಶದ **ಹಿರಿಯಶಾಖೆ** ಸ್ಪೈನಿನಲ್ಲಿಯೂ **ಕಿರಿಯಶಾಖೆ** ಜರ್ಮನಿ, ಆಸ್ಟ್ರಿಯಹಂಗರಿಗಳಲ್ಲಿಯೂ ಈ ಬಗೆಯಲ್ಲಿ ಸ್ಥಾಪಿತವಾದವು. 1557ರಲ್ಲಿ ಸ್ಪೈನ್‌ರಾಜನಾದ ಫಿಲಿಪ್ಪನು ತನ್ನ ಪ್ರಾಬಲ್ಯವನ್ನು ಸ್ಥಾಪಿಸಬೇಕೆಂದು ಫ್ರಾನ್ಸಿನ 2ನೆ ಹೆನ್ರಿಯೊಡನೆ ಯುದ್ಧಕ್ಕೆ ಸಿದ್ಧನಾಗಿ ಆ ಜಗಳದಲ್ಲಿ ಇಂಗ್ಲಂಡನ್ನು ತನ್ನ ಕಡೆಸೇರಿಸಿಕೊಳ್ಳಲು ತನ್ನ ಹೆಂಡತಿಯಾದ ಮೇರಿಯನ್ನು ಪ್ರೇರಿಸಿದನು.

ಫ್ರೆಂಚರೂ ಪೋಪನೂ ಒಂದುಪಕ್ಷ, ಫಿಲಿಪ್ ಮತ್ತು ಮೇರಿ ಪ್ರತಿಪಕ್ಷ. ಪೋಪನ ಅಧಿಕಾರವನ್ನು ನೆಲೆಗೊಳಿಸಲು ಸರ್ವಪ್ರಯತ್ನವನ್ನೂ ಮಾಡುತ್ತಿದ್ದ ಮೇರಿಯು ಪೋಪನಿಗೆ ಶತ್ರುವಾಗಿ ನಡೆದುಕೊಳ್ಳಬೇಕಾಗಿ ಬಂತು. ನಡೆದ ಯುದ್ಧಗಳಲ್ಲಿ ಫಿಲಿಪ್ಪನು ಫ್ರಾನ್ಸಿನವರನ್ನು ಒಂದು ಭಾರಿಕದನದಲ್ಲಿ ಸೋಲಿಸಿದ್ದಲ್ಲದೆ ಪೋಪನ ಬಲವನ್ನೂ ಸೋಲಿಸಿಬಿಟ್ಟನು. ಪೋಪನು ಸ್ಪೈನ್‌ರಾಜನ ಆಶ್ರಯದಲ್ಲಿರಬೇಕಾಗಿ ಬಂತು. ಫಿಲಿಪ್ಪನೇನೋ ಜಯಶಾಲಿಯಾದನು. ಆದರೆ ಇಂಗ್ಲಂಡಿಗೆ ನಷ್ಟವೇ ಆಯಿತು. ಪೋಪನು ಇಂಗ್ಲಂಡಿನಮೇಲೆ ಕೋಪಗೊಂಡು

**ಕಲೇ ನಷ್ಟ**

ಕಾರ್ಡಿನಲ್ ಪೋಲನನ್ನು ಅಧಿಕಾರದಿಂದ ತಪ್ಪಿಸಿದನು. ಫ್ರೆಂಚರು ಅದೇಸಮಯವೆಂದು ಇಂಗ್ಲಂಡಿನವರಿಗೆ ಸೇರಿದ್ದ ಏಕಮಾತ್ರಪಟ್ಟಣ **ಕಲೇ**(Calais)ಯನ್ನು 1558ರಲ್ಲಿ ಮುತ್ತಿದರು. ಫಿಲಿಪ್ಪನು ಇಂಗ್ಲಿಷರ ಸಹಾಯಕ್ಕೊದಗಲೇ ಇಲ್ಲ. ಕಲೇ ಪಟ್ಟಣವನ್ನು ಫ್ರೆಂಚರು ಹಿಡಿದುಬಿಟ್ಟರು. ಎಲ್ಲಬಗೆಯಲ್ಲಿಯೂ ಆಶಾಭಂಗವನ್ನು ಸಹಿಸಿಕೊಂಡಿದ್ದ ಮೇರಿಯು ಈ ನಷ್ಟವನ್ನು ಸಹಿಸಲಾರದೆ ಕೊರಗಿಕೊರಗಿ ಸತ್ತಳು. ಆಕೆ

**ರಾಣಿಯ ಕೊರಗು**

ಸತ್ತ ಹನ್ನೆರಡುಗಂಟೆಗಳಿಗೆ ಕಾರ್ಡಿನಲ್‌ಪೋಲ್‌ಕೂಡ ಪ್ರಾಣಬಿಟ್ಟನು. ಇಬ್ಬರೂ ದುಃಖದಿಂದ ಶೀರಿಹೋದರು. ಫಿಲಿಪ್ಪನ ಕೈಹಿಡಿದು ಎಷ್ಟೋ ಆಸೆಯಿಂದಿದ್ದ ಮೇರಿಗೆ ಸರ್ವವಿಧದಲ್ಲಿಯೂ ವಿಷಾದವೇ ಉಂಟಾಯಿತು. ತೋರಮಾಣಿಕವೆಂದು ಹಿಡಿದುದು ಭೂರಿಕೆಂಡವಾಯಿತು.

ಮೇರಿರಾಣಿಯ ಕಾಲದಲ್ಲಿ ನಡೆದುದು ಮುಖ್ಯವಾಗಿ ಎರಡು ಪ್ರಯತ್ನಗಳು. ರೋಮನ್‌ಕ್ಯಾಥಲಿಕ್‌ಮತದ ಉದ್ಧಾರವೊಂದು, ಸ್ಪೈನ್‌ಸಂಬಂಧ ಮತ್ತೊಂದು. ಎರಡು ಪ್ರಯತ್ನಗಳೂ ನಾಶವಾದವು. ಪ್ರಾಟೆಸ್ಟೆಂಟರನ್ನು ಸರ್ವನಾಶಗೊಳಿಸಲು ಕೈಕೊಂಡ ಪ್ರಯತ್ನಗಳಿಂದಲೇ ಜನರಿಗೆ ಪ್ರಾಟೆಸ್ಟೆಂಟರಲ್ಲಿ ವಿಶ್ವಾಸಗೌರವಗಳು ನೆಲೆಸುವಂತೆ ನೆರವೇರಿತು.

# ಎಲಿಸಬೆತ್ ರಾಣಿ (1558—1603)

ಜನನ 1533

## ಸಮಕಾಲಿಕ ಪ್ರಭುಗಳು

| ಸ್ಕಾಟ್ಲೆಂಡ್ | ಫ್ರಾನ್ಸ್ | ಸಾಮ್ರಾಜ್ಯ | ಸ್ಪೈನ್ |
|---|---|---|---|
| ಮೇರಿ ಸ್ಟ್ಯುಯರ್ಟ್ (1542—1567) | 2ನೆ ಹೆನ್ರಿ (1547—1559) | 1ನೆ ಫರ್ಡಿನೆಂಡ್ | 2ನೆ ಫಿಲಿಪ್ (1556—1598) |
| | 2ನೆ ಫ್ರಾನ್ಸಿಸ್ (1559—1560) | | |
| | 9ನೆ ಚಾರ್ಲ್ಸ್ (1560—1574) | 2ನೆ ಮ್ಯಾಕ್ಸಿಮಿಲಿಯಗ್ | |
| 6ನೆ ಜೇಮ್ಸ್ (1567—1625) | 3ನೆ ಹೆನ್ರಿ (1574—1589) | 2ನೆ ರುಡಾಲ್ಫ | |
| | 4ನೆ ಹೆನ್ರಿ (ಬೋರ್ಬನ್) (1589—1610) | | 3ನೆ ಫಿಲಿಪ್ (1598—1621) |

ರಾಣಿಯಾದಾಗ ಆನ್‌ಬೊಲೇನಳ ಮಗಳಿಗೆ 25 ವರ್ಷಗಳಾಗಿದ್ದವು. ಹುಟ್ಟಿದ ಸ್ವಲ್ಪಕಾಲದಲ್ಲಿಯೇ ತಾಯಿಯನ್ನು ಕಳೆದುಕೊಂಡು ಬೆಳೆದಿದ್ದ ಈಕೆಗೆ ದೃಢವಾದ ಆರೋಗ್ಯದಜೊತೆಗೆ ಅಧಿಕಾರಪ್ರೀತಿಯೂ ದೂರಾಲೋಚನೆಯೂ ಇತ್ತು. ಎಡ್ವರ್ಡ್‌ಕಾಲದಲ್ಲಿಯೂ ಮೇರಿಕಾಲದಲ್ಲಿಯೂ ಉಪಾಯದಿಂದ ಕಾಲಕಳೆದವಳಿಗೆ ಯುಕ್ತಿಯು ಸಹಜವಾಗಿತ್ತು. ಒಳ್ಳೆ ವಿದ್ಯಾಭ್ಯಾಸವಾಗಿತ್ತು; ಆದರೆ ಸಾಹಿತ್ಯದಲ್ಲಾಗಲಿ ಮತವಿಚಾರಗಳಲ್ಲಾಗಲಿ ಆಕೆಗೆ ಹೆಚ್ಚಾದ ಆದರಶ್ರದ್ಧೆಗಳಿರಲಿಲ್ಲ. ಸ್ವಪ್ರಯೋಜನವನ್ನು ಸಾಧಿಸುವುದರಲ್ಲಿ ತಂದೆಗಿದ್ದಂತೆ ಸಾಮರ್ಥ್ಯಧೈರ್ಯಗಳೊಂದಿಗೆ ಪೌರುಷವೂ ಇತ್ತು. ಹೆಂಗಸಾದರೂ ಮೃದುತನವಿರಲಿಲ್ಲ. ಹೆಮ್ಮೆ, ಸ್ತೋತ್ರಪ್ರೀತಿ, ಅಲಂಕಾರಪ್ರೀತಿಗಳು ಬೇಕಾದಷ್ಟಿದ್ದವು. ಮನಸ್ಸಿನಲ್ಲಿ ದೂರಾಲೋಚನೆಯನ್ನಿಟ್ಟುಕೊಂಡು ಹಿಡಿದ ಪಟ್ಟನ್ನು ಬಿಡತಕ್ಕವಳಲ್ಲವಾದಾಗ್ಯೂ ಸಣ್ಣವಿಚಾರಗಳಲ್ಲಿ ನಿಶ್ಚಯತೋರದೆ ಕಾಲ ತಳ್ಳುವವಳು. ಅನೇಕಾಂಶಗಳಲ್ಲಿ ಜಿಪುಣತನ; ತನಗೆ ಲೋಲುಪ್ತಿತೋರಿದ ಕೆಲವಂಶಗಳಲ್ಲಿಮಾತ್ರ ದುಂದುಗಾರಿಕೆ. ತಾಯಿಯ ಚಿತ್ತಚಾಂಚಲ್ಯವೂ ತಂದೆಯ ದರ್ಪವೂ ತಾತನಯುಕ್ತಿಯೂ ಆಕೆಯಲ್ಲಿ ಒಟ್ಟುಗೂಡಿದ್ದವು. ಅತ್ಯಾಚಾರ ಅನಾಚಾರಗಳ ಮಿಶ್ರಮೂರ್ತಿಯಂತಿದ್ದ ಈಕೆಯು ಇಂಗ್ಲಂಡನ್ನು ತನ್ನ ಸ್ವಂತವೆಂದೇ

**ಸ್ವಭಾವ**

ಭಾವಿಸಿಕೊಂಡು ಅತಿಕಷ್ಟಕಾಲದಲ್ಲಿ ರಾಣಿಯಾಗಿ 45ವರ್ಷಗಳಕಾಲವಾಳಿದಳು. ಇಂಗ್ಲಂಡನ್ನಾಳಿದ ರಾಜಾರಾಣಿಯರಲ್ಲಿ ಆಕೆಗೆ ಘನವಾದ ಕೀರ್ತಿಯುಂಟು.

ಮದುವೆಮಾಡಿಕೊಂಡರೆ ತನ್ನ ಅಧಿಕಾರವನ್ನು ಹಂಚಿಕೊಳ್ಳಬೇಕಾದೀತೆಂಬ ಶಂಕೆಯಿಂದ ಈ ರಾಣಿ ಮದುವೆಯಿಲ್ಲದೆಯೇ ಜೀವನವನ್ನು ಕಳೆದಳು. ಪ್ರಧಾನಮಂತ್ರಿಯಾದವನೊಬ್ಬನಾದರೂ ಇರಲಿಲ್ಲ. ವಿಧೇಯರಾಗಿ ಹೇಳಿದ ಕೆಲಸವನ್ನು ನಡೆಸಿಕೊಂಡು ಚಾಕರಿ ನಡೆಸುತ್ತಿದ್ದವರಿದ್ದರು. ಅವರಲ್ಲಿ ರಾಣಿಯು ಆಗಾಗ್ಗೆ ವಿಶ್ವಾಸವನ್ನು ತೋರಿ ಅವರ ಭಕ್ತಿಯನ್ನು ಕಾಪಾಡಿಟ್ಟುಕೊಂಡಳು. **ಸರ್ ವಿಲಿಯಂ ಸೆಸಿಲ್** (Sir William Cecil), **ಸರ್ ನಿಕೊಲಾಸ್ ಬೇಕನ್**(Sir Nicholas Bacon), **ಸರ್ ಫ್ರಾನ್ಸಿಸ್ ವಾಲ್ಸಿಂಘಂ**(Sir Francis Walsingham) ಎಂಬುವವರು ರಾಣಿಯಸಹಾಯಕರಲ್ಲಿ ಹೆಸರುವಾಸಿಯಾದವರು. ಆಜೀವಪರ್ಯಂತ ಅವರು ರಾಣಿಯ ಸೇವೆಮಾಡಿದರು. ಅವರು ತೀರಿಕೊಂಡಮೇಲೆ ರಾಣಿಯು ಅವರ ಮಕ್ಕಳಿಗೇ ಅವರ ಉದ್ಯೋಗಗಳನ್ನು ಕೊಡಿಸಿದಳು.

**ಸಹಾಯಕರು**

ರಾಣಿಯ ಆಸ್ಥಾನಿಕರ ಗುಂಪು ಬೇರೊಂದಿತ್ತು. ವಿನೋದವಿಲಾಸಗಳಲ್ಲಿ ರಾಣಿಗೆ ಬೇಕಾದವರವರು. ಅವರಿಗೆ ಸಾಮರ್ಥ್ಯಯೋಗ್ಯತೆಗಳು ಕಡಿಮೆಯಾಗಿದ್ದಾಗ್ಯೂ ರಾಣಿಯಪ್ರೀತಿಯನ್ನು ಸಂಪಾದಿಸಿ ಅವರು ಬಹುಮಾನಗಳನ್ನು ಪಡೆದರು. ಅಂತಹವರಲ್ಲಿ ಚಿಕ್ಕಂದಿನ ಗೆಳೆಯನಾಗಿದ್ದ ಲೆಸ್ಟರಿನ ಶ್ರೀಮಂತನಾದ **ರಾಬರ್ಟ್ ಡಡ್ಲಿ**(Robert Dudley, Earl of Leicester)ಎಂಬಾತನೂ ಎಸೆಕ್ಸ್‌ಶ್ರೀಮಂತನಾದ **ರಾಬರ್ಟ್ ಡೆವರೋ**(Robert Devereaux, Earl of Essex) ಎಂಬಾತನೂ ಪ್ರಸಿದ್ಧರು. ಇಬ್ಬರೂ ರಾಣಿಗೆ ಸಮವಯಸ್ಕರಾಗಿದ್ದುದರಿಂದ ಕಡೆತನಕ ರಾಣಿಯು ಅವರಲ್ಲೊಬ್ಬರನ್ನು ಮದುವೆಯಾಗಬಹುದೆಂಬ ನಿರೀಕ್ಷೆಯಿತ್ತು.

**ಆಸ್ಥಾನಿಕರು**

ಈ ರಾಣಿಯ ಆಳಿಕೆಯಲ್ಲಿ ನಾಲ್ಕಂಶಗಳು ಮುಖ್ಯ. ಅವುಗಳು ಪರಸ್ಪರವಾದ ಹೊಂದಿಕೆಯನ್ನು ಪಡೆದು ನಡೆದವಾದರೂ ಬೇರೆಬೇರೆಯಾಗಿಯೇ ವಿವರಿಸಿಕೊಳ್ಳಬಹುದು.

## 1. ಮತವ್ಯವಸ್ಥೆ

ಎಲಿಸಬೆತ್ ಪಟ್ಟಕ್ಕೆ ಬಂದಾಗ ಮತವಿಚಾರದಲ್ಲಿ ಯಾವುದಾದರೂ ಸುವ್ಯವಸ್ಥೆಯನ್ನು ನೆಲೆಗೊಳಿಸುವುದು ಅತ್ಯಗತ್ಯವಾಗಿತ್ತು. ಮೇರಿರಾಣಿ ನಡೆಸಿದ ಕೆಲಸಗಳಿಂದ ಅವ್ಯವಸ್ಥೆಯೇ ಪರಿಣಾಮವಾಗಿತ್ತು. ಎಲಿಸಬೆತ್ ಪಟ್ಟವೇರಿದ ಸುದ್ದಿಯನ್ನು ಕೇಳಿದಕೂಡಲೆ ದೇಶಾಂತರದಲ್ಲಿದ್ದ ಇಂಗ್ಲಿಷ್‌ಪ್ರಾಟೆಸ್ಟೆಂಟರು ಸ್ವದೇಶಕ್ಕೆ ಓಡಿಯೋಡಿ ಬಂದರು. ಪ್ರಾಟೆಸ್ಟೆಂಟ್‌ಮತಕ್ಕನುಸಾರವಾಗಿ ವ್ಯವಸ್ಥೆಯಾಗಬೇಕೆಂದು ಅವ

ರೆಲ್ಲರೂ ಕಾತರರಾಗಿದ್ದರು. ಆದರೆ ಚರ್ಚುಗಳಲ್ಲಿ ಉನ್ಮ್ಯಕ್ತರಾಗಿದ್ದವರು ಮೇರಿಯು ಕಾಲದ ರೋಮನ್‌ಕ್ಯಾಥಲಿಕ್‌ಪಂಥದವರು. ಆ ಪಂಥದವರಿಗೆ ಹೊರದೇಶಗಳ ಪ್ರಭುಗಳ ಬೆಂಬಲವಿದ್ದಿತು. ರಾಣಿಯುಮನಸ್ಸಿನಲ್ಲಿ ತನ್ನ ತಂದೆಯರೀತಿಯು ಒಳ್ಳೆಯದೆನ್ನಿಸಿತ್ತು. ಆ ಮಧ್ಯಮಾರ್ಗದ ಸಾಧನೆಗೆ ಕ್ಯಾಥಲಿಕ್ಕರು ವಿರೋಧಿಗಳಾಗಿಯೇ ಇದ್ದರು. ಅವರನ್ನಡಗಿಸಲು ಉಪಾಯಗಾರ್ತಿಯಾದ ರಾಣಿಯು ಪ್ರಾಟೆಸ್ಟೆಂಟರಗುಂಪನ್ನು ತನ್ನ ಕಡೆಮಾಡಿಕೊಂಡು 1559ರಲ್ಲಿ ಪಾರ್ಲಿಮೆಂಟಿನಲ್ಲಿ ಸೂಪ್ರೆಮಸಿ ಮತ್ತು ಯೂನಿಫಾರ್ಮಿಟಿ ಕಾನೂನುಗಳನ್ನು ರೂಪಗೊಳಿಸಿಬಿಟ್ಟಳು. ರಾಜಭಕ್ತಿಯುತರಾದ ಅಲ್ಲಿಯುಸಭಿಕರು ರಾಣಿಯು ಇಷ್ಟಕ್ಕನುಕೂಲವಾಗಿ ನಡೆದುಕೊಂಡರು. ಕ್ಯಾಥಲಿಕ್‌ಪಂಗಡದವರಿಗೆ ಹೆಚ್ಚು ಉದ್ರೇಕವಾಗದಂತೆ **ಸೂಪ್ರೆಮಸಿ** ಕಾನೂನಿನಲ್ಲಿ(Act of Supremacy)ಹಲ ಕೆಲವು ಮಾತುಗಳ ಬದಲಾವಣೆಯನ್ನುಮಾತ್ರ ಮಾಡಿಸಿದಳು. ಎಡ್ವರ್ಡ್‌ರಾಜನ ಕಾಲದ **ಎರಡನೇ ಪ್ರಾರ್ಥನಾಪುಸ್ತಕವೇ** ರಾಜ್ಯದ ಎಲ್ಲೆಡೆಗಳಲ್ಲಿಯೂ ಉಪಯೋಗವಾಗತಕ್ಕುದೆಂಬ **ಯೂನಿಫಾರ್ಮಿಟಿ** ಕಾನೂನಿ(Act of Uniformity)ನಲ್ಲಿಯೂ ಕೂಡ ಯಾವ ಪಂಥದವರಿಗೂ ಹೆಚ್ಚು ಅಸಮಾಧಾನವಾಗದಂತೆ ಉಪಾಯವಾದರೀತಿಯಲ್ಲಿ ಹಲಕೆಲವು ಬದಲಾವಣೆಗಳನ್ನು ನಡೆಸಿದಳು. ಚರ್ಚುಗಳ ಅಲಂಕಾರವಿಶೇಷಗಳ ಸಂಬಂಧವಾಗಿ ಎಡ್ವರ್ಡ್‌ರಾಜನ ಆಳಿಕೆಯ ಮೊದಲಲ್ಲಿದ್ದಂತೆ ಇರತಕ್ಕುದೆಂದು ಗೊತ್ತು ಮಾಡಿದಳು.

**ಮಧ್ಯಮಾರ್ಗ**

**ಕಾನೂನುಗಳು**

ಯಾವ ಪಂಥದವರಿಗೂ ವಿಶೇಷವಾದ ಕೋಪತಾಪಗಳು ತೋರಿಕೊಳ್ಳದಂತೆ ರಾಜಾಧಿಕಾರವನ್ನು ಚರ್ಚುಗಳಲ್ಲಿ ನೆಲೆಗೊಳಿಸಿದಬಳಿಕ ನಾಲ್ಕೈದುವರ್ಷಗಳಕಾಲ ವಿಲಂಬಮಾಡಿ 1563ರಲ್ಲಿ ರಾಣಿಯು ಮತಾಚಾರಗಳ ವಿಷಯವಾಗಿ ನಿರ್ಧರಮಾಡಿದಳು. ಎಡ್ವರ್ಡ್‌ರಾಜನಕಾಲದಲ್ಲಿ ನಾಲ್ವತ್ತೆರಡಂಶಗಳೇ ಸುಲಕ್ಷಣಗಳೆಂದು ಗೊತ್ತಾಗಿದ್ದಿತಷ್ಟೆ. ಅವುಗಳಲ್ಲಿ ಮೂರನ್ನುಮಾತ್ರ ಬಿಟ್ಟುಬಿಟ್ಟು ಉಳಿದ **ಮೂವತ್ತೊಂಭತ್ತಂಶ** (39 Articles of Religion)ಗಳನ್ನು ಆರಿಸಿ ಅವುಗಳನ್ನು ಬಲವಂತಪಡಿಸುವ ಶಾಸನವನ್ನು ರಚಿಸಿದಳು. ಸೂಪ್ರೆಮಸಿ, ಯೂನಿಫಾರ್ಮಿಟಿ ಮತ್ತು 39 ಅಂಶಗಳೇ ಈ ರಾಣಿಯು ನಡೆಸಿದ ಏರ್ಪಾಟಿನ ಮುಖ್ಯಾಂಶಗಳು. ಅವುಗಳಿಂದಕೂಡಿ ಸ್ಥಾಪಿತವಾದ ರೀತಿಯು ಇಂಗ್ಲಂಡಿನಲ್ಲಿ ಬಳಕೆಯಾದಕಾರಣ ಅದಕ್ಕೆ **ಅಂಗ್ಲಿಕನ್** (Anglican) ಅಥವಾ **ಇಂಗ್ಲಿಷ್ ಚರ್ಚ್** (Church of England) ವ್ಯವಸ್ಥೆಯೆಂದು ಹೆಸರಾಯಿತು. ಈ ವ್ಯವಸ್ಥೆಗೆ ಮತನಿಷ್ಠೆಯು ಮೂಲವಲ್ಲ; ರಾಜಕೀಯಚಾತುರ್ಯವೇ ಮೂಲ. ಎಲ್ಲರಿಗೂ ಸಾಧ್ಯವಾದಷ್ಟು ಸಮಾಧಾನವನ್ನೊದಗಿಸಿ ತನ್ನ ಅಧಿಕಾರ

**ಆಚಾರಗಳು**

ವನ್ನು ನೆಲೆಗೊಳಿಸಿಕೊಳ್ಳಲು ಎಲಿಸಬೆತ್‌ರಾಣಿಯು ಹಿಡಿದಉಪಾಯ ಈ ರೂಪದಲ್ಲಿ ಪರಿಣಮಿಸಿತು.

ಇಂಗ್ಲಂಡಿನ ಜನಸಾಮಾನ್ಯರು ಈ ಏರ್ಪಾಟಿಗೊಪ್ಪಿದರು. ರಾಜ್ಯದಲ್ಲೆಲ್ಲ ಏಕ ರೀತಿಯಾಗಿ ಈ ಏರ್ಪಾಟು ನಡೆಯುವಂತೆ ರಾಣಿಯು ಎಚ್ಚರಿಕೆತಾಳಿ ತನ್ನ ಅಧಿಕಾರಿಗಳ ಮೂಲಕ ನೆರವೇರಿಸಿದಳು. ಮೇರಿಕಾಲದಲ್ಲಿದ್ದ ಬಿಷಪ್ಪರುಗಳು ಉದ್ಯೋಗ ಕಳೆದುಕೊಂಡರು; ಅವರಲ್ಲಿ ಕೆಲವರು ಶಠರೆನಿಸಿ ಸೆರೆಮನೆಗೆ ಹೊರಟರು. ಕ್ಯಾಂಟರ್ಬರಿಯ **ಆರ್ಚ್‌ಬಿಷಪ್** ಪೀಠಕ್ಕೆ **ಪಾರ್ಕರ್** (Parker) ಎಂಬ ಪ್ರಾಟೆಸ್ಟೆಂಟ್ ಮತಸ್ಥನನ್ನು ರಾಣಿಯು ಗೊತ್ತುಮಾಡಿದಳು. ರಾಣಿಯ

**ವ್ಯವಸ್ಥೆ**

ಮಾರ್ಗವೇ ನ್ಯಾಯವೆಂದೂ ಉಚಿತವೆಂದೂ ಆತನು ಅಭಿಪ್ರಾಯಪಟ್ಟದ್ದಕಾರಣ ಆಂಗ್ಲಿಕನ್‌ವ್ಯವಸ್ಥೆ ಭದ್ರಗೊಳ್ಳುವಂತೆ ಶ್ರಮಪಟ್ಟನು. ಆ ವ್ಯವಸ್ಥೆಯನ್ನಂಗೀಕರಿಸದಿದ್ದ ಪುರೋಹಿತವರ್ಗದವರನ್ನು ಅವಿಧೇಯರೆಂದು ದಂಡಿಸಲು ರಾಣಿಯು 1559ರಲ್ಲಿ **ಹೈಕಮಿಷನ್ ಕೋರ್ಟ್** (Court of High Commission) ಎಂಬ ವಿಚಾರಣೆಯಸ್ಥಾನವನ್ನು ನಿರ್ಮಿಸಿ ಅಲ್ಲಿಗೆ ಪಾರ್ಕರನನ್ನೇ ಅಧ್ಯಕ್ಷನನ್ನಾಗಿ ಗೊತ್ತುಮಾಡಿದಳು.

ಎಲ್ಲಪ್ರಜೆಗಳೂ ಆಂಗ್ಲಿಕನ್‌ಚರ್ಚಿನ ಕಟ್ಟುಪಾಡುಗಳಿಗೆ ಒಪ್ಪಿ ನಡೆದುಕೊಳ್ಳಬೇಕೆಂಬುದು ರಾಣಿಯ ಇಷ್ಟ. ಒಪ್ಪದಿದ್ದವರು ಜುಲ್ಮಾನೆಮುಂತಾದ ಶಿಕ್ಷೆಗೊಳಗಾಗಬೇಕಾಯಿತು. ಜನರಲ್ಲಿ ಬಹುಭಾಗದವರು ರಾಣಿಯ ಇಷ್ಟಕ್ಕೆ ಅನುಸಾರವಾಗಿ ಸಮಾಧಾನಚಿತ್ತದಿಂದ ಆಚರಿಸಿದರು. ಪೋಪನಲ್ಲಿ ಭಕ್ತಿಯನ್ನು ತ್ಯಜಿಸಬೇಕಾಗಿ ಬಂದುದರಿಂದ ರೋಮನ್‌ಕ್ಯಾಥಲಿಕ್‌ಪಂಥದವರಿಗೆ ಈ ಆಚರಣೆಗಳು ಸಹಿಸಲಿಲ್ಲವಾದರೂ ಅವರಲ್ಲಿ ಹಲಕೆಲವರುಮಾತ್ರ ವಿರೋಧಿಸಿ ದಂಡನೆ

**ಪಂಗಡಗಳು**

ಗೊಳಗಾದರು. ಮೊದಮೊದಲಲ್ಲಿ ರೋಮನ್‌ಕ್ಯಾಥಲಿಕ್ಕರಿಂದ ತೊಂದರೆ ತೋರಲಿಲ್ಲ. ತೊಂದರೆತೋರಿಕೊಂಡುದು ಉಗ್ರಪ್ರಾಟೆಸ್ಟೆಂಟ್‌ಪಂಥದವರಿಂದ. ಮೇರಿಯಕಾಲದಲ್ಲಿ ದೇಶಾಂತರಗತರಾಗಿದ್ದ ಪ್ರಾಟೆಸ್ಟೆಂಟ್‌ಪಂಥದವರು ಸ್ವಿಟ್ಸರ್ಲಂಡಿನಲ್ಲಿದ್ದು ಉಗ್ರವಾದ ತತ್ತ್ವಗಳಲ್ಲಿ ಆದರಶ್ರದ್ಧೆಗಳನ್ನು ಬೆಳೆಸಿಕೊಂಡಿದ್ದರು. ಎಲಿಸಬೆತ್ ನಡೆಸಿದ ತಿದ್ದುಪಾಡುಗಳು ಅವರಿಗೆ ಸಾಲದಾದವು. ಇನ್ನೂ ಹೆಚ್ಚು ತಿದ್ದುಪಡಿಗಳು ನಡೆಯಬಹುದೆಂದು ನಿರೀಕ್ಷಿಸುತ್ತಿದ್ದ ಆ ಉಗ್ರಗಾಮಿಗಳಿಗೆ ಬರಬರುತ್ತ ಅಸಮಾಧಾನವು ಹೆಚ್ಚಿತು.

ಫ್ರಾನ್ಸಿನಲ್ಲಿ ಹುಟ್ಟಿದವನಾದ **ಜಾನ್‌ಕಾಲ್ವಿನ್** (John Calvin) ಎಂಬಾತನು ಪ್ರಾಟೆಸ್ಟೆಂಟ್ ಮತದಲ್ಲಿ ಪ್ರವೇಶಮಾಡಿ ತನ್ನ ಜ್ಞಾನನಿಷ್ಠೆಗಳಿಂದ ತಾನೇ ದೊಡ್ಡ ಗುರುವಾಗಿ ಜಿನೀವ (Geneva) ಪಟ್ಟಣದಲ್ಲಿ ಉಗ್ರಪಂಥವನ್ನು 16ನೆಶತಮಾನದ ಮಧ್ಯಕಾಲದಲ್ಲಿ ಸ್ಥಾಪಿಸಿದ್ದನು. ಆತನ ಅನುಯಾಯಿಗಳಿಗೆ ಪಾಪಭೀತಿ ಹೆಚ್ಚು,

ಪ್ಯೂರಿಟನ್ನರು

1559 ● ಆಂಗ್ಲಿಕನ್ ವ್ಯವಸ್ಥೆ

ರೋಮನ್ ಕ್ಯಾಥಲಿಕ್ ಚರ್ಚ್ ವ್ಯವಸ್ಥೆ

● ಸೂಪ್ರೆಮಸಿ

ಎಲಿಸಬೆತ್ ●

1554 ●

●

1553 ● ಮೇರಿರಾಣಿ

1552 ● 2ನೆ ಪ್ರಾರ್ಥನಾಪುಸ್ತಕ

1549 ● 1ನೆ ಪ್ರಾರ್ಥನಾಪುಸ್ತಕ

1547 ● 6ನೆ ಎಡ್ವರ್ಡ್

1539 ● ಆರಂಶಗಳು

1534 ● ಸೂಪ್ರೆಮಸಿ

1529 ವುಲ್ಸಿ ಪತನ

1527 ವಿವಾಹವಿಚ್ಛೇದ

●1517 ಲ್ಯೂಥರನ ವಿರೋಧ

ದೈವಭಕ್ತಿ ಅಧಿಕ ಮತ್ತು ಶುಷ್ಕಾಚಾರಗಳಲ್ಲಿ ತಿರಸ್ಕಾರಅತಿಶಯ. ಹಿಂದಿನಕಾಲ ದಿಂದಲೂ ಪವಿತ್ರವೆನಿಸಿದ್ದ ಅನೇಕಾಚಾರಗಳು ಅವರಿಗೆ ಮೌಢ್ಯವೆನಿಸಿದವು. ಪ್ರಾರ್ಥ ನೆಯಲ್ಲಿಯೂ ಸಂಸ್ಕಾರಗಳಲ್ಲಿಯೂ ಅವರಿಗೆ ಸರಳತೆಬೇಕು. ಚರ್ಚುಗಳಲ್ಲಿ ರಾಜ ಕೀಯವಾಸನೆಕೂಡದು. ಬಿಷಪ್ಪರೆಂಬ ಅಧಿಕಾರಿಗಳೇ ಇರಬಾರದು. ಪುರೋ ಹಿತರಾದವರು ಆಚಾರಕ್ಕೆ ವಿಶೇಷವಸ್ತ್ರಗಳನ್ನು ಧರಿಸುವುದು ಅವರ ದೃಷ್ಟಿಯಲ್ಲಿ ವಂಚನೆ. ವಿಪರೀತವೆಂದು ತೋರಬಹುದಾದಷ್ಟು ದೈವಭಕ್ತಿ ಯೊಂದಿಗೆ ಆಚಾರವಿಚಾರಗಳಲ್ಲಿ ಅತಿಶುದ್ಧತೆಯನ್ನೂ ಸಾರಳ್ಯ ವನ್ನೂ ಸಾಧಿಸಬೇಕೆಂದಿದ್ದ ಕ್ಯಾಲ್ವಿನ್‌ಶಿಷ್ಯರಗುಂಪಿಗೆ ಇಂಗ್ಲಂ ಡಿನಲ್ಲಿ **ಪ್ಯೂರಿಟನ್** ( Puritan ) ಎಂಬಹೆಸರು ರೂಢಿಯಾಯಿತು. ಬರಬರುತ್ತ ಈ ಪ್ಯೂರಿಟನ್ನರ ಸಂಖ್ಯೆಯೂ ಹೆಚ್ಚಿತು, ಪಂಥಗಳೂ ಅನೇಕವಾದವು. ಎಲಿಸ ಬೆತ್‌ರಾಣಿ ಈ ಗುಂಪಿನವರ ವಿರೋಧವನ್ನು ಕಂಡು ಕೆಲಕಾಲಸುಮ್ಮನಿದ್ದು ತನ್ನ ಅಧಿಕಾರಬಲಗಳು ಭದ್ರಗೊಂಡಮೇಲೆ 1565ರಲ್ಲಿ ಅವರನ್ನು ಶಿಕ್ಷಿಸಲುಪಕ್ರಮಿಸಿದಳು. ರಾಣಿಯ ಮನಸ್ಸನ್ನು ಅನುಸರಿಸಿಕೊಂಡಿದ್ದ ಆರ್ಚ್‌ಬಿಷಪ್‌ಪಾರ್ಕರ್ 1575ರಲ್ಲಿ ಕಾಲ ವಾದನು. ಆಗ ಆ ಪದವಿಗೆಬಂದ **ಗ್ರಿಂಡಲ್** (Grindal) ಎಂಬಾತನು ಪ್ಯೂರಿಟನ್ನರಲ್ಲಿ ಸ್ವಲ್ಪಪಕ್ಷಪಾತತೋರಲು ರಾಣಿಯು ಆತನನ್ನು ಕೆಲಸದಿಂದ ತಪ್ಪಿಸಿಬಿಟ್ಟು **ವ್ಹಿಟ್ಗಿಫ್ಟ್** (Whitgift) ಎಂಬಾತನನ್ನು ನಿಯಮಿಸಿದಳು. ಪ್ಯೂರಿಟನ್‌ಗುಂಪಿನವರಲ್ಲಿ ನಾನಾ ಶಾಖೆಗಳು ತೋರಿಕೊಳ್ಳುತ್ತಿದ್ದುದಲ್ಲದೆ ಆಂಗ್ಲಿಕನ್‌ವ್ಯವಸ್ಥೆಗೆ ವಿರೋಧವು ಬಲವಾ ಗುತ್ತಿತ್ತು. ಆದರೆ ಎಲಿಸಬೆತ್ತಿಗೆ ಹೆಚ್ಚುತೊಂದರೆಯನ್ನೊಡ್ಡುವಷ್ಟು ಸಂಖ್ಯಾಬಲ ವಿನ್ನೂ ಅವರಲ್ಲಿ ತೋರಿರಲಿಲ್ಲ. ಇಂಗ್ಲಂಡಿನಲ್ಲಿ ಪ್ಯೂರಿಟನ್ನರು ತೊಂದರೆಗೆ ಸಿಕ್ಕಿರಲು ಸ್ಕಾಟ್ಲಂಡಿನಲ್ಲಿ ಅವರಗುರುವೊಬ್ಬಾತನು ಕಾಣಿಸಿಕೊಂಡು ಅಲ್ಲೋಲಮಾಡಿಬಿಟ್ಟನು.

**ಪ್ಯೂರಿಟನ್‌ಶಾಖೆ**

1547ರಲ್ಲಿ ಪಿಂಕೀಕದನವಾದಮೇಲೆ ಸ್ಕಾಟ್ಲಂಡಿನರಾಜಪುತ್ರಿ **ಮೇರಿ** ಎಂಬ ತಬ್ಬಲಿಕೂಸನ್ನು ಫ್ರಾನ್ಸಿಗೆ ಕಳುಹಿಸಿಬಿಟ್ಟರಷ್ಟೆ. ಆ ರಾಜಪುತ್ರಿಯು ಫ್ರಾನ್ಸಿನಲ್ಲಿ ಬೆಳೆಯುತ್ತಿದ್ದಕಾಲದಲ್ಲಿ ಸ್ಕಾಟ್ಲಂಡಿನಲ್ಲಿ ಆ ಮಗುವಿನತಾಯಿ ಗೀಸಿನ ಮೇರಿ ( Mary of Guise) ಎಂಬಾಕೆಯು ರೀಜೆಂಟಾಗಿದ್ದಳು. ಆಕೆ ರೋಮನ್‌ಕ್ಯಾಥಲಿಕ್‌ಮತ ವನ್ನೂ ಫ್ರಾನ್ಸಿನ ಆಪ್ತತೆಯನ್ನೂ ಕಾಪಾಡಿಕೊಂಡು ಆಳಿಕೆಯನ್ನುನಡೆಸುತ್ತಿದ್ದಳು. ಅಂತಹಸಮಯದಲ್ಲಿ **ಜಾನ್ ನಾಕ್ಸ್** ( John Knox ) ಎಂಬ ಕಾಲ್ವಿನ್‌ಶಿಷ್ಯನು ಎಲಿಸಬೆತ್ತಳ ಕೋಪಕ್ಕೆ ಗುರಿಯಾಗಿ ಇಂಗ್ಲಂಡಿಗೆ ಬರಲಾ ರದೆ ಸ್ಕಾಟ್ಲಂಡಿಗೆ ಹೊರಟನು. ಸ್ಕಾಟ್ಲಂಡಿನಲ್ಲಿ ಹಲಕೆಲ ವರು ಶ್ರೀಮಂತರು ಪ್ರಾಟೆಸ್ಟೆಂಟ್‌ಮಾರ್ಗದಲ್ಲಿ ಹೆಜ್ಜೆಯಿಟ್ಟು ರೀಜೆಂಟಿಗೆ ವಿರೋಧಿಗಳಾಗಿದ್ದರು. ನಾಕ್ಸ್ ಅವರೊಂದಿಗೆ ಸೇರಿ ಅವರ ಬೆಂಬಲ ದಿಂದ ತನ್ನ ಮತಪ್ರಸಾರವನ್ನು ನಿಷ್ಠೆಯಿಂದಲೂ ಉದ್ರೇಕದಿಂದಲೂ ನಡೆಸಿದನು.

**ಸ್ಕಾಟ್ಲಂಡಿನಲ್ಲಿ**

ಪ್ರಾಟೆಸ್ಟೆಂಟರಗುಂಪು ಬಲವಾಗುತ್ತಿದ್ದುದನ್ನು ಕಂಡು ರೀಜೆಂಟಳು ಅವರನ್ನಡಗಿಸಲು ಫ್ರಾನ್ಸಿನಿಂದ ದಂಡನ್ನು ಕರೆಸಿಕೊಂಡು ನಾಕ್ಸ್ ಮುಂತಾದವರ ಪಂಗಡವನ್ನು ಮುತ್ತಿ ಕಷ್ಟವನ್ನುಕೊಟ್ಟಳು. ಪ್ರಾಟೆಸ್ಟೆಂಟರಾಗಿದ್ದ ಸ್ಕಾಟ್ ಶ್ರೀಮಂತರು ತಮಗೆ ಸಹಾಯಮಾಡಬೇಕೆಂದು ಎಲಿಸಬೆತ್‌ರಾಣಿಯನ್ನು ಕೇಳಿಕೊಂಡರು. ದಂಗೆಕೋರರೆಂದರೆ ಎಲಿಸಬೆತ್ತಿಗಾಗದು. ಆದರೂ ಸ್ಕಾಟರು ಪ್ರಾಟೆಸ್ಟೆಂಟರಾದರೆ ಫ್ರಾನ್ಸಿನ ಆಪ್ತತೆಯನ್ನೂ ಪೋಪನಸಂಬಂಧವನ್ನೂ ತ್ಯಜಿಸಿ ಇಂಗ್ಲಂಡಿನಲ್ಲಿ ಸ್ನೇಹಕಟ್ಟಿಯಾರೆಂಬ ಆಲೋಚನೆಮಾಡಿ 1560ರಲ್ಲಿ ಈ ರಾಣಿ ಸ್ವಲ್ಪಸೈನ್ಯವನ್ನು ಸ್ಕಾಟ್ಲಂಡಿನಲ್ಲಿ **ಲೀತ್**(Leith)ಪಟ್ಟಣದಲ್ಲಿದ್ದ ಫ್ರೆಂಚ್ ದಂಡನ್ನು ಮುತ್ತಲು ಕಳುಹಿಸಿಕೊಟ್ಟಳು. ಆದರೆ ಅದೇವೇಳೆಗೆ ರೀಜೆಂಟ್ ಮೇರಿ ಕಾಲವಾಗಿಹೋದಳು. ಲೀತ್ ಮುತ್ತಿಗೆ ನಿಂತು **ಎಡಿನ್ಬರೊ ಕರಾರು**(Treaty of Edinburgh)ಎಂಬುದು ನಡೆಯಿತು. ಅದರಂತೆ ಫ್ರೆಂಚ್ ಮತ್ತು ಇಂಗ್ಲಿಷ್ ಸೈನ್ಯಗಳೆರಡೂ ಸ್ಕಾಟ್ಲಂಡನ್ನು ಬಿಟ್ಟು ಹೊರಡಬೇಕಾಯಿತು.

ಪರದೇಶೀಸೈನ್ಯಗಳು ತೊಲಗಿಹೋದಕೂಡಲೆ ಸ್ಕಾಟ್ಲಂಡಿನ ಪಾರ್ಲಿಮೆಂಟ್‌ಸಭೆಯವರು ನಾಕ್ಸನಉಪದೇಶಕ್ಕೆ ಕಿವಿಗೊಟ್ಟು ಪೋಪನಅಧಿಕಾರವನ್ನು ರದ್ದುಗೊಳಿಸಿ ಸ್ಕಾಟ್ಲಂಡಿನ ಚರ್ಚುಗಳರೀತಿಯು ಜಿನೀವಾಪಟ್ಟಣದರೀತಿಯಂತಾಗಲು ತಕ್ಕ ಕಾನೂನುಗಳನ್ನು ಮಾಡಿದರು. ಪ್ರಾಟೆಸ್ಟೆಂಟ್‌ಮತದ ಉತ್ಸಾಹದಿಂದ ಜನರೇ ಅಲ್ಲಲ್ಲಿ ಮುಂದೆಬಿದ್ದು ಹಳೆಯುದನ್ನು ನಾಶಗೊಳಿಸಿಬಿಟ್ಟರು. ಮಂದಿರಗಳೂ ಮಠಗಳೂ ಶೂನ್ಯವಾಗಿಹೋದವು. ಅವುಗಳ ಆಸ್ತಿಪಾಸ್ತಿಗಳು ಶ್ರೀಮಂತರಕೈಸೇರಿದವು. ಸ್ಕಾಟ್ಲಂಡಿನಲ್ಲಿ ಪ್ರೆಸ್ಬಿಟೇರಿಯನ್‌ಮತವು ಅತಿಶೀಘ್ರವಾಗಿ ಸ್ಥಾಪನೆಯಾಯಿತು. ಪ್ಯೂರಿಟನ್‌ರೀತಿಗಳಲ್ಲೊಂದಾದ ಆ **ಪ್ರೆಸ್ಬಿಟೇರಿಯನ್** (Presbyterian) ವ್ಯವಸ್ಥೆಯಲ್ಲಿ ರಾಜಾಧಿಕಾರವಿಲ್ಲ, ರಾಜನಿಯುಕ್ತರಾದ ಬಿಷಪ್ಪರೆಂಬ **ಹಿರಿಯರ ಯಾಜಮಾನ್ಯ** ಜಿಲ್ಲಾಧಿಕಾರಿಗಳಿಲ್ಲ. ಪ್ರತಿಮಂದಿರಕ್ಕೂ ಸ್ಥಲವಂತಹಿರಿಯರ ಸಭೆಯೇ ಅಧಿಕಾರಿ. ಎಲ್ಲ ಸ್ಥಲಗಳಿಂದಲೂ ಬಂದು ಸೇರಿದ ಪ್ರತಿನಿಧಿಗಳು ತುಂಬಿದ **ಜನರಲ್ ಅಸೆಂಬ್ಲಿ** (General Assembly)ಯೆಂಬ ಸಭೆಯೇ ಒಟ್ಟುದೇಶಕ್ಕೆ ಸರ್ವಾಧಿಕಾರಯುಕ್ತವಾಗಿರತಕ್ಕದ್ದು. ತಮ್ಮಪುರೋಹಿತರಲ್ಲಿಯೂ ಗುರುಗಳಲ್ಲಿಯೂ ನಮ್ರತೆಭಕ್ತಿಗಳಿಂದಕೂಡಿದ್ದ ಸ್ಕಾಟ್‌ಜನರು ಕ್ಷಿಪ್ರತೆಯಿಂದ ಪ್ರೆಸ್ಬಿಟೇರಿಯನ್‌ಪಂಥವನ್ನು ತಮ್ಮ ದೇಶದಲ್ಲಿ ಪ್ರತಿಷ್ಠೆಮಾಡಿಬಿಟ್ಟರು. ಪುಂಡುತನವನ್ನು ಬಿಡಲಾರದವರಾದ ಶ್ರೀಮಂತವರ್ಗದವರು ಒಂದಂಶದಲ್ಲಿಮಾತ್ರ ನಾಕ್ಸನಮಾತನ್ನು ನಡೆಸಲಿಲ್ಲ. ಮಠಮಂದಿರಗಳ ಆಸ್ತಿಪಾಸ್ತಿಗಳನ್ನು ಉಪಯೋಗಿಸಿ ಪ್ರತಿಸ್ಥಲಕ್ಕೂ ಒಂದು ಶಾಲೆಯನ್ನು ಏರ್ಪಡಿಸಬೇಕೆಂಬ ಆತನಇಷ್ಟವನ್ನು ಶ್ರೀಮಂತರು ನಡೆಸಲಿಲ್ಲ. ಉಳಿದಂಶಗಳಲ್ಲೆಲ್ಲ ಸ್ಕಾಟ್ಲಂಡಿನಲ್ಲಿ ರೆಫರ್ಮೇಷನ್ ಹಲಕೆಲವುವರ್ಷಗಳಲ್ಲಿ ಸಂಪೂರ್ಣವಾಗಿ ದೇಶವೇಬದಲಾಯಿಸಿತು. ಜನರು ಒಟ್ಟುಗೂಡಲು ಒಂದು

ಬಾಂಧವ್ಯವೇರ್ಪಟ್ಟಿತು. ರೋಮನ್‌ಕ್ಯಾಥಲಿಕ್ ಸಂಬಂಧಗಳು ಅನಿಷ್ಟವಾದವು. ಈರೀತಿ ಸ್ಕಾಟ್‌ಜನರೇ ಮುಂದಾಗಿ ಉದ್ರೇಕಗೊಂಡು ಶೀಘ್ರವಾಗಿಯೂ ಸಂಪೂರ್ಣವಾಗಿಯೂ ಮತದಲ್ಲಿ ಹೊಸಮಾರ್ಗವನ್ನು ತಂದಿಟ್ಟುಕೊಂಡರು. ಇಂಗ್ಲಂಡಿನಲ್ಲಿ ರಾಜರ ಬಲವಂತದಿಂದ ನಡೆದಷ್ಟು ಮಾತ್ರ ನಡೆಯಿತು.

**ತಾರತಮ್ಯ**

ಉದ್ರೇಕವಂತೂ ಜನರಲ್ಲಿಲ್ಲವೇ ಇಲ್ಲ. ನಡೆದುದೂ ನಿದಾನವಾಗಿ. ಏಳುತ್ತ ಬೀಳುತ್ತ ಕಡೆಗೆ ಮಧ್ಯಮಾರ್ಗದಲ್ಲಿ ನಿಂತಿತು. ನಾಲ್ಕು ಆಳಿಕೆಗಳು ನಡೆದು ಕಡೆಗೆ ಅರ್ಧಂಬರ್ಧವಾಗಿ ರೂಪವನ್ನು ತಾಳಿತು. ಸ್ಕಾಟ್ಲಂಡಿನಲ್ಲಿ ನಡೆದರೀತಿಗೂ ಇಂಗ್ಲಂಡಿನಲ್ಲಿ ನಡೆದರೀತಿಗೂ ಎಲ್ಲ ಅಂಶಗಳಲ್ಲಿಯೂ ವ್ಯತ್ಯಾಸವೇ ತೋರುವುದು. ಇಂಗ್ಲಂಡಿನಲ್ಲಿ ನಡೆದಬಗೆಯನ್ನು ಒಬ್ಬಾತನು "ಭಾರ್ಯಾಹಂತಕರಾಜನಿಂದ ಮೊದಲಾಗಿ ಭ್ರಾತೃಹಂತಕಶ್ರೀಮಂತನಿಂದ ಪೋಷಿತವಾಗಿ ಅತಿಥಿಹಂತಕಿರಾಣಿಯಿಂದ ಮುಕ್ತಾಯವಾಯಿತು" ಎಂದು ಸ್ವಾರಸ್ಯವಾಗಿ ವರ್ಣಿಸಿರುವನು.

ಅತ್ತ ಸ್ಕಾಟ್ಲಂಡಿಗೆ ರಾಣಿಯಾಗತಕ್ಕ ಮೇರಿಸ್ಟ್ಯೂಯರ್ಟ್ ಫ್ರಾನ್ಸಿನಲ್ಲಿ ರೋಮನ್ ಕ್ಯಾಥಲಿಕ್‌ನಿಷ್ಠೆಯಿಂದ ಬೆಳೆಯುತ್ತಿದ್ದಳು. ವಯಸ್ಸಾಗುತ್ತ ಆಕೆಯ ರೂಪವೂ ಹೆಚ್ಚಿತು. ಫ್ರೆಂಚರ ಆಪ್ತತೆಯನ್ನೂ ಕ್ಯಾಥಲಿಕ್‌ಮತದಭಕ್ತಿಯನ್ನೂ ಇಟ್ಟುಕೊಂಡು ಲಾವಣ್ಯವತಿಯಾದ ಮೇರಿಸ್ಟ್ಯೂಯರ್ಟ್ ವಯಸ್ಕಳಾಗುವವೇಳೆಗೆ ಯೂರೋಪಿನ ರೀತಿಯೇ ಬದಲಾಯಿಸಿತ್ತು.

ಲ್ಯೂಥರ್ ಮೊದಲುಮಾಡಿದ ಪ್ರಾಟೆಸ್ಟೆಂಟ್‌ಮತವು ಕಾಲಕಳೆಯುತ್ತ ಹೆಚ್ಚು ಹೆಚ್ಚು ಪ್ರಚಾರವಾಗಿತ್ತು; **ಜಾನ್‌ಕಾಲ್ವಿನ್, ಅಲ್ರಿಕ್ ಸ್ವಿಂಗ್ಲಿ** (Ulrich Zwingle) ಮುಂತಾದ ಗುರುಗಳು ತೋರಿಕೊಂಡು ಆ ಮತಕ್ಕೆ ಮತ್ತಷ್ಟು ಚೈತನ್ಯವನ್ನೂ ಶುದ್ಧಿಯನ್ನೂ ಉಂಟುಮಾಡಿದರು. ಜರ್ಮನಿಯ ಉತ್ತರಭಾಗಮಾತ್ರವಲ್ಲದೆ ಸ್ವಿಟ್ಸರ್ಲಂಡ್, ಡೆನ್ಮಾರ್ಕ್, ನಾರ್ವೆ, ಸ್ವೀಡೆನ್, ಸ್ಕಾಟ್ಲಂಡ್, ಇಂಗ್ಲಂಡ್, ಫ್ರಾನ್ಸ್, ನೆದರ್ಲಂಡ್ಸ್ ದೇಶಗಳಲ್ಲಿ ರೋಮನ್‌ಕ್ಯಾಥಲಿಕ್‌ಮತಕ್ಕೆ ವಿರೋಧವು ರೂಢಿಯಾಯಿತು. ಪ್ರಾಟೆಸ್ಟೆಂಟ್‌ಮತವು ಪ್ರಬಲವಾಗುತ್ತಿದ್ದಾಗ ರೋಮನ್ ಕ್ಯಾಥಲಿಕ್‌ಪಂಗಡದವರು ತಮ್ಮ ಬಲವನ್ನು ಕಟ್ಟುವ ಯೋಚನೆಯನ್ನು ನಡೆಸದೆ ಇರಲಿಲ್ಲ.

**ಕ್ಯಾಥಲಿಕ್ ಜನರು**

ಪೋಪ್‌ಪೀಠದಲ್ಲಿದ್ದವರು ರಾಜಕೀಯವಿಚಾರಗಳನ್ನು ಕಟ್ಟಿಕೊಂಡು ಸಂಧಾನಚಾತುರ್ಯದಲ್ಲಿ ಕಾಲಕಳೆಯುವುದನ್ನು ಬಿಟ್ಟು ಮತವಿಚಾರಗಳಲ್ಲಿ ಆಸಕ್ತಿತೋರಿ ತಾವೇ ತಿದ್ದುಪಾಡುಗಳನ್ನು ನಡೆಸಿ ಕ್ಯಾಥಲಿಕ್‌ಮತವ್ಯವಸ್ಥೆಯ ದೋಷಗಳನ್ನು ಕಿತ್ತುಹಾಕಿ ಶುದ್ಧಿಯನ್ನು ನೆಲೆಗೊಳಿಸಲು ಪ್ರಯತ್ನಿಸಲಾರಂಭಿಸಿದರು. ಕ್ಯಾಥಲಿಕ್‌ಮತನಿಷ್ಠರೂ ಯತಿಗಳೂ ಶ್ರಮಪಟ್ಟು ತಮ್ಮ ಜತೆಬಿಟ್ಟಿದ್ದ ಪ್ರಾಟೆಸ್ಟೆಂಟರನ್ನು ಪುನಃ

**ಕ್ಯಾಥಲಿಕ್**ಮಾರ್ಗಕ್ಕೆ ಸೆಳೆದು ಪೋಪನಶಿಷ್ಯರಾಶಿಯಲ್ಲಿ ಸೇರಿಸುವ ಕೆಲಸವನ್ನು ಕೈಕೊಂಡರು. ಕ್ಯಾಥಲಿಕ್‌ಮತಪ್ರಚಾರವನ್ನು ಹುರುಪಿನಿಂದ ನಡೆಸಲು ಪ್ರತಿಗಳ ಕೂಟಗಳು ಹುಟ್ಟಿದವು. ಅಂತಹವುಗಳಲ್ಲಿ ಅತಿಪ್ರಸಿದ್ಧವಾಗಿಯೂ ಪ್ರಬಲ ವಾಗಿಯೂ ಬೆಳೆದುದು **ಆರ್ಡರ್ ಆಫ್ ಜೀಸಸ್** (Order of Jesus) ಅಥವಾ ಜೆಸೂಯಿತ(Jesuits)ರೆಂಬವರ ಗುಂಪು. 1540ರಲ್ಲಿ **ಇಗ್ನೇಷಿಯಸ್ ಲಾಯೊಲ** (Ignatius Loyola) ಎಂಬ ಪರಮನಿಷ್ಠನಾದ ಯತಿಯು ಆ ಕೂಟವನ್ನು ಕಟ್ಟಿದನು. ಜೆಸೂಯಿತರು ದೇಶವಿದೇಶಗಳಲ್ಲಿ ಕ್ಯಾಥಲಿಕ್‌ಮತಪ್ರಚಾರಕ್ಕಾಗಿ ನಾನಾರೀತಿಗಳಲ್ಲಿ ತೊಡಗಿದರು. ಕ್ಯಾಥಲಿಕ್‌ಪ್ರಭುಗಳು ಈ ಪ್ರಚಾರಕರಿಗೆ ಸಹಾಯಕರಾದರು. ಶುದ್ಧಿಪ್ರಯತ್ನದೊಂದಿಗೆ ಪ್ರಚಾರಪ್ರಯತ್ನವೂ ಭ್ರಷ್ಟರನ್ನು ದಂಡಿಸಲು ಮಾರ್ಗವೂ ಏರ್ಪಟ್ಟಿತು. ವಿರೋಧವನ್ನು ಬಿಡದೆ ಹಟಹಿಡಿದವರನ್ನು ಹಿಂಸೆಗೆ ಗುರಿಮಾಡಿ ದಂಡನೆಯಿಂದ ಸನ್ಮಾರ್ಗಕ್ಕೆಳೆಯುವುದಕ್ಕೂ ಕ್ಯಾಥಲಿಕ್ಕರಾಗದೆ ಕಡೆಯವರೆಗೂ ಪ್ರಾಟೆಸ್ಟೆಂಟರಾಗಿಯೇ ಇದ್ದವರನ್ನು ಜೀವಸಹಿತಸುಡಿಸುವು

**ಕೌಂಟರ್ ರಿಫರ್ಮೇಷನ್**

ದಕ್ಕೂ ವಿಚಾರಣೆಸಭೆಗಳು ಕ್ಯಾಥಲಿಕ್‌ರಾಜ್ಯಗಳಲ್ಲಿ ತೋರಿ ಕೊಂಡವು. ಈ ವಿಚಾರಣೆಸಭೆಗಳಿಗೆ **ಇಂಕ್ವಿಸಿಷನ್** (Inquisition) ಎಂದು ಹೆಸರು. ರೋಮನ್‌ಕ್ಯಾಥಲಿಕ್‌ಪಂಗಡದ ಗುರುಗಳು 1563ರಲ್ಲಿ ಭಾರಿಸಭೆಸೇರಿ ತಮ್ಮ ಮತದ ಆಚಾರವಿಚಾರಗಳ ಶುದ್ಧರೂಪವನ್ನು ನಿರ್ದೇಶಮಾಡಿಕೊಂಡು ಹಿಂದಿನಕಾಲದಲ್ಲಿದ್ದಂತೆ ರೋಮನ್‌ಕ್ಯಾಥಲಿಕ್ ಮತಮಂದಿರ ಗಳ ಪ್ರಾಬಲ್ಯವನ್ನು ಉದ್ಧರಿಸಲು ಕೃತಪ್ರಯತ್ನರಾದರು. ಈ ರೀತಿನಡೆದ ಪ್ರಯತ್ನವು ರಿಫರ್ಮೇಷನ್‌ಎಂಬ ಆಂದೋಳನಕ್ಕೆ ಪ್ರತಿಯಾದುದರಿಂದ **ಕೌಂಟರ್ ರಿಫರ್ಮೇಷನ್** (Counter Reformation) ಎಂಬ ಹೆಸರನ್ನು ಪಡೆದಿದೆ.

ಮೇರಿಟ್ಯೂಡರ್‌ಸಹಾಯವನ್ನು ಬಯಸಿ ಸ್ಪೈನಿನ ಫಿಲಿಪ್‌ರಾಜನು ಫ್ರಾನ್ಸಿನ ಮೇಲೆ ಯುದ್ಧಕ್ಕೆ 1557ರಲ್ಲಿ ಹೊರಟಿದ್ದನಷ್ಟೆ. ಆ ಜಗಳವು 1559ರಲ್ಲಿ ಮುಕ್ತಾಯ ವಾಗಿ ಫ್ರಾನ್ಸ್ ಸ್ಪೈನ್ ದೇಶಗಳಿಗೆ **ಲಾ ಕೇಟೊ ಕಂಬ್ರೆಸಿಸ್** (Le Cateau Cambresis) ಎಂಬೆಡೆಯಲ್ಲಿ ಒಪ್ಪಂದವಾಯಿತು. ಇಟಲಿಯ ಯಾಜಮಾನ್ಯವು ಸ್ಪೈನಿಗಿರ ತಕ್ಕುದೆಂದೂ ಫ್ರೆಂಚರು ಕಲೇಪಟ್ಟಣವನ್ನಿಟ್ಟುಕೊಳ್ಳಬಹುದೆಂದೂ ಗೊತ್ತಾಯಿತು. ಬಹುಕಾಲದಿಂದ ಇಟಲಿಯ ಯಾಜಮಾನ್ಯಕ್ಕಾಗಿ ಈಯೆರಡುದೇಶಗಳ ದೊರೆಗಳು ಹೆಣಗಾಡುತ್ತಿದ್ದುದು ಇಲ್ಲಿಗೆ ನಿಂತುಹೋಯಿತು. ಏಕಂದರೆ ಎರಡೂ ಕ್ಯಾಥಲಿಕ್ ರಾಜ್ಯಗಳು. ತಮ್ಮ ಸ್ವಂತರಾಜ್ಯಗಳಲ್ಲಿ ಪ್ರಾಟೆಸ್ಟೆಂಟ್‌ಮತವು

**ಕ್ಯಾಥಲಿಕ್ ರಾಜ್ಯಗಳು**

ತಲೆದೋರದಿರುವಂತೆ ಮಾಡಿಕೊಳ್ಳುವುದು ಇಬ್ಬರಿಗೂ ಅಗತ್ಯ ವಾಯಿತು. ಪ್ರಾಟೆಸ್ಟೆಂಟ್‌ಮತವು ರೂಢಿಗೊಂಡಿದ್ದ ಇತರ ದೇಶಗಳಲ್ಲಿಕೂಡ ಆ ಮತವನ್ನು ಮೂಲೋತ್ಪಾಟನಗೊಳಿಸುವುದು ಕರ್ತವ್ಯವೇ

ಆಗಿತ್ತು. ಹೀಗಿದ್ದುದರಿಂದ ಫ್ರಾನ್ಸ್ ಮತ್ತು ಸ್ಪೈನ್‌ರಾಜ್ಯಗಳು ಪರಸ್ಪರವೈತ್ರಿಯಿಂದ ವರ್ತಿಸುವ ಕಾಲವಾಗಿತ್ತು. ಏಕೆಂದರೆ ಯೂರೋಪಿನ ಸ್ಥಿತಿಯೇ ಬದಲಾಗಿ ಪ್ರಾಟಿಸ್ಟೆಂಟ್ ಗುಂಪಿನವರಿಗೂ ಕ್ಯಾಥಲಿಕ್‌ಗುಂಪಿನವರಿಗೂ ಪರಮವೈಷಮ್ಯಬೆಳೆಯುತ್ತಿತ್ತು. ಇಂತಹಕಾಲಸ್ಥಿತಿಯಲ್ಲಿ ಇಂಗ್ಲಂಡಿಗೆ ಎಲಿಸಬೆತ್ ರಾಣಿಯಾಗಿದ್ದಳು, ಮೇರಿಸ್ಟೂಯರ್ಟ್ ಸ್ಕಾಟ್ಲಂಡಿಗೆ ರಾಣಿಯಾಗತಕ್ಕವಳಾಗಿದ್ದಳು.

ಲಾ ಕೇಟೊ ಕಂಬ್ರೆಸಿಸ್‌ಕರಾರನ್ನು ಎರಡನೆ ಫಿಲಿಪ್ ಮತ್ತು ಎರಡನೆ ಹೆನ್ರಿ ನಡೆಸಿಕೊಂಡು ತಮ್ಮ ಪರಸ್ಪರವಿರೋಧವನ್ನು ನಿಲ್ಲಿಸಿಕೊಂಡರು. ಸ್ಪೈನಿಗೆ ರಾಜನಾಗಿ ಅಮೆರಿಕಾ ಮತ್ತು ಇಟಲಿಗಳಿಗೆ ಒಡೆಯನೆನಿಸಿದ ಫಿಲಿಪ್ ತನ್ನ ರಾಜ್ಯಗಳಲ್ಲಿ ಪ್ರಾಟಿಸ್ಟೆಂಟರ ಸುಳಿವೇ ಇಲ್ಲದಂತೆ ಮಾಡಲುತೊಡಗಿದನು.

**ಆ ರಾಜರ ತೊಂದರೆಗಳು**

**ನೆದರ್ಲಂಡ್ಸ್** ಭಾಗವು ಆತನ ಒಡೆತನದಲ್ಲಿ ಸೇರಿತ್ತು. ಅಲ್ಲಿಯಜನರಲ್ಲಿ ಕೆಲವರು ಪ್ರಾಟಿಸ್ಟೆಂಟರಾಗಿದ್ದರು. ಅವರನ್ನು ದಂಡಿಸಲು ಫಿಲಿಪ್ ಸಿದ್ಧನಾದನು. ಫ್ರಾನ್ಸಿನರಾಜ ಎರಡನೆ ಹೆನ್ರಿ ಕರಾರುನಡೆದ ಸ್ವಲ್ಪಕಾಲದಲ್ಲಿಯೇ ತೀರಿಹೋದನು. ಅವನ ನಾಲ್ವರು ಪುತ್ರರಲ್ಲಿ ಹಿರಿಯವನಾದ **ಎರಡನೆ ಫ್ರಾನ್ಸಿಸ್** (Francis II)ಎಂಬಾತನು ರಾಜನಾದನು. ಪ್ಯಾರಿಸ್ಸಿನ ಅರಮನೆಯಲ್ಲಿಯೇ ಬೆಳೆದಿದ್ದ ಮೇರಿಸ್ಟೂಯರ್ಟಳನ್ನು ಈ ಫ್ರಾನ್ಸಿಸ್ಸಿಗೆಕೊಟ್ಟು ಮದುವೆಮಾಡಿದ್ದರು. ಪಟ್ಟವೇರಿದಾಗ ಮೇರಿಸ್ಟೂಯರ್ಟ್ ಫ್ರಾನ್ಸಿಗೆಮಾತ್ರವಲ್ಲದೆ ಸ್ಕಾಟ್ಲಂಡ್ ಮತ್ತು ಇಂಗ್ಲಂಡುಗಳಿಗೆ ರಾಣಿಯೆಂದು ಕರೆಸಿಕೊಂಡಳು. ಆನ್‌ಬೊಲೇನಳಮದುವೆ ಧರ್ಮಸಮ್ಮತವಾಗಿ ನಡೆಯಲಿಲ್ಲವೆಂಬ ಅಭಿಪ್ರಾಯ ಕ್ಯಾಥಲಿಕ್‌ಮತಸ್ಥರದು. ಆದ್ದರಿಂದ ಇಂಗ್ಲಂಡಿನಪಟ್ಟಕ್ಕೆ ಎಲಿಸಬೆತ್ತಿಗೆ ಅಧಿಕಾರವಿಲ್ಲವೆಂಬುದು ಕ್ಯಾಥಲಿಕ್ಕರ ವಾದ. ಅವರ ದೃಷ್ಟಿಯಲ್ಲಿ ಮೇರಿಸ್ಟೂಯರ್ಟಳೇ ಇಂಗ್ಲಂಡಿಗೆ ನ್ಯಾಯವಾದರಾಣಿಯೆನಿಸಿದವಳು. ಫ್ರಾನ್ಸ್‌ರಾಜ್ಯದಲ್ಲಿ ನಿಶ್ಚಿಂತೆಯಾಗಿದ್ದಿದ್ದರೆ ಇಂಗ್ಲಂಡಿನಪಟ್ಟಕ್ಕಾಗಿ ಫ್ರೆಂಚರು ಜಗಳವನ್ನು ಬೆಳೆಸಬಹುದಾಗಿತ್ತು. ಆದರೆ ಎಲಿಸಬೆತ್ತಳ ಅದೃಷ್ಟ ಚನ್ನಾಗಿತ್ತು. ಫ್ರಾನ್ಸಿನಲ್ಲಿಯೂ ಕ್ಯಾಲ್ವಿನ್ ಶಿಷ್ಯರು ತೋರಿಕೊಂಡಿದ್ದರು. **ಹ್ಯೂಗಿನೋ** (Huguenots)ಎಂಬ ಹೆಸರನ್ನು ಪಡೆದ ಆ ಜನರನ್ನು ಅಡಗಿಸಲು ಫ್ರಾನ್ಸಿನರಾಜನು ಕಷ್ಟಪಡಬೇಕಾಗಿತ್ತು. ಸ್ಪೈನ್ ಮತ್ತು ಫ್ರಾನ್ಸ್ ಎಂಬೆರಡು ರೋಮನ್‌ಕ್ಯಾಥಲಿಕ್‌ರಾಜ್ಯಗಳಲ್ಲಿ ಒಳತೊಂದರೆಗಳಿಲ್ಲದೆಯೋ ಆ ಪ್ರಭುಗಳಿಗೆ ಪರಸ್ಪರ ಅಸೂಯೆಯಿಲ್ಲದೆಯೋ ಇದ್ದಿದ್ದರೆ ಇಂಗ್ಲಂಡಿನಲ್ಲಿ ಆಂಗ್ಲಿಕನ್‌ವ್ಯವಸ್ಥೆಯನ್ನು ಕಾಪಾಡಿಕೊಳ್ಳುವುದು ಅಸಾಧ್ಯವೆನಿಸುತ್ತಿತ್ತು.

ಎರಡನೆಫ್ರಾನ್ಸಿಸ್ ಎನಿಸಿಕೊಂಡ ಫ್ರಾನ್ಸಿನದೊರೆಯು ಚಿಕ್ಕವಯಸ್ಸಿನಲ್ಲಿಯೇ ರೋಗಕ್ಕೆತುತ್ತಾಗಿ ತೀರಿಕೊಂಡನು. ಮೇರಿಸ್ಟೂಯರ್ಟ್ ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿ ಫ್ರಾನ್ಸಿನಪಟ್ಟವನ್ನು ಕಳೆದುಕೊಳ್ಳಬೇಕಾಯಿತು. ಮುಂದೆ ರಾಜನಾದ

**9ನೆ ಚಾರ್ಲ್ಸ್** (Charles IX) ಎಂಬಾತನ ಆಳಿಕೆಯಲ್ಲಿ ಆತನತಾಯಿ **ಕಥರೀನ್ ಡಿ ಮೆಡಿಚಿ** (Catharine de Medici) ಎಂಬಾಕೆಯ ಯಾಜಮಾನ್ಯವೇ ಹೆಚ್ಚಾಯಿತು. ಪಿತೂರಿಕಟ್ಟುವುದರಲ್ಲಿಯೂ ವೈರಿಗಳಿಗೆ ವಿಷವಿಡುವುದರಲ್ಲಿಯೂ ನಿಪುಣೆಯಾದ ಆಕೆಯು ತನ್ನ ಸ್ವಂತವೈರಿಗಳಮೇಲೆ ಹ್ಯೂಗಿನೊಗುಂಪಿನವರನ್ನು ಎತ್ತಿಕಟ್ಟಿದಳು. ಫ್ರಾನ್ಸಿನಲ್ಲಿ ಪಿತೂರಿಗಳೂ ಕಿತ್ತಾಟಗಳೂ ಎರಡುಗುಂಪುಗಳಿಗೂ ರೇಗಿದವು. ಆಗ ಹ್ಯೂಗಿನೋಜನರು ತಮ್ಮ ಶತ್ರುಗಳಕಾಟವನ್ನು ತಡೆಯಲಾರದೆ ಎಲಿಸಬೆತ್‌ರಾಣಿಯ ಸಹಾಯವನ್ನು ಬೇಡಿದರು. ಉಪಾಯಗಾರ್ತಿಯಾದ ಎಲಿಸಬೆತ್ ಇಷ್ಟವಿಲ್ಲದವಳಂತೆ ಹೊರಗಡೆ ನಟಿಸುತ್ತಲಿದ್ದು ಸ್ವಲ್ಪಸೈನ್ಯವನ್ನು ಹ್ಯೂಗಿನೊಗುಂಪಿನ ನೆರವಾಗಿ ಕೊಟ್ಟುಕಳುಹಿಸಿದಳು. ಸಣ್ಣಹೊಡೆದಾಟಗಳ ಫಲಿತಾಂಶವಾಗಿ **ಹ್ಯಾವರ್** (Havre) ಎಂಬ ರೇವುಪಟ್ಟಣವು ಇಂಗ್ಲಿಷರ ವಶಕ್ಕೆ ಬಂತು. ಇಬ್ಬರಜಗಳದಲ್ಲಿ ತಾನು ಮೂರನೆಯವಳಾಗಿ ಮೆಲ್ಲನೆ ಪ್ರವೇಶಿಸಿ ಹ್ಯಾವರ್‌ಪಟ್ಟಣವನ್ನು ದಕ್ಕಿಸಿಕೊಂಡು ಕಲೇಬದಲಾಗಿಟ್ಟುಕೊಳ್ಳಬಹುದೆಂದು ಎಲಿಸಬೆತ್ ಆಸೆಪಟ್ಟಳು. ಆದರೆ 1563ರಲ್ಲಿ ಫ್ರಾನ್ಸ್‌ದೇಶದಲ್ಲಿ ಎರಡು ಮತಪಂಗಡಗಳಿಗೂ ಸಮಾಧಾನವಾಗಿ ಹ್ಯಾವರ್‌ಪಟ್ಟಣವು ಜಾರಿಕೊಂಡಿತು. ಕೈಗೆಬಂದ ತುತ್ತು ಬಾಯಿಗಿಲ್ಲದಂತಾಗಿಹೋಯಿತು. ಆದರೆ ಅಲ್ಲಿಂದ ಮುಂದಕ್ಕೆ ಒದಗಬಹುದಾಗಿದ್ದ ವಿಪತ್ತು ಒದಗಲಿಲ್ಲ; ಮತದ ಜಗಳಗಳು ತಾತ್ಕಾಲಿಕವಾಗಿ ಮಾತ್ರ ನಿಂತಿದ್ದು ಪುನಃ ರೇಗಿದವು. ಸ್ಪೈನಿನ ಫಿಲಿಪ್‌ರಾಜನು ಪ್ರಬಲನಾಗಿದ್ದಾಗ್ಗೂ ಫ್ರಾನ್ಸಿನ ರಾಜಮನೆತನದವರಲ್ಲಿ ವೈಷಮ್ಯಕಟ್ಟಿಕೊಂಡಿದ್ದುದರಿಂದ ಎರಡುಕ್ಯಾಥಲಿಕ್‌ರಾಜ್ಯಗಳೊಟ್ಟುಗೂಡಿ ಇಂಗ್ಲಂಡಿನಮೇಲೆ ಕವಿಯುವ ಸಂಭವವು ದೂರವಾಯಿತು.

**ಹ್ಯೂಗಿನೊ ಜನರಿಗೆ ಸಹಾಯ**

## 2. ಮೇರಿ ಸ್ಟ್ಯೂಯರ್ಟ್

ಕಾಲಗತಿ ಹೀಗಿದ್ದಾಗ ಮೇರಿಸ್ಟ್ಯೂಯರ್ಟ್ 1561ರಲ್ಲಿ ಫ್ರಾನ್ಸನ್ನು ಬಿಟ್ಟು ಹೊರಟು ಸ್ಕಾಟ್ಲಂಡನ್ನು ಸೇರಿದಳು. ಚಿಕ್ಕಂದಿನಲ್ಲಿಯೇ ಸ್ವದೇಶವನ್ನುಬಿಟ್ಟು ಪರದೇಶದಲ್ಲಿ ಬೆಳೆದಿದ್ದವಳು. ತಂದೆಯನ್ನೂ ತಾಯಿಯನ್ನೂ ಗಂಡನನ್ನೂ ಸಣ್ಣವಯಸ್ಸಿನಲ್ಲಿಯೇ ಕಳೆದುಕೊಂಡವಳು. ತಮ್ಮ ಸ್ವಂತದೊರೆ 5ನೆ ಜೇಮ್ಸಿನಮಗಳಾಗಿ ನಾನಾಕಷ್ಟಗಳಿಗೆ ಚಿಕ್ಕಂದಿನಲ್ಲಿಯೇ ಸಿಕ್ಕಿದವಳೆಂದು ಸ್ಕಾಟ್ಲಂಡಿನ ಜನರು ಆಕೆಯಲ್ಲಿ ಅಪಾರವಾದ ಅನುರಾಗವಾತ್ಸಲ್ಯಗಳನ್ನು ತೋರಬೇಕಾಗಿತ್ತು. ಆದರೆ ಅಂತಹವಿಶ್ವಾಸಕ್ಕೆ ಘಾತಕವಾಗಿ ಬೇರೊಂದುಚಿಂತೆ ಹುಟ್ಟಿತ್ತು. ಮೇರಿ ರೋಮನ್ ಕ್ಯಾಥಲಿಕ್‌ಮತದವಳು, ಫ್ರೆಂಚರವಳಾಗಿ ಬೆಳೆದವಳು. ಪ್ರೆಸ್ಬಿಟೇರಿಯನ್ನರಾಗಿ ಹೋಗಿದ್ದ ಶ್ರೀಮಂತರು ಮೇರಿಯನ್ನು ಬರಮಾಡಿಕೊಂಡರೂ ಈ ಶಂಕೆಯಿಂದ ಹೆಚ್ಚು

**ಸ್ಕಾಟ್ಲಂಡಿನಲ್ಲಿ ಆಗಮನ**

ಆದರವನ್ನು ತೋರಲಿಲ್ಲ. ಅಧಿಕಾರವನ್ನೂ ಒಪ್ಪಿಸಲಿಲ್ಲ. ಆದರೆ ಮೇರಿ ಜಾಣೆ. ಯುಕ್ತಿಯಿಂದ ಕಾಲಕ್ರಮದಲ್ಲಿ ತನ್ನ ಪ್ರಭುತ್ವವನ್ನು ಸಾಧಿಸಬಹುದೆಂದು ಮನಸ್ಸಿನಲ್ಲಿ ಯೋಚಿಸಿ ಶ್ರೀಮಂತಪ್ರಮುಖನಾಗಿ ಪ್ರೆಸ್ಬಿಟೇರಿಯನ್ ಪಂಗಡಕ್ಕೆ ಮುಖಂಡನಾಗಿದ್ದ **ಮೋರೆ ಶ್ರೀಮಂತನ** ( Earl of Moray ) ಅಧಿಕಾರಕ್ಕೂ ಮತದವ್ಯತ್ಯಸ್ತತೆಗೂ ಒಪ್ಪಿ ತನಗೆಮಾತ್ರ ತನ್ನ ಮತದನುಸರಣೆಯಲ್ಲಿ ಸ್ವಾತಂತ್ರ್ಯವಿದ್ದರೆ ಸಾಕೆಂದು ಹೇಳಿದಳು. ಉಪಾಯವಾಗಿ ಶ್ರೀಮಂತರಲ್ಲಿ ಒಬ್ಬೊಬ್ಬರವಿಶ್ವಾಸವನ್ನೂ ಸಂಪಾದಿಸಿದಳು. ಜಾನ್‌ನಾಕ್ಸ್‌ಮಾತ್ರ ತನ್ನ ವಿರೋಧವನ್ನು ಬಿಡಲಿಲ್ಲ.

ನಾಲ್ಕು ವರ್ಷಕಾಲ ಮೇರಿ ಹಾಗೂಹೀಗೂ ಕಾಲತಳ್ಳಿದಳು. ಅಧಿಕಾರ ಶೂನ್ಯಳಾಗಿ ಎಷ್ಟು ಕಾಲವಿರಲಾದೀತು? ಸ್ಕಾಟ್ಲೆಂಡಿನಲ್ಲಿ ಹೆಸರಿಗೆಮಾತ್ರರಾಣಿಯಾಗಿದ್ದವಳು ಯೋಚನೆಮಾಡಿ ಇಂಗ್ಲಂಡಿನ ರೋಮನ್‌ಕ್ಯಾಥಲಿಕ್‌ಗುಂಪಿನವರ ಅಸಮಾಧಾನಹೆಚ್ಚುತ್ತಿದ್ದುದನ್ನು ತಿಳಿದು ಅವರಪರವಾಗಿನಿಂತು ತಾನು ರಾಣಿಯಾಗುವ ಕನಸನ್ನು ಕಂಡಳು. 1565ರಲ್ಲಿ **ಲಾರ್ಡ್‌ಡಾರ್ನ್ಲೆ**(Lord Darnley)ಎಂಬ ಸ್ಕಾಟ್ ಶ್ರೀಮಂತನನ್ನು ಮದುವೆಯಾದಳು. ಆತನು 7ನೆ ಹೆನ್ರಿಯಮಗಳು ಮಾರ್ಗರೆಟ್ಟಳ ದೌಹಿತ್ರನಾದವನು. ವಧೂವರರಿಬ್ಬರಿಗೂ ಇಂಗ್ಲಂಡಿನ ಪಟ್ಟದಧಿಕಾರವಿತ್ತು.

**ಮದುವೆ**

ಈ ವಿವಾಹದ ಸುದ್ದಿ ಕೇಳಿ ಎಲಿಸಬೆತ್ ಚಿಂತೆಗೆ ಸಿಕ್ಕಿದಳು. ಎದುರುಪಕ್ಷದವನಾದ ಮೋರೆಶ್ರೀಮಂತನನ್ನು ಪ್ರೋತ್ಸಾಹಿಸಿದಳು. ಆದರೆ ಮೇರಿ ಮತ್ತು ಡಾರ್ನ್ಲೆಯಿಬ್ಬರೂ ಸೇರಿ ಮೋರೆಯನ್ನು ಸೋಲಿಸಿ ಸ್ಕಾಟ್ಲೆಂಡಿನಿಂದ ಓಡಿಸಿಬಿಟ್ಟರು. ಗೆಲುವೇನೋ ಸಿಕ್ಕಿದರೂ ಮೇರಿಗೆ ಶಾಂತಿಸುಖಗಳಿಲ್ಲದಾದವು. ಏಕೆಂದರೆ ಡಾರ್ನ್ಲೆ ಹೇಡಿಯಾಗಿದ್ದು ಅಸೂಯೆಪಡತಕ್ಕ ಸ್ವಭಾವದವನು. ಮೇರಿಯ ಆಲೋಚನೆಗಳನ್ನು ಹಿಡಿದು ಸಾಧಿಸುವ ಕೆಲಸದಲ್ಲಿ ಸೇರಿಕೊಳ್ಳಲು ಅಯೋಗ್ಯನು. ಕೆಲಕಾಲದಲ್ಲಿ ಮೇರಿಯ ರಾಯಸದವನಾಗಿ ಆಪ್ತನಂತಿದ್ದ **ಡೇವಿಡ್ ರಿಸಿಯೋ** ( David Rizzio ) ಎಂಬಾತನಲ್ಲಿ ಆಗ್ರಹಗೊಂಡು ಡಾರ್ನ್ಲೆ ಗೋಪ್ಯವಾಗಿಪಿತೂರಿಕಟ್ಟಿ

**ರಿಸಿಯೋ ಕೊಲೆ**

1566ರಲ್ಲಿ ಎಡಿನ್ಬರೊಅರಮನೆಯಲ್ಲಿ ಮೇರಿಯಕಣ್ಣೆದುರಿಗೆ ರಿಸಿಯೋವನ್ನು ಎಳೆದಾಡಿಸಿ ಕೊಲ್ಲಿಸಿಬಿಟ್ಟನು. ಅಂತರಂಗದಲ್ಲಿ ರೋಷವಿದ್ದಾಗ್ಗೂ ಮೇರಿಯು ಡಾರ್ನ್ಲೆಯನ್ನು ಮನ್ನಿಸಿ ಅವನಮನಸ್ಸನ್ನು ಗೆದ್ದುಕೊಂಡು ಆತನ ಸಂಗಾತಿಗಳನ್ನು ದೇಶದಿಂದ ಓಡಿಸಿದಳು. ಅವರೆಲ್ಲರೂ ಇಂಗ್ಲಂಡಿನಲ್ಲಿದ್ದ ಮೋರೆಶ್ರೀಮಂತನನ್ನು ಸೇರಿಕೊಂಡು ಸಮಯನಿರೀಕ್ಷಣೆಯಲ್ಲಿ ತೊಡಗಿದರು. ಇಂತಹ ಸಮಯದಲ್ಲಿ ಮೇರಿಗೆ ಪುತ್ರೋತ್ಸವವಾಯಿತು. ಆ ಮಗುವೇ ಮುಂದೆ ಸ್ಕಾಟ್ಲೆಂಡ್‌ಇಂಗ್ಲಂಡುಗಳೆರಡಕ್ಕೂ ದೊರೆಯಾದ **ಜೇಮ್ಸ್.**

ಸ್ವಲ್ಪಕಾಲದಲ್ಲಿಯೇ ಮೇರಿಡಾರ್ನ್ಲೆಯಿಬ್ಬರೂ ಜಗಳವಾಡತೊಡಗಿದರು. ಧೈರ್ಯಶಾಲಿಯೂ ಸಾಹಸಿಯೂ ಆಗಿದ್ದು ಪುಂಡುತನಕ್ಕೂ ಸಿದ್ಧನಾಗತಕ್ಕ ಸ್ವಭಾವವುಳ್ಳವನಾಗಿದ್ದ **ಬಾತ್ವೆಲ್‌ಶ್ರೀಮಂತ** (Earl of Bothwell)ನೆಂಬಾತನು ಮೇರಿಯ ಆಪ್ತತೆಯನ್ನು ಸಂಪಾದಿಸಿದನು. ಡಾರ್ನ್ಲೆಗೂ ಅವನಿಗೂ ಮೊಲಕ್ಕೂ ಹುಲಿಗೂ ಇದ್ದಂತೆ ವ್ಯತ್ಯಾಸತೋರುತ್ತಿತ್ತು. ಮೇರಿ ಬಾತ್ವೆಲ್ಲನನ್ನು ಹೆಚ್ಚುಹೆಚ್ಚಾಗಿ ಮೆಚ್ಚಿ ಅವನೊಡನೆ ಆಲೋಚನೆಸಾಲೋಚನೆಗಳನ್ನು ನಡೆಸುತ್ತಲಿದ್ದುದನ್ನು ಸಹಿಸಲಾರದೆ ಡಾರ್ನ್ಲೆ ಹುಳಿಹುಳಿಯಾದನು. ಆ ಹೇಡಿಯನ್ನು ತೀರಿಸಿಬಿಡಬೇಕೆಂದು ಬಾತ್ವೆಲ್ ಸಂಧಾನಮಾಡಿ ಕೆಲವರುಪುಂಡುಜನರನ್ನು ಕಟ್ಟಿದನು. ಕಾಹಿಲೆಯಿಂದ ಗುಣಮುಖವಾಗುತ್ತಿದ್ದ ಡಾರ್ನ್ಲೆ ಏಕಾಂಗಿಯಾಗಿ ಎಡಿನ್ಬರೋಬಳಿ ಒಂದುಮನೆಯಲ್ಲಿದ್ದಾಗ ಇವರೆಲ್ಲರೂಸೇರಿ ಮನೆಗೆ ಹಳ್ಳತೋಡಿ ಮದ್ದುತುಂಬಿ ಒಟ್ಟುಮನೆಯನ್ನು ಗಗನಕ್ಕೆ ಉಡಾಯಿಸಿಬಿಟ್ಟರು. ಡಾರ್ನ್ಲೆಯ ಮೃತದೇಹವು ಆ ಮನೆಯಸಮೀಪದಲ್ಲಿ ಬಿದ್ದಿತು. ಈ ಸುದ್ದಿಯನ್ನು ಕೇಳಿದವರೆಲ್ಲರೂ ಹಾಹಾಕಾರಮಾಡಿದರು. ಬಾತ್ವೆಲ್‌ಶ್ರೀಮಂತನೇ ಈ ಘೋರಕೊಲೆಯನ್ನು ನಡೆಸಿದವನೆಂದು ಎಲ್ಲರೂ ನಂಬಿದರು. ಮೇರಿಯೂ ಆ ಪಿತೂರಿಯಲ್ಲಿ ಸೇರಿದ್ದಳೆಂದು ಕೆಲವರು ಅನುಮಾನಪಟ್ಟರು. ಮೇರಿಯೆಷ್ಟುಮಾತ್ರ ಸಹಕರಿಸಿದ್ದಳೋ ನಿಶ್ಚಯವಿಲ್ಲ. ಆದರೆ ಬಾತ್ವೆಲ್ಲನಸಂಗವನ್ನು ಆಮೇಲೂ ಮೇರಿ ಬಿಡಲಿಲ್ಲ. ಬಾತ್ವೆಲ್ಲನಲ್ಲಿ ಮೇರಿ ಮೋಹಗೊಂಡಿದ್ದಳು. ಎಲ್ಲರ ಅನುಮಾನಕ್ಕೂ ಪಾತ್ರನಾದವನನ್ನು ಹೇಗೆ ಮದುವೆಯಾಗುವುದು? ಆಪಾದಿತನ ವಿಚಾರಣೆಯನಟನೆಯೂ ನಡೆಯಿತು. ಬಾತ್ವೆಲ್ಲನನ್ನು ನಿರಪರಾಧಿಯೆಂದು ನಿರ್ಧರಿಸಿದ ಮೇಲೆಕೂಡ ಮೇರಿ ತನ್ನ ಇಷ್ಟವನ್ನು ಸಾಧಿಸಲು ಹಿಂದೆಗೆದಳು. ಅವನನ್ನು ಮದುವೆಯಾಗುವುದಕ್ಕೂ ಒಂದು ಪಿತೂರಿನಡೆಯಿತು. ಮೇರಿ ಏಕಾಕಿಯಾಗಿರುವಾಗ ಬಾತ್ವೆಲ್ ಹಟಾತ್ತಾಗಿಕಾಣಿಸಿಕೊಂಡು ಬಲವಂತದಿಂದ ಎತ್ತಿಕೊಂಡುಹೋಗಿ ಮದುವೆಮಾಡಿಕೊಂಡಂತೆ ನಡೆಯಿತು. ಇದರಿಂದ ಸ್ಕಾಟ್ಲೆಂಡಿನಜನರೆಲ್ಲರೂ ಹಾಹಾಕಾರಪಡುವುದು ಮಾತ್ರವಲ್ಲದೆ ಇಬ್ಬರಮೇಲೂ ತಿರುಗಿಬೀಳುವಂತಾಯಿತು. ಮೇರಿ ಮತ್ತು ಬಾತ್ವೆಲ್ ಇಬ್ಬರು ಒಟ್ಟು ಸ್ಕಾಟ್ಲೆಂಡ್‌ದೇಶವನ್ನೇ ಎದುರಿಸಬೇಕಾಯಿತು. ಬಾತ್ವೆಲ್ಲನ ಮಿತ್ರರಾಗಿದ್ದ ಶ್ರೀಮಂತರುಕೂಡ ಶತ್ರುಗಳಾದರು. ಆಗ ಮೇರಿ ತನ್ನ ಕ್ಯಾಥಲಿಕ್ ಮತವನ್ನು ಬಿಟ್ಟು ಪ್ರಾಟೆಸ್ಟೆಂಟ್‌ಮತವನ್ನು ಸೇರಿಕೊಳ್ಳುವವಳಂತೆ ಕಾಣಿಸಿಕೊಂಡು ಆ ಮೂಲಕವಾದರೂ ಮಿತ್ರರನ್ನು ಸಂಪಾದಿಸಲು ಯತ್ನಿಸಿದಳು. **ಕಾರ್ಬೆರಿ** (Carberry) ಎಂಬ ಗುಡ್ಡದಬಳಿ ಕದನವಾಯಿತು. ಮೇರಿ ಸೋತು ಸೆರೆಸಿಕ್ಕಿದಳು. ಬಾತ್ವೆಲ್ ತಲೆತಪ್ಪಿಸಿಕೊಂಡು ಪಲಾಯನಪರನಾಗಿ ಸ್ವಲ್ಪಕಾಲದಲ್ಲಿಯೇ ಮೃತಪಟ್ಟನು. ಶ್ರೀಮಂತ

**ಡಾರ್ನ್ಲೆಯ ದುರ್ಮರಣ**

**ಬಾತ್ವೆಲ್ಲೊಡನೆ ಮದುವೆ**

**ಸೋಲು**

ರೆಲ್ಲರೂ ಮೇರಿಯನ್ನು ಪಟ್ಟದಿಂದತಪ್ಪಿಸಿ ಹಸುಳೆಜೇಮ್ಸನು ದೊರೆಯೆಂದು ಸಾರಿಬಿಟ್ಟರು. ಮೋರೆ ಮುಂತಾದ ಶ್ರೀಮಂತರು ಸ್ಕಾಟ್ಲೆಂಡನ್ನು ಪುನಃ ಸೇರಿಕೊಂಡರು.

**ಲಾಖ್ಲೀವೆರ್**( Lochleven )ಎಂಬಕೋಟೆಯಲ್ಲಿ ಒಂದುವರ್ಷಕಾಲ ಮೇರಿ ನಿರ್ಬಂಧದಲ್ಲಿರುವಷ್ಟರಲ್ಲಿ ಶ್ರೀಮಂತರಲ್ಲಿ ಪರಸ್ಪರವಿರೋಧಗಳುಹುಟ್ಟಿ ಒಂದು ಗುಂಪಿನವರು ಮೇರಿಗೆಸಹಾಯಮಾಡತಕ್ಕವರಾದರು. ಮೇರಿ ಉಪಾಯದಿಂದ ಕೋಟೆಬಿಟ್ಟುಹೊರಟು ಯುದ್ಧಕ್ಕೆನಿಂತಳು. ಮೋರೆಶ್ರೀಮಂತನು **ಲ್ಯಾಂಗ್ಸೈಡ್** (Langside) ಎಂಬೆಡೆಯಲ್ಲಿ ಯುದ್ಧಮಾಡಿ ಗೆದ್ದನು. ಆಗ ಮೇರಿಗೆ ದಿಕ್ಕಿಲ್ಲದಂತಾಗಿಹೋಯಿತು. ಆದರೂ ಧೈರ್ಯ ವಹಿಸಿ ಇಂಗ್ಲಂಡಿಗೆಹೊರಟು ಎಲಿಸಬೆತ್ತಳಸಹಾಯವನ್ನು ಬಯಸಿದಳು. ಸೈನ್ಯಸಹಾಯಮಾಡಿದರೂಸರಿಯೆ, ಫ್ರಾನ್ಸಿಗೆ ಕೊಟ್ಟು ಕಳುಹಿಸಿದರೂಸರಿಯೆ ಎಂದು ಹೇಳಿಕಳುಹಿಸಿದ ಮೇರಿಗೆ ಪ್ರತ್ಯುತ್ತರಕೊಡುವ ಸಂದರ್ಭದಲ್ಲಿ ಎಲಿಸಬೆತ್ ಭಾರಿ ತಳಮಳದಲ್ಲಿ ಸಿಕ್ಕಿಕೊಂಡಳು.

**ಇಂಗ್ಲಂಡ್ ಪ್ರವೇಶ**

ಎಲಿಸಬೆತ್ತಿಗೆ ಮೇರಿಗಿಂತ ವೈರಿಯಾರು? ಫ್ರಾನ್ಸಿನಲ್ಲಿದ್ದಾಗಲೇ ಇಂಗ್ಲಂಡಿಗೂ ರಾಣಿಯೆಂಬ ಬಿರುದನ್ನು ತಾಳಿ ಕ್ಯಾಥಲಿಕ್‌ಮತಸ್ಥಳಾಗಿ ರೋಮನ್‌ಕ್ಯಾಥಲಿಕ್‌ಪಂಗಡದವರ ನಾಯಕಿಯಾದವಳು ಮೇರಿ. ಕ್ಯಾಥಲಿಕ್ಕರದೃಷ್ಟಿಯಲ್ಲಿ ಮೇರಿಯೇ ನ್ಯಾಯವಾಗಿ ಇಂಗ್ಲಂಡಿಗೆ ರಾಣಿಯಾಗಬೇಕಾದವಳು. ಎಲಿಸಬೆತ್–ಮೇರಿ ಇಬ್ಬರೂ ಅಕ್ಕತಮ್ಮನ ಮಕ್ಕಳು, ಸಮೀಪಬಂಧುಗಳು. ಮತದಲ್ಲಿಮಾತ್ರ ವಿರೋಧವಲ್ಲ; ಎಲಿಸಬೆತ್ತಿಗಿಲ್ಲದ ರೂಪಲಾವಣ್ಯಗಳು ಮೇರಿಗಿದ್ದುವು. ಸಹಜವಾಗಿ ಎಲಿಸಬೆತ್ತಿಗೆ ಮೇರಿಯೆಂದರೆ ವಿಷದಂತೆಯೇ. ರಾಜಕೀಯರೀತಿಯಲ್ಲಿಯೂ ಪರಮಶತ್ರುವಾಗಿದ್ದ ಮೇರಿ ತನ್ನ ರಾಜ್ಯದಲ್ಲಿಹೊಕ್ಕು ಸತ್ಕಾರವನ್ನೂ ಸಹಾಯವನ್ನೂ ಬಯಸಿದಾಗ ಎಲಿಸಬೆತ್ ಮಾಡಬೇಕಾದುದೇನು! ಸಹಾಯಮಾಡಿದರೆ ಸ್ಕಾಟ್‌ಶ್ರೀಮಂತರಿಗೆ ಕೊಟ್ಟ ವಚನವನ್ನು ಮುರಿದಂತಾಗುವುದಲ್ಲದೆ ಸ್ಕಾಟ್ಲೆಂಡಿನಲ್ಲಿ ಪ್ರಾಟೆಸ್ಟೆಂಟರಿಗೆ ವಿರೋಧ ಮಾಡಿದಂತೆಯೂ ಆಗುತ್ತಿತ್ತು. ಫ್ರಾನ್ಸಿಗೆ ಕಳುಹಿಸಿಕೊಟ್ಟರೆ ಅಲ್ಲಿ ಹೋದಮೇಲೆ ಮೇರಿ ಕ್ಯಾಥಲಿಕ್‌ಪ್ರಭುಗಳ ಸಹಾಯವನ್ನಪೇಕ್ಷಿಸಿಕೊಂಡು ಸ್ಕಾಟ್ಲೆಂಡ್‌ಇಂಗ್ಲಂಡುಗಳಮೇಲೆ ಕೈಮಾಡದೆ ಇದ್ದಾಳೆಯೇ? ಇಂಗ್ಲಂಡಿನಲ್ಲಿಯೇ ಇಟ್ಟುಕೊಂಡರೆ ಸ್ಕಾಟ್‌ಶ್ರೀಮಂತರಿಗೆ ಅಸಮಾಧಾನವಾಗುವುದಲ್ಲದೆ ಇಂಗ್ಲಂಡಿನ ರೋಮನ್‌ಕ್ಯಾಥಲಿಕ್ಕರು ಒಟ್ಟುಕೂಡಿ ಮೇರಿಗೆಪಟ್ಟದೊರಕಿಸುವ ಪಿತೂರಿಗಳನ್ನು ಕಟ್ಟಲು ಆಸ್ಪದವನ್ನೊದಗಿಸಿದಂತೆ ಆಗುವುದು. ಮೇರಿಯನ್ನು ಬಂಧನದಲ್ಲಿಟ್ಟರೆ ಕ್ಯಾಥಲಿಕ್ ಪ್ರಭುಗಳುಅಂತರಂಗದಲ್ಲಿಮಾತ್ರವಲ್ಲದೆ ಬಹಿರಂಗದಲ್ಲಿಯೂ ಶತ್ರುಗಳೆನಿಸಿ ತೊಂದರೆಕೊಡದಿದ್ದಾರೆಯೆ? ಇಂತಹ ತಳ್ಳಂಕದಲ್ಲಿಬಿದ್ದ ಎಲಿಸಬೆತ್ ನಿರ್ಧರಕ್ಕೆಬಾರದೆ ಕಾಲತಳ್ಳುವುದೇ

**ಎಲಿಸಬೆತ್ತಳ ಸಮಸ್ಯೆ**

ಉಪಾಯವೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಮೇರಿಗಾಗಿ ರಾಜ್ಯದ ಉತ್ತರ ದಲ್ಲಿ ಒಂದು ಮನೆಬಿಡಿಸಿಕೊಟ್ಟು ಸ್ಕಾಟ್‌ಶ್ರೀಮಂತರು ಆಕೆಯಮೇಲೆ ಹೊರಿಸಿದ್ದ ತಪ್ಪಿನ ವಿಚಾರಣೆಯಾಗಲೆಂದು ಹೇಳಿದಳು. ಮೋರೆ ಮುಂತಾದ ಶ್ರೀಮಂತರು ವಿಚಾರಣೆನಡೆಯಬೇಕೆಂದು ಕೇಳಿಕೊಂಡದ್ದು ಎಲಿಸಬೆತ್ತಿಗೆ ಅನುಕೂಲವಾಯಿತು.

ವಿಚಾರಣೆನಡೆಯಲೆಂದು ಎಲಿಸಬೆತ್ ಅದಕ್ಕಾಗಿ ಒಂದು ಸಭೆಯನ್ನು ಗೊತ್ತು ಮಾಡಿ **ನಾರ್ಫಕ್‌ಶ್ರೀಮಂತ**(Duke of Norfolk)ನನ್ನು ಅದಕ್ಕೆ ಅಧ್ಯಕ್ಷನನ್ನಾಗಿ ನಿಯಮಿಸಿದಳು. ಡಾರ್ನ್ಲೆಯ ಮರಣಕ್ಕೆ ಮುಂಚಿತವಾಗಿಯೇ ಮೇರಿ ಬಾತ್ವೆಲ್ಲಿಗೆ ಬರೆದವೆಂದುಹೇಳಿ ಕೆಲವು ಪತ್ರಗಳನ್ನು (Casket Letters) ಮೋರೆ ಮುಂತಾದವರು ಸಭೆಯ ಮುಂದಿಟ್ಟರು; ಬಾತ್ವೆಲ್ಲನ ಘೋರಕೃತ್ಯವನ್ನು ಮೇರಿಯೇ ಪ್ರೇರಿಸಿದ ಅಂಶವು ಆ ಪತ್ರಗಳಿಂದ ದೃಢಪಡುವುದೆಂದು ಋಜುವಾತುಕೊಟ್ಟರು. ಮೇರಿಯ ಪಕ್ಷದವರು ಅವುಗಳನ್ನು ಸುಳ್ಳುಪತ್ರಗಳೆಂದರು. ಸಭಿಕರು ನಿಶ್ಚಯಮಾಡುವುದು ಕಷ್ಟವಾಯಿತು. ನಿಶ್ಚಯಮಾಡಬೇಕೆಂಬ ಉದ್ದೇಶವೇ ಎಲಿಸಬೆತ್‌ರಾಣಿಯ ಮನಸ್ಸಿನಲ್ಲಿರಲಿಲ್ಲ. ಕಾಲತಳ್ಳುತ್ತ ಮೇರಿಯನ್ನು ಗೌರವದನಿರ್ಬಂಧದಲ್ಲಿಡಿಸಿದಳು. ಮೋರೆ ಮುಂತಾದವರು ತಮಗೆ ವಿರೋಧವಾಗಿ ಎಲಿಸಬೆತ್ ಆಚರಿಸುವುದಿಲ್ಲವೆಂದು ಧೈರ್ಯತಾಳಿ ತಮ್ಮದೇಶಕ್ಕೆ ಸ್ವಸ್ಥಚಿತ್ತರಾಗಿ ಹಿಂತಿರುಗಿಬಿಟ್ಟರು. ವಿಚಾರಣೆಯನಾಟಕ ಬೇಗ ಮುಗಿಯಲೇ ಇಲ್ಲ. ಮೇರಿ ಹದಿನೆಂಟುವರ್ಷಗಳನ್ನು ಇಂಗ್ಲಂಡಿನಲ್ಲಿ ಗೌರವದ ನಿರ್ಬಂಧದಲ್ಲಿ ಕಳೆಯಬೇಕಾಯಿತು. ಸ್ಕಾಟ್ಲಂಡಿನಲ್ಲಿ **ರೀಜೆಂಟ್** ಆಗಿದ್ದ ಮೋರೆ ಶ್ರೀಮಂತನೂ ಇತರರೂ ಪ್ರೆಸ್ಬಿಟೇರಿಯನ್‌ಮತವನ್ನು ಭದ್ರಪಡಿಸುತ್ತಲಿದ್ದು ಮೇರಿಯನ್ನು ದೂರಮಾಡಿಬಿಟ್ಟರು.

**ವಿಚಾರಣೆ**

ಆದರೆ ಇಂಗ್ಲಂಡಿನಲ್ಲಿದ್ದ ರೋಮನ್‌ಕ್ಯಾಥಲಿಕ್ಕರೂ ಇತರದೇಶಗಳ ಪ್ರಭುಗಳೂ ತಮ್ಮ ಉದ್ದೇಶಸಾಧನೆಗೆ ಸಮಯಹೊಂಚುತ್ತಿದ್ದರು. ಮೊದಲು 1569ರಲ್ಲಿ **ನಾರ್ದಂಬರ್ಲಂಡ್** (Northumberland) ಮತ್ತು **ವೆಸ್ಟ್‌ಮೋರ್ಲಂಡ್** (Westmoreland) ಜಿಲ್ಲೆಗಳ ಶ್ರೀಮಂತರು ಉತ್ತರದಲ್ಲಿದ್ದ ಕ್ಯಾಥಲಿಕ್ಕರಿಗೆ ಮುಖಂಡರೆನಿಸಿ ಮೇರಿಯಪರವಾಗಿ ದಂಗೆಯೆದ್ದರು. ಮೇರಿಯನ್ನು ಸೆರೆಯಿಂದ ಬಿಡಿಸಲು ಅವರು ಮಾಡಿದ ಪ್ರಯತ್ನ ಕೆಟ್ಟಿತು. ಅವರದಂಗೆಯನ್ನು **ಸಸೆಕ್ಸ್ ಶ್ರೀಮಂತನು**(Earl of Sussex) ಅಡಗಿಸಿಬಿಟ್ಟನು. ಇದರ ಪರಿಣಾಮವಾಗಿ ಮೇರಿಯನ್ನು ಮಧ್ಯಜಿಲ್ಲೆಗಳಿಗೊಯ್ದರು. **ಪೋಪನಾಗಿದ್ದ 5ನೆಪಯಸ್** (Pius V) ಎಂಬಾತನು ಕೌಂಟರ್‌ರೆಫರ್ಮೇಷನ್ ಉದ್ಯಮದಲ್ಲಿ ಆಸಕ್ತನಾಗಿ 1570ರಲ್ಲಿ ಎಲಿಸಬೆತ್ ಭ್ರಷ್ಟೆಯೆಂದು ನಿರ್ಣಯಿಸಿ ಆಕೆಯ ಮೇಲೆ **ಬಹಿಷ್ಕಾರಪತ್ರ**(Bull of Excommunication)ವನ್ನು **ಹೊರಡಿಸಿದನು.**

**ಪೋಪನ ಅಸ್ತ್ರ**

ಕ್ಯಾಥಲಿಕ್‌ಮತಸ್ಥರು ಆಕೆಯ ಆಳಿಕೆಯನ್ನೊಪ್ಪಿಕೊಳ್ಳುವುದು ಪಾಪಕೃತ್ಯವೆನಿಸಿತು. ಆಗ ಪಾರ್ಲಿಮೆಂಟಿನವರು ಕೋಪಗೊಂಡು ಪೋಪನಪತ್ರಗಳನ್ನು ದೇಶಕ್ಕೆತರುವುದಾಗಲಿ ರೋಮನ್‌ಕ್ಯಾಥಲಿಕ್‌ಮತಕ್ಕೆಸೇರುವುದಾಗಲಿ ರಾಜದ್ರೋಹಕ್ಕೆ ಸಮನಾದ ಅಪರಾಧಗಳಂತೆ ಗಣ್ಯವಾಗತಕ್ಕುದೆಂದು ಕಾನೂನುಮಾಡಿಬಿಟ್ಟರು. ಇದರಿಂದ ಕ್ಯಾಥಲಿಕ್ಕರಿಗೆ ಅತಿಕಷ್ಟಕಾಲವೊದಗಿತು. ಆ ಮತದಲ್ಲಿ ನಿಷ್ಠರಾಗಿದ್ದವರು ಹೇಗಾದರೂ ಎಲಿಸಬೆತ್ತಳ ಆಳಿಕೆಯನ್ನುತಪ್ಪಿಸಿ ಮೇರಿಯನ್ನು ಪಟ್ಟದಲ್ಲಿ ಕುಳ್ಳಿರಿಸಲು ಪಿತೂರಿಗಳನ್ನು ಕಟ್ಟಬೇಕಾಯಿತು. ಪೋಪನಕಡೆಯವರಿಗೆ ಸಂದರ್ಭವು ಅನುಕೂಲವಾಗಿತ್ತು.

**ರಿಡೋಲ್ಫಿ ಪಿತೂರಿ**

1571ರಲ್ಲಿ ಪಿತೂರಿಯೊಂದು ಸಿದ್ಧವಾಯಿತು. ಲಂಡನ್ನಿನಲ್ಲಿ ಲೇವಾದೇವಿ ಮಾಡಿಕೊಂಡಿದ್ದ **ರಿಡೋಲ್ಫಿ** ( Ridolfi )ಎಂಬ ಇಟಲಿಯವನು ಒಳಗೊಳಗೆ ಪೋಪಿಗೂ ಸ್ಪೈನಿನಫಿಲಿಪ್‌ರಾಜನಿಗೂ ಬೇಕಾದವನಾಗಿದ್ದನು. ರಾಜಬಂಧುವಾಗಿದ್ದ ನಾರ್ಫಕ್‌ಶ್ರೀಮಂತನೆಂಬಾತನು ಕೆಲವುಕಾರಣಗಳಿಂದ ಅಸಮಾಧಾನಪಡುತ್ತಿದ್ದನು. ರಿಡೋಲ್ಫಿ ಮುಂತಾದವರು ಈತನಿಗೂ ಮೇರಿಗೂ ಮದುವೆಮಾಡಿಸಿ ಮೇರಿಗೆ ಪಟ್ಟಕಟ್ಟುವಯೋಚನೆಯಿಂದ ಒಳಸಂಚನ್ನು ನಡೆಸಿದರು. ನಾರ್ಫಕ್‌ಶ್ರೀಮಂತನು ಅದಕ್ಕೊಪ್ಪಿಕೊಂಡನು. ಆದರೆ ಪಿತೂರಿಸಿದ್ಧವಾಗುತ್ತಿದ್ದಹಾಗೆಯೇ ಗೂಢಚಾರರೂ ಮಂತ್ರಿಗಳೂ ಅದನ್ನುಪತ್ತೆಮಾಡಿಕೊಂಡು ಸಮಯಹೊಂಚುತ್ತಿದ್ದರು. 1572ರಲ್ಲಿ ನಾರ್ಫಕ್‌ಶ್ರೀಮಂತನು ದಸ್ತಗಿರಿಯಾಗಿ ರಾಜದ್ರೋಹದ ಆಪಾದನೆಗೆ ಗುರಿಯಾಗಿ ವಿಚಾರಣೆಯಲ್ಲಿ ಅಪರಾಧಿಯೆಂದು ಗೊತ್ತಾಗಿ ತಲೆಯನ್ನುಕೊಟ್ಟನು. ಬಹಿಷ್ಕಾರಾಜ್ಞೆಯಪರಿಣಾಮವಾಗಿ ನಡೆದ ಈ ಪಿತೂರಿ ಧ್ವಂಸವಾಗಿಹೋಯಿತು.

ರೋಮನ್‌ಕ್ಯಾಥಲಿಕ್‌ಪ್ರಭುಗಳಲ್ಲಿ ಮುಖ್ಯಸ್ಥರಾಗಿ ಇಂಗ್ಲಂಡಿಗೆ ತೊಂದರೆ ಕೊಡಬಹುದಾಗಿದ್ದ ಫ್ರಾನ್ಸ್‌ಸ್ಪೈನ್‌ದೊರೆಗಳ ಕೈಕಟ್ಟಿದಹಾಗಿತ್ತು. ಫ್ರಾನ್ಸಿನಲ್ಲಿ ಪಟ್ಟದಪಿತೂರಿಗಳೊಂದಿಗೆ ಮತವೈಷಮ್ಯಗಳೂ ವಿಪರೀತವಾಗಿ ರೇಗುತ್ತಿದ್ದವು. 1572ರಲ್ಲಿ ಪ್ಯಾರಿಸ್ಸಿನಲ್ಲಿ ರಾಜಪುತ್ರಿಯವಿವಾಹನಡೆದಾಗ ಒಬ್ಬ ಯತಿಯ ಪುಣ್ಯದಿನದಲ್ಲಿ ಕ್ಯಾಥಲಿಕ್ಕರೆಲ್ಲರೂ ಸೇರಿಕೊಂಡು ಅಳಿಯನಕಡೆಯವರಾಗಿ ಮದುವೆಗೆಂದು ಪ್ಯಾರಿಸ್ಸಿಗೆ

**ಫ್ರಾನ್ಸಿನ ದುರವಸ್ಥೆ**

ಬಂದಿದ್ದ ಹ್ಯೂಗಿನೋಜನರನ್ನು ರಾತ್ರಿವೇಳೆಯಲ್ಲಿ ಎಳೆದಾಡಿ ತುಂಡುತುಂಡಾಗಿ ಕತ್ತರಿಸಿಬಿಟ್ಟರು. ಈ ಘೋರಕೊಲೆಗೆ **ಸೆಂಟ್ ಬಾತೊರ್ಲೊಮ್ಯೂ ಕೊಲೆ** (Massacre of St. Bartholomew) ಎಂದು ಹೆಸರು. ಇಂತಹತೊಂದರೆಗಳಲ್ಲಿದ್ದ ಫ್ರೆಂಚ್‌ದೊರೆಯು ಮೇರಿಯಪರವಾಗಿ ಬೆರಳನ್ನೆತ್ತಲಾರದವನಾಗಿದ್ದನು. ಸ್ಪೈನಿನ ಫಿಲಿಪ್ಪನಿಗಾದರೋ ಮೇರಿಯನ್ನು ಬಿಡುಗಡೆಮಾಡಿಸಿ ಇಂಗ್ಲಂಡಿನಲ್ಲಿ ಆಕೆಯನ್ನು ಸ್ಥಾಪಿಸುವ ಉದ್ದೇಶ

ವಿತ್ತು. ಆದರೆ ಫ್ರಾನ್ಸಿನವರಲ್ಲಿ ಅಸೂಯೆಪಡುತ್ತಿದ್ದುದಲ್ಲದೆ ಬೇರೊಂದು ತೊಂದರೆಯಲ್ಲಿ ಫಿಲಿಪ್ ಸಿಕ್ಕಿದ್ದನು. ನೆದರ್ಲಂಡ್ಸಿನ ಉತ್ತರಭಾಗದವರು ಪ್ರಾಟೆಸ್ಟೆಂಟರಾಗಿದ್ದರು. ಅವರನ್ನು ಹಿಂಸಿಸಿದಷ್ಟೂ ಅವರ ಮತಭಕ್ತಿ ಹೆಚ್ಚುತ್ತಿತ್ತು. ಫಿಲಿಪ್ಪನ ಕಡೆಯವರು ನೆದರ್ಲಂಡ್ಸಿನಲ್ಲಿ ದಬ್ಬಾಳಿಕೆಯನ್ನು ನಡೆಸಿ ಬಲವಂತದಿಂದ ಅಲ್ಲಿಯ ಜನರನ್ನು ಅಡಗಿಸಲು ಯತ್ನಿಸುತ್ತಿದ್ದರು. ಅದರಪರಿಣಾಮವಾಗಿ ಅಲ್ಲಿಯ ಪ್ರಾಟೆಸ್ಟೆಂಟರುಮಾತ್ರವೇ ಅಲ್ಲದೆ ಕ್ಯಾಥಲಿಕ್ಕರೂಕೂಡ ಸ್ಪೈನ್‌ರಾಜನ ಆಳಿಕೆಯನ್ನು ವಿರೋಧಿಸುವವರಾದರು. ಸಾಧ್ಯವಾದಷ್ಟು ಯುಕ್ತಿಯನ್ನು ತೋರಿ ಅಲ್ಲಿಯ ಕ್ಯಾಥಲಿಕ್ಕರನ್ನು ಸಮಾಧಾನಗೊಳಿಸಿಕೊಂಡು ಆ ರಾಜನು ಪ್ರಾಟೆಸ್ಟೆಂಟರನ್ನು ಧ್ವಂಸಮಾಡುವ ಪ್ರಯತ್ನದಲ್ಲಿದ್ದನು. ಕಡೆಗೆ 1579ರಲ್ಲಿ ಉತ್ತರಭಾಗದವರು **ಯುಟ್ರೆಕ್ಟ್ ಯೂನಿಯನ್** (Union of Utrecht)ಎಂಬ ಹೆಸರಿನಿಂದ ಒಟ್ಟುಗೂಡಿ ಕ್ಯಾಲ್ವಿನ್ ಮತವನ್ನು ನೆಲೆಗೊಳಿಸಿಕೊಂಡು ತಮ್ಮರಾಷ್ಟ್ರಪತಿಯಾಗಿರುವಂತೆ **ಆರೆಂಜ್**ಸಂಸ್ಥಾನಿಕ **ವಿಲಿಯಂ** (William of Orange) ಎಂಬಾತನನ್ನು ಆರಿಸಿ ಕರೆಸಿಕೊಂಡರು. ವಿಲಿಯಮ್ಮಿಗೂ ಫಿಲಿಪ್ಪಿಗೂ ವಿಷಮವಿರೋಧವು ಮೊದಲಾಯಿತು. ಈ ಪ್ರಾಟೆಸ್ಟೆಂಟರಿಗೆ ಸಹಾಯಮಾಡಬೇಕೆಂಬ ಇಷ್ಟವಿದ್ದಾಗ್ಯೂ ಎಲಿಸಬೆತ್ ಪ್ರಕಟವಾಗಿ ಸಹಾಯಮಾಡಲಾರದಿದ್ದಳು. ಮೇರಿಯಪರವಾಗಿ ಉದ್ಯಮಿಸಬೇಕೆಂಬಆಸೆಯಿದ್ದರೂ ಫಿಲಿಪ್ ಇಂಗ್ಲಂಡಿನೊಡನೆಕಾದಾಡಲು ಹಿಂದೆಗೆಯುತ್ತಿದ್ದನು. ಯುದ್ಧವಿಲ್ಲದೆ ಗೋಪ್ಯವಾದ ತಂತ್ರಸಂಧಾನಗಳಿಂದ ಕೆಲಸಕ್ಕೈಗೂಡುವುದಾದರೆ ಮೇಲೆಂದು ಫಿಲಿಪ್ ಎಲಿಸಬೆತ್ತಿಗೆ ವಿರೋಧವಾಗಿ ನಡೆದ ಪಿತೂರಿಗಳನ್ನುಮಾತ್ರ ಪ್ರೋತ್ಸಾಹಿಸುತ್ತಿರಬೇಕಾಯಿತು.

**ಫಿಲಿಪ್ಪನ ಕಷ್ಟ**

ಆದರೆ ಸಮಯನಷ್ಟವಾಗುವುದೆಂಬ ಚಿಂತೆ ಕ್ಯಾಥಲಿಕ್‌ಪುರೋಹಿತವ್ರತಿಗಳ ಮನಸ್ಸಿನಲ್ಲಿತ್ತು. ಇಂಗ್ಲಂಡಿನ ಕ್ಯಾಥಲಿಕ್‌ಜನರು ಧೈರ್ಯವಹಿಸಿ ಸಾಹಸದಿಂದಲಾದರೂ ಮೇರಿಯಪರವಾಗಿ ಯತ್ನಿಸುವಂತೆ ಪ್ರೇರಿಸಲು ಕ್ಯಾಥಲಿಕ್‌ವ್ರತಿಗಳು ಸಿದ್ಧರಾದರು. ಫ್ರಾನ್ಸಿನಲ್ಲಿ ಶಿಕ್ಷಿತರಾದ ವ್ರತಿಗಳು ಇಂಗ್ಲಂಡಿನ ಕ್ಯಾಥಲಿಕ್ಕರನ್ನು ಹುರಿದುಂಬಿಸಲು ಬಹಳ ಪ್ರಯತ್ನಮಾಡಿದರು. ಇವರನ್ನುದ್ದೇಶಿಸಿಯೇ 1571ರಲ್ಲಿ ಕ್ಯಾಥಲಿಕ್ಕರನ್ನು ಅಡಗಿಸಲು ಪಾರ್ಲಿಮೆಂಟಿನಲ್ಲಿ ಕಠಿಣ ಕಾನೂನಾಯಿತು. ಈ ವ್ರತಿಗಳಲ್ಲಿ ಕೆಲವರು ಕಾನೂನಿನಂತೆ ಅಪರಾಧಿಗಳೆನಿಸಿ ಪ್ರಾಣಗಳನ್ನು ಬಲಿಕೊಟ್ಟರು. 1580ರಲ್ಲಿ ಜೆಸೂಯಿತಸಂಘದ ವ್ರತಿಗಳು ಇಂಗ್ಲಂಡಿನಲ್ಲಿ ಕಾಣಿಸಿಕೊಂಡರು. ಈ ಸಂಘದವರಿಗೆ ಉದ್ದೇಶಮುಖ್ಯವೇವಿನಾ ಉಪಾಯಮುಖ್ಯವಲ್ಲ. ಎಷ್ಟು ನೀಚಕೆಲಸವನ್ನಾದರೂ ಸದುದ್ದೇಶಕ್ಕಾಗಿ ನಡೆಸಬಹುದೆಂಬ ಆ ಜನರು ಇಂಗ್ಲಂಡಿನಲ್ಲಿ ಛದ್ಮವೇಷದಿಂದ ಓಡಾಡಿ ಜನಗಳನ್ನೆತ್ತಿಕಟ್ಟುವುದಕ್ಕೂ ಪಿತೂರಿಗಳನ್ನು ಪ್ರೋತ್ಸಾಹಿಸುವುದಕ್ಕೂ ತೊಡಗಿದರು.

**ಜೆಸೂಯಿತರು**

ಮಂತ್ರಿಗಳೂ ಪಾರ್ಲಿಮೆಂಟಿನವರೂ ಇವರನ್ನು ಕಂಡು ಗಾಬರಿಗೊಂಡು ಕ್ಯಾಥಲಿಕ್ಕರನ್ನು ದಂಡಿಸಲು ಇನ್ನೂ ಕಠಿಣವಾದ ಕಾನೂನುಗಳನ್ನು ಮಾಡಿದರು. ಕ್ಯಾಥಲಿಕ್ ಮತನಿಷ್ಠರಿಗೆ ಅತಿಕಷ್ಟ ಕಾಲವೊದಗಿತು. ಮೇರಿಟ್ಯೂಡರ್ ಕಾಲದಲ್ಲಿ ಪ್ರಾಟೆಸ್ಟೆಂಟರು ಅನುಭವಿಸಿದ ಹಿಂಸೆಯನ್ನು ಈಗ ಕ್ಯಾಥಲಿಕ್ಕರು ಅನುಭವಿಸಬೇಕಾಯಿತು. ಪ್ರಾಟೆಸ್ಟೆಂಟರು ಕ್ರೂರಿಗಳಾಗಿವರ್ತಿಸಿದರು. ಆ ಕ್ರೌರ್ಯಕ್ಕೆ ಅವರ ಮನಸ್ಸಿನಭಯವೇ ಕಾರಣವಾಗಿತ್ತು.

1584ರಲ್ಲಿ ಫಿಲಿಪ್ಪನಿಂದ ಪೋಷಿತವಾದ ಪಿತೂರಿಯೊಂದು ಪತ್ತೆಯಾಯಿತು. ಎಲಿಸಬೆತ್ತನ್ನು ಗೋಪ್ಯವಾಗಿ ಕೊಲ್ಲಿಸುವ ಪಿತೂರಿಯನ್ನು ಸ್ಪೈನ್‌ರಾಜ್ಯದ **ರಾಯಭಾರಿಯೇ** ಮುಂದುವರಿಸಿದ್ದನು. ಪತ್ತೆಯಾದಕೂಡಲೆ ರಾಯಭಾರಿಯನ್ನು ಅವಮಾನಪಡಿಸಿ ದೇಶದಿಂದ ಅಟ್ಟಿದರು. ಅಷ್ಟಕ್ಕೆ ತೃಪ್ತರಾಗದೆ ಸೆಸಿಲ್, ವಾಲ್ಸಿಂಘಂ ಮುಂತಾದವರು ಒಂದುಪ್ರತಿಜ್ಞಾಪತ್ರವನ್ನು ಹೊರಡಿಸಿ ಎಲ್ಲರಿಂದಲೂ ಅದಕ್ಕೆ ರುಜುಮಾಡಿಸಿದರು. ಪ್ರಜೆಗಳು ಆತುರದಿಂದ ಆ ಪ್ರಮಾಣ

**ಪಿತೂರಿಗೆ ಪ್ರತೀಕಾರ**

ಕ್ಕೊಪ್ಪಿದರು. ತಮ್ಮರಾಣಿಯ ಪ್ರಾಣವನ್ನು ಕಾಪಾಡುವುದು ಮಾತ್ರವಲ್ಲದೆ ಆಕೆ ದುರ್ಮರಣಕ್ಕೆ ಸಿಕ್ಕಿದಪಕ್ಷದಲ್ಲಿ ಆಮರಣದಿಂದ ಪ್ರಯೋಜನಪಡೆಯಬಹುದಾದವರನ್ನು ಮೊದಲು ವಧಿಸತಕ್ಕುದೆಂದು ಎಲ್ಲರೂ ಪ್ರಮಾಣಮಾಡಿಬಿಟ್ಟರು. 1585ರಲ್ಲಿ **ಬಾಂಡ್** ಆಫ್ **ಅಸೋಸಿಯೇಷನ್** (Bond of Association) ಎಂಬ ಈ ಪ್ರತಿಜ್ಞಾವಂತರ ಕೂಟವನ್ನು ಪಾರ್ಲಿಮೆಂಟ್ ಸಭೆಯವರೇ ಒಪ್ಪಿ ಕ್ಯಾಥಲಿಕ್ಕರನ್ನು ಮತ್ತಷ್ಟು ದಂಡಿಸಲು ಸಿದ್ಧರಾದರು. ಇದರಂತೆ ಮೇರಿಯಪ್ರಾಣವುಳಿಯುವುದು ಎಲಿಸಬೆತ್‌ರಾಣಿಯ ಪ್ರಾಣವಿರುವವರೆಗೆಮಾತ್ರವೆಂಬುದು ಪ್ರಸಿದ್ಧಪಟ್ಟಿತು.

ಕ್ಯಾಥಲಿಕ್‌ಪಂಗಡದವರು ಆತುರಪಡುವಂತಾಯಿತು. 1586ರಲ್ಲಿ ಕಡೆಯ ಪಿತೂರಿಸಿದ್ಧವಾಯಿತು. ಅದರಲ್ಲಿಸಿಕ್ಕಿದ **ಬಬಿಂಗ್ಟನ್** (Babington) ಎಂಬ ಯುವಕನು ಸುಮ್ಮನಿರಲಾರದೆ ಜಂಭದಮಾತನ್ನು ಹೇಳಿಕೊಂಡನು. ಬಬಿಂಗ್ಟನ್ನನಿಗೆ ಮೇರಿ ಬರೆದಿದ್ದ ಪತ್ರಗಳನ್ನು ವಾಲ್ಸಿಂಘಂ ಹೊಂಚುತ್ತಿದ್ದು ದಕ್ಕಿಸಿ

**ಕಡೆಯ ಪಿತೂರಿ**

ಕೊಂಡನು. ಬಬಿಂಗ್ಟನ್ ಮುಂತಾದ ಪಿತೂರಿಗಾರರು ಸಿಕ್ಕಿಬಿದ್ದರು. ಅವರನ್ನು ಗಲ್ಲಿಗೇರಿಸುವುದು ಮಂತ್ರಿಗಳಿಗೆ ಕಷ್ಟವಾಗಲಿಲ್ಲ. ಆದರೆ ಪಿತೂರಿಯಲ್ಲಿ ಮೇರಿಸೇರಿದ್ದ ಋಜುವಾತಿದ್ದರೂ ಆಕೆಯನ್ನು ಶಿಕ್ಷಿಸುವುದು ಕಷ್ಟವಾಯಿತು. ಮಂತ್ರಿಗಳಿಗೂ ಇತರರಿಗೂ ಆಕೆಯನ್ನು ವಧಿಸಬೇಕೆಂಬ ಆತುರ. ಎಲಿಸಬೆತ್ತಿಗೆಮಾತ್ರ ಹಿಂದುಮುಂದುಯೋಚನೆ. ಸ್ಕಾಟ್ಲೆಂಡಿಗೆ ದೊರೆಯಾಗಿದ್ದ ಆಕೆಯ ಮಗನು ಏನೆಂದುಕೊಂಡಾನೋ ಎಂಬ ಚಿಂತೆಯೊಂದೇ ಅಲ್ಲ ಎಲಿಸಬೆತ್ತಿಗೆ. ತನ್ನ ವಿಷಮವೈರಿ ಮೇರಿ ಹತಳಾಗುವುದರಲ್ಲಿ ಅಂತರಂಗಕ್ಕೆ

ಸಂತೋಷವಾದಾಗ್ಯೂ ಬಹಿರಂಗವಾಗಿಮಾತ್ರ ಈ ರಾಣಿ ಅದನ್ನು ತೋರ್ಪಡಿಸುತ್ತಿರಲಿಲ್ಲ. ತಾನೇ ಆಜ್ಞೆಯನ್ನು ಕೊಟ್ಟ ಪಕ್ಷದಲ್ಲಿ ಕೆಟ್ಟ ಹೆಸರು ತನಗಂಟುವುದೆಂದು ಚನ್ನಾಗಿ ತಿಳಿದಿದ್ದಳು. ಮೇರಿಯುವಧೆಯಾಗಬೇಕೆಂಬ ಇಷ್ಟವಿದ್ದರೂ ತನ್ನಿಂದ ಆ ಕೆಲಸವಾಗಬಾರದೆಂಬ ಸ್ವಾರ್ಥದಲ್ಲಿ ಎಲಿಸಬೆತ್ ಕಾಲತಳ್ಳುತ್ತ ವಕ್ರವಕ್ರವಾಗಿ ಆಡುತ್ತ ಇದ್ದಳು.

**ಫಾದರಿಂಘೆ ಕ್ಯಾಸಲ್** (Fotheringhay Castle) ಎಂಬ ಕೋಟೆಯಮನೆಯಲ್ಲಿ ಮೇರಿಯವಿಚಾರಣೆ ನಡೆಯಿತು. ರಾಜದ್ರೋಹದ ಅಪರಾಧವನ್ನು ಹೊರೆಸಿದಾಗ ಆಕೆಯು ತಾನು ಎಲಿಸಬೆತ್ತಿನಪ್ರಜೆಯೇ ಅಲ್ಲವೆಂದೂ ತನ್ನ ವಿಚಾರಣೆ ನಡೆಸಲು ಇಂಗ್ಲಿಷರಿಗೆ ಅಧಿಕಾರವಿಲ್ಲವೆಂದೂ ಗಂಭೀರವಾಗಿಹೇಳಿದಳು. ವಿಚಾರಣೆಯಲ್ಲಿ ಮರಣಶಿಕ್ಷೆ ಗೊತ್ತಾಯಿತು. ಆ ಆಜ್ಞೆಗೆ ದಸ್ಕತ್ತಿಡುವಾಗ ಹಿಂದುಮುಂದು

**ಮೇರಿಯ ಶಿರಚ್ಛೇದನ**

ನೋಡಿ ವಿಲಂಬಮಾಡಿದ್ದಲ್ಲದೆ ರುಜುವಿಟ್ಟಮೇಲೂ ಅದನ್ನು ಕೊಟ್ಟುಕಳುಹಿಸದೆ ರಾಣಿ ತಡಮಾಡಿದಳು. ಪಾರ್ಲಿಮೆಂಟಿನವರು ಬೇಗನೆ ಮೇರಿಯ ಶಿರಚ್ಛೇದನವಾಗಬೇಕೆಂದು ಬೇಡಿದರು. ಮಂತ್ರಿಗಳು ರಾಯಸದವನೊಬ್ಬನಿಗೆ ಅಪ್ಪಣೆಮಾಡಿ ರಾಣಿಯ ಆಜ್ಞೆಯನ್ನು ಕೊಟ್ಟುಕಳುಹಿಸಿದರು. 1587 ರಲ್ಲಿ ಮೇರಿಯ ಶಿರಚ್ಛೇದನವಾಗಿಹೋಯಿತು. ಸಮಾಚಾರ ಬಂದಾಗ ಎಲಿಸಬೆತ್ ಎಲ್ಲರೆದುರಿಗೂ ತನಗೆ ತಿಳಿಯದೆಯೇ ಆ ಕೆಲಸ ನಡೆಯಿತೆಂದು ಕೂಗಾಡಿ ಆ ಬಡರಾಯಸದವನನ್ನು ಬರತರಫ್ ಮಾಡಿಬಿಟ್ಟಳು. ಜವಾಬ್ದಾರಿ ತಪ್ಪಿಸಿಕೊಳ್ಳುವುದು ಮಾತ್ರವೇ ಅಲ್ಲದೆ ಕ್ಯಾಥಲಿಕ್ ಪಂಗಡದವರ ದ್ವೇಷಕಡಿಮೆಯಾಗಲೆಂಬ ಉದ್ದೇಶ ರಾಣಿಗೆ.

ಮೂರುರಾಜ್ಯಗಳಿಗೆ ರಾಣಿಯಾಗುವುದಕ್ಕಲ್ಲದೆ ಒಂದುವೇಳೆ ಸ್ಪೈನಿನ ಫಿಲಿಪ್ಪನನ್ನು ಮದುವೆಯಾಗಿದ್ದರೆ ಭಾರಿ ಚಕ್ರಾಧಿಪತ್ಯಕ್ಕೂ ಒಡತಿಯಾಗಲು ಆಸೆಬೆಳಸಬಹುದಾಗಿದ್ದ ಮೇರಿಯ ಜೀವನ ದುರಂತವಾಗಿಹೋಯಿತು. ರೂಪ, ಔದಾರ್ಯ, ಸೌಹಾರ್ದಗಳನ್ನು ಪಡೆದು ಚೆಲುವೆಯೆನಿಸಿ ಸಂಸಾರಿಯಾಗಿರಲು ಇಷ್ಟಪಟ್ಟವಳು ಮೇರಿ. ರಾಣಿಯಾಗಿ ಹುಟ್ಟಿದಾಗ್ಯೂ ನಾನಾಕಷ್ಟಗಳಿಗೆ ಸಿಕ್ಕಿ ಘೋರವಾದ ದುರ್ಮರಣಕ್ಕೆ ತುತ್ತಾದಳು. ರಾಜ್ಯವನ್ನೇ ಸಂಸಾರವಾಗಿ ಕಟ್ಟಿಕೊಂಡು ಸ್ವಾರ್ಥಲೋಭಗಳಿಂದ ಕೂಡಿದ್ದಾಗ್ಯೂ ಯುಕ್ತಿಯಿಂದ ಗೆದ್ದುಕೊಂಡವಳು ಎಲಿಸಬೆತ್.

## 3. ಸ್ಪಾನಿಷ್ ಆರ್ಮೇಡ

ಮೇರಿಸ್ಟ್ಯೂಯರ್ಟ್ ಇಂಗ್ಲಂಡಿನಲ್ಲಿರುತ್ತಿದ್ದಾಗ ಇಂಗ್ಲಂಡಿಗೂ ಸ್ಪೈನಿಗೂ ಮನಸ್ತಾಪಗಳು ಹೆಚ್ಚುತ್ತಲೇ ಇದ್ದವು. ಮೇರಿಯ ಬಿಡುಗಡೆಗಾಗಿ ನಡೆದ ಪ್ರತಿ

ಪಿತೂರಿಗೂ ಸ್ಪೈನ್‌ರಾಜನ ಪ್ರೇರಣೆಸಹಾಯಗಳಿದ್ದವು. ಬಿಡುಗಡೆಪಡೆದು ಮೇರಿಯು ಫಿಲಿಪ್ಪನನ್ನು ಮದುವೆಯಾಗಿದ್ದರೆ ರೋಮನ್ ಕ್ಯಾಥಲಿಕ್ ಪಕ್ಷದ ಕೆಲಸವನ್ನು ನಡೆಸಲು ಎಷ್ಟು ಅನುಕೂಲವಾಗುತ್ತಿತ್ತು ! ಇದನ್ನು ತಿಳಿದ ಫಿಲಿಪ್ ಪಿತೂರಿಗಳನ್ನು ಪದೇಪದೇ ಪ್ರೇರಿಸುತ್ತಿದ್ದುದುಮಾತ್ರವಲ್ಲದೆ ಸ್ಕಾಟ್ಲಂಡಿನ ಜೇಮ್ಸ್‌ದೊರೆಯನ್ನು ತನ್ನ ತಾಯಿಯ ಪರವಾಗಿ ಎಲಿಸಬೆತ್ತಳೊಡನೆ ಜಗಳಕ್ಕೆಬ್ಬಿಸುವುದಕ್ಕೂ ಐರ್ಲಂಡಿನ ಕ್ಯಾಥಲಿಕ್‌ಜನರ ದಂಗೆಯೆಬ್ಬಿಸುವುದಕ್ಕೂ ಪ್ರಯತ್ನಿಸುತ್ತಲಿದ್ದನು. ಸಮುದ್ರದಮೇಲಂತೂ ಇಂಗ್ಲಿಷರಿಗೂ ಸ್ಪಾನಿಷರಿಗೂ ನಿತ್ಯಹಣಾಹಣಿಯಾಗಿಯೇ ಇತ್ತು.

**ಫಿಲಿಪ್ಪನ ಕಷ್ಟ**

ಇಷ್ಟು ವಿರೋಧವಿದ್ದಾಗ್ಯೂ ಫಿಲಿಪ್ ಇಂಗ್ಲಂಡಿನೊಡನೆ ಪ್ರಕಟವಾಗಿ ಜಗಳವಾಡದೆ ಮೈತ್ರಿಯನ್ನು ನಟಿಸುತ್ತಲೇಇದ್ದನು. ಎಲಿಸಬೆತ್‌ರಾಣಿಯೂ ಕಾಲತಳ್ಳುತ್ತ ಇದ್ದುಬಿಟ್ಟಳು. ಇಂಗ್ಲಂಡನ್ನು ನಾಶಗೊಳಿಸಲು ಯಥೇಚ್ಛವಾದಷ್ಟು ಕಾರಣಗಳಿದ್ದಾಗ್ಯೂ ಫಿಲಿಪ್‌ರಾಜನು ಜಗಳಕ್ಕೆ ಬಾರದಿರಲು ಒಂದುಕಡೆ ನೆದರ್ಲಂಡ್ಸಿನಲ್ಲಿ ಒದಗಿದ್ದ ಕಷ್ಟವೂ ಮತ್ತೊಂದುಕಡೆ ಫ್ರಾನ್ಸ್‌ರಾಜನ ದೆಸೆಯಿಂದ ಭೀತಿಯೂ ಅಡ್ಡಿಯಾಗಿತ್ತು. ಇಂಗ್ಲಂಡಿನೊಡನೆ ಯುದ್ಧವನ್ನು ಕಟ್ಟಿಕೊಂಡಕೂಡಲೆ ಫ್ರಾನ್ಸ್‌ರಾಜನು ತನ್ನ ರಾಜ್ಯವನ್ನು ಆಕ್ರಮಿಸಬಹುದೆಂಬ ಶಂಕೆ ಫಿಲಿಪ್ಪಿಗಿತ್ತು. ಇದನ್ನು ತಿಳಿದು ಎಲಿಸಬೆತ್ ಭೇದೋಪಾಯವನ್ನನುಸರಿಸಿ ಫ್ರಾನ್ಸಿನವರೊಡನೆ ಆಪ್ತತೆಯನ್ನು ಕಾಪಾಡಿಕೊಳ್ಳಲು ಎಲ್ಲಸಂಧಾನಗಳನ್ನೂ ನಡೆಸುತ್ತಿದ್ದಳು. ಈ ಬಗೆಯಲ್ಲಿ ಸರಿಸುಮಾರು 30ವರ್ಷಗಳು ಕಳೆದವು.

ನೆದರ್ಲಂಡ್ಸ್ ಪ್ರದೇಶದಲ್ಲಿ 1572ರಲ್ಲಿ ಭಾರಿದಂಗೆಯೆದ್ದಿತಷ್ಟೆ. 1576ರಲ್ಲಿ ಅಲ್ಲಿಯಜನರು ಒಟ್ಟುಗೂಡಿ ಫಿಲಿಪ್ಪನ ಆಳ್ವಿಕೆಯನ್ನು ವಿರೋಧಿಸುವವರಾಗಲು ಆ ರಾಜನು ಕ್ಯಾಥಲಿಕ್‌ಮತಸ್ಥರೇ ಹೆಚ್ಚಾಗಿದ್ದ ದಕ್ಷಿಣಭಾಗದವರನ್ನು ಉಪಾಯದಿಂದ ತನ್ನ ವಶಪಡಿಸಿಕೊಂಡನು. 1579ರಲ್ಲಿ ಉತ್ತರಭಾಗದವರು

**ಹಾಲಂಡ್**

ಸ್ವತಂತ್ರರಾಗಿ **ಆರೆಂಜ್‌ಸಂಸ್ಥಾನಿಕ ವಿಲಿಯಂ** ಎಂಬಾತನನ್ನು ತಮ್ಮ ರಾಷ್ಟ್ರಾಧ್ಯಕ್ಷನನ್ನಾಗಿ ಬರಮಾಡಿಕೊಂಡರು. **ಡಚ್** ಜನರೆಂಬ ಗುಂಪಿನಜನರೂ **ಹಾಲಂಡ್** ಎಂಬ ರಾಷ್ಟ್ರವೂ ಈರೀತಿಯಲ್ಲಿ ಹುಟ್ಟಿದಬಳಿಕ ಆ ಜನರು ಸ್ಪೈನ್‌ರಾಜನನ್ನು ವಿರೋಧಿಸಿ ತಮ್ಮ ಸ್ವಾತಂತ್ರ್ಯವನ್ನು ಗೆದ್ದುಕೊಳ್ಳಬೇಕಾಗಿತ್ತು. ಈ ಡಚ್‌ಜನರು ಎಲಿಸಬೆತ್ತಳ ಸಹಾಯವನ್ನು ಅಪೇಕ್ಷಿಸಿದಂತೆಯೇ ಫಿಲಿಪ್ಪನ ಶತ್ರುಗಳಾದ ಫ್ರಾನ್ಸಿನವರ ಸಹಾಯವನ್ನೂ ಪಡೆಯಲು ಸಿದ್ಧರಾಗಿದ್ದರು.

ಫ್ರಾನ್ಸಿನಲ್ಲಿ ಮೇರಿಸ್ಟ್ಯೂಯರ್ಟ್ ವಿಧವೆಯಾದಬಳಿಕ **9ನೆ ಚಾರ್ಲ್ಸ್** ಎಂಬಾತನು ದೊರೆಯಾದನು. ಆತನ ತಂಗಿಯ ಮದುವೆಯ ಸಂದರ್ಭದಲ್ಲಿಯೇ **ಬಾರ್ತೊಲೊಮ್ಯೂಕೊಲೆಯೆಂಬ** ಘೋರಕೃತ್ಯವು ನಡೆಯಿತು. 1574ರಲ್ಲಿ ಆ ಚಾರ್ಲ್ಸ್ ತೀರಿಕೊಂಡನು. ಆತನ ತಮ್ಮ **3ನೆ ಹೆನ್ರಿ** (Henry III) ಎಂಬಾತನು ರಾಜನಾದನು.

ಈ ಹೆನ್ರಿಯೊಡನೆ ಎಲಿಸಬೆತ್ ಆಪ್ತ ಮೈತ್ರಿಯನ್ನು ಕಟ್ಟಿದಳು. ಹೆನ್ರಿಗೆ ಫ್ರಾನ್ಸಿಸ್ (Francis) ಎಂಬ ತಮ್ಮನೊಬ್ಬನಿದ್ದನು. ಆ ಫ್ರಾನ್ಸಿಸ್ಸನ್ನು ಎಲಿಸಬೆತ್ ಮದುವೆ ಯಾಗಬಹುದೆಂಬ ಪ್ರಸ್ತಾಪಬೆಳೆಯಿತು. ಇಂಗ್ಲಂಡ್ ಮತ್ತು ಫ್ರಾನ್ಸ್ ಎರಡುದೇಶಗಳೂ ಸಹಾಯಮಾಡಿ ಫ್ರಾನ್ಸಿಸ್ಸನ್ನು ನೆದರ್ಲಂಡ್ಸಿಗೆ ಕೊಟ್ಟು ಕಳುಹಿಸಿದ ಪಕ್ಷದಲ್ಲಿ ನೆದರ್ಲಂಡಿನ ಜನರೆಲ್ಲರೂ ಆತನನ್ನು ತಮ್ಮ ಪ್ರಭುವನ್ನಾಗಿ ಸ್ವೀಕರಿಸಬಹುದೆಂಬ ಯೋಚನೆ ತೋರಿತು. ಅಂಜೂಶ್ರೀಮಂತ (Duc d'Anjou) ನೆನಿಸಿದ್ದ ಆ ಫ್ರಾನ್ಸಿಸ್ ಎಲಿಸ ಬೆತ್ತನ್ನು ಮದುವೆಯಾಗಿ ನೆದರ್ಲಂಡ್ಸಿನಲ್ಲಿ ಸೇರಿಕೊಂಡು ತನ್ನ ವೈರಿಯಾಗುವುದಾದರೆ ತನಗೆಷ್ಟು ತೊಂದರೆಯೆಂಬ ಚಿಂತೆ ಫಿಲಿಪ್ಪನ ಮನಸ್ಸಿನಲ್ಲಿ ತೋರಿಕೊಂಡು ಯಾವ ನಿಶ್ಚಯಮಾಡಿಕೊಳ್ಳುವುದಕ್ಕೂ ಅಡ್ಡಿಯಾಯಿತು.

ಫ್ರಾನ್ಸ್

ತಮ್ಮ ರಾಣಿ ಮದುವೆಮಾಡಿಕೊಳ್ಳಬೇಕೆಂಬ ಆಸೆ ಇಂಗ್ಲಂಡಿನ ಜನರಿಗೆ ಬಲ ವಾಗಿತ್ತು. ಮದುವೆಯಾಗಬೇಕೆಂದು ಮಂತ್ರಿಗಳೂ ಶ್ರೀಮಂತರೂ ಪಾರ್ಲಿಮೆಂಟಿ ನವರೂ ಬಿನ್ನವಿಸುತ್ತಲೇ ಇದ್ದರು. ಮದುವೆಯಾಗಬಾರದೆಂಬ ನಿಶ್ಚಯವನ್ನು ಅಂತರಂಗದಲ್ಲಿ ಭದ್ರವಾಗಿಮಾಡಿಕೊಂಡಿದ್ದ ಈ ರಾಣಿ ಹೊರಗಡೆ ಮಾತ್ರ ಆ ಬಿನ್ನಹ ಗಳನ್ನು ಕೇಳುವವಳಂತೆ ನಟಿಸುತ್ತಿದ್ದಳು. 1581ರಲ್ಲಿ ಆಂಜೂಶ್ರೀಮಂತನನ್ನು ಮದುವೆಯಾಗುವ ಪ್ರಸ್ತಾಪತೋರಿತು. ಆಗ ಎಲಿಸಬೆತ್ತಿಗೆ ಐವತ್ತು ವರ್ಷ. ಮೂವತ್ತು ವರ್ಷದವನು ಆಂಜೂ. ಕುರೂಪಿಯಾಗಿ ಹುಟ್ಟಿದ್ದುದಲ್ಲದೆ ಹೇಡಿ ಯಾಗಿಯೂ ಸ್ವಾರ್ಥಪರನಾಗಿಯೂ ಇದ್ದ ಆ ರಾಜಕುಮಾರ ನನ್ನು ಇಂಗ್ಲಂಡಿಗೆ ಕರೆಸಿಕೊಂಡು ಗೌರವದಿಂದ ಕಂಡು ಬೇಗನೆ ಸೈನ್ಯದೊಡನೆ ನೆದರ್ಲಂಡ್ಸಿಗೆ ಸಾಗಿಸಿದ್ದಾಯಿತು. ಹೊರಗೆ ಅವನನ್ನು ಸ್ವೀಕರಿಸಿದಂತೆ ನಟಿಸುತ್ತ, ಅತ್ಯಾದರಬೀರುವ ಪತ್ರಗಳನ್ನು ಅವನಿಗೆ ಬರೆಸುತ್ತ ಎಲಿಸಬೆತ್ ತನ್ನ ಇಷ್ಟಮಿತ್ರರಲ್ಲಿ ಅವನನ್ನು 'ಕಪ್ಪೆ'ಯೆನ್ನುವಳು. ಈರೀತಿಯಲ್ಲಿ ಉಪಾಯದಿಂದ ಫ್ರಾನ್ಸಿನ ಆಪ್ತತೆಯನ್ನು ಕಾಪಾಡಿಕೊಂಡು ಫ್ರಾನ್ಸ್ ರಾಜನು ನೆದರ್ಲಂಡ್ಸಿನಲ್ಲಿ ಫಿಲಿಪ್ಪನ ವೈರಿಯಾಗಿರುವಂತೆ ಸಾಧಿಸಿದ್ದಾಯಿತು.

ರಾಣಿಯ ಕಪ್ಪೆ

ಎರಡು ಮೂಗಿನವನೆಂಬ ಹಿಯ್ಯಾಳಿಕೆಗೊಳಗಾಗಿದ್ದ ಆ ನಿರ್ಭಾಗ್ಯ ಆಂಜೂ ಶ್ರೀಮಂತನು ನೆದರ್ಲಂಡ್ಸಿನಲ್ಲಿ ಏನನ್ನೂ ಸಾಧಿಸಲಾರದೆ ಫ್ರಾನ್ಸಿಗೆ ಹಿಂತಿರುಗಿ ವಿಲಂಬ ಮಾಡದೆ ಸತ್ತನು. ಮದುವೆಯ ಮಾತೆಲ್ಲಿಯೋ ಮಾಯವಾಯಿತು. ಆದರೆ ನೆದರ್ಲಂಡ್ಸಿನ ಜನರಿಗೆ ಸಹಾಯನೀಡುವುದು ಅವಶ್ಯಕರ್ತವ್ಯವಾಯಿತು. ಆಂಜೂ ಹತಾಶನಾಗಿ ಹೊರಟುಹೋದಮೇಲೆ ನೆದರ್ಲಂಡ್ಸಿನಲ್ಲಿ ಫಿಲಿಪ್ಪನಪಕ್ಷದ ಅಧಿಕಾರಿ **ಪಾರ್ಮ ಶ್ರೀಮಂತ** (Duke of Parma) ನೆಂಬ ಶೂರನು ಡಚ್ಚರನ್ನು ಎಲ್ಲಕಡೆಯ ಲ್ಲಿಯೂ ತುಳಿದನು. 1584ರಲ್ಲಿ ಡಚ್ಚರಪ್ರಭುವೆನಿಸಿ ಎಷ್ಟು ಕಷ್ಟವಾದರೂ ತನ್ನ

ಸಾಹಸವನ್ನು ಬಿಡದಿದ್ದ **ಆರೆಂಜಿನವಿಲಿಯಂ** ದುರ್ಮರಣಕ್ಕೆ ಸಿಕ್ಕಿದನು. ಡಚ್ಚರು ದಿಕ್ಕೆಟ್ಟರು. ಎಲಿಸಬೆತ್‌ರಾಣಿಯು ಸಹಾಯವನ್ನು ಅಂಗಲಾಚಿದ್ದಲ್ಲದೆ ಆಕೆಯನ್ನು ತಮ್ಮ ಒಡತಿಯನ್ನಾಗಿ ಮಾಡಿಕೊಳ್ಳುವುದಕ್ಕೂ ಅವರು ಸಿದ್ಧರಾದರು. ಅಲ್ಲಿಯ ಒಡೆತನವನ್ನೊಪ್ಪಿದರೆ ನಾನಾ ತೊಂದರೆಗಳನ್ನು ಕಟ್ಟಿಕೊಂಡಂತಾಗುವುದೆಂದು ಮನಗಂಡು ಎಲಿಸಬೆತ್ ಸಹಾಯವನ್ನುಮಾತ್ರ ಮಾಡಲೊಪ್ಪಿ ಒಂದು ಸೈನ್ಯವನ್ನು ಸಿದ್ಧಗೊಳಿಸಿ **ಲೆಸ್ಟರ್ ಶ್ರೀಮಂತ**(Earl of Leicester)ನ ನೇತೃತ್ವದಲ್ಲಿ ಕಳುಹಿಸಿದಳು. ರಾಣಿಯಗೆಳೆಯನಾಗಿದ್ದ ಆ ಶ್ರೀಮಂತನಿಗೆ ಯುದ್ಧದಕ್ಷತೆಯಷ್ಟೇನೂ ಹೆಚ್ಚಾಗಿರಲಿಲ್ಲ. **ಸಟ್‌ಫೆನ್** (Zutphen)ಎಂಬೆಡೆಯಲ್ಲಿ ಒಂದು ಕದನವಾಡಿದಮೇಲೆ ಸ್ವಲ್ಪಕಾಲದಲ್ಲಿಯೇ ಡಚ್ಚರೊಡನೆ ಮನಸ್ತಾಪಕಟ್ಟಿಕೊಂಡು 1586ರಲ್ಲಿ ಹಿಂತಿರುಗಿಬಿಟ್ಟನು. ಈತನು ಹಿಂತಿರುಗಿದಕೂಡಲೆ ಬಬಿಂಗ್ಟನ್‌ಪಿತೂರಿಯೂ ಮೇರಿಸ್ಟೂಯರ್ಟಳ ವಧೆಯೂ ಒಂದರಮೇಲೊಂದು ನಡೆದವು. ಇಂಗ್ಲಂಡಿನಮೇಲಿನ ಕೋಪವು ಫಿಲಿಪ್ಪನ ನೆತ್ತಿಗೇರುವಂತಾಯಿತು.

**ಡಚ್ಚರಿಗೆ ಸಹಾಯ**

ಮತ್ತೊಂದುರೀತಿಯಲ್ಲಿ ಇಂಗ್ಲಿಷರೂ ಸ್ಪಾನಿಷರೂ ಪರಮಶತ್ರುಗಳಾಗಿದ್ದರು. ಖಂಡಾಂತರಕ್ಷೇತ್ರಗಳ ಸಂಪಾದನೆಯ ವೃತ್ತಾಂತದಲ್ಲಿ ಈ ವಿಷಯವು ಮುಖ್ಯವಾದುದರಿಂದ ಅದನ್ನು ಸ್ವಲ್ಪ ವಿವರವಾಗಿಯೇ ಕಾಣಬೇಕು.

ಸ್ಪೈನ್‌ಪರವಾಗಿ ಕೊಲಂಬಸ್ ಪಶ್ಚಿಮಸಮುದ್ರಯಾನಮಾಡಿದಮೇಲೆ ಮಧ್ಯ ಮತ್ತು ದಕ್ಷಿಣ ಅಮೆರಿಕಾಗಳಲ್ಲಿ ಸ್ಪಾನಿಷ್‌ದೊರೆಗೆ ವಿಸ್ತಾರವಾದ ಕ್ಷೇತ್ರಗಳ ಸಂಪಾದನೆಯಾಯಿತು. 1580ರಲ್ಲಿ ಫಿಲಿಪ್‌ರಾಜನು **ಪೋರ್ಚುಗಲ್ ದೇಶ**ವನ್ನು ಗೆದ್ದು ತನ್ನರಾಜ್ಯದಲ್ಲಿ ಸೇರಿಸಿಕೊಳ್ಳಲು ಪೋರ್ಚುಗೀಸರು ಪೂರ್ವದಿಕ್ಕಿನಲ್ಲಿ ಕಟ್ಟಿದ್ದ ಸಾಮ್ರಾಜ್ಯವೂ ಸ್ಪೈನಿಗೆ ಸೇರತಕ್ಕದ್ದಾಯಿತು. ಪೋರ್ಚುಗಲ್ ಮತ್ತು ಸ್ಪೈನ್‌ದೇಶಸ್ಥರು ಹಡಗು ಕಟ್ಟುವುದರಲ್ಲಿಯೂ ದೂರವ್ಯಾಪಾರನಡೆಸುವುದರಲ್ಲಿಯೂ ಸಮುದ್ರಯಾನಸಾಹಸದಲ್ಲಿಯೂ ಅಗ್ರಗಣ್ಯರಾದರು. ವ್ಯಾಪಾರದ ಲಾಭದಿಂದ ಬಂದ ಐಶ್ವರ್ಯವಲ್ಲದೆ ಅಮೆರಿಕಾಕ್ಷೇತ್ರಗಳಿಂದ ಚಿನ್ನ ಬೆಳ್ಳಿರಾಶಿಗಳು ಹಡಗುಗಳಲ್ಲಿ ತುಂಬಿಕೊಂಡು ಬರುತ್ತಿದ್ದವು. 16ನೆ ಶತಮಾನದಲ್ಲೆಲ್ಲ ಈಯೆರಡುಜನರೇ ಯೂರೋಪಿನ ಹೊರಗಡೆ ಸಾಮ್ರಾಜ್ಯವನ್ನು ಕಟ್ಟಿಕೊಂಡು ಅನುಭವಿಸುತ್ತಿದ್ದವರು.

**ಸ್ಪೈನ್ ಪ್ರಾಬಲ್ಯ**

ಇಂಗ್ಲಂಡಿನವರಿಗೂ ಆಸೆ ಹುಟ್ಟಿತ್ತು. **ಜಾನ್‌ಕ್ಯಾಬಟ್** (John Cabot) 7ನೆ ಹೆನ್ರಿಯಿಂದ ಪ್ರೇರಿತನಾಗಿ ಲಾಬ್ರಡಾರ್ (Labrador)ತೀರವನ್ನು ಇಂಗ್ಲಿಷರಿಗೆ ಸಂಪಾದಿಸಿದ್ದನು. ಆದರೆ ರಾಜರು ಸಮುದ್ರಯಾನಸಾಹಸಗಳಿಗೆ ಹೆಚ್ಚುಗಮನ

ಕೊಡದಿದ್ದರು. ಇಂಗ್ಲಂಡಿನ ತೀರಪಟ್ಟಣಗಳ ವರ್ತಕರು ಲಾಭದಾಸೆಯಿಂದ ಗುಂಪು ಕಟ್ಟಿ ತಕ್ಕಮಟ್ಟಿಗೆ ಪ್ರಯತ್ನನಡೆಸಿದರು. 1553ರಲ್ಲಿ ಉತ್ತರಸಮುದ್ರಮಾರ್ಗವಾಗಿ ಚೀನಾಕಡೆಗೆ ಮಾರ್ಗಸಾಧಿಸಲು **ಛಾನ್ಸೆಲರ್** (Chancellor) ಎಂಬ ಇಂಗ್ಲಿಷ್ ನಾವಿಕನು ರಷ್ಯದ ಉತ್ತರಭಾಗವನ್ನು ಕಂಡನು. ರೆಫರ್ಮೇಷ

**ಇಂಗ್ಲಿಷರ ಸಮುದ್ರಯಾನ**

ಎಂಬುದು ಸ್ಥಿರವಾದಬಳಿಕ ಈ ಪ್ರಯತ್ನಗಳು ಉತ್ತೇಜನ ಗೊಂಡವು. ಇಂಗ್ಲಂಡಿನವರೂ ಹಾಲೆಂಡಿನವರೂ ಪ್ರಾಟೆಸ್ಟೆಂಟರಾದತರುವಾಯ ಸ್ಪಾನಿಷ್ ಪೋರ್ಚುಗೀಸಜನರನ್ನು ವಿರೋಧಿಸುವುದು ಕರ್ತವ್ಯವಾಯಿತು. ಸ್ಪೈನಿನಜನರು ದೂರಯಾನಗಳನ್ನು ನಡೆಸಿ ಅನೇಕ ಕಷ್ಟಗಳನ್ನು ಸಹಿಸಿಕೊಂಡು ಸ್ವದೇಶಕ್ಕೆ ಸಾಗಿಸುತ್ತಿದ್ದ ಸರಕನ್ನು ದಾರಿಯಲ್ಲಿ ಕೊಳ್ಳೆಹೊಡೆದರೆ ಧನಸಂಪಾದನೆಯು ಸುಲಭವಾಗಿ ಆಗುವುದುಮಾತ್ರವಲ್ಲದೆ ಮತ ವಿರೋಧಿಗಳವಧೆಯಿಂದ ಪುಣ್ಯವೂ ಬರುವುವೆನ್ನಿಸಿತು. ಸ್ಪಾನಿಷ್‌ಜನರು ತಮ್ಮಕ್ಷೇತ್ರಗಳಲ್ಲಿ ಇತರಐರೋಪ್ಯರನ್ನು ಸೇರಿಸುತ್ತಿರಲಿಲ್ಲ. ದೂರವ್ಯಾಪಾರವನ್ನು ಸರ್ವಮಾನ್ಯವಾಗಿ ರಕ್ಷಿಸಿಕೊಂಡಿದ್ದರು. ಇಂಗ್ಲಿಷರೂ ಡಚ್ಚರೂ ಸಮುದ್ರದಲ್ಲಿ ಹೊಂಚುತ್ತಿದ್ದು ಸ್ಪೈನ್‌ದೇಶಕ್ಕೆಬರುತ್ತಿದ್ದ ಹಡಗುಗಳಲೂಟಿಮಾಡುವುದನ್ನು ದೊಡ್ಡ ಉದ್ಯೋಗವನ್ನಾಗಿಟ್ಟುಕೊಂಡರು. ಸುಲಭಸಂಪಾದನೆಯ ಈ ಮಾರ್ಗವನ್ನು ವರ್ತಕರು, ನಾವಿಕರು, ಪುಂಡರು, ಸಾಹಸಿಗಳು ಅವಲಂಬಿಸಿದರು. ಸ್ಪಾನಿಷ್ ಜನರ ಕಷ್ಟದಫಲ ಇಂಗ್ಲಿಷರ ಪಾಲಾಗುತ್ತಬಂತು. ಇಂಗ್ಲಿಷ್‌ಜನರಲ್ಲಿ ಆಸೆಯೂ ಸಾಹಸವೂ ಹೆಚ್ಚಿದವು.

ವೆಸ್ಟಿಂಡೀಸ್, ಮೆಕ್ಸಿಕೊ ಮುಂತಾದ ದೂರಕ್ಷೇತ್ರಗಳಲ್ಲಿ ನೆಲೆಸಿದ್ದ ಸ್ಪಾನಿಷ್ ಜನರು ಅಲ್ಲಿಯಗಣಿಗಳಲ್ಲಿಯೂ ತೋಟಗಳಲ್ಲಿಯೂ ಬೇರೆಯವರಿಂದ ಕೆಲಸಮಾಡ ತಕ್ಕವರಾಗಿದ್ದರು. ಕೂಲಿಜನರು ಅವರಿಗೆ ಸಿಕ್ಕುತ್ತಿರಲಿಲ್ಲ. ಇದನ್ನು ಕಂಡು ಕೊಂಡ **ಜಾನ್ ಹಾಕಿನ್ಸ್** (John Hawkins) ಎಂಬ ಇಂಗ್ಲಿಷ್‌ಸಾಹಸಿಯೊಬ್ಬಾತನು ಆಫ್ರಿಕಾತೀರದಲ್ಲಿ ನೀಗ್ರೋಜನರನ್ನು ಹಿಡಿದೋ ಕೊಂಡೋ ಸಾಗಿಸಿಕೊಂಡು ಹೊರಟು ಅಮೆರಿಕದಲ್ಲಿದ್ದ ಸ್ಪಾನಿಷ್‌ಜನರಿಗೆ ಗುಲಾಮರಂತೆಮಾರಿ ಹೆಚ್ಚು ಲಾಭಸಂಪಾದಿಸಲು ಮೊದಲಿಟ್ಟನು. 1562ರಲ್ಲಿ ಗುಲಾಮರನ್ನು ಮಾರಲು ಮೊದಲಿಟ್ಟು ಎರಡುಮೂರುಬಾರಿ ಅಮೆರಿಕಾಕ್ಕೆ ಯಾನನಡೆಸಿದನು.

**ಗುಲಾಮಿವ್ಯಾಪಾರ**

ಮೂರನೆಬಾರಿ ಸ್ಪಾನಿಷ್‌ಜನರು ಅವನನ್ನು ಅಡ್ಡಗಟ್ಟಿ ಚಿಕ್ಕ ಬಂದರಿನಲ್ಲಿ ಕಟ್ಟಿಹಾಕಿದರು. ಆ ಸಲದ ಸಂಪಾದನೆಯನ್ನು ಕಳೆದುಕೊಂಡರೂ ಪ್ರಾಣವನ್ನುಳಿಸಿಕೊಂಡು ಹಾಕಿನ್ಸ್ ತಪ್ಪಿಸಿಕೊಂಡು ಬಂದನು. ಆತನೇ ಗುಲಾಮಿವ್ಯಾಪಾರದ ಸ್ಥಾಪಕ. 1562ರಿಂದ ಮುಂದೆ ಇನ್ನೂರು ವರ್ಷಗಳಕಾಲ ಆಫ್ರಿಕದ ನೀಗ್ರೋಜಾತಿಯ ಗುಲಾಮರನ್ನು ಅಮೆರಿಕದಲ್ಲಿ ಮಾರಿ

ಲಾಭಪಡೆಯುವ ವ್ಯಾಪಾರ ಇಂಗ್ಲಿಷರಿಗೆ ಸರ್ವಮಾನ್ಯವಾಗಿ ಅಪಾರವಾದ ಹಣ ಇಂಗ್ಲಂಡಿಗೆ ಸೇರುವಂತಾಯಿತು.

ಹಾಕಿನ್ಸನಂತೆಯೇ ಇತರ ಇಂಗ್ಲಿಷ್‌ನಾವಿಕರೂ ಸಾಹಸಕ್ಕೆ ತೊಡಗಿದರು. ನಾವಿಕಜನರಲ್ಲಿ ಪುಂಡರೂ ಪೋಕರಿಗಳೂ ಆದವರಿಗೆ ಒಳ್ಳೆಕಾಲವಾಯಿತು. ಸಮುದ್ರದಮೇಲೆ ದರೋಡೆಮಾಡುವುದು ಶ್ಲಾಘ್ಯವಾಗಿತ್ತು. **ಫ್ರೋಬಿಷರ್**(Frobisher) ಎಂಬ ನಾವಿಕನು ಲಾಬ್ರಡಾರ್ ತಲಪಿ ಅಲ್ಲಿಂದ ಚೀನಾಮಾರ್ಗವನ್ನು ಹುಡುಕಲು ಹೊರಟನು. **ಡ್ರೇಕ್** (Drake) ಎಂಬಾತನು ಅಟ್ಲಾಂಟಿಕ್‌ಸಾಗರದಲ್ಲಿ ಓಡಾಡುತ್ತಿದ್ದು ಒಂದುಸಲ ಪನಾಮಾಭೂಕಂಠದ ಬೆಟ್ಟವನ್ನು ಹತ್ತಿದಾಗ ಇನ್ನೂ ಪಶ್ಚಿಮಕ್ಕೆ ಕಂಡಸಾಗರದಲ್ಲಿ ನುಗ್ಗಬೇಕೆಂದುಕೊಂಡು 1577ರಲ್ಲಿ 5 ಹಡಗುಗಳನ್ನು ಒದಗಿಸಿಕೊಂಡುಹೊರಟನು. ಅಟ್ಲಾಂಟಿಕ್‌ಸಾಗರದಲ್ಲಿ ಯಾನಮಾಡಿ ಸ್ಪಾನಿಷರೊಡನೆ ಜಗಳವಾಡಿ ಗೆದ್ದುಕೊಂಡು ಮಾಜೆಲ್ಲನ್ ಜಲಸಂಧಿಯಲ್ಲಿ ಹೊರಟು ಪೆಸಿಫಿಕ್‌ಸಾಗರವಲ್ಲಿ ಪ್ರವೇಶಿಸಿದನು. ಸಿಕ್ಕಿದ ಕೊಳ್ಳೆಯನ್ನು ಬಿಡದೆ ದಕ್ಕಿಸಿಕೊಳ್ಳುತ್ತಹೊರಟು ಹಿಂದೂ ಸಾಗರವನ್ನುದಾಟಿ ಗುಡ್‌ಹೋಪ್‌ಭೂಶಿರವನ್ನು ಬಳಸಿಕೊಂಡು 1580ರಲ್ಲಿ ಇಂಗ್ಲಂಡನ್ನು ತಲಪಿದನು. ಈ ಪೃಥ್ವೀಪ್ರದಕ್ಷಿಣವು ಪರಮಸಾಹಸವೆನಿಸಿತು. ಡ್ರೇಕನು ಹಿಂತಿರುಗಿದಾಗ ಜನರೆಲ್ಲರೂ ಸಂತೋಷಪಟ್ಟರು. ಸ್ಪಾನಿಷ್‌ಜನರಿಗೆ ಅವನಿಂದಾದ ಹಿಂಸೆಯನ್ನು ಕೇಳಿ ಉತ್ಸಾಹಗೊಂಡರು. ರಾಣಿಯೂ ಅವನ ಹಡಗಿಗೆಬಂದು ಅವನನ್ನು ಮೆಚ್ಚಿ ನೈಟ್‌ಬಿರುದನ್ನು ಕೊಟ್ಟಳು.

**ಪೃಥ್ವೀಪ್ರದಕ್ಷಿಣೆ**

ಸ್ಪಾನಿಷ್‌ಜನರು ಕಷ್ಟದಿಂದಲೂ ನ್ಯಾಯದಿಂದಲೂ ಸಂಪಾದಿಸಿಕೊಂಡಿದ್ದ ಅಮೆರಿಕಾಕ್ಷೇತ್ರಗಳ ಫಲವನ್ನು ಇಂಗ್ಲಿಷ್‌ನಾವಿಕರು ಮಧ್ಯೆ ಶಿವಪೂಜೆಯಕರಡಿಯಂತೆ ನುಗ್ಗಿ ದರೋಡೆಮಾಡುತ್ತಿದ್ದುದನ್ನು ಸ್ಪಾನಿಷ್‌ಜನರೂ ಅವರ ದೊರೆಯೂ ಸಹಿಸುವುದು ಹೇಗೆ? ಫಿಲಿಪ್‌ರಾಜನು ಪದೇಪದೇ ಎಲಿಸಬೆತ್ತಿಗೆ ದೂರುಗಳನ್ನು ಕಳುಹಿಸುತ್ತಲೇ ಇದ್ದನು. ಕಡಲ್ಗಳ್ಳರಾಗಿ ಅಕೃತ್ಯಗಳನ್ನು ನಡೆಸುತ್ತಿದ್ದ ಇಂಗ್ಲಿಷ್ ನಾವಿಕರ ದಂಡನೆಯಾಗಬೇಕೆಂದು ಕೇಳುತ್ತಲೇ ಇದ್ದನು. ಎಲಿಸಬೆತ್‌ರಾಣಿಯಾದರೋ ಆ ದೂರುಗಳನ್ನು ಸಾವಧಾನವಾಗಿ ಕೇಳಿ ವಿಚಾರಣೆನಡೆಸುವುದಾಗಿ ಹೇಳಿಬಿಟ್ಟು ಒಳಗೊಳಗೆ ಸಂತೋಷಪಟ್ಟು ಆ ಪುಂಡುನಾವಿಕರನ್ನು ಮೆಚ್ಚಿ ಅವರನ್ನು ದೇಶಭಕ್ತರನ್ನಾಗಿ ಗೌರವಿಸುವಳು. ಅಷ್ಟೇಅಲ್ಲದೆ ಸುಲಭಸಂಪಾದನೆಯಾಗುವುದನ್ನು ಕಂಡು ತಾನೂ ರಹಸ್ಯವಾಗಿ ಆ ಸಾಹಸದ ಪ್ರಯತ್ನಗಳಿಗೆ ಬಂಡವಾಳವನ್ನೊದಗಿಸಿ ಬಂದ ಲಾಭದಲ್ಲಿ ಭಾಗವನ್ನು ಪಡೆಯುವಳು. ದರೋಡೆಯು ಹೆಚ್ಚುತ್ತ ಸ್ಪಾನಿಷರಿಗೆ ನಷ್ಟವು ಹೆಚ್ಚಿತು. ಸಮುದ್ರದಮೇಲೆ ಇಂಗ್ಲಿಷರೂ ಸ್ಪಾನಿಷರೂ ಎದುರುಬದುರಾದರೆ

**ಕಡಲ್ಗಳ್ಳರು**

ಹೊಡೆದಾಟವೇ ಧರ್ಮವಾಗಿಹೋಯಿತು. ಬಲಿಷ್ಠನಾದರೂ ಫಿಲಿಪ್‌ರಾಜನು ಬೇರೆ ಯೋಚನೆಗಳಿಗೆ ಸಿಕ್ಕಿ ಇಂಗ್ಲಂಡಿನೊಡನೆ ಪ್ರಕಟವಾಗಿ ಜಗಳವನ್ನು ಕಟ್ಟಿಕೊಳ್ಳದೆ ಮೇರಿಸ್ಟ್ಯೂಯರ್ಟಗೆ ಬಿಡುಗಡೆಯಾಗುವಂತೆ ಉಪಾಯಗಳನ್ನು ಮಾಡುತ್ತಿದ್ದನು.

ಡ್ರೇಕನು 1580ರಲ್ಲಿ ಭಾರಿಕೊಳ್ಳೆ ಹೊತ್ತುಕೊಂಡು ಹಿಂತಿರುಗಿಬಂದಾಗ ಸ್ಪಾನಿಷ್ ಜನರು ಸಹಿಸದಾದರು. ಆ ದರೋಡೆಖೋರನನ್ನು ಹಿಡಿದು ತಮಗೊಪ್ಪಿಸಬೇಕೆಂದು ಕೇಳಿದರು. ರಾಣಿಯಾದರೋ ಕಾಲತಳ್ಳಿದಳು. ದರೋಡೆಗಳೇನೋ ನಿಲ್ಲದೆ ಹೆಚ್ಚಿದವು. 1584ರಲ್ಲಿ ಪಿತೂರಿ ನಡೆಸಿದನೆಂದು ಸ್ಪಾನಿಷ್ ರಾಯಭಾರಿಗೆ ಬಲವಂತದ ವೀಳೆಯಬಂದಾಗ ಫಿಲಿಪ್‌ರಾಜನಿಗೆ ಕೋಪಬಂತು. ತನ್ನ ರಾಜ್ಯದಲ್ಲಿದ್ದ ಇಂಗ್ಲಿಷ್ ಜನರ ಆಸ್ತಿಪಾಸ್ತಿಗಳಿಗೆ ಮುಟ್ಟುಗೋಲುಹಾಕತಕ್ಕದ್ದೆಂದು ಅಪ್ಪಣೆಕೊಟ್ಟನು. ಆಗ

**ಜಗಳ**

ಎಲಿಸಬೆತ್‌ರಾಣಿಯೇ ಡ್ರೇಕ್ ಫ್ರೋಬಿಷರರನ್ನು "ಸ್ಪಾನಿಷ್ ಬಂದರುಗಳಿಗೆ ನುಗ್ಗಿ ಶತ್ರುಧ್ವಂಸಮಾಡಿಬನ್ನಿ" ಎಂದು ಕೊಟ್ಟು ಕಳುಹಿಸಿದಳು. ಅವರಿಬ್ಬರೂ ಹೊರಟು ಆದಷ್ಟು ಲೂಟಿ ಮಾಡಿಕೊಂಡುಬಂದರು. 1587ರಲ್ಲಿ ಮೇರಿಸ್ಟ್ಯೂಯರ್ಟಳ ವಧೆಯೂ ನಡೆದು ಹೋಯಿತು. ಆಕೆಯ ತಲೆಬಿತ್ತೆಂದುಕೇಳಿದಾಗ ಫಿಲಿಪ್‌ರಾಜನಿಗೆ ತಡಮಾಡಲು ಯಾವಕಾರಣವೂ ಉಳಿಯದಂತಾಯಿತು. ಎಷ್ಟೋಕಾಲದಿಂದ ಹಿಡಿದಿಟ್ಟಿದ್ದ ದ್ವೇಷ ರೋಷಗಳು ಉಕ್ಕಿಬಂದವು. ಇಂಗ್ಲಂಡನ್ನು ಮುತ್ತಿ ನಾಶಗೊಳಿಸಲು ಸಂಕಲ್ಪ ಮಾಡಿ ಭಾರಿಹಡಗುಪಡೆಕಟ್ಟುವುದೆಂದು ಸ್ಪಾನಿಷ್‌ಜನರಿಗೆ ಆಜ್ಞೆಮಾಡಿದನು.

**ಕಡೀಸ್** (Cadiz) ಬಂದರಿನಲ್ಲಿ ಹಡಗುಗಳು ಸಿದ್ಧವಾಗುತ್ತಿದ್ದವು. ಆ ಸಮಾಚಾರವೂ ಇಂಗ್ಲಂಡಿಗೆ ತಲಪಿತು. ಆಗ ಡ್ರೇಕನು ಕೆಲವು ಹಡಗುಗಳೊಡನೆ ಹೊರಟು ಸಮಯಹೊಂಚಿ ಕಡೀಸ್‌ಬಂದರಿನಲ್ಲಿ ನುಗ್ಗಿ ಅಲ್ಲಿದ್ದ ಹಡಗುಗಳಿಗೆ ಬೆಂಕಿ ತಗಲಿಸಿ ಹಿಂತಿರುಗಿದನು. ಇಂಗ್ಲಂಡನ್ನು ಸುಲಭವಾಗಿ ತಲಪಿದವನು "ಸ್ಪೈನ್

**ಗಡ್ಡಕ್ಕೆ ಬೆಂಕಿ**

ರಾಜನ ಗಡ್ಡಕ್ಕೆ ಬೆಂಕಿಯಿಟ್ಟುಬಂದೆ" ಎಂದುಕೊಂಡನು. ಈ ರೀತಿ ಡ್ರೇಕ್ ಬೆಂಕಿನವಾಬನಂತಾದನು. ಇಂಗ್ಲಿಷ್ ಜನರಿಗೆ ಪರಮಸಂತೋಷ, ಉತ್ಸಾಹ, ಹೆಮ್ಮೆ. ಸ್ಪಾನಿಷ್ ಜನರಿಗೆ ಮತ್ತಷ್ಟು ರೋಷ; ಡ್ರೇಕನನ್ನು ಸೈತಾನ್ ಎಂದುಕೊಂಡರು. ಫಿಲಿಪ್ ರಾಜನು ಹೆಚ್ಚು ಜಾಗರೂಕತೆವಹಿಸಿ ಇಂಗ್ಲಂಡನ್ನು ಗೆಲ್ಲಲು ಹಗಲಿರುಳೂ ಶ್ರಮ

**ಫಿಲಿಪ್ಪನ ಸಂಕಲ್ಪ**

ಪಟ್ಟನು. 130ದೊಡ್ಡಹಡಗುಗಳನ್ನು ತಯಾರಿಸಿ ಅವುಗಳಲ್ಲಿ ದೊಡ್ಡಸೈನ್ಯವನ್ನು ಇಂಗ್ಲಂಡಿಗೆಸಾಗಿಸಲು ಸನ್ನಾಹಮಾಡಿದನು. ಇಂಗ್ಲಿಷರಲ್ಲಿ ಕ್ಯಾಥಲಿಕ್‌ಮತಸ್ಥರಾದವರು ತನ್ನಕಡೆ ಸೇರಿಕೊಳ್ಳುವಂತೆ ಸಂಧಾನನಡೆಸಿದನು. ಎಲಿಸಬೆತ್ತಳನ್ನು ಭ್ರಷ್ಟೆಯೆಂದು ಬಹಿಷ್ಕರಿ

ಸಿದ್ದು ಮಾತ್ರವೇ ಅಲ್ಲದೆ ಜಗದ್ಗುರು ಪೋಪನು ಕ್ಯಾಥಲಿಕ್‌ಜನರಿಗೆ ಆಕೆಯನ್ನು ಪಟ್ಟದಿಂದ ತಪ್ಪಿಸಬೇಕೆಂದು ಕೊಟ್ಟ ಆಜ್ಞೆಯನ್ನು ತಾನು ಹೊತ್ತು ನಡೆಸುವುದಾಗಿಯೂ ಕ್ಯಾಥಲಿಕ್ಕರೆಲ್ಲರೂ ತನ್ನ ಕಡೆ ಸೇರತಕ್ಕುದೆಂದೂ ಫಿಲಿಪ್‌ರಾಜನು ಸಾರಿದನು. ಇಷ್ಟೂ ಅಲ್ಲದೆ ತಾನು ಇಂಗ್ಲಂಡಿನ ರಾಜಮನೆತನಕ್ಕೆ ಸೇರಿದವನಾದುದರಿಂದ ತಾನೇ ಇಂಗ್ಲಂಡಿಗೆ ನ್ಯಾಯವಾಗಿ ರಾಜನಾಗತಕ್ಕವನೆಂದೂ ಹೇಳಿಕೊಂಡನು.

ಫಿಲಿಪ್‌ರಾಜನು ಅನೇಕಾಂಶಗಳಲ್ಲಿ ಮುಖ್ಯಲಬಾದಷಹಅವರಂಗಸೀಬನಂತಹ ವನು. ಮತನಿಷ್ಠೆಯ ವೈಪರೀತ್ಯವೊಂದೇ ಅಲ್ಲ; ಹಗಲಿರುಳೂ ಕಷ್ಟಪಡುತ್ತಲೇ ಇರುತ್ತ ತಾನೇ ಎಲ್ಲ ಕೆಲಸವನ್ನು ಮಾಡುತ್ತ ತನ್ನ ಅಧಿಕಾರಿಗಳಿಗೆ ತಕ್ಕಷ್ಟು ಸ್ವಾತಂತ್ರ್ಯವನ್ನು ವಹಿಸದೆ ಕುಟಿಲನೀತಿಯಿಂದಲೇ ಉದ್ದೇಶವನ್ನು ಸಾಧಿಸಿಕೊಳ್ಳಲು ಮನವುಳ್ಳವನು. ನೂರಮೂವತ್ತು ಹಡಗುಗಳೂ ಸಿದ್ಧವಾದವು. ಅವುಗಳನ್ನು ಫ್ಲಾಂಡರ್ಸ್‌ತೀರಕ್ಕೊಯ್ದು ಅಲ್ಲಿದ್ದ ದೊಡ್ಡ ಸೈನ್ಯವನ್ನೇರಿಸಿಕೊಂಡು ಇಂಗ್ಲಂಡಿನಕಡೆ ಹೊರಡತಕ್ಕುದೆಂದು ಸನ್ನಾಹ. ಹಡಗುಗಳು ಸಿದ್ಧವಾದಕೂಡಲೆ ಫಿಲಿಪ್

**ಭಾರಿ ಪ್ರಯತ್ನ**

ರಾಜನು ನಾವಿಕತನದಲ್ಲಿ ಅನುಭವಶಾಲಿಯಾಗಿದ್ದ **ಸಾಂಟಾ ಕ್ರೂಸ್** (Santa Cruz) **ಶ್ರೀಮಂತ**ನನ್ನು ಹೊರಡಬೇಕೆಂದಾಗ ಆತನು "ಸಮಯ ಅನುಕೂಲವಾಗಿಲ್ಲ, ಗಾಳಿ ಪ್ರತಿಕೂಲವಾಗಿಯೇ ಬೀಸುವುದು. ಇನ್ನು ಮೂರು ತಿಂಗಳು ತಡೆದು ಹೊರಡಬೇಕು" ಎಂದನು. ಆತನ ಮಾತನ್ನು ಕೇಳದೆ ಫಿಲಿಪ್ **ಮೆಡೀನಾ ಸಿಡೋನಿಯ**(Duke of Medina Sidonia) **ಶ್ರೀಮಂತ**ನಾಗಿದ್ದ ಯುವಕದಳಪತಿಯನ್ನು ಕರೆಕಳುಹಿಸಿ ಆ ಹಡಗುಗಳ ಯಾಜಮಾನ್ಯವನ್ನೊಪ್ಪಿಸಿ ತಕ್ಷಣ ಹೊರಡಬೇಕೆಂದು ಆಜ್ಞೆಕೊಟ್ಟನು. ಆ ಶ್ರೀಮಂತನಿಗೆ ನಾವಿಕತನದ ಅನುಭವವಿರಲಿಲ್ಲ. ಜಂಭವಿತ್ತು. ಆತನ ಯಾಜಮಾನ್ಯದಲ್ಲಿ 1588ರ ಮೇ ತಿಂಗಳಲ್ಲಿ **ಸ್ಪಾನಿಷ್ ಆರ್ಮೇಡ** (Spanish Armada) ಎಂದು ಪ್ರಸಿದ್ಧವಾದ ಹಡಗುಪಡೆಯು **ಲಿಸ್ಬನ್** ಬಂದರಿನಿಂದ ಹೊರಟಿತು.

ಇತ್ತ ಇಂಗ್ಲಂಡಿನಲ್ಲಿ 8ನೆ ಹೆನ್ರಿ ಕಾಲದಿಂದ ಕಟ್ಟಿಸಿದ ಕೆಲವು ಹಡಗುಗಳೂ ವರ್ತಕರ ಹಡಗುಗಳೂ ಇದ್ದವು. ಸ್ಪಾನಿಷ್ ಹಡಗುಗಳಷ್ಟು ಭಾರಿಯಾಗಿಲ್ಲದಿದ್ದರೂ ಇಂಗ್ಲಿಷ್ ಹಡಗುಗಳು ಸಮುದ್ರದಲ್ಲಿ ಹೆಚ್ಚು ಚಟುವಟಿಕೆಯಿಂದ ಓಡಾಡುವಹಾಗಿದ್ದವು. ಸ್ಪಾನಿಷ್ ಹಡಗುಗಳಿಗೆ ಕೋಟೆಕಟ್ಟಿದಂತೆ ಭಾರಿ ಮೇಲ್ಚಪ್ಪರಗಳನ್ನು ಕಟ್ಟಿದ್ದುದರಿಂದ ಅವು ನಿಧಾನವಾಗಿಯೂ ಗಂಭೀರವಾಗಿಯೂ ಹೊರಡತಕ್ಕವು. ಸ್ಪಾನಿಷ್ ಆರ್ಮೇಡದಲ್ಲಿ ತುಂಬಿಕೊಂಡಿದ್ದವರು ಸ್ಥಲಯುದ್ಧವನ್ನರಿತ ಸೈನಿಕರು. ಇಂಗ್ಲಿಷ್‌ಜನರಲ್ಲಿ ಜಲಯುದ್ಧವನ್ನರಿತವರೇ ಹೆಚ್ಚುಮಂದಿ. ತಮ್ಮ ದೇಶವನ್ನು ಮುತ್ತಲು ಪಿಶಾಚಿಗಳಂತಹ ಸ್ಪಾನಿಷ್‌ಜನರು ಹವಣಿಸಿದ್ದನ್ನು ಕೇಳಿದಾಗ ಇಂಗ್ಲಿಷರೆಲ್ಲರೂ ಒಟ್ಟುಗೂಡಿದರು. ಕ್ಯಾಥಲಿಕ್‌ಮತಸ್ಥರುಕೂಡ ಫಿಲಿಪ್ಪನ ಆಳಿಕೆ ಬೇಡ

ವೆಂದರು. ಸ್ವದೇಶಭಕ್ತಿಯಿಂದಲೂ ಪ್ರಯೋಜನದೃಷ್ಟಿಯಿಂದಲೂ ಅವರಿಗೆ ಸ್ಪಾನಿಷ್‌ಜನರು ಹಗೆಗಳಾಗಿಯೇ ಕಂಡರು. ಆದ್ದರಿಂದ ಪ್ರಾಟೆಸ್ಟೆಂಟರೂ ಕ್ಯಾಥಲಿಕ್ಕರೂ, ಅಧಿಕಾರಿಗಳೂ ಖಾಸಗಿ ಪೌರಜನರೂ, ವರ್ತಕರೂ ನಾವಿಕರೂ ಬೆಸ್ತರೂ ಮುಂತಾಗಿ ಎಲ್ಲಬಗೆಯ ಪ್ರಜೆಗಳೂ ರಾಣಿಗೆ ಸಹಾಯಮಾಡಿ ದೇಶವನ್ನು ಉಳಿಸಿಕೊಳ್ಳಲು ಮುಂದಾದರು. ಡ್ರೇಕ್, ಫ್ರೋಬಿಷರ್, ರಾಲಿ, ಹಾಕಿನ್ಸ್ ಮುಂತಾದ ದರೋಡೆಖೋರರು ತಮ್ಮ ಉತ್ಸಾಹವನ್ನು ಅಂಟುರೋಗದಂತೆ ಜನರಲ್ಲಿ ಹರಡಿಸಿದರು. ಮನಸ್ಸಿನಲ್ಲಿ ಅಧೈರ್ಯಪಡುತ್ತಿದ್ದಾಗ್ಗೂ ರಾಣಿಯು ಪ್ರಜೆಗಳ ಉತ್ಸಾಹಬಲವನ್ನು ಕಂಡು ಎಲ್ಲ ಹಡಗುಗಳನ್ನೂ ಸೇರಿಸಿ ಡ್ರೇಕ್ ಮುಂತಾದವರನ್ನು ತಕ್ಕ ಸ್ಥಾನಗಳಲ್ಲಿ ನೇಮಿಸಿ ಹಡಗುಪಡೆಯ ಯಾಜಮಾನ್ಯವನ್ನು **ಲಾರ್ಡ್ ಹಾವರ್ಡ್** (Lord Howard) ಎಂಬ ಶ್ರೀಮಂತನಿಗೆ ವಹಿಸಿದಳು. ನೆಲದಮೇಲೂ ದೇಶರಕ್ಷಣೆಗಾಗಿ ಸಿದ್ಧತೆಯಿರಬೇಕೆಂದು ಸೈನ್ಯವನ್ನು ಕೂಡಿಸಿ ಲೆಸ್ಟರ್‌ಶ್ರೀಮಂತನನ್ನು ಅದಕ್ಕೆ ನಾಯಕನನ್ನಾಗಿ ಗೊತ್ತುಮಾಡಿದಳು. ನೆಲದ ಕದನದಲ್ಲಿ ಸ್ಪಾನಿಷರೆದುರಿನಲ್ಲಿ ಗೆಲ್ಲುವ ಧೈರ್ಯ ಇಂಗ್ಲಿಷರಿಗಿರಲಿಲ್ಲ. ಸಮುದ್ರದಲ್ಲಿಯೇ ಹೇಗಾದರೂ ಸ್ಪಾನಿಷ್‌ಆರ್ಮೇಡವನ್ನು ಮುರಿದು ಸ್ಪಾನಿಷ್‌ಸೈನ್ಯಗಳು ಇಂಗ್ಲಂಡಿನಲ್ಲಿ ಹೆಜ್ಜೆಯಿಡದಂತೆ ನೆರವೇರಿಸಿಕೊಳ್ಳುವುದು ಅತ್ಯಗತ್ಯಕರ್ತವ್ಯವಾಗಿತ್ತು. ನೀರಮೇಲಿನಕದನವಲ್ಲಾದರೂ ಗೆಲ್ಲುವ ಧೈರ್ಯಪಡಲು ಇಂಗ್ಲಿಷರಿಗೆ ಹೆಚ್ಚು ಕಾರಣವಿರಲಿಲ್ಲ. ಸ್ಪಾನಿಷ್‌ಆರ್ಮೇಡ ಎಂಬುದು ಭಾರಿ ವಿಪತ್ತು ಕಂಡಂತೆ ಕಾಣಿಸಿಕೊಂಡಿತು.

**ಇಂಗ್ಲಿಷ್ ಸನ್ನಾಹ**

ಆದರೆ ಸ್ಪಾನಿಷ್‌ಆರ್ಮೇಡ ಹೊರಟಮೊದಲಿನಿಂದಲೂ ಪ್ರತಿಕೂಲದೈವವನ್ನೇ ಕಾಣುವುದಾಯಿತು. **ಲಿಸ್ಬನ್ನಿ**(Lisbon)ನಿಂದ ಮೇತಿಂಗಳಲ್ಲಿ ಹೊರಟ ಹಡಗುಗಳು ಸ್ವಲ್ಪದೂರ ಸಾಗುವಷ್ಟರಲ್ಲಿ ಬಿರುಗಾಳಿಯಪೆಟ್ಟಿಗೆ ಸಿಕ್ಕಿದವು. ಜೂನ್ ತಿಂಗಳಲ್ಲಿ ಹಡಗುಗಳನ್ನು ಭದ್ರಪಡಿಸಿಕೊಳ್ಳಲು ಪುನಃ ಸ್ಪೈನ್‌ತೀರವನ್ನು ಆಶ್ರಯಿಸಿ **ಕೊರನ್ನ** (Corunna)ಬಳಿ ತಂಗಿರಬೇಕಾಯಿತು. ಜುಲೈ ತಿಂಗಳಲ್ಲಿ ಸ್ಪೈನ್‌ದೇಶವನ್ನು ಹಿಂದೆಬಿಟ್ಟು ಇಂಗ್ಲಿಷ್ ಕಡಲ್ಗಾಲುವೆಕಡೆ ಯಾನಸಾಗಿತು. ಗಾಳಿಯೂ ಅನುಕೂಲವಾಗಿತ್ತು. ಇಂಗ್ಲಿಷ್‌ಹಡಗುಗಳನ್ನು ಸನ್ನಾಹಪಡಿಸಿಕೊಂಡು ಆರ್ಮೇಡದ ಆಗಮನವನ್ನೆದುರುನೋಡುತ್ತಿದ್ದ ಹಾವರ್ಡ್‌ಶ್ರೀಮಂತನು **ಪ್ಲಿಮತ್**(Plymouth) ಬಳಿ ಹೊಂಚುತ್ತಿದ್ದು ಕಡಲ್ಗಾಲುವೆಯಲ್ಲಿ ಆರ್ಮೇಡ ಮುಂದೆ ಹೊರಟಾಗ ತಾನು ಹಿಂದೆಹೊರಟನು. ಏಳುದಿನಗಳು ಇಂಗ್ಲಿಷ್‌ಹಡಗುಗಳು ಸ್ಪಾನಿಷ್‌ಹಡಗುಗಳಹಿಂದೆಯೇ ಇದ್ದುಕೊಂಡು ಸಮಯಬಂದಂತೆ ಹೋರಾಟಕ್ಕೆತಾಗುತ್ತ ಶತ್ರುಗಳ ಸಮೀಪದಲ್ಲಿ ಬಹುಕಾಲ ನಿಲ್ಲದಂತೆ ತಪ್ಪಿಸಿಕೊಳ್ಳುತ್ತ ಸ್ಪಾನಿಷ್‌ಹಡಗುಗಳಲ್ಲಿ ಹಿಂದೆಬಿದ್ದವುಗಳನ್ನು ನಾಶ

**ಅನುಕೂಲದೈವ**

ಮಾಡಿಯೋ ಕೊಳ್ಳೆಹೊಡೆದೋ ಶತ್ರುಗಳಿಗೆ ಹೆಚ್ಚು ನಷ್ಟವನ್ನುಂಟುಮಾಡಿದವು. ಫಿರಂಗಿಮದ್ದು ಮುಂತಾದ ಸಾಮಗ್ರಿ ವೆಚ್ಚವಾದಾಗ ಇಂಗ್ಲಿಷರು ತಮ್ಮ ತೀರದ ಬಳಿಯೇ ಇದ್ದುದರಿಂದ ಹೊಸದಾಗಿ ತರಿಸಿಕೊಳ್ಳುತ್ತಲಿದ್ದರು. ಸ್ಪಾನಿಷರಿಗೆ ಆ ಅನುಕೂಲವಿರಲಿಲ್ಲ. ಹೀಗೆ ನಡೆದ ಏಳುದಿನಗಳ ಹೊಡೆದಾಟದಲ್ಲಿ ನಷ್ಟಪಟ್ಟ ಸ್ಪಾನಿಷರು ಕಲೇಬಳಿ ಬಂದಾಗ ಯಾನವನ್ನು ನಿಲ್ಲಿಸಿಕೊಂಡರು. ಅದೇಸಮಯ ವೆಂದು ಹಾವರ್ಡ್‌ಶ್ರೀಮಂತನು ಅವುಗಳಮಧ್ಯೆ ಬೆಂಕಿಯಹಡಗುಗಳನ್ನು ಬಿಟ್ಟನು. ಅವುಗಳಿಂದಾದಷ್ಟು ಧ್ವಂಸವಾದಕೂಡಲೆ ತನ್ನ ಹಡಗುಗಳನ್ನು ನಡೆಸಿಕೊಂಡುಬಂದು **ಗ್ರಾವೆಲೀನ್ಸ್** (Gravelines) ಎಂಬೆಡೆಯಬಳಿ ಕಾದಾಟವನ್ನು ಮೊದಲಿಟ್ಟನು. ಸ್ಪಾನಿಷ್‌ಜನರು ಎದುರುನಿಂತು ಯುದ್ಧಮಾಡುವುದರಲ್ಲಿ ಧೀರರಾದವರು. ಆದ್ದರಿಂದ ತಮ್ಮ ನಷ್ಟಗಳನ್ನು ಲೆಕ್ಕಿಸದೆ ಇಂಗ್ಲಿಷರನ್ನು ಎದುರಿಸಿ ಒಂಭತ್ತುಗಂಟೆಕಾಲ ಒಂದೇಸಮನಾಗಿ ಹೋರಾಡಿದರು. ಆದರೆ ಗಾಳಿಯಿನ್ನೂ ತೆಂಕಲಿಂದ ಬೀಸುತ್ತಿದ್ದುದರಿಂದ ಸ್ಪಾನಿಷರಿಗೆ ಬಹಳ ಕಷ್ಟವಾಗಿತ್ತು. ಸರ್ವನಾಶವೇ ಖಂಡಿತವೆಂದು ಕಾಣುತ್ತಿದ್ದ ಸ್ಥಿತಿಯಲ್ಲಿ ಸ್ಪಾನಿಷರು ತಮ್ಮ ಧೈರ್ಯಸಾಹಸಗಳಿಂದ ಕೆಲವು ಹಡಗುಗಳನ್ನಾದರೂ ಉಳಿಸಿಕೊಂಡರು. ಫ್ಲಾಂಡರ್ಸ್‌ತೀರದಲ್ಲಿನಿಂತು ಅಲ್ಲಿನ ಸೈನ್ಯವನ್ನು ಏರಿಸಿಕೊಳ್ಳುವಯೋಚನೆಯನ್ನೇ ಬಿಡಬೇಕಾಯಿತು. ದಕ್ಷಿಣದಿಂದ ಚಂಡಮಾರುತವು ರೇಗುತ್ತಿರಲು ಮೆಡೀನಾಸಿಡೋನಿಯ ಉಳಿದ ಹಡಗುಗಳನ್ನು ಹಾಗೂಹೀಗೂ ಸರಿಪಡಿಸಿಕೊಂಡು ಉತ್ತರಕ್ಕೇ ಹೊರಟನು. ಸ್ಕಾಟ್ಲೆಂಡ್ ಐರ್ಲಂಡುಗಳನ್ನು ಬಳಸಿಕೊಂಡು ಅತಿ ಪ್ರಯಾಸದಿಂದ ಎಪ್ಪತ್ತು ಹಡಗುಗಳನ್ನು ಸುರಕ್ಷಿತವಾಗಿ ಲಿಸ್ಬನ್ನಿಗೊಯ್ದುದೇ ಪರಮ ಸಾಹಸವಾಯಿತು.

**ಪರಾಭವ**

ಇಂಗ್ಲಂಡನ್ನು ಆಕ್ರಮಿಸಿ ಇಂಗ್ಲಿಷರ ಸರ್ವನಾಶವನ್ನು ನೆರವೇರಿಸುವ ಉದ್ದೇಶದಿಂದ ಘನಗಂಭೀರವಾಗಿಹೊರಟ ನೂರಮೂವತ್ತು ಹಡಗುಗಳು ಭಾರಿಗೆಲುವಿಗೆ ಬದಲಾಗಿ ಭಾರಿಸೋಲನ್ನು ಕಟ್ಟಿಕೊಂಡುಬಂದುದನ್ನು ಕಂಡು ಫಿಲಿಪ್‌ರಾಜನು ತಪಿಸಿದನು. ಎಪ್ಪತ್ತು ಹಡಗುಗಳನ್ನಾದರೂ ಸುರಕ್ಷಿತವಾಗಿ ಒಯ್ಯಲು ಸಾಹಸಪಟ್ಟು ಬಹುಮಾನ್ಯನಾಗಿದ್ದ ಸಿಡೋನಿಯ ದಳಪತಿಯನ್ನು ಅವಮಾನಪಡಿಸಿಬಿಟ್ಟನು. ಜಲಬಲದಲ್ಲಿ ಅದ್ವಿತೀಯವೆನಿಸಿದ್ದ ಸ್ಪೈನ್‌ದೇಶದ ಕೀರ್ತಿಯು ಈ ಆರ್ಮೇಡಪ್ರಯತ್ನದಿಂದ ಅಳಿಸಿಹೋಯಿತು. ಇಂಗ್ಲಂಡಿನ ಚರಿತ್ರೆಯಲ್ಲಿ ಜಲಬಲವುಳ್ಳ ಶತ್ರುವು ತೋರಿಕೊಂಡು ಆಕ್ರಮಣಪ್ರಯತ್ನಪಟ್ಟುದಕ್ಕೆ ಇದೊಂದೇ ನಿದರ್ಶನ.

ಇಂಗ್ಲಿಷ್‌ಜನರ ಸಂತೋಷಕ್ಕೆ ಮೇರೆಯೇ ಇಲ್ಲದಂತಾಯಿತು. ಕೊಳ್ಳೆಯಿಂದಬಂದ ಐಶ್ವರ್ಯ ಭದ್ರವಾದುದೇಅಲ್ಲದೆ ಇಂಗ್ಲಿಷರಲ್ಲಿ ದೇಶಭಕ್ತಿಯೂ ಹೆಮ್ಮೆಯೂ ಉತ್ತೇಜನಗೊಂಡವು. ಒಟ್ಟುದೇಶಕ್ಕೇ ತೋರಿಕೊಂಡ ಘೋರವಿಪತ್ತಿ

ನೆದುರಿನಲ್ಲಿ ನಾನಾಬಗೆಯ ಜನರೂ ಬಂಧುಗಳಂತೆ ಒಟ್ಟುಗೂಡಿವರ್ತಿಸಿ ಐಕ್ಯತೆ ಮತ್ತು ಐಕಮತ್ಯಗಳಮಹತ್ವವನ್ನು ಅರಿತರು. ಐಕಮತ್ಯ, ದೇಶಭಕ್ತಿ, ಹೆಮ್ಮೆ ಮತ್ತು ಐಶ್ವರ್ಯಗಳು ಈ ಕಾಲದಲ್ಲಿ ಇಂಗ್ಲಿಷ್‌ಜನರಲ್ಲಿ ದೃಢವಾದುದು ನಿಜವಾಗಿ ದೊಡ್ಡಸಂಗತಿ. ಸ್ಪಾನಿಷ್‌ಜನರ ಐಶ್ವರ್ಯವನ್ನು ಕಸಿದುಕೊಳ್ಳುವುದರಲ್ಲಿ ಇಂಗ್ಲಿಷರನಿಷ್ಠೆಯು ಹೆಚ್ಚಿದುದು ಅದರ ಒಂದು ಪರಿಣಾಮಮಾತ್ರ. ಇಂಗ್ಲಿಷರ ಹೆಮ್ಮೆಯನ್ನು ಪೋಷಿಸಿದುದು ಮುಖ್ಯಪರಿಣಾಮವಾದಾಗ್ಯೂ ಆರ್ಮೇಡದ ಸೋಲಿನಿಂದ ತೋರಿಕೊಂಡ ಇತರಪರಿಣಾಮಗಳು ದೊಡ್ಡವು. ಇಂಗ್ಲಂಡಿನ ಸ್ವಾತಂತ್ರ್ಯವು ಭದ್ರಪಟ್ಟಿತು. ಇಂಗ್ಲಂಡಿನಲ್ಲಿ ಪ್ರಾಟೆಸ್ಟೆಂಟ್ ಮತದ ಏರ್ಪಾಟು ಸ್ಥಿರವಾಯಿತು. ಇಂಗ್ಲಿಷರು ಜಲಬಲವನ್ನು ಕಟ್ಟಿಕೊಂಡು ವ್ಯಾಪಾರಸಾಹಸಕ್ಕೂ ಕ್ಷೇತ್ರಾಂತರಸಂಪಾದನೆಗೂ ತೊಡಗಲು ಅನುಕೂಲವಾಯಿತು. ಸ್ಕಾಟ್ಲಂಡ್‌ದೇಶವು ಹೆಚ್ಚುತೊಂದರೆಯಿಲ್ಲದೆ ಇಂಗ್ಲಂಡಿನೊಡನೆ ಸೇರಿಕೊಳ್ಳುವುದಕ್ಕೆಮಾತ್ರವಲ್ಲದೆ ಐರ್ಲಂಡ್‌ದ್ವೀಪವು ಇಂಗ್ಲಂಡಿನ ವಶವಾಗುವುದಕ್ಕೂ ಸುಸೂತ್ರವಾಯಿತು. ಇಂಗ್ಲಂಡಿನವರಿಗೆ ಇಷ್ಟುಮಾತ್ರ ಪ್ರಯೋಜನವನ್ನು ಒದಗಿಸಿದ ಆರ್ಮೇಡಪರಾಭವದಿಂದ ಇತರರಿಗೂ ಉಪಕಾರವಾಯಿತು. ಪ್ರಾಟೆಸ್ಟೆಂಟ್ ಪಂಗಡದವರಿಗೆಲ್ಲ ಸಂತೋಷಹೆಮ್ಮೆಗಳು ಉಕ್ಕಿದವು. ಕೌಂಟರ್‌ರೆಫರ್ಮೇಷನ್‌ಪರವಾಗಿ ನಡೆದ ದೊಡ್ಡಪ್ರಯತ್ನ ನೀರಪಾಲಾದುದರಿಂದ ಪ್ರಾಟೆಸ್ಟೆಂಟರಿಗೆ ಕ್ಯಾಥಲಿಕ್ಕರಭಯ ತಪ್ಪಿತು. ಹಾಲಂಡಿನಜನರು ಸ್ವಾತಂತ್ರ್ಯವನ್ನು ಇದರಪರಿಣಾಮವಾಗಿಯೇ ಸ್ಥಾಪಿಸಿಕೊಂಡರು. ಡಚ್ಚರೆಂಬ ಹೆಸರನ್ನು ತಾಳಿದ ಆ ಜನರನ್ನು ತಡೆಯಲು ಸ್ಪಾನಿಷರಿಗೆ ಚೈತನ್ಯವೇ ಇಲ್ಲವೆಹೋಯಿತು. ಸ್ಪಾನಿಷ್ ಆರ್ಮೇಡದ ಧ್ವಂಸದಿಂದ ಸ್ಪಾನಿಷರಬಲವೆಲ್ಲ ನಷ್ಟವಾಯಿತು.

**ಮಹತ್ಪರಿಣಾಮ**

ಆದರೂ ಫಿಲಿಪ್ಪಿಗೆ ಸೋಲನ್ನೊಪ್ಪಿಕೊಳ್ಳುವ ಮನಸ್ಸಿಲ್ಲ. ಇಂಗ್ಲಿಷರಿಗೂ ಸ್ಪಾನಿಷರಿಗೂ ಸಮುದ್ರದಮೇಲೆ ಹೊಡೆದಾಟಗಳು ನಡೆಯುತ್ತಲೇಇದ್ದವು. ಇಂಗ್ಲಿಷರಕಡೆ ಡ್ರೇಕ್ ಮತ್ತು ಲಾರ್ಡ್ ಹಾವರ್ಡ್ ಮುಂದೆಬಿದ್ದು ಸ್ಪಾನಿಷರನ್ನು ಆಕ್ರಮಿಸಲು ಲಿಸ್ಬನ್‌ಬಳಿಯಲ್ಲಿಯೂ **ಅಸೋರ್ಸ್** (Azores) ದ್ವೀಪಗಳ ಬಳಿಯಲ್ಲಿಯೂ ಪ್ರಯತ್ನಮಾಡಿದರು. ಆದರೆ ಜಯ ಲಭಿಸಲಿಲ್ಲ. ಅಸೋರ್ಸಿನಿಂದ ತಪ್ಪಿಸಿಕೊಂಡು ಹಿಂತಿರುಗಿದಾಗ **ರಿವೆಂಜ್** (Revenge) ಎಂಬ ಇಂಗ್ಲಿಷ್ ಹಡಗು ಏಕಾಕಿಯಾಗಿ ಸ್ಪಾನಿಷರಕೈಗೆ ಸಿಕ್ಕಿಕೊಂಡಿತು. ಆ ಹಡಗಿನ ನಾಯಕ **ಸರ್ ರಿಚರ್ಡ್ ಗ್ರೆನ್ವಿಲ್** (Sir Richard Grenville) ಎಂಬಾತನು ಅಸಹಾಯನಾಗಿ ನಡೆಸಿದ ಹೋರಾಟವು ಇಂಗ್ಲಿಷ್‌ಜನರಲ್ಲಿ ಚಿರಸ್ಮರಣೀಯವೆನಿಸಿದೆ. ವೆಸ್ಟಿಂಡೀಸ್‌ದ್ವೀಪಗಳಿಗೆ ಹೊರಟು ಸ್ಪಾನಿಷರನ್ನು ಸೋಲಿಸಲು ಡ್ರೇಕ್ ಮತ್ತು ಹಾಕಿನ್ಸ್ ಯತ್ನಿಸಿದರು. ಆ ಯತ್ನವು ನಿಷ್ಫಲ

**ಯುದ್ಧಸ್ಥಿತಿ**

ವಾಯಿತು. ಸ್ಪಾನಿಷ್ ಜನರು ಇಂಗ್ಲಿಷರ ಯುದ್ಧರೀತಿಯನ್ನು ಆ ವೇಳೆಗೆ ತಿಳಿದು ಕೊಂಡಿದ್ದು ಜಯಮುಖವನ್ನು ಕಂಡರು. ಆಗ ಫಿಲಿಪ್ ಧೈರ್ಯಗೊಂಡು **ಕಡೀಸ್** ಬಂದರಿನಲ್ಲಿ ಮತ್ತೊಂದು ಆರ್ಮೇಡಸನ್ನಾಹವನ್ನು ನಡೆಸಿದನು. ಆಗ ಹಾವರ್ಡ್ ಮುಂತಾದವರು ಕಡೀಸಿಗೆ ಹೊರಟು ಅಲ್ಲಿದ್ದ ಸ್ಪಾನಿಷ್ ಹಡಗುಗಳನ್ನು ನಾಶಮಾಡಿ ಕಡೀಸನ್ನು ಮುತ್ತಿ ಹಿಡಿದರು. ಈ ಹೊಡೆದಾಟಗಳಲ್ಲಿ ದೊಡ್ಡ ಕದನಗಳಾವುವೂ ನಡೆಯಲಿಲ್ಲ. ಸ್ಪಾನಿಷರು ಪುನಃ ಪ್ರಯತ್ನವನ್ನು ಮಾಡದಂತಾಯಿತು. ವಿರೋಧದ ಸ್ಥಿತಿಯುಮಾತ್ರ ಹಾಗೆಯೇ ಇತ್ತು. ಫಿಲಿಪ್ ರಾಜನು ಸಮಾಧಾನಮಾಡಿ ಕೊಳ್ಳುವ ಯೋಚನೆಯನ್ನೇ ನಡೆಸದೆ ಇದ್ದು 1598 ರಲ್ಲಿ ತೀರಿಕೊಂಡನು. ಆ ಬಳಿಕ ಯುದ್ಧಸ್ಥಿತಿಯಿದ್ದಾಗ್ಗೂ ಹೊಡೆದಾಟಗಳು ನಡೆಯಲಿಲ್ಲ.

**ದೂರನೆಲಸುಗಳು**

ಸ್ಪಾನಿಷರ ಕ್ಷೇತ್ರಗಳನ್ನು ಆಕ್ರಮಿಸಿಕೊಳ್ಳಲು ಇಂಗ್ಲಿಷರ ಪ್ರಯತ್ನಗಳು ಸಫಲ ಗೊಳ್ಳಲಿಲ್ಲ. ಆದರೆ ಅಮೆರಿಕದಲ್ಲಿ ಇಂಗ್ಲಿಷರು ವಸತಿಗಳನ್ನು ಕಟ್ಟಿಕೊಳ್ಳಲಾರಂಭ ವಾಯಿತು. **ನ್ಯೂ ಫೌಂಡ್ಲಂಡ್** ತೀರದಲ್ಲಿ ನೆಲೆಕಟ್ಟಲು **ಗಿಲ್ಬರ್ಟ್** (Gilbert) ಎಂಬಾತನುಮಾಡಿದ ಯತ್ನ ಸಾಗಲಿಲ್ಲ. ಆದರೆ **ಸರ್ ವಾಲ್ಟರ್ ರಾಲಿ***( Sir Walter Raleigh )ಎಂಬಾತನು ಉತ್ತರ ಅಮೆರಿಕದ ಮಧ್ಯಭಾಗದತೀರಕ್ಕೆ ಮೂರುಸಲ ಹೊರಟು ಕಡೆಗೆ **ವರ್ಜಿನಿಯ**(Virginia)ಎಂಬೆಡೆಯಲ್ಲಿ ಒಂದು ಕಾಲೊನಿಯನ್ನು ಮೊದಲಿಟ್ಟನು. ಎಲಿಸಬೆತ್ ಜ್ಞಾಪಕಾರ್ಥವಾಗಿ ಪ್ರಾರಂಭವಾದ ವರ್ಜಿನಿಯ ಕಾಲೊನಿಯು ಆಕೆಯಕಾಲದಲ್ಲಿ ಬೆಳೆಯಲಿಲ್ಲ; ಆ ತರುವಾಯ ವೃದ್ಧಿಯಾಯಿತು. ಎಲಿಸಬೆತ್ ಸತ್ತಕಾಲದಲ್ಲಿ ಅಮೆರಿಕದಲ್ಲಿ ಇಂಗ್ಲಿಷ್ ಜಾತಿಯವನೊಬ್ಬನಾದರೂ ನೆಲೆಸಿರಲಿಲ್ಲ.

ರೋಮನ್ ಕ್ಯಾಥಲಿಕ್ ಮತದ ಉದ್ಧಾರಕ್ಕೆಂದು ಫಿಲಿಪ್ ರಾಜನು ತನ್ನ ಸರ್ವ ಶಕ್ತಿಯನ್ನೂ ಇಂಗ್ಲಂಡಿನಮೇಲೆ ಕಾರಿದಾಗ ಫ್ರಾನ್ಸಿನ ರಾಜನು ಆತನ ಜೊತೆಗೆ ಸೇರಿ ಕೊಂಡಿದ್ದರೆ ಪರಿಣಾಮ ಹೇಗಾಗುತ್ತಿದ್ದಿತೋ ಏನೋ! ಫ್ರಾನ್ಸ್ ದೇಶದರಸರು ಸ್ಪೈನಿಗೆ ಮಿತ್ರರಾಗಿರದೆ ಇಂಗ್ಲಿಷರ ಮಿತ್ರರಾಗಿದ್ದುಬಿಟ್ಟರು. ಇದಕ್ಕೆ ಕಾರಣ ಫ್ರಾನ್ಸ್ ರಾಜ್ಯ ದಲ್ಲಿ ಕ್ಯಾಥಲಿಕ್ಕರಿಗೂ ಹ್ಯೂಗಿನೋಜನರಿಗೂ ಅವಿರತವಾಗಿ ನಡೆಯುತ್ತಿದ್ದ ಹಣಾ ಹಣಿ. ರಾಜನಾದ 3ನೆ ಹೆನ್ರಿ ಕ್ಯಾಥಲಿಕ್ಕರ ಕ್ರೌರ್ಯವನ್ನೂ ಅತಿಪ್ರಾಬಲ್ಯವನ್ನೂ ತಗ್ಗಿಸಬೇಕೆಂದು ಹ್ಯೂಗಿನೋಜನರಿಗೆ ಬೆಂಬಲವಿತ್ತನು. ಆಗ ಕ್ಯಾಥಲಿಕ್ ಪಕ್ಷದವರು

*ಈತನೇ ಇಂಗ್ಲಂಡಿಗೆ ಹೊಗೆಸೊಪ್ಪನ್ನೂ ಆಲೂಗಡ್ಡೆಯನ್ನೂ ತಂದು ಪರಿಚಯಮಾಡಿಸಿ ದವನು.

ಪಿತೂರಿಮಾಡಿ ಆ ರಾಜನನ್ನು ಕೊಲ್ಲಿಸಿಬಿಟ್ಟರು. ಆ ತರುವಾಯ ಪಟ್ಟಕ್ಕೆ ಬಾಧ್ಯನಾದವನು ರಾಜಮನೆತನಕ್ಕೆ ಅಳಿಯನಾಗಿದ್ದ **ಹೆನ್ರಿ ಬೋರ್ಬನ್** (Henri Bourbon) ಎಂಬಾತನು. ಆತನು ಪ್ರಾಟೆಸ್ಟೆಂಟ್ ಮತಸ್ಥನಾಗಿದ್ದನು. ಆತನು ಕ್ಯಾಥಲಿಕ್ಕರ ಪಿತೂರಿಗಳನ್ನು ಧ್ವಂಸಗೊಳಿಸಿ 1589ರಲ್ಲಿ ಪಟ್ಟವನ್ನೇರಿದಾಗ ಪ್ರಾಟೆಸ್ಟೆಂಟರಕೈ ಮೇಲಾದುದಲ್ಲದೆ ರಾಜಮನೆತನವೇ ಬದಲಾಯಿತು. 1328ರಿಂದ ಅರಸುಗಳನ್ನೊದಗಿಸಿದ್ದ **ವಾಲ್ವಾ** (Valois) ವಂಶವು ನಿಂತುಹೋಯಿತು. 1589ರಲ್ಲಿ **ಬೋರ್ಬನ್** (Bourbon) ವಂಶವು ಪ್ರಾರಂಭವಾಯಿತು. ಕ್ಯಾಥಲಿಕ್ಕರು 4ನೆ ಹೆನ್ರಿಯನ್ನು ವಿರೋಧಿಸಿ ಸೋತರು. ಆದರೆ ಉಪಾಯಶಾಲಿಯಾದ ಆ ದೊರೆ ತನ್ನ ರಾಜ್ಯದಲ್ಲಿ ಒಬ್ಬರಮೇಲೊಬ್ಬರು ವಿಷಕಾರುವ ಕಕ್ಷಿಪ್ರತಿಕಕ್ಷಿಗಳಿರಬಾರದೆಂದು ನಿಶ್ಚಯಮಾಡಿಕೊಂಡು ತನ್ನ ಪ್ರಜೆಗಳಲ್ಲಿ ಬಹುಭಾಗದವರು ಕ್ಯಾಥಲಿಕ್ಕರಾದುದರಿಂದ ತಾನೂ ಕ್ಯಾಥಲಿಕ್ ಮತವನ್ನು ಸೇರಿಕೊಂಡನು. ಹ್ಯೂಗಿನೋಜನರಿಗೆ ಮತಸ್ವಾತಂತ್ರ್ಯವನ್ನಲ್ಲದೆ ಕೈಗಾರಿಕೆವ್ಯಾಪಾರಗಳ ಅನುಕೂಲಗಳನ್ನೂ ಒದಗಿಸಿಕೊಟ್ಟು **ಲಾ ರೊಷೆಲ್** (La Rochelle) ಎಂಬ ಮುಖ್ಯತೀರಪಟ್ಟಣದ ಯಾಜಮಾನ್ಯವನ್ನೂ ಒಪ್ಪಿಸಿಬಿಟ್ಟನು. ಕ್ಯಾಥಲಿಕ್ಕರೂ ಪ್ರಾಟೆಸ್ಟೆಂಟರೂ ಹೆನ್ರಿಯನ್ನು ತಮ್ಮವನೆಂದುಭಾವಿಸಿಕೊಂಡಾಡಿದರು. ಈರೀತಿ ರಾಜ್ಯದಲ್ಲಿ ಐಕ್ಯತೆಯನ್ನೂ ಪ್ರಜೆಗಳಲ್ಲಿ ಐಕಮತ್ಯವನ್ನೂ ಕಟ್ಟಿದ ಹೆನ್ರಿ ತನ್ನರಾಜ್ಯದ ಮೋಲ್ಮೆಗೆ ಸ್ಪಾನಿಷರೇ ವೈರಿಗಳೆಂದುತಿಳಿದು ಇಂಗ್ಲಂಡಿನ ಸ್ನೇಹವನ್ನು ಕಟ್ಟಿದನು. ಸ್ಪಾನಿಷ್ ಆರ್ಮೇಡ ಜಯಪಡೆದಿದ್ದಪಕ್ಷದಲ್ಲಿ ಹೆನ್ರಿಬೋರ್ಬನ್ನನಿಗೆ ಪಟ್ಟವೇರುವುದಕ್ಕೂ ರಾಜ್ಯವನ್ನು ಸುಸ್ಥಿತಿಗೆ ತರುವುದಕ್ಕೂ ಆಸ್ಪದ ದೊರಕುತ್ತಿರಲಿಲ್ಲ. ಈ ರೀತಿಯಲ್ಲಿ ಸ್ಪೈನ್‌ರಾಜನ ಸೋಲಿನಿಂದ ಫ್ರಾನ್ಸಿನರಾಜನಿಗೂ ಪ್ರಯೋಜನ ತೋರಿತು.

**ಬೋರ್ಬನ್‌ವಂಶ**

**ಹ್ಯೂಗಿನೋ ಸ್ವಾತಂತ್ರ್ಯ**

## 4. ಐರ್ಲಂಡಿನ ಗೆಲುವು

ಎಲಿಸಬೆತ್‌ರಾಣಿಯ ಆಳಿಕೆಯಲ್ಲಿ ಮೇರಿ ಸ್ಟೂಯರ್ಟಳ ವೃತ್ತಾಂತವೂ ಸ್ಪಾನಿಷ್ ಆರ್ಮೇಡ ವೃತ್ತಾಂತವೂ ಮುಖ್ಯಭಾಗಗಳಾದಂತೆ ಐರ್ಲಂಡಿನ ವೃತ್ತಾಂತವೂ ಮುಖ್ಯವಾದುದು. ಅಮೆರಿಕದಲ್ಲಿ ನೆಲೆಮಾಡಿಕೊಳ್ಳುವಬದಲು ಇಂಗ್ಲಿಷ್‌ಜನರಿಗೆ ಐರ್ಲಂಡಿನಲ್ಲಿ ನೆಲೆಮಾಡುವ ಅನುಕೂಲವುಂಟಾಯಿತು. ಇಂಗ್ಲಿಷರು ಐರ್ಲಂಡನ್ನು ಆಕ್ರಮಿಸಿದುದು ಈ ರಾಣಿಯಕಾಲದಲ್ಲಿಯೇ.

ಐರಿಷ್‌ಕುಲಮುಖ್ಯರು ಇಂಗ್ಲಿಷ್ ಜಾತಿನೀತಿಗಳನ್ನವಲಂಬಿಸುವಂತೆ 8ನೆಹೆನ್ರಿ ಉಪಾಯ ನಡೆಸುತ್ತಿದ್ದನಷ್ಟೆ. ಆತನಕಾಲದಲ್ಲಿ ಐರ್ಲಂಡಿನ ಪೂರ್ವತೀರದಲ್ಲಿಮಾತ್ರ ಇಂಗ್ಲಿಷ್‌ಜಾತಿಯವರು ನೆಲೆಸಿದ್ದರು. **ಮನ್‌ಸ್ಟರ್** (Munster), **ಕನ್ನಾಟ್**

(Connaught), **ಅಲ್‌ಸ್ಟರ್** (Ulster) ಎಂಬ ವಿಭಾಗಗಳಲ್ಲಿ ಐರಿಷ್ ಕುಲಸ್ಥರೇ ಪ್ರಬಲರಾಗಿದ್ದರು. ಇಂಗ್ಲಿಷರ ಯಾಜಮಾನ್ಯವು ಉಪಾಯವಾಗಿ ವ್ಯಾಪಿಸಬೇಕಾಗಿತ್ತು. **ಪೇಲ್** (The Pale) ಎಂದು ಹೆಸರು ಪಡೆದ ತೀರಪ್ರದೇಶದಿಂದ ಮುಂದಕ್ಕೆ ತಮ್ಮ ನೆಲೆಗಳನ್ನು ನೂಕಿಕೊಳ್ಳಲು ಮೇರಿರಾಣಿಯಕಾಲದಲ್ಲಿ ತಕ್ಕಮಟ್ಟಿಗೆ ಪ್ರಯತ್ನವಾಯಿತು.

**ಆ ದ್ವೀಪದ ಸ್ಥಿತಿ**

**ಲೀನ್‌ಸ್ಟರ್** (Leinster) ವಿಭಾಗದಲ್ಲಿ **ಕಿಂಗ್ಸ್ ಕೌಂಟಿ** (King's County) ಮತ್ತು **ಕ್ವೀನ್ಸ್ ಕೌಂಟಿ** (Queen's County) ಎಂಬೆರಡು ಜಿಲ್ಲೆಗಳು ಗೊತ್ತಾಗಿ ಆ ಭಾಗಗಳಲ್ಲಿ ಇಂಗ್ಲಿಷ್ ನ್ಯಾಯಪದ್ಧತಿಗಳು ಸ್ಥಾಪಿತವಾಗಿದ್ದವು.

ಎಲಿಸಬೆತ್ ಪಟ್ಟವೇರಿ ಪ್ರಾಟೆಸ್ಟೆಂಟ್ ಮತವನ್ನನುಸರಿಸಿದಾಗ ಐರ್ಲಂಡಿನಲ್ಲಿ ತೊಂದರೆಯಾಗಬಹುದೆಂದು ತೋರಿತು. ಏಕಂದರೆ ಐರಿಷ್ ಕುಲಸ್ಥರೆಲ್ಲರೂ ಕ್ಯಾಥಲಿಕ್ಕರು. ಮತ್ತು ಅವರು ಇಂಗ್ಲಿಷ್ ರಾಜನಿಗೆ ಸಂಪೂರ್ಣ ಅಧೀನರಾಗಿಯೂ ಇರಲಿಲ್ಲ. ಇಂಗ್ಲಂಡಿನಲ್ಲಿ ಆಂಗ್ಲಿಕನ್ ಚರ್ಚನ್ನು ಸ್ಥಾಪಿಸಿದರಾಣಿ ಐರ್ಲಂಡಿನಲ್ಲಿ ಆ ವ್ಯವಸ್ಥೆಯನ್ನು ಸಾಧ್ಯವಾದಷ್ಟು ಮಾತ್ರ ನೆಲೆಗೊಳಿಸಿದಳು. ಐರಿಷ್ ಕುಲಸ್ಥರನ್ನು ಆಂಗ್ಲಿಕನ್ ಮತವನ್ನೊಪ್ಪುವಂತೆ ಬಲವಂತಗೊಳಿಸುವುದು ಹೆಚ್ಚು ವೆಚ್ಚಕ್ಕೆದಾರಿಯಲ್ಲದೆ ತೊಂದರೆಗೆ ಮೂಲವೆಂದುಕೊಂಡು ರಾಣಿ ಸುಮ್ಮನಿದ್ದಳು. ಆದರೆ ಆಕೆ ಪಟ್ಟವೇರಿದ ಸ್ವಲ್ಪಕಾಲದಲ್ಲಿಯೇ ಅಲ್‌ಸ್ಟರ್ ವಿಭಾಗದಲ್ಲಿ ಒಂದು ದಂಗೆಯೆದ್ದಿತು.

**ಮತದಲ್ಲಿ ಉಪಾಯ**

ಅಲ್‌ಸ್ಟರ್ ವಿಭಾಗದಲ್ಲಿ **ಓನೀಲ್** (O' Neill) ಎಂಬಹೆಸರಿನ ಕುಲಸ್ಥರೇ ಪ್ರಬಲರಾಗಿದ್ದರು. ಆ ಕುಲಮುಖ್ಯನನ್ನೊಗ್ಗಿಸಿಕೊಳ್ಳುವ ಉದ್ದೇಶದಿಂದ 8ನೆ ಹೆನ್ರಿ ಆತನಿಗೆ **ಟೈರೋನಿನ ಅರ್ಲ್** (Earl of Tyrone) ಎಂಬ ಶ್ರೀಮಂತತನವನ್ನು ಕೊಟ್ಟಿದ್ದನು. ಆ ಬಿರುದನ್ನು ಆತನು ಸ್ವೀಕರಿಸಿದ ಅಂಶವು ಆ ಕುಲಸ್ಥರಲ್ಲಿ ಅನೇಕರಿಗೆ ಸರಿಬೀಳಲಿಲ್ಲ. ಈ ವಂಶವನ್ನು ವಶದಲ್ಲಿಟ್ಟುಕೊಳ್ಳಬೇಕೆಂದಿದ್ದ 8ನೆ ಹೆನ್ರಿ ಆ ಕುಲಮುಖ್ಯನು ತನ್ನ ಅನುವರ್ತಿಯಾಗಿರುವಂತೆ ನೆರವೇರಿಸಲು ಆ ವಂಶದ ಕುಮಾರನೊಬ್ಬನನ್ನು ಇಂಗ್ಲಂಡಿನಲ್ಲಿಯೇ ಇಟ್ಟುಕೊಂಡು ಇಂಗ್ಲಿಷಿನವನಂತೆಯೇ ಬೆಳೆಸಿದನು. ಈ ಅಂಶವೂ ಕುಲಸ್ಥರಿಗೆ ಸಹಿಸಲಿಲ್ಲ. ಎಲಿಸಬೆತ್ ಪಟ್ಟಕ್ಕೆ ಬಂದಾಗ ಆ ಶ್ರೀಮಂತನಮಕ್ಕಳಲ್ಲೊಬ್ಬ **ಸೀಹನ್ ಓನೀಲ್** (Seaghan O'Neill) ಎಂಬುವವನು ತಂದೆಗೆದುರುಬಿದ್ದನು. ಇಂಗ್ಲಿಷ್ ರಾಜನಲ್ಲಿ ಶರಣೆಂದ ಕುಲಮುಖ್ಯನು ತಮ್ಮ ಕುಲಕ್ಕವಮಾನಮಾಡಿದನೆಂಬಕೋಪ ಕುಲಸ್ಥರಲ್ಲಿತ್ತು. ಆದ್ದರಿಂದ ಕುಲಸ್ಥರು ಕುಲಮುಖ್ಯನ ಪದವಿಗೆ ಸೀಹನ್ನನನ್ನು ತಮ್ಮ ಕುಲಾಚಾರಕ್ಕನುವಾಗಿ ಆರಿಸಿಕೊಂಡರು. ಆತನು

**ಓನೀಲ್ ದಂಗೆ 1558-1567**

ಪ್ರಬಲನಾಗಿ ಸ್ವಲ್ಪ ಕಾಲದಲ್ಲಿಯೇ ಅಲ್‍ಸ್ಟರ್ ಭಾಗವೆಲ್ಲವನ್ನೂ ತನ್ನ ಯಾಜಮಾನ್ಯದಲ್ಲಿ ತಂದುಕೊಂಡನು. ಇವನನ್ನು ಹೇಗಾದರೂ ಸಮಾಧಾನಕ್ಕೆಳೆಯಬೇಕೆಂದು ಎಲಿಸಬೆತ್ ಮಾಡಿದ ಉಪಾಯಗಳು ನಿರರ್ಥಕವಾದವು. ಆಗ ಇವನನ್ನು ಅಡಗಿಸಬೇಕೆಂದು ಅಲ್ಲಿಯ ತನ್ನ ಪ್ರತಿನಿಧಿಗೆ ರಾಣಿ ಅಪ್ಪಣೆಮಾಡಿದಳು. ಆ ಅಧಿಕಾರಿಯು ಸೀಹನ್ನನೆದುರಿನಲ್ಲಿ ದುರ್ಬಲನೆನಿಸಿ ಅವನನ್ನಡಗಿಸಲಾರದೆಹೋದನು. ಆದರೆ ಬೇರೆ ಯಾವುದೋವ್ಯಾಜ್ಯದಲ್ಲಿ ಸೀಹನ್ ಸಿಕ್ಕಿಕೊಂಡಿದ್ದು ಹತನಾದನು. ಲೇಸಾಯಿತೆಂದುಕೊಂಡು ಆ ಅಧಿಕಾರಿ ಓನೀಲ್‍ಕುಲಸ್ಥರ ನಾಯಕನಿಲ್ಲದಿದ್ದ ಸಮಯವನ್ನುಪಯೋಗಿಸಿ ಅಲ್‍ಸ್ಟರಿನಲ್ಲಿ ಕೆಲವು ಇಂಗ್ಲಿಷ್‍ಜನರನ್ನು ನೆಲೆಗೊಳಿಸಲು ಯತ್ನಮಾಡಿದನು. ಆ ಯತ್ನವು ಕೈಗೂಡುವುದರೊಳಗಾಗಿ ಐರ್ಲಂಡಿನ ಜನರಲ್ಲಿ ಇತರರೂ ಇಂಗ್ಲಿಷರಮೇಲೆ ಬೀಳುವ ಪರಿಸ್ಥಿತಿಯೊದಗಿಬಂತು.

ರೋಮನ್‍ಕ್ಯಾಥಲಿಕ್ ಪ್ರಮುಖರು ಇಂಗ್ಲಂಡಿನಲ್ಲಿ ತಮ್ಮ ಮತವನ್ನು ಉದ್ಧರಿಸಲು ಬಯಸಿದಾಗ ಐರ್ಲಂಡಿನಲ್ಲಿ ಎಲಿಸಬೆತ್ತಿಗೆ ವಿರೋಧವನ್ನುಂಟುಮಾಡಬಹುದಾಗಿತ್ತು. 1570ರಲ್ಲಿ ಜಗದ್ಗುರುಪೀಠದ ಪೋಪನು ಎಲಿಸಬೆತ್ತನ್ನು ಬಹಿಷ್ಕರಿಸಿದಾಗ ಐರಿಷ್‍ಜನರಿಗೆ ಇಂಗ್ಲಿಷರ ಒಡೆತನದಲ್ಲಿ ಅಸಮಾಧಾನಹೆಚ್ಚಿತು. ಜೆಸೂಯಿತವ್ರತಿಗಳೂ ಮತನಿಷ್ಠೆಯನ್ನು ಹೆಚ್ಚಿಸಲು ಹೊರಗಿನಿಂದಬಂದರು. ಸ್ಪೈನ್ ರಾಜನು ಸೈನಿಕರನ್ನು ಕಳುಹಿಸಿದನು. ಇದರ ಪರಿಣಾಮವಾಗಿ 1579ರಲ್ಲಿ ಐರ್ಲಂಡಿನಲ್ಲಿ ದೊಡ್ಡ ದಂಗೆಯೆದ್ದಿತು. ಈ ದಂಗೆ ಕೇವಲ ಕುಲಯಾಜಮಾನ್ಯದ ವಿಚಾರಕ್ಕಲ್ಲ. ತಮ್ಮ ನಾಡಿನ ಅಧಿಕಾರ ತಮ್ಮಲ್ಲಿರುವುದಕ್ಕೂ ತಮಗಿಷ್ಟವಾದ ಕ್ಯಾಥಲಿಕ್‍ಮತಕ್ಕೂ ಐರಿಷರು ಆಯುಧಪಾಣಿಗಳಾದರು. ಮನ್‍ಸ್ಟರ್‍ಪ್ರದೇಶದಲ್ಲಿ ಪ್ರಬಲನಾಗಿದ್ದ **ಡೆಸ್ಮಂಡಿನ ಶ್ರೀಮಂತನು**(Earl of Desmond)ಈ ದಂಗೆಗೆ ನಾಯಕನಾದನು. ಎಲಿಸಬೆತ್‍ರಾಣಿಯು ಈ ದಂಗೆಯನ್ನು ಕಾಠಿನ್ಯದಿಂದ ಅಡಗಿಸಿದಳು. ಸಿಕ್ಕಿದ ದಂಗೆಕೋರರರನ್ನು ಅತಿಕ್ರೂರವಾದ ದಂಡನೆಗೆ ವಿಧಿಸಲಾಯಿತು. ಡೆಸ್ಮಂಡ್ ಪ್ರದೇಶವು ನಿರ್ಜನವೂ ಶೂನ್ಯವೂ ಆಯಿತೆನ್ನುವವರೆಗೆ ಇಂಗ್ಲಿಷ್ ಅಧಿಕಾರಿಗಳು ವರ್ತಿಸಿ ದಂಗೆಕೋರರ ಆಸ್ತಿಪಾಸ್ತಿಗಳನ್ನು ರಾಜಸ್ವಕ್ಕೆಳೆದರು. ಡೆಸ್ಮಂಡಿನ ಶ್ರೀಮಂತನು ತನ್ನ ಉದ್ಯಮವೆಲ್ಲ ಹಾಳಾದುದನ್ನುಕಂಡು ಖಿನ್ನನಾಗಿ ತಲೆತಪ್ಪಿಸಿಕೊಂಡು ದೇಶಾಂತರಸೇರಿದನು. ಆತನ ಆಸ್ತಿಪಾಸ್ತಿಗಳನ್ನೆಲ್ಲ ಇಂಗ್ಲಿಷರು ಕಿತ್ತುಕೊಂಡರು. ಈರೀತಿಯಲ್ಲಿ ದಂಗೆಯಡಗಿದ ಮೇಲೆ **ಮನ್‍ಸ್ಟರ್**‍ಪ್ರದೇಶದ ಭೂಮಿಗಳಲ್ಲಿ ಇಂಗ್ಲಿಷರನ್ನು ನೆಲೆಗೊಳಿಸಲು ಪ್ರಯತ್ನವೇನೋ ದೊಡ್ಡದಾಗಿ ಆರಂಭವಾಯಿತು. ಹಣವಂತರಾದ ಇಂಗ್ಲಿಷ್‍ಜನರು ಕೆಲವರು ಅಲ್ಲಿಯ ಜಮೀನುಗಳನ್ನು

**ಡೆಸ್ಮಂಡ್ ಶ್ರೀಮಂತನ ದಂಗೆ 1579**

**ಇಂಗ್ಲಿಷರಿಗೆ ಭೂಮಿಗಳು**

ಕೊಂಡುಕೊಂಡು ಮೊದಲು ಅಲ್ಲಿ ಇಂಗ್ಲಿಷ್ ರೈತರನ್ನಿಡಲು ಪ್ರಯತ್ನಿಸಿ ಆಮೇಲೆ ಐರಿಷ್ ಜಾತಿಯ ರೈತರನ್ನೇ ಇಟ್ಟುಕೊಂಡರು. ಇಂಗ್ಲಿಷ್ ರೈತರು ಅಲ್ಲಿ ಬದುಕುವ ಹಾಗಿರಲಿಲ್ಲ. ಹಿಂದೆ ಯಜಮಾನರಾಗಿದ್ದ ಐರಿಷಜನರು ಈಗ ರೈತರಾಗಿ ಇಂಗ್ಲಿಷ್ ಯಜಮಾನರ ಸುಲಿಗೆಹಿಂಸೆಗಳಿಗೆ ಒಳಗಾಗುವಂತಾಯಿತು.

ದೇಶಭ್ರಷ್ಟನಾಗಿಹೊರಟ ಡೆಸ್ಮಂಡಿನ ಶ್ರೀಮಂತನು ಒಗ್ಗಟ್ಟಿನಪ್ರಯತ್ನನಡೆದ ಹೊರತು ಸಾರ್ಥಕವಾಗಲಾರದೆಂದುತಿಳಿದು ಅನ್ಯದೇಶಗಳಲ್ಲಿಮಾಡತಕ್ಕ ಪ್ರಯತ್ನವನ್ನುಮಾಡುತ್ತಿದ್ದನು. ಇಪ್ಪತ್ತುವರ್ಷಗಳು ಕಳೆದವು. ಸ್ಪಾನಿಷ್ ಆರ್ಮೇಡ ಎಂಬ ಭಾರೀಪ್ರಯತ್ನವು ಅನಿರೀಕ್ಷಿತವಾದರೀತಿಯಲ್ಲಿ ಭಂಗವಾಯಿತು. ಸೀಹನ್

**ಹ್ಯೂ ಓನೀಲ್**

ತರುವಾಯ ಓನೀಲ್ ಕುಲಕ್ಕೆ ನಾಯಕನಾದ **ಹ್ಯೂ ಓನೀಲ್** (Hugh O'Neill) ಎಂಬಾತನು ಐರಿಷರೆಲ್ಲರನ್ನೂ ಒಟ್ಟುಗೂಡಿಸಲು ಅನೇಕವರ್ಷ ಶ್ರಮಪಟ್ಟನು. ಆತನನ್ನು ಇಂಗ್ಲಂಡಿನಲ್ಲಿಯೇ ಬೆಳೆಸಿದ್ದರು. ಇಂಗ್ಲಿಷರಲ್ಲಿ ಅವನು ಅಭಿಮಾನವುಳ್ಳವನಾಗಿ ಇಂಗ್ಲಿಷ್ ಜಾತಿಯವನಂತೆಯೇ ಇರುವನೆಂದು ನಿರೀಕ್ಷಿಸಿದ್ದರು. ಸಾಧಾರಣವಾಗಿ ದಡ್ಡನಂತೆ ಮೌನದಿಂದಲೇ ಅವನೂ ಇರುತ್ತಿದ್ದನು. ಹಾಗಿದ್ದವನು ತನ್ನಕುಲದ ಯಜಮಾನನಾದೊಡನೆ ದಡ್ಡತನದ ನಟನೆಯನ್ನು ನಿಲ್ಲಿಸಿದನು. ಇಂಗ್ಲಿಷ್ ಜಾತಿಯವರಿಗೆ ಪರಮವೈರಿಯಾಗಿ ಐರಿಷ್ ಕುಲಗಳವರು ಪರಸ್ಪರವೈಷಮ್ಯಗಳನ್ನು ತೊರೆದು ಒಟ್ಟುಗೂಡುವಂತೆ ಅನೇಕಸಂಧಾನಗಳನ್ನು ನಡೆಸಿ 1598ರವೇಳೆಗೆ ಅವರನ್ನು ಒಂದು ಹದಕ್ಕೆತಂದನು. ಡೆಸ್ಮಂಡ್ ಶ್ರೀಮಂತನು ಅದೇಸುಸಮಯವೆಂದುಕೊಂಡು ಹಿಂತಿರುಗಿ ದಕ್ಷಿಣಭಾಗದವರನ್ನು ದಂಗೆಯೆಬ್ಬಿಸಲು ಅನುವಾದನು. ಉತ್ತರದಲ್ಲಿ ಹ್ಯೂ ಓನೀಲ್, ದಕ್ಷಿಣದಲ್ಲಿ ಡೆಸ್ಮಂಡ್ ಇಬ್ಬರೂಸೇರಿ ಐರಿಷರ ದಂಗೆಯೆಬ್ಬಿಸಿದರು. ಮನ್‌ಸ್ಟರ್ ಮುಂತಾದಪ್ರದೇಶದಲ್ಲಿದ್ದ ಇಂಗ್ಲಿಷರನ್ನು ಬೇಗನೆ ಓಡಿಸಿಬಿಟ್ಟರು.

**ಓನೀಲ್, ಓಡಾನೆಲ್, ಡೆಸ್ಮಂಡ್** ಮನೆತನಗಳೆಲ್ಲ ಒಟ್ಟುಗೂಡಿ ಇಂಗ್ಲಂಡನ್ನು ವಿರೋಧಿಸಿದಾಗ ಪೋಪನೂ ಸ್ಪೈನ್ ರಾಜನೂ ಪ್ರೋತ್ಸಾಹಕೊಟ್ಟರು. ಪ್ರಬಲವಾದ ದಂಗೆಯೆದ್ದಿತೆಂದುತಿಳಿದು ಎಲಿಸಬೆತ್ ರಾಣಿಯು 1599ರಲ್ಲಿ ತನ್ನ ಗೆಳೆಯನಂತಿದ್ದ **ಎಸೆಕ್ಸ್‌ಶ್ರೀಮಂತನನ್ನು** ದಂಗೆಯನ್ನಡಗಿಸಲು ಕಳುಹಿಸಿದಳು. ಆ ಶ್ರೀಮಂತನು

**ಟೈರೋನ್ ದಂಗೆ**
**1598**

ಪಟ್ಟುಹಿಡಿದು ಯುದ್ಧಮಾಡದೆ ಒಪ್ಪಂದಮಾಡಿಕೊಂಡು ಹಿಂತಿರುಗಿದನು. ರಾಣಿ ಅವನನ್ನು ಅವಮಾನಗೊಳಿಸಿ ಸೆರೆಯಲ್ಲಿಡಿಸಿ ಐರ್ಲಂಡಿನಲ್ಲಿ ಕಾದಾಡಲು **ಲಾರ್ಡ್ ಮೌಂಟ್‌ಜಾಯ್** (Lord Mountjoy) ಎಂಬ ಶ್ರೀಮಂತನನ್ನು ನಿಯಮಿಸಿದಳು. 1600ರಲ್ಲಿ ಆ ಶ್ರೀಮಂತನು ತನ್ನ ಕೆಲಸವನ್ನು ಪ್ರಾರಂಭಿಸಿ ಹೆಜ್ಜೆ ಹೆಜ್ಜೆಯಾಗಿ ಐರ್ಲಂಡನ್ನು ವಶಪಡಿಸಿಕೊಳ್ಳುವವನಂತೆ ಮಾರ್ಗಗಳಲ್ಲಿ ಕೋಟೆ

ಗಳನ್ನಿಟ್ಟು ಪೈರುಪಚ್ಚೆಗಳನ್ನು ಕೊಳ್ಳೆಹೊಡೆಸಿ ಐರಿಷರಿಗೆ ಅನ್ನನೀರಿಲ್ಲದಂತೆಮಾಡಿದನು. ಈ ಬಗೆಯ ಮೊಂಡುತನದ ಕಾದಾಟದಿಂದ ಐರಿಷರು ಶಕ್ತಿಗುಂದಿದರು. ಬೇರೆ ಸಹಾಯವೂ ಬಾರದಾಯಿತು. 1603ರಲ್ಲಿ ಓನೀಲ್‌ಕುಲಮುಖ್ಯನು ಒಪ್ಪಂದಕ್ಕೊಗ್ಗಿ ಇಂಗ್ಲಂಡಿಗೆ ವಿಧೇಯನಾಗಿರಲೊಪ್ಪಿದನು. ಆತನು ಸೋಲನ್ನೊಪ್ಪಿಕೊಳ್ಳುವವೇಳೆಗೆ ಐರ್ಲಂಡ್ ಬಲುಹೀನಸ್ಥಿತಿಗೆಬಂದಿತ್ತು. ನಡೆದ ಹೋರಾಟದಲ್ಲಿ ಎರಡುಕಡೆಯವರೂ ಕ್ರೌರ್ಯಕಾರ್ಯಗಳನ್ನು ವಹಿಸಿ ಪಿಶಾಚಕೃತ್ಯಗಳನ್ನು ನಡೆಸಿಬಿಟ್ಟರು.

ಈ ಮೂರು ದಂಗೆಗಳ ತರುವಾಯವೇ ಐರ್ಲಂಡನ್ನು ಇಂಗ್ಲಿಷರು ಜಯಿಸಿದರೆಂದು ಹೇಳಬಹುದು. ಎಲಿಸಬೆತ್‌ಕಾಲದವರೆಗೂ ಇಂಗ್ಲಿಷ್ ದೊರೆಗಳು ಹೆಸರಿಗೆ ಮಾತ್ರ ಐರ್ಲಂಡಿನಪ್ರಭುಗಳಾಗಿದ್ದರು. ಎಲಿಸಬೆತ್‌ಕಾಲದಲ್ಲಿ ಹೆಚ್ಚುಹಣವನ್ನು ಸುರಿದು ಅತಿಕಷ್ಟನಷ್ಟಗಳನ್ನು ಸಹಿಸಿಕೊಂಡು ಕಾದಾಡಿ ಐರಿಷರನ್ನು ಗೆದ್ದುದಾಯಿತು. ನಡೆದ ಹೋರಾಟದಲ್ಲಿ ರಾಕ್ಷಸವರ್ತನೆಯು ಸಾಮಾನ್ಯವಾಗಿದ್ದಿತಂತೆ.

**ವೈಷಮ್ಯ**

ಇಂಗ್ಲಿಷ್‌ಸೈನಿಕರು ತಮ್ಮ ಭರ್ಜಿಗಳ ಮೊನೆಯಿಂದ ಐರಿಷ್ ಹಸುಳೆಗಳನ್ನು ಚುಚ್ಚಿ ಆಕಾಶದಲ್ಲೆತ್ತಿಹಿಡಿದು ಗಿರಗಿರನೆ ತಿರುಗಿಸಿ ವಿನೋದಗೊಳ್ಳುತ್ತಿದ್ದರಂತೆ. ಕಡೆಯದಾದ ಟೈರೋಣ್ ದಂಗೆಯಲ್ಲಿ ಐರಿಷ್‌ಹೆಂಗಸರು ಹಸಿವಿನಿಂದ ಕಂಗೆಟ್ಟು ಅಲ್ಲಲ್ಲಿ ಬೆಂಕಿಹಾಕಿಕೊಂಡು ಮಕ್ಕಳನ್ನು ಆಕರ್ಷಿಸಿ ಸಿಕ್ಕಮಕ್ಕಳನ್ನು ತಿನ್ನುತ್ತಿದ್ದರಂತೆ. ಇಂಗ್ಲಿಷರ ಮನಸ್ಸಿನಲ್ಲಿ ಐರಿಷ್‌ಜಾತಿಯವರು ಮನುಷ್ಯರೇ ಅಲ್ಲವೆನ್ನುವಷ್ಟು ದ್ವೇಷತಿರಸ್ಕಾರಗಳಿದ್ದವು. ಈ ರೀತಿಯ ಗೆಲುವು ಇಂಗ್ಲಿಷರಿಗೆ ಲಭಿಸಿದಮೇಲೆ ಬಹುಕಾಲದವರೆಗೂ ಐರಿಷರ ನೆನಪಿನಲ್ಲಿ ಇಂಗ್ಲಿಷರ ಕಠೋರವರ್ತನೆಯು ನೆಲೆಸಿದ್ದು ಪರಸ್ಪರಸೌಹಾರ್ದಕ್ಕೆ ಅವಕಾಶವನ್ನು ಕೊಡದಂತಿತ್ತು.

## 5 ರಾಣಿಯ ಕಡೆಗಾಲ

ಪಟ್ಟವೇರಿದ ಸಮಯದಲ್ಲಿ ಕಾರ್ಮೋಡಕವಿದಂತೆ ಕಂಡ ತೊಂದರೆಗಳೆಲ್ಲ ಮಾಯವಾಗುವವೇಳೆಗೆ ರಾಣಿಗೆ ವೃದ್ಧಾಪ್ಯಬಂದಿತ್ತು. ಜನರಲ್ಲಿ ದೇಶಭಕ್ತಿ, ಹೆಮ್ಮೆ,

**ಜನರ ಉತ್ತೇಜನ**

ನೆಮ್ಮದಿ, ಉತ್ಸಾಹಗಳು ಹೆಚ್ಚಿದ್ದಲ್ಲದೆ ಇಂಗ್ಲಂಡ್‌ವೇಲ್ಸ್ ಒಂದುಗೂಡಿ ಇಂಗ್ಲಿಷ್ ಜನರು ಯೂರೋಪಿಗೆಲ್ಲ ಒಂದು ಶಕ್ತಿಸ್ವರೂಪರಾದರು. ಜನರ ಉತ್ಸಾಹಪೌರುಷಗಳು ವ್ಯಾಪಾರ ಸಾಹಸದಲ್ಲಿಯೂ ಸಮುದ್ರಯಾನದಲ್ಲಿಯೂ ತೋರಿಕೊಂಡರೀತಿಯಲ್ಲಿಯೇ ಸಾಹಿತ್ಯದಲ್ಲಿಯೂ ವಿಜೃಂಭಿಸಿದವು. ನಾಟಕಶಾಲೆಗಳು ಪ್ರಾರಂಭವಾಗಿ ಉತ್ತೇಜನಗೊಂಡವು. **ಸ್ಪೆನ್ಸರ್** (Spenser) ಮತ್ತು **ಷೇಕ್ಸ್‌ಪಿಯರ್** (Shakespeare)

ಎಂಬ ಪ್ರಸಿದ್ಧಕವಿಗಳು ಎಲಿಸಬೆತ್‌ಕಾಲದವರು. ಲೋಕವಿಖ್ಯಾತನಾದ ಷೇಕ್ಸ್ ಪಿಯರ್ ತನ್ನ ಇಪ್ಪತ್ತೆರಡನೆವರ್ಷದಲ್ಲಿ ಲಂಡನ್ನಿಗೆ ಹೊರಟು 'ರೋಮಿಯೋ ಜೂಲಿಯೆಟ್' (Romeo and Juliet) 'ಮರ್ಚೆಂಟ್ ಆಫ್ ವೆನಿಸ್' (Merchant of Venice) ಮುಂತಾದ ನಾಟಕಗಳನ್ನು ರಚಿಸಿ ಇನ್ನೂ ಚಿಕ್ಕವಯಸ್ಸಿನಲ್ಲಿಯೇ ಕೀರ್ತಿಶಾಲಿಯಾದನು. ಇತರ ವಿನೋದಗಳೂ ಜನಜೀವನದಲ್ಲಿ ಉಲ್ಲಾಸವನ್ನು ತುಂಬಿದವು. ಎಲಿಸಬೆತ್‌ರಾಣಿಯ ಆಳಿಕೆಯು ಮುಗಿಯುತ್ತಬಂದಂತೆ ಆ ರಾಣಿಯು ಪ್ರಜೆಗಳಲ್ಲಿ ಪೌರುಷ ಅಹಂಕಾರಗಳು ಬೆಳೆಯುತ್ತಬಂದವು.

ಜನಗಳಿಗೆ ಹೆಮ್ಮೆ ಸಂತೋಷಗಳಿದ್ದಂತೆ ರಾಣಿಗಿರಲಿಲ್ಲ. ವಯಸ್ಸಾದಂತೆ ಆಕೆಗೆ ಸಂತೋಷ ಕಡಿಮೆಯಾಯಿತು. ಸಮವಯಸ್ಕರಾದ ಗೆಳೆಯರು ತೀರಿಕೊಂಡರು. ಮಂತ್ರಿಗಳಲ್ಲಿಯೂ ವಾಲ್ಸಿಂಘಂ, ಬರ್ಲಿ (Burleigh) ಮುಂತಾದ ಹಳೆತಲೆಯವರು ತೀರಿಕೊಂಡು ಹೊಸಬರಿದ್ದರು. ಪ್ಯೂರಿಟನ್‌ಪಕ್ಷದವರು ಪ್ರಬಲರಾಗುತ್ತ ಹೆಚ್ಚು ಹೆಚ್ಚು ಅಸಮಾಧಾನಪಡುತ್ತ ಶಿಕ್ಷೆಗೊಳಗಾಗುತ್ತ ಇರುತ್ತಿದ್ದರು. ಕ್ಯಾಥಲಿಕ್ ಜನರ ಪಿತೂರಿಗಳೇನೋ ನಿಂತಿದ್ದವಾದರೂ ಕ್ಯಾಥಲಿಕ್ಕಾದವನು ವಿಜಾತೀಯನರಪಿಶಾಚಿಯೆಂಬ ಭಾವನೆಯಿಂದ ಅವರಿಗೆ ಕ್ರೂರದಂಡನೆಗಳು ತಪ್ಪದೆ ನಡೆಯುತ್ತಿದ್ದವು.

ಪ್ರಜೆಗಳ ವಿಶ್ವಾಸವನ್ನು ಕಳೆದುಕೊಳ್ಳದಂತೆ ವರ್ತಿಸಬೇಕೆನ್ನುವುದು ಎಲಿಸಬೆತ್ತಿನ ನೀತಿ. ಪ್ರಜೆಗಳ ಪ್ರತಿನಿಧಿಗಳು ಕೂಡಿದ ಪಾರ್ಲಿಮೆಂಟ್‌ಸಭೆಯವರು ಬಹುಕಾಲ ವಿಧೇಯರಾಗಿಯೇ ಇದ್ದರು. ಮದುವೆಯಾಗಬೇಕೆಂದು ಪದೇಪದೇ ಬಿನ್ನಹಮಾಡಿ ರಾಣಿಯಮನಸ್ಸಿಗೆ ಕಿರುಕುಳಕೊಡುತ್ತಿದ್ದರು.

**ಪಾರ್ಲಿಮೆಂಟ್‌ಸಭೆ** ಗೆಲುವುಗಳೂ ನೆಮ್ಮದಿಯೂ ಹೆಚ್ಚುತ್ತ ಪ್ರತಿನಿಧಿಗಳ ಸೊಂಟವೂ ನೆಟ್ಟಗಾಗುತ್ತಬಂತು. ತನ್ನಿಷ್ಟಕ್ಕೆ ವಿರೋಧವಾಗಿ ಸಭೆಯವರು ಪ್ರಸ್ತಾಪಿಸಿದಾಗ ರಾಣಿಯು ಛೀಯೆಂದೋ, ದೊಡ್ಡಬಾಯುಳ್ಳವರನ್ನು ಸೆರೆಯಲ್ಲಿಡಿಸಿಯೋ, ಉಪಾಯವಾಗಿ ಹೊಗಳಿಯೋ ತನ್ನ ಇಷ್ಟವನ್ನೇ ಸಾಧಿಸಿಕೊಳ್ಳುತ್ತಿದ್ದಳು. ಆಳಿಕೆಯ ಕಡೆಕಡೆಗೆ ಸಭೆಯವರು ರಾಣಿಯ ಸ್ವೇಚ್ಛಾವೃತ್ತಿಯನ್ನು ಸಹಿಸದೆ ವಿರೋಧವನ್ನೊಡ್ಡುವವರಾದರು. ಅಂಜಿಕೆ ಮಾಯವಾಗಿತ್ತು; ಅಹಂಕಾರ ಪೌರುಷಗಳು ಬೇರೂರಿತ್ತು. ಆ ವೇಳೆಯಲ್ಲಿ ಲೋಭಕ್ಕೊಳಗಾಗಿ ರಾಣಿ ಅನ್ಯಾಯಮಾರ್ಗದಲ್ಲಿ ಹಣಸಂಪಾದನೆಗೆ ತೊಡಗಿದಾಗ ಸಭಿಕರು ಕೂಗಾಡುವವರಾದರು. ದುಡ್ಡನ್ನು ಇಸುಕೊಂಡು ರಾಣಿಯು ಪದಾರ್ಥಗಳ ವ್ಯಾಪಾರವನ್ನು ಸರ್ವಮಾನ್ಯವಾಗಿ ವರ್ತಕರಿಗೆ ಕೊಡುತ್ತಿದ್ದಳು. **ಸರ್ವಮಾನ್ಯವೆಂಬ ಸನ್ನದನ್ನು** ರಾಣಿಯಿಂದ ಪಡೆದ ವರ್ತಕನಿಟ್ಟಬೆಲೆಗೇ ಆ ಪದಾರ್ಥವನ್ನು ಎಲ್ಲರೂ ಕೊಂಡುಕೊಳ್ಳಬೇಕು! ಇತರ ವರ್ತಕರಿಗೆ ಆ ವ್ಯಾಪಾರ ಬಹಿಷ್ಕೃತವಾದುದಲ್ಲದೆ ಪದಾರ್ಥವು ಪ್ರಿಯವಾಗಿ ಜನರಿಗೆ

ಕಷ್ಟವೂ ಆಗುವ ಸಂಭವ. ಪಾರ್ಲಿಮೆಂಟ್ ಸಭಿಕರ ಆಕ್ಷೇಪ ಬಲವಾಗಿಯೆದ್ದಿತು. ಸಭಿಕರು ಅವಿಧೇಯರೆಂದು ಮೊದಮೊದಲು ರಾಣಿ ರೇಗಿದಳು. ಸ್ವಲ್ಪಕಾಲದಮೇಲೆ ಪ್ರಜೆಗಳ ವಿರೋಧವು ಪ್ರಬಲವಾಗಬಹುದಾದುದನ್ನು ಕಂಡು ತನ್ನ ಹಟಬಿಟ್ಟುಕೊಟ್ಟು ಸಮಾಧಾನವಾಗಿ ಸಭೆಯವರ ಇಷ್ಟಕ್ಕೊಪ್ಪಿಕೊಂಡಳು. ಈ ಸಂಗತಿಯಿಂದ ಸಭಿಕರ ಚಿತ್ತವೃತ್ತಿ ಹೇಗೆ ಬದಲಾಗುತ್ತಿತ್ತೆಂಬುದು ಸೂಚನೆಯಾಗುತ್ತದೆ. ಪ್ರಭು ನಡೆಸಿದ್ದೇ ಮಹಾಪ್ರಸಾದವೆಂದು ನಡುಬಗ್ಗಿದಕಾಲ ಕಳೆಯಿತು. ಅನ್ಯಾಯವೋ ಅನಿಷ್ಟವೋ ತೋರಿದಾಗ ಸಭಿಕರು ತಮ್ಮ ಆಕ್ಷೇಪವನ್ನೊಡ್ಡಿ ಅದನ್ನು ಸಾಧಿಸತಕ್ಕವರಾದರು. ದೇಶಭಕ್ತಿ ಅಹಂಕಾರಗಳು ಎಲ್ಲರಲ್ಲಿಯೂ ದೃಢವಾಗಿದ್ದುದೇ ಅದಕ್ಕೆ ಮೂಲ.

**ರಾಣಿಗೆ ವಿರೋಧ**

ಮುಂದೆ ಪಟ್ಟಕ್ಕೆಯಾರೆಂಬ ಚಿಂತೆ ಬರಬರುತ್ತ ಹೆಚ್ಚಾಯಿತು. ರಾಣಿ ಮದುವೆಯಾಗದೆಯೇ ಆಯುಷ್ಯವನ್ನು ಕಳೆದಳು. ಮುದುಕಿಯಾಗಿದ್ದುದಲ್ಲದೆ ಈ ಚಿಂತೆಗೆ ಪರಿಹಾರವನ್ನೇ ಸೂಚಿಸದಿದ್ದ ರಾಣಿಗೆ ಅಸ್ವಸ್ಥತೆಯೂ ತೋರಿತು. ಬೇಗನೆ ದೇಹಶಕ್ತಿಯು ಕುಗ್ಗಿಹೋಯಿತು. ರಾಣಿಯು ಅವಸಾನಕಾಲವೆಂದು ಮಂತ್ರಿಸಾಮಾಜಿಕರು ಕಾತರರಾಗಿ ಪಟ್ಟದ ಇತ್ಯರ್ಥವನ್ನು ಕೇಳಿದರು. ಮೇರಿಸ್ಟೂಯರ್ಟ್ ಮಗನಾಗಿ ಸ್ಕಾಟ್ಲೆಂಡಿನ ದೊರೆಯಾಗಿದ್ದ ಜೇಮ್ಸ್ ಹೆಸರನ್ನೆತ್ತಿದ್ದಾಗ ತಥಾಸ್ತು ಎನ್ನುವ ಸಂಜ್ಞೆಯನ್ನು ಮಾಡಿ ಸ್ವಲ್ಪಕಾಲದಲ್ಲಿಯೇ ತೀರಿಕೊಂಡಳು.

**ರಾಣಿಯ ಸಾವು**

ಇಂಗ್ಲೆಂಡಿನ ರಾಜಾರಾಣಿಯರಲ್ಲಿ ಎಲಿಸಬೆತ್ತಿಗೆ ಅತ್ಯುತ್ತಮಸ್ಥಾನ ಸಲ್ಲುವುದು. ಇಂಗ್ಲೆಂಡ್ ಎಂಬುದು ರೂಪಗೊಂಡುದೇ ಆಕೆಯಕಾಲದಲ್ಲಿ. ಮತವ್ಯವಸ್ಥೆ ಸಮಾಧಾನಕರವಾಗಿ ಬೇರೂರಿ ಸ್ವಾತಂತ್ರ್ಯವನ್ನು ಬೆಳೆಸಿತು. ಅನ್ಯರಿಂದ ತೋರಬಹುದಾಗಿದ್ದ ವಿಪತ್ತುಗಳು ಮಾಯವಾದವು. ವ್ಯಾಪಾರ ಮತ್ತು ಐಶ್ವರ್ಯಗಳ ಸಾಧನೆಯಾಯಿತು. ಜನರ ನೆಮ್ಮದಿಗೆ ತಳಹದಿಬಿತ್ತು. ಜನರಲ್ಲಿ ಐಕಮತ್ಯ ಭದ್ರವಾಯಿತು. ಐಕಮತ್ಯದೊಂದಿಗೆ ದೇಶಭಕ್ತಿ, ಅಹಂಕಾರ, ಸಾಹಸಪ್ರೀತಿಗಳು ಬೆಳೆದವು.

**ರಾಣಿಯ ಹಿರಿಮೆ**

# ಟ್ಯೂಡರ್ ದೊರೆಗಳ ಕಾಲಮಹಿಮೆ

**ತಾರತಮ್ಯ**

ಟ್ಯೂಡರ್‌ವಂಶದ ದೊರೆಗಳ ಕಾಲವೆನ್ನುವುದು ಸರಿಸುಮಾರಾಗಿ 16ನೆ ಶತಮಾನ. ಐರೋಪ್ಯರಲ್ಲಿ ಆಧುನಿಕಕಾಲದ ಮೊದಲನೆ ಅವಸ್ಥೆ. ಭಾರತವರ್ಷದಲ್ಲಿ ಕೃಷ್ಣದೇವರಾಯರಾಳಿದಾಗ ಇಂಗ್ಲಂಡಿನಲ್ಲಿ 8ನೆ ಹೆನ್ರಿ; ಅಕ್ಬರ್ ಬಾದಷಹನು ಮುಘಲ್‌ಸಾಮ್ರಾಜ್ಯ ಕಟ್ಟಿದಾಗ ಅಲ್ಲಿ ಎಲಿಸಬೆದ್ರಾಣಿ. ವಿಸ್ತಾರವೈಭವಗಳಲ್ಲಾಗಲಿ ನೀತಿರೀತಿಗಳಲ್ಲಾಗಲಿ ಹೋಲಿಸಿದಾಗ ಅಜಗಜಾಂತರವೇ. ಭಾರತೀಯವ್ಯಾಪಾರವೊಂದೇ ಎಷ್ಟು ಆಂದೋಳನಗಳಿಗೆ ದೂರಕಾರಣವಾಯಿತು! ಇಟಲಿಯ ವರ್ತಕರ ಪ್ರಾಬಲ್ಯ, ಆ ವರ್ತಕರ ನಗರಗಳನ್ನು ಸಂಪಾದಿಸಿಕೊಳ್ಳಲು ರಾಜರಲ್ಲಿ ಪೈಪೋಟಿ, ಅನ್ಯದೇಶಗಳವರ ಅಸೂಯೆ, ಸಮುದ್ರಯಾನ ಸಾಹಸಗಳು ಇತ್ಯಾದಿಗಳೆಲ್ಲಕ್ಕೂ ಆ ವ್ಯಾಪಾರವೇ ದೂರಕಾರಣ. ನಡೆದ ಸಾಹಸಗಳಲ್ಲಿ ಪೋರ್ಚುಗಲ್‌ಸ್ಪೈನ್‌ದೇಶಗಳು ಮುಂದಾಗಿ ಪೃಥ್ವೀಮಂಡಲವನ್ನೇ ಹಂಚಿಕೊಂಡವು. ವ್ಯಾಪಾರದ ವೃತ್ತಾಂತದಲ್ಲಿ 16ನೆ ಶತಮಾನವೆಂದರೆ ಆಯೆರಡುರಾಜ್ಯಗಳ ಪ್ರಾಬಲ್ಯವೆಂದೇ ಅರ್ಥ. ಆ ಶತಮಾನದ ಅಂತ್ಯದಲ್ಲಿಮಾತ್ರ ಎರಡುದೇಶಗಳೂ ಕ್ಷಯವಾದವು. ಇಂಗ್ಲಂಡ್ ಮತ್ತು ಹಾಲಂಡ್‌ರಾಜ್ಯಗಳ ಏಳ್ಗೆ ಆ ಕ್ಷಯಕ್ಕೆ ಕಾರಣವಾಯಿತು.

**ರಾಜಕೀಯಗತಿ**

ಸ್ಪೈನ್‌ರಾಜ್ಯ ಪ್ರಬಲವಾದುದೆಷ್ಟುಬೇಗ! ಫರ್ಡಿನೆಂಡ್ ಇಸಬೆಲ ಮದುವೆ ಮಾಡಿಕೊಂಡಮೇಲೆ ಅವರ ಮೊಮ್ಮಗನಿಗೆ ಎಷ್ಟುರಾಜ್ಯಗಳು ಸೇರಿದವು! ಫ್ರಾನ್ಸ್ ರಾಜ್ಯವನ್ನು ಮಂಡಲದಹಾವಿನಂತೆ ಸುತ್ತಿಕೊಂಡ ಒಂದು ಚಕ್ರಾಧಿಪತ್ಯವಲ್ಲದೆ ಅಮೆರಿಕ ಬೇರೆ. ಅಷ್ಟಿದ್ದರೂ ಫ್ರಾನ್ಸನ್ನು ನಾಶಗೊಳಿಸಲಾಗಲಿಲ್ಲ. 2ನೆ ಫಿಲಿಪ್ ದೊರೆಯು ಇಂಗ್ಲಂಡಿನ ರಾಣಿಯನ್ನು ಮದುವೆಯಾದನು. ಆ ರಾಣಿಗೆ ಮಕ್ಕಳಾಗಿದ್ದರೆ ಅಥವಾ ಆ ದೊರೆ ಮೇರಿಸ್ಟೂಯರ್ಟಳನ್ನು ಮದುವೆಯಾಗಿದ್ದರೆ ಚರಿತ್ರೆಯಗತಿ ಬದಲಾಗಬಹುದಾಗಿತ್ತು. ಇಂಗ್ಲಂಡಿಗೆ ಪ್ರತ್ಯೇಕತೆ ನಷ್ಟವಾಗಿ ಹ್ಯಾಪ್ಸ್‌ಬುರ್ಗ್‌ವಂಶದವರ ಆಳಿಕೆಯಲ್ಲಿ ಒಂದು ಭಾಗವಾಗಿರಬಹುದಾಗಿತ್ತು. ಆದರೆ ಇಂಗ್ಲಂಡೆಂಬುದು ಯೂರೋಪಿಗೆ ಸೇರಿಯೂಸೇರದಿರುವ ಒಂದುದ್ವೀಪ. ಫಿಲಿಪ್‌ದೊರೆಯೆಷ್ಟು ಮೂರ್ಖನಾಗಿದ್ದನೋ ಅಷ್ಟು ಜಾಣೆಯಾಗಿದ್ದವಳು ಎಲಿಸಬೆತ್. ಸ್ಪೈನ್ ಆರಿಸಿದ ಮತಕ್ಕೆ ವಿರುದ್ಧವಾದಮತವೇ ಇಂಗ್ಲಂಡಿನಲ್ಲಿ ಸ್ಥಾಪನೆಯಾಗಿ ಪರಸ್ಪರದ್ವೇಷವು ಧರ್ಮವಾಗಿಹೋಯಿತು. ಆದರೆ ಒಂದುವೇಳೆ ಫಿಲಿಪ್ಪನು ಪ್ರಾಟೆಸ್ಟೆಂಟ್‌ಮತವನ್ನು ಅವಲಂಬಿಸಿದ್ದರೂಸಹ ಇಂಗ್ಲಂಡ್ ಸ್ಪೈನುಗಳ ಹಗೆತನ ತಪ್ಪುತ್ತಿರಲಿಲ್ಲ.

ಶತಮಾನಗಟ್ಟಲೆ ಐರೋಪ್ಯರಾಜ್ಯಗಳಲ್ಲಿ ರೋಮ್ಯಾಕ್ಯಾಥಲಿಕ್ ಮತವು ಭದ್ರವಾಗಿ ವ್ಯಾಪಿಸಿತ್ತು. ಕ್ರೈಸ್ತಮತದತತ್ವಗಳಲ್ಲಿ ಅನ್ಯಮತಸಹಿಷ್ಣುತೆಯೆಂಬುದಿಲ್ಲ. ಕ್ರೈಸ್ತನಾದವನಿಗೆಮಾತ್ರ ಸದ್ಗತಿಆಗದಿದ್ದವನಿಗೆ ದುರ್ಗತಿಯೆಂಬುದು ಅವರಿಗೆ ಮಂತ್ರ. ಮತದಲ್ಲಿ ಶಾಖೆಗಳು ಹುಟ್ಟಿದಾಗ ಪ್ರತಿಶಾಖೆಯವನೂ ತನ್ನ ಶಾಖೆಯೊಂದೇ ನಿಜವೆಂದೂ ಇತರಶಾಖೆಗಳೆಲ್ಲ ಸುಳ್ಳೆಂದೂ ನಂಬಿದ್ದನು. ಅನ್ಯಮತಸ್ಥರನ್ನು ಎಷ್ಟು ದ್ವೇಷಿಸಿದರೆ ಸ್ವಮತದಲ್ಲಿ ಅಷ್ಟು ಭಕ್ತಿಯೆಂಬ ವಿಪರೀತಬುದ್ಧಿಯೇ ಐರೋಪ್ಯರಲ್ಲಿ ಸಹಜವಾಗಿತ್ತು. ಆದುದರಿಂದ ಇತ್ತಕಡೆ

**ಮತವೈಷಮ್ಯ**

ಕೃಷ್ಣದೇವರಾಯರು ಮುಸಲ್ಮಾನರಿಗಾಗಿ ಮಸೀದಿ ಕಟ್ಟಿಸಿಕೊಡುತ್ತಲೂ ಅಕ್ಬರ್ ಬಾದಷಹನು ಇಬಾದತ್‌ಖಾನೆಯಲ್ಲಿ ನಾನಾಧರ್ಮಗಳ ಸಾಮಾನ್ಯಲಕ್ಷಣಗಳನ್ನು ನಿರ್ದೇಶಪಡಿಸುತ್ತಲೂ ಇದ್ದಾಗ ಅತ್ತ ಐರೋಪ್ಯರಲ್ಲಿ ಪ್ರಾಟೆಸ್ಟೆಂಟರೂ ಕ್ಯಾಥಲಿಕ್ಕರೂ ಒಬ್ಬರನ್ನೊಬ್ಬರು ವಧಿಸುತ್ತ ಪುಣ್ಯಲಾಭವಾಯಿತೆಂದು ಭಾವಿಸುತ್ತಿದ್ದರು. ಎಂತಹ ಹೇಯಕೃತ್ಯವನ್ನಾದರೂ ಸದುದ್ದೇಶಕ್ಕಾಗಿ ನಡೆಸಬಹುದೆಂದು ಜೆಸೂಯಿತರು ಮೊದಲಿಟ್ಟರು. ಅಧರ್ಮವನ್ನು ಧರ್ಮವೆಂದುತಿಳಿಯುವಷ್ಟು ವೈಪರೀತ್ಯ ತೋರಿತ್ತು.

ಆದರೆ ಮತವೈಷಮ್ಯಕ್ಕೆ ಕಾಣದ ಎಲ್ಲೆಗಳುಂಟು. ಅನೇಕಸಂದರ್ಭಗಳಲ್ಲಿ ಇತರಕಾರಣಗಳಿಂದ ಆ ವೈಷಮ್ಯವನ್ನವಲಂಬಿಸತಕ್ಕುದು ಅನುಕೂಲವಾದಾಗ ಮತವಿರೋಧವೆಂಬುದು ಅನುಕೂಲವಾದ ನೆಪವಾಗುವುದು. ಸ್ಪಾನಿಷ್ ಆರ್ಮೇಡದ ಆಕ್ರಮಣದಕಾಲದಲ್ಲಿ ರೋಮ್ಯಾಕ್ಯಾಥಲಿಕ್ಕರೇ ಆಗಿದ್ದ ಇಂಗ್ಲಿಷರನೇಕರು ಎಲಿಸಬೆತ್ತಳಪಕ್ಷವನ್ನು ವಹಿಸಿದರು. ಅವರಲ್ಲಿ ಹಲಕೆಲವರಿಗೆ ದೇಶಭಕ್ತಿ ಮುಖ್ಯವಾಗಿಯೂ ಉಳಿದವರಿಗೆ ಪ್ರಯೋಜನದೃಷ್ಟಿ ಮುಖ್ಯವಾಗಿಯೂ ಇತ್ತು.

ಒಟ್ಟಿನಲ್ಲಿ ಟ್ಯೂಡರ್ ದೊರೆಗಳು ದೂರದೃಷ್ಟಿಯುಳ್ಳವರಾಗಿ ಒದಗಿದ ಸುಸಮಯವನ್ನು ಬಿಡದೆ ಉಪಯೋಗಿಸಿಕೊಂಡರು. ಸ್ಪೈನಿನದೊರೆಯು ಸುಸಮಯವನ್ನು ಕಳೆದುಕೊಂಡು ಕೆಟ್ಟನು. ಟ್ಯೂಡರ್ ದೊರೆಗಳು ಇಂಗ್ಲಂಡಿಗೆ ಪ್ರತ್ಯೇಕತೆಯನ್ನು ಕೊಟ್ಟ ಮತವನ್ನು ರೂಪಗೊಳಿಸಿದರು. ಶ್ರೀಮಂತರ ದೌಷ್ಟ್ಯಕ್ಕವಕಾಶವಿಲ್ಲದಂತೆ ಅವರನ್ನು ಬಲಿಯಿಟ್ಟರು. ನಾನಾ ಉಪಾಯಗಳಿಂದ ಹಣವನ್ನು ಸಂಪಾದಿಸಿಕೊಂಡು ಸ್ವಂತಬಲವನ್ನು ಪೋಷಿಸಿದರು. ಪಟ್ಟದ ಜಗಳಗಳು ಏಳದಂತೆಯೂ ಯಾದವೀಕಲಹಗಳು ತೋರದಂತೆಯೂ ನೆರವೇರಿಸಿ ಜನರಿಗೆ ಅಗತ್ಯವಾದ ಶಾಂತಿಯನ್ನು ಕಾಪಾಡಿದರು. ಜನರು ನೆಮ್ಮದಿವಂತರಾಗಲು ಸಹಾಯಕರಾದರು. ಆದ್ದರಿಂದ 7ನೆ ಹೆನ್ರಿ, 8ನೆ ಹೆನ್ರಿ ಮತ್ತು ಎಲಿಸಬೆತ್ ಮೂವರೂ ಪ್ರಜೆಗಳ ವಿಶ್ವಾಸವನ್ನು ಕಟ್ಟಿಕೊಂಡೇ ಇದ್ದರು. ಈ ಪ್ರಭುಗಳ ಆಳಿಕೆಯ ಪರಿಣಾಮವಾಗಿಯೆ ಇಂಗ್ಲಂಡ್

**ರಾಜಾಧಿಕಾರದ ಪ್ರಾಬಲ್ಯ**

ಎಂಬ ದ್ವೀಪದ ಜನರು ಇತರ ಐರೋಪ್ಯರಿಂದ ಬೇರೆಯವರಾಗಿ ಒಗ್ಗಟ್ಟನ್ನೂ ಒಗ್ಗಟ್ಟಿನೊಡನೆ ಧೈರ್ಯಸಾಹಸಗಳನ್ನೂ ಪಡೆದರು.

ಟ್ಯೂಡರರಿಗೆ ಹಿಂದೆ ಆಳಿದ ರಾಜರು ಒಂದುಕಡೆ ಶ್ರೀಮಂತವರ್ಗದವರಿಗೂ ಮತ್ತೊಂದುಕಡೆ ಚರ್ಚುಗಳ ಬಿಷಪ್ಪರಿಗೂ ಹೆದರಬೇಕಾಗಿತ್ತು. ರಾಜರ ಮಂತ್ರಾಲೋಚನಸಭೆಯಲ್ಲಿ ಆಯೆರಡುವರ್ಗದವರೇ ಸೇರಿರುತ್ತಿದ್ದರು. 7ನೆ ಹೆನ್ರಿದೊರೆ ಶ್ರೀಮಂತರ ದರ್ಪಪ್ರತಿಷ್ಠೆಗಳನ್ನು ಕೊನೆಗಾಣಿಸಿದನು; 8ನೆ ಹೆನ್ರಿದೊರೆಯು ಪೋಪನ ಅಧಿಕಾರವನ್ನು ಕಿತ್ತೆಸೆದು ಬಿಷಪ್ಪರನ್ನು ತನ್ನ ಭೃತ್ಯರಲ್ಲಿ ಸೇರಿಸಿದನು. ಆ ತರುವಾಯ ರಾಜಾಧಿಕಾರಕ್ಕೆ ಅಡ್ಡಿಯೇ ಇಲ್ಲದಂತಾಯಿತು. ಜನಸಾಮಾನ್ಯರ ವಿಶ್ವಾಸವನ್ನು ಕಳೆದುಕೊಳ್ಳದಂತೆ ಉಪಾಯಗಳನ್ನು ಹೆಣೆಯುತ್ತಿದ್ದ ರಾಜರನ್ನು ಜನರು ವಿರೋಧಿಸಲೇ ಇಲ್ಲ. ಪಾರ್ಲಿಮೆಂಟೆಂಬ ಸಭೆಯು ರಾಜರ ಇಷ್ಟಾನುವರ್ತಿಯಾಗಿತ್ತು. ರಾಜಾಧಿಕಾರವು ನಿರಂಕುಶವಾಗಿದ್ದಾಗ ಅವನ್ನು ಅಡ್ಡಿಪಡಿಸಲು ತಕ್ಕ ಚೈತನ್ಯವೇ ಪಾರ್ಲಿಮೆಂಟಿನಲ್ಲಿರಲಿಲ್ಲ. ಅಲ್ಲಿ ನೆರೆದ ಸಭಿಕರಿಗೆ ನೆಮ್ಮದಿವಿರಾಮಗಳೂ ತಕ್ಕಷ್ಟು ಪರಿಜ್ಞಾನವೂ ಬೆಳೆದಮೇಲೆ ಆ ಬಗೆಯ ಚೈತನ್ಯತೋರಿತು. ಎಲಿಸಬೆತ್‌ರಾಣಿಯ ಕಡೆಗಾಲದವರೆಗೆ ಪಾರ್ಲಿಮೆಂಟಿನವರು ಈಬಗೆಯ ಧೈರ್ಯವನ್ನು ವಹಿಸಲಿಲ್ಲ. ಎಷ್ಟು ಅಕ್ರಮದಿಂದ ರಾಜರು ಹಣವನ್ನೆತ್ತುತ್ತಿದ್ದರೂ, ಎಷ್ಟು ಸ್ವಾರ್ಥದಿಂದ ಪ್ರಭುಗಳು ಕೆಲಸಕಾರ್ಯಗಳನ್ನು ನಡೆಸಿದರೂ ಸಭಿಕರು ಸುಮ್ಮನಿರುತ್ತಿದ್ದರು. ಮತವಿಷಯದಲ್ಲಿ ಪ್ರಭುಚಿತ್ತವನ್ನು ಅನುಸರಿಸಿಕೊಂಡಿದ್ದು ತಲೆಕೆಳಗುಮಾಡುವುದಕ್ಕೂ ಸಿದ್ಧರಾಗಿದ್ದರು. ರಾಜರು ತಮ್ಮಿಷ್ಟಪ್ರಕಾರ ಕೊಡಿಸಿದ ಪ್ರಕಟನೆಯೇ ಕಾನೂನಾಗಬಹುದೆಂದರು. ಸ್ಟಾರ್‌ಚೇಂಬರ್ ನ್ಯಾಯಸ್ಥಾನದಲ್ಲಿ ನಡೆಯುತ್ತಿದ್ದ ಅನ್ಯಾಯಗಳನ್ನೂ ಕ್ರೂರ ಹಿಂಸೆಗಳನ್ನೂ ವಿಚಾರಕ್ಕೆ ತಾರದಾದರು. ಪಟ್ಟದ ಸಂಬಂಧವಾಗಿ ರಾಜರು ಬರೆಸಿದ ಉಯಿಲನ್ನೂ ಸ್ವೀಕರಿಸಿದರು. ಟ್ಯೂಡರರತರುವಾಯ ಆಳಿದ ದೊರೆಗಳಕಾಲಕ್ಕೂ ಇದಕ್ಕೂ ಹೋಲಿಕೆಯೇ ಇಲ್ಲ.

**ಜನರ ನಮ್ರತೆ**

ಟ್ಯೂಡರ್‌ದೊರೆಗಳಕಾಲದಲ್ಲಿ ಇಂಗ್ಲಂಡಿನ ಪ್ರತ್ಯೇಕತೆಯು ಸಿದ್ಧಿಯಾಗಲು ರಾಜಾಧಿಕಾರವೃದ್ಧಿಯು ಸಹಾಯಕವಾಯಿತು. ರಿನೇಸಾನ್ಸ್ ಎಂಬುದರ ಪರಿಣಾಮಗಳು ಇಂಗ್ಲಂಡಿನಲ್ಲಿ ಟ್ಯೂಡರರಕಾಲದಲ್ಲಿ ತೋರಿ ವಿಶಿಷ್ಟಪ್ರಾಟೆಸ್ಟೆಂಟ್‌ಮತವು ಪ್ರತಿಷ್ಠೆಯಾಯಿತು. ಆ ಬಗೆಯ ಮತವು ಮತ್ತಾವದೇಶದಲ್ಲಿಯೂ ತೋರಿಕೊಳ್ಳಲಿಲ್ಲ. ಆದ್ದರಿಂದ ಅದರಿಂದಲೂ ಇಂಗ್ಲಿಷರವೈಶಿಷ್ಟ್ಯವು ಬಲಗೊಂಡಿತು. 7ನೆಹೆನ್ರಿ ಮತ್ತು 8ನೆಹೆನ್ರಿಕಾಲದಲ್ಲಿ ಲ್ಯಾಟಿನ್‌ಭಾಷೆಗೇ ಗೌರವ. ಮೋರನು ತನ್ನಪುಸ್ತಕವನ್ನು ಬರೆದುದು ಲ್ಯಾಟಿನ್ನಿನಲ್ಲಿ. ಆದರೆ ಸ್ಪೆನ್ಸರ್‌ಷೇಕ್ಸ್‌ಪಿಯರುಗಳು ಬರೆದುದು ಇಂಗ್ಲಿಷಿ

**ಇಂಗ್ಲಿಷ್ ಭಾಷೆ**

ನಲ್ಲಿ. ಎಲಿಸಬೆತ್‌ಕಾಲಕ್ಕೆ ಇಂಗ್ಲಿಷ್‌ಭಾಷೆಗೆ ಗೌರವಬಂದಿತ್ತು. ಮತಾಚಾರಗಳಲ್ಲಿ ಇಂಗ್ಲಿಷಿನ ಉಪಯೋಗವು ಮೊದಲಾದಂದಿನಿಂದ ಇಂಗ್ಲಿಷಿಗೆ ಹಿಂದಿಲ್ಲದ ಪ್ರಾಶಸ್ತ್ಯಬಂದಿತು. ಬೈಬಲ್ಲಿನ ಭಾಷಾಂತರವೂ ಷೇಕ್ಸ್‌ಪಿಯರನ ನಾಟಕಗಳೂ ಆ ಭಾಷೆಯಲ್ಲಿ ಹುಟ್ಟಿದ* ಮೇಲೆ ಅಸಾಧಾರಣಚೈತನ್ಯವನ್ನು ಅದಕ್ಕೆರೆದಂತಾಯಿತು.

ಜನಸಾಮಾನ್ಯರಜೀವನದಲ್ಲಿ ತೋರಿದ ನೆಮ್ಮದಿಯನ್ನೂ ಈ ಕಾಲದ ಮುಖ್ಯ ಲಕ್ಷಣವಾಗಿ ಎಣಿಸಬೇಕು. ಹಿಂದಿನಕಾಲದಲ್ಲಿ ಐಶ್ವರ್ಯವೆಂಬುದು ಶ್ರೀಮಂತರಿಗೋ ಚರ್ಚುಗಳಿಗೋ ಸೇರಿತ್ತು. ಮಠಮಂದಿರಗಳು ಹಾಳಾದಮೇಲೆ ನಿರುದ್ಯೋಗಕ್ಕೆ ಸಿಕ್ಕಿ ನರಳಿದಜನರು ಇತರ ಜೀವನೋಪಾಯಗಳನ್ನು ಹುಡುಕಿಕೊಂಡರು. ನಾವಿಕತನದಲ್ಲಿ ಅನೇಕರು ತೊಡಗಿದರು; ವ್ಯಾಪಾರಸಾಹಸದಲ್ಲಿ ಪ್ರವೇಶಿಸಿದರು. ಹಿಂದಿನಕಾಲದಲ್ಲಿ ವರ್ತಕಜೀವನದಲ್ಲಿ ಭೂಮಧ್ಯಸಮುದ್ರದ ತೀರಗಳಿಂದ ಸರಕನ್ನು ತಂದಿಟ್ಟುಕೊಳ್ಳುವುದೇ ಸಾಹಸವಾಗಿತ್ತು. ಟ್ಯೂಡರ್‌ಕಾಲದಲ್ಲಿ ವರ್ತಕರು ಅಲ್ಲಲ್ಲಿ ಕೂಟಗಳನ್ನು (Joint Stock Companies) ಕಟ್ಟಿಕೊಂಡರು. ಭೂಮಧ್ಯಸಮುದ್ರದಭಾಗಗಳಲ್ಲದೆ ರಷ್ಯಾದೇಶಕ್ಕೂ ಭಾರತವರ್ಷಕ್ಕೂ ವ್ಯಾಪಾರಕ್ಕಾಗಿ ಹೊರಟರು. ಸಾಹಸಪಟ್ಟಷ್ಟೂ ಪ್ರಯೋಜನ ತೋರಿತು. ಆಫ್ರಿಕಾತೀರದಿಂದ ನೀಗ್ರೋಜನರನ್ನು ದನ ಹೇರಿದಂತೆ ಹೇರಿಕೊಂಡು ವೆಸ್ಟಿಂಡೀಸ್‌ದ್ವೀಪಗಳಿಗೆ ಸಾಗಿಸಿ ಅಲ್ಲಿ ವ್ಯಾಜ್ಯದವ್ಯಾಪಾರ ಮಾಡಿಸುವುದೇನು, ಅಟ್ಲಾಂಟಿಕ್‌ಸಾಗರದಲ್ಲಿ ಹೊಂಚಿದ್ದು ಸಿಕ್ಕಿದ ಸ್ಪಾನಿಷ್‌ಹಡಗುಗಳನ್ನು ಧ್ವಂಸಮಾಡಿ ಲೂಟಿಹೊಡೆಯುವುದೇನು—ಕಳ್ಳತನ ದರೋಡೆಗಳು ಧರ್ಮವೆಂದು ಕಂಡುಬಂದು ವರ್ತಕರು ಅವುಗಳಿಗೆ ಬೆಂಬಲಕೊಟ್ಟರು. ವರ್ತಕಸಾಹಸಿಗಳಿಗೆ (Merchant Adventurers) ಒಳ್ಳೆಕಾಲವಾಗಿತ್ತು. ಈ ಸಾಹಸೋದ್ಯಮಗಳಿಂದ ದೇಶದಲ್ಲಿ ಐಶ್ವರ್ಯಸೇರಿತು. ವ್ಯವಸಾಯವು ಅಭಿವೃದ್ಧಿಯಾಯಿತು. ಹೊಸ ಉದ್ಯೋಗಗಳು ತೋರಿಕೊಂಡವು. ಜನಸಾಮಾನ್ಯರು ಪುಷ್ಟರಾದರು.

**ವರ್ತಕರ ಸಾಹಸ**

ಹಿಂದೆ ಕಾಣದಿದ್ದ ಭೋಗಭಾಗ್ಯಗಳನ್ನು ಅಭ್ಯಾಸದಲ್ಲಿಟ್ಟುಕೊಂಡರು. ತಲೆಕೆಳಗೆ ಮರದತುಂಡುಗಳನ್ನಿಟ್ಟುಕೊಂಡು ಜೊಂಡಿನಮೇಲೆ ಮಲಗುತ್ತಿದ್ದವರಿಗೆ ಈಗ ದಿಂಬುಗಳೂ ಹಾಸಿಗೆಗಳೂ ಅಭ್ಯಾಸವಾದವು. ಹೊಗೆಹೋಗುವುದಕ್ಕೆ ಚಾವಣಿಯಲ್ಲಿ ಒಂದು ಡೊಗರನ್ನು ಹೊಡೆಯುತ್ತಿದ್ದವರು ಅದಕ್ಕಾಗಿ ಹೊಗೆಸೂರುಮಾಳಿಗೆ ಕಟ್ಟಿಸಿಕೊಳ್ಳಲು ತೊಡಗಿದರು. ಹಿಂದಿನಕಾಲದಲ್ಲಿ ವಾರಕ್ಕೆರಡುಮೂರುಹೊತ್ತು ಮಾಂಸ ದೊರೆತರೆ ಸಾಕೆಂದ ಜನರು ಈಗ ನಿತ್ಯವೂ ನಿರಾತಂಕರಾಗಿ ಮಾಂಸಭಕ್ಷಣೆಗೆ ತೊಡಗಿದರು.

**ಭೋಗಭಾಗ್ಯಗಳು**

*ಇಂಗ್ಲಿಷ್‌ಭಾಷೆಯೆಂದರೆ ಮೂರುಪಾಲು ಬೈಬಲು, ಒಂದುಪಾಲು ಷೇಕ್ಸ್‌ಪಿಯರ್ ಎಂದ ಗಾಂಧೀವಚನವನ್ನು ಜ್ಞಾಪಕಕ್ಕೆ ತಂದುಕೊಳ್ಳಬಹುದು.

ಮಾಂಸಭಕ್ಷಣೆಯ ವೈಪರೀತ್ಯದಿಂದ ಬೆಸ್ತರಜೀವನಕ್ಕೆ ಲೋಪಬರುವುದೆಂಬ ಶಂಕೆ ತೋರಿ ಸರ್ಕಾರದವರು ಜನರಿಗೆ *ಶುಕ್ರವಾರದ 'ಉಪವಾಸ'ವನ್ನು ಬಲವಂತಪಡಿಸಲು ಪ್ರಯತ್ನಿಸಬೇಕಾಯಿತು. ಬಟ್ಟೆಬರೆಗಳಲ್ಲಿಯೂ ಹೊಸನೆಮ್ಮದಿಯಿಂದ ವಿಪರೀತಗಳು ತೋರಿದವು. ಸ್ತ್ರೀಪುರುಷರಿಬ್ಬರೂ ವಿಚಿತ್ರವಾದ ಒಯ್ಯಾರಬೆಳೆಸಿದರು. ಎರಡುಮೂರು ಬಟ್ಟೆಗಳನ್ನಾದರೂ ಉಪಯೋಗಿಸಿ ಅಂಗಿ ಹೊಲಿದು ಅದಕ್ಕೆ ರತ್ನಾಭರಣಗಳನ್ನು ಸೆಕ್ಕಿಸುವುದು ಗಂಡಸಿಗಾದರೆ ಹೆಂಗಸು ದೊಡ್ಡ ಬುಟ್ಟಿಯಂತಹದನ್ನು ಕಟ್ಟಿಕೊಂಡು ಅದರಮೇಲೆ ಲಂಗಾ ಧರಿಸುವುದಲ್ಲದೆ ಕುತ್ತಿಗೆಗೆ ವಿಶಾಲವಾದ ಚಕ್ರವನ್ನು ಧರಿಸುತ್ತಿದ್ದಳು. ಇಂದಿನ ಇಂಗ್ಲಿಷರೇ ಅದನ್ನು ಸ್ಮರಿಸಿ ನಗುವರು.

ಟ್ಯೂಡರ್ ಕಾಲದ ವೀರರೆಂದರೆ ಇಂಗ್ಲಿಷರ ಸ್ಮರಣೆಯಲ್ಲಿ ಸರ್ ಫ್ರಾನ್ಸಿಸ್‌ಡ್ರೇಕ್, ಸರ್ ವಾಲ್ಟರ್‌ರಾಲಿ, ಸರ್ ಫಿಲಿಪ್ ಸಿಡ್ನಿ‡ ಮುಂತಾದವರು ಮುಖ್ಯರು. ಡ್ರೇಕ್ ಮುಂತಾದವರು ದರೋಡೆಯಲ್ಲಿ ಪ್ರವೀಣರಾಗಿದ್ದು ಕ್ರೌರ್ಯದಲ್ಲಿ ಪಂಡಿತರಾಗಿದ್ದುದು ನಿಜ. ಸ್ಪಾನಿಷ್ ಜನರು ಅವನನ್ನು ಪಿಶಾಚಿಯೆಂದೇ ಭಾವಿಸಿದ್ದರು. ಆದರೆ ಡ್ರೇಕನ ಸಾಹಸವೆಷ್ಟು, ಧೈರ್ಯವೆಷ್ಟು, ದೇಶಭಕ್ತಿಯೆಷ್ಟು! ಸಾವಿನ ಹೆದರಿಕೆಯನ್ನು ಇಂಗ್ಲಿಷರಲ್ಲಿ ಮಾಯಗೊಳಿಸಿದವನು ಡ್ರೇಕ್. ಹೊಡೆದಾಡುತ್ತ ಸಾಯುವುದು ಗೌರವಕರವೆಂಬ ಪಾಠವೂ ಜಗತ್ತಿನಲ್ಲಿ ನುಗ್ಗಿ ಸಾಹಸಗೈದು ಮೇಲ್ಮೆ ಕಟ್ಟಬೇಕೆಂಬ ಪಾಠವೂ ಸಮುದ್ರವೇ ತಮ್ಮ ತಾಯಿಯೆಂಬ ಹೆಮ್ಮೆಯೂ ಇಂಗ್ಲಿಷರಿಗೆ ಆ ಕಡಲ್ಗಳ್ಳರಿಂದ ಒದಗಿಬಂತು. ಹೋರಾಟಸಾವುಗಳಿಲ್ಲದ ಕಥೆಯಾಗಲಿ ನಾಟಕವಾಗಲಿ ಆಗಿನ ಜನರಿಗೆ ರುಚಿಸದಾಗಿತ್ತು. ಅಂತಹ ಜನರನ್ನು ವಿನೋದಗೊಳಿಸಲು ತೊಡಗಿ ಷೇಕ್ಸ್‌ಪಿಯರನು ತನ್ನ ನಾಟಕಗಳಲ್ಲಿ ಸಾವನ್ನು ಕಣ್ಣೆದುರಿಗೆ ಕಾಣಿಸಿ ಪುನಃಪುನಃ ದೇಶಭಕ್ತಿಯನ್ನು ಉದ್ರೇಕಿಸಿದವನು. ಇಂಗ್ಲಿಷಿನವರಲ್ಲದವರಿಗೂ ಟ್ಯೂಡರ್ ಕಾಲ

**ಇಂಗ್ಲಿಷ್‌ವೀರರು**

---

*ಶುಕ್ರವಾರ ಪವಿತ್ರದಿನ. ಆ ಹೊತ್ತು ಉಪವಾಸಮಾಡದಿದ್ದರೂ ಮಾಂಸತ್ಯಾಗಮಾಡಬೇಕೆಂದು ನಿಯಮ. ಮೀನು ಮಾಂಸವಲ್ಲವೆಂಬ ಅನುಕೂಲಸಿಂಧು ಹೊರಟಿತ್ತು. ಆದ್ದರಿಂದ ಶುಕ್ರವಾರ ಮೀನನ್ನು ತಿನ್ನಬೇಕೆಂಬುದು ಸದಾಚಾರವಾಯಿತು.

‡ಸರ್ ಫಿಲಿಪ್‌ಸಿಡ್ನಿಯು ಲೆಸ್ಟರಿನ ಶ್ರೀಮಂತನೊಡನೆ ಸೇರಿ ನೆದರ್ಲಂಡ್ಸಿನಲ್ಲಿ ಯುದ್ಧಮಾಡಿ ಕದನದಲ್ಲಿ ಗಾಯಪಟ್ಟು ಅಲ್ಲಿಯೇ ಮಡಿದನು. ಪ್ರಾಣಹೋಗುವವೇಳೆಯಲ್ಲಿ ಬಾಯಾರಿಕೆಯಿಂದ ಬಳಲಿ ನೀರನ್ನು ತರಿಸಿಕೊಂಡು ಕುಡಿಯುವಾಗ ಪಕ್ಕದಲ್ಲಿ ತನ್ನಂತೆಯೇ ಬಿದ್ದಿದ್ದ ಸಾಮಾನ್ಯಸೈನಿಕನೊಬ್ಬನು ನೀರಿನಬಟ್ಟಲನ್ನು ತದೇಕದೃಷ್ಟಿಯಿಂದ ಕಾಣುತ್ತಿದ್ದುದನ್ನು ನೋಡಿ "ನನಗಿಂತಲೂ ನಿನ್ನಅಗತ್ಯ ದೊಡ್ಡದು" ಎನ್ನುತ್ತ ತನ್ನನೀರನ್ನು ಅವನಿಗೆ ಕೊಟ್ಟನು. ಉದಾರರೀತಿಯ ಸ್ವಾರ್ಥತ್ಯಾಗಕ್ಕೆ ಸಿಡ್ನಿಯು ಆದರ್ಶನಾಗಿರುವನು.

ದಲ್ಲಿ ಬದುಕಿದ್ದ ಇಂಗ್ಲಿಷಿನವರಲ್ಲಿ ಷೇಕ್ಸ್‌ಪಿಯರ್ ದೊಡ್ಡವನು. ಎಲಿಸಬೆತ್ ಕಾಲದಲ್ಲಿ ಹರೆಯುತನದಲ್ಲಿದ್ದು ಆತನು ಮುಂದೆ ಆಳಿದ ಜೇಮ್ಸ್‌ದೊರೆಯಕಾಲದಲ್ಲಿ ಅನುಭವಶಾಲಿಯಾದನು.

ಒಟ್ಟಿನಲ್ಲಿ ಇಂಗ್ಲಂಡೆಂಬುದನ್ನು ಪ್ರತ್ಯೇಕಗೊಳಿಸಿ ಭದ್ರಪಡಿಸಿ ದೊರೆಗಳು ನೆಮ್ಮದಿಯ ನೆಲೆಗೆ ಆಸ್ಪದಕೊಟ್ಟರು. ಆಧುನಿಕಕಾಲವೆಂಬುದು ಟ್ಯೂಡರವಂಶದವರ ಕಾಲದಲ್ಲಿ ಮೊದಲಾಯಿತೆಂದು ಎಲ್ಲರೂ ಒಪ್ಪುವುದಿಲ್ಲ. ಆಧುನಿಕಕಾಲವೆಂಬುದರ ಭಾವನೆಯಲ್ಲಿ ಮತಸಹಿಷ್ಣುತೆಯನ್ನೋ ಸಾಮಾಜಿಕನ್ಯಾಯವನ್ನೋ ಜನತೆಯ ಸ್ವಾತಂತ್ರ್ಯವನ್ನೋ ಎಣಿಸುವುದಾದರೆ ಯಾರೂ ಒಪ್ಪಲಾಗುವುದಿಲ್ಲ. ಆದರೆ ಹಿಂದಿನ ಮೌಢ್ಯವು ತೊಲಗಿ ವಿಚಾರಪರತೆಗೆ ಅವಕಾಶವುಂಟಾದುದು ಅಲ್ಪವಲ್ಲ. ಇತರರಲ್ಲಿ ಕಲೆತುಹೋಗಿದ್ದವರು ವೈಶಿಷ್ಟ್ಯವನ್ನು ಕಟ್ಟಿಕೊಂಡುದೂ ಸಣ್ಣ ವಿಷಯವಲ್ಲ. ಆದ್ದರಿಂದ ಟ್ಯೂಡರ್‌ದೊರೆಗಳ ಕಾಲವೆಂಬುದು ಮಹಿಮೆಯಿಂದ ಕೂಡಿಯೇ ನಡೆಯಿತು.

ಎಲಿಸಬೆತ್‌ರಾಣಿಯಕಾಲದಲ್ಲಿ ಇಂಗ್ಲಂಡಿನ ಜನಸಂಖ್ಯೆ ಸುಮಾರು 50 ಲಕ್ಷ ಮಾತ್ರ. 20ನೆ ಶತಮಾನದ ಒಂದು ದೊಡ್ಡ ಪಟ್ಟಣದಲ್ಲಿರುವಷ್ಟು ಮಾತ್ರ. ಆ ಜನರು ಟ್ಯೂಡರ್‌ದೊರೆಗಳಲ್ಲಿ ಭಯಭಕ್ತಿಗಳಿಂದ ವರ್ತಿಸುತಲಿದ್ದು ನೆಮ್ಮದಿಪಡೆದ ಬಳಿಕ ತಮ್ಮನ್ನಾಳಲು ತೊಡಗಿದ ಸ್ಟೂಯರ್ಟ್‌ವಂಶದ ದೊರೆಗಳಲ್ಲಿ ಹೇಗೆ ನಡೆದುಕೊಂಡರೋ ಮುಂದೆ ಕಾಣಬೇಕು.

---

# ಸ್ಟ್ಯುಯರ್ಟ್ ವಂಶ



**ಹಿರೀ ಜೇಮ್ಸ್** ಮ। ಡೆನ್ಮಾರ್ಕಿನ ಆನ್ (1603—1625)
(1)
(3)
(2)
ಹೆನ್ರಿ
(1612ರಲ್ಲಿ ಸಾವು)
**ಹಿರೀ ಚಾರ್ಲ್ಸ್**
(1625—1649)
ಎಲಿಸಬೆತ್ ಮ। ಫ್ರೆಡರಿಕ್
**2ನೆ ಚಾರ್ಲ್ಸ್** ಮ। ಬ್ರಗಾನ್ಸದ
(1660—1685)
ಕಥರೀನ್
**2ನೆ ಜೇಮ್ಸ್**
1685—1688
(1)ಮ।ಆನ್ ಹೈಡ್
(2)ಮ।
ಮೊಡೇನದ
ಮೇರಿ
ರೂಪರ್ಟ್
ಮಾರಿಸ್
ಸೋಫಿಯ
ಮ। ಹಾನೊವರ್
ಸಂಸ್ಥಾನಿಕ
ಮೇರಿ,
ಮ। ಆರೆಂಜಿನ ವಿಲಿಯಂ
**3ನೆ ವಿಲಿಯಂ,** ಮ। **ಮೇರಿ**
(1689-1702)
1694ರಲ್ಲಿ
ಸಾವು
**ಆನ್**
(1702-1714)
ಜೇಮ್ಸ್ ಎಡ್ವರ್ಡ್
(1688—1765)
ಹಿರೀ ವಾರಸುದಾರ
**ಹಿರೀ ಜಾರ್ಜ್**
(1714-1727)
ಚಾರ್ಲ್ಸ್ ಎಡ್ವರ್ಡ್
ಕಿರೀ ವಾರಸುದಾರ
(1720—1788)
**2ನೆ ಜಾರ್ಜ್**
(1727-1760)

# ಸ್ಟ್ಯೂಯರ್ಟ್ ವಂಶ

## ಹಿರೇ ಜೇಮ್ಸ್ (1603—1625)

ಜನನ 1566 ; ಡೆನ್ಮಾರ್ಕಿನ ಆನಳೊಂದಿಗೆ ವಿವಾಹ 1589

### ಸಮಕಾಲಿಕ ಪ್ರಭುಗಳು

| ಫ್ರಾನ್ಸ್ | ಸ್ಪೈನ್ | ಸಾಮ್ರಾಜ್ಯ | ಸ್ವೀಡನ್ |
|---|---|---|---|
| 4ನೆ ಹೆನ್ರಿ (1589—1610) | 3ನೆ ಫಿಲಿಪ್ (1598—1621) | 2ನೆ ರುಡಾಲ್ಫ್ (1576—1612) | 9ನೆ ಚಾರ್ಲ್ಸ್ (1604—1611) |
| | | ಮಥಯಾಸ್ (1612—1619) | ಗಸ್ಟೇವಸ್ ಅಡಾಲ್ಫಸ್ (1611—1632) |
| 13ನೆ ಲೂಯಿ (1610—1643) | 4ನೆ ಫಿಲಿಪ್ (1621—1665) | 2ನೆ ಫರ್ಡಿನೆಂಡ್ (1619—1637) | |

ಎಲಿಸಬೆತ್‌ರಾಣಿ ಸತ್ತಾಗ ಸ್ಕಾಟ್ಲೆಂಡಿನ 6ನೆ ಜೇಮ್ಸನೇ ಇಂಗ್ಲೆಂಡಿಗೂ ದೊರೆಯಾಗತಕ್ಕದ್ದೆಂದು ಗೊತ್ತಾಯಿತು. ಈ ಜೇಮ್ಸ್ ಇಂಗ್ಲೆಂಡಿನಲ್ಲಿ 1ನೆ ಜೇಮ್ಸ್ ಎನಿಸಿ ಸ್ಟ್ಯೂಯರ್ಟ್‌ವಂಶವನ್ನು ಸ್ಥಾಪಿಸಿದ ದೊರೆ. ಮೇರಿಸ್ಟ್ಯೂಯರ್ಟ್‌ಮಗನಾದುದರಿಂದ ಇಂಗ್ಲೆಂಡ್‌ಸ್ಕಾಟ್ಲೆಂಡುಗಳೆರಡಕ್ಕೂ ರಾಜನಾಗುವ ಬಾಂಧವ್ಯದ ಹಕ್ಕು ಆತನಿಗಿತ್ತು. 7ನೆ ಹೆನ್ರಿ ತನ್ನ ಹಿರೇಮಗಳಮದುವೆನಡೆಸಿದಾಗ ಮಾಡಿದ ದೂರಾಲೋಚನೆ ಫಲಿಸಿದಂತಾಯಿತು.

1603ರಿಂದ 1624ರವರೆಗೆ ಆಳಿದ ಜೇಮ್ಸ್ ವಿದ್ವಾಂಸನೆನಿಸಿದ್ದನು. ಚಿಕ್ಕ ವಯಸ್ಸಿನಲ್ಲಿಯೇ ಲ್ಯಾಟಿನ್‌ಫ್ರೆಂಚ್‌ಭಾಷೆಗಳಲ್ಲಿ ಪಾಂಡಿತ್ಯಪಡೆದಿದ್ದು ಬಲುಜಾಣನೆನಿಸಿದ್ದನು. ವಯಸ್ಕನಾದಮೇಲೆ ಓದುಬರಹಗಳಲ್ಲಿ ಆತನಿಗೆ ಆಸಕ್ತಿಹೆಚ್ಚು. ಮತವಿಚಾರಗಳಲ್ಲಿಯೂ ಅನ್ಯದೇಶಗಳಸಂಬಂಧಸಂಧಾನಗಳಲ್ಲಿಯೂ ಒಳ್ಳೆ ಅರಿವುಳ್ಳವನಾಗಿದ್ದನು. ಅಸಾಮಾನ್ಯಜ್ಞಾನವಂತನಾಗಿ ತನ್ನ ಕಾಲಕ್ಕೆ ಮೀರಿದ ಆಲೋಚನೆಗಳನ್ನು ಬೆಳೆಸಿದ ದೊರೆಯಾತನು. ರಾಜ್ಯಗಳು ಪರಸ್ಪರಯುದ್ಧಗಳಿಂದಲೇ

**ಸ್ವಭಾವ**

ವ್ಯಾಜ್ಯಗಳನ್ನು ಇತ್ಯರ್ಥಮಾಡುವುದರ ಬದಲು ಚರ್ಚೆಗಳಿಂದ ನಡೆಸಬಹುದೆಂತಲೂ ಮತಭೇದವುಳ್ಳ ಸ್ಥಿತಿಯಲ್ಲಿ ಪರಸ್ಪರಸಹನವನ್ನು ಬೆಳೆಸಬೇಕೆಂತಲೂ ಒಂದೇದ್ವೀಪವಾದ ಸ್ಕಾಟ್ಲೆಂಡ್‌ಇಂಗ್ಲೆಂಡ್ ಒಟ್ಟುಗೂಡಿ ಒಂದೇ ರಾಜ್ಯವಾಗಬೇಕೆಂತಲೂ ಆತನ

ಅಭಿಪ್ರಾಯ. ಈ ಅಭಿಪ್ರಾಯಗಳು ಆ ಕಾಲದ ಜನರಿಗೆ ಮಾತ್ರ ಒಪ್ಪಲಿಲ್ಲ. ಒಪ್ಪುವಂತೆ ಮಾಡುವ ಯುಕ್ತಿಯಂತೂ ಜೇಮ್ಸ್‌ನಲ್ಲಿ ಲೇಶವೂ ಇರಲಿಲ್ಲ. ಬುದ್ಧಿವಂತನಾದ ದೊರೆಹೌದು; ಆದರೆ ಸೋಮಾರಿತನ ಹೇಡಿತನಗಳ ಜೊತೆಗೆ ಈ ದೊರೆಯಲ್ಲಿ ಅತಿಜಲ್ಪಕತನವೂ ಅಸಹನವೂ ತುಳುಕಾಡುತ್ತಿದ್ದವು. ಅತ್ಯಹಂಕಾರದೊಂದಿಗೆ ಮೊಂಡುತನವೂ ಸೇರಿದ್ದ ಈ ದೊರೆಗೆ ದೊರೆತನದವಿಷಯದಲ್ಲಿ ಮಿತಿಮೀರಿದ ದರ್ಪ ಪ್ರತಿಷ್ಠೆಗಳಿದ್ದವು. ದೊರೆತನವೆಂಬುದು ದೈವದತ್ತವಾದ ಪದವಿಯೆಂದೂ ಜನರು ದೊರೆಗಳ ಮಾತಿಗೆ ಸದಾತಲೆಬಾಗಿ ವರ್ತಿಸತಕ್ಕುದೆಂದೂ ಅಭಿಪ್ರಾಯಪಡುತ್ತ ಪಾರ್ಲಿಮೆಂಟ್‌ಸಭಿಕರ ವಿರೋಧವನ್ನು ರೇಗಿಸುವವನಾದನು. ಮತವ್ಯವಸ್ಥೆಯಲ್ಲಿ ರಾಜನಶ್ರೇಷ್ಠಾಧಿಕಾರವಿರತಕ್ಕುದೆಂದು ವಾದಿಸಿ ರೋಮನ್‌ಕ್ಯಾಥಲಿಕ್ ಪ್ಯೂರಿಟನ್ ಪಂಗಡಗಳವರ ಹಗೆತನವನ್ನು ಸಂಪಾದಿಸಿಕೊಂಡನು. ವಿದ್ವಾಂಸನಾಗಿ ಬುದ್ಧಿವಂತನಾಗಿದ್ದರೂ ಜನರ ವಿಶ್ವಾಸವನ್ನು ಗೆದ್ದುಕೊಳ್ಳುವ ಯುಕ್ತಿಯಾಗಲಿ ತನ್ನ ಪದವಿಗೆ ತಕ್ಕ ಗಂಭೀರವಾಗಲಿ ಇಲ್ಲದೆ ತನ್ನ ಆಳಿಕೆಯನ್ನು ಕೆಡಿಸಿಕೊಂಡನು. ಈತನನ್ನು ಇಂಗ್ಲಂಡಿನ ಮುಹಮ್ಮದ್‌ಬಿನ್‌ತಘಲಖನೆಂದರೂ ಎನ್ನಬಹುದು. ಸಮಕಾಲಿಕ ಫರಾನ್ಸೀಮಂತ್ರಿಯು ಜೇಮ್ಸ್‌ದೊರೆಯ ಗುಣದೋಷಗಳನ್ನು ತಿಳಿದು "ಪಂಡಿತನಾದ ಅವಿವೇಕಿ"ಯೆಂದು ಕರೆದನು.

**ಸೆಸಿಲ್‌ಮಂತ್ರಿ**

ಜೇಮ್ಸ್ ಪಟ್ಟವನ್ನೇರಿದಾಗ **ಸರ್ ರಾಬರ್ಟ್ ಸೆಸಿಲ್** (Sir Robert Cecil) ಎಂಬಾತನೇ ಮುಖ್ಯ ಮಂತ್ರಿಯಾಗಿದ್ದನು. ಸ್ಪೈನಿನೊಂದಿಗೆ ಹೊಡೆದಾಟ ನಿಂತಿದ್ದಾಗ್ಗೂ ಯಾವ ಒಪ್ಪಂದವೂ ನಡೆದಿರಲಿಲ್ಲ. ಸೆಸಿಲ್ ಮುಂತಾದವರು ಒಪ್ಪಂದಕ್ಕಾಸೆಪಡುತ್ತಿದ್ದರು; ಅವರಿಗೆ ಪ್ರತಿಯಾಗಿ **ರಾಲಿ** (Raleigh) ಮುಂತಾದವರು ಯುದ್ಧವನ್ನು ಮುಂದೆಯೂ ನಡೆಸಬೇಕೆನ್ನುತ್ತಿದ್ದರು. ಯುದ್ಧಬೇಕೆಂಬಪಕ್ಷಕ್ಕೆ ನಾಯಕರಾದವರು ಸೆಸಿಲ್ಲನನ್ನು ಅಧಿಕಾರದಿಂದ ತಪ್ಪಿಸುವುದಕ್ಕೂ ಅವಶ್ಯತೋರಿದರೆ ಜೇಮ್ಸಿಗೆ ಪಟ್ಟತಪ್ಪಿಸುವುದಕ್ಕೂ ಒಂದು ಪಿತೂರಿಕಟ್ಟಿದರು. ಈ ಪಿತೂರಿ ತಯಾರಾಗುತ್ತಿದ್ದ ಸಮಯದಲ್ಲಿ ರೋಮನ್‌ಕ್ಯಾಥಲಿಕ್ಕರು ಇನ್ನೊಂದು ಪಿತೂರಿಯನ್ನು ಕಟ್ಟಿದರು. ಪಟ್ಟವನ್ನೇರಿದತಕ್ಷಣವೇ ಮೇರಿಸ್ಟೂಯರ್ಟಳ ಕುಮಾರನು ತಮ್ಮ ದಂಡನೆಗಾಗಿದ್ದ

**ಪಿತೂರಿಗಳು**

ಕಾನೂನುಗಳನ್ನು ವಜಾಮಾಡುವನೆಂದು ಅವರು ಬೆಳೆಸಿದ್ದ ಆಸೆಯು ಮುರಿದುದೇ ಅವರ ಅಸಮಾಧಾನಕ್ಕೆ ಕಾರಣ. ಎರಡು ಪಿತೂರಿಗಳನ್ನೂ ಹೊಂಚಿನೋಡುತ್ತಿದ್ದ ಸೆಸಿಲ್ ಸಮಯಕಾದಿದ್ದು ಮುಖಂಡರನ್ನು ದಸ್ತಗಿರಿಮಾಡಿಸಿ ಸೆರೆಮನೆಗೆ ಹಾಕಿಸಿದನು. ಕೆಲವರಿಗೆ ಫಾಸಿಶಿಕ್ಷೆಯೂ ಆಯಿತು. **ಮೈನ್ ಪಿತೂರಿ** (Main Plot) **ಬೈ ಪಿತೂರಿ** (Bye Plot)ಗಳೆಂದು ಹೆಸರುಪಡೆದ ಇವೆರಡೂ ಸೆಸಿಲ್ಲನ ಸಾಮರ್ಥ್ಯದಿಂದ ಹಾಳಾದವು.

ಪ್ಯೂರಿಟನ್‌ಪಂಗಡದವರು ಎಲಿಸಬೆದ್ರಾಣಿಯ ಕಾಲದಲ್ಲಿ ಹಿಂಸೆಗೆ ಗುರಿಯಾಗಿದ್ದರಷ್ಟೆ! ಪ್ರೆಸ್ಬಿಟೇರಿಯನ್‌ಪಂಥದವರಮಧ್ಯೆ ದೊಡ್ಡವನಾಗಿದ್ದವನೊರೆ ಪಟ್ಟಕ್ಕೆ ಬಂದುದರಿಂದ ಆ ಪಂಗಡದವರು ತಮಗನುಕೂಲವಾದೀತೆಂದು ನಿರೀಕ್ಷಿಸಿದರು. ಆ ಪಂಗಡದವರು **ಮಿಲ್ಲೆನರಿ ಪೆಟಿಷನ್** (Millenary Petition) ಎಂಬ ಹೆಸರಿನಿಂದ ಸುಮಾರು 800 ಪಾದ್ರಿಗಳು ಸಹಿಹಾಕಿದ್ದ ಅರ್ಜಿಯನ್ನು 1603ರಲ್ಲಿ ಒಪ್ಪಿಸಿದರು. ಚರ್ಚಿನ ಆಚಾರಗಳಲ್ಲಿ ಬದಲಾವಣೆಗಳಾಗಬೇಕೆಂಬುದು ಅವರ ಬಿನ್ನಹ. ಇವುಗಳೆಲ್ಲವನ್ನೂ ಚರ್ಚಿಸತಕ್ಕುದೆಂದು ದೊರೆಯು 1604ರಲ್ಲಿ **ಹ್ಯಾಂಪ್ಟನ್ ಕೋರ್ಟ್** ಎಂಬಲ್ಲಿ ಪಾದ್ರಿಗಳ ಸಮ್ಮೇಳನ (Hampton Court Conference)ವನ್ನು ಸೇರಿಸಿದನು. ಆದರೆ ವಾದವಿವಾದಗಳು ಸ್ವಲ್ಪದೂರ ನಡೆಯುವಷ್ಟರಲ್ಲಿಯೇ 'ಪ್ರೆಸ್ಬಿಟರ್' ಎಂಬ ಶಬ್ದವನ್ನು ಕೇಳಿ ದೊರೆಯು ಸಿಟ್ಟಾಗಿ "ಬಿಷಪ್ಪಿಲ್ಲದೆಹೋದರೆ ದೊರೆಯೇ ಇಲ್ಲದಂತೆ" (No Bishop, No King) ಎಂದು ಒದರಿಬಿಟ್ಟು ಸಭಾತ್ಯಾಗಮಾಡಿಬಿಟ್ಟನು. ರಾಜಾಧಿಕಾರಕ್ಕೆ ಲೋಪತೋರೀತೆಂಬ ಶಂಕೆ ಹುಟ್ಟಿದರೆ ಸಾಕು ದೊರೆಗೆ ಕೋಪ. ಹಾಗಿದ್ದಲ್ಲಿ "ಬಿಷಪ್ಪರು ಬೇಡ"ವೆನ್ನುತ್ತಿದ್ದ ಪಂಗಡದವರಿಗೆ ಜೇಮ್ಸ್ ವಿರೋಧಿಯೇ ಆದನು.

**ಪ್ಯೂರಿಟನ್ನರ ಪ್ರಯತ್ನ**

1604ರಲ್ಲಿ **ಮೊದಲನೆ ಪಾರ್ಲಿಮೆಂಟ್‌ಸಭೆ**ಗೂಡಿ 1611ರವರೆಗಿತ್ತು. ಮೊದಲಿನಲ್ಲಿಯೇ ವ್ಯಾಜ್ಯಗಳು ಹುಟ್ಟಿದವು. ಸಭಿಕರನ್ನು ಚುನಾಯಿಸಿ ಕಳುಹಿಸುವುದರಲ್ಲಿ ಯಾವುದೋಒಂದು ಸ್ಥಳದವರು ತಮ್ಮ ಪ್ರತಿನಿಧಿಯಾಗಿ ಒಬ್ಬ ದುಶ್ಚಾರಿತ್ರನನ್ನು ಆರಿಸಿ ಕಳುಹಿಸಿದರು. **ಗುಡ್ವಿನ್** (Goodwin) ಎಂಬ ಆ ಮನುಷ್ಯನು ಅಪರಾಧಕ್ಕಾಗಿ ಶಿಕ್ಷೆಯನ್ನನುಭವಿಸಿದ್ದನು. ಅಂಥವನು ಕಾಮನ್ಸ್ ಸಭಿಕರಲ್ಲೊಬ್ಬನಾಗುವುದೆಂದರೆ ಇತರರಿಗೆ ಸರಿದೋರಲಿಲ್ಲ. ಆಗ ದೊರೆಯು ಆ ಸ್ಥಳದವರಿಗೆ ಬೇರೊಬ್ಬನನ್ನು ಚುನಾಯಿಸತಕ್ಕುದೆನ್ನಲು ಕಾಮನ್ಸ್‌ಸಭಿಕರು ಜಗಳಕ್ಕೆ ನಿಂತರು. ಹಾಗೆ ಹೇಳಲು ದೊರೆಗೆ ಅಧಿಕಾರವಿಲ್ಲವೆಂದರು. ಹಿಂದಿನಕಾಲದಿಂದ ಸಭಿಕರ ಚುನಾವಣೆಯು ಸ್ವತಂತ್ರವಾಗಿ ನಡೆಯತಕ್ಕುದೆಂದೂ ರಾಜನಾದವನು ಆ ವಿಷಯದಲ್ಲಿ ತಲೆಹಾಕಬಾರದೆಂದೂ ಒತ್ತಿ ಹೇಳಿಬಿಟ್ಟರು. ಮತ್ತೊಮ್ಮೆ ಸಭಿಕರಲ್ಲೊಬ್ಬನಾಗಿದ್ದ **ಷರ್ಲಿ** (Shirley) ಎಂಬಾತನನ್ನು ಯಾವುದೋಕಾರಣದಿಂದ ರಾಜಾಧಿಕಾರಿಗಳು ಗಿರಫ್ದಾರಿ ಮಾಡಿದರು. ಆಗ ಸಭಿಕರೆಲ್ಲರೂಸೇರಿ "ಪಾರ್ಲಿಮೆಂಟ್‌ಸಭಿಕರನ್ನು ದಸ್ತಗಿರಿಮಾಡುವ ಅಧಿಕಾರ ರಾಜಾಧಿಕಾರಿಗಳಿಗಿಲ್ಲ"ವೆಂಬುದನ್ನು ಸ್ಥಾಪಿಸಿದರು. ಎರಡುಸಂದರ್ಭಗಳಲ್ಲಿಯೂ ಜೇಮ್ಸ್ ಆಡಿದ ಮಾತುಗಳರೀತಿಯು ಸಮಾಧಾನಕಾರಕವಾಗಿರಲಿಲ್ಲ.

**ಚುನಾವಣೆಯ ಸ್ವಾತಂತ್ರ್ಯ**

**ದಸ್ತಗಿರಿ ಸ್ವಾತಂತ್ರ್ಯ**

ಆದರಿಂದ ಸಭಿಕರಿಗೆ ವಿರೋಧಿಸುವ ಚರ್ಯೆಯೇ ಬಲಗೊಂಡಿತು. ಸ್ಕಾಟ್ಲೆಂಡ್ ಇಂಗ್ಲಂಡುಗಳು ಏಕರಾಜ್ಯವಾಗಿ ಎರಡುರಾಜ್ಯಗಳಜನರೂ ಸಮಾನವರ್ತಿಗಳಾಗ ಬೇಕೆಂದು ದೂರಾಲೋಚನೆಯುಳ್ಳ ದೊರೆಯು ಸೂಚಿಸಿದ್ದನು; ಆ ಯೋಚನೆಯು ಫಲಿಸದೆಹೋಯಿತು.

ಮತವ್ಯವಸ್ಥೆಯ ವಿಚಾರಗಳಲ್ಲಿಯೂ ದೊರೆಸಭಿಕರಿಗೆ ವಿರೋಧವೇ ತೋರಿತು. ಪರಸ್ಪರಸಹನವೇ ಸೂಕ್ತವೆಂಬ ಅಭಿಪ್ರಾಯವನ್ನು ಬೆಳೆಸಿದ್ದ ದೊರೆಯು ರೋಮನ್ ಕ್ಯಾಥಲಿಕ್ಕರನ್ನು ಮತಭೇದಕ್ಕಾಗಿ ದಂಡಿಸುವ ವಿಧಿಗಳನ್ನು ವಜಾಮಾಡುವ ಇಷ್ಟವುಳ್ಳವನಾಗಿದ್ದನು. ಸಭಿಕರಾದರೋ ಆ ಮಾತಿಗೆ ಕಿವಿಗೊಡದಾದರು. ಆದರ ಪರಿಣಾಮವಾಗಿ ರೋಮನ್‌ಕ್ಯಾಥಲಿಕ್‌ಪಂಗಡದವರು ನಿರಾಸೆಪಟ್ಟು ಪಿತೂರಿಕಟ್ಟಿದರು. **ಕಾಟಿಸ್ಬಿ** (Catesby) ಎಂಬ ಅವರ ಪ್ರಮುಖನು ಗೋಪ್ಯವಾದ ಏರ್ಪಾಟುಗಳನ್ನು ನಡೆಸಿ ನವೆಂಬರ್ 5ನೆ ತಾರೀಖಿನದಿನ ಶ್ರೀಮಂತ ಸಭಾಭವನದಲ್ಲಿ ಕಾಮನ್ಸ್‌ಸಭಿಕರೂ ರಾಜಬಂಧುಗಳೂ ಶ್ರೀಮಂತರೂ ಒಟ್ಟಾಗಿ ನೆರೆಯಬೇಕಾಗಿದ್ದಾಗ ಆ ಭವನದ ಕೆಳಗೆ ಹಳ್ಳತೋಡಿದ್ದು ಮದ್ದುತುಂಬಿ ಉಡಾಯಿಸಲು ಸನ್ನಾಹಮಾಡಿದ್ದನು. ಪಿತೂರಿಗಾರರಲ್ಲೊಬ್ಬನಿಗೆ ಶ್ರೀಮಂತನೊಬ್ಬನು ಬಂಧುವಾಗಿದ್ದನು; ಆ ಶ್ರೀಮಂತನಿಗೆ ಎಚ್ಚರಿಕೆಕೊಡಲು ಅವನೊಂದು ಬೇನಾಮಿಪತ್ರ ಬರೆದಿದ್ದನು. ಆ ಕಾಗದ ಕಡೆಗೆ ಸೆಸಿಲ್ ಕೈಸೇರಿತು. ಭವನದ ಅಕ್ಕಪಕ್ಕಮನೆಗಳನ್ನು ಹುಡುಕಿದ್ದಾಯಿತು; ಆಗ ಪಕ್ಕದಮನೆ ನೆಲಮಾಳಿಗೆಯಿಂದ ಸುರಂಗವನ್ನು ತೋಡಿ ಮದ್ದುತುಂಬಿದ್ದಸಂಗತಿಯು ಬಯಲಾದುದಲ್ಲದೆ ಗೊತ್ತಾದವೇಳೆಗೆಸರಿಯಾಗಿ ಉಡಾಯಿಸಲು ಹೊಂಚಿಕೊಂಡಿದ್ದ **ಗೈ ಫಾಕ್ಸ್** (Guy Fawkes) ಎಂಬ ಪಿತೂರಿಗಾರನೂ ಸಿಕ್ಕಿದನು. ಪಿತೂರಿಯೆಲ್ಲವೂ ಪತ್ತೆಯಾಗಿಹೋಯಿತು. ಪಿತೂರಿಗಾರರು ಸಿಕ್ಕಿ ಮರಣದಂಡನೆಗೆ ಗುರಿಯಾದರು. ರೋಮನ್‌ಕ್ಯಾಥಲಿಕ್‌ಪಂಗಡದವರೇ ಈ ಪಿತೂರಿ ಕಟ್ಟಿದ್ದುದರಿಂದ ಅವರಲ್ಲಿದ್ದ ಸ್ವಲ್ಪಸ್ವೈರಣೆಯೂ ಮಾಯವಾಗಿ ಪಾರ್ಲಿಮೆಂಟಿನವರು ಅವರನ್ನು ದಂಡಿಸಲು ಹೊಸದಾಗಿ ಕ್ರೂರವಿಧಿಗಳನ್ನು ಮಾಡಿಟ್ಟರು. ಇಷ್ಟೇ ಪಿತೂರಿಯಫಲಿತಾಂಶ. ಸಭಿಕರಲ್ಲಿ ಪ್ಯೂರಿಟನ್‌ಪಂಥವನ್ನವಲಂಬಿಸಿದ್ದವರು ಪ್ರಬಲರಾಗಿದ್ದರು; ಮಿಲ್ಲೆನರಿ ಅರ್ಜಿಯಲ್ಲಿ ಸೂಚಿಸಿದ್ದ ಕೆಲವಂಶಗಳನ್ನು ಸಾಧಿಸಿಕೊಳ್ಳಲು ಪ್ರಯತ್ನ ಮಾಡಿದರು. ಅದು ಸಾಗಲಿಲ್ಲ.

**ರೋಮನ್‌ಕ್ಯಾಥಲಿಕ್ ಅತೃಪ್ತಿ**

**ಗನ್ಪೌಡರ್ ಪಿತೂರಿ**

ಹಣದ ವಿಷಯದಲ್ಲಿ ದೊರೆಗೂ ಪಾರ್ಲಿಮೆಂಟಿಗೂ ಜಗಳತೋರಿಕೊಂಡಿತು. ಎಲಿಸಬೆತ್ ಸಾಯುವಕಾಲಕ್ಕೆ ಸಾಲದಹೊರೆಯೇ ಕೂಡಿತ್ತು. ಜಿಪುಣೆಯಾಗಿದ್ದಾಗ್ಯೂ ಆ ರಾಣಿಯ ಕಡೆಗಾಲದ ಐರಿಷ್‌ದಂಗೆಯ ದಮನದವೆಚ್ಚವು ಹೆಚ್ಚಾಗಿ

ಹೋಯಿತು. ಎಲಿಸಬೆತ್ ಒಂಟಿ; ಜೇಮ್ಸ್ ಸಂಸಾರಿ. ಅಲ್ಲದೆ ಪಿಶುನತನವೆಂಬುದು ಜೇಮ್ಸಿನಲ್ಲಿರಲಿಲ್ಲ. ಇಂಗ್ಲಂಡಿನ ದೊರೆಯಾದಕೂಡಲೆ ಅಮಿತವಾದ ಧನ ತನ್ನ ದಾಗುವುದೆಂಬ ಭ್ರಾಂತಿಯನ್ನು ಬೆಳೆಸಿಕೊಂಡಿದ್ದನು. ಮೊದಮೊದಲು ದುಂದುವೆಚ್ಚವನ್ನು ಮಾಡಿದ ದೊರೆಯು ಹಣಸಾಲದೆಬಂದಾಗ ಹಿಂದಿನ ದೊರೆಗಳು ನಡೆಸಿದಂತೆಯೇ ಹಣಗೂಡಿಸುವ ಉಪಾಯಕ್ಕೆ ತೊಡಗಿದನು. ರೇವುಪಟ್ಟಣಗಳಲ್ಲೆತ್ತುತ್ತಿದ್ದ ಸುಂಕದ ದರಗಳನ್ನು 1606ರಲ್ಲಿ ಏರಿಸಿದನು. ಆ **ಏರುಸುಂಕ**(Impositions)ವು ಅಕ್ರಮವಾದುದರಿಂದ ಕೊಡುವುದಿಲ್ಲವೆಂದು **ಬೇಟ್**(Bate)ಎಂಬ ಹೆಸರಿನ ಲಂಡನ್ನಿನ ವರ್ತಕನೊಬ್ಬನು ಎದುರು ಬಿದ್ದನು. ಅವನನ್ನು ಜಡ್ಜಿಗಳ ಮುಂದೆ ವಿಚಾರಣೆಗೆ ನಿಲ್ಲಿಸಿದರು. ವಾದವಿವಾದಗಳನ್ನು ಕೇಳಿದಜಡ್ಜಿಗಳು ಸುಂಕದಶಿಸ್ತು ರಾಜಾಜ್ಞೆಗೊಳಪಟ್ಟುದೆಂದು ತೀರ್ಮಾನಮಾಡಿ ಬೇಟನಿಗೆ ದಂಡನೆಕೊಟ್ಟರು. ಜಡ್ಜಿಗಳತೀರ್ಮಾನಕ್ಕೊಪ್ಪಿಕೊಂಡಾಗ್ಗೂ ಪಾರ್ಲಿಮೆಂಟಿನವರು ಗೊಣಗುಟ್ಟುತ್ತಲೇ ಇದ್ದು ದೊರೆಗೆ ತಕ್ಕಷ್ಟು ಹಣವನ್ನೊದಗಿಸದೆಹೋದರು. ಮಂತ್ರಿಸೆಸಿಲ್ಲನು ಸಂಪ್ರದಾಯರೂಪದಲ್ಲಿ ಬಂದಿದ್ದ ಎರಡುಮೂರು ಆದಾಯದಂಶಗಳನ್ನು ಇತ್ಯರ್ಥಮಾಡಬೇಕೆಂದು ಪ್ರಯತ್ನಮಾಡಿದನು. ಸಭಿಕರು ಒಪ್ಪಲಿಲ್ಲ.

**ಏರುಸುಂಕ**

ಸಂಧಿವಿಗ್ರಹಗಳ ನೀತಿರೀತಿಗಳಲ್ಲಿಯೂ ದೊರೆಯ ದಾರಿಗೆ ಸಭಿಕರೊಗ್ಗಲಿಲ್ಲ. ದೂರಾಲೋಚನೆಯುಳ್ಳ ದೊರೆಯುಮನಸ್ಸಿನಲ್ಲಿ ಪ್ರಾಟೆಸ್ಟೆಂಟ್‌ರೋಮ್ಯಾಕ್ಯಾಥಲಿಕ್ಕರ ಪರಸ್ಪರವೈಷಮ್ಯವು ಅವಿವೇಕವೆನಿಸಿತ್ತು. ಇಂಗ್ಲಂಡ್ ಸ್ಪೈನ್ ದೇಶಗಳು ಅನ್ಯೋನ್ಯತೆಯಿಂದಿದ್ದರೆ ಆ ವೈಷಮ್ಯನಿಲ್ಲಲು ಆಸ್ಪದವಾಗುವುದೆಂದು ನಂಬಿ ದೊರೆಯು ಸ್ಪೈನಿನೊಡನೆ ಮೈತ್ರಿಕಟ್ಟುವ ಯೋಚನೆಮಾಡಿದನು. ಜನರಿಗೂ ಸಭಿಕರಿಗೂ ಸ್ಪೈನಿನೊಡನೆ ವಿರೋಧವೇ ಇಷ್ಟವಾಗಿತ್ತು. 1604ರಲ್ಲಿ ಸ್ಪೈನ್‌ದೊರೆಯೊಡನೆ ಜೇಮ್ಸ್ ಸಂಧಾನನಡೆಸಿ ಯುದ್ಧವನ್ನು ನಿಲ್ಲಿಸಲು ಶಾಂತಿಯ ಒಪ್ಪಂದವನ್ನು ಗೊತ್ತುಮಾಡಿದನು. 2ನೆ ಫಿಲಿಪ್ ಸತ್ತಿದ್ದನು; ಆತನ ಮಗ 3ನೆ ಫಿಲಿಪ್ ಅಲ್ಲಿ ದೊರೆಯಾಗಿದ್ದನು. ಅತಿದುರ್ಬಲನಾಗಿದ್ದ ಸ್ಪೈನ್‌ರಾಜನು ಡಚ್ಚರಮೇಲೇನೂ ಮಾಡಲಾರದಾದನು. 1609ರಲ್ಲಿ ಡಚ್ಚರೊಡನೆಯೂ ಶಾಂತಿಯನಿರ್ಣಯ ನಡೆಯಿತು; ಡಚ್ಚರು ಸ್ವತಂತ್ರರಾಗಿ ಗಣ್ಯರಾದರು.

**ಸ್ಪೈನಿನೊಡನೆ ಶಾಂತಿ**

ಫ್ರಾನ್ಸಿನಲ್ಲಿ ಬೋರ್ಬನ್ ವಂಶವನ್ನು ಮೊದಲಿಟ್ಟಿದ್ದ 4ನೆ ಹೆನ್ರಿಯು ಇಂಗ್ಲಂಡಿನೊಡನೆ ಸ್ನೇಹವನ್ನು ಕಾಪಾಡಿಕೊಂಡೇ ಇದ್ದನು. ಆ ದೊರೆಗೆ ಆಸ್ಟ್ರಿಯ ಮತ್ತು ಸ್ಪೈನ್ ಎರಡು ರಾಜ್ಯಗಳಲ್ಲಿಯೂ ನೆಲೆಸಿದ್ದ ಹ್ಯಾಪ್ಸ್‌ಬುರ್ಗ್ ವಂಶಸ್ಥರು ಹಗೆಗಳಾಗಿತೋರಿತ್ತು. ಆ ಸಮಯದಲ್ಲಿ ಜೇಮ್ಸ್ ತಾನು ಜರ್ಮನಿಯ ಪ್ರಾಟೆಸ್ಟೆಂಟ್‌ಪ್ರಭುಗಳ ಮೈತ್ರಿಯನ್ನು ಕಟ್ಟಿಟ್ಟುಕೊಳ್ಳಬೇಕೆಂದಾಲೋಚಿಸಿ ತನ್ನಮಗಳು ಎಲಿಸಬೆತ್ತಳನ್ನು ಆ ಪ್ರಭುಗಳಲ್ಲೊಬ್ಬನೆನಿಸಿ

**ರಾಜಪುತ್ರಿಯ ಮದುವೆ**

**ಎಲೆಕ್ಟರ್** (Elector) ಎಂಬ ಬಿರುದನ್ನು ವಹಿಸಿದ್ದ **ಫ್ರೆಡರಿಕ್** (Frederick) ಎಂಬಾತನಿಗೆ ಮದುವೆಮಾಡಿದನು. ಆ ಫ್ರೆಡರಿಕ್ಕನ ರಾಜ್ಯವೆಂಬುದು ಸಣ್ಣದು; **ಪ್ಯಾಲಟಿನೇಟ್** (Palatinate) ಎಂದು ಅದರ ಹೆಸರು. ಪ್ರಾಟೆಸ್ಟೆಂಟ್‌ಸಂಬಂಧವೆಂದು ಇಂಗ್ಲಂಡಿನ ಜನರು ಆ ಮದುವೆಯನ್ನು ಮೆಚ್ಚಿದರು.

ಐರಿಷರ ಕಡೆಯದಂಗೆಯನ್ನು ಕಾಠಿನ್ಯದಿಂದ ಅಡಗಿಸಿದ್ದ ಲಾರ್ಡ್‌ಮೌಂಟ್‌ಜಾಯ್ 1604ರಲ್ಲಿ ಅಧಿಕಾರಬಿಟ್ಟನು. ಆ ತರುವಾಯ ಅಲ್ಲಿಗೆ ಲಾರ್ಡ್ ಡೆಪ್ಯುಟಿಯಾದ **ಚಿಚೆಸ್ಟರ್** (Chichester) ಎಂಬಾತನು ಅಲ್‌ಸ್ಟರ್ ಪ್ರಾಂತದಲ್ಲಿ ಚರ್ಚಿನ ವಿಷಯವಾಗಿಯೂ ಜಮೀನುಗಳ ವಿಷಯವಾಗಿಯೂ ವ್ಯವಸ್ಥೆಗೊಳಿಸಲು ಯತ್ನಿಸಿ ಕಡೆಗೆ ಆ ಪ್ರಾಂತದಲ್ಲಿ ಕೆಲವು ಭೂಮಿಗಳನ್ನು ಸ್ಕಾಟ್ ಮತ್ತು ಇಂಗ್ಲಿಷ್ ನೆಲಸುಗಾರರಿಗೆ ಕೊಡತಕ್ಕುದೆಂದು ನಿಷ್ಕರ್ಷಿಸಿದನು. ಟೈರೋನಿನ ಶ್ರೀಮಂತನು ಇವುಗಳನ್ನು ಸಹಿಸಲಾರದೆ 1607ರಲ್ಲಿ ದೇಶಾಂತರಹೊರಟಿದ್ದನಾದುದರಿಂದ ಐರಿಷರು ಅನಾಯಕರಾಗಿ ದುರ್ಬಲರಾಗಿದ್ದರು. ಆಗ ಅಲ್‌ಸ್ಟರ್‌ಪ್ರಾಂತದಲ್ಲಿ ಉತ್ತಮಭೂಮಿಗಳನ್ನೆಲ್ಲ ಐರಿಷರಿಂದ ಕಿತ್ತುಕೊಂಡು ಇಂಗ್ಲಿಷ್ ಮತ್ತು ಸ್ಕಾಟ್‌ಜನರಿಗೆ ಕೊಡಿಸಿ ಅಲ್ಲಿ ಅವರು ನೆಲೆಸುವಂತೆ ಅನುಕೂಲಪ್ರೋತ್ಸಾಹಗಳನ್ನು ಕೊಟ್ಟರು. ಬೀಳಾದ ಭೂಮಿಗಳು ಐರಿಷರಿಗೆ ಉಳಿದವು. ಈ ಅನ್ಯಾಯವನ್ನು ಐರಿಷರು ಮರೆಯಲೇ ಇಲ್ಲ.

**ಅಲ್‌ಸ್ಟರಿನ ಆಕ್ರಮಣ**

ಎಲಿಸಬೆತ್‌ಕಾಲದಲ್ಲಿ ಇಂಗ್ಲಿಷರಿಗೆ ಸಾಹಸಪ್ರೀತಿ ಬೆಳೆಯಿತಷ್ಟೆ. ಅದರಿಂದಲೇ ಅಲ್‌ಸ್ಟರಿನಲ್ಲಿ ಇಂಗ್ಲಿಷಿನವರು ಮನೆಮಠಕಟ್ಟಿಕೊಂಡರು. 1607ರಲ್ಲಿ **ಜಾನ್‌ಸ್ಮಿತ್** (Captain John Smith) ಎಂಬವನು ಉತ್ತರ ಅಮೆರಿಕಾ ಖಂಡದಲ್ಲಿ **ವರ್ಜಿನಿಯ** (Virginia ಕನ್ಯಾಕ್ಷೇತ್ರ) ಎಂಬ ನೆಲಸುನಾಡನ್ನು ಕಟ್ಟಿದನು. ಇದನ್ನು ಸ್ಮರಿಸಿಕೊಂಡು ಬ್ರಿಟಿಷರು 1607ರಲ್ಲಿ ತಮ್ಮ ವಿಸ್ತಾರ ಸಾಮ್ರಾಜ್ಯ ಮೊದಲಾಯಿತೆಂದುಕೊಳ್ಳುತ್ತಾರೆ. ಅದೇಕಾಲದಲ್ಲಿಯೇ ಇಂಡಿಪೆಂಡೆಂಟ್ (Independent) ಎಂಬ ಹೆಸರಿನ ಮತಶಾಖೆಯವರು ಕೆಲವರು ಇಂಗ್ಲಂಡನ್ನು ಬಿಟ್ಟು ಹಾಲಂಡಿನಲ್ಲಿ ನೆಲಸಿದರು. ಕೆಲವುವರ್ಷಗಳು ಕಳೆದ ಮೇಲೆ 1620ರಲ್ಲಿ ಈ ಗುಂಪಿನವರು ಡಚ್ಚರೊಡನೆಸೇರಿ **ಮೇಫ್ಲವರ್** (Mayflower) ಎಂಬ ಹಡಗಿನಲ್ಲಿ* ಅಮೆರಿಕಕ್ಕೆ ಹೊರಟರು.

**ಉತ್ತರ ಅಮೆರಿಕ**

---

*ಮೇಫ್ಲವರಿನಲ್ಲಿ ಯಾನಮಾಡಿದವರು ಈಗಿನ ಸಂಯುಕ್ತಸಂಸ್ಥಾನಗಳ ಈಶಾನ್ಯದಮೂಲೆಯಲ್ಲಿ ನೆಲೆಸಿದರು. ನ್ಯೂ ಆಮ್ಸ್ಟರ್ಡಾಮ್ ಎಂಬ ಪಟ್ಟಣಕಟ್ಟಿಕೊಂಡು ಬೇರೆಯಾಗಿಯೇ ಇದ್ದರು. 2ನೆ ಚಾರ್ಲ್ಸ್‌ದೊರೆಕಾಲದಲ್ಲಿ ಆ ಪ್ರದೇಶವು ಇಂಗ್ಲಿಷರ ಕೈಸೇರಿ ನ್ಯೂಯಾರ್ಕ್ ಎಂಬ ಹೆಸರುಬಂತು. ಈಗಿನ ಅಮೆರಿಕ (ಸಂ. ಸಂಸ್ಥಾನಗಳು) ಜನರಿಗೆ ಅವರು ಪೂರ್ವಿಕರು; ತಮ್ಮ ಮತಸ್ವಾತಂತ್ರ್ಯಕ್ಕಾಗಿ ದೂರದೇಶಯಾತ್ರೆಗೈದವರು. ಆ ಕಾರಣದಿಂದ ಆ ಹಡಗಿನಲ್ಲಿ ಹೊರಟವರಿಗೆ **ಪಿಲ್‌ಗ್ರಿಮ್‌ಫಾದರ್ಸ್** (Pilgrim Fathers) ಎಂಬ ಹೆಸರು ಪ್ರಸಿದ್ಧ.

ಇಷ್ಟು ಭಾಗವನ್ನು ಈ ದೊರೆಯ ಆಳಿಕೆಯ ಮೊದಲಭಾಗವೆನ್ನ ಬಹುದು. 1611ರಲ್ಲಿ ಮೊದಲನೆ ಪಾರ್ಲಿಮೆಂಟ್‌ಸಭೆಯು ಮುಕ್ತಾಯವಾಯಿತು. 1612ರಲ್ಲಿ ದೊರೆಯ ಹಿರಿಯಮಗ **ಹೆನ್ರಿ**ಯೂ ಮಂತ್ರಿ ಸೆಸಿಲ್ಲನೂ ತೀರಿಹೋದರು. ಸೆಸಿಲ್ ಇದ್ದವರೆಗೆ ಎಲಿಸಬೆತ್ ಆಳ್ವಿಕೆಯ ವಾಸನೆಯೇ ಇತ್ತು. ಆತನ ಮರಣದ ತರುವಾಯ ಹೊಸ ಮಂತ್ರಿಗಳು ಅಧಿಕಾರಕ್ಕೆ ಬಂದರು; ಆಳಿಕೆಯ ಗತಿಯು ಬದಲಾಯಿತು. ಸರ್ವಪ್ರಕಾರದಲ್ಲಿಯೂ ರಾಜನಿಗೆ ವಿಧೇಯರಾದ ಮಂತ್ರಿಗಳಿದ್ದುದರಿಂದ ರಾಜನ ಇಷ್ಟಕ್ಕೆ ಅಡ್ಡಿಯಿಲ್ಲ ದಂತಾಯಿತು.

**ರಾಬರ್ಟ್ ಕಾರ್** (Robert Carr) ಎಂಬ ಹೆಸರಿನ ಸ್ಕಾಟ್‌ಹುಡುಗನೊಬ್ಬನು ದೊರೆಯ ಪ್ರೀತಿಗೆ ಪಾತ್ರನಾಗಿ ಅರಮನೆಯಲ್ಲಿ ಓಡಾಡುತ್ತಿದ್ದನು. ಅವನಿಗೆ **ಸಾಮರ್ಸೆಟ್ಟಿನ ಅರ್ಲ್** (Earl of Somerset) ಎಂಬ ಬಿರುದಿನ ಶ್ರೀಮಂತಪದವಿಯನ್ನು ಜೇಮ್ಸ್ ಕೊಟ್ಟನು. ಕಾರನಿಗೆ ಆಡಳಿತದ ವಿಷಯಗಳಲ್ಲಿ ಯಾವ ಪರಿಜ್ಞಾನವೂ ಇರಲಿಲ್ಲ. ಆಗ ಸ್ಪೈನ್‌ದೇಶದ ರಾಯಭಾರಿಯು ಇಂಗ್ಲಂಡಿನ ರಾಜನುಕಟ್ಟಿದ್ದ ಫರಾನ್ಸಿಸ್ನೇಹವನ್ನು ಕೆಡಿಸುವ ಸಂಧಾನದಲ್ಲಿ ಕಾರನ್ನು ಉಪಯೋಗಿಸಿಕೊಂಡನು. ಜೇಮ್ಸಿಗೆ ಸ್ಪೈನ್‌ಸ್ನೇಹದಲ್ಲಿ ಆಸೆಹುಟ್ಟಲು ದ್ರವ್ಯಾಭಾವವೇ ಕಾರಣವಾಯಿತು. ಯುವರಾಜನಾಗಿದ್ದ ಚಾರ್ಲ್ಸ್ ಕುಮಾರನಿಗೆ ಸ್ಪೈನ್‌ದೊರೆಯ ಮಗಳನ್ನು ತಂದುಕೊಂಡರೆ ಆಸ್ತಿ ದೊರಕುವುದೆಂಬ ಆಸೆ ಬಲವಾಯಿತು. ಮತಭೇದದ ಕಾರಣದಿಂದ ತೋರಬಹುದಾಗಿದ್ದ ಯುದ್ಧಗಳನ್ನು ಆ ಮೈತ್ರಿಯಮೂಲಕ ನಿಲ್ಲಿಸಬಹುದೆಂಬ ಯೋಚನೆಯೂ ಆತನ ಮನಸ್ಸಿನಲ್ಲಿತ್ತು.

**ಹೊಸಮಂತ್ರಿ**

1614ರಲ್ಲಿ ದೊರೆಗೆ ಹಣದ ಅಗತ್ಯವು ಹೆಚ್ಚಿತು. ಆಗ ಹೊಸ ಪಾರ್ಲಿಮೆಂಟ್ ಸಭೆಯನ್ನು ಕರೆಸಲು ನಿಶ್ಚಯಿಸಿದನು. ರಾಜನಿಗೆ ಅನುಕೂಲರಾಗುವಂತಹವರೇ ಪ್ರತಿನಿಧಿಗಳಾಗಿ ಚುನಾವಣೆಯಾಗುವಂತೆ ಸಂಧಾನಮಾಡಲು ಜೇಮ್ಸನ ಪರಿವಾರದವರುಕೆಲವರು ಯತ್ನಿಸಿದರು. ಈ ಯತ್ನದಿಂದ ಪ್ರತಿಕೂಲವೇ ಆಯಿತು. ನೆರೆದ ಸಭಿಕರು ಅಸಮಾಧಾನಪಟ್ಟರು. ಚುನಾವಣೆಯ ಸ್ವಾತಂತ್ರ್ಯವನ್ನು ಅಡ್ಡಿಪಡಿಸಲು ಯತ್ನನಡೆಯಿತೆಂದು ಆಕ್ರೋಶಗೊಂಡು ಏರುಸುಂಕದವಿಚಾರವನ್ನೆತ್ತಿದರು. ಆ ವಿಚಾರದಲ್ಲಿ ಸಮಾಧಾನವಾಗುವವರೆಗೂ ಬೇರೆ ತೆರಿಗೆಕಂದಾಯಗಳಿಗೆ ಒಪ್ಪುವುದಿಲ್ಲವೆಂದರು. ಇದೇವೇಳೆಯಲ್ಲಿ ಸ್ಪೈನ್‌ರಾಯಭಾರಿಯು ರಾಜಕುಮಾರನ ಮದುವೆಪ್ರಸ್ತಾಪವನ್ನೆತ್ತಲು ರಾಜನು ಆ ಮೂಲಕ ಧನದೊರಕುವುದೆಂಬ ಆಸೆಯಿಂದ

**ಪಾರ್ಲಿಮೆಂಟಿನ ವಿರೋಧ**

9

ಪಾರ್ಲಿಮೆಂಟ್‌ಸಭೆಗೆ ಮುಕ್ತಾಯ*ದ ಆಜ್ಞೆಯನ್ನು ಕೊಟ್ಟನು. ಈ **ಎರಡನೆ ಪಾರ್ಲಿಮೆಂಟ್ ಸಭೆಯು** ಯಾವ ಇತ್ಯರ್ಥವನ್ನಾಗಲಿ ಕಾನೂನನ್ನಾಗಲಿ ಮಾಡದೆ ಹೋದುದರಿಂದ **ಗೊಡ್ಡುಸಭೆ** (Addled Parliament) ಎಂದೆನಿಸಿತು. ಬೇಕಾದ ಹಣವನ್ನು ದೊರೆಯು ಕಾಣಿಕೆಗಳರೀತಿಯಲ್ಲಿ ಒದಗಿಸಿಕೊಳ್ಳಲು ಮೊದಲಿಟ್ಟನು. ಕೊಡದಿದ್ದವರನೇಕರು ಸ್ಟಾರ್‌ಚೇಂಬರ್‌ಕೋರ್ಟಿನಲ್ಲಿ ಶಿಕ್ಷೆಗೆ ಗುರಿಯಾದರು. ಇದು ರಾಜನ ಸ್ವೇಚ್ಛಾಪ್ರವರ್ತನೆಯಾದುದರಿಂದ ಅಕ್ರಮವೆಂದೆನಿಸಿ ಆಕ್ಷೇಪಕ್ಕೆ ಗುರಿಯಾಯಿತು.

**ದಿಟ್ಟನಾದ ನ್ಯಾಯಾಧಿಕಾರಿ**

1616ರಲ್ಲಿ ಮುಖ್ಯವಾದ ಸಂಗತಿಗಳು ನಡೆದವು. **ಸರ್ ಎಡ್ವರ್ಡ್ ಕೋಕ್** (Sir Edward Coke) ಎಂಬಾತನು ಶ್ರೇಷ್ಠನ್ಯಾಯಾಧೀಶನಾಗಿದ್ದನು. ರಾಜನಿಗೆ ದೈವದತ್ತವಾದ ಅಧಿಕಾರವುಂಟೆಂಬುದಾಗಲಿ ನ್ಯಾಯಾಧಿಕಾರಿಗಳು ದೊರೆಯ ಇಷ್ಟವನ್ನು ಸದಾ ಅನುಸರಿಸತಕ್ಕುದೆಂಬುದಾಗಲಿ ಆತನಿಗೆ ನ್ಯಾಯವಾಗಿ ತೋರಲಿಲ್ಲ. ರಾಜಾಧಿಕಾರವು ವಿಧಿಸೂತ್ರಗಳಿಗೆ ಅಧೀನವಾದುದೆಂದೂ ನ್ಯಾಯಾಧಿಕಾರಿಗಳು ವಿಧಿಗೆಮಾತ್ರ ವಶರಾಗಿದ್ದು ತಮ್ಮ ಸ್ವತಂತ್ರವಿಚಕ್ಷಣೆಯಿಂದ ವರ್ತಿಸತಕ್ಕವರೆಂದೂ ಕೋಕನ ಅಭಿಪ್ರಾಯ. ಈ ನ್ಯಾಯಾಧಿಪತಿಯನ್ನು ಜೇಮ್ಸನು ಅಧಿಕಾರದಿಂದ ತಪ್ಪಿಸಿದನು. **ಲಾರ್ಡ್ ಬೇಕನ್** (Lord Bacon) ಎಂಬಾತನಿಗೆ ಆ ಅಧಿಕಾರವನ್ನು ಕೊಟ್ಟನು. ಕೋಕನಿಗೆ ಅಧಿಕಾರತಪ್ಪಿದಂದಿನಿಂದ ರಾಜನಿಗೂ ಪಾರ್ಲಿಮೆಂಟ್‌ಸಭೆಗೂ ಇದ್ದ ವಿರೋಧವು ಬಲಗೊಳ್ಳುತ್ತಲೇ ಬಂದಿತು.

---

*ಸಭೆಯನ್ನು ಕರೆಸುವುದೂ ಕೊನೆಗಾಣಿಸುವುದೂ ರಾಜನ ಅಧಿಕಾರ. ಸರ್ವತ್ರ ಚುನಾವಣೆಗಳಾಗಲು ರಾಜಾಜ್ಞೆ ಅವಶ್ಯಕ. ಆ ರೀತಿ ಚುನಾವಣೆಯಾಗಿಬಂದ ಪ್ರತಿನಿಧಿಗಳು ಸಭೆಸೇರಿದಮೇಲೆ ರಾಜನಿಂದ ಮುಕ್ತಾಯದ ಆಜ್ಞೆಹೊರಡುವವರೆಗೂ ಸಭಿಕರಾಗಿಯೇ ಇರುವರು. ಸಾರ್ವತ್ರಿಕಚುನಾವಣೆಗಳಾಗಿ ಸೇರಿದಸಭೆಗೆ ಮುಕ್ತಾಯದ ಆಜ್ಞೆಬರುವ ತನಕ ಒಂದು ಪಾರ್ಲಿಮೆಂಟ್‌ಸಭೆಯೆಂಬುದು ರೂಢಿ. ಒಬ್ಬದೊರೆಯ ಆಳಿಕೆಯಲ್ಲಿ ಹೀಗೆ ಎಷ್ಟುಸಭೆಗಳಾದರೂ ಸೇರಬಹುದು.

ಒಂದುಬಾರಿ ಸಭೆಸೇರಿ ನಡೆದಷ್ಟುಕಾಲಕ್ಕೆ ಒಂದು **ಸೆಷನ್** ಎಂದು ಹೆಸರು. ತರುವಾಯ ರಜ; ರಜ ಮುಗಿದಕೂಡಲೆ ಸೆಷನ್. ಒಂದು ಪಾರ್ಲಿಮೆಂಟಿಗೆ ಎಷ್ಟು ಸೆಷನ್ನುಗಳಾದರೂ ಆಗಬಹುದು. ರಜ ಅಥವಾ ಮಧ್ಯವಿರಾಮವನ್ನು ಗೊತ್ತುಮಾಡುವ ಆಜ್ಞೆಗೆ **ಪ್ರೊರೊಗೇಷನ್** ( Prorogation ) ಎನ್ನುತ್ತಾರೆ. ಮುಕ್ತಾಯವೆಂದರೆ ಆ ಸಭೆಯ **ಅಸ್ತಿತ್ವವೇ ಮುಗಿದಂತೆ.**

ಕೋಕನ ಪ್ರತಿಭಟನೆನಡೆದ ಸಮಯದಲ್ಲಿಯೇ ರಾಜನ ಆಪ್ತಸಚಿವ ಸಾಮರ್ಸೆಟ್ ಅರ್ಲನು ಪತಿತನಾದನು. ಅವನೂ ಅವನ ಹೆಂಡತಿಯೂ ಸೇರಿಕೊಂಡು ಆಸ್ಥಾನಿಕನೊಬ್ಬನಿಗೆ ವಿಷವನ್ನು ತಿನ್ನಿಸಿ ಪಿತೂರಿಮಾಡಿದ್ದುದು ಬಯಲಾಯಿತು. ಅದೇವೇಳೆಗೆ

**ಸಾಮರ್ಸೆಟ್ಟನ ಪತನ**

ಸ್ಪೈನ್‌ಸಂಬಂಧದ ಷರತ್ತುಗಳೂ ಪ್ರಕಟವಾದವು. ತನ್ನ ಮಗಳನ್ನು ಮದುವೆಮಾಡಿಕೊಡುವುದಕ್ಕೆ ಪ್ರತಿಯಾಗಿ ರಾಜಕುಮಾರನು ರೋಮನ್‌ಕ್ಯಾಥಲಿಕ್ಕನಾಗಿ ಶಿಕ್ಷಿತನಾಗಬೇಕೆಂದೂ ಇಂಗ್ಲಂಡಿನಲ್ಲಿ ರೋಮನ್‌ಕ್ಯಾಥಲಿಕ್ಕರ ವಿರೋಧವಾಗಿದ್ದ ದಂಡನೆಯವಿಧಿಗಳು ವಜಾ ಆಗಬೇಕೆಂದೂ ಸ್ಪೈನ್‌ರಾಜನು ಕೇಳಿದನು. ಸಾಮರ್ಸೆಟ್ಟನ ಸಂಧಾನವು ಇಷ್ಟರಲ್ಲಿ ಕೊನೆಗಂಡಿತ್ತು; ಅದನ್ನು ತಿಳಿದವರೆಲ್ಲರೂ ಅಸಮಾಧಾನಗೊಂಡರು. ವಿಷವಿಟ್ಟ ಅಪರಾಧದ ವಿಚಾರಣೆ ಮೊದಲಾದಾಗ ಎಲ್ಲರೂ ಆತನಸ್ನೇಹಬಿಟ್ಟರು. ಸಾಮರ್ಸೆಟ್ಟನು ಭ್ರಷ್ಟನಾಗಲು ಅವನಸ್ಥಾನಕ್ಕೆ ದೊರೆಯು **ಜಾರ್ಜ್‌ವಿಲಿಯರ್ಸ್‌**(George Villiers) ಎಂಬ ಇಂಗ್ಲಿಷ್ ಯುವಕನನ್ನು ಇಟ್ಟುಕೊಂಡನು. ಅವನಿಗೆ **ಬಕಿಂಘಮಿನ ಡ್ಯೂಕ್** (Duke of Buckingham)ಎಂಬ ಬಿರುದನ್ನು ಕೊಟ್ಟನು. ಈ ಬಕಿಂಘಮನು 1616ರಲ್ಲಿ ಮಂತ್ರಿಯಾಗಿ 1628ರವರೆಗೆ ದೊರೆಯ ಆಪ್ತಮಿತ್ರನಾಗಿ ಡೌಲಿನಿಂದಿದ್ದುಬಿಟ್ಟನು.

ಹಣವಿಲ್ಲದ ತೊಂದರೆಯೇನೋ ದೊರೆಗೆ ಅಂಟಿಕೊಂಡಿತ್ತು. 1616ರಲ್ಲಿ ಜೇಮ್ಸಿಗೊಂದು ಯೋಚನೆ ಸರಿಯೆಂದೆನಿಸಿತು. ಮೈನ್ ಪಿತೂರಿಯಲ್ಲಿ ಸಿಕ್ಕಿಕೊಂಡು ಮರಣದಂಡನೆಗೆ ಗೊತ್ತಾಗಿದ್ದ **ಸರ್ ವಾಲ್ಟರ್ ರಾಲಿ**ಯನ್ನದುವರೆಗೆ ಸೆರೆಯಲ್ಲಿಯೇ ಇಟ್ಟಿತ್ತು. ಅವನನ್ನು ಬಿಡುಗಡೆಮಾಡಿ **ಗಯಾನಾ**ಪ್ರದೇಶಕ್ಕೆ ಕೊಟ್ಟುಕಳುಹಿಸಿದರೆ

**ರಾಲಿಯ ದಂಡನೆ**

ಯಾರಿಗೂ ಸಿಕ್ಕದಿದ್ದ ನಿಕ್ಷೇಪವನ್ನು ತಂದಾನೆಂಬ ನಂಬಿಕೆ ದೊರೆಗೆ ಹುಟ್ಟಿತು. ರಾಲಿಯನ್ನು ಸೆರೆಯಿಂದಬಿಡಿಸಿ ನಿಕ್ಷೇಪ ತರಲು ಕಳುಹುವಾಗ ದೊರೆ ಆತನಿಗೆ ಸ್ಪಾನಿಷ್‌ಜನರೊಡನೆ ಜಗಳವಾಡಬಾರದೆಂದು ಹೇಳಿದನು. ಆದರೆ ಎಷ್ಟೋ ವರ್ಷಗಳಹಿಂದೆ ನಿರ್ಜನವಾಗಿದ್ದ ಆ ಪ್ರದೇಶವನ್ನು ಸ್ಪಾನಿಷರು ಏತನ್ಮಧ್ಯೆ ಆಕ್ರಮಣಮಾಡಿದ್ದರು. ರಾಲಿ ಅಲ್ಲಿಗೆಹೋಗಿ ಸ್ಪಾನಿಷರೊಡನೆ ಹೊಡೆದಾಟನಡೆಸಿ ಕಡೆಯಲ್ಲಿ ಬರಿಗೈಯಿಂದ ಹಿಂತಿರುಗಿದನು. ಸ್ಪಾನಿಷ್‌ರಾಯಭಾರಿಯು ತನ್ನ ರಾಜನ ಅಸಮಾಧಾನವನ್ನು ಸೂಚಿಸಿದನು. ಸ್ಪೈನ್‌ದೊರೆಯು ಕೋಪಗೊಳ್ಳದಿರುವಂತೆ ನೆರವೇರಿಸಲು ಈ ಇಂಗ್ಲಿಷ್ ದೊರೆಯು ರಾಲಿ ಹಿಂತಿರುಗಿಬಂದಕೂಡಲೆ ಅವನನ್ನು ಸೆರೆಗೆ ಹಾಕಿಸಿ ಸ್ವಲ್ಪಕಾಲದಲ್ಲಿಯೇ ಹಿಂದಿನತಪ್ಪಿಗೆನಿಶ್ಚಿತವಾದ ದಂಡನೆಯನ್ನನುಸರಿಸಿ ಶಿರಚ್ಛೇದನಕ್ಕೆ ಗುರಿಮಾಡಿದನು (1618). ಕೊಟ್ಟ ಕ್ಷಮೆಯನ್ನು ರಾಜನು ಮುರಿದುದು ರಾಜಗೌರವಕ್ಕೆ ಭಂಗತಂದಿತು. ಸ್ಪಾನಿಷರಿಗೆ ಹೆದರಿಕೊಂಡು ಶೂರನಾದವನನ್ನು ಅಪಮೃತ್ಯುವಿಗೆ ಕೊಟ್ಟ ಹೇಡಿಯೆಂದು ರಾಜನ ವಿಷಯದಲ್ಲಿ ಆಡಿಕೊಂಡರು.

ಸ್ಕಾಟ್ಲಂಡಿಗೂ ಜೇಮ್ಸ್ ದೊರೆಯಷ್ಟೆ. ಆ ರಾಜ್ಯದಲ್ಲಿ 6ನೆ ಜೇಮ್ಸ್ ಎನಿಸಿದ್ದನು. ಅಲ್ಲಿ ಸ್ಥಾಪಿತವಾಗಿದ್ದ ಪ್ರೆಸ್ಬಿಟೇರಿಯನ್ ಚರ್ಚಿನ ವ್ಯವಸ್ಥೆಯಲ್ಲಿ ದೊರೆಗೆ ಅಧಿಕಾರವೇ ಇರಲಿಲ್ಲ. ಅಧಿಕಾರವೆಲ್ಲವೂ **ಜನರಲ್ ಅಸೆಂಬ್ಲಿ**ಯೆಂಬ ಹಿರಿಯ ಸಭೆಗೆ ಸೇರಿತ್ತು. ಆ ಚರ್ಚಿನ ವ್ಯವಸ್ಥೆಯನ್ನು ಹೇಗಾದರೂ ತನ್ನಧಿಕಾರದಲ್ಲಿಟ್ಟುಕೊಳ್ಳುವ ಆಸೆ ಜೇಮ್ಸಿಗಿತ್ತು. 1618ರಲ್ಲಿ **ಪರ್ತ್** (Perth) ಎಂಬ ಪಟ್ಟಣದಲ್ಲಿ ಹಿರಿಯರಸಭೆ ಸೇರಿತ್ತು. ಅದರಲ್ಲಿ **ಐದು ಅಂಶ**ಗಳಲ್ಲಿ ಪ್ರೆಸ್ಬಿಟೇರಿಯನ್‌ರೀತಿಗೆ ವಿರುದ್ಧವಾದ ರೀತಿಯನ್ನು ಇನ್ನು ಮೇಲೆ ಅನುಸರಿಸತಕ್ಕದೆಂದು ಬಹುಮತದಿಂದ ತೀರ್ಮಾನವಾಯಿತು. ರಾಜನಸಂಧಾನವು ಅಷ್ಟುಮಾತ್ರ ಫಲಕಾರಿಯಾಯಿತು. ಆದರೆ ಪ್ರೆಸ್ಬಿಟೇರಿಯನ್ ಪಂಥದವರು ದೊರೆಗೆ ಮತ್ತಷ್ಟು ವಿರೋಧಿಗಳಾದರು.

**ಸ್ಕಾಟ್ಲಂಡ್**

ಸೆಸಿಲ್ ಸತ್ತ ತರುವಾಯ ಈರೀತಿ ನಡೆದ ಕೋಕನನಿವೃತ್ತಿ, ರಾಲಿಯ ವಧೆ, ಸಾಮರ್ಸೆಟ್ಟನ ನೀಚತನ, ಅರಮನೆಯದುಂದುವೆಚ್ಚ, ಪ್ಯೂರಿಟನ್ನರದಂಡನೆ, ಸ್ಪೈನ್‌ಸಂಬಂಧದ ಸಂಧಾನಗಳಲ್ಲಿ ಪ್ರತಿಯೊಂದರಲ್ಲಿಯೂ ದೊರೆಯು ಜನರ ವಿಶ್ವಾಸವನ್ನು ಕಳೆದುಕೊಂಡನು. ಅಂತಹ ಸಮಯದಲ್ಲಿ ಯೂರೋಪಿನಲ್ಲಿ **ಮೂವತ್ತು ವರ್ಷಗಳ ಸಂಗ್ರಾಮ**(Thirty Years' War)ಎಂಬ ಭಾರಿ ಜಗಳವು ರೇಗಿತು. ಪ್ರಾಟೆಸ್ಟೆಂಟರ ಮತಸುಧಾರಣೆ ಮುಂದುವರಿದಂತೆ ಕ್ಯಾಥಲಿಕ್ಕರೂ ಪ್ರತಿಪ್ರಯತ್ನದಲ್ಲಿ ತೊಡಗಿ ಕೌಂಟರ್ ರೆಫರ್ಮೇಷನ್ ಎಂಬುದನ್ನು ಹಿಂದೆಯೇ ಮೊದಲಿಟ್ಟಿರಷ್ಟೆ. ಜರ್ಮನಿಯೆಂಬ ಭಾಗದಲ್ಲಿ ಅನೇಕ ಸಂಸ್ಥಾನಗಳಿದ್ದವು. ಆ ಸಂಸ್ಥಾನಾಧಿಪತಿಗಳಲ್ಲಿ ಕೆಲವರು ಪ್ರಾಟೆಸ್ಟೆಂಟರಾಗಿಯೂ ಕೆಲವರು ರೋಮನ್‌ಕ್ಯಾಥಲಿಕ್ಕರಾಗಿಯೂ ಇದ್ದು ಪರಸ್ಪರ ವೈಷಮ್ಯಗಳನ್ನು ಕಾರುತ್ತಲೇ ಇದ್ದರು. ಅವರೆಲ್ಲರಿಗೂ ಆಸ್ಟ್ರಿಯಹಂಗರಿಗಳಿಗೆ ಪ್ರಭುವಾದ ಹ್ಯಾಪ್ಸ್‌ಬರ್ಗ್‌ವಂಶದ ಹಿರಿಯಶಾಖೆಯರಾಜನು ಚಕ್ರವರ್ತಿಯೆನಿಸಿದ್ದನು. ಜೇಮ್ಸನ ಅಳಿಯ ಫ್ರೆಡರಿಕ್ಕನು ಪ್ರಾಟೆಸ್ಟೆಂಟ್‌ಸಂಸ್ಥಾನಿಕರಲ್ಲೊಬ್ಬನಾಗಿದ್ದನು. **ಬೊಹೀಮಿಯ**(Bohemia)ಎಂಬ ಪ್ರದೇಶದ ಜನರು ಪ್ರಾಟೆಸ್ಟೆಂಟ್ ಮತವನ್ನು ಸೇರಿ 1618ರಲ್ಲಿ ಫ್ರೆಡರಿಕ್ಕನನ್ನು ತಮಗೆ ರಾಜನಾಗಬೇಕೆಂದು ಕೇಳಿಕೊಂಡರು. ಆಸ್ಟ್ರಿಯದ ಹ್ಯಾಪ್ಸ್‌ಬರ್ಗ್‌ಪ್ರಭುವಿಗೆ ಇದು ಸರಿಬೀಳಲಿಲ್ಲ. ಬೊಹೀಮಿಯ ಪ್ರದೇಶಕ್ಕೆ ರಾಜನಾಗಬೇಕೇ ಬೇಡವೇ ಎಂದು ಫ್ರೆಡರಿಕ್ ಯೋಚಿಸುತ್ತ ಮಾವನೂ ಪ್ರಾಟೆಸ್ಟೆಂಟ್‌ದೊರೆಯೂ ಆದ ಜೇಮ್ಸನನ್ನು ಸಲಹೆ ಕೇಳಿದನು. ಜೇಮ್ಸ್ ಏನೂ ಹೇಳದೆ ಕಾಲತಳ್ಳಿದನು. ಕಡೆಗೆ ಫ್ರೆಡರಿಕ್ ಆ ಆಹ್ವಾನಕ್ಕೊಪ್ಪಿ **ಪ್ರಾಗ್** (Prague) ನಗರದಲ್ಲಿ ಕಿರೀಟಧರಿಸಿದನು. ಕೂಡಲೆ ಕ್ಯಾಥಲಿಕ್‌ಪಕ್ಷದ ಪರವಾಗಿ ಆಸ್ಟ್ರಿಯದ

**ಭಾರಿ ಸಂಗ್ರಾಮ**

**ಅಳಿಯನ ಪಾಡು**

ಪ್ರಭುವು ದಂಡೆತ್ತಿಬಂದು ಫ್ರೆಡರಿಕ್ಕನನ್ನು ಬೊಹೀಮಿಯದಿಂದಾಚೆಗಟ್ಟಿದನು. ಆಸ್ಟ್ರಿಯ ಮತ್ತು ಸ್ಪೈನ್ ಪ್ರಭುಗಳಿಬ್ಬರೂ ಜತೆಗೂಡಿದರು. ಮುಂದೆ ಪ್ಯಾಲಟಿನೇಟ್ ಸಂಸ್ಥಾನವನ್ನು ಮುತ್ತಿ ಫ್ರೆಡರಿಕ್ಕಿಗೆ ಎಲ್ಲಿಯೂ ನೆಲೆಯಿಲ್ಲದಂತೆ ನೆರವೇರಿಸಿದರು. ಇಂಗ್ಲೆಂಡಿನ ಜನರು ಫ್ರೆಡರಿಕ್ಕಿನ ಪಕ್ಷವನ್ನು ಹಿಡಿದು ಸ್ಪೈನಿನೊಡನೆ ಯುದ್ಧ ಮಾಡಲು ಆತುರರಾದರು. ಅಂತಹ ಸಮಯದಲ್ಲಿ ಜೇಮ್ಸ್ ತನ್ನ ಆಳಿಕೆಯ **ಮೂರನೆ ಪಾರ್ಲಿಮೆಂಟ್‌ಸಭೆಯನ್ನು** ಕರೆಸಿದನು.

ಸ್ಪೈನಿನೊಡನೆ ಯುದ್ಧಮಾಡುವ ಉದ್ದೇಶವನ್ನು ಜೇಮ್ಸ್ ಇಟ್ಟುಕೊಂಡು ಪಾರ್ಲಿಮೆಂಟಿನಿಂದ ಹಣವನ್ನು ಬಯಸಿದ್ದಲ್ಲಿ ಸಭಿಕರು ಒದಗಿಸಿಕೊಡುತ್ತಿದ್ದರು. ಆದರೆ ತನ್ನತಲೆಯಲ್ಲಿದ್ದ ಯೋಚನೆಗಳೇನೆಂದು ಸ್ಪಷ್ಟವಾಗಿ ಜೇಮ್ಸ್ ತಿಳಿಸಲಿಲ್ಲ; ಆ ಯೋಚನೆಗಳು ವಿಚಿತ್ರವೂ ಆಗಿದ್ದವು. ಸ್ಪೈನಿನೊಡನೆ ಜಗಳವಾಡುವ ಕಾತರತೆಯಂತೂ ಜೇಮ್ಸಿಗಿರಲಿಲ್ಲ. ಅಳಿಯನಿಗೆ ನಷ್ಟವಾಗಿದ್ದ ರಾಜ್ಯವು ಪುನಃ ಹೇಗೆ ಪ್ರಾಪ್ತಿಯಾಗಬೇಕೆಂಬ ವಿಚಾರದಲ್ಲಿ ಆಸ್ಟ್ರಿಯಸ್ಪೈನ್‌ದೇಶಗಳ ಪ್ರಭುಗಳಿಗೂ ಪ್ರಾಟೆಸ್ಟೆಂಟ್ ದೊರೆಗಳಿಗೂ ಮಧ್ಯೆ ತಾನು ಪಂಚಾಯತಿಮಾಡಿ ನ್ಯಾಯತೋರಿಸಿಕೊಟ್ಟು ಸಮಾಧಾನಕ್ಕೆತರುವುದಾಗಿ ನಂಬಿಕೊಂಡಿದ್ದನು. ಅಂತೂ ಪಾರ್ಲಿಮೆಂಟ್‌ಸಭಿಕರಿಗೆ ಜೇಮ್ಸಿನ ಯೋಚನೆಗಳು ತಿಳಿಯಲಿಲ್ಲ; ಜೇಮ್ಸ್ ಬಿಚ್ಚಿಹೇಳಲೂ ಇಲ್ಲ. ಆದ್ದರಿಂದ ಅಸಮಾಧಾನಗೊಂಡು ಸಭಿಕರು **ಸರ್ವಮಾನ್ಯವ್ಯಾಪಾರ**(Monopolies)ದ **ಸನ್ನದು**ಗಳ ವಿಚಾರವನ್ನೆತ್ತಿಕೊಂಡು ಆಕ್ಷೇಪಕ್ಕೆ ಮೊದಲಿಟ್ಟರು. ಇಬ್ಬರು ರಾಜಾಧಿಕಾರಿಗಳನ್ನು **ಇಂಪೀಚ್‌ಮೆಂಟ್*** (Impeachment) ಎಂಬ ರೀತಿಯ ವಿಚಾರಣೆಗೆ ಗುರಿಮಾಡಿದರು. ನ್ಯಾಯಾಧೀಶನಾಗಿದ್ದ ಲಾರ್ಡ್ ಬೇಕನ್ನನಮೇಲೆ ಲಂಚತೆಗೆದುಕೊಂಡನೆಂಬ ಆಪಾದನೆ ಹೊರೆಸಿ ಆತನನ್ನೂ ವಿಚಾರಣೆಗೆ ನಿಲ್ಲಿಸಿದರು. ಸ್ಪೈನಿನೊಂದಿಗೆ ಯುದ್ಧವನ್ನು ನಡೆಸಬೇಕೆಂದೂ, ಚಾರ್ಲ್ಸ್‌ರಾಜಕುಮಾರನಿಗೆ ಪ್ರಾಟೆಸ್ಟೆಂಟ್‌ವಧುವನ್ನು ಗೊತ್ತುಮಾಡಬೇಕೆಂದೂ, ರೋಮನ್‌ಕ್ಯಾಥಲಿಕ್ಕರಿಗೆ ಸ್ವಲ್ಪವೂ ಕ್ಷಮೆದೋರದೆ ದಂಡನೆಗಳನ್ನು ವಿಧಿಸಬೇಕೆಂದೂ ಸಭಿಕರು ನಿಶ್ಚಯಗಳನ್ನುಮಾಡಿ ದೊರೆಬಳಿ ಕಳುಹಿಸಿಕೊಟ್ಟರು. ಈ ವಿಚಾರಗಳು ಅತಿಗಹನವಾದ ವಿಚಾರಗಳೆಂದೂ ಸಭಿಕರೆತ್ತಿಯಾಡಬಾರದೆಂದೂ ಜೇಮ್ಸ್ ಬಿರುಸಾಗಿಹೇಳಿದನು. ರಾಜ್ಯದ ಯಾವವಿಷಯಗಳನ್ನಾ

**ಸಭಿಕರ ವಿರೋಧ**

*ಇಂಪೀಚ್ಮೆಂಟ್ ಎಂಬಮಾತಿಗೆ ಆಪಾದನೆಯೆಂದರ್ಥ. ಕಾಮನ್ಸ್‌ಸಭಿಕರು ಪ್ರಬಲ ಪ್ರಜೆಯಾದವನಲ್ಲಿ ತಾವೇ ದೋಷಗಳನ್ನು ಆರೋಪಿಸಿ ಆತನನ್ನು ಶ್ರೀಮಂತರಸಭೆಯೆದುರಿಗೆ ವಿಚಾರಣೆಗಾಗಿ ನಿಲ್ಲಿಸುವ ಪದ್ಧತಿ ಹಿಂದಿನಕಾಲದಲ್ಲಿತ್ತು. ರಾಜಾಧಿಕಾರಿಗಳನ್ನೂ ಮಂತ್ರಿಪ್ರಮುಖರನ್ನೂ ದಂಡಿಸಲು ಇದೊಂದುಮಾರ್ಗ. ಸ್ಟೂಯರ್ಟರಕಾಲದಲ್ಲಿ ಪದೇಪದೇ ಈ ಮಾರ್ಗಸಾಧನೆಯಾಯಿತು.

ದರೂ ಸಭೆಯಲ್ಲಿ ಚರ್ಚಿಸುವ ಭಾಷಣದಸ್ವಾತಂತ್ರ್ಯ ತಮಗೆ ಹಿಂದಿನಕಾಲದಿಂದಲೂ ನಡೆದುಬಂದಿರತಕ್ಕುದೆಂದೂ ದೊರೆಹೇಳಿದುದು ಉಚಿತವಲ್ಲವೆಂದೂ ನಿಶ್ಚಯಮಾಡಿ ಸಭಿಕರು ಅದನ್ನು (Protestation) ತಮ್ಮ ಕಡತದಲ್ಲಿ ಬರೆಸಿದರು. ಆ ದಪ್ತರವು ತನ್ನ ಕೈಗೆಬಂದಾಗ ಅದನ್ನು ಕಂಡು ಕೋಪಗೊಂಡು ದೊರೆ ಆ ಪುಟವನ್ನು ಹರಿದು ಹಾಕಿಬಿಟ್ಟು ಸಭೆಗೆ ಮುಕ್ತಾಯದಆಜ್ಞೆಯನ್ನು ಕೊಟ್ಟನು. ಅಸಮಾಧಾನದಿಂದಲೂ ಕೋಪದಿಂದಲೂ ಸಭಿಕರು ಸಭಾತ್ಯಾಗಮಾಡಿದರು.

ಮೂರನೆಸಭೆ ಸೇರಿದಾಗ ದೊರೆಗೂ ಸಭಿಕರಿಗೂ ಮೈತ್ರಿ ತೋರಬಹುದಾಗಿತ್ತು. ಆ ಸಮಯವನ್ನು ದೊರೆ ಕಳೆದುಕೊಂಡನು. ರಾಜನಿಗೂ ಜನರಪ್ರತಿನಿಧಿಗಳಿಗೂ ವಿರೋಧವೇ ಬೆಳೆಯುವಂತಾಯಿತು. ಸಭೆಯನ್ನು ಚದರಿಸಿದಬಳಿಕ ಜೇಮ್ಸ್ ಮಾಡಬಲ್ಲುದೇನು? ಅಳಿಯನಿಗೆಂತಹ ಸಹಾಯಮಾಡುವುದಕ್ಕೂ ಕೈಲಿ ಹಣವಿಲ್ಲ. 1622ರಲ್ಲಿ ತನ್ನ ಸ್ವಂತರಾಜಧಾನಿಯನ್ನು ಕಳೆದುಕೊಂಡ ಫ್ರೆಡರಿಕ್ ರಾಜ್ಯಭ್ರಷ್ಟನಾಗಿಯೇ ಇರಬೇಕಾಯಿತು. ಸಂಧಾನದಲ್ಲಿ ತಾನು ಚಮತ್ಕಾರಿಯೆಂದುಕೊಂಡಿದ್ದ ಜೇಮ್ಸ್ ಸ್ಪೈನಿನ ಸ್ನೇಹಸಂಪಾದಿಸಿ ಆ ಮೂಲಕ ಅಳಿಯನಿಗೆರಾಜ್ಯವನ್ನೂ ಮತಪಂಗಡಗಳಿಗೆ ಶಾಂತಿಯನ್ನೂ ಸಾಧಿಸಬೇಕೆಂದು ಯೋಚಿಸಿ 1623ರಲ್ಲಿ ಯುವರಾಜನನ್ನು ಮದ್ರಿಡ್‌ನಗರಕ್ಕೆ ಕಳುಹಿಸಿದನು.

**ಮದ್ರಿಡ್ ಪ್ರಯಾಣ**

ಯುವರಾಜಚಾರ್ಲ್ಸ್ ಮತ್ತು ಗೆಳೆಯಬಕಿಂಘಂ ಇಬ್ಬರೂ ಮದ್ರಿಡ್ಡಿಗೆ ಹೊರಟು ವಿವಾಹಪ್ರಸ್ತಾಪವನ್ನು ಮುಂದುವರಿಸಿ ಇತ್ಯರ್ಥಮಾಡಿಕೊಳ್ಳಲು ಯತ್ನಿಸಿದರು. ಇಂಗ್ಲಂಡಿನಲ್ಲಿ ರೋಮನ್‌ಕ್ಯಾಥಲಿಕ್‌ಮತಸ್ಥರಿಗೆ ನಿರಾತಂಕವಾದ ಸ್ವಾತಂತ್ರ್ಯವನ್ನು ಕೊಡಬೇಕೆಂದು ಫಿಲಿಪ್ ಕೇಳಿದನು. ಸ್ಪೈನಿನವರು ಆಸ್ಟ್ರಿಯದವರೊಡನೆ ಯುದ್ಧಕ್ಕೆನಿಂತು ಫ್ರೆಡರಿಕ್ಕಿಗೆ ಪ್ಯಾಲಟಿನೇಟ್ ಹಿಂತಿರುಗಿಬರುವಂತೆ ಯತ್ನಿಸಬೇಕೆಂದು ಇಂಗ್ಲಂಡಿನವರು ಕೇಳಿದರು. ಎರಡರಲ್ಲಿ ಯಾವುದೂ ನಡೆಯತಕ್ಕದ್ದಾಗಿರಲಿಲ್ಲ. ಸ್ಪೈನ್‌ರಾಜನು ಆಸ್ಟ್ರಿಯದ ರಾಜನಿಗೆಂದಿಗೂ ವಿರೋಧಿಯಾಗಲಾರನೆಂದು ಸ್ಪಾನಿಷ್‌ಮಂತ್ರಿಯೇ ಹೇಳಿಬಿಟ್ಟನು. ಏನೂಸಾಗದೆ ಯುವರಾಜನೂ ಬಕಿಂಘಮನೂ ಹಿಂತಿರುಗಿ ಇಂಗ್ಲಂಡಿಗೆ ಹೊರಟರು.

ಹಿಂತಿರುಗಿಬಂದಮೇಲೆ ನಡೆದುದನ್ನು ಕೇಳಿದಾಗ ಇಂಗ್ಲಿಷರಿಗೆ ಸ್ಪಾನಿಷರಮೇಲೆ ಕೋಪಬಂತು. ಫ್ರೆಡರಿಕ್‌ಪರವಾಗಿ ಯುದ್ಧಮಾಡಲು ಇಂಗ್ಲಿಷ್‌ಸೈನಿಕರು ಜರ್ಮನಿಗೆ ಹೊರಟರು. ಡೆನ್ಮಾರ್ಕಿನದೊರೆ ಮುಂದೆಬಂದು ಪ್ರಾಟೆಸ್ಟೆಂಟರಿಗೆ ಮುಖಂಡನಾಗಿದ್ದನು. ಆತನೊಂದಿಗೆ ಮೈತ್ರಿಯಸಂಧಾನ ನಡೆಯಿತು. ಕಡೆಗೆ ಸ್ಪಾನಿಷ್ ವಿವಾಹದ ಆಸೆಯನ್ನು ಬಿಟ್ಟು ಫ್ರೆಂಚ್‌ದೊರೆಯ ತಂಗಿಯನ್ನು ಯುವರಾಜನು ಮದುವೆಯಾಗುವಂತೆ ಏರ್ಪಾಡಾಯಿತು.

1624ರಲ್ಲಿ **ನಾಲ್ಕನೆ ಪಾರ್ಲಿಮೆಂಟ್‌ಸಭೆ**ಗೂಡಿತು. ಸ್ಪೈನಿನೊಡನೆ ಯುದ್ಧ ಕೈಗೂಡಿತೆಂದು ಸಭಿಕರಿಗೆ ತೃಪ್ತಿಯಾದಾಗ್ಗೂ ರಾಜನಲ್ಲಿ ಅವಿಶ್ವಾಸತೋರದೆಬಿಡಲಿಲ್ಲ. ವ್ಯಾಪಾರದ ಸರ್ವಮಾನ್ಯಗಳನ್ನು ಯಾರೊಬ್ಬರಿಗೂ ಕೊಡ

**ಕಡೆಯ ಸಭೆ**

ಕೂಡದೆಂಬ ನಿಯಮವನ್ನು ರೂಪಗೊಳಿಸಿ ರೋಮ್ಯಾಕ್ಯಾಥಲಿಕ್ಕರನ್ನು ವಿಧಿಗನುಸಾರವಾಗಿ ದಂಡಿಸಬೇಕೆಂದು ಕೇಳಿದರು. ಯುದ್ಧಬೇಡವೆಂದು ಅಭಿಪ್ರಾಯಪಟ್ಟ ಮಂತ್ರಿಯೊಬ್ಬನನ್ನು ಬೇರೊಂದು ನೆಪವಿಟ್ಟು ಇಂಪೀಚ್‌ಮಾಡಿದರು. ಆದರೂ ಈ ಕೊನೆ ಪಾರ್ಲಿಮೆಂಟ್ ನಡೆದಸಮಯದಲ್ಲಿ ಹಿಂದಿನಷ್ಟು ವಿರೋಧತೋರಲಿಲ್ಲ.

ಫ್ರಾನ್ಸಿನಲ್ಲಿ 4ನೆ ಹೆನ್ರಿಯು 1610ರಲ್ಲಿ ದುರ್ಮರಣಕ್ಕೆ ಸಿಕ್ಕಿದನು. ಆತನಮಗ **13ನೆ ಲೂಯಿಯು** ಪಟ್ಟವನ್ನೇರಿದನು. ಆ ದೊರೆಯ ತಂಗಿ **ಹೆನ್ರಿಯಟ ಮರೀಯು** (Henrietta Maria) ಎಂಬಾಕೆಯನ್ನು ಯುವರಾಜಚಾರ್ಲ್ಸ್ ಮದುವೆಯಾಗಬೇಕೆಂದು ನಿಶ್ಚಿತಾರ್ಥವಾಯಿತು. ಅದೇಸಮಯದಲ್ಲಿ ಹಿರಿಯ

**ಜೇಮ್ಸ್ ಮರಣ**

ಜೇಮ್ಸ್‌ದೊರೆ ತನ್ನ ಐವತ್ತೆಂಟನೆವರ್ಷದಲ್ಲಿ ತೀರಿಕೊಂಡನು. ಯಾವಸಮಯದಲ್ಲಿ ಮೌನವಹಿಸಬೇಕು, ಯಾವಸಮಯದಲ್ಲಿ ಗದರಿಸಬೇಕು, ಯಾವಸಮಯದಲ್ಲಿ ಮೃದುವಚನಗಳನ್ನಾಡಬೇಕು ಎಂಬುದೊಂದನ್ನೂ ತಿಳಿಯದೆ ಸಣ್ಣಜಗಳವನ್ನು ದೊಡ್ಡದಾಗಿಮಾಡಿಕೊಳ್ಳುತ್ತ ಇಲ್ಲದ ವ್ಯಾಜ್ಯಗಳಿಗೆ ತನ್ನ ವಾದವೈಖರಿಯಿಂದ ಅವಕಾಶಕೊಡುತ್ತ ಈ ಹಿರೇಜೇಮ್ಸ್ ತನ್ನ ದೊರೆತನವನ್ನು ಮುಳ್ಳಿನಪಂಜರದಂತೆಮಾಡಿ ಮುಗಿಸಿಗೊಪ್ಪಿಸಿದನು.

# ಹಿರೇ ಚಾರ್ಲ್ಸ್ (1625—1649)

ಜನನ 1600 ; ಹೆನ್ರಿಯೆಟ ಮರೀಯಳೊಂದಿಗೆ ವಿವಾಹ 1625 ; ಶಿರಚ್ಛೇದನ 1649.

## ಸಮಕಾಲಿಕ ಪ್ರಭುಗಳು

| ಫ್ರಾನ್ಸ್ | ಸ್ಪೈನ್ | ಸ್ವೀಡೆನ್ |
|---|---|---|
| 13ನೆ ಲೂಯಿ (1610—1643) | 3ನೆ ಫಿಲಿಪ್ (1598—1621) | ಗಸ್ಟೇವಸ್ ಅಡಾಲ್ಫಸ್ (1611—1632) |
| 14ನೆ ಲೂಯಿ (1643—1715) | 4ನೆ ಫಿಲಿಪ್ (1621—1665) | ಕ್ರಿಸ್ಟಿನಾರಾಣಿ (1632—1654) |

ಪಟ್ಟವನ್ನೇರಿದಾಗ ಚಾರ್ಲ್ಸ್‌ಗೆ ಇಪ್ಪತ್ತನಾಲ್ಕು ವರ್ಷ ವಯಸ್ಸು. ತಂದೆಯ ಪಾಂಡಿತ್ಯವಾಗಲಿ ವಾಚಾಳಿತನವಾಗಲಿ ಮಗನಿಗಿರಲಿಲ್ಲ. ಆದರೆ ಸಾಹಿತ್ಯಕಲೆಗಳಲ್ಲಿ ಅಭಿರುಚಿಯಿತ್ತು. ಸೋಮಾರಿಯಾಗಿರಲಿಲ್ಲ; ಗಂಭೀರನಾಗಿಯೂ ಉದಾರಿಯಾಗಿಯೂ ಇದ್ದನು. ಇಂಗ್ಲಿಷ್‌ಚರ್ಚೆಂಬ ಮತಪಂಗಡದವನಾಗಿ ನಿಷ್ಠನಾಗಿದ್ದನು.

**ಸ್ವಭಾವ**

ಆದರೆ ಈ ರಾಜನಿಗೂ ಸಾಕಾದಷ್ಟು ಸಹನವಿರಲಿಲ್ಲ. ಮನುಷ್ಯರ ಯೋಗ್ಯತೆಯನ್ನು ತಿಳಿಯುವ ಜಾಣತನವಿರಲಿಲ್ಲ. ಇಂತಹ ರಾಜನು ರಾಜಾಧಿಕಾರವು ದೈವದತ್ತವೆಂದು ದೃಢವಾದ ಹಟದಿಂದ ನಂಬಿದ್ದನು. ಕೆಲಸಮಯಗಳಲ್ಲಿ ತನ್ನಂತರಂಗವನ್ನು ತಾನೆ ಅರಿಯದವನಂತೆ ನಿಶ್ಚಯಹೀನನಾಗುತ್ತಿದ್ದನು. ಆದ್ದರಿಂದ ಆ ಕಾಲದ ಪಾರ್ಲಿಮೆಂಟ್‌ಸಭೆಗಳನ್ನು ಮೆಚ್ಚಿಸುವ ಉಪಾಯವಾಗಲಿ ಸಾಮರ್ಥ್ಯವಾಗಲಿ ಈ ಚಾರ್ಲ್ಸ್‌ಗಿರಲಿಲ್ಲ. ಇಂಗ್ಲಂಡಿನ ದೊರೆಗಳಲ್ಲಿ ಈತನೇ ಅತಿನಿರ್ಭಾಗ್ಯನಾದವನು. 'ಕ್ಷಣಚಿತ್ತ ಕ್ಷಣಪಿತ್ತ' ವೆಂದಹಾಗಿದ್ದ ತಂದೆಯು ಕಟ್ಟಿಕೊಟ್ಟ ಮುಳ್ಳಿನಪಂಜರದಲ್ಲಿ ಸಿಕ್ಕಿ ಶಿರಚ್ಛೇದನಕ್ಕೆ ಗುರಿಯಾಗಿ ಪ್ರಾಣಬಿಟ್ಟನು.

ಫರಾನ್ಸೀರಾಜಕುವರಿ **ಹೆನ್ರಿಯಟ ಮರೀಯ** (Henrietta Maria)ಳನ್ನು ಈ ದೊರೆ ಮದುವೆಯಾದನು. **ಬಕಿಂಘಂ ಡ್ಯೂಕನು** ಈತನಿಗೆ ಅತ್ಯಾಪ್ತಸ್ನೇಹಿತನೂ ಮಂತ್ರಿಯೂ ಆದನು. ರಾಜನಾದಾಗ ಚಾರ್ಲ್ಸ್‌ಗೆ ಸ್ಪೈನ್‌ದೊರೆಮೇಲೆ ಆಗ್ರಹವೂ ತನ್ನ ಸೋದರಿಯ ದುರವಸ್ಥೆಯಲ್ಲಿ ಮರುಕವೂ ತುಂಬಿತ್ತು. ತನಗಾದ ಅವಮಾನಕ್ಕಾಗಿ ಸ್ಪಾನಿಷರೊಡನೆ ಯುದ್ಧವನ್ನು ಮಾಡಬೇಕೆನಿಸಿತ್ತು. ಅತ್ತಕಡೆ ಡೆನ್ಮಾರ್ಕಿನ ದೊರೆ ಕ್ರಿಶ್ಚಿಯನ್ನನಿಗೆ ಸಹಾಯವನ್ನು ಕಳುಹಿಸಿ ತನ್ನ ಭಾವ ಫ್ರೆಡರಿಕ್ಕಿಗೆ ನೆರವಾಗಬೇಕೆಂಬ ಸತ್ಸಂಕಲ್ಪವೂ ಇತ್ತು.

ರಾಣಿಯಾದಾಕೆಯು ರೋಮನ್‌ಕ್ಯಾಥಲಿಕ್ ಮತವನ್ನವಲಂಬಿಸಿದ್ದವಳು. ಆಕೆಯ ಪರಿವಾರದವರೂ ಅದೇಮತದವರು. ಅರಮನೆಯಲ್ಲಿ ಅವರು ಓಡಾಡುತ್ತಿದ್ದುದು ಇಂಗ್ಲಿಷರಿಗೆ ಇಷ್ಟವಾಗಲಿಲ್ಲ. ದೊರೆತನಕ್ಕೆ ಚಾರ್ಲ್ಸ್ ತೊಡಗಿದಕೂಡಲೆ ಪ್ಯೂರಿಟನ್‌ವಿರೋಧಿಯಾಗಿದ್ದ ಒಬ್ಬ ಪಾದ್ರಿಗೆ ಉದ್ಯೋಗಕೊಟ್ಟನು. ಇದನ್ನು ಕಂಡು 1625ರಲ್ಲಿಸೇರಿದ ಪಾರ್ಲಿಮೆಂಟ್ ಸಭಿಕರು ಅಸಮಾಧಾನಪಟ್ಟರು. **ಕೋಕ್** (Coke), **ಎಲಿಯಟ್** (Eliott), **ವೆಂಟ್ವರ್ತ್** (Wentworth), **ಪಿಂ**(Pym) ಎಂಬವರು ಕಾಮನ್ಸ್‌ಸಭೆಯ ಮುಖಂಡರಾಗಿದ್ದು ಸಮರ್ಥರಾಗಿದ್ದರು. ಅವರೆಲ್ಲರೂ ಕೂಡಿ ದೊರೆಯಲ್ಲಿ ಅವಿಶ್ವಾಸಪಟ್ಟು ಮಾಮೂಲಿನಂತೆ *ಟನ್ನೇಜ್ ಮತ್ತು ಪೌಂಡೇಜ್ (Tonnage and Poundage) ಎಂಬ ಹೆಸರಿನ ಸುಂಕದ ವರಮಾನವನ್ನು ಆಜೀವ ಪರ್ಯಂತವಾಗಿ ಕೊಡದೆ ಒಂದುವರ್ಷಕ್ಕೆಮಾತ್ರ ಕೊಟ್ಟರು. ರೋಮನ್‌ಕ್ಯಾಥಲಿಕ್ ಮತಸ್ಥರನ್ನು ಬಿಡದೆ ದಂಡಿಸಬೇಕೆಂದು ಹೇಳಿದರು. ಉತ್ಸಾಹದಿಂದ ನಡೆಸಬೇಕಾಗಿದ್ದ ಯುದ್ಧಕ್ಕೆ ತಕ್ಕಷ್ಟು ದ್ರವ್ಯವನ್ನು ನೀಡುವರೆಂದು ನಿರೀಕ್ಷಿಸಿದ್ದ ದೊರೆಗೆ ಇದರಿಂದ ವಿಸ್ಮಯವಾಯಿತು. ಈ ಮಧ್ಯೆ ಸ್ಪೈನ್‌ಮೇಲಿನ ಯುದ್ಧದಲ್ಲಿ ನೆರವಾಗಲೆಂದು ಕೊಟ್ಟುಕಳುಹಿಸಿದ್ದ ಕೆಲವು ಇಂಗ್ಲಿಷ್‌ಹಡಗುಗಳನ್ನು ಫರಾನ್ಸೀ ಮಂತ್ರಿಯು ಸ್ವೀಕರಿಸಿಕೊಂಡು ಅವುಗಳನ್ನು ಕೆಲವರುಪ್ರಾಟೆಸ್ಟೆಂಟರಮೇಲೆಯೇ ತಿರುಗಿಸಿದ್ದನು. ಈ ಸಂಗತಿಯು ರಹಸ್ಯವು ಸಭಿಕರಿಗೆ ತಿಳಿಯಲೇಇಲ್ಲ. ಏನೋ ಗೋಪ್ಯವಾಗಿ ನೀಚಸಂಧಾನಗಳಾಗುತ್ತಿವೆಯೆಂದು ಸಭಿಕರಿಗೆ ಅನುಮಾನಮಾತ್ರ ಬಲವಾಗಿ ತೋರಿತು. ಅದೆಲ್ಲಕ್ಕೂ ಬಕಿಂಘಂ ಮೂಲವಾಗಿರಬೇಕೆಂದು ಸಭಾನಾಯಕರು ಆತನ ವಿಚಾರಣೆನಡೆಸುವ ಯೋಚನೆಮಾಡಿದರು. ಸಭಿಕರ ವರ್ತನೆಯನ್ನು ಕಂಡು ದೊರೆಯುಮನಸ್ಸು ಹುಳಿಹುಳಿಯಾಯಿತು. ಪಾರ್ಲಿಮೆಂಟ್ ಸಭೆಗೆ ಮುಕ್ತಾಯದಾಜ್ಞೆಯನ್ನು ಕಳುಹಿಸಿದನು. **ಮೊದಲನೆ ಪಾರ್ಲಿಮೆಂಟ**ನಲ್ಲಿಯೇ ದೊರೆಗೂ ಸಭಿಕರಿಗೂ ಈ ರೀತಿ ವಿರೋಧತೋರಿಕೊಂಡಿತು.

**ಪಾರ್ಲಿಮೆಂಟ್‌ಸಭೆ 1625**

ದೊರೆಯಾಗಲಿ ಮಂತ್ರಿಯಾಗಲಿ ಇದರಿಂದ ಎದೆಗುಂದಲಿಲ್ಲ. ಬಕಿಂಘಮನು ಧೈರ್ಯಶಾಲಿಯಾಗಿಯೂ ರಾಜಭಕ್ತನಾಗಿಯೂ ಇದ್ದವನು. ಆದರೆ ದರ್ಪಕ್ಕೆ ಸಮಾನವಾದ ಜಾಣತನವಾಗಲಿ ಉಪಾಯವಾಗಲಿ ಆತನಲ್ಲಿರಲಿಲ್ಲ. ಗಾಂಭೀರ್ಯವಿದ್ದರೂ ಮಿತಿಮೀರಿದ ಡಾಂಭಿಕತನವಿತ್ತು. ಪಾರ್ಲಿಮೆಂಟ್ ಹಣಕೊಡದಿದ್ದರೂ ಸ್ಪೈನಿನವರು ಮಾಡಿದ ಅವಮಾನಕ್ಕೆ ಪ್ರತೀಕಾರವಾಗಿ ಯುದ್ಧಕ್ಕೆ ಹೊರಡಲೇಬೇಕೆಂದು ಬಕಿಂಘಂ

**ಅಪಹಾಸ್ಯದ ಆಕ್ರಮಣ**

*ಟನ್ ಎಂಬುದೊಂದು ಅಳತೆ; ಪೌಂಡ್ ಎಂಬುದೊಂದು ತೂಕ. ಮದ್ಯದ ಟನ್ ಮತ್ತು ಉಣ್ಣೆಯ ಪೌಂಡ್ ಒಂದಕ್ಕೆ ಇಷ್ಟೆಂದು ವಸೂಲಿಯಾಗುತ್ತಿದ್ದ ಸುಂಕಗಳಿಗೆ ಆ ಹೆಸರು.

ಸಲಹೆ ಕೊಟ್ಟನು. 1625ರಲ್ಲಿ ಕೆಲವು ಇಂಗ್ಲಿಷ್ ಹಡಗುಗಳು **ಕಡೀಸ್** ಬಂದರನ್ನು ಮುತ್ತುವ ಉದ್ದೇಶದಿಂದ ಹೊರಟವು. ಜಯಲಾಭವಾಗಿದ್ದರೆ ದೊರೆಗೆ ಮೇಲಾಗ ಬಹುದಾಗಿತ್ತು ; ಆದರೆ ಆ ಪ್ರಯತ್ನವು ವ್ಯರ್ಥವಾಯಿತು. ಬಂದರಿನೊಳಗೆ ಪ್ರವೇಶ ವನ್ನು ಕೂಡ ಮಾಡಲಾರದೆ ಹಡಗುಗಳು ಹಿಂತಿರುಗಿದವು. ಅದೇ ಕಡೀಸ್ ಬಂದ ರಿನಲ್ಲಿ ಆರ್ಮೇಡ ಸಿದ್ಧವಾಗುತ್ತಿದ್ದಾಗ ನಡೆದ ಡ್ರೇಕನ ಸಾಹಸಕ್ಕೂ ಈ ಶುಷ್ಕ ಪ್ರಯತ್ನಕ್ಕೂ ಎಷ್ಟು ದೂರ! ಕಡೀಸ್ ಆಕ್ರಮಣಪ್ರಯತ್ನವು ಭಾರಿಅವಮಾನದಲ್ಲಿ* ಕೊನೆಗಂಡಿತು.

**ಎರಡನೆ ಪಾರ್ಲಿಮೆಂಟ್ ಸಭೆಯನ್ನು** 1626ರಲ್ಲಿ ದೊರೆ ಕರೆಸಿದನು. ಸಭಿ ಕರು ಸೇರುವವೇಳೆಗೆ ಕಡೀಸಿನ ಪ್ರಯತ್ನವು ನಗುಪಾಟಲಾಗಿತ್ತು. ಬಕಿಂಘಮನ ಅಯೋಗ್ಯತೆಯೇ ಮೂಲಕಾರಣವೆಂಬುದಾಗಿ ಸಭಿಕರು ದೂರಿದರು. ಸಭಿಕರ ನಾಯಕನಾಗಿದ್ದ **ಸರ್ ಜಾರ್ಜ್ ಎಲಿಯಟ್ಟನು** ಎಲ್ಲಕ್ಕೂ ಮೊದಲು ಬಕಿಂಘಮನ

**ಬಕಿಂಘಂ**

ವಿಚಾರಣೆ ನಡೆಯತಕ್ಕದ್ದೆಂದನು. ರಾಷ್ಟ್ರದ ಸುಸ್ಥಿತಿಗೂ ಮತಕ್ಕೂ ಬಕಿಂಘಂ ದ್ರೋಹಿಯೆಂದೂ ಆತನನ್ನು ಕೆಲಸ ದಿಂದ ತೆಗೆಯಬೇಕೆಂದೂ ಸಭಿಕರು ದೊರೆಯಲ್ಲಿ ವಿನಂತಿ ಮಾಡಿದರು. ದೊರೆಯುಮನಸ್ಸಿಗೆ ಬಹಳ ಅಸಮಾಧಾನ ತೋರಿತು. ಈ ಎರಡನೆ ಪಾರ್ಲಿಮೆಂಟ್‌ಸಭೆಯು ಬೇಗನೆ ಮುಕ್ತಾಯದ ಆಜ್ಞೆಗೆ ಒಳಗಾಯಿತು.

ಏತನ್ಮಧ್ಯೆ ಫ್ರಾನ್ಸಿನೊಡನೆ ಮನಸ್ತಾಪತೋರಿಕೊಂಡಿತ್ತು. ಅಲ್ಲಿ ದೊರೆಯಾಗಿದ್ದ **13ನೆ ಲೂಯಿ** (Louis XIII) ಗೆ **ಕಾರ್ಡಿನಲ್ ರಿಷ್‌ಲೂ**(Cardinal Richelieu)

**ಲಾರೊಷೆಲ್ ಮುತ್ತಿಗೆ**

ಎಂಬ ಅತಿಸಮರ್ಥನಾದ ಮಂತ್ರಿಯಿದ್ದನು. ಫ್ರೆಂಚರಿಗೂ ಸ್ಪಾನಿಷರಿಗೂ ವಿರೋಧವೇ ಹಿಂದಿನಿಂದಲೂ ನಡೆದುಬಂದಿದ್ದ ಸಂದರ್ಭದಲ್ಲಿ ಇಂಗ್ಲಂಡಿನಲ್ಲಿ ಫ್ರೆಂಚರ ಮೈತ್ರಿಯಿರುವುದು ಸಹಜವಾಗಿತ್ತು. ಫ್ರೆಂಚ್‌ರಾಜಕುಮಾರಿಯೇ ಇಂಗ್ಲಂಡಿನ ರಾಣಿಯಾಗಿದ್ದಳಲ್ಲವೆ? ಆದರೂ ಜಗಳವು ತೋರಿತು. ಫ್ರಾನ್ಸ್‌ರಾಜ್ಯದಲ್ಲಿ ಪ್ರಾಟೆಸ್ಟೆಂಟರ ಗುಂಪೊಂದಿತ್ತು ; ಅವರಿಗೆ **ಹ್ಯೂಗಿನೊ** ಗುಂಪೆಂದು ಹೆಸರು. ಹಿಂದಿನ ದೊರೆ 4ನೆ ಹೆನ್ರಿಯು ಆ ಜನರಿಗೆ **ಲಾರೊಷೆಲ್** ಎಂಬ ತೀರಪಟ್ಟಣವನ್ನು ಕೊಟ್ಟು ಮತಸ್ವಾತಂತ್ರ್ಯವನ್ನಲ್ಲದೆ ಆಡಳಿತದ ಸ್ವಾತಂತ್ರ್ಯವನ್ನೂ ಕೊಟ್ಟಿದ್ದನು. ರಿಷ್‌ಲೂ ಮಂತ್ರಿಯು ಹ್ಯೂಗಿನೊ ಜನರ ಆಡಳಿತಸ್ವಾತಂತ್ರ್ಯವನ್ನು ಮುರಿಯಲು ಸನ್ನಾಹಗೊಂಡನು ; ಮತಸ್ವಾತಂತ್ರ್ಯಕ್ಕೆ

---

*ಇದನ್ನು ಕುರಿತು ಕುಚೋದ್ಯಗಾರನೊಬ್ಬನು—

There was a fleet that went to Spain ;
When it got there, it came back again

ಎಂದು ಗೇಲಿ ಪದ್ಯವನ್ನು ರಚಿಸಿದನು ,

ಅಡ್ಡಿ ಮಾಡಲಿಲ್ಲ. ಆದರೂ ಹ್ಯೂಗಿನೊ ಜನರು ತಮ್ಮ ಸ್ವಾತಂತ್ರ್ಯವನ್ನುಳಿಸಿಕೊಳ್ಳಲು ಹೋರಾಟಕ್ಕೆ ನಿಂತರು. ರಿಷ್‌ಲೂಮಂತ್ರಿಯು ಲಾರೊಷೆಲ್ಲನ್ನು ಮುತ್ತಿಬಿಟ್ಟನು. ಈ ಮುತ್ತಿಗೆ ನಡೆಯುವಮೊದಲೆ ಇಂಗ್ಲಿಷರಿಂದ ಎರವಾಗಿ ಪಡೆದಿದ್ದ ಕೆಲವು ಹಡಗುಗಳನ್ನು ಆ ಮಂತ್ರಿ ಹ್ಯೂಗಿನೋಜನರಮೇಲೆ ಪ್ರಯೋಗಿಸಿದ್ದನು. ಇದರಿಂದಲೇ ಅಸಮಾಧಾನತೋರಿತ್ತು. ಅಂತಹ ಸಮಯದಲ್ಲಿ ಬಕಿಂಘಮನ ಧೂರ್ತವರ್ತನೆಯೂ ಸೇರಿತು. ಇಷ್ಟೆಲ್ಲಸೇರಿ ಮನಸ್ತಾಪ ಬೆಳೆದಿದ್ದಾಗ 1627ರಲ್ಲಿ ಬಕಿಂಘಂ ದೊರೆಯನ್ನೊಪ್ಪಿಸಿ ಹ್ಯೂಗಿನೋಜನರಿಗೆ ಸಹಾಯಮಾಡುವ ಉದ್ದೇಶದಿಂದ ರೊಷೆಲ್‌ಬಳಿಯಿದ್ದ **ರೆ** (Rhe') **ದ್ವೀಪವನ್ನು** ಆಕ್ರಮಿಸಲು ಸೈನ್ಯವೆತ್ತಿ ಹೊರಟನು. ಆ ಪ್ರಯತ್ನ ಕೆಟ್ಟಿತು. ಬಕಿಂಘಂ ಸ್ವತಃ ಹೊರಟು ರೆ ದ್ವೀಪವನ್ನು ಮುತ್ತಿದನು. ಮೊದಲು ಗೆದ್ದರೂ ಗೆದ್ದುದನ್ನುಳಿಸಿಕೊಳ್ಳಲಾರದೆ ಇನ್ನೂ ಹೆಚ್ಚಿನ ಸೈನ್ಯಬೇಕೆಂದು ಹಿಂತಿರುಗಿದನು.

ದೊರೆಗೆ ಮೂರುಕಡೆಗಳಲ್ಲಿ ಯುದ್ಧದ ಅಗತ್ಯ. ಸ್ಪೈನಿನೊಡನೆ ಯುದ್ಧವೊಂದುಕಡೆ, ಭಾವನ ಪರವಾಗಿ ಕ್ರಿಶ್ಚಿಯನ್ನನಿಗೆ ಸಹಾಯಮಾಡುವುದೊಂದುಕಡೆ, ಭಾವಮೈದುನನ ರಾಜ್ಯದವರೊಂದಿಗೆ ಯುದ್ಧವಿನ್ನೊಂದುಕಡೆ. ನಿತ್ಯವೆಚ್ಚಕ್ಕೇ ಸಾಕಾದಷ್ಟು ಹಣವನ್ನು ಪಾರ್ಲಿಮೆಂಟಿನವರೊದಗಿಸದೆಹೋದರು. ಆಗ ದೊರೆ ಮಾಡತಕ್ಕುದೇನು? ದೈವದತ್ತಾಧಿಕಾರದ ಸಿದ್ಧಾಂತದಲ್ಲಿ ವಿಶ್ವಾಸವನ್ನು ತ್ಯಜಿಸಿ ಪಾರ್ಲಿಮೆಂಟ್ ಸಭಿಕರನ್ನೊಪ್ಪಿಸಬಲ್ಲವನಾಗಿದ್ದರೆ ಬೇರೆ ರೀತಿಯಾಗಬಹುದಾಗಿತ್ತು. ಆದರೆ ಚಾರ್ಲ್ಸ್ ಸಹಜಗಂಭೀರನಾದವನು; ಬಕಿಂಘಮನಲ್ಲಿ ಆಪ್ತತೆಯುಳ್ಳವನು. ಹುಟ್ಟಿನಿಂದ ದೊರೆಯಾಗಿದ್ದವನು ಪ್ರಜಾನಾಯಕರಿಗೆ ವಶನಾಗಲು ಒಪ್ಪಲಿಲ್ಲ.

**ಅಕ್ರಮ**

ಆದ್ದರಿಂದ ಈದೊರೆ ಪಾರ್ಲಿಮೆಂಟಿನ ಅನುಮತಿಯಿಲ್ಲದಿದ್ದರೂ ಟನ್ನೇಜು ಪೌಂಡೇಜುಗಳನ್ನೂ ಇತರ ಸುಂಕತೆರಿಗೆಗಳನ್ನೂ ವಸೂಲ್ಮಾಡಿಸುತ್ತಲೇ ಇದ್ದನು. ಯುದ್ಧಕ್ಕಾಗಿ ಹಿಂದಿನ ರಾಜರು ಬಯಸಿದ್ದಂತೆ ಕಾಣಿಕೆಗಳನ್ನೂ ಬಲವಂತದ ಸಾಲಗಳನ್ನೂ ಕೇಳಿದನು. ಕೆಲವರು ಕೊಡದೆ ಮುಷ್ಕರ ಹಿಡಿದರು; ಅಂತಹವರನ್ನು ಅವಿಧೇಯರೆಂದು ನ್ಯಾಯಸ್ಥಾನದಲ್ಲಿ ವಿಚಾರಣೆಗೆ ಗುರಿಪಡಿಸಿದನು. ಬಲವಂತಸಾಲಗಳನ್ನೆತ್ತುವುದು ವಿಧಿವಿರುದ್ಧವೆಂದು ಒಬ್ಬ ನ್ಯಾಯಾಧೀಶನು ಅಭಿಪ್ರಾಯಪಟ್ಟನು. ದೊರೆ ಆತನನ್ನು ಕೆಲಸದಿಂದ ತೆಗೆಸಿದನು. ತನ್ನ ಆಜ್ಞೆಗೆ ವಿರೋಧತೋರಿದವರನ್ನು ಸ್ವೇಚ್ಛೆಯಾಗಿ ದಸ್ತಗಿರಿಮಾಡಿಸಿದನು. ವಾರಂಟಿಲ್ಲದೆ ಅಥವಾ ಕಾರಣವನ್ನು ಸ್ಪಷ್ಟವಾಗಿ ಕಾಣಿಸದೆ ದಸ್ತಗಿರಿಮಾಡುವುದು ಅಕ್ರಮವಾಗಿತ್ತು. ಆದರೆ ದೊರೆಯಾದ ತಾನು ನಡೆಸಿದ್ದು ಅಕ್ರಮವೆನಿಸಲಾರದೆಂದು ಚಾರ್ಲ್ಸ್‌ನ ಮನಸ್ಸಿನಲ್ಲಿ. ನಿರ್ಬಂಧದ ಸಾಲವನ್ನು ತೆರದಿದ್ದುದಕ್ಕಾಗಿ **ಡಾರ್ನೆಲ್** (Darnell) ಎಂಬಾತನು ಈರೀತಿ ದಸ್ತಗಿರಿಯಾಗಿ

ವಿಚಾರಣೆಗೆ ಗುರಿಯಾದನು. ವಿಚಾರಣೆನಡೆಸಿದ ನ್ಯಾಯಾಧಿಕಾರಿಗಳು ಡಾರ್ನೆಲ್ಲನಿಗೆ ಸೆರೆಯನ್ನು ವಿಧಿಸಿದಾಗ್ಗೂ ಆತನ ದಸ್ತಗಿರಿಯಲ್ಲಿ ಕ್ರಮಭಂಗ ವಾಯಿತೆಂದು ಸೂಚಿಸಿದರು. ಈ ರೀತಿಯಲ್ಲಿ ದೊರೆಗೆ ವಿರೋಧತೋರಲು ಪ್ರಜಾನಾಯಕರಲ್ಲದೆ ಜಡ್ಜಿಗಳೂ ಸಿದ್ಧರಾದರು. ಹಾಗಿದ್ದಲ್ಲಿ ಅಧಿಕಾರ ತಮ್ಮಲ್ಲಿರತಕ್ಕುದೆಂದು ಹಟಹಿಡಿಯುತ್ತಿದ್ದ ಪಾರ್ಲಿಮೆಂಟ್ ಸಭಿಕರು ವಿರೋಧತೋರಲು ಹಿಂಜರಿಯತಕ್ಕವರೇ!

**ಬಲವಂತದ ಸಾಲ**

1628ರಲ್ಲಿ ಪಾರ್ಲಿಮೆಂಟನ್ನು ದೊರೆ ಕರೆಸಬೇಕಾಯಿತು. ಹಣ ಬರಮಾಡಿಕೊಳ್ಳಲು ಗತ್ಯಂತರವೇ ಇರಲಿಲ್ಲ. **ಮೂರನೆ ಪಾರ್ಲಿಮೆಂಟ್ ಸಭೆ** ಸೇರಿತು. ಸೇರಿದಕೂಡಲೆ ಸಭಿಕರು ಅಕ್ರಮಪ್ರವರ್ತನೆಯ ವಿಚಾರವನ್ನೆತ್ತಿಕೊಂಡರು. ವೆಂಟ್ವರ್ತ್, ಪಿಂ, ಎಲಿಯಟ್, ಕೋಕ್ ಮುಂತಾದ ನಾಯಕರು ಚರ್ಚೆನಡೆಸಿ **ಪೆಟಿಷನ್ ಆಫ್ ರೈಟ್** ( Petition of Right ) ಎಂಬ ಪತ್ರವನ್ನು ಸಿದ್ಧಪಡಿಸಿದರು. ಸ್ವೇಚ್ಛೆಯಾದ ತೆರಿಗೆಸುಂಕಗಳನ್ನೆತ್ತುವುದು, ಕಾರಣತೋರದೆ ದಸ್ತಗಿರಿಮಾಡಿಸುವುದು, ಸೈನಿಕರನ್ನು ಪೌರರಮನೆಗಳಲ್ಲಿ ಬಲವಂತದ ಅತಿಥಿಗಳನ್ನಾಗಿ(Billeting of soldiers) ಕಳುಹಿಸುವುದು, ಲಷ್ಕರೀ ಆಡಳಿತ (Martial Law)ವನ್ನು ನೆಲೆಗೊಳಿಸುವುದು ಎಂಬ ನಾಲ್ಕು ಅಂಶಗಳನ್ನು ಆ ಪತ್ರದಲ್ಲಿ ವಿವರಿಸಿತ್ತು. ಅವೆಲ್ಲ ಅಕ್ರಮವಾದುದೆಂದೂ ಇನ್ನು ಮುಂದೆ ನಿಷಿದ್ಧವಾಗಿರತಕ್ಕುದೆಂದೂ ಸಭಿಕರು ಕೇಳಿದರು. ಹಣ ಬೇಕಾಗಿದ್ದ ದೊರೆ ಪತ್ರವನ್ನೊಪ್ಪಿಕೊಂಡನು; ಸಭಿಕರು ತಕ್ಕಷ್ಟುಮಾತ್ರ ಹಣವನ್ನು ಕೊಡಿಸಿದರು. ಪೆಟಿಷನ್ ಆಫ್ ರೈಟ್ ಎಂಬ ಪತ್ರವು ಪಾರ್ಲಿಮೆಂಟಿನ ಅಧಿಕಾರವನ್ನು ಸ್ಥಾಪಿಸಿದಂತೆ ತೋರಿತು. ಆ ಕಾರಣದಿಂದ ಅದು ಮುಖ್ಯವೆನಿಸಿದೆ. ಆದರೆ ಅಷ್ಟರಿಂದಲೇ ಸಭಿಕರಿಗೆ ತೃಪ್ತಿಯಾಗಲಿಲ್ಲ. ಏಕಂದರೆ ಬಕಿಂಘಮನನ್ನು ದೊರೆ ಬಿಡದಿದ್ದುದಲ್ಲದೆ ಟನ್ನೇಜುಪೌಂಡೇಜುಗಳನ್ನು ಸಭೆಯ ಅನುಮತಿಯಿಲ್ಲದೆ ಎತ್ತುತ್ತಲೇ ಇದ್ದನು. ಅವುಗಳ ವಸೂಲಿಯು ಅಕ್ರಮವೆಂದು ಸಭಿಕರು ಸ್ವರವನ್ನೆತ್ತಿದರು; ಆಗ ದೊರೆ ಸಭೆಯ ಸೆಷನ್ನನ್ನು ಮುಗಿಸಿದನು. ಮೂರನೆ ಪಾರ್ಲಿಮೆಂಟ್ ಸಭೆಯ ಮೊದಲನೆ ಸೆಷನ್ ಮುಗಿಯಿತು.

**ಸಭೆಯ ಅಧಿಕಾರಸ್ಥಾಪನೆ**

ಪುನಃ ಸಭೆಸೇರುವುದರೊಳಗಾಗಿ ಎರಡು ಮುಖ್ಯಸಂಗತಿಗಳು ನಡೆದವು. ರೆ ದ್ವೀಪವನ್ನು ಳಿಸಿಕೊಳ್ಳಲು ಬಕಿಂಘಂ ಇನ್ನೊಂದು ಸೈನ್ಯಸನ್ನಾಹಮಾಡಿ ಹ್ಯೂಗಿನೊ ಜನರ ಸಹಾಯಕ್ಕೆ ಹೊರಡಬೇಕೆಂದು **ಪೋರ್ಟ್ಸ್‌ಮತ್** (Portsmouth) ರೇವು ಪಟ್ಟಣದಲ್ಲಿ ಕಾದಿದ್ದನು. ಆಗ **ಜಾನ್ ಫೆಲ್ಟನ್** (John Felton) ಎಂಬ ನಾವಿಕನೊಬ್ಬನು ಬಕಿಂಘಮನನ್ನು **ಖೂನಿಮಾಡಿಬಿಟ್ಟನು**. ಫೆಲ್ಟನ್ನನ್ನು ಗಲ್ಲಿಗೇರಿಸಿದ್ದಾಯಿತು;

ಆದರೆ ರಾಜನ ಆಪ್ತಮಂತ್ರಿಯಾಗಿ ಸಭಿಕರ ದ್ವೇಷಕ್ಕೆ ಪಾತ್ರನಾಗಿದ್ದವನು ಇನ್ನಿಲ್ಲದಾಯಿತು. ಆಗ **ಸರ್ ಥಾಮಸ್ ವೆಂಟ್ವರ್ತ್** (Sir Thomas Wentworth) ಎಂಬ ಸಭಿಕನು ರಾಜನಬಳಿ ಸೇರಿಕೊಂಡನು. ಅದುವರೆಗೂ ಸಭೆಯ ನಾಯಕನಾಗಿದ್ದು ಬಕಿಂಘಮನಲ್ಲಿ ವಿರೋಧವನ್ನು ಸಾಧಿಸುತ್ತಿದ್ದು ಪೆಟಿಷನ್ ಆಫ್ ರೈಟನ್ನು ನಿರೂಪಿಸುವುದರಲ್ಲಿ ಮುಂದಾಗಿದ್ದವನು ಆತನು. ವಿವೇಕಸಾಮರ್ಥ್ಯಗಳನ್ನುಳ್ಳ ಮಂತ್ರಿಗಳಿದ್ದು ಪಾರ್ಲಿಮೆಂಟಿಗೆ ಹೆಚ್ಚು ಆಸ್ಪದಕೊಡದೆ ಆಡಳಿತನಡೆಸಬೇಕೆಂದು ಆತನ ಸಿದ್ಧಾಂತವಾಗಿತ್ತು. ಅಂತೂ ಬಕಿಂಘಮನಸ್ಥಾನಕ್ಕೆ ವೆಂಟ್ವರ್ತ್ ಬಂದನು.

**ಹೊಸಮಂತ್ರಿ**

1629ರಲ್ಲಿ ಎರಡನೆ ಸೆಷನ್ ಸೇರಿತು. ಮತಸಂಬಂಧವಾಗಿ ತಮಗಿದ್ದ ಅತೃಪ್ತಿಯನ್ನು ಸೂಚಿಸಲು ಸಭಿಕರು ಸಿದ್ಧರಾಗಿದ್ದರು. ಆ ಅತೃಪ್ತಿಗೆ ಇತ್ತೀಚೆಗೆ ಕಾರಣವೂ ಒದಗಿತ್ತು. ಮತಾಧಿಕಾರಿಗಳಲ್ಲಿ **ಲಾಡ್** (Laud) ಎಂಬಾತನು ಪ್ರಬಲನಾಗಿದ್ದನು. ದೊರೆಗೂ ಲಾಡನಿಗೂ ಮತವಿಷಯಗಳಲ್ಲಿ ಏಕಾಭಿಪ್ರಾಯವಿತ್ತು. ಇಬ್ಬರೂ **ಆರ್ಮಿನಿಯನ್** (Arminian) ಪಂಥದವರು; ಪ್ಯೂರಿಟನ್ನರೆಂದರೆ ಇಬ್ಬರಿಗೂ ಆಗದು. ಲಾಡನು ಪ್ಯೂರಿಟನ್ನರಿಗೆ ಅನಿಷ್ಟವಾಗಿದ್ದ ಕೆಲಸಕಾರ್ಯಗಳನ್ನು ನಡೆಸಿದ್ದನು. ಸಭಿಕರಲ್ಲಿ ಪ್ಯೂರಿಟನ್ ಪಕ್ಷಪಾತಿಗಳನೇಕರಿದ್ದರು. ಪ್ಯೂರಿಟನ್ನರನ್ನು ಮನ್ನಿಸಿ ರೋಮನ್ ಕ್ಯಾಥಲಿಕ್ಕರನ್ನು ದಂಡಿಸುವ ಇಷ್ಟ ಸಭಿಕರಿಗೆ; ರೋಮನ್ ಕ್ಯಾಥಲಿಕ್ಕರನ್ನು ಮನ್ನಿಸಿ ಪ್ಯೂರಿಟನ್ನರನ್ನು ದಂಡಿಸುವ ಇಷ್ಟ ರಾಜನಿಗೆ. ಆದ್ದರಿಂದ ಸಭೆ ಮೊದಲಾದಕೂಡಲೆ ಸಭಿಕರ ಮುಖಂಡನಾದ ಎಲಿಯಟ್ ಮತದ ವಿಷಯವನ್ನೆತ್ತಿದ್ದನು. ದೊರೆ ಅದಕ್ಕೆ ಸ್ವಲ್ಪವಾದರೂ ಕಿವಿಗೊಡಲಿಲ್ಲ. ಆಗ ಸಭಿಕರು ಪೆಟಿಷನ್ ಆಫ್ ರೈಟ್ ಸ್ವೀಕಾರವಾದ ತರುವಾಯವೂ ನಡೆಯುತ್ತಿದ್ದ ಟನ್ನೇಜು ಪೌಂಡೇಜುಗಳ ವಸೂಲಿಯನ್ನೆತ್ತಿ ಖಂಡಿಸಿದರು. ದೊರೆಗೂ ಸಭಿಕರಿಗೂ ವಿರೋಧವಿನ್ನೂ ಬಲವಾಗಿ ಕೆರಳಿತು. ಸಭೆಯನ್ನು ಮುಕ್ತಾಯಗೊಳಿಸಲು ದೊರೆ ನಿಶ್ಚಯಿಸಿ ಆಜ್ಞೆಯನ್ನು ಕೊಟ್ಟು ಕಳುಹಿಸಿದನು. ಆ ಆಜ್ಞೆ ಹೊರಟಸುದ್ದಿಯನ್ನು ತಿಳಿದಕೂಡಲೆ ಸಮುಖದದೂತನು ಒಳಗೆಬಾರದಂತೆ ಸಭಾಭವನದ ಬಾಗಿಲನ್ನು ಸಭಿಕರು ಬಂಧಿಸಿಬಿಟ್ಟರು. ಸಭಾಧ್ಯಕ್ಷನಿಗೆ ಸಭೆನಡೆಸಲು ಇಷ್ಟವಿರಲಿಲ್ಲ; ಇಬ್ಬರು ಸಭಿಕರು ವೇದಿಕೆಗೆಬಂದು ಅಧ್ಯಕ್ಷನ ರಟ್ಟೆಹಿಡಿದು ಸ್ಥಾನದಲ್ಲಿ ಕುಳ್ಳಿರಿಸಿ ಹಾಗೆಯೇ ಹಿಡಿದುಕೊಂಡರು. ಎಲಿಯಟ್ ಎದ್ದುನಿಂತು ಉಗ್ರವಾದ ಭಾಷಣವನ್ನು ಮಾಡಿ 'ಆರ್ಮಿನಿಯನ್ ಪಂಥದ ಆಚರಣೆಗಳಿಗೊಪ್ಪಿಕೊಂಡು ಆ ಪಂಥದ ಉದ್ಯೋಗಸ್ಥರಿಗೆ ನೆರವಾದವರೂ ಅಕ್ರಮವಾಗಿ ಎತ್ತುವ ತೆರಿಗೆ ಸುಂಕ ಕಾಣಿಕೆ ಮೊದಲಾದವುಗಳನ್ನು ಸಲ್ಲಿಸಿದವರೂ ದ್ರೋಹಿಗಳೆನಿಸತಕ್ಕವರು'

**ಮತಾಚಾರದ ಹಟ**

**ಎಲಿಯಟ್ಟನ ಸಂಕಲ್ಪಗಳು**

ಎಂಬ ಸಂಕಲ್ಪಗಳನ್ನು ಸಭೆಯಲ್ಲಿ ನಡೆಸಿಬಿಟ್ಟನು. ಬಹುಭಾಗದವರು ಉತ್ಸಾಹ ದಿಂದ ಅವುಗಳನ್ನೊಪ್ಪಿದರು. ಆ ಬಳಿಕ ಬಾಗಿಲನ್ನು ತೆರೆದು ರಾಜದೂತನು ತಂದಿದ್ದ ಆಜ್ಞೆಯನ್ನು ಸ್ವೀಕರಿಸಿ ಸಭಾತ್ಯಾಗಮಾಡಿದರು.

ಈ ಸಂಕಲ್ಪಗಳ ಅರ್ಥವೇನು? 'ಪಾರ್ಲಿಮೆಂಟನ್ನು ಅಲಕ್ಷ್ಯಮಾಡಿದ ರಾಜ ನನ್ನೂ ರಾಜಾಧಿಕಾರಿಗಳನ್ನೂ ರಾಜ್ಯದಲ್ಲಿ ಅಲಕ್ಷ್ಯಮಾಡತಕ್ಕದ್ದು' ಎಂದಾಯಿತು. ರಾಜನಲ್ಲಿಯೂ ರಾಜಾಧಿಕಾರಿಗಳಲ್ಲಿಯೂ ವಿರೋಧತೋರುವುದು ಅವಶ್ಯಕರ್ತವ್ಯ ವೆಂದೇ ಸಾರಿದಹಾಗಾಯಿತು. ಸಭಾವಿಸರ್ಜನೆಯಾದಕೂಡಲೆ ರಾಜನು **ಎಲಿಯಟ್, ಹಾಲಿಸ್** (Holles), **ಸ್ಟ್ರೋಡ್ಸ್** (Strodes), **ಸೆಲ್ಡೆನ್** (Selden), **ವಾಲೆಂಟೀನ್** (Valentine) ಮುಂತಾದ ಸಭಾನಾಯಕರನ್ನು ದಸ್ತಗಿರಿಮಾಡಿಸಿ ಸೆರೆಯಲ್ಲಿಡಿಸಿದನು. ಅವರಲ್ಲಿ ಎಲಿಯಟ್ಟೆಂಬಾತನು ಸಭೆಗೆ ಭೂಷಣದಂತಿದ್ದನು. ಧೈರ್ಯಶಾಲಿಯಾಗಿ ಅನ್ಯಾಯವನ್ನು ಪ್ರತಿಭಟಿಸಿದ್ದನು. ಆತನನ್ನು ದೊರೆಯು ಟವರಿನ ಸೆರೆಮನೆಯಲ್ಲಿ ಹಾಕಿಸಿಬಿಟ್ಟನು. ವಿಚಾರಣೆ ನಡೆಯಲೇ ಇಲ್ಲ. ಸೆರೆಯಲ್ಲಿ ಎಲಿಯಟ್ಟನಿಗೆ ಕಾಲಕ್ಕೆ ತಕ್ಕ ಉಪಚಾರವಿಲ್ಲದೆ ಕಾಹಿಲೆಬಂತು. ಆಗ ಆತನನ್ನು ನೋಡಬೇಕೆಂದು ಆತನ ಹೆಂಡತಿ ಮಕ್ಕಳು ಬೇಡಿದರು. ರಾಜನು ಆಸ್ಪದಕೊಡಲಿಲ್ಲ. ರೋಗದಿಂದ ನರಳಿ ಎಲಿಯಟ್ಟನು ಟವರಿನಲ್ಲಿಯೇ ಪ್ರಾಣ ಬಿಟ್ಟನು. ಆಗ ಆತನ ಶವವನ್ನು ತೆಗೆಸಿಕೊಂಡು ಸ್ವಂತ ಊರಿನಲ್ಲಿ ಸಂಸ್ಕಾರ ನಡೆಸಬೇಕೆಂದು ಆತನ ಮಗನು ಬೇಡಿಕೊಂಡನು. ಆಗಲೂ ರಾಜನು ನಿರ್ದಯನಾಗಿ ವರ್ತಿಸಿಬಿಟ್ಟನು. ಎಲಿಯಟ್ಟನನ್ನು ಟವರಿನಲ್ಲಿಯೇ ಹೂಳಿ ದರು. ಸತ್ತಮೇಲೆಕೂಡ ದ್ವೇಷವನ್ನೂ ಕ್ರೌರ್ಯವನ್ನೂ ಸಾಧಿಸಿದ ರಾಜನ ನಡತೆ ಯನ್ನು ಜನರು ಸಹಿಸದಾದರು.

**ದುರಾಗ್ರಹ**

ತನ್ನ ಮೂರನೆ ಪಾರ್ಲಿಮೆಂಟನ್ನು ಈರೀತಿ ವಿಸರ್ಜಿಸಿದ ತರುವಾಯ ಚಾರ್ಲ್ಸ್ ದೊರೆಯು ಮನಸ್ಸನ್ನು ಗಟ್ಟಿಮಾಡಿಕೊಂಡು ಪಾರ್ಲಿಮೆಂಟನ್ನು ನೆರೆಸದೆಯೇ ಆಡಳಿತ ವನ್ನು ನಡೆಸುವ ನಿಶ್ಚಯಮಾಡಿಕೊಂಡನು. 1625ರಿಂದ 1629ರವರೆಗೆ ನಡೆದ ನಾಲ್ಕುವರುಷಗಳಲ್ಲಿ ನೆರೆದ ಮೂರುಸಭೆಗಳೊಡನೆಯೂ ವಿರೋಧವೇ ನಡೆಯಿತು. ಕಾಲಕಳೆಯುತ್ತ ವಿರೋಧವು ಹೆಚ್ಚುತ್ತೇವಿನಾ ತಗ್ಗದಾಯಿತು. 1629ರಿಂದ ಮುಂದಕ್ಕೆ ಹನ್ನೊಂದುವರ್ಷಕಾಲ ಈ ರಾಜನು ಪಾರ್ಲಿಮೆಂಟನ್ನು ಕರೆಸಲೇ ಇಲ್ಲ. ಅದಕ್ಕೆ ಅದನ್ನು **ಹನ್ನೊಂದುವರ್ಷಕಾಲದ ನಿಷ್ಠುರಶಾಸನ**ವೆನ್ನುವುದುಂಟು. ಸ್ಪೈನ್ ಯುದ್ಧ, ಮೂವತ್ತುವರ್ಷಗಳ ಯುದ್ಧ ಮತ್ತು ಫ್ರಾನ್ಸಿ ನೊಡನೆ ಯುದ್ಧಗಳನ್ನು ಕಟ್ಟಿಕೊಂಡು ಎಲ್ಲೆಲ್ಲಿಯೂ ಆಶಾ ಭಂಗವನ್ನೇ ಹೊಂದಿದ್ದ ದೊರೆಗೆ ಪಾರ್ಲಿಮೆಂಟಿನವರು ತನ್ನ ಮಂತ್ರಿಯಮೇಲೆ ವಿಷಕಾರುತ್ತಿದ್ದು ಆಡಿಗಡಿಗೂ ತನ್ನ ಕೆಲಸಕಾರ್ಯಗಳಿಗೆ ಅಡ್ಡಿ

**ರಾಜನ ಹಟ**

ಪಡಿಸಿದರೆಂದು ಕ್ರೋಧವಿತ್ತು. ವೆಂಟ್ವರ್ತನಿಗೆ **ಲಾರ್ಡ್ ಸ್ಟ್ರಾಫರ್ಡ್** (Earl of Strafford) ಎಂಬ ಬಿರುದನ್ನಿತ್ತು ಆಪ್ತಮಂತ್ರಿಯಾಗಿಯೂ ವಿಲಿಯಂ ಲಾಡನಿಗೆ **ಕ್ಯಾಂಟರ್ಬರಿಯ ಆರ್ಚ್‌ಬಿಷಪ್** ಪದವಿಯನ್ನು ಕೊಟ್ಟು ಮುಖ್ಯ ಮತಾಧಿಕಾರಿಯಾಗಿಯೂ ಇಟ್ಟುಕೊಂಡು ಚಾರ್ಲ್ಸ್ ನಿಷ್ಠುರಶಾಸನಕ್ಕೆ ತೊಡಗಿದನು. ಆತನ ರಾಣಿ ಫ್ರಾನ್ಸ್‌ದೇಶದವಳಾಗಿದ್ದುದರಿಂದ ಫ್ರಾನ್ಸ್‌ರಾಜನ ನಿರಂಕುಶಪ್ರವರ್ತನೆಯನ್ನೇ ಕಂಡಿದ್ದವಳು. ಆದ್ದರಿಂದ ಆಕೆ ರಾಜನ ಸ್ವೇಚ್ಛಾಚಾರವನ್ನು ಪ್ರೋತ್ಸಾಹಿಸುತ್ತಿದ್ದಳು. ಮೂರುದೇಶಗಳೊಡನೆ ಯುದ್ಧಗಳನ್ನು ನಡೆಸಬೇಕಾಗಿದ್ದುದಲ್ಲದೆ ಇಂಗ್ಲಂಡ್, ಐರ್ಲಂಡ್ ಮತ್ತು ಸ್ಕಾಟ್ಲಂಡುಗಳನ್ನು ಆಳಬೇಕಾಗಿತ್ತು.

1630ರಲ್ಲಿ ಫ್ರಾನ್ಸ್ ಮತ್ತು ಸ್ಪೈನುಗಳೊಡನೆ ಶಾಂತಿಯ ಒಪ್ಪಂದಗಳನ್ನು ದೊರೆ ನಡೆಸಿದನು. ಪ್ಯಾಲಟಿನೇಟನ್ನು ತನ್ನ ಭಾವನು ಪಡೆಯುವಂತೆ ಸಹಾಯ ಮಾಡುವ ಉದ್ದೇಶವನ್ನು ಮಾತ್ರ ಬಿಡಲಿಲ್ಲ. ಆದರೆ ಸಾಕಾದಷ್ಟು ಹಣವಿಲ್ಲದಿದ್ದಾಗ ಸಾರ್ಥಕವೆನಿಸಿದ ಯಾವ ಸಹಾಯವನ್ನು ಮಾಡುವುದಕ್ಕೂ ಆಗಲಿಲ್ಲ.

ಆಡಳಿತದ ವೆಚ್ಚಕ್ಕೆ ತಕ್ಕಷ್ಟು ಹಣವನ್ನೊದಗಿಸಿಕೊಳ್ಳುವುದೇ ಚಾರ್ಲ್ಸ್‌ಗೆ ಕಷ್ಟವಾಗಿತ್ತು. ಟನ್ನೇಜು ಪೌಂಡೇಜುಗಳನ್ನೂ ಏರುಸುಂಕಗಳನ್ನೂ ಎತ್ತುತ್ತಲೇ ಇತ್ತು. ಹಳೆಯ ಸಂಪ್ರದಾಯಗಳನ್ನೂ ಕಾನೂನುಗಳನ್ನೂ ಅನುಕೂಲವಾದಂತೆ ಉಪಯೋಗಿಸಿಕೊಂಡುದಲ್ಲದೆ ಪ್ರತಿಕೂಲವಾದ ವಿಧಿನಿಬಂಧನೆಗಳನ್ನು ತಪ್ಪಿಸಿಕೊಳ್ಳುವ ಉಪಾಯದ ದಾರಿಗಳನ್ನೂ ಅವಲಂಬಿಸಲಾಯಿತು. ನಲವತ್ತು ಪೌಂಡುಗಳ ಆದಾಯವಿರತಕ್ಕ ಭೂಸ್ಥಿತಿಯುಳ್ಳವರು ಕಾಣಿಕೆ ಸಮರ್ಪಿಸಿ **ನೈಟ್** (Knight) ಬಿರುದನ್ನು ಪಡೆಯಬೇಕೆಂಬ ಸಂಪ್ರದಾಯವನ್ನೆತ್ತಿ ಹಿಡಿದು ಆರೀತಿಯಲ್ಲಿ ಬಿರುದನ್ನು ಪಡೆದವರಿಂದ ಕಾಣಿಕೆಯನ್ನೂ ಬಿರುದನ್ನು ಪಡೆಯದಿದ್ದವರಿಂದ ಜುಲ್ಮಾನೆಯ ಹಣವನ್ನೂ ಪಡೆದುದಾಯಿತು.

**ಹಣದ ವಸೂಲಿ**

**ಅರಣ್ಯ**ಗಳೆಲ್ಲ ರಾಜನದೆನಿಸಿದ್ದವು; ಅವುಗಳನ್ನು ಸ್ವಲ್ಪಮಾತ್ರವಾದರೂ ಆಕ್ರಮಿಸಿದ್ದರೆ ಸಾಕು ಅಪರಾಧವೆನ್ನಿಸುವಂತಹ ಹಳೆಯ ನಿಬಂಧನೆಯೊಂದಿತ್ತು. ಅದನ್ನು ಪ್ರಯೋಗಿಸಿ ಅರಣ್ಯಕ್ಕೆ ಹಿಂದೆ ಸೇರಿದ್ದ ಭೂಮಿಯನ್ನು ಉಪಯೋಗಿಸಿಕೊಂಡಿದ್ದವರಿಂದ **ಜುಲ್ಮಾನೆ**ಯನ್ನು ವಸೂಲಿಮಾಡಲಾಯಿತು. ವ್ಯಾಪಾರದ **ಸರ್ವಮಾನ್ಯಸನ್ನದು**ಗಳನ್ನು ಯಾರೊಬ್ಬರಿಗೂ ಕೊಡಬಾರದೆಂದು ವಿಧಿಯಿದ್ದಿತು; ರಾಜನು ಅವುಗಳನ್ನು ಕಂಪೆನಿಗಳಿಗೆ ಮಾರಿ ತಾನು ವಿಧಿಯನ್ನೇನೂ ಮುರಿಯಲಿಲ್ಲವೆಂದನು. ಹಣದ ಸಂಪಾದನೆಯ ಪ್ರಯತ್ನದಲ್ಲಿ ಭೂಸ್ಥಿತಿವಂತರಿಗೂ ವರ್ತಕರಿಗೂ ಸಾಮಾನ್ಯಜನರಿಗೂ ಆಡಳಿತವು ಹಿಂಸೆಯಾಗಿಯೇ ಪರಿಣಮಿಸಿತು. ತೆರದ ತಪ್ಪಿಗಾಗಿ ಅತ್ಯಧಿಕವಾದ ಜುಲ್ಮಾನೆಗಳನ್ನು ಹಾಕುತ್ತಿದ್ದುದರಿಂದ ಸಾಮಾನ್ಯವಾಗಿ ಮೊದಮೊದಲು ಜನರು ರಾಜಾಧಿಕಾರಿಗಳಲ್ಲಿ ಭಯದಿಂದ ಹಣ ಸಲ್ಲಿಸಿದರು. ಆದರೆ ಕೆಲವರ್ಗಗಳುಮಾತ್ರ.

1633ರಲ್ಲಿ ವೆಂಟ್ವರ್ತನು ಐರ್ಲಂಡಿಗೆ **ಲಾರ್ಡ್ ಡೆಪ್ಯುಟಿ**ಯಾದನು; ಲಾಡನು ಕ್ಯಾಂಟರ್ಬರಿಯ ಆರ್ಚ್‌ಬಿಷಪ್ಪಾದನು. ಐರ್ಲಂಡಿನಲ್ಲಿ ವೆಂಟ್ವರ್ತನು ರಾಜಪ್ರತಿನಿಧಿಯಾಗಿ ರಾಜಾಧಿಕಾರವನ್ನು ಭದ್ರಪಡಿಸಲು ತೊಡಗಿದನು. ಆತನು ರಾಜನಿಗೆ ಬರೆದ ಪತ್ರಗಳಲ್ಲಿ '**ಥರೋ**' (Thorough)ಎಂಬ ಮಾತನ್ನು ಪಯೋಗಿಸಿದ ಕಾರಣದಿಂದ ಆತನ ನೀತಿಗೆ ಅದು ಹೆಸರಾಗಿಹೋಯಿತು. ಅರ್ಧಂಬರ್ಧವಾಗಿ ಕೆಲಸವನ್ನು ಮಾಡದೆ ಪೂರ್ತಿಯಾಗಿ ನೆರವೇರಿಸತಕ್ಕುದೆಂಬುದು ಅದರ ಅರ್ಥ. ಅಧಿಕಾರವನ್ನು ವಹಿಸಿದ ಬಳಿಕ ವೆಂಟ್ವರ್ತನು ಐರ್ಲಂಡಿನ ಆಡಳಿತದ ಅಕ್ರಮಗಳನ್ನು ಸರಿಪಡಿಸುತ್ತ ಸೈನ್ಯವನ್ನು ಬಲಪಡಿಸಿ ಅಲ್ಲಿ ಪ್ರಾಟೆಸ್ಟೆಂಟ್ ಮತವು ವ್ಯಾಪಿಸುವಂತೆ ಪ್ರಯತ್ನಿಸಿದನು. ಜೇಮ್ಸ್‌ನ ಕಾಲದಲ್ಲಿ ಅಲ್‌ಸ್ಟರ್‌ಪ್ರಾಂತದಲ್ಲಿ ಪ್ರೆಸ್ಬಿಟೇರಿಯನ್ ಸ್ಕಾಟರೂ ಪ್ರಾಟೆಸ್ಟೆಂಟ್ ಇಂಗ್ಲಿಷರೂ ಭೂಮಿಗಳನ್ನು ಪಡೆದಿದ್ದರಷ್ಟೆ. ಉಳಿದ ವಿಭಾಗಗಳಲ್ಲೆಲ್ಲ ರೋಮನ್ ಕ್ಯಾಥಲಿಕ್ ಮತನಿಷ್ಠರಾದ ಐರಿಷ್‌ಕುಲಸ್ಥರೇ ಇದ್ದರು. ಇಂಗ್ಲಂಡಿನಲ್ಲಿ ಸ್ಥಾಪಿತವಾಗಿದ್ದ ಚರ್ಚ್ ಪದ್ಧತಿಗಳನ್ನು ಪ್ರೆಸ್ಬಿಟೇರಿಯನ್ನರಾಗಲಿ ರೋಮನ್ ಕ್ಯಾಥಲಿಕ್ಕರಾಗಲಿ ಒಪ್ಪಿಕೊಳ್ಳುವ ಹಾಗಿರಲಿಲ್ಲ. ಸಮರ್ಥನಾಗಿದ್ದುದರಿಂದ ಪುಂಡುಜನರನ್ನು ಅಡಗಿಸಿ ಪ್ರಯಾಣದ ಅನುಕೂಲವನ್ನೂ ಹಲಕೆಲವು ವ್ಯಾಪಾರೋದ್ಯೋಗಗಳನ್ನೂ ಸಾಧಿಸಿ ನೆಮ್ಮದಿಯನ್ನು ವೆಂಟ್ವರ್ತನು ನೆಲೆಗೊಳಿಸಿದನು. ಆದರೆ ರಾಜಾಧಿಕಾರವೇ ಸರ್ವಶ್ರೇಷ್ಠವೆಂದು ಸ್ಥಾಪಿಸುವ ಉದ್ಯಮದಲ್ಲಿ ಕೆಲವು ಅನ್ಯಾಯಗಳನ್ನು ನಡೆಸಿದನು. **ಕನ್ನಾಟ್** (Connaught) ವಿಭಾಗವನ್ನು ಐರಿಷರಿಂದ ಕಿತ್ತುಕೊಂಡು ಪ್ರಾಟೆಸ್ಟೆಂಟ್ ಇಂಗ್ಲಿಷರಿಗೆ ಕೊಡಿಸಲು ಯತ್ನಿಸಿದನು. ಐರಿಷ್‌ಕುಲಮುಖ್ಯರಲ್ಲಿ ತಿರಸ್ಕಾರತೋರಿದನು. ರಾಜಾಧಿಕಾರ ಹೆಚ್ಚಿದುದನ್ನೂ ಆಂಗ್ಲಿಕನ್ ಮತದ ಬಲವಂತವನ್ನೂ ಕಂಡು ಅಲ್ಲಿಯ ಇಂಗ್ಲಿಷ್ ಮತ್ತು ಸ್ಕಾಟ್ ನಿವಾಸಿಗಳಿಗೆ ಅಸಮಾಧಾನ ತೋರಿತು. ಆದರೆ ವೆಂಟ್ವರ್ತನು ಸೈನ್ಯಬಲವನ್ನು ಕಟ್ಟಿಕೊಂಡು ತನಗೆ ವಿರೋಧಿಗಳಾದವರನ್ನು ಅಡಗಿಸುತ್ತಿದ್ದನು. ಹೀಗಿದ್ದಾಗ 1639ರಲ್ಲಿ ರಾಜನು ಆತುರವಾಗಿ ವೆಂಟ್ವರ್ತನನ್ನು ಇಂಗ್ಲಂಡಿಗೆ ಬರಮಾಡಿಕೊಂಡನು.

**ಐರ್ಲಂಡಿನಲ್ಲಿ**

ಆರ್ಚ್‌ಬಿಷಪ್ ಪದವಿಯನ್ನು ಪಡೆದ ಲಾಡನು ಆರ್ಮಿನಿಯನ್ ಪಂಥದವನು. ಆಂಗ್ಲಿಕನ್‌ಚರ್ಚೆಂಬ ಪದ್ಧತಿಗೂ ಅದಕ್ಕೂ ವಿಶೇಷ ಭೇದಗಳಿಲ್ಲವೆಂದೇ ಹೇಳಬಹುದು. ದೊರೆಯೂ ಅದೇಮಾರ್ಗವನ್ನು ಅವಲಂಬಿಸಿದ್ದನು. ಇಬ್ಬರಿಗೂ ತಮ್ಮ ಪಂಥದಲ್ಲಿ ಅತಿಯಾದ ನಿಷ್ಠೆಯಿತ್ತು. ರಾಜನ ಶ್ರೇಷ್ಠಾಧಿಕಾರವೊಂದಂಶ, ಆಚಾರ ಸಂಪ್ರದಾಯಗಳಲ್ಲಿ ಕ್ಯಾಥಲಿಕ್‌ರೀತಿಯ ಲಕ್ಷಣಗಳಿರತಕ್ಕದ್ದು ಎರಡನೆಯಂಶವೆಂದು ಒಟ್ಟಿನಲ್ಲಿ ಭಾವಿಸಬಹುದು. ಲಾಡನು ಸದುದ್ದೇಶವುಳ್ಳವನೇ; ಹಗಲಿರುಳೂ ಶ್ರಮಪಟ್ಟು ಕೆಲಸ

**ಲಾಡನ ಪ್ರಯತ್ನ**

ಮಾಡತಕ್ಕವನು. ಆದರೆ ಆತನಲ್ಲಿ ಮೂರ್ಖತನ ತುಂಬಿತ್ತು. ಇತರ ಪಂಥದವರಲ್ಲಿ ತುಂಬಾದ್ವೇಷವಿತ್ತು. ಅಧಿಕಾರವಹಿಸಿದಕೂಡಲೆ ಆತನು ಪಾದ್ರಿಗಳಲ್ಲಿ ನೀತಿಭ್ರಷ್ಟತೆಯನ್ನು ನಿಲ್ಲಿಸುವುದಕ್ಕೂ ಚರ್ಚುಗಳಲ್ಲಿ ಒಳ್ಳೆಕ್ರಮವನ್ನು ಸ್ಥಾಪಿಸುವುದಕ್ಕೂ ಯತ್ನಿಸಿದನು. ಸೋಮಾರಿಗಳಾಗಿದ್ದ ಪಾದ್ರಿಗಳನ್ನು ಕೆಲಸದಿಂದತೆಗೆದುಹಾಕಿ ಚರ್ಚುಗಳ ಅಲಂಕಾರಗಳನ್ನು ಉದ್ಧರಿಸಿ ಆಡಂಬರದಆಚರಣೆಗಳನ್ನು ಬಲವಂತಗೊಳಿಸಿದನು. ಬಲಾತ್ಕಾರದ ನೀತಿನಿಷ್ಠೆಯು ಭೋಗಾಸಕ್ತರಿಗೆ ಸರಿಬೀಳಲಿಲ್ಲ; ಭಾನುವಾರದ ದಿನ ವಿನೋದಗಳಿಗಾಸ್ಪದಕೊಟ್ಟುದಲ್ಲದೆ ಬಹಿರಾಚಾರಗಳನ್ನು ಬಲವಂತಗೊಳಿಸಿದುದು ಪ್ಯೂರಿಟನ್‌ಪಂಥದವರಿಗೆ ಸರಿಬೀಳಲಿಲ್ಲ. ಉಪಾಯವಾಗಿ ಕ್ಯಾಥಲಿಕ್‌ಮತಸ್ಥಾಪನೆಯಾಗುತ್ತಿದೆಯೆಂದು ಜನರಾಡಿಕೊಂಡರು. ತನಗೆದುರುಬಿದ್ದವರನ್ನು ಅಡಗಿಸಲು ಲಾಡನು ಹೈಕಮಿಷನ್‌ಕೋರ್ಟನ್ನು ಉಪಯೋಗಿಸಿಕೊಂಡು ವಿರೋಧಿಗಳಿಗೆ ಕ್ರೂರ ದಂಡನೆಗಳನ್ನು ಕೊಡಿಸುತ್ತಿದ್ದನು. ಪ್ಯೂರಿಟನ್ನರೇ ಪ್ರಬಲ ವಿರೋಧಿಗಳು. **ಪ್ರಿನ್** (Prynne) ಎಂಬಾತನು 1634ರಲ್ಲಿ ನಾಟಕಗಳನ್ನು ಖಂಡಿಸಿ ಪುಸ್ತಕಬರೆದುದಕ್ಕೆ ಕ್ರೂರಶಿಕ್ಷೆಯನ್ನನುಭವಿಸಿದನು. 1637ರಲ್ಲಿ ಪುನಃ ಆತನು ಲಾಡನ ಆಗ್ರಹಕ್ಕೆ ಸಿಕ್ಕಿ ಇತರರ ಜತೆಯಲ್ಲಿ ಶಿಕ್ಷೆಗೆ ಗುರಿಯಾದನು. ತನ್ನ ರೀತಿಯನ್ನು ಖಂಡಿಸಿದ ವಿರೋಧಿಗಳ ಕಿವಿಗಳನ್ನು ಕುಯ್ಯಿಸುತ್ತಿದ್ದ ಲಾಡನಮತನಿಷ್ಠೆಯು ರಾಕ್ಷಸವಾಗಿ ಪರಿಣಮಿಸಿತು. ಆತನಿಂದ ಶಿಕ್ಷೆಹೊಂದಿದವರು ಜನರ ಮೆಚ್ಚುಗೆಗೆ ಪಾತ್ರರಾಗುವಂತಾಯಿತು. ಟ್ಯೂಡರ್‌ಮೇರಿರಾಣಿಯ ಕಾಲದಲ್ಲಿ ಧರ್ಮಕ್ಕಾಗಿ ದೇಹಬಲಿಪ್ರಾಣಬಲಿಗಳು ನಡೆದಂತೆ ನಡೆಯಿತು. ಪ್ಯೂರಿಟನ್ನರುಮಾತ್ರವಲ್ಲದೆ ಇತರರೂ ರಾಜವಿರೋಧಿಗಳಾಗುವಂತಾಯಿತು.

**ಪ್ಯೂರಿಟನ್ನರ ದಂಡನೆ**

ಎಷ್ಟು ಜಾಣತನವನ್ನು ವೆಚ್ಚಮಾಡಿದಾಗ್ಗೂ ರಾಜನಿಗೆ ಸಾಕಾದಷ್ಟು ಹಣವೊದಗದಾಯಿತು. 1634ರಲ್ಲಿ ರಾಜನು ಹಣಕ್ಕಾಗಿ ಹಳೆಯುಬಾಬೊಂದನ್ನು ಎತ್ತಿದನು. ಯುದ್ಧಕಾಲವೊದಗಿದ್ದಾಗ ಹಿಂದಿನಕಾಲದಲ್ಲಿ ತೀರಪಟ್ಟಣಗಳಜನರು **ಹಡಗಿನ ಹಣ** (Ship Money) ವೆಂಬುದನ್ನು ಕೊಟ್ಟಿದ್ದರು. 1634ರಲ್ಲಿ ಇತರದೇಶಗಳೊಂದಿಗೆ ಯುದ್ಧವಾಗಲಿ ದೇಶವನ್ನು ಶತ್ರುಗಳಾಕ್ರಮಿಸುವ ಸಂದರ್ಭವಾಗಲಿ ಇರಲಿಲ್ಲ. ಆದಾಗ್ಗೂ ದೊರೆಯು ಹಡಗಿನಹಣಕೊಡಬೇಕೆಂದು ತೀರಪಟ್ಟಣಗಳಜನರಿಗೂ ಒಳನಾಡಿನಜನರಿಗೂ ಆಜ್ಞೆಕೊಟ್ಟನು. ಬಹುಭಾಗದವರು ಸಲ್ಲಿಸಿದರು. 1636ರಲ್ಲಿ ಮತ್ತೊಂದುಬಾರಿ ಹಡಗಿನಹಣದವಸೂಲಿಯ ಹುಕುಂ ಹೊರಟಿತು. ಅದು ಅನ್ಯಾಯವೆಂದು ವಿರೋಧಿಸಲು ಕೆಲವರು ಸಿದ್ಧರಾದರು. **ಜಾನ್ ಹ್ಯಾಂಪ್ಡೆನ್** (John Hampden) ಎಂಬ ಜಮೀನ್ದಾರನು ತಾನು ತೆರಬೇಕಾದಿದ್ದ £ 20ಗಳನ್ನು ಕೊಡುವುದಿಲ್ಲವೆಂದು ವಿಚಾರಣೆಗೆ ನಿಂತನು. 1637ರಲ್ಲಿ ವಿಚಾರಣೆ ನಡೆಯಿತು.

ಪಾರ್ಲಿಮೆಂಟಿನ ಅನುಮತಿಯಿಲ್ಲದ ತೆರಿಗೆಯು ಅಕ್ರಮವೆಂದು ಹ್ಯಾಂಪ್ಡೆನ್‌ಪಕ್ಷದ ವಾದ. ಆ ವಾದದವಿವರವು ಊರೂರುಗಳಲ್ಲಿ ಹರಡಿತು.

**ಹ್ಯಾಂಪ್ಡೆನ್ ಮೊಖದ್ದಮೆ** ವಾದಪ್ರತಿವಾದಗಳು ಮುಗಿದು ತೀರ್ಮಾನಕೊಡುವ ಸಮಯ ಬಂದಾಗ ಇದ್ದ ಹನ್ನೆರಡುಜಡ್ಜಿಗಳಲ್ಲಿ ಏಳುಮಂದಿ ರಾಜನಿಗನುಕೂಲರಾದರು. ಹ್ಯಾಂಪ್ಡೆನ್ನಿಗೆ ಸೆರೆಯಾಯಿತು. ಇಪ್ಪತ್ತು ಪೌಂಡುಗಳಲ್ಲದೆ ಇನ್ನೂರು ಪೌಂಡುಗಳನ್ನಾದರೂ ಸುಲಭವಾಗಿ ಸಲ್ಲಿಸಬಲ್ಲವನಾಗಿದ್ದ ಹ್ಯಾಂಪ್ಡೆನ್ ನ್ಯಾಯಪರೀಕ್ಷೆಯಾಗಲೆಂದು ತಾನೇನಿಂತು ಶಿಕ್ಷೆಯನ್ನನುಭವಿಸಿದನು. ಹ್ಯಾಂಪ್ಡೆನ್ನಿನಂತೆಯೇ ಇತರರೂ ಹಟಹಿಡಿದು ಸೆರೆಮನೆಸೇರಿದರು. ಶೀಲವಂತರೂ ಗೌರವಸ್ಥರೂ ಸೆರೆಮನೆಗೆ ಹೋಗುತ್ತಿದ್ದುದನ್ನು ಕಂಡು ಜನರು ಹಾಹಾಕಾರಪಟ್ಟು ರಾಜವಿರೋಧಿಗಳನ್ನು ಗೌರವಿಸಲು ತೊಡಗಿದರು. ರಾಜನಲ್ಲಿ ಜನರಿಗಿದ್ದ ಭಕ್ತಿಯು ಮಾಯವಾಗಲಾರಂಭವಾಯಿತು.

ಆ ವೇಳೆಗೆ ಸ್ಕಾಟ್ಲೆಂಡಿನಲ್ಲಿ ರಾಜನಿಗೆ ಪ್ರಬಲವಿರೋಧವೆದ್ದಿತು. ಸ್ಕಾಟ್ಲೆಂಡಿನ ಜನರು ಪ್ರೆಸ್ಬಿಟೇರಿಯನ್‌ಪಂಥದವರಷ್ಟೆ. ಆ ಪಂಥದವ್ಯವಸ್ಥೆಯಲ್ಲಿ ರಾಜನಿಗೆ ಅಧಿಕಾರವೇ ಇಲ್ಲ. ಪ್ರತಿಸ್ಥಳಕ್ಕೂ ಜಿಲ್ಲೆಗೂ ದೇಶಕ್ಕೂ ಪಾದ್ರಿಗಳೂಹಿರಿಯರೂ ಸೇರಿದಸಭೆಗಳೇ ಸರ್ವಯಾಜಮಾನ್ಯವನ್ನು ಪಡೆದಿದ್ದವು. ಆ ಹಿರಿಯರಆಡಳಿತವೇ ಮುಖ್ಯಲಕ್ಷಣವಾದುದರಿಂದ ಅದಕ್ಕೆ ಪ್ರೆಸ್ಬಿಟೇರಿಯನ್ ಎಂದು

**ಸ್ಕಾಟ್ಲೆಂಡಿನಲ್ಲಿ**

ಹೆಸರು. ಹಿರೇಜೇಮ್ಸಿಗೆ ಇದು ಸರಿಬೀಳಲಿಲ್ಲ. ರಾಜಾಧಿಕಾರಿಗಳಾದ ಬಿಷಪ್ಪರನ್ನು ನಿಯೋಗಿಸಿದ್ದಲ್ಲದೆ ಉಪಾಯವಾಗಿ ಪರ್ತ್ (Perth) ಪಟ್ಟಣದಸಭೆಯಲ್ಲಿ ಐದಂಶಗಳನ್ನು ಸಾಧಿಸಿದ್ದನು. ಮೊದಲೇ ಒರಟರೆನ್ನಿಸಿದವರು ಸ್ಕಾಟರು. ಪ್ರೆಸ್ಬಿಟೇರಿಯನ್‌ಮತವಾದರೋ ಉಗ್ರವಾದುದು. ಆಮೆನ್ (Amen) ಹೇಳುವುದು, ಮೊಣಕಾಲೂರುವುದು, ಪಾದ್ರಿಗಳು ಬಿಳಿಮಡಿಯಂಗಿಗಳನ್ನು ಧರಿಸುವುದು, ಪವಿತ್ರವೆನಿಸಿದ ಭಾನುವಾರ ವಿನೋದಗೊಳ್ಳುವುದು ಮುಂತಾದ ಅಂಶಗಳು ಪ್ರೆಸ್ಬಿಟೇರಿಯನ್ನರಿಗೆ ಅಸಹ್ಯ. ರೋಮನ್‌ಕ್ಯಾಥಲಿಕ್ಕರನ್ನು ದ್ವೇಷಿಸುವುದರಲ್ಲಿ ಪ್ರೆಸ್ಬಿಟೇರಿಯನ್ನರು ಅದ್ವಿತೀಯರಾದವರು. ಅಂತಹಜನರಮಧ್ಯೆ ಚಾರ್ಲ್ಸ್‌ದೊರೆಯು ತನ್ನಾಸೆಯನ್ನು ನೆರವೇರಿಸಿಕೊಳ್ಳಲು ಯತ್ನಿಸಿದನು. ಹಣದ ತೊಂದರೆಯಿಂದ ಪ್ರೇರಿತನಾಗಿ ಸ್ಕಾಟಿಷ್‌ಶ್ರೀಮಂತರು ಹಿಂದಿನಕಾಲದಲ್ಲಿ ಚರ್ಚುಗಳಿಗೆ ಸೇರಿದ್ದ ಆಸ್ತಿಗಳನ್ನು ಬಿಟ್ಟುಕೊಡತಕ್ಕದ್ದೆನ್ನಲು ಆ ಶ್ರೀಮಂತವರ್ಗದವರಿಗೆ ಅಸಮಾಧಾನವಾಯಿತು. 1633ರಲ್ಲಿ ದೊರೆಯು ಲಾಡನನ್ನು ಕರೆದುಕೊಂಡು ಸ್ಕಾಟ್ಲೆಂಡಿಗೆ ಹೊರಟನು. ಅಲ್ಲಿ ಲಾಡನು ಒಂದು **ಪ್ರಾರ್ಥನಾಪುಸ್ತಕ**ವನ್ನು ಸಿದ್ಧಪಡಿಸಿ ಅಲ್ಲಿಯ ಬಿಷಪ್ಪರಿಗೆ ಅದನ್ನುಪಯೋಗಿಸುವಂತೆ ಆಜ್ಞೆಸಾರಿದನು. ಪಾದ್ರಿಗಳು ಮಡಿಯಂಗಿಗಳನ್ನು ಧರಿಸಬೇಕೆಂದು ಅಪ್ಪಣೆಮಾಡಿದನು. ಇದು ಹೆಡ್ಡತನವಾಯಿತು.

ಬಿಷಪ್ಪರನ್ನು ಹೊಟ್ಟೆಬಾಕರೆಂದು ಗೇಲಿಮಾಡಿಕೊಂಡಿದ್ದ ಸ್ಕಾಟ್‌ಜನರು ಪುಸ್ತಕ ಪ್ರಾರ್ಥನೆಯನ್ನು ಸಹಿಸಿಯಾರೇ! ಎಡಿನ್ಬರೊ ನಗರದ ಒಂದು ಚರ್ಚಿನಲ್ಲಿ ಪ್ರಾರ್ಥನೆನಡೆದಾಗ ಒಬ್ಬ ಹೆಂಗಸು ಪಕ್ಕದಲ್ಲಿ ಯಾರೋ 'ಆಮೆನ್' ಹೇಳಿದರೆ ತನ್ನ ಬೈಬಲನ್ನು ಆತನ ಮುಖಕ್ಕೆ ಬೀರಿದಳು; ಪುಸ್ತಕಪ್ರಾರ್ಥನೆನಡೆಸಿದ ಪಾದ್ರಿಮೇಲೆ ಒಂದು ಮಣೆಯನ್ನೆಸೆದುಬಿಟ್ಟಳು. ಎಲ್ಲೆಲ್ಲಿಯೂ ಜನರಿಗೆ ಉದ್ರೇಕವಾಯಿತು. ತಮ್ಮಮತವನ್ನು ಕಾಪಾಡಿಕೊಳ್ಳಲು ಗುಂಪುಗಳನ್ನು ಕಟ್ಟಿದರು. ಶ್ರೀಮಂತರು, ಪಾದ್ರಿಗಳು, ಸಾಮಾನ್ಯರು ಎಲ್ಲರೂಸೇರಿ 1638ರಲ್ಲಿ **ನ್ಯಾಷನಲ್ ಲೀಗ್ ಮತ್ತು ಕವ್ನೆಂಟ್** (National League and Covenant) ಎಂಬ ರಾಷ್ಟ್ರೀಯಸಂಕಲ್ಪವನ್ನು ತಾಳಿದರು. ದೇಶದಜನರು ಒಟ್ಟುಗೂಡಿ ದಂಗೆಯೇಳುವಂತಿತ್ತು. ಆಗ ಚಾರ್ಲ್ಸ್‌ದೊರೆ ಸಮಾಧಾನಕ್ಕೆಬರುವವನಂತೆ ನಟಿಸುತ್ತ ಎಲ್ಲವೂ **ಜನರಲ್ ಅಸೆಂಬ್ಲಿ**ಯಲ್ಲಿ ಇತ್ಯರ್ಥವಾಗಲೆಂದನು. ಅದು ಒಟ್ಟುದೇಶದ ಹಿರಿಯುರಸಭೆ. ಸ್ಕಾಟ್‌ಜನರು ಬೇಗಬೇಗನೆ ಆ ಸಭೆಸೇರಿಸಿ ಅಲ್ಲಿ ಪ್ರಾರ್ಥನಾಪುಸ್ತಕ, ಪರ್ತಿನಐದಂಶಗಳು, ಬಿಷಪ್ಪರಸ್ಥಾನಮಾನಗಳು ಮೂರನ್ನೂ ವಜಾಮಾಡಿ ರಾಜಾಜ್ಞೆಯಿಂದ ಬಿಷಪ್ಪರಾಗಿದ್ದಕೆಲವರಿಗೆ ಬಹಿಷ್ಕಾರವನ್ನೂ ಹಾಕಿಬಿಟ್ಟರು.

**ಜನರ ವಿರೋಧ**

ಇನ್ನು ಯುದ್ಧವೊಂದೇ ಕರ್ತವ್ಯವಾಯಿತು. ಇದಕ್ಕೆ **ಮೊದಲನೆ ಬಿಷಪ್ಪರ ಯುದ್ಧ** (First Bishops' War) ವೆಂದು ಹೆಸರು. ಬಿಷಪ್ಪರಿರತಕ್ಕುದೆಂದು ರಾಜಪಕ್ಷ; ಇರಬಾರದೆಂದು ಪ್ರತಿಪಕ್ಷ. ಇದ್ದ ಸೈನ್ಯವನ್ನೆತ್ತಿಕೊಂಡು ದೊರೆ ಸ್ಕಾಟ್ಲೆಂಡಿಗೆ ನಡೆದನು. ಆದರೆ ಸ್ಕಾಟರು ಉತ್ಸಾಹದಿಂದ ತುಂಬಿ ಸೈನ್ಯಕಟ್ಟಿದ್ದರು. ಅವರೆದುರಿನಲ್ಲಿ ತನ್ನ ಸೈನ್ಯವನ್ನು ನಡೆಸಲಾರದೆ ಚಾರ್ಲ್ಸ್ ಒಪ್ಪಂದಮಾಡಿಕೊಳ್ಳುವವನಂತೆ ನಟಿಸಿ ವಿಲಂಬದಆಟವನ್ನು ಹೂಡಿ ಮತ್ತೊಂದು ಸಭೆ ಸೇರಲೆಂದನು. ಆ ಸಭೆಯು ನಾಗಾಲೋಟದಿಂದ ನಡೆದು ಪ್ರೆಸ್ಬಿಟೀರಿಯನ್‌ಮತರಕ್ಷಣೆಯ ಸಂಕಲ್ಪವನ್ನು ಬಲಗೊಳಿಸಿತು. ಆಗ ದೊರೆಯು ಭಾರಿಚಿಂತೆಯಲ್ಲಿ ಸಿಕ್ಕಿ ತನ್ನ ಸಹಾಯಕ್ಕಾಗಿ ವೆಂಟ್ವರ್ತನನ್ನು ಐರ್ಲಂಡಿನಿಂದ ಆತುರವಾಗಿ ಕರೆಸಿಕೊಂಡನು.

**ಯುದ್ಧ 1639**

ಎಲ್ಲೆಲ್ಲಿಯೂ ರಾಜನಿಗೆ ವಿರೋಧವೇ ಆಗಿಹೋಯಿತು. ಆಡಳಿತವನ್ನು ನಡೆಸುವುದೇ ಕಷ್ಟವಾಯಿತು. ನಿತ್ಯವೆಚ್ಚಕ್ಕೆ ಬೇಕಾದ ಹಣ ಒದಗುವುದೇ ಅತಿ ಕಷ್ಟವಾಗಿದ್ದಾಗ ಸ್ಕಾಟರೊಂದಿಗೆ ಯುದ್ಧನಡೆಸುವುದು ಹೇಗೆ? ಬೇರೆಸಾಧನವೇ ಇಲ್ಲದಿರಲು ವೆಂಟ್ವರ್ತನು ಪಾರ್ಲಿಮೆಂಟ್‌ಸಭೆಸೇರಿಸುವಂತೆ ಸಲಹೆ ಕೊಟ್ಟನು. 1640ರಲ್ಲಿ ರಾಜನು ಪಾರ್ಲಿಮೆಂಟ್‌ಸೇರಲೆಂಬ ಹುಕುಂ ಹೊರಡಿಸಿದನು. **ಷಾರ್ಟ್ ಪಾರ್ಲಿಮೆಂಟ್** (Short Parliament) ಎಂಬ ಸಭೆ ಸೇರಿತು. ಉಪಾಯವಾಗಿ

ಹಣವನ್ನು ದಕ್ಕಿಸಿಕೊಳ್ಳುವ ಆಸೆ ರಾಜನಿಗೆ. ಆದರೆ ಸೇರಿದ ಸಭಿಕರು ಸ್ಕಾಟ ರೊಡನೆ ಸಮಾಧಾನಮಾಡಿಕೊಳ್ಳಬೇಕೆಂದು ಸೂಚಿಸಿ ರಾಜನು

**ಜಾ೯ ಪಿಂ**

ನಡೆಸಿದ್ದ ಅಕ್ರಮಗಳ ವಿವರವಿಚಾರಗಳನ್ನೆತ್ತಿದರು. ಪಿಂ ಎಂಬ ಸಭಿಕನೆದ್ದು ಎರಡುಗಂಟೆಕಾಲದ ಉದ್ಗಾರದಲ್ಲಿ ಆಡಳಿತದ ಅಕ್ರಮಗಳನ್ನು ಆವೇಶದಿಂದ ಖಂಡಿಸಿದನು. ಹಣಕೊಡಿಸುವಹಾಗಿಲ್ಲವೆಂದು ತಿಳಿದಕೂಡಲೆ ರಾಜನು ಸಭೆಯನ್ನು ಮುಕ್ತಾಯಗೊಳಿಸಿ ಸ್ಕಾಟರೊಡನೆ ಯುದ್ಧನಡೆಸಲು ಹೊರಟನು. ಸ್ಕಾಟ್‌ಜನರು ಉತ್ಸಾಹದಿಂದಕೂಡಿ ಸೈನ್ಯಕಟ್ಟಿದ್ದರು. **ಎರಡನೆ ಬಿಷಪ್ಪರ ಯುದ್ಧ**ವೆನ್ನುವುದು ಮೊದಲಾಗಿ ಬೇಗನೆ ಮುಗಿದೂಹೋಯಿತು. ಸ್ಕಾಟ್‌ಸೈನಿಕರು ರಾಜಸೈನ್ಯವನ್ನು ಲಕ್ಷ್ಯಮಾಡದೆ ಮೇರೆದಾಟಿ ಇಂಗ್ಲಂಡನ್ನು ಮುತ್ತಿದರು. ಗತ್ಯಂತರವಿಲ್ಲದೆ ರಾಜನು ಕರಾರಿಗೊಪ್ಪಿ (Treaty of Ripon) ಜಗಳವೆಲ್ಲ ತೀರ್ಮಾನವಾಗುವವರೆಗೆ ಸ್ಕಾಟ್‌ಸೈನ್ಯಕ್ಕೆ ದಿನವಹಿ ಭತ್ಯಕ್ಕಾಗಿ £850ಗಳನ್ನು ಕೊಡಲೊಪ್ಪಿದನು. ಆಗ ಮಾಡತಕ್ಕುದೇನೆಂದು ರಾಜನು ಶ್ರೀಮಂತ

**ರಾಜನ ದುರವಸ್ಥೆ**

ರನ್ನು ಕರೆಸಿ ಕೇಳಿದರೆ ಅವರು ಪಾರ್ಲಿಮೆಂಟ್‌ಸಭೆ ನೆರೆಯಲೆಂದರು. ಪುನಃ ಪಾರ್ಲಿಮೆಂಟ್‌ಸಭೆಯನ್ನು ಕರೆಸಬೇಕಾಗಿಬಂತು. ಆ ಸಭೆಯ ನಿಶ್ಚಯತೀರ್ಮಾನಗಳಿಗೆ ರಾಜನು ಒಪ್ಪಿಕೊಳ್ಳಬೇಕಾಗಿಯೂಬಂತು. ಅತ್ತ 1641ರಲ್ಲಿ ಸ್ಕಾಟರು ಇಷ್ಟಪಟ್ಟಂತೆಯೇ ಆಗಲೆಂದು ಸ್ಕಾಟ್ಲಂಡಿನಲ್ಲಿ ಸೋಲನ್ನು ಕಟ್ಟಿಕೊಳ್ಳಲೂಬೇಕಾಯಿತು.

1640ರಲ್ಲಿ ನವೆಂಬರ್ ತಿಂಗಳಲ್ಲಿ **ಲಾಂಗ್‌ಪಾರ್ಲಿಮೆಂಟ್** (Long Parliament) ಎಂದು ಪ್ರಸಿದ್ಧವಾದ ಸಭೆಸೇರಿತು. ಬಂದ ಪ್ರತಿನಿಧಿಗಳಲ್ಲಿ

**ಪ್ರಸಿದ್ಧಸಭೆ**

**ಪಿಂ, ಹ್ಯಾಂಪ್ಡೆ೯, ಆಲಿವರ್ ಕ್ರಾಮ್ವೆಲ್** (Oliver Cromwell) **ಎಡ್ವರ್ಡ್ ಹೈಡ್** (Edward Hyde), **ಲಾರ್ಡ್ ಫಾಕ್ಲೆಂಡ್** (Lord Falkland) ಮುಂತಾದವರಿದ್ದರು. ಸೇರಿದಕೂಡಲೆ ಪ್ರಿನ್ ಮುಂತಾದವರಿಗೆ ಬಿಡುಗಡೆಮಾಡಿಸಿದರು. ಪಾರ್ಲಿಮೆಂಟ್‌ಸಭೆಸೇರದ ಆಡಳಿತವು ಪುನಃ ನಡೆಯದಿರುವಂತೆ **ಟ್ರಯನಿಯಲ್ ಆಕ್ಟ್** (Triennial Act) ಕಾನೂನನ್ನು ಮಾಡಿದರು. ಪಾರ್ಲಿಮೆಂಟ್‌ಸಭೆ ಸೇರದೆ ಮೂರುವರ್ಷಗಳಿಗಿಂತ ಹೆಚ್ಚುಕಾಲ ಕಳೆಯಬಾರದೆಂಬುದು ಅದರ ಉದ್ದೇಶ. ಮುಖ್ಯಮಂತ್ರಿಯಾಗಿದ್ದ **ಸ್ಟ್ರಾಫರ್ಡನನ್ನೂ** ಆರ್ಚ್‌ಬಿಷಪ್ ಲಾಡನನ್ನೂ ರಾಜದ್ರೋಹದ ಆಪಾದನೆಯಮೇಲೆ ಇಂಪೀಚ್‌ಮಾಡುವ ಯೋಚನೆ ನಡೆಸಿದರು. **ಲಾಡನನ್ನು*** ಸೆರೆಹಿಡಿಸಿ ಇಂಪೀಚ್ಮೆಂಟಿಗೆ ಗುರಿಮಾಡಿದರು. ವೆಂಟ್ವರ್ತನಮೇಲೆ ಅಂತಹ ಆಪಾದನೆಹೊರೆಸಿ ಸಾಧಿಸುವುದು ಕಷ್ಟವಾಗಿ ತೋರಲು

---

*ಇಂಪೀಚ್ಮೆಂಟಿಗೆ ಗುರಿಯಾದ ಲಾಡನು ಸೆರೆಯಲ್ಲಿಯೇ ಇದ್ದು ಕಡೆಗೆ ಶಿರಚ್ಛೇದನವನ್ನು ಅನುಭವಿಸಿದನು.

ಕಾಮನ್ಸ್ ಸಭಿಕರು ಆತನಮೇಲೆ **ಅಟೈಂಡರ್ ಬಿಲ್** (Bill of Attainder) ಎಂಬ ವಿಧಾನವನ್ನು ಹೂಡಿದರು. ಇಂಪೀಚ್ಮೆಂಟಿನಲ್ಲಿ ಲಾರ್ಡ್ಸ್ ಸಭೆಯ ನ್ಯಾಯಾಧಿಪತಿಗಳ ಮುಂದೆ ವಿಚಾರಣೆ ನಡೆಯಬೇಕು; ಅಟೈಂಡರಿನಲ್ಲಿ ಅಂತಹ ವಿಳಂಬಕ್ಕವಕಾಶವೇ ಇಲ್ಲ, ವಿಚಾರಣೆಗೆ ಆಸ್ಪದವೇ ಇಲ್ಲ. ಫಲಾನಾ ಮನು

**ಮಂತ್ರಿಗಳ ದಂಡನೆ**

ಷ್ಯನು ತಪ್ಪಿತಸ್ಥನಾದುದರಿಂದ ದಂಡನೆಗರ್ಹನೆಂದು ಸಭಿಕರಲ್ಲಿ ಬಹುಪಕ್ಷದವರೊಪ್ಪಿದರೆ ಆದಹಾಗೆಯೇ. ಸ್ಟ್ರಾಫರ್ಡನನ್ನು ಇಂಪೀಚ್ ಮಾಡುವ ಸುದ್ದಿ ಹರಡಿದಾಗ ರಾಜನ ಇಷ್ಟಮಿತ್ರರು ಅಂಜಲಿಲ್ಲ; ಹೇಗಾದರೂ ವಿಚಾರಣೆಯಾಗುವುದೆಂಬ ಧೈರ್ಯಕ್ಕವಕಾಶವಿತ್ತು. ಅಟೈಂಡರ್ ಬಿಲ್ಲೆಂದರೆ ಆ ಧೈರ್ಯಕ್ಕೆ ಅವಕಾಶವಿಲ್ಲ. ಆ ಮಸೂದೆಯನ್ನು ರಾಜನೊಪ್ಪಿಕೊಳ್ಳದಿರುವುದೊಂದೇ ಅಡ್ಡಿ. ರಾಜನು ತನ್ನ ಆಪ್ತಮಂತ್ರಿಗೆ "ನಿನ್ನ ತಲೆಗೂದಲೊಂದನ್ನಾದರೂ ಸಭಿಕರು ಮುಟ್ಟದಂತೆ ನಾನು ನೋಡಿಕೊಳ್ಳುವೆನು" ಎಂದು ವಾಗ್ದಾನಮಾಡಿದ್ದನು. ಮಸೂದೆಯು ಕಾಮನ್ಸ್ ಸಭೆಯಲ್ಲಿ ಒಪ್ಪಿಗೆ ಪಡೆದು ಶ್ರೀಮಂತಸಭೆಯಲ್ಲಿಯೂ ಅಂಗೀಕೃತವಾಗಿ ರಾಜಸಮ್ಮುಖಕ್ಕೆ ಬಂತು. ಆಗ ಅರಮನೆಸುತ್ತಲೂ ಜನರು ಗುಂಪುಗುಂಪಾಗಿಸೇರಿ ಗಲಾಟೆಗೆ ಸಿದ್ಧರಾಗಿದ್ದರು. ರಾಣಿಯು

**ರಾಜನ ವಚನಭಂಗ**

ಪ್ರಾಣಕ್ಕೆ ಅಪಾಯವುಂಟಾದೀತೆಂದು ಭಯತೋರಿ ಚಾರ್ಲ್ಸ್ ಆ ಮಸೂದೆಗೊಪ್ಪಿಗೆ ಕೊಟ್ಟನು. 1641ರಲ್ಲಿ **ಸ್ಟ್ರಾಫರ್ಡ** ನನ್ನು **ಶಿರಚ್ಛೇದನ**ಮಾಡಿಸಿಬಿಟ್ಟರು. ಆತನು "ರಾಜಪುರುಷರನ್ನು ನಂಬುವುದು ಎಂದಿಗಾದರೂ ತಪ್ಪು" ಎಂದು ಹೇಳುತ್ತ ಧೈರ್ಯದಿಂದ ತಲೆಕೊಟ್ಟನು. ಸ್ಟ್ರಾಫರ್ಡ ನನ್ನು ಈರೀತಿ ಬಿಟ್ಟುಕೊಟ್ಟದ್ದು ರಾಜನ ತಪ್ಪೆನಿಸಿತು.

ಪಾರ್ಲಿಮೆಂಟ್ ಸಭಿಕರು ಆಡಳಿತವನ್ನು ಕ್ರಮಗೊಳಿಸಿ ಸಭೆಯಪ್ರಾಬಲ್ಯವನ್ನು ನೆಲೆಗೊಳಿಸಲು ಕೃತಸಂಕಲ್ಪರಾಗಿಬಂದಿದ್ದರು. ತಮ್ಮ ಸಭೆ ಹಿಂದಿನಸಭೆಗಳಂತೆ ಅಕಾಲದಲ್ಲಿ ಮುಕ್ತಾಯಕ್ಕೊಳಗಾಗದಂತೆ ಸಭಿಕರು ಒಂದು ನಿಶ್ಚಯಮಾಡಿ ರಾಜನಿಂದ ತಥಾಸ್ತು ಎನ್ನಿಸಿಕೊಂಡರು. ಏನೆಂದರೆ ತಮ್ಮ ಸ್ವಂತಸಂಕಲ್ಪದಿಂದ ವಿನಾ ತಮ್ಮ ಸಭೆಯು ಮುಕ್ತಾಯವಾಗತಕ್ಕದಲ್ಲವೆಂಬ ನಿಶ್ಚಯ. ತನಗಿಷ್ಟಬಂದಾಗ ಸಭೆಯನ್ನು ವಿಸರ್ಜಿಸುವ ಆಸ್ಪದ ರಾಜನಿಗಿಲ್ಲದಾಯಿತು.

**ಅಕ್ರಮದ ನಿಷೇಧ**

ತಮ್ಮ ಭದ್ರತೆಯನ್ನು ನೆಲೆಗೊಳಿಸಿದಬಳಿಕ ಸಭಿಕರು ಸ್ಟಾರ್ ಚೇಂಬರ್, ಹೈಕಮಿಷನ್ ಮುಂತಾದ ವಿಶಿಷ್ಟನ್ಯಾಯಸ್ಥಾನಗಳನ್ನು ವಜಾಮಾಡಿದರು; ಹಡಗಿನಹಣದವಸೂಲಿಯಲ್ಲಿ ಹ್ಯಾಂಪ್ಡೆನ್ ವಿಚಾರಣೆಯ ತೀರ್ಪನ್ನು ಬದಲಾಯಿಸಿದರು; ನೈಟ್ಹುಡ್ ನಿರ್ಬಂಧ, ಏರುಸುಂಕ, ಅರಣ್ಯದಂಡ, ಸರ್ವಮಾನ್ಯಸನ್ನದು ಮುಂತಾದ ವಿಧಾನಗಳು ಪಾರ್ಲಿಮೆಂಟಿನ ಅನುಮತಿಯಿಲ್ಲದಿದ್ದಲ್ಲಿ ವಿಧಿವಿರುದ್ಧವೆಂದೂ ಅಕ್ರಮವೆಂದೂ ಸ್ಥಾಪಿಸಿದರು. ಆಡಳಿತದಲ್ಲಿ ಇಂತಹ

ತಿದ್ದುಪಡಿಗಳನ್ನು ನೆರವೇರಿಸುವಾಗ ಸಭಿಕರೆಲ್ಲರೂ ಏಕವಾಕ್ಯರಾಗಿದ್ದರು. ಸಭಿಕರ ಐಕಮತ್ಯವು ದೃಢವಾಗಿತ್ತು. ಆಡಳಿತದವಿಚಾರ ಮುಗಿದಮೇಲೆ ಸಭಿಕರು ಮತ ವಿಚಾರಗಳಿಗೆ ಗಮನಕೊಟ್ಟರು. ಪ್ಯೂರಿಟನ್ ಪಕ್ಷಪಾತಿಗಳು ಬಿಷಪ್ಪರನ್ನು ವಜಾ ಮಾಡುವ ಉದ್ದೇಶದಿಂದ **ರೂಟ್ ಅಂಡ್ ಬ್ರಾಂಚ್ ಬಿಲ್** (Root and Branch Bill) ಎಂಬ ಮಸೂದೆಯನ್ನು ಚರ್ಚೆಗೊಡ್ಡಿದರು. ಆಗ ಸಭಿಕರ ಐಕಮತ್ಯ ಕೆಟ್ಟಿತು. ಆಂಗ್ಲಿಕನ್ ಮತಭಕ್ತರಾಗಿದ್ದ ಸಭಿಕರು ಆ ಮಸೂದೆಯನ್ನು ವಿರೋಧಿಸಿದರು.

ಪಾರ್ಲಿಮೆಂಟನ್ನು ಕರೆಸಿದಬಳಿಕ ದೊರೆಯು ತನ್ನ ಮಂತ್ರಿಗಳನ್ನು ಬಿಟ್ಟು ಕೊಟ್ಟನು; ಸಭೆಯವರು ಮಾಡಿದನಿರ್ಣಯಗಳಿಗೊಪ್ಪಿಕೊಂಡಿದ್ದನು. ಅದು ವರೆಗೂ ನಡೆದಿದ್ದ ಅಕ್ರಮಗಳು ಮುಂದೆನಡೆಯದಂತೆ ಸ್ಪಷ್ಟವಾದ ನಿಯಮನಿಬಂಧನೆ ಗಳ ರಚನೆಯಾಯಿತು; ಅವುಗಳನ್ನೂ ದೊರೆ ಒಪ್ಪಿಕೊಂಡಿದ್ದನು. ಆದ್ದರಿಂದ ಸಭಿಕರಲ್ಲಿ ಒಂದುಪಂಗಡದವರಿಗೆ ತುಷ್ಟಿಯಾಗಿತ್ತು. ಪ್ಯೂರಿಟನ್ ಮತದಲ್ಲಿ ವಿಶ್ವಾಸವಿದ್ದ ಸಭಿಕರಿಗೆಮಾತ್ರ ತೃಪ್ತಿಯಾಗಲಿಲ್ಲ. ಪ್ಯೂರಿಟನ್ನರ ಸೂಚನೆಗಳನ್ನು ಕಾಮನ್ಸ್ ಸಭಿಕರಲ್ಲಿ ಆಂಗ್ಲಿಕನ್ ಪಂಗಡದವರುಮಾತ್ರವಲ್ಲದೆ ಶ್ರೀಮಂತಸಭೆಯವರೂ ಒಪ್ಪಲಿಲ್ಲ. ಪಾರ್ಲಿಮೆಂಟಿನಲ್ಲಿ ಈರೀತಿ ತೋರಿದ ಒಡಕು ರಾಜನಿಗೆ ಅನುಕೂಲವಾಗಿಕಂಡಿತು. ಎಲಿಸಬೆತ್ ಕಾಲದಲ್ಲಿದ್ದಂತೆ ಚರ್ಚುಪದ್ಧತಿಗಳನ್ನು ನಡೆಸಿಕೊಡುವುದಾಗಿ ರಾಜನು ವಾಗ್ದಾನಮಾಡಿ ಶ್ರೀಮಂತರನ್ನೂ ಕಾಮನ್ಸ್ ಸಭಿಕರನೇಕರನ್ನೂ ತನ್ನ ಕಡೆಗೆ ಒಲಿಸಿಕೊಂಡನು. ಅತ್ತ ಸ್ಕಾಟರೊಡನೆ ಜಗಳವನ್ನು ನಿಲ್ಲಿಸಿ ಸ್ಕಾಟ್ಲೆಂಡಿನಲ್ಲಿಯೂ ರಾಜಭಕ್ತಿಯು ಊರಿಕೊಳ್ಳುವಂತೆ ಪ್ರಯತ್ನಪಟ್ಟನು. ಈ ರೀತಿಯಲ್ಲಿ ಲಾಂಗ್ ಪಾರ್ಲಿಮೆಂಟ್ ಸಭೆಯ ಕಲಾಪದಲ್ಲಿ ರಾಜಪಕ್ಷವೊಂದುಕಡೆ ಪ್ಯೂರಿಟನ್ ಪಕ್ಷವೊಂದುಕಡೆ ರೂಪಗೊಳ್ಳಲು ಮೊದಲಾಯಿತು.

**ಸಭೆಯಲ್ಲಿ ಒಡಕು**

ಸಭಿಕರಲ್ಲಿ ಒಡಕುತೋರಿದುದನ್ನು ಕಂಡು ಪಿಂ ಮುಂತಾದನಾಯಕರು ಚಿಂತೆಗೊಳಗಾದರು. ಆ ವೇಳೆಗೆ ಐರ್ಲಂಡಿನಲ್ಲಿ ದೊಡ್ಡದಂಗೆಯೆದ್ದಿತು. ತಮಗಿಷ್ಟವಾದ ಮತವನ್ನು ಅನುಸರಿಸುವುದರಲ್ಲಿ ನಾನಾಬಾಧೆಗಳನ್ನು ಪಡುತ್ತಿದ್ದುದಲ್ಲದೆ ತಮ್ಮ ಹಿರಿಯರಕಾಲದಿಂದಬಂದಿದ್ದ ಭೂಮಿಕಾಣಿಗಳನ್ನೂ ಕಳೆದುಕೊಂಡಿದ್ದ **ಐರಿಷರು** ತಮ್ಮ ಮೇಲ್ಮೆಯನ್ನು ಸಾಧಿಸಲು 1641ರಲ್ಲಿ ಒಟ್ಟುಕೂಡಿ **ದಂಗೆಯೆಬ್ಬಿ**ಸಿದರು. ತಮ್ಮ ಭೂಮಿಗಳಲ್ಲಿ ಹೊಸದಾಗಿ ನೆಲೆಸಿದ್ದ ಪ್ರಾಟೆಸ್ಟೆಂಟ್ ಇಂಗ್ಲಿಷರನ್ನು ಅಲ್ಲಲ್ಲಿ ಬಲಿಯಿಟ್ಟರು. ಈ ದಂಗೆಯನ್ನಡಗಿಸಬೇಕಾದಸಂದರ್ಭವನ್ನು ಉಪಯೋಗಿಸಿಕೊಂಡು ಪಿಂ ಮುಂತಾದವರು **ಗ್ರಾಂಡ್ ರೆಮಾನ್ಸ್‌ಟ್ರೆನ್ಸ್** (Grand Remonstrance) ಎಂಬ ಭಾರಿಆಕ್ಷೇಪಣಾಪತ್ರವನ್ನು ಸಭೆಯಮುಂದೊಡ್ಡಿದರು. ಸಾಮಾನ್ಯಆಡಳಿತದಲ್ಲಿಯೂ ಮತದವಿರ್ಪಾಟು

**ಐಕ್ಯತಾಪ್ರಯತ್ನ**

ಗಳಲ್ಲಿಯೂ ಹಿಂದಿನಿಂದನಡೆದಿದ್ದ ಅಕ್ರಮಗಳನ್ನು ಪಟ್ಟಿಮಾಡಿ ಅವುಗಳನ್ನು ಸರಿಪಡಿಸಲು ರಾಜನು ತನ್ನ ಮತಾಧಿಕಾರವನ್ನು ಒಂದಾನೊಂದು ಪಾದ್ರಿಗಳಸಭೆ ಗೊಪ್ಪಿಸಿ ಪಾರ್ಲಿಮೆಂಟಿನವರು ಗೊತ್ತುಮಾಡಿದ ಮಂತ್ರಿಗಳನ್ನು ಇಟ್ಟುಕೊಳ್ಳಬೇಕೆಂಬುದು ಆ ಪತ್ರದ ಮುಖ್ಯಾಂಶ. ಸಭೆಯಲ್ಲಿ ಇದು ಚರ್ಚೆಯಾಗಿ ಹನ್ನೊಂದು ವೋಟುಗಳ ಆಧಿಕ್ಯದಿಂದಮಾತ್ರ ಒಪ್ಪಿಗೆಯಾಯಿತು. ಅರ್ಧಕ್ಕೆ ಸ್ವಲ್ಪಮಾತ್ರ ಕಡಿಮೆ ಸಂಖ್ಯೆಯಸಭಿಕರು ಅದಕ್ಕೆ ವಿರೋಧವಾಗಿಯೇ ವೋಟುಕೊಟ್ಟರು.

ಈ ಸಂದರ್ಭದಲ್ಲಿ ದೊರೆ ಯುಕ್ತಿಯನ್ನೂ ಉಪಾಯವನ್ನೂ ಅವಲಂಬಿಸಿದ್ದು ದುಡುಕುತನಕ್ಕೆಡೆಗೊಡದೆಇದ್ದಿದ್ದರೆ ಪ್ರಾಯಶಃ ಅನಾಹುತವಾಗುತ್ತಿರಲಿಲ್ಲ. ಆದರೆ ರಾಜನು ಸ್ಥಿರನಿಶ್ಚಯಕ್ಕೆ ಬಾರದೆ ಹಾಗೂಹೀಗೂಇದ್ದು ಕೆಲವು ಸಣ್ಣವಿಷಯಗಳಲ್ಲಿ ದುಡುಕಿದನು. ಪಾರ್ಲಿಮೆಂಟ್ ಸಭಿಕರನ್ನು ರಾಜನು ವಿಚಾರಣೆಗೆಳೆಯುವ ಸಂಪ್ರದಾಯವೇ ಇಲ್ಲವಾದರೂ ಈ ದೊರೆ ತನ್ನ ಕೋಪಕ್ಕೊಳಗಾಗಿ ಒಬ್ಬ ಶ್ರೀಮಂತನನ್ನೂ ಐವರು ಕಾಮನ್ಸ್ ಸಭಿಕರನ್ನೂ ವಿಚಾರಣೆಗೆಗುರಿಪಡಿಸಲು ಯತ್ನಿಸಿದನು. ಆ ಪ್ರಯತ್ನ ನಡೆಯಲಿಲ್ಲ. ಆಗ ದೊರೆಯು ತಾನೇ ಸಭಾಮಂದಿರದಲ್ಲಿನುಗ್ಗಿ ಐವರು ಸಭಿಕರನ್ನು ದಸ್ತಗಿರಿಮಾಡಲು ಉದ್ಯಮಿಸಿದನು. **ಪಿಂ, ಹ್ಯಾಂಪ್ಡೆನ್, ಹಾಲಿಸ್, ಹ್ಯಾಸೆಲ್ರಿಗ್, ಸ್ಟ್ರೋಡ್ಸ್** ಎಂಬ ಆ ಪಂಚಸಭಿಕರು ಧೀರರೆನಿಸಿ ಸಭಿಕರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಮೊದಲೇ ಸಮಾಚಾರತಿಳಿಯಿತು; ಐವರೂ ದೊರೆಬರುವ ಮೊದಲೇ ಸಭೆಯಿಂದ ಹೊರಟುಹೋಗಿದ್ದರು. ಸಭೆಯಲ್ಲಿ ರಾಜನುಬಂದಾಗ ಅವರು ಕಾಣಲಿಲ್ಲ. "ಹಕ್ಕಿಗಳು ತಪ್ಪಿಸಿಕೊಂಡು ಹಾರಿಹೋಗಿವೆ"ಯೆನ್ನುತ್ತ ರಾಜನು ಅಲ್ಲಿಂದ ಹೊರಟಾಗ ಸಭಿಕರೆಲ್ಲರು "ಪ್ರಿವಿಲೆಜ್, ಪ್ರಿವಿಲೆಜ್" (Privilege) ಎಂದು ಕೂಗಿಕೊಂಡರು. ರಾಜನಪ್ರವರ್ತನೆಯು ಅತ್ಯುದ್ಧಟತನವೆಂದೆನಿಸಿತು. ಸಭಿಕರನ್ನು ತಾನೇ ದಸ್ತಗಿರಿಮಾಡುವ ರಾಜನಿಗೆ ಸಭೆಯಲ್ಲಿ ಎಷ್ಟು ತಿರಸ್ಕಾರಬುದ್ಧಿಯಿದೆಯೆಂದೆಲ್ಲರೂ ಮಾತನಾಡಿಕೊಂಡರು. ರಾಜವಿರೋಧಿಗಳಿಗೆ ಬಲ ಬಂದಹಾಗಾಯಿತು.

**ಸಭಿಕರ ದಸ್ತಗಿರಿ ಪ್ರಯತ್ನ**

ಪಾರ್ಲಿಮೆಂಟಿಗೆ ಅಧೀನವಾಗಿರುವಉದ್ದೇಶ ರಾಜನಮನಸ್ಸಿನಲ್ಲಿರಲಿಲ್ಲ. ಈ ದಸ್ತಗಿರಿಪ್ರಯತ್ನ ಭಂಗವಾದಕೂಡಲೆ ರಾಣಿಯು ಹಾಲಂಡಿಗೆ ಪ್ರಯಾಣಮಾಡಿದಳು. ಹೊರಗಿನಿಂದ ಸೈನ್ಯತರುವುದೇ ಉದ್ದೇಶ. ಆಗ ಪಾರ್ಲಿಮೆಂಟಿನಸಭಿಕರು **ಮಿಲಿಷಿಯ ಬಿಲ್** (Militia Bill) ಎಂಬ ಮಸೂದೆಯನ್ನು ರಚಿಸಿದರು; ಅದರಂತೆ ಆಜ್ಞೆಗಳನ್ನೂ ಸಾರಿದರು. ದೇಶದ ಸೈನ್ಯಾಧಿಕಾರಿಗಳು ಪಾರ್ಲಿಮೆಂಟಿನವರಿಂದಲೇ ನಿಯಮಿತರಾಗಿ ಸಭೆಗೆ ವಿಧೇಯರಾಗಿರಬೇಕೆಂಬುದು ಅದರ ಸಾರಾಂಶ. ಸೈನ್ಯಕ್ಕೆ ಪಾರ್ಲಿ

**ಸೈನ್ಯದ ಯಾಜಮಾನ್ಯ**

ಮೆಂಟ್‌ಸಭೆಯವರು ಯಜಮಾನರೇವಿನಾ ರಾಜನಲ್ಲವೆಂಬಂತಾಯಿತು. ಇದಕ್ಕೆ ರಾಜನೊಪ್ಪಲಿಲ್ಲ. ಆ ವೇಳೆಗಾಗಲೆ ರಾಜಪಕ್ಷದವರು, ಪಾರ್ಲಿಮೆಂಟ್‌ಪಕ್ಷದವರು ಎಂಬ ಪಕ್ಷವಿಪಕ್ಷಗಳು ಸಿದ್ಧವಾಗಿಹೋಗಿದ್ದವು. 1642ರಲ್ಲಿ **ಹಲ್** (Hull) ಎಂಬ ತೀರಪಟ್ಟಣದ ಅಧಿಕಾರಿಯು ಪಾರ್ಲಿಮೆಂಟ್‌ಪಕ್ಷವನ್ನು ಹಿಡಿದು ಬಂದರಿನ ಬೀಗದಕ್ಕೆಗಳನ್ನು ರಾಜಾಧಿಕಾರಿಗಳಿಗೆ ಒಪ್ಪಿಸುವುದಿಲ್ಲವೆಂದುಬಿಟ್ಟನು. ರಾಜಪಕ್ಷದವರು ರೇಗಿ

**ಯುದ್ಧವೇ ಗತಿ**

ಯುದ್ಧವೇ ಕರ್ತವ್ಯವೆಂದುಕೊಂಡರು. ರಾಜನು ಯಾರ್ಕ್ ಪಟ್ಟಣದಲ್ಲಿದ್ದಾಗ ಪಾರ್ಲಿಮೆಂಟಿನವರಿಂದ ತನ್ನ ಅಧಿಕಾರದ ಸರ್ವನಷ್ಟವಾಗುವಂತಹ ಸೂಚನೆಗಳು ಬಂದವು. ಅದಕ್ಕೆ ಪ್ರತಿಯಾಗಿ **ನಾಟಿಂಘಂ** ಪಟ್ಟಣದಲ್ಲಿ ರಾಜಪಕ್ಷದವರು ತಮ್ಮಧ್ವಜವನ್ನೇರಿಸಿ ರಾಜಭಕ್ತರೆಲ್ಲರೂ ಯುದ್ಧಕ್ಕಣಿಯಾಗತಕ್ಕುದೆಂದು ಪ್ರಕಟಿಸಿದರು. ಪಾರ್ಲಿಮೆಂಟಿನವರು ತಮ್ಮಸೈನ್ಯಕ್ಕೆ **ಎಸೆಕ್ಸ್ ಶ್ರೀಮಂತ**(Earl of Essex)ನನ್ನು ದಳಪತಿಯೆಂದು ಗೊತ್ತುಮಾಡಿದ್ದರು. ಯುದ್ಧವೇ ಮುಂದಿನಗತಿಯಾಯಿತು.

ಪ್ರಸಿದ್ಧವಾದ ಈ **ಅಂತರ್ಯುದ್ಧ**(Civil War)ಕ್ಕೆ ಮೂಲ ರಾಜಕೀಯ ಮತ್ತು ಧಾರ್ಮಿಕ. ರಾಜನಿಗೂ ಜನರ ಪ್ರತಿನಿಧಿಸಭೆಗೂ ರಾಜ್ಯಾಧಿಕಾರ ಹೇಗೆ ವಿಭಾಗವಾಗಬೇಕೆನ್ನುವುದೊಂದುವಿಚಾರ. ಅದರಲ್ಲಿ ಪಾರ್ಲಿಮೆಂಟಿನವರು ಹಟವನ್ನಾದರೂ ಹಿಡಿದು ತಮ್ಮಅಧಿಕಾರವನ್ನು ನೆಲೆಗೊಳಿಸತಕ್ಕವರು. ರಾಜನಾ

**ಮೂಲಕಾರಣ**

ದರೋ ತನಗೆ ದೈವದತ್ತಾಧಿಕಾರವಿದೆಯೆಂದು ನಂಬಿ ಜನರು ತನಗೆ ವಿಧೇಯರಾಗಿರತಕ್ಕುದೆಂದು ಸಾಧಿಸತಕ್ಕವನು. ಧಾರ್ಮಿಕವಿಚಾರದಲ್ಲಿ ಇಂಗ್ಲಂಡಿನಲ್ಲಾಗಲಿ ಇತರ ಐರೋಪ್ಯದೇಶಗಳಲ್ಲಾಗಲಿ ಮತಾಂತರಸಹನವೆಂಬುದು ತೋರಲೇಇಲ್ಲ. ತಾವು ನಂಬಿದ ಮಾರ್ಗವು ಸತ್ಯವಾದರೆ ಇತರಮಾರ್ಗಗಳು ದುಷ್ಟವೆಂದೇ ಆ ಕಾಲದ ಸಿದ್ಧಾಂತ. ಇದರಿಂದ ಪ್ಯೂರಿಟನ್ನರಿಗೂ ಲಾಡನಪಕ್ಷದವರಿಗೂ ಬದ್ಧದ್ವೇಷವೇ ಸಹಜವೆನಿಸಿತ್ತು. ಪ್ಯೂರಿಟನ್ನರನ್ನು ಉಗ್ರರಾಕ್ಷಸರೆಂದು ಆಂಗ್ಲಿಕನ್ನರೂ ಆಂಗ್ಲಿಕನ್ನರನ್ನು ನೀತಿಭ್ರಷ್ಟರೆಂದು ಪ್ಯೂರಿಟನ್ನರೂ ಪರಸ್ಪರ ಜರೆದಾಡಿದರು. ರಾಜಪಕ್ಷದವರು ಪ್ಯೂರಿಟನ್ನರನ್ನು **ಬೋಳುಬುರುಡೆ**(Roundheads)ಯವರೆನ್ನುತ್ತಿದ್ದರು. ಏಕೆಂದರೆ ಪ್ಯೂರಿಟನ್ನರು

**ಪಕ್ಷವಿಪಕ್ಷಗಳು**

ಅಲಂಕಾರವನ್ನೊಲ್ಲದೆ ತಲೆಗೂದಲನ್ನು ಮೋಟಾಗಿ ಕತ್ತರಿಸಿಕೊಳ್ಳುತ್ತಿದ್ದರು. ರಾಜಪಕ್ಷದವರು ಅಲಂಕಾರಪ್ರಿಯರಾಗಿ ಶೀವಿಯಿಂದಿದ್ದುದರಿಂದ ಅವರನ್ನು **ಕವೆಲಿಯರ್ಸ್** (Cavaliers) ಎಂಬುದಾಗಿ ಪ್ರತಿಪಕ್ಷದವರು ಕರೆಯುತ್ತಿದ್ದರು. ಸಾಧಾರಣವಾಗಿ ಜಮೀನ್ದಾರರೂ ರೈತಾಪಿಜನರೂ ರಾಜಪಕ್ಷದವರಾದರು; ಪಟ್ಟಣಿಗರು ಪಾರ್ಲಿಮೆಂಟಿನ ಪಕ್ಷವನ್ನು ವಹಿಸಿದರು. ಇಂಗ್ಲಂಡಿನ ಪಶ್ಚಿಮೋತ್ತರವಿಭಾಗಗಳಲ್ಲಿ ಹೆಚ್ಚುಜನರು ರಾಜ

ಪಕ್ಷದವರಾಗಿಯೂ ಪೂರ್ವದಕ್ಷಿಣಭಾಗಗಳಲ್ಲಿ ಹೆಚ್ಚು ಜನರು ಪಾರ್ಲಿಮೆಂಟ್‌ಪಕ್ಷದವರಾಗಿಯೂ ಇದ್ದರೆನ್ನಬಹುದು. ಶ್ರೀಮಂತರಲ್ಲಿ ರಾಜನನ್ನು ಸೇರಿಕೊಂಡವರು ಹೆಚ್ಚು ಮಂದಿಯಾದರೂ ಕೆಲವರು ಪಾರ್ಲಿಮೆಂಟಿನವರಾದರು. ಕಾಮನ್ಸ್‌ಸಭಿಕರಲ್ಲಿ ಎಡ್ವರ್ಡ್‌ಹೈಡನಜತೆಯಲ್ಲಿ ಕೆಲವರು ರಾಜನನ್ನೇ ಸೇರಿದರು; ಆದರೆ ಹೆಚ್ಚು ಮಂದಿ ಸಭಿಕರು ರಾಜನವೈರಿಗಳಾದರು.

ಈ ಬಗೆಯಾಗಿ ವಿಂಗಡವಾದ ಪಕ್ಷಪ್ರತಿಪಕ್ಷಗಳಲ್ಲಿ ಪಾರ್ಲಿಮೆಂಟಿನವರಿಗೆ **ಲಂಡರ್** ನಗರವು ಮುಖ್ಯನೆಲೆಯಾಯಿತು. ಆ ಕಾರಣದಿಂದ ರಾಜನು **ಆಕ್ಸ್‌ಫರ್ಡ್**‌ಪಟ್ಟಣದಲ್ಲಿ ಬಿಡಾರಮಾಡಿಕೊಂಡನು. ಬಲಾಬಲಗಳನ್ನು ನೋಡುವುದಾದರೆ ಪಾರ್ಲಿಮೆಂಟ್‌ಸೈನ್ಯದಲ್ಲಿ ಶಿಸ್ತಿಲ್ಲ, ಅನುಭವವುಳ್ಳ ಅಧಿಕಾರಿಗಳಿಲ್ಲ; ರಾಜನ ಸೈನ್ಯವು ತರ್ಬಿಯತ್ತಾಗಿ ಯುದ್ಧಾನುಭವವುಳ್ಳುದು. ಆದರೆ ಪಾರ್ಲಿಮೆಂಟಿನವರು ಹಣವನ್ನೊದಗಿಸಿಕೊಳ್ಳಬಲ್ಲವರು; ರಾಜನು ಯಥೇಷ್ಟವಾಗಿ ಹಣವನ್ನು ದಕ್ಕಿಸಿಕೊಳ್ಳಲಾರದವನು. ಈ ಕಾರಣಗಳಿಂದ ಯುದ್ಧದ ಮೊದಲಿನಲ್ಲಿ ರಾಜಸೈನ್ಯದಕಡೆಗೇ ಜಯವೊಲಿಯುವಂತಿತ್ತು.

**ಬಲಾಬಲಗಳು**

ರಾಜನಕಡೆ ಅನುಭವಸ್ಥರಾದ ದಳಪತಿಗಳಿದ್ದರು. ಚಾರ್ಲ್ಸ್‌ನ ಸೋದರಳಿಯ **ರೂಪರ್ಟ್** (Rupert) ಎಂಬ ರಾಜಕುಮಾರನು ರಾಹುತರನಾಯಕನಾಗಿ ಸಾಹಸಿಯಾಗಿದ್ದನು. ಪಾರ್ಲಿಮೆಂಟ್‌ಸೈನ್ಯಕ್ಕೆ ಎಸೆಕ್ಸಿನಅರ್ಲ್ ದಳಪತಿಯಾಗಿದ್ದನು. **ಎಡ್ಜ್‌ಹಿಲ್** ( Edgehill ) ಬಳಿ ಎರಡುಸೈನ್ಯಗಳೂ ಎದುರುಬದುರಾಗಿ ಕದನಕ್ಕೆ ತೊಡಗಿದವು. ರೂಪರ್ಟ್ ತನ್ನೆದುರಿಗಿದ್ದ ಶತ್ರುದಳದಮೇಲೆ ರಭಸದಿಂದಬಿದ್ದು ಸೋಲಿಸಿ ಅಟ್ಟಿಸಿಕೊಂಡು ಹತ್ತುಮೈಲಿದೂರ ಹೋಗಿಬಿಟ್ಟನು. ಹಿಂತಿರುಗಿದಾಗ ಉಭಯಸೈನ್ಯಗಳೂ ಸಮಾನವಾಗಿಯೇ ಕಾದಾಡುತ್ತ ನಿಂತಿದ್ದವು. ರೂಪರ್ಟನ ಆತುರದಿಂದ ಪೂರ್ತಿಯಾಗಿ ಜಯಲಾಭವಾಗದೆ ನಿಂತಿತು. ರಾಜನು ಆ ತರುವಾಯ ಲಂಡನ್ನಿನಕಡೆ ಸೈನ್ಯಸಮೇತ ಹೊರಟನು. ಹೇಗಾದರೂ ನುಗ್ಗಿ ಲಂಡನ್ನನ್ನು ಗೆದ್ದಿದ್ದರೆ ಪಾರ್ಲಿಮೆಂಟಿನವರು ಮುಂದಿನ ಪ್ರಯತ್ನವನ್ನು ಮಾಡುವುದು ಕಷ್ಟವಾಗಿತ್ತು. ಆದರೆ ಮಧ್ಯಮಾರ್ಗದಲ್ಲಿ ಪಾರ್ಲಿಮೆಂಟಿನ ಸೈನ್ಯವೆದುರಾಗಿನಿಂತು ರಾಜನನ್ನು ತಡೆಯಿತು. ಲಂಡರ್‌ಪಟ್ಟಣವುಳಿಯಿತು. ರಾಜನು ಹಿಮ್ಮೆಟ್ಟಿದನು. ಆಗ ಪಾರ್ಲಿಮೆಂಟ್‌ಪಕ್ಷದವರು ಶಾಂತಿಸಂಧಾನವನ್ನು ನಡೆಸಿದರು. ಚಾರ್ಲ್ಸ್ ಮತವಿಷಯದಲ್ಲೂ ಸೈನ್ಯವಿಷಯದಲ್ಲೂ ತನ್ನ ಸರ್ವಾಧಿಕಾರದ ಹಕ್ಕನ್ನು ಬಿಡುವುದಿಲ್ಲವೆಂದು ಹೇಳಲು ಸಂಧಾನಪ್ರಯತ್ನ ಮುರಿದುಹೋಯಿತು.

**ಕದನಗಳು**

ಅಲ್ಲಲ್ಲಿ ಚಿಕ್ಕ ಯುದ್ಧಗಳೂ ಮುತ್ತಿಗೆಗಳೂ ನಡೆದವು. ತೀರಪಟ್ಟಣಗಳು ಮಾತ್ರ ಪಾರ್ಲಿಮೆಂಟ್‌ಕಡೆ ಭದ್ರವಾಗಿ ನಿಂತವು. ಒಳನಾಡಿನ ಪಟ್ಟಣಗಳು

ಆಕ್ರಮಣಪ್ರತ್ಯಾಕ್ರಮಣಗಳಿಗೆ ಸಿಕ್ಕಿದವು. ರಾಜಪಕ್ಷದ ಸೈನ್ಯಗಳೇ ಜಯವನ್ನು ಸಂಪಾದಿಸುತ್ತಲಿದ್ದವು. 1643ರಲ್ಲಿ **ಚಾಲ್ಗ್ರೋವ್ ಫೀಲ್ಡ್** (Chalgrove Field) ಎಂಬಲ್ಲಿ ನಡೆದ ಲಡಾಯಿಯಲ್ಲಿ ಹ್ಯಾಂಪ್ಡೆನ್ ಮಡಿದನು. ಐದಾರೆಡೆಗಳಲ್ಲಿ ಸಣ್ಣ ಕದನಗಳು ನಡೆದವು; ಪಾರ್ಲಿಮೆಂಟ್‌ಪಕ್ಷಕ್ಕೆ ಜಯತೋರಲಿಲ್ಲ. ಮುತ್ತಿಗೆಗೆ ಗುರಿಯಾದ ಪಟ್ಟಣಗಳವರು ಪರಸ್ಪರ ಸಹಾಯಮಾಡಿಕೊಂಡು ಹಾಗೂಹೀಗೂ ರಾಜಸೈನ್ಯಗಳಿಗೆ ಹೆಚ್ಚು ಆಸ್ಪದ ಕೊಡದಿದ್ದವು. ಹಾಗಿರಲು 1643ರಲ್ಲಿ **ನ್ಯೂಬೆರಿ** (Newbury) ಬಳಿ ಎರಡು ಪಕ್ಷಗಳಿಗೂ ಕದನವಾಯಿತು. ರಾಜನು ಗೆದ್ದಿದ್ದರೆ ಲಂಡನ್ ಮೇಲೆ ನುಗ್ಗುತ್ತಿದ್ದನು. ಪಾರ್ಲಿಮೆಂಟಿನವರು ಸ್ಥೈರ್ಯದಿಂದ ಕಾದಾಡಿ ಕಷ್ಟಪಟ್ಟು ಗೆದ್ದರು. ರಾಜಪಕ್ಷದಲ್ಲಿ ಗಣ್ಯನಾಗಿದ್ದ ಲಾರ್ಡ್ ಫಾಕ್ಲೆಂಡ್ ಪ್ರಾಣಕಳೆದುಕೊಂಡನು. ಪಾರ್ಲಿಮೆಂಟಿನವರ ಧೈರ್ಯ ಹೆಚ್ಚುವಂತಾಯಿತು. ರಾಜನಕೈಗೆ ಲಂಡನ್ ಸಿಕ್ಕುವ ಸಂಭವ ದೂರವಾಯಿತು.

**ಹ್ಯಾಂಪ್ಡೆನ್ ಮರಣ**

**ಫಾಕ್ಲೆಂಡ್ ಮರಣ**

ಪಾರ್ಲಿಮೆಂಟಿನ ನಾಯಕನಾಗಿದ್ದ ಪಿಂ ಯುದ್ಧಪರಿಶ್ರಮವಿಲ್ಲದವನು. ರಾಜನ ದೋಷಗಳನ್ನು ಚರ್ಚೆಮಾಡುವುದರಲ್ಲಿಯೂ ಪಾರ್ಲಿಮೆಂಟಿನ ಅಧಿಕಾರವನ್ನು ಸ್ಥಾಪಿಸುವುದರಲ್ಲಿಯೂ ದಕ್ಷನಾದವನು. 1643ನೆ ವರ್ಷದಲ್ಲಿ ಪಾರ್ಲಿಮೆಂಟ್‌ಪಕ್ಷವು ದುರ್ಬಲವಾಗಿದ್ದುದನ್ನು ಕಂಡು ಪಿಂ ಒಂದು ಯೋಚನೆಯನ್ನು ಮಾಡಿದನು. ಸ್ಕಾಟ್ಲೆಂಡಿನ ಪ್ರೆಸ್ಬಿಟೇರಿಯನ್ನರುಕೂಡ ರಾಜವಿರೋಧಿಗಳಾಗಿದ್ದರಷ್ಟೆ. ಅವರ ಸಹಾಯವೊದಗುವಂತೆ ಪಿಂ ಸಂಧಾನ ನಡೆಸಿದನು. ಒಪ್ಪಂದವೂ ನಡೆಯಿತು. ಸ್ಕಾಟ್‌ಜನರು ಪಾರ್ಲಿಮೆಂಟಿನ ಸೈನ್ಯಗಳೊಂದಿಗೆ ತಮ್ಮ ಸೈನ್ಯವನ್ನೂ ಸೇರಿಸಿ ಒಟ್ಟುಗೂಡಿ ರಾಜಪಕ್ಷದಮೇಲೆ ಯುದ್ಧ ನಡೆಸಲು ಒಪ್ಪಿದರು. ಈ ಸಹಾಯಕ್ಕೆ ಪ್ರತಿಯಾಗಿ ಇಂಗ್ಲೆಂಡಿನಲ್ಲಿ ಪ್ರೆಸ್ಬಿಟೇರಿಯನ್ ಮತವನ್ನೇ ಸ್ಥಾಪಿಸಬೇಕೆಂದು ಸ್ಕಾಟರು ಷರತ್ತನ್ನು ಒಡ್ಡಿದರು. ಅದಕ್ಕೆ ಪಿಂ ಒಪ್ಪಿದನು. ಈ ಒಪ್ಪಂದವನ್ನು ಪಾರ್ಲಿಮೆಂಟಿನವರೂ ಸ್ಕಾಟರೂ ಸತ್ಯಪ್ರಮಾಣವೆಂದು ನಡೆಸಿದಕಾರಣ ಅದಕ್ಕೆ **ಸಾಲೆಂ ಲೀಗ್ ಮತ್ತು ಕವೆನೆಂಟ್** (Solemn League and Covenant) ಎಂದು ಹೆಸರಾಯಿತು. ಈ ಸಂಧಾನದಿಂದ ಪಾರ್ಲಿಮೆಂಟ್‌ಪಕ್ಷಕ್ಕೆ ಒಳ್ಳೆ ಸಹಾಯವೊದಗಬಹುದಾಯಿತು. ಆದರೆ ಒಪ್ಪಂದವನ್ನು ನಡೆಸಿದ ಪಿಂ ಅದೇವರ್ಷ ತೀರಿಕೊಂಡನು. ಪಾರ್ಲಿಮೆಂಟಿಗೆ ಕಣ್ಣುಹೋದಂತೆಯೆ ಆಯಿತು.

**ಪಿಮ್ಮನ ಸಂಧಾನ**

ಪಾರ್ಲಿಮೆಂಟ್‌ಪಕ್ಷದಲ್ಲಿ ಪ್ಯೂರಿಟನ್‌ಪಂಥದವರು ಪ್ರಬಲರಾಗಿದ್ದಾಗ್ಗೂ ಅವರಲ್ಲಿ ಪ್ರೆಸ್ಬಿಟೇರಿಯನ್ನರು ಹೆಚ್ಚಾಗಿರಲಿಲ್ಲ. ಇಂಡಿಪೆಂಡೆಂಟ್ ಎಂಬ ಹೆಸರಿನ ಪಂಥದವರು ಹೆಚ್ಚಾಗಿದ್ದರು. ಪಾರ್ಲಿಮೆಂಟ್‌ಸೈನ್ಯವನ್ನು ನಡೆಸುತ್ತಿದ್ದವರಲ್ಲಿ 1643ರ

ವೇಳೆಗೆ **ಆಲಿವರ್ ಕ್ರಾಮ್ವೆಲ್** (Oliver Cromwell) ಎಂಬ ಇಂಡಿಪೆಂಡೆಂಟ್ ಶಾಖೆಯಾತನು ಪ್ರಬಲನಾಗುತ್ತಿದ್ದನು. ಆತನು ಲಾಂಗ್ ಪಾರ್ಲಿಮೆಂಟಿನ ಸಭಿಕರಲ್ಲೊಬ್ಬ. ರಾಜಪಕ್ಷವನ್ನು ವಿರೋಧಿಸಿದವರಲ್ಲಿ ಅಗ್ರಗಾಮಿಯಾಗಿದ್ದಾಗ್ಯೂ ಆತನು ಚರ್ಚೆನಡೆಸುವುದರಲ್ಲಾಗಲಿ ಭಾಷಣ ಮಾಡುವುದರಲ್ಲಾಗಲಿ ಚತುರನೆನಿಸಲಿಲ್ಲ. ಆತನ ಬುದ್ಧಿಚಾತುರ್ಯಸಾಮರ್ಥ್ಯಗಳು ಯುದ್ಧದಲ್ಲಿ ದಿನೇದಿನೇ ಹೆಚ್ಚುಹೆಚ್ಚಾಗಿ ತೋರಿಕೊಂಡವು. ಆತನು ತನ್ನಂತೆಯೇ ಇಂಡಿಪೆಂಡೆಂಟ್ ಮತವನ್ನನುಸರಿಸಿ ರಾಜನನ್ನು ಅಂತಃಕರಣಪೂರ್ತಿಯಾಗಿ ದ್ವೇಷಿಸುತ್ತಿದ್ದ ನಾಯಕರನ್ನೂ ಸೈನಿಕರನ್ನೂ ಒಟ್ಟುಗೂಡಿಸಿ ಒಂದು **ರಾವುತಪಡೆಯನ್ನು** ಕಟ್ಟಿದನು. 1644 ರವೇಳೆಗೆ ಕ್ರಾಮ್ವೆಲ್ಲನ ಪಡೆಯು ಸಿದ್ಧವಾಗಿತ್ತು.

**ಇಂಡಿಪೆಂಡೆಂಟ್ ಶಾಖೆ**

ಪಾರ್ಲಿಮೆಂಟ್ ಪಕ್ಷಕ್ಕೆ ಸ್ಕಾಟರಸಹಾಯವೊದಗಿದಂತೆ ರಾಜಪಕ್ಷಕ್ಕೆ ಐರಿಷರ ಸಹಾಯವೊದಗಿತ್ತು. ಐರಿಷರು ದಂಗೆಯೆದ್ದಿದ್ದರಷ್ಟೆ. ರಾಜನು ಅವರೊಂದಿಗೆ ಸಂಧಾನನಡೆಸಿ ಅವರ ದಂಗೆಯನ್ನು ತಾತ್ಕಾಲಿಕವಾಗಿ ನಿಲ್ಲಿಸಿಕೊಂಡು ಅಲ್ಲಿದ್ದ ಸೈನಿಕರನ್ನು ಇಂಗ್ಲಂಡಿಗೆ ಕರೆಸಿಕೊಂಡನು. ರೋಮನ್ ಕ್ಯಾಥಲಿಕ್ಕರಾದ ಐರಿಷರು ಕೆಲವರು ರಾಜಸೈನ್ಯದಲ್ಲಿ ಸೇರಿದರು. ಈರೀತಿಯಲ್ಲಿ ಬಲಗೊಂಡ ಉಭಯಪಕ್ಷಗಳೂ 1644 ರಲ್ಲಿ **ಮಾರ್ಸ್ಟನ್ ಮೂರ್** (Marston Moor) ಎಂಬೆಡೆಯಲ್ಲಿ ಎದುರುಬದುರಾದವು. ಪ್ರಬಲವಾದ ಕದನ ನಡೆಯಿತು. **ಐರನ್ ಸೈಡ್ಸ್** (Ironsides) ಎಂದು ಹೆಸರುಪಡೆದ ಕ್ರಾಮ್ವೆಲ್ಲನ ಅಶ್ವಾರೋಹಿಗಳು ಶೌರ್ಯದಿಂದ ಯುದ್ಧಭೂಮಿಯಲ್ಲಿನಿಂತು ರಭಸದ ರೂಪರ್ಟನನ್ನು ಹಿಮ್ಮೆಟ್ಟಿಸಿದರು. ಸಮರ್ಥದಳಪತಿಯಾದ ಕ್ರಾಮ್ವೆಲ್ ತನ್ನೆದುರಿಗಿದ್ದ ಶತ್ರುಸೈನ್ಯವನ್ನು ಸೋಲಿಸಿದ್ದಲ್ಲದೆ ಯುದ್ಧಭೂಮಿಯ ಇತರ ಭಾಗಗಳಲ್ಲಿಯೂ ತನ್ನ ರಾವುತರನ್ನು ತಂದೊಡ್ಡಿ ರಾಜಪಕ್ಷದವರನ್ನು ಸಂಪೂರ್ಣವಾಗಿ ಸೋಲಿಸಿದನು. ರಾಜನಿಗೆ ಭಾರಿ ನಷ್ಟವಾಯಿತು.

**ರಾಜನ ಪರಾಜಯ**

ಮಾರ್ಸ್ಟನ್ ಮೂರ್ ಕದನದ ತರುವಾಯ **ನ್ಯೂಬೆರಿಯಲ್ಲಿ** ಎರಡನೆಸಲ ಸಣ್ಣ ಕದನ ನಡೆಯಿತು. ಯಾವಪಕ್ಷದವರಿಗೂ ಜಯವಾಗಲಿಲ್ಲ. ಕ್ರಾಮ್ವೆಲ್ಲನ ಸೈನಿಕರು ಅಲ್ಲಿರಲಿಲ್ಲ. ತಮ್ಮ ಪಕ್ಷದವರು ಗೆಲ್ಲಲಾರದೆಹೋದುದನ್ನು ಕಂಡು **ಕ್ರಾಮ್ವೆಲ್, ಫೇರ್ಫ್ಯಾಕ್ಸ್** (Fairfax), **ಇರಿಟನ್** (Ireton) ಮುಂತಾದವರು ಪಾರ್ಲಿಮೆಂಟ್ ಪಕ್ಷದ ಸೈನ್ಯಶುದ್ಧಿಮಾಡಬೇಕೆಂದು ಬಯಸಿದರು. ಸಭಿಕರಾದವರು ಸೈನ್ಯಾಧಿಕಾರಿಗಳಾಗಿರುವುದೂ ದಳಪತಿಗಳೆನಿಸಿರುವುದೂ ಸರಿಯಲ್ಲವೆಂದು ತೋರಿತು. ಯುದ್ಧಪಾಂಡಿತ್ಯವುಳ್ಳವರು ದಳಪತಿಗಳಾಗಬೇಕೇವಿನಾ ವಾದಚತುರರು ದಳಪತಿ

**ಪಾರ್ಲಿಮೆಂಟಿನ ಸೈನ್ಯಶುದ್ಧಿ**

ಗಳಾಗಲಾರರೆಂದೂ ಒಂದುಕಡೆ ಸಭಿಕನಾಗಿಯೂ ಮತ್ತೊಂದುಕಡೆ ಸೈನ್ಯಾಧಿಕಾರಿಯಾಗಿಯೂ ಇರುವುದರಿಂದ ಎರಡು ಕೆಲಸಗಳೂ ಹಾಳಾಗಬಹುದೆಂದೂ ಎಲ್ಲರಿಗೂ ಮನವರಿಕೆಯಾಯಿತು. ಪಾರ್ಲಿಮೆಂಟ್ ಸಭೆಯಲ್ಲಿ **ಸೆಲ್ಫ್ ಡಿನೈಯಿಂಗ್ ಆರ್ಡಿನೆನ್ಸ್** (Self-denying Ordinance) ಅಥವಾ ಸ್ವಾರ್ಥತ್ಯಾಗನಿಬಂಧನೆಯೆಂಬುದು ಒಪ್ಪಿಗೆಯಾಗಿ ಸಭಿಕರೆಲ್ಲರೂ ಸೈನ್ಯಾಧಿಕಾರಗಳನ್ನು ಬಿಟ್ಟುಕೊಟ್ಟರು. ಫೇರ್ಫಾಕ್ಸ್ ಮತ್ತು ಕ್ರಾಮ್ವೆಲ್ ಇಬ್ಬರುಮಾತ್ರ ಎರಡರಲ್ಲಿಯೂ ಇರಬಹುದೆಂದು ಎಲ್ಲರೂ ಒಪ್ಪಿದರು. ಈ ನಿಬಂಧನೆಯಾದಕೂಡಲೆ ಕ್ರಾಮ್ವೆಲ್ ಮುಂತಾದವರು ಸೈನ್ಯದಲ್ಲಿ ಸುಶಿಕ್ಷಣವನ್ನು ಬಲವಂತಗೊಳಿಸಿ ಅಶಿಕ್ಷಿತಸೈನಿಕರನ್ನೂ ಅಪ್ರಯೋಜಕರನ್ನೂ ತೆಗೆದುಹಾಕಿ ಹೊಸಮಾದರಿಸೈನ್ಯವನ್ನು ಸಿದ್ಧಗೊಳಿಸಿದರು. ಹೀಗೆ ಸನ್ನದ್ಧವಾದುದು **ನ್ಯೂ ಮಾಡೆಲ್ ಆರ್ಮಿ** (New Model Army)ಯೆಂಬ ಹೆಸರು ಪಡೆಯಿತು.

ಈ ಸೈನ್ಯದೊಡನೆ ಹೋರಾಡಿ ಗೆಲುವನ್ನು ಪಡೆಯಲು ರಾಜನು ಅದಷ್ಟು ಸನ್ನಾಹವನ್ನು ನಡೆಸಿಕೊಂಡನು. ಮಾರ್ಸ್ಟನ್ ಮೂರ್ ಕದನದ ತರುವಾಯ ರಾಜಪಕ್ಷದಲ್ಲಿ ದೌರ್ಬಲ್ಯವು ಹೆಚ್ಚುತ್ತಿತ್ತು. ಸಾಕಾದಷ್ಟು ಹಣವಿಲ್ಲ, ಕ್ಷೀಣವಾದ ಸೈನ್ಯ; ಹೊರಗಿನಿಂದ ಯಾವ ಪ್ರಭುವೂ ಸಹಾಯಕೊಡುವ ಸೂಚನೆ ಕಾಣಲಿಲ್ಲ. ಅಂತಹ ದುರವಸ್ಥೆಯಲ್ಲಿಯೂ ರಾಜನು **ನೇಸ್ಬಿ** (Naseby)ಬಳಿ ಯುದ್ಧಕ್ಕೆ ನಿಂತನು.

**ರಾಜಪಕ್ಷದ ಧ್ವಂಸ**

ರೂಪರ್ಟ್ ಸಾಹಸಮಾಡಿ ತನಗೆದುರಾಗಿದ್ದ ಶತ್ರುಭಾಗದವರನ್ನು ಸೋಲಿಸಿದಾಗ್ಗೂ ಕ್ರಾಮ್ವೆಲ್ಲನ ಪಡೆಯನ್ನು ತಡೆಯುವವರೇ ಇಲ್ಲವಾಯಿತು. ರಾಜಸೈನ್ಯವು ಆತನೆದುರಿನಲ್ಲಿ ದಿಕ್ಕಾಪಾಲಾಗಿಹೋಯಿತು. ರಾಜನ ಪದಾತಿಸೈನ್ಯವು ಧ್ವಂಸವಾಗಿ ಇದ್ದ ತೋಫೆಲ್ಲ ಕ್ರಾಮ್ವೆಲ್ಲನ ವಶವಾಯಿತು; ರಾವುತಸೈನ್ಯದಲ್ಲಿ ಅರ್ಧಭಾಗ ನಷ್ಟವಾದುದಲ್ಲದೆ ರಾಜನ ಕಾಗದಪತ್ರಗಳು ಪಾರ್ಲಿಮೆಂಟಿನವರ ಕೈಗೆ ಸಿಕ್ಕಿ ರಾಜನ ಅಂತರಂಗದ ಯೋಚನೆಗಳೂ ಗೋಪ್ಯಸಂಧಾನಗಳೂ ಬಟ್ಟಬಯಲಾದವು. ನೇಸ್ಬಿಯ ಪರಾಜಯ(1645)ದಿಂದ ರಾಜನಿಗೆ ಸರ್ವನಷ್ಟವಾದಂತೆಯೇ ಪರಿಣಮಿಸಿತು.

ಸ್ಕಾಟ್ಲೆಂಡಿನಲ್ಲಿಯೂ ಇಂತಹ ಪರಾಭವವೇ ರಾಜಪಕ್ಷಕ್ಕೊದಗಿತು. ಅಲ್ಲಿಯ ಶ್ರೀಮಂತರಲ್ಲಿ **ಮಾಂಟ್ರೋಸಿನ ಮಾರ್ಕ್ವಿಸ್ಸನು** (Marquis of Montrose) ಅತಿಶಯವಾದ ರಾಜಭಕ್ತಿಯುಳ್ಳವನಾಗಿದ್ದನು. ಅದಲ್ಲದೆ ಸ್ಕಾಟ್ಲೆಂಡಿನಲ್ಲಿ ಪ್ರಬಲರಾಗಿದ್ದ ಪ್ರೆಸ್ಬಿಟೇರಿಯನ್ ಗುಂಪಿಗೆ ಮುಖಂಡನಾಗಿದ್ದ **ಆರ್ಗೈಲಿನ ಅರ್ಲನು** (Earl of Argyle) ಆತನಿಗೆ ಕುಲವೈರಿಯಾಗಿದ್ದನು. ಮಾರ್ಸ್ಟನ್ ಮೂರ್ ಕದನವಾದಕೂಡಲೆ ಮಾಂಟ್ರೋಸನು ರಾಜನ ಪರವಾಗಿ ಸ್ವಕುಲಸ್ಥರನ್ನು ಕೂಡಿಸಿದನು. ಚಿಕ್ಕಸೈನ್ಯವೊಂದನ್ನು ಕಟ್ಟಿಕೊಂಡು ರಾಜನಿಗಾಗಿ ಆರ್ಗೈಲನ ಗುಂಪಿನವರೊಡನೆ ಹೋರಾಡಿದನು.

ಅತಿಶೂರನೂ ಸಾಹಸಿಯೂ ಆಗಿದ್ದುದರಿಂದ ಮಾಂಟ್ರೋಸನು ಹನ್ನೆರಡು ತಿಂಗಳಲ್ಲಿ ಆರುಕದನಗಳನ್ನು ಹೂಡಿ ಏಕಪ್ರಕಾರವಾಗಿ ಜಯಹೊಂದಿದನು. ಉತ್ತರದಿಂದ ಹೊರಟು ಜಯಶೀಲನಾಗಿ ಗ್ಲಾಸ್‌ಗೌ (Glasgow) ಬಳಿಗೆ 1645ರಲ್ಲಿ ಬಂದವನು ಒಳ್ಳೆಸೈನ್ಯವನ್ನು ಸಿದ್ಧಪಡಿಸಿಕೊಂಡು ಇಂಗ್ಲಂಡಿನಲ್ಲಿ ನುಗ್ಗಿ ರಾಜನನ್ನು ಸೇರಿಕೊಳ್ಳಬೇಕೆಂದಿದ್ದನು. 1645ರ ಜೂನ್ ತಿಂಗಳಲ್ಲಿ ನೇಸ್ಬಿಕದನವಾಯಿತು; ಅಲ್ಲಿ ಯುದ್ಧಮಾಡಿದ ಸ್ಕಾಟ್‌ಸೈನ್ಯವು ಮಾಂಟ್ರೋಸನನ್ನು ಎದುರಿಸಲು ಉತ್ತರಕ್ಕೆ ಹೊರಟಿತು. ಸೆಪ್ಟೆಂಬರ್ ತಿಂಗಳಲ್ಲಿ **ಫಿಲಿಪ್ಪಾ** (Philippaugh) ಎಂಬೆಡೆಯಲ್ಲಿ ಮಾಂಟ್ರೋಸನು ಕದನಕ್ಕೆ ನಿಲ್ಲಬೇಕಾಯಿತು. ಅವನ ಸೈನ್ಯವು ಕ್ಷೀಣಿಸಿತ್ತು; ಕೆಲವರು ಬಿಟ್ಟೇಹೋಗಿದ್ದರು. ಆದ್ದರಿಂದ ಕದನದಲ್ಲಿ ಮಾಂಟ್ರೋಸನಿಗೆ ಭಾರಿ ಸೋಲಾಗಿ ಸರ್ವನಾಶವಾಯಿತು. ಪ್ರಾಣವನ್ನು ಳಿಸಿಕೊಳ್ಳುವುದೇ ಕಷ್ಟವಾಗಿ ಮಾಂಟ್ರೋಸನು ದೇಶವನ್ನೇ ಬಿಟ್ಟು ಹೊರಡಬೇಕಾಯಿತು.

**ಮಾಂಟ್ರೋಸನ ರಾಜಭಕ್ತಿ**

ನೇಸ್ಬಿಕದನದ ತರುವಾಯ ಮಾಂಟ್ರೋಸನ ಪ್ರಯತ್ನದಲ್ಲಿ ಆಸೆಯನ್ನು ರಾಜನು ಬೆಳೆಸಿದ್ದನು. ಮಾಂಟ್ರೋಸನು ದೇಶಾಂತರಹೊರಟಬಳಿಕ ರಾಜನಿಗೆ ಯಾವ ಸಹಾಯವೂ ಇಲ್ಲದಾಯಿತು. ಎಲ್ಲವನ್ನೂ ಕಳೆದುಕೊಂಡಿದ್ದ ರಾಜನು ತನ್ನ ವೇಷವನ್ನು ಮರೆಮಾಚಿಕೊಂಡು ಆಕ್ಸ್‌ಫರ್ಡಿನಿಂದ ಹೊರಗಾಗಿ ಅಲ್ಲಲ್ಲಿ ಅಲೆದು ಕಡೆಗೆ ನಾಟಿಂಘಂ ಜಿಲ್ಲೆಯಲ್ಲಿ ಸ್ಕಾಟರ ಶಿಬಿರವನ್ನು ಹೊಕ್ಕನು. **ಆಕ್ಸ್‌ಫರ್ಡ್**ಪಟ್ಟಣವು ಪಾರ್ಲಿಮೆಂಟ್ ವಶವಾಯಿತು. ತಾನು ನಂಬಿದ್ದ ಧರ್ಮವನ್ನು ರಕ್ಷಿಸಿಕೊಂಡು ತನ್ನ ಪದವಿಯನ್ನು ರಾಜನು ಹೇಗೆ ಉಳಿಸಿಕೊಳ್ಳಬೇಕು? ಸರ್ವನಷ್ಟವನ್ನು ಪಡೆದಿದ್ದ ರಾಜನು ಸ್ಕಾಟರೊಡನೆಯೂ ಇತರರೊಡನೆಯೂ ಸಂಧಾನನಡೆಸಿ ತನ್ನ ವಿರೋಧಿಗಳಲ್ಲಿ ಜಗಳವನ್ನುಂಟುಮಾಡಿ ಕಡೆಗೆ ತನ್ನ ಅಧಿಕಾರವನ್ನು ಪಡೆಯಬೇಕೆಂದು ಯೋಚಿಸಿದನು.

**ರಾಜನ ಸಂಧಾನ**

ತಮ್ಮ ಶಿಬಿರಕ್ಕೆ ಬಂದ ದೊರೆಯನ್ನು ಸ್ಕಾಟರು ಗೌರವದಿಂದಲೇ ಕಂಡರು. ಸ್ಕಾಟನಾಗಿ ಹುಟ್ಟಿದ ತನಗೆ ಅವರು ಸಹಾಯಮಾಡತಕ್ಕುದೆಂದು ರಾಜನು ಕೇಳಿದಾಗ ಸ್ಕಾಟರು ಸಾಲೆಂಲೀಗ್ ಮತ್ತು ಕವಿನೆಂಟೆಂಬ ಒಪ್ಪಂದವನ್ನು ತೋರಿ ಪ್ರೆಸ್ಬಿಟೇರಿಯನ್ ಮತವನ್ನು ಸ್ಥಾಪಿಸಲು ರಾಜನೊಪ್ಪುವ ಪಕ್ಷದಲ್ಲಿ ತಾವು ಸಹಾಯಮಾಡುವುದಾಗಿ ಹೇಳಿದರು. ರಾಜನು ಪ್ರೆಸ್ಬಿಟೇರಿಯನ್ ಮತವನ್ನೊಪ್ಪಲಿಲ್ಲ. ಅದೇವೇಳೆಯಲ್ಲಿ ಪಾರ್ಲಿಮೆಂಟ್‌ಸಭೆಯವರೂ ರಾಜನೊಡನೆ ಸಂಧಾನಕ್ಕೆ ತೊಡಗಿ ಕೆಲವು ಷರತ್ತುಗಳನ್ನು ಬಿತ್ತರಿಸಿದ್ದರು. ರಾಜನು ಅವುಗಳನ್ನೂ ಒಪ್ಪಲಾಗಲಿಲ್ಲ. ಆಗ ಸ್ಕಾಟರು ಬೇಸರಗೊಂಡು ಪಾರ್ಲಿ

**ರಾಜನ ಮಾರಾಟ**

ಮೆಂಟಿನವರು ಕೊಟ್ಟ ಹಣವನ್ನು ಸ್ವೀಕರಿಸಿ ರಾಜನನ್ನು ಪಾರ್ಲಿಮೆಂಟಿಗೊಪ್ಪಿಸಿ ಸ್ಕಾಟ್ಲಂಡಿಗೆ ಹೊರಟುಬಿಟ್ಟರು.

ಇತ್ತ ಪಾರ್ಲಿಮೆಂಟ್ ಸಭಿಕರಿಗೂ ಪಾರ್ಲಿಮೆಂಟ್ ಸೈನ್ಯಕ್ಕೂ ಮನಸ್ತಾಪ ಬೆಳೆದಿತ್ತು. ಲಾಂಗ್ ಪಾರ್ಲಿಮೆಂಟ್ ಸಭೆ ಇನ್ನೂ ದೃಢವಾಗಿತ್ತು. ಸಭಿಕರಲ್ಲಿ 175 ಮಂದಿ ರಾಜಪಕ್ಷವನ್ನು ಸೇರಿಕೊಂಡಿದ್ದು ಸಭೆಯನ್ನು ಬಿಟ್ಟಿದ್ದರು. ಆದರೆ ಉಳಿದವರು ಸಭೆಯ ಅಧಿಕಾರವನ್ನು ನಿರ್ವಹಿಸುತ್ತಲೇ ಇದ್ದರು. ರಾಜನು ತಮ್ಮ ಸೆರೆಯಾಳಾದ ಮೇಲೆ ಯುದ್ಧ ಮುಗಿಯಿತೆಂದು ಸಭಿಕರೂ ಸೈನಿಕರೂ ತಿಳಿದರು. ಸೈನ್ಯದಲ್ಲಿ ಇಂಡಿಪೆಂಡೆಂಟ್ ಶಾಖೆಯವರು ಪ್ರಬಲರು; ಸಭಿಕರಲ್ಲಿ ಪ್ರೆಸ್ಬಿಟೀರಿಯರ್ನ್ ಪಕ್ಷಪಾತಿಗಳು ಪ್ರಬಲರು. ಮತಭೇದದ ವಿರೋಧವಿದ್ದೇ ಇತ್ತು. ಇದರಮೇಲೆ ಸಭಿಕರು ಯುದ್ಧ ಮುಗಿಯಿತೆಂದು ಭಾವಿಸಿ 50,000ವಾಗಿದ್ದ ಸೈನ್ಯವನ್ನು ಕಡಿಮೆಮಾಡುವ ಯೋಚನೆ ಮಾಡಿದರು; ನಾಲ್ಕು ತಿಂಗಳಿಂದ ಎಂಟು ತಿಂಗಳುಗಳ ಸಂಬಳ ಬಾಕಿಯಾಗಿದ್ದ ಸೈನಿಕರಿಗೆ ಒಂದೂವರೆ ತಿಂಗಳಿನ ಸಂಬಳಕೊಡಿಸಿ ತಮ್ಮ ಊರುಗಳಿಗೆ ಸ್ವಸ್ಥರಾಗಿ ತೆರಳಬೇಕೆಂದರು. ಪ್ರೆಸ್ಬಿಟೀರಿಯರ್ನ್ ಮತಸ್ಥಾಪನೆಗೆ ವಿರೋಧಿಗಳಾಗಿದ್ದ ಸೈನಿಕರಿಗೆ ಇದರಿಂದ ಅಸಮಾಧಾನವೂ ರೋಷವೂ ಉಂಟಾಯಿತು. ತಾವು ಬಲಿಷ್ಠರೆಂದು ತಿಳಿದಿದ್ದ ಸೈನ್ಯದವರು ತಮ್ಮ ಪ್ರಾಬಲ್ಯವನ್ನು ಸುಮ್ಮನೆ ನೀಗಿಕೊಳ್ಳಲು ಒಪ್ಪಲಿಲ್ಲ. ಸೈನ್ಯದ ನಾಯಕರಲ್ಲಿ **ಜಾಯ್ಸ್** (Joyce) ಎಂಬುವವನೊಬ್ಬನು ಆಕಸ್ಮಿಕವಾಗಿ ಕಾಣಿಸಿಕೊಂಡು ದೊರೆಯ ಪಹರೆಯವರನ್ನೋಡಿಸಿ ರಾಜನನ್ನೆತ್ತಿಕೊಂಡುಹೋದನು. ಇಂಡಿಪೆಂಡೆಂಟ್ ಮತದ ಸೇನಾನಾಯಕರು ರಾಜನೊಡನೆ ಒಪ್ಪಂದಮಾಡಿಕೊಳ್ಳಲು ಯತ್ನಿಸಿದರು. ಅವರು ಕೇಳಿದ ಷರತ್ತುಗಳನ್ನು ರಾಜನೊಪ್ಪಲಿಲ್ಲ. ಏಕೆಂದರೆ ಸ್ಕಾಟರ ಸಹಾಯದ ಆಸೆಯು ಪುನಃ ಹುಟ್ಟಿತ್ತು.

**ಸಭೆ ಸೈನ್ಯಗಳ ದ್ವಂದ್ವ**

ಸ್ಕಾಟ್ಲಂಡಿನ ಪ್ರೆಸ್ಬಿಟೀರಿಯನ್ನರಿಗೆ ಪಾರ್ಲಿಮೆಂಟಿನಲ್ಲಿ ಅಸಮಾಧಾನವೇ ಇತ್ತು. ಅಲ್ಲಿಯ ಶ್ರೀಮಂತವರ್ಗದ ಕೆಲವರಿಗೆ ರಾಜನಲ್ಲಿ ಅಭಿಮಾನವೂ ಉಂಟಾಯಿತು. ಆದ್ದರಿಂದ ಪುನಃ ರಾಜನೊಡನೆ ಸಂಧಾನವಾರಂಭವಾಯಿತು. ಇಂಡಿಪೆಂಡೆಂಟ್ ಸೈನ್ಯದ ಪಹರೆಯಲ್ಲಿದ್ದ ಚಾರ್ಲ್ಸ್ ಗೋಪ್ಯವಾಗಿ ಸ್ಕಾಟರೊಡನೆ ಸಂಧಾನನಡೆಸಿ ಅವರ ಸಹಾಯವನ್ನು ಪಡೆಯುವುದಕ್ಕಾಗಿ ಪ್ರೆಸ್ಬಿಟೀರಿಯರ್ನ್ ಮತವನ್ನು ಸ್ಥಾಪಿಸುವುದಾಗಿ ನಟಿಸಿದನು. ಒಪ್ಪಂದವೊಂದು ನಡೆಯಿತು. ತರುವಾಯ ಸ್ಕಾಟರು ಯುದ್ಧಕ್ಕೆ ಸಿದ್ಧರಾಗಿ ಇಂಗ್ಲಂಡನ್ನು ಮುತ್ತಲು ಹವಣಿಸಿದರು. ಅಕ್ಕಪಕ್ಕದಲ್ಲಿ ನಿಂತು ರಾಜನನ್ನು ವಿರೋಧಿಸಿದ್ದವರು ಈಗ ಎದುರುಬದುರಾಗಿ ನಿಂತು ಒಬ್ಬರನ್ನೊಬ್ಬರು ಕಡಿಯುವವರಾದರು. ಆದರೆ ಸ್ಕಾಟರ ಸೈನ್ಯ ಕೆಟ್ಟಿತ್ತು; ಹಿಂದಿದ್ದ ಉತ್ಸಾಹವಿರಲಿಲ್ಲ, ಸಾಕಾದ

**ಸ್ಕಾಟರ ಪ್ರಯತ್ನ**

ಸಾಮಗ್ರಿಯೂ ಇರಲಿಲ್ಲ. ಆದರೂ ಅವರ ಸಹಕಾರವನ್ನು ನಿರೀಕ್ಷಿಸಿಕೊಂಡು ಇಂಗ್ಲಂಡಿನಲ್ಲಿದ್ದ ರಾಜಪಕ್ಷದವರು ಅಲ್ಲಲ್ಲಿ ಸಿದ್ಧರಾದರು. ಆದರೆ ಕ್ರಾಮ್ವೆಲ್ಲನ ಸೈನ್ಯದೆದುರಿನಲ್ಲಿ ಇವರ ಪ್ರಯತ್ನವೆಷ್ಟು ಮಾತ್ರ! ಪ್ರಯತ್ನವು ಸುಲಭವಾಗಿ ಅಡಗಿಹೋಯಿತು. **ಪ್ರೆಸ್ಟನ್** (Preston) ಎಂಬೆಡೆಯಲ್ಲಿ ಕ್ರಾಮ್ವೆಲ್ಲಿನ ಎದುರಿಗೆ ರಾಜಪಕ್ಷದ ದಳವೊಂದು ಸಿಕ್ಕಿತು. ಅದನ್ನು ಸೋಲಿಸಿ ಮೂವತ್ತು ಮೈಲಿ ದೂರ ಅಟ್ಟಿಸಿಬಿಟ್ಟು ಕ್ರಾಮ್ವೆಲ್ ಸ್ಕಾಟ್ ಸೈನ್ಯದ ಎದುರಾದನು. ಸ್ಕಾಟರು ಅವನಿಗೆದುರಾಗದೆ ಶರಣಾಗತರಾದರು. ಕ್ರಾಮ್ವೆಲ್ ಸ್ಕಾಟ್ಲಂಡಿನಲ್ಲಿಯೂ ಪ್ರವೇಶಿಸಿ ಆರ್ಗೈಲನ ಪ್ರಾಬಲ್ಯವನ್ನು ಸ್ಥಾಪಿಸಿ ಹಿಂತಿರುಗಿದನು. ಇದನ್ನು **ಎರಡನೆ ಸಿವಿಲ್ ಯುದ್ಧ** (Second Civil War) ಎಂದು ಕರೆಯುವುದು ವಾಡಿಕೆ.

ಸ್ಕಾಟರು ರಾಜನನ್ನು ಪೂರ್ತಿಯಾಗಿ ಬಿಟ್ಟಂತಾಯಿತು. ಆಗ ರಾಜನು ಇಂಡಿಪೆಂಡೆಂಟ್ ಶಾಖೆಯ ಭಕ್ತರಾದ ಸೈನ್ಯದ ಸೆರೆಯಾಳಾಗಿದ್ದೂ ಲಾಂಗ್ ಪಾರ್ಲಿಮೆಂಟಿನ ಮುರುಕಾಗಿದ್ದ ಸಭೆಯೊಂದಿಗೆ ಮತ್ತೊಂದು ಸಂಧಾನದ ಅಧ್ಯಾಯಕ್ಕೆ ತೊಡಗಿದನು. ಸೇನಾನಾಯಕರಿಗೆ ರಾಜನಲ್ಲಿ ದ್ವೇಷವು ಅತಿಯಾಗಿ ಬೆಳೆದಿತ್ತು. ರೋಮನ್ ಕ್ಯಾಥಲಿಕ್ ಮತಸ್ಥರಾದ ಐರಿಷರನ್ನು ಕರೆಸಿ ತಮ್ಮೆದುರಿಗೆ ನಿಲ್ಲಿಸಿದ್ದಲ್ಲದೆ ಬಾರಿಬಾರಿಗೂ ಸಂಧಾನಕ್ಕೆ ತೊಡಗುವುದು, ಉದ್ದೇಶವಿಲ್ಲದ ವಾಗ್ದಾನಮಾಡುವುದು ಮುಂತಾದ ರಾಜನ ಚರ್ಯೆಯನ್ನು ಕಂಡು ಬೇಸರವನ್ನಲ್ಲದೆ ರೋಷವನ್ನೂ ಆ ನಾಯಕರು ತಾಳಿದ್ದರು. ಪಾರ್ಲಿಮೆಂಟ್ ಸಭಿಕರಿಗಾಗಲಿ ಸ್ಕಾಟರಿಗಾಗಲಿ ಮೂರ್ಧಾಭಿಷಿಕ್ತರಾಜನನ್ನು ಅಪರಾಧಿಸ್ಥಾನದಲ್ಲಿ ನಿಲ್ಲಿಸಿ ದಂಡಿಸುವ ಉದ್ದೇಶವಿರಲಿಲ್ಲ. ಅಂತಹ ಉದ್ದೇಶವು ಈಗ ಸೇನಾನಾಯಕರಲ್ಲಿ ಬಲವಾಯಿತು. ಇನ್ನೂ ರಾಜನೊಂದಿಗೆ ಸಂಧಾನ ನಡೆಸುತ್ತಿದ್ದ ಪಾರ್ಲಿಮೆಂಟ್ ಸಭಿಕರನ್ನು ದಳಪತಿಗಳು ಸಹಿಸದಾದರು. 1648ರಲ್ಲಿ **ಕರ್ನಲ್ ಪ್ರೈಡ್** (Colonel Pride) ಎಂಬ ದಳಪತಿಯು ಸೈನಿಕರೊಡನೆ ಸಭೆಗೆ ಹೊರಟು ಸಭಿಕರಲ್ಲಿ ತಮ್ಮ ಇಷ್ಟಕ್ಕೆ ವಿರೋಧಿಗಳಾಗಿದ್ದ 143 ಸಭಿಕರನ್ನು ಹೊರಗಟ್ಟಿಬಿಟ್ಟು ಉಳಿದ ತೊಂಭತ್ತು ಜನರು ಮಾತ್ರ ಮುಂದಿನ ಕೆಲಸವನ್ನು ನಡೆಸಬಹುದೆಂದನು.

**ಜಾಪಾಳ**

ಇದನ್ನು **ಪ್ರೈಡ್ಸ್ ಪರ್ಜ್** (Pride's Purge) ಎಂದು ಕರೆಯುತ್ತಾರೆ; ಪ್ರೈಡನು ಕೊಟ್ಟ ಜಾಪಾಳವೆಂದು ಅದರ ಅರ್ಥ. ಲಾಂಗ್ ಪಾರ್ಲಿಮೆಂಟೆಂಬ ಸಭೆಯು ಈಗ 90 ಸಭಿಕರ ಕೂಟವಾಗಿಹೋಯಿತು. ಈ ಮುರುಕಿಗೆ **ರಂಪ್** (Rump) ಎಂದು ಹೆಸರು ಬಂತು.

ಸೈನ್ಯದ ಇಷ್ಟಾನಿಷ್ಟಗಳನ್ನನುಸರಿಸಲು ಸಿದ್ಧರಾಗಿದ್ದ ರಂಪ್ ಸಭಿಕರು ರಾಜನನ್ನು ಲಂಡನ್ನಿಗೆ ಕರೆಸಿಕೊಂಡು ವಿಚಾರಣೆಗೆ ನಿಲ್ಲಿಸಿದರು. ರಾಜನ ಅಪರಾಧಗಳನ್ನು ಪರೀಕ್ಷೆಮಾಡಿ ತಕ್ಕ ತೀರ್ಮಾನಕೊಡಲು 135 ಸಭಿಕರುಳ್ಳ ಒಂದು ವಿಶಿಷ್ಟನ್ಯಾಯ

ಸ್ಥಾನವನ್ನು ರಚಿಸಿದರು. ಅಪರಾಧಿಸ್ಥಾನದಲ್ಲಿ ರಾಜನನ್ನು ನಿಲ್ಲಿಸಿ ರಾಜ್ಯದ್ರೋಹದ ಆಪಾದನೆಯನ್ನು ಹೊರಿಸಿದರು. ಚಾರ್ಲ್ಸ್ ತನ್ನ ಗೌರವವನ್ನು ಬಿಡದೆ ಗಂಭೀರನಾಗಿದ್ದು ತನ್ನನ್ನು ವಿಚಾರಣೆಗೆ ನಿಲ್ಲಿಸುವ ಅಧಿಕಾರ ಆ ಸಭೆಗಿಲ್ಲವೆಂದು ಹೇಳಿದನು. ವಿಚಾರಣೆ ನಡೆದುದೂ ಆಯಿತು; ದಳಪತಿಗಳ ಮನಸ್ಸಿನಲ್ಲಿದ್ದಂತೆ ತೀರ್ಮಾನವೂ ಹೊರಟಿತು. ಚಾರ್ಲ್ಸ್‌ದೊರೆಯನ್ನು **ವೈಟ್‌ಹಾಲ್** (Whitehall) ಅರಮನೆಯ ಮುಂದೆ **ಶಿರಚ್ಛೇದನ**ಮಾಡಿದರು. ಇಂಡಿಪೆಂಡೆಂಟ್‌ಮತಸ್ಥರಾದ ಸೈನ್ಯದವರುವಿನಾ ಉಳಿದವರೆಲ್ಲರೂ ಘೋರಪಾತಕ ನಡೆಯಿತೆಂದು ಭಾವಿಸಿದರು. ದುಷ್ಟರಲ್ಲಿ ಗಣ್ಯನಾಗದೆ ಅಸಮರ್ಥನೆನಿಸದೆ ಇದ್ದೂ ಈ ದೊರೆ ಕಾಲಕ್ಕೆ ತಕ್ಕಂತೆ ವರ್ತಿಸುವ ಉಪಾಯವನ್ನು ಅವಲಂಬಿಸದೆ ಅಪಮೃತ್ಯುವಿಗೆ ತುತ್ತಾದನು. ರಂಪ್‌ಸಭೆಯವರು ನಡೆಸಿದ ಈ ಶಿರಚ್ಛೇದನವು ನ್ಯಾಯದಿಂದ ನಡೆಯಿತೆಂದು ಹೇಳಲಾಗುವುದಿಲ್ಲ. ಅದನ್ನು ರಾಜವಧೆಯೆಂದೇ ಕರೆಯುತ್ತಾರೆ.

**ರಾಜವಧೆ 1649**

ಚಾರ್ಲ್ಸ್ ಪ್ರಾಣವನ್ನರ್ಪಿಸಿದಾಗ ರಾಣಿ ಹೆನ್ರಿಯಟ್ಟ ಮರೀಯ ಫ್ರಾನ್ಸಿನಲ್ಲಿದ್ದಳು. ಮಕ್ಕಳಲ್ಲಿ ಹಿರಿಯನಾಗಿ **ಯುವರಾಜ**ನೆನಿಸಿದ್ದ **ಚಾರ್ಲ್ಸ್** ಎಂಬಾತನು ಯುವಕ. ಆತನು ತನ್ನ ರಾಜ್ಯವನ್ನು ದಕ್ಕಿಸಿಕೊಳ್ಳಲು ಪ್ರಯತ್ನಮಾಡದೆ ಬಿಡಲಿಲ್ಲ.

## ರಾಜರಹಿತ ರಾಷ್ಟ್ರ (1649—1660)

### ಸಮಕಾಲಿಕರು

| ಇಂಗ್ಲಂಡ್ | ಫ್ರಾನ್ಸ್ | ಸ್ಪೈನ್ |
|---|---|---|
| ಕಾಮನ್ವೆಲ್ತ್ (1649—1653) | 14ನೆ ಲೂಯಿ (1643—1715) | 4ನೆ ಫಿಲಿಪ್ (1621—1665) |
| ಪ್ರೊಟೆಕ್ಟೊರೇಟ್ (1653—1660) | | |

ರಾಜವಧೆಯಾಗಿಹೋಯಿತು. ಆ ಶಿರಚ್ಛೇದನವೇಳೆಯಲ್ಲಿ ಸಾಧಾರಣಜನರೆಲ್ಲರೂ ಹಾಹಾಕಾರಪಟ್ಟು ಗೋಳಿಟ್ಟರು. ಸಾಯುವಸಮಯದಲ್ಲಿ ಆ ದೊರೆ ತೋರ್ಪಡಿಸಿದ ಘನತೆಗಾಂಭೀರ್ಯಗಳನ್ನು ಮೆಚ್ಚುತ್ತ ಜನರು ಹಿಂದೆ ನಡೆದಿದ್ದ ಅನ್ಯಾಯಗಳನ್ನು ಮರೆತರು. ಪ್ಯೂರಿಟನ್ನರು ಮಾತ್ರ ಅವುಗಳನ್ನು ಮರೆಯಲಿಲ್ಲ. **ರಂಪ್** ಎಂಬ ಮುರುಕುಸಭೆಯ ಸದಸ್ಯರೂ ಸೇನಾಪ್ರಮುಖರೂ ಆ ವಧೆ ಅವಶ್ಯವೆಂದು ಹಟಹಿಡಿದಿದ್ದರು. ರಾಷ್ಟ್ರದ ಬಲವೂ ಅಧಿಕಾರವೂ ಎಲ್ಲವೂ ಅವರದೇ. ಆ ಸಭೆಯವರೇ 1649ರಿಂದ 1653ರವರೆಗೆ ಸರ್ವಾಧಿಕಾರವನ್ನು ಹೊತ್ತರು; ಸದಾ ಸನ್ನದ್ಧವಾಗಿದ್ದ **ನ್ಯೂ ಮಾಡೆಲ್ ಸೈನ್ಯವು** ಆ ಸಭೆಯ ಯಾಜಮಾನ್ಯವನ್ನು ಕಾಪಾಡಿ ಬೆಂಬಲಕೊಟ್ಟಿತು.

**ವಧೆಯ ತರುವಾಯ**

ರಂಪ್‌ಸಭೆಯ ಸದಸ್ಯರು ಹಿಂದೆ 1640ರಲ್ಲಿ ಲಾಂಗ್‌ಪಾರ್ಲಿಮೆಂಟ್ ಸಭೆಗೆ ಪ್ರತಿನಿಧಿಗಳಾಗಿ ಬಂದಿದ್ದವರು. ಆ ಪಾರ್ಲಿಮೆಂಟಿನಲ್ಲಿ ಮೊದಲು ಸೇರಿದ 490 ಸದಸ್ಯರಲ್ಲಿ ರಾಜಪಕ್ಷವನ್ನು ಸೇರಿಕೊಂಡವರು ಬೇರೆಯಾದರು; ಯುದ್ಧದಲ್ಲಿ ಸತ್ತವರು ನಷ್ಟರಾಗಿದ್ದರು; ಪ್ರೈಡನ ಜಾಪಾಳಕ್ಕೆ ಸಿಕ್ಕಿದವರು ಎಲ್ಲಿಯೋ ಅಡಗಿದ್ದರು. ಇಷ್ಟಾದಮೇಲೆ ಉಳಿದಿದ್ದವರು 90ಮಂದಿ ಮಾತ್ರ. ಆ ತೊಂಭತ್ತು ಜನರ ಸಭೆಗೆ ಸರ್ವಯಾಜಮಾನ್ಯವೊದಗಿತು. ಆ ಸಭೆಯವರು ಇಂಗ್ಲಂಡಿನಲ್ಲಿ ಇನ್ನುಮೇಲೆ ರಾಜತ್ವಬೇಡವೆಂದು ನಿಷ್ಕರ್ಷೆಮಾಡಿದರು. ಶ್ರೀಮಂತರಸಭೆ ಅನವಶ್ಯವೆಂದು ಇತ್ಯರ್ಥಮಾಡಿ ಆ ಸಭೆಯನ್ನು ವಜಾಮಾಡಿಬಿಟ್ಟರು. ಸ್ವಂತಸಂಕಲ್ಪದಿಂದ ಮಾತ್ರವೇ ಮುಕ್ತಾಯವಾಗತಕ್ಕ ಸಭೆಯ ಮುರುಕು ತಾನೇತಾನಾಗಿಹೋಗಿ ರಾಷ್ಟ್ರದಲ್ಲಿ ಲಾಗ ಹಾಕಿಸಿಬಿಟ್ಟಿತು. ದೇಶದ ಆಡಳಿತವನ್ನು ನಡೆಸಲು 41 ಮಂದಿಸಭಿಕರ ಸಭೆಯೊಂದನ್ನೂ ಬೇರೆಬೇರೆ

**ರಾಷ್ಟ್ರದ ಲಾಗ**

ವಿಷಯಗಳಿಗಾಗಿ ಉಪಸಭೆಗಳನ್ನೂ ರಚಿಸಿಕೊಂಡು ರಂಪ್‌ಸಭೆಯವರು ರಾಷ್ಟ್ರದ ನೀತಿಯನ್ನು ನಿರ್ಧರಮಾಡುವುದಕ್ಕೂ ತಮ್ಮ ಅಭಿಪ್ರಾಯದಂತೆ ಶಾಸನಗಳನ್ನು ರೂಪಗೊಳಿಸುವುದಕ್ಕೂ ತೊಡಗಿದರು. ನಾಲ್ಕು ವರ್ಷಕಾಲ ಈ ರೀತಿಯ ಆಡಳಿತ ನಡೆಯಿತು. ರಾಜರಹಿತರಾಷ್ಟ್ರವನ್ನು ಕಟ್ಟಿಕೊಂಡ ರಂಪ್‌ಸಭೆಯವರು ತಮ್ಮ ರಾಷ್ಟ್ರ ರೂಪಕ್ಕೆ **ಕಾಮನ್ವೆಲ್ತ್** (Commonwealth) ಎಂಬ ಹೆಸರನ್ನಿಟ್ಟರು.

ಇಂಗ್ಲಂಡಿನಲ್ಲಿ ಮಾತ್ರ ಈ ಬಗೆಯ ಆಡಳಿತಕ್ಕೆ ವಿರೋಧತೋರಲಿಲ್ಲ. ನ್ಯೂ ಮಾಡೆಲ್ ಸೈನ್ಯದೆದುರಿನಲ್ಲಿ ಪ್ರಯತ್ನ ಮಾಡುವ ಧೈರ್ಯ ಜನರಿಗಿರಲಿಲ್ಲ. ಆದರೆ ಐರ್ಲಂಡಿನ ಜನರು ಹೇಗೆ ಸುಮ್ಮನಿದ್ದಾರು? ಅಲ್ಲಿಯ ಐರಿಷ್ ಕುಲಸ್ಥರು ರಾಜಪಕ್ಷ ವನ್ನು ಸೇರಿಕೊಂಡಿದ್ದವರು. ರಾಜವಧೆನಡೆಸಿ ರಾಜ್ಯಾಧಿಕಾರವನ್ನು ಆಕ್ರಮಿಸಿ ಕೊಂಡ ರಂಪ್‌ಸಭೆಯ ಯಾಜಮಾನ್ಯವನ್ನು ಒಪ್ಪಲಾರದೆ ಐರಿಷರು ತಮ್ಮ ಶತ್ರುತ್ವ ವನ್ನು ಸಾಧಿಸಿದರು. ಐರ್ಲಂಡನ್ನು ವಶಪಡಿಸಿಕೊಳ್ಳಲು ಯುದ್ಧ ನಡೆಸಬೇಕಾಯಿತು. ಆಗ ಸಭೆಯವರು ಸೇನಾಪತಿ ಕ್ರಾಮ್ವೆಲ್ಲನನ್ನು ಅಲ್ಲಿಗೆ ನಿಯೋಗಿಸಿದರು. ಕ್ರಾಮ್ವೆಲ್ ಕಾಣಿಸಿಕೊಳ್ಳುವ ಮೊದಲೆ ಒಂದು ಕದನದಲ್ಲಿ ಸೋಲನ್ನು ಹೊಂದಿದ್ದ ಐರಿಷರು ಒಟ್ಟುಗೂಡುವ ಪ್ರಯತ್ನದಲ್ಲಿದ್ದರು. ಆ ಪ್ರಯತ್ನ ನೆರವೇರದಂತೆ ಕ್ರಾಮ್ವೆಲ್ ಅತ್ಯುಗ್ರವಾದ ಹೋರಾಟವನ್ನು ನಡೆಸಿ ಐರಿಷರು ಗುಂಪುಕೂಡಿಕೊಂಡಿದ್ದ **ಡ್ರಾಘೆಡಾ** (Drogheda) ಮತ್ತು **ವೆಕ್ಸ್‌ಫರ್ಡ್** (Wexford) ಪಟ್ಟಣಗಳನ್ನು ಮುತ್ತಿ ಸುಲಭ ವಾಗಿ ವಶಪಡಿಸಿಕೊಂಡು ಅಲ್ಲಿದ್ದ ದಂಗೆಕೋರರನ್ನು **ಘೋರಕೊಲೆಗಿಟ್ಟನು**. ರೋಮನ್‌ಕ್ಯಾಥಲಿಕ್ಕರಾದ ಐರಿಷರೆದುರಿನಲ್ಲಿ ಕ್ರಾಮ್ವೆಲ್ ತೈಮೂರಲಂಗನಂತೆಯೋ ನಾದಿರಷಹನಂತೆಯೋ ಆಡಿದನು. ನಿರ್ಮಾನುಷವಾದ ಹತ್ಯೆಗಳು ನಡೆದಾಗ ಐರಿಷರ ಪ್ರಯತ್ನ ಅಡಗಿಹೋಯಿತು. ಐರ್ಲಂಡೆಲ್ಲವನ್ನೂ ಸ್ವಾಧೀನಕ್ಕೆ ತಂದುಕೊಳ್ಳಲು **ಇರಿಟನ್** ಎಂಬ ದಳಪತಿಯನ್ನಿಟ್ಟು ಕ್ರಾಮ್ವೆಲ್ ಹಿಂತಿರುಗಿದನು. ವೇಗವಾಗಿ ಹಿಂತಿರುಗಲು ಕಾರಣ ಹುಟ್ಟಿತ್ತು. ಸ್ಕಾಟ್ಲಂಡಿನವರು ರಂಪ್‌ಸಭೆಯ ಆಡಳಿತಕ್ಕೆ ವೈರವನ್ನು ಸಾಧಿಸಲು ಸನ್ನಾಹಪಡುತ್ತಿದ್ದರು.

**ಐರಿಷರ ದಮನ**

ಸ್ಕಾಟ್ಲಂಡಿನಲ್ಲಿ ಪ್ರಬಲರಾಗಿದ್ದ ಪ್ರೆಸ್ಬಿಟೇರಿಯನ್ ಪಂಥದವರಿಗೆ ನ್ಯೂ ಮಾಡೆಲ್ ಸೈನ್ಯದ ಬೆಂಬಲದಿಂದ ನಡೆಯುತ್ತಿದ್ದ ಕಾರ್ಬಾರು ಸರಿಬೀಳಲಿಲ್ಲ. ಸಾಲೆಂಲೀಗ್ ಮತ್ತು ಕವಿನೆಂಟೆಂಬ ಪವಿತ್ರವಾಗ್ದಾನವನ್ನು ಇಂಗ್ಲಿಷ್ ಪಾರ್ಲಿಮೆಂಟಿನವರು ಮುರಿದರೆಂಬ ಅಸಮಾಧಾನ ಮೊದಲೇ ಇತ್ತು; ರಾಜವಧೆ ನಡೆದತರುವಾಯ ಸ್ಕಾಟರಿಗೆ ರಂಪ್‌ಸಭೆಯವರು ಕಟ್ಟಿದ ಕಾಮನ್ವೆಲ್ತ್ ಒಪ್ಪಲಿಲ್ಲ. ಅಂತಹ ಸಮಯದಲ್ಲಿ **ಯುವ ರಾಜ ಚಾರ್ಲ್ಸ್‌ನ** ಮುಂದಿನದೊರೆಯೆಂದು ಎಲ್ಲಸ್ಕಾಟರೂ ಒಪ್ಪಿದರು. ಆ ವೇಳೆಗೆ

**ಸ್ಕಾಟರ ಅಸಮಾಧಾನ**

ರಾಜಭಕ್ತ ಶ್ರೀಮಂತ **ಮಾಂಟ್ರೋಸನು** ಹಿಂತಿರುಗಿ ಬಂದು ಮತ್ತೊಮ್ಮೆ ಪ್ರಯತ್ನ ಶೀಲನಾದನು. ಎರಡನೆ ಚಾರ್ಲ್ಸ್‌ದೊರೆಗಾಗಿ ಸೈನ್ಯಕಟ್ಟಿ ಹೋರಾಡಲು ಸಿದ್ಧನಾದ ಮಾಂಟ್ರೋಸ್ ಶ್ರೀಮಂತನದು ಒಂದುಪಕ್ಷ. ಎರಡನೆ ಚಾರ್ಲ್ಸ್ ಎನಿಸಿದ ದೊರೆ ಮೂರುರಾಜ್ಯಗಳ ದೊರೆಯಾಗಿ ಮೂರು ರಾಜ್ಯಗಳಲ್ಲಿಯೂ ಪ್ರೆಸ್ಬಿಟೇರಿಯನ್ ಮತ ವನ್ನು ಸ್ಥಾಪಿಸಬೇಕೆಂಬ ಆಸೆಯಿಂದಿದ್ದ **ಆರ್ಗೈಲ್ ಶ್ರೀಮಂತನದು** ಇನ್ನೊಂದು ಪಕ್ಷ. ಎರಡು ಪಕ್ಷಗಳೊಂದಿಗೂ ಸಂಧಾನನಡೆಸುತ್ತ ಯುವರಾಜನು ಮಾಂಟ್ರೋಸ ನಲ್ಲಿ ಗೋಪ್ಯವಾಗಿ ವಿಶ್ವಾಸವಿಟ್ಟನು. ಆ ನಿರ್ಭಾಗ್ಯ ಶ್ರೀಮಂತನು ಪ್ರೆಸ್ಬಿಟೇರಿಯನ್ ಪಕ್ಷದವರೊಡನೆ ಧೈರ್ಯದಿಂದ ಕಾದಾಡಿ ಸೆರೆಸಿಕ್ಕಿ ಅವಮಾನಕ್ಕೊಳಗಾಗಿ ದುರ್ಮರಣ ಪಟ್ಟನು. ಆ ತರುವಾಯ ಆರ್ಗೈಲ್‌ಪಕ್ಷದವರ ಷರತ್ತುಗಳಿ

**ಚಾರ್ಲ್ಸ್ ದೊರೆ**

ಗೊಪ್ಪಿಕೊಂಡು ಯುವರಾಜನು ಸ್ಕಾಟ್ಲೆಂಡಿನಲ್ಲಿ ಕಾಣಿಸಿ ಕೊಂಡು ಕಿರೀಟಧಾರಣೆ ಮಾಡಿಸಿಕೊಂಡನು. ಪ್ರೆಸ್ಬಿಟೇರಿ ಯನ್ ಮತಸ್ಥರು ಸೈನ್ಯಸನ್ನಾಹಮಾಡಿ ಇಂಗ್ಲೆಂಡನ್ನು ಮುತ್ತಲು ಹವಣಿಸಿದರು. ಇದನ್ನು ತಿಳಿದು ರಂಪ್‌ಸಭೆಯವರು ಆತುರಾತುರದಿಂದ ಕ್ರಾಮ್ವೆಲ್ಲನನ್ನು ಐರ್ಲಂಡಿ ನಿಂದ ಕರೆಸಿಕೊಂಡು ಸ್ಕಾಟ್ಲೆಂಡಿನಲ್ಲಿ ಯುದ್ಧನಡೆಸುವ ಕೆಲಸವನ್ನು ವಹಿಸಿದರು.

ಸ್ಕಾಟರ ಸೈನ್ಯಕ್ಕೆ ದಳಪತಿಯಾಗಿದ್ದ **ಲೆಸ್ಲಿ** (Leslie) ಎಂಬಾತನು ಚತುರ. ತನ್ನ ಸೈನ್ಯವನ್ನಣಿಯಾಗಿಟ್ಟುಕೊಂಡು ಸ್ಕಾಟ್ಲೆಂಡಿನಲ್ಲಿ ಕ್ರಾಮ್ವೆಲ್ ನುಗ್ಗುವುದನ್ನು ಕಾದಿದ್ದನು. ಸ್ಕಾಟ್ಲೆಂಡನ್ನು ಮುತ್ತಲು ವೇಗವಾಗಿ ಹೊರಟ ಕ್ರಾಮ್ವೆಲ್ ಮುಂದೆ ನುಗ್ಗಿ **ಡನ್ಬಾರ್** (Dunbar) ಎಂಬೆಡೆಯಲ್ಲಿ ಸಿಕ್ಕಿಕೊಂಡನು.

**ಸ್ಕಾಟ್ಲೆಂಡಿನಲ್ಲಿ ಯುದ್ಧ**

ಅಂತಹ ಸನ್ನಿವೇಶದಲ್ಲಿಯೂ ಕಾಳಗ ನಡೆಸಿ ಕ್ರಾಮ್ವೆಲ್ ಜಯಶೀಲನಾದನು. ಇಂಗ್ಲಿಷ್ ಸೈನ್ಯದಲ್ಲಿ 20 ಪ್ರಾಣಗಳು ಮಾತ್ರ ನಷ್ಟವಾದವು; ಲೆಸ್ಲಿಯ ದಳದಲ್ಲಿ 3000ಪ್ರಾಣಗಳು ಹೋದುದಲ್ಲದೆ 10,000 ಜನರು ಸೆರೆಸಿಕ್ಕಿದರು. ಲೆಸ್ಲಿಯ ಸೈನ್ಯ ಧ್ವಂಸವಾದಬಳಿಕ ಕ್ರಾಮ್ವೆಲ್ ಮುಂದೆ ನುಗ್ಗಿ **ಎಡಿನ್ಬರೊ** ಮತ್ತು **ಪರ್ತ್** ಪಟ್ಟಣಗಳನ್ನು ಹಿಡಿದನು.

ಆಗ ಯುವರಾಜ ಚಾರ್ಲ್ಸ್‌ಗೆ ಒಂದೇ ಸಾಧನವುಳಿಯಿತು. ಸೋತುಹೋದ ಪ್ರೆಸ್ಬಿಟೇರಿಯನ್ ಪಕ್ಷದವರು ಹಿಮ್ಮೆಟ್ಟಿದರು. ಅವರನ್ನೇ ನಂಬಿದರೆ ತನ್ನ ಕೆಲಸ ವಾಗಲಾರದೆಂದು ಗ್ರಹಿಸಿದ ಯುವರಾಜನು ತನಗೆ ದೊರೆತ

**ಯುವರಾಜನ ಪ್ರಯತ್ನ**

ಸೈನ್ಯವನ್ನೆತ್ತಿಕೊಂಡು ದಕ್ಷಿಣಕ್ಕೆ ಹೊರಟು ಕ್ರಾಮ್ವೆಲ್ಲಿಲ್ಲದ ಸಮಯದಲ್ಲಿ ಇಂಗ್ಲೆಂಡನ್ನು ಪ್ರವೇಶಿಸಿ ಅಲ್ಲಲ್ಲಿದ್ದ ರಾಜಭಕ್ತ ರನ್ನು ಒಟ್ಟುಗೂಡಿಸಿಕೊಂಡು ತನ್ನ ರಾಜ್ಯವನ್ನು ಗೆದ್ದುಕೊಳ್ಳಲು ಯತ್ನಮಾಡಿ ದನು. ವೇಗವಾಗಿ ಯುವರಾಜನು ಇಂಗ್ಲೆಂಡನ್ನು ಹೊಕ್ಕನು. ಅದನ್ನು ತಿಳಿದು **ಕ್ರಾಮ್ವೆಲ್ ಸ್ಕಾಟ್ಲೆಂಡಿನ ಉತ್ತರದಿಂದ ಹೊರಟು ಇನ್ನೂ ವೇಗವಾಗಿ ಯುವರಾಜನ**

ಬೆನ್ನಟ್ಟಿ ಸೈನ್ಯ ನಡೆಸಿದನು. **ವೂರ್ಸ್ಟರ್** (Worcester) ಎಂಬ ಪಟ್ಟಣದ ಬಳಿ ಕ್ರಾಮ್ವೆಲ್ ಯುವರಾಜನ ದಾರಿಯಲ್ಲಿ ಅಡ್ಡವಾಗಿ ನಿಂತು ಕಾಳಗಗೊಟ್ಟನು. ರಾಜ ಪಕ್ಷದವರು ಸ್ಥೈರ್ಯದಿಂದ ಹೋರಾಡಿದಾಗ್ಗೂ ಕ್ರಾಮ್ವೆಲ್ಲನ ರಭಸವನ್ನು ತಡೆಯದೆ ಸೋತು ಯುದ್ಧಭೂಮಿಯಿಂದ ಚಲ್ಲಾಪಿಲ್ಲಿಯಾಗಿ ಓಡಿದರು. ಯುವರಾಜನೂ ತಲೆಮರೆಸಿಕೊಂಡು ಹೊರಟು ನಾನಾ ಕಷ್ಟಗಳಿಗೆ ಸಿಕ್ಕಿ ನಾನಾ ವೇಷಗಳನ್ನು ಧರಿಸಿ ನಾನಾ ಉಪಾಯಗಳನ್ನು ಅವಲಂಬಿಸಿ ಊರೂರು ಅಲೆದಾಡಿ ಕಡೆಗೆ ಫ್ರಾನ್ಸ್‌ದೇಶವನ್ನು ಸೇರಿದನು. ಯುವರಾಜನ ಪಲಾಯನದೊಂದಿಗೆ ರಾಜಪಕ್ಷದವರ ಆಸೆಯೆಲ್ಲವೂ ಭೂಗತವಾಯಿತು. ಸ್ಕಾಟ್ಲಂಡಿನಲ್ಲಿ ರಾಜಭಕ್ತರ ಹೆಸರಿಲ್ಲದಂತಾದುದಲ್ಲದೆ ಆ ದೇಶದ ಸ್ವಾತಂತ್ರ್ಯವು ನಷ್ಟವಾಯಿತು. ಕ್ರಾಮ್ವೆಲ್ ಇಂಗ್ಲಂಡಿಗೆ ಹಿಂತಿರುಗಿದತರುವಾಯ ಆತನ ದಳಪತಿಗಳಲ್ಲೊಬ್ಬನಾದ **ಮಾಂಕ್** (Monk) ಎಂಬಾತನು ಅಲ್ಲಿಯ ಸ್ಥಳಗಳನ್ನು ವಶಪಡಿಸಿಕೊಂಡು ಕಾಮನ್ವೆಲ್ತ್ ಪರವಾಗಿ ಆಡಳಿತವನ್ನು ನಡೆಸಲು ನಿಯುಕ್ತನಾದನು.

**ಪಲಾಯನ**

ಐರ್ಲಂಡ್‌ಸ್ಕಾಟ್ಲಂಡ್‌ಗಳಲ್ಲಿ ಮಾತ್ರವೇ ರಾಜಭಕ್ತರ ಪ್ರಯತ್ನ ನಡೆಯಿತು. ಇತರೆಡೆಗಳಲ್ಲಿ ನಡೆಯಲೇ ಇಲ್ಲ. ಅನ್ಯದೇಶಗಳ ಪ್ರಭುಗಳಿಂದ ಸಹಾಯವು ಸ್ಟೂಯರ್ಟ್‌ರಾಜಪುತ್ರನಿಗೆ ದೊರಕದಾಯಿತು. ಯುವರಾಜನ ಸೋದರಮಾವ ಫ್ರೆಡರಿಕ್ ಹಿಂದೆಯೇ ರಾಜ್ಯಭ್ರಷ್ಟನಾಗಿ ನಾನಾಕಷ್ಟಗಳಿಗೆಸಿಕ್ಕಿದ್ದನು. ಆತನಮಗ ರೂಪರ್ಟ್ ಹಿರೇಚಾರ್ಲ್ಸ್‌ನೊರೆಗೆ ಸಹಾಯಮಾಡುತ್ತಿದ್ದು ರಾಜಹತ್ಯವಾದಮೇಲೆ ಕಾಮನ್ವೆಲ್ತ್‌ಸ್ಥಾಪನೆಗೆ ವಿರೋಧವನ್ನೊಡ್ಡಲು ಕಡಲ್ಗಾಲುವೆಯಲ್ಲಿ ಹಡಗುಗಳನ್ನು ಓಡಾಡಿಸುತ್ತಿದ್ದು ಕೈಲಾದಷ್ಟು ಯುದ್ಧನಡೆಸಲು ಸಿದ್ಧನಾದನು. ಆದರೆ ಆತನ ಹಡಗುಪಡೆಯು ಇಂಗ್ಲಿಷ್ **ನೌಕಾಪತಿ ಬ್ಲೇಕ್** (Blake) ಎಂಬಾತನೆದುರಿಗೆ ಹಾಳಾಗಿಹೋಯಿತು. ಯುವರಾಜನೂ ರಾಜಮಾತೆಯೂ ಫ್ರಾನ್ಸಿನಸಹಾಯವನ್ನು ಪಡೆಯಲು ಎಷ್ಟೋ ಪ್ರಯತ್ನ ಮಾಡಿದರು. ಅಲ್ಲಿ ದೊರೆಯಾಗಿದ್ದ 13ನೆ ಲೂಯಿ 1642ರಲ್ಲಿ ಕಾಲವಾಗಿದ್ದನು. ರಾಜನೆನಿಸಿದ್ದ 14ನೆ ಲೂಯಿ ಇನ್ನೂ ತರುಣ. ಆದ್ದರಿಂದ ಆಡಳಿತವು ರಾಜಮಾತೆಯ ವಶದಲ್ಲಿತ್ತು ; ಆಕೆ ಹ್ಯಾಪ್ಸ್‌ಬುರ್ಗ್ ವಂಶದವಳು. ದೊಡ್ಡ ಮಂತ್ರಿಯಾಗಿದ್ದ ರಿಷ್‌ಲೂ ಸತ್ತುಹೋಗಿದ್ದನು. ಸಮರ್ಥನೆನಿಸಿದ್ದ ಆ ಮಂತ್ರಿ ಫ್ರಾನ್ಸಿನಲ್ಲಿ ಹ್ಯೂಗಿನೋ ಜನರ ಬಲವನ್ನು ಮುರಿದ ತರುವಾಯ ಮೂವತ್ತು ವರ್ಷಗಳ ಜಗಳದಲ್ಲಿ ಸ್ಪೈನಿಗೆ ವಿರುದ್ಧವಾದ ಪ್ರಾಟೆಸ್ಟೆಂಟ್‌ಪಕ್ಷವನ್ನು ಸೇರಿದ್ದನು. ರೋಮನ್‌ಕ್ಯಾಥಲಿಕ್ ರಾಜ್ಯವೆನಿಸಿದ್ದ ಫ್ರಾನ್ಸ್‌ದೇಶವು ರೋಮನ್‌ಕ್ಯಾಥಲಿಕ್‌ಪಕ್ಷಕ್ಕೆ ಶತ್ರುವಾಗಿಕಾಣುವ ಹಾಗಾಯಿತು. ಆದರೆ ಮತಭೇದದಿಂದ ಹುಟ್ಟಿದ್ದ ಆ ಜಗಳವು ಕಡೆಕಡೆಗೆ ಹ್ಯಾಪ್ಸ್‌ಬುರ್ಗ್‌ವಂಶದವರ ಆಧಿಪತ್ಯವನ್ನು ಉಳಿಸಿಕೊಳ್ಳುವ ವ್ಯಾಜ್ಯವಾಗಿ ಪರಿಣಮಿಸಿತ್ತು.

**ವಿರೋಧಿಗಳ ಕೊನೆ**

ಅಂತೂ ಫ್ರಾನ್ಸ್‌ದೇಶದವರು ಸ್ಟ್ಯುಯರ್ಟ್‌ವಂಶದವರಿಗೆ ಸಹಾಯಮಾಡುವ ಯೋಚನೆಯನ್ನು ಮಾಡಲಿಲ್ಲ.

ರಂಪ್ ಸಭೆಯವರು ಸರ್ವಾಧಿಕಾರವನ್ನು ಹೊತ್ತು ಕ್ರಾಮ್ವೆಲ್ಲನ ಸಹಾಯದಿಂದ ಇಂಗ್ಲಂಡ್ ಸ್ಕಾಟ್ಲಂಡ್ ಐರ್ಲಂಡ್ ಮೂರರಲ್ಲಿಯೂ ನಿಷ್ಕಂಟಕರಾದುದಲ್ಲದೆ ಹೊರ ರಾಜರಿಂದ ತೊಂದರೆಯನ್ನು ಕಾಣದೆ ನಿಶ್ಚಿಂತೆಯಿಂದಿದ್ದರು. ಸ್ಟ್ಯುಯರ್ಟ್ ವಂಶದವರು ನಿರ್ಬಲರಾಗಿ ಫ್ರಾನ್ಸಿನಲ್ಲಿಯೋ ಹಾಲೆಂಡಿನಲ್ಲಿಯೋ ಅಡಗಿದ್ದರು. ಅಂತಹ ಸಮಯದಲ್ಲಿ ರಂಪ್ ಸಭಿಕರು ಡಚ್ಚರೊಡನೆ ಜಗಳವನ್ನು ಕಟ್ಟಿಕೊಂಡರು. ಎಲಿಸಬೆತ್ ರಾಣಿಯ ಕಾಲದಲ್ಲಿ ಇಂಗ್ಲಿಷರೂ ಡಚ್ಚರೂ ಬಂಧುಗಳಂತಿದ್ದರಷ್ಟೆ. ಇಬ್ಬರಿಗೂ ಒಂದೇ ವಿಪತ್ತು ತೋರಿದಾಗ ಮೈತ್ರಿ ಬಲವಾಗಿತ್ತು. ಆ ವಿಪತ್ತು ಮಾಯವಾಗಿ ಸ್ಪೈನ್ ದುರ್ಬಲವಾದಮೇಲೆ ಡಚ್ಚರಿಗೂ ಇಂಗ್ಲಿಷರಿಗೂ ಮನಸ್ತಾಪಗಳು ತೋರಿದವು.

**ಡಚ್ಚರ ಪ್ರಾಬಲ್ಯ**

ಜಲಜೀವಿಗಳಾಗಿದ್ದ ಡಚ್ಚರು ನಾವಿಕತನದಲ್ಲಿ ನೈಪುಣ್ಯವನ್ನು ಸಹಜವಾಗಿ ಬೆಳೆಸಿಕೊಂಡು **ಡಚ್ ಈಸ್ಟಿಂಡಿಯಕಂಪೆನಿ** ( Dutch East India Co. ) ಎಂಬುದನ್ನು ರಾಷ್ಟ್ರದ ಇಲಾಖೆಯಾಗಿ ಕಟ್ಟಿಕೊಂಡು ಹಿಂದೂಸಾಗರದಲ್ಲಿ ಓಡಾಡಿ ಸೂರತ್ ಮುಂತಾದ ಭಾರತೀಯಪಟ್ಟಣಗಳಲ್ಲಿಯೂ ಮಲಯದ್ವೀಪಗಳಲ್ಲಿಯೂ ಸಾಹಸಪಟ್ಟು ಹಿಂದೆ ಪೋರ್ಚುಗೀಸರು ಅನುಭವಿಸುತ್ತಿದ್ದ ವ್ಯಾಪಾರವನ್ನು ತಮ್ಮದಾಗಿ ಮಾಡಿಕೊಂಡರು. ಸಮುದ್ರದಮೇಲೆ ಓಡಾಡುವುದರಲ್ಲಿ ಪ್ರವೀಣರಾಗಿ ದೇಶದಿಂದ ದೇಶಕ್ಕೆ ಸಾಮಾನುಸಾಗಿಸುವುದನ್ನು ಭಾರಿ ಉದ್ಯೋಗವನ್ನಾಗಿ ಕಟ್ಟಿಕೊಂಡರು. ಡಚ್ ಹಡಗುಗಳು ಸುಲಭವಾಗಿಯೂ ಶೀಘ್ರವಾಗಿಯೂ ದೇಶದಿಂದ ದೇಶಕ್ಕೆ ಯಾನ ಮಾಡುತ್ತ **ವಾಹಕೋದ್ಯೋಗವನ್ನು** (Carrying trade) ನಡೆಸುತ್ತಿರಲು ಡಚ್ಚರಿಗೆ ಸರಕಿನ ಒಯ್ಯಾಟವೇ ಭಾರಿ ಸಂಪಾದನೆಯ ಮಾರ್ಗವಾಯಿತು. ಸ್ಪಾನಿಷರು ಹಾಳಾದಮೇಲೆ ಡಚ್ಚರು ಬದುಕಿ ಬಿಂಕಪಡುವಂತಾಯಿತು. ಇದನ್ನು ಇಂಗ್ಲಿಷರು ನೋಡಿ ಸಹಿಸುವುದು ಹೇಗೆ? ಸ್ಪಾನಿಷರ ಬಲವನ್ನು ಸ್ವಂತಸಾಹಸದಿಂದ ಮುರಿದು ಅಸಹಾಯರಾಗಿದ್ದ ಡಚ್ಚರಿಗೆ ಆಪತ್ಕಾಲದಲ್ಲಿ ಉಪಕಾರಮಾಡಿದವರು ತಾವೇ ಆಗಿದ್ದರೂ ಇಂಗ್ಲಿಷ್ ಜನರಿಗೆ ಭಾರತೀಯ ವ್ಯಾಪಾರಸಾಧನೆಯಲ್ಲಿ ತೃಪ್ತಿಕರವಾದ ಮೇಲ್ಮೆಯಾಗಲಿ ನಾವಿಕತನದಲ್ಲಿ ಪ್ರಾಬಲ್ಯವಾಗಲಿ ದೊರಕಲಿಲ್ಲ. ಅಂಬಾಯ್ನ ದ್ವೀಪದಲ್ಲಿ ಡಚ್ಚರು ತಮ್ಮೊಡನೆ ಪೈಪೋಟಿಮಾಡಿದ ಇಂಗ್ಲಿಷರನ್ನು ಕೊಲ್ಲಿಸಿದ್ದರು. ಆಮದು ರಫ್ತು ಸಾಮಾನನ್ನು ಒಯ್ಯುವುದರಲ್ಲಿ ಡಚ್ಚರು ಇಂಗ್ಲಿಷರೊಂದಿಗೆ ಪೈಪೋಟಿನಡೆಸುತ್ತಿದ್ದು ಇಂಗ್ಲಂಡಿನ ಬಂದರುಗಳಲ್ಲಿಯೇ ಇಂಗ್ಲಿಷ್ ನಾವಿಕರಿಗೆ ಸಂಪಾದನೆಯಿಲ್ಲದಂತೆ ಮಾಡಿಬಿಟ್ಟರು. ಇಂಗ್ಲಂಡಿನ ನಾವಿಕರೂ ಬೆಸ್ತರೂ ನಿರುದ್ಯೋಗಿಗಳಾಗುವ ಹೊತ್ತು

**ಮನಸ್ತಾಪ**

ತೋರಿತು. ಡಚ್ಚರಿಗೆ ಬಿಂಕಬಿಮ್ಮಾನಗಳೂ ಏರಿದ್ದವು. ಇಂಗ್ಲಿಷ್ ಹಡಗುಗಳಿಗೆ ಪೂರ್ವದಲ್ಲಿ ತೋರುತ್ತಿದ್ದ ಮರ್ಯಾದೆಯನ್ನು ಬಿಟ್ಟರು; ಇಂಗ್ಲಿಷ್ ದೂತನೊಬ್ಬಾತನಿಗೆ ತಕ್ಕಷ್ಟು ಗೌರವವನ್ನು ತೋರದಾದರು.

1651ರಲ್ಲಿ ರಂಪ್‌ಸಭೆಯವರು ಕಾನೂನೊಂದನ್ನು ರಚಿಸಿದರು. **ನ್ಯಾವಿಗೇಷನ್ ಆಕ್ಟ್** (Navigation Act) ಎಂದು ಅದರ ಹೆಸರು. ಇಂಗ್ಲಂಡಿನ ರೇವು ಪಟ್ಟಣಗಳಲ್ಲಿ ಇಳಿಸುವ ಅಥವಾ ಹೇರುವ ಕೆಲಸವು ಇಂಗ್ಲಿಷ್ ಹಡಗುಗಳಲ್ಲಿಯೇ ಆಗತಕ್ಕುದು; ಇಲ್ಲವಾದರೆ ಯಾವ ದೇಶದೊಂದಿಗೆ ವ್ಯಾಪಾರವೋ ಆ ದೇಶದ ಹಡಗುಗಳಲ್ಲಿ ಆಗತಕ್ಕದ್ದು. ಕಾನೂನಿನ ವಿವರವು ಅಷ್ಟು ಮಾತ್ರವೇ. ಆದರೆ ವಸ್ತುಸ್ಥಿತಿಯಲ್ಲಿ ಡಚ್ಚರ ಮೇಲೆ ಪ್ರಯೋಗಿಸಿದ ಅಸ್ತ್ರವದು. ರಂಪ್‌ಸಭೆಯವರು ಡಚ್ಚರೊಂದಿಗೆ ಯುದ್ಧ ನಡೆಸಲು ಕಾನೂನೇ ಮೊದಲಿನ ಸನ್ನಾಹ. ಡಚ್ಚರಿಗೂ ಇಂಗ್ಲಿಷರಿಗೂ ಕಳ್ಳತನದಿಂದ ನಡೆಯುತ್ತಲಿದ್ದ ಕಲಹಗಳೂ ಲಡಾಯಿಗಳೂ ಅದರಿಂದ ಧಾರಾಳವಾದವು. 1652ರಲ್ಲಿ ಡೋವರ್‌ಬಳಿ ಎದುರುಬದುರಾದ ಇಂಗ್ಲಿಷ್ ಡಚ್ ಹಡಗುಗಳಲ್ಲಿದ್ದವರಿಗೆ ಹೋರಾಟ ಬಿತ್ತು. ಅದೇ ಯುದ್ಧಕ್ಕೆ ಮೊದಲಾಯಿತು.

**ವಿರೋಧ**

ಡಚ್ಚರಪಕ್ಷದಲ್ಲಿ **ಟ್ರೊಂಪ್**(Tromp)ಎಂಬ ಸಮರ್ಥ ನೌಕಾಪತಿಯಿದ್ದನು. ಇಂಗ್ಲಿಷರನ್ನು ಸುಲಭವಾಗಿ ಸೋಲಿಸಬಲ್ಲೆವೆಂಬ ಅಭಿಮಾನವು ಅವರಲ್ಲಿ ಬಲವಾಗಿತ್ತು. 1652ರಲ್ಲಿ ಟ್ರೊಂಪನು **ಡಂಜೆನೆಸ್** (Dungeness) ಬಳಿ ಇಂಗ್ಲಿಷರ ಹಡಗುಪಡೆಯನ್ನು ಸೋಲಿಸಿದನು. ಇಂಗ್ಲಿಷ್ ಹಡಗುಗಳನ್ನು ಸಮುದ್ರದಮೇಲಿನಿಂದ ಗುಡಿಸಿಬಿಡುತ್ತೇವೆಂಬಹೆಮ್ಮೆಯಿಂದ ಡಚ್ಚರು ತಮ್ಮ ನೌಕಾಪತಿಯ ಹಡಗಿನ ಧ್ವಜಸ್ತಂಭಕ್ಕೆ ಒಂದು ಪೊರಕೆಯನ್ನು ಕಟ್ಟಿ ಓಡಾಡಿಸಿದರು. ಸೋತ ಇಂಗ್ಲಿಷ್ **ನೌಕಾಪತಿ ಬ್ಲೇಕನು** ಸಮಯ ಹೊಂಚಿದ್ದು 1653ರಲ್ಲಿ **ಪೋರ್ಟ್ಲೆಂಡ್** (Portland) ಎಂಬ ಬಳಿ ಟ್ರೊಂಪನ ಪಡೆಗೆದುರಾಗಿ ಮೂರುದಿನ ಯುದ್ಧನಡೆಸಿ ಜಯಶಾಲಿಯಾದನು. ಒಟ್ಟು ಸಾವಿರದ ನಾನ್ನೂರು ಡಚ್‌ಹಡಗುಗಳು ಬ್ಲೇಕನ ಸ್ವಾಧೀನಕ್ಕೆ ಬಂದವು. ಹೋರಾಟ ಮುಂದುವರಿಯುತ್ತ ಇಂಗ್ಲಿಷ್ ಕಡಲ್ಗಾಲುವೆಯಲ್ಲಿ ಡಚ್ಚರಹಡಗುಗಳು ಸುರಕ್ಷಿತವಾಗಿ ಓಡಾಡುವುದೇ ಕಷ್ಟವಾಗಿಹೋಯಿತು.

**1ನೆ ಡಚ್ ಯುದ್ಧ**

ಇದೇವೇಳೆಗೆ ಕ್ರಾಮ್ವೆಲ್ ಐರ್ಲಂಡ್ ಸ್ಕಾಟ್ಲೆಂಡ್‌ಗಳಲ್ಲಿ ವಿರೋಧಿಗಳನ್ನು ಅಡಗಿಸಿದ್ದನು. ರಂಪ್‌ಸಭಿಕರ ಆಡಳಿತವು ನಿರುಪಾಧಿಕವಾದುದಲ್ಲದೆ ಎಲ್ಲೆಲ್ಲಿಯೂ ಬಲಾಢ್ಯವಾಗಿ ಕಾಣಿಸಿಕೊಂಡಿತು. ಆ ಮುರುಕುಸಭೆಯ ಸದಸ್ಯರಿಗೆ ನೆತ್ತಿಕೆಟ್ಟಿತು. ತಮ್ಮ ಅಧಿಕಾರವನ್ನು ಶಾಶ್ವತಗೊಳಿಸಿಕೊಳ್ಳುವ ಉಪಾಯಗಳನ್ನು ಯೋಚನೆ

ಮಾಡಲಾರಂಭಿಸಿದರು. ನ್ಯೂ ಮಾಡೆಲ್ ಸೈನ್ಯದವರಿಗೆ ರಂಪ್‌ಸಭಿಕರ ಉತ್ಸಾಹ ಸಾಲದೆನ್ನಿಸಿತ್ತು. ಆಗ ಸಭಿಕರು ಸೈನ್ಯಬಲವನ್ನಿಳಿಸುವ ಪ್ರಸ್ತಾಪಮಾಡಿದರು. ದಳಪತಿಗಳಿಗೆ ಅಸಮಾಧಾನವು ಹೆಚ್ಚಿತು. ಕಡೆಗೆ ಆ ಸಭಿಕರು ಮತ್ತೊಂದು ಪಾರ್ಲಿಮೆಂಟನ್ನು ರಚಿಸುವ ನಾಟಕನಡೆಸಿ ತಾವುಮಾತ್ರವೇ ಆ ಹೊಸ ಸಭೆಯಲ್ಲಿರುವಂತೆ ನೆರವೇರಿಸಿಕೊಳ್ಳುವ ಸಂಧಾನಕ್ಕೆ ತೊಡಗಿದರು. ಕ್ರಾಮ್ವೆಲ್ಲನಿಗೆ ಅದುವರೆಗೂ ಇದ್ದ ಸೈರಣೆಯು ಮಾಯವಾಯಿತು. ಸಣ್ಣ ದಳವನ್ನು ಕರೆದುಕೊಂಡು ಸಭಾಭವನದಲ್ಲಿ ಪ್ರವೇಶಿಸಿ ಸಭಿಕರನ್ನು ಗದರಿಸಿ ಸಭಾಧ್ಯಕ್ಷನನ್ನು ವೇದಿಕೆಯಿಂದೆಳೆಸಿ ಎಲ್ಲರನ್ನೂ ಹೊರಡಿಸಿ ಬಾಗಿಲಬೀಗವನ್ನು ಹಾಕಿಸಿಬಿಟ್ಟನು. 'ಸ್ವಂತಸಂಕಲ್ಪಮಾತ್ರದಿಂದ' ಸಭಾ ಮುಕ್ತಾಯಮಾಡಿಕೊಳ್ಳುವ ಗೊಡ್ಡುಸಭಿಕರಿಗೆ ಕ್ರಾಮ್ವೆಲ್ಲನಿಂದ ಈ ಬಗೆಯ ಅರ್ಧಚಂದ್ರಪ್ರಯೋಗವಾಗಿಹೋದಾಗ 'ಬೀದಿನಾಯಿಕೂಡ ಬೊಗಳಲಿಲ್ಲ' ವಂತೆ. ಆ ಸಭಿಕರು ಜನರಲ್ಲಿ ಅಷ್ಟು ಬೇಸರವನ್ನುಂಟುಮಾಡಿದ್ದರು.

**ರಂಪ್ ಸಭಿಕರ ಉಚ್ಚಾಟನೆ**

ರಾಜಭಕ್ತರೊಂದಿಗೆ ಐರಿಷರನ್ನೂ ಸ್ಕಾಟರನ್ನೂ ರಂಪ್‌ಸಭೆಯನ್ನೂ ಧ್ವಂಸಮಾಡಿದ ನ್ಯೂಮಾಡೆಲ್ ಸೈನ್ಯಕ್ಕೆ ಯಾರೂ ಅಡ್ಡಿಯಿಲ್ಲದಾಯಿತು. ಅಷ್ಟು ಪ್ರಬಲರಾಗಿದ್ದಾಗ್ಗೂ ಸೈನ್ಯದವರಿಗೆ ಜನರ ಒಪ್ಪಿಗೆಯ ಬೆಂಬಲದಿಂದ ರಾಷ್ಟ್ರವು ಕ್ರಮವಾಗಿ ನಡೆಯಬೇಕೆಂಬ ಇಷ್ಟವೇ ಇತ್ತು. ಸೇನಾಮುಖ್ಯರು ತಮ್ಮಲ್ಲಿ ಯೋಚನೆಗಳನ್ನು ನಡೆಸಿ ಹೊಸಪಾರ್ಲಿಮೆಂಟೊಂದನ್ನು ಕರೆಸಿದರು. ಇಂಡಿಪೆಂಡೆಂಟ್‌ಶಾಖೆಯಲ್ಲಿ ಅತಿವಿಶ್ವಾಸವುಳ್ಳ ಸೈನ್ಯಾಧಿಕಾರಿಗಳು ಕರೆಸಿದ ಆ ಪಾರ್ಲಿಮೆಂಟಿನಲ್ಲಿ ಸೇರಿದ ಸದಸ್ಯರಲ್ಲಿ ಪ್ಯೂರಿಟನ್‌ಮತಸ್ಥರು ಹೆಚ್ಚಾಗಿದ್ದರು. ಅನುಭವವಿಲ್ಲದ ಮತಾಚಾರ್ಯರೂ ಗೊಡ್ಡುಗಳಂತಹವರೂ ತುಂಬಿದ್ದರು. **ಬೇರ್‌ಬೋನ್ಸ್ ಪಾರ್ಲಿಮೆಂಟ್*** ( Barebones' Parliament) ಎಂಬ ಅಡ್ಡಹೆಸರಿಗೆ ಪಾತ್ರವಾದ ಆ ಸಭೆಯಲ್ಲಿ ವಾದವಿವಾದಗಳು ಐಹಿಕ ವಿಚಾರಗಳಿಗಿಂತ ಹೆಚ್ಚಾಗಿ ಪಾರಲೌಕಿಕವಿಚಾರಗಳಿಂದ ತುಂಬಿದ್ದವು; ಅಂತಹ ಸಭಿಕರು ಮತನ್ಯವಸ್ಥೆ ಹೇಗೆಂಬ ವಿಚಾರವನ್ನೆತ್ತಿಕೊಂಡಾಗ ರಾದ್ಧಾಂತ ಪ್ರಾರಂಭವಾಯಿತು. ಆಗ ಉಪಾಯಶಾಲಿಗಳು ಕೆಲವರು ಸಮಯಹೊಂಚಿ ಗೊಡ್ಡು

**ಗೊಡ್ಡುಗಳ ಸಭೆ**

---

*Praise God Barebones ಎಂಬ ವಿಚಿತ್ರವಾದ ಹೆಸರುಳ್ಳ ಒಬ್ಬ ಸದಸ್ಯನಿದ್ದುದರಿಂದ ಆ ಹೆಸರು. 'ದೇವರನ್ನು ಸ್ತುತಿಸಲೆ ಬೇರ್‌ಬೋನ್ಸ್' ಎಂದು ಅನುವಾದ. ಆ ಪುಣ್ಯಾತ್ಮನು ತನ್ನ ಮಗನಿಗೆ 'Unless Christ-had-died-for thee-thou-hadst-been-damned-Barebones' ಎಂಬ ಹೆಸರನ್ನಿಟ್ಟಿದ್ದನು. ಪ್ಯೂರಿಟನ್ನರ ದೈವಭಕ್ತಿಯು ಇಂತಹ ವಿಚಿತ್ರಗಳನ್ನು ಪ್ರೇರಿಸುವುದಾಗಿತ್ತು.

ಸಭಿಕರಿಲ್ಲದವೇಳೆಯಲ್ಲಿ ಸಭಾಮುಕ್ತಾಯಸಂಕಲ್ಪವನ್ನು ಮಾಡಿಕೊಂಡು ಕ್ರಾಮ್ವೆಲ್ಲನಿಗೆ ಸರ್ವಾಧಿಕಾರವನ್ನೊಪ್ಪಿಸಿಬಿಟ್ಟರು.

ಮುಂದೆ ಹೇಗೆ ನಡೆಯಬೇಕೆಂದು ಯೋಚಿಸಿದವರಲ್ಲಿ ಇರಿಟನ್ (Ireton) ಎಂಬ ದಳಪತಿಯು ಕೊಟ್ಟ ಸೂಚನೆ ಅಂಗೀಕೃತವಾಯಿತು. ಕ್ರಾಮ್ವೆಲ್ಲನು **ಪ್ರೊಟೆಕ್ಟರ್**(Protector)ಎಂಬ ಪದವಿಯನ್ನು ವಹಿಸಿ ಕಾರ್ಯಾಂಗವನ್ನು ನಡೆಸುತ್ತ ಅದಕ್ಕಾಗಿ ಗೊತ್ತಾದ ಹಣವನ್ನು ಪಯೋಗಿಸಿಕೊಂಡು ಆಡಳಿತವನ್ನು ನಡೆಸಬೇಕು. ಪಾರ್ಲಿಮೆಂಟ್ ಒಂದೇ ಸಭೆಯಾಗಿದ್ದು ಪ್ರೊಟೆಕ್ಟರ್ ಕರೆಸಿದಾಗ ನೆರೆದು ವಿಧಿಗಳನ್ನು ರಚಿಸಬೇಕು. ಸಭೆಯ ನಿಶ್ಚಯಗಳನ್ನು ಅಡ್ಡಿಮಾಡುವುದಕ್ಕೂ ಐದುತಿಂಗಳ ತರುವಾಯ ಸಭೆಯನ್ನು ಮುಕ್ತಾಯಗೊಳಿಸುವುದಕ್ಕೂ ಪ್ರೊಟೆಕ್ಟರಿಗೆ ಅಧಿಕಾರವಿರತಕ್ಕುದು. ಪ್ರೊಟೆಕ್ಟರ್ ಸಹಾಯಕ್ಕೆ ಮಂತ್ರಾಲೋಚಕಸಭೆಯೊಂದಿರತಕ್ಕುದು. ಈ ಲಕ್ಷಣಗಳಿಂದಕೂಡಿದ ರಾಷ್ಟ್ರರೂಪವು 1653ರಲ್ಲಿ ಆಚರಣೆಗೆ ಬಂತು. ಇದಕ್ಕೆ **ಇನ್ಸ್ಟ್ರುಮೆಂಟ್ ಆಫ್ ಗವರ್ನಮೆಂಟ್** (Instrument of Government) ಎಂಬ ಹೆಸರು ಬಂತು. ಕ್ರಾಮ್ವೆಲ್ ಒಂದುಕಡೆ ಸಮಸ್ತಸೈನ್ಯಾಧಿಪತಿಯಾಗಿಯೂ ಮತ್ತೊಂದುಕಡೆ ರಾಷ್ಟ್ರಾಧ್ಯಕ್ಷನಾಗಿಯೂ ಇದ್ದು ಸರ್ವಶಕ್ತನಾದನು.

**ಪ್ರೊಟೆಕ್ಟೊರೇಟ್**

ಹಂಟಿಂಗ್ಡನ್ (Huntingdon) ಎಂಬ ಸ್ಥಳದಲ್ಲಿ ಸತ್ಕುಲದಲ್ಲಿ ಹುಟ್ಟಿದ ಆಲಿವರ್ ಕ್ರಾಮ್ವೆಲ್ ತನ್ನ 29ನೆ ವಯಸ್ಸಿನಲ್ಲಿ ಲಾಂಗ್ ಪಾರ್ಲಿಮೆಂಟ್ ಸಭೆಯಲ್ಲಿ ಗಣ್ಯನಾಗಿದ್ದನು. ಹಿರೇ ಜೇಮ್ಸ್ ಮತ್ತು ಚಾರ್ಲ್ಸ್‌ದೊರೆಗಳು ನಡೆಸಿದ ಅಕ್ರಮಗಳನ್ನು ಕಂಡು ಕೋಪಗೊಂಡವರಲ್ಲಿ ಒಬ್ಬನು. ಇಂಡಿಪೆಂಡೆಂಟ್ ಎಂಬ ಪ್ಯೂರಿಟನ್ ಶಾಖೆಯನ್ನು ಸೇರಿ ಅತಿಶಯದೈವಭಕ್ತಿಯಿಂದ ಕೂಡಿದ್ದು ಅನಾಚಾರ ದುರಾಚಾರಗಳನ್ನು ದ್ವೇಷಿಸುತ್ತಿದ್ದನು. ವಾದವಿವಾದಗಳಲ್ಲಿ ಚಾತುರ್ಯವಿರಲಿಲ್ಲ; ಮಾತನಾಡಬೇಕಾದಾಗಮಾತ್ರ ಸ್ಫುಟವೋ ಅಸ್ಫುಟವೋ ಹೆಚ್ಚು ಗಮನಿಸದೆ ತೋರಿದಂತೆ ಮಾತನಾಡತಕ್ಕವನು. ರಾಜಕೀಯವಿಷಯಗಳಿಗಿಂತ ಮತಸಂಬಂಧವಾದ ವಿಷಯಗಳಲ್ಲಿ ಆತನಿಗೆ ಆಸಕ್ತಿ ಹೆಚ್ಚು. ಲಾಂಗ್ ಪಾರ್ಲಿಮೆಂಟ್‌ಸಭೆಯ ವಾದಪ್ರತಿವಾದಗಳಲ್ಲಿ ಆತನು ಪ್ರಸಿದ್ಧಿಗೆ ಬರಲಿಲ್ಲ. ಯುದ್ಧಮೊದಲಾದಮೇಲೆ ರೂಪರ್ಟ್‌ರಾಜಕುಮಾರನ ರಾವುತರನ್ನಡಗಿಸುವ ಶೌರ್ಯಸಂಧಾನದಲ್ಲಿ ಹೆಸರುವಾಸಿಯಾಗಿ ದಳಪತಿತನದಲ್ಲಿ ಅದ್ವಿತೀಯನಾದನು. ರಾಜನ ಅಧಿಕಾರದವಿನಾಶ ಪವಿತ್ರಕರ್ತವ್ಯವೆಂದು ನಂಬಿ ತನ್ನ ಸೈನಿಕರಲ್ಲಿ ಮತಾಚಾರಶುದ್ಧಿಯನ್ನು ನಿರ್ದಾಕ್ಷಿಣ್ಯವಾಗಿ* ರಕ್ಷಿಸಿ ರಾಜವಧೆಗೆ ಮುಖ್ಯ

**ಆಲಿವರನ ಸ್ವಭಾವ**

*ದೃಷ್ಟಾಂತಕ್ಕೆ ಕೆಟ್ಟ ಬೈಗಳಾಡಿದ ಮತ್ತು ದೈವದೂಷಣೆಮಾಡಿದ ಸೈನಿಕರ ನಾಲಿಗೆಗಳಿಗೆ ಕಾದ ದಬ್ಬಳವನ್ನು ಚುಚ್ಚುವುದು ಸಾಮಾನ್ಯವಾಗಿತ್ತು.

ಕಾರಣಭೂತನಾದನು. ರಾಜಪಕ್ಷದವರಿಗೆ ಅಜೇಯಶತ್ರುವಾಗಿಯೂ ಪ್ಯೂರಿಟನ್ನಲ್ಲದ ವರಿಗೆ ರಾಕ್ಷಸನಾಗಿಯೂ ಕಾಣುತ್ತಿದ್ದವನು. ಆದರೆ ಇಂಗ್ಲಂಡಿನ ದೇಶಭಕ್ತರಲ್ಲಿ ಕ್ರಾಮ್ವೆಲ್ ಅಗ್ರಗಣ್ಯನಾಗತಕ್ಕವನು. ತಾನು ನಡೆಸಿದ ಪ್ರತಿಯೊಂದು ಕೆಲಸವೂ ದೇವಕಾರ್ಯವೆಂದೇ ಭಾವಿಸಿದ್ದವನು. ಹೆಮ್ಮೆ,* ಜಂಭ, ದುಂದುಗಾರಿಕೆ, ದುರಾಸೆ ಗಳಿಲ್ಲದವನು. ಉಲ್ಲಾಸವಿನೋದಗಳಿಗೆ ಪರಮ ಶತ್ರುವೆಂಬ ಅಪಕೀರ್ತಿಗೆ ಪಾತ್ರ ನಾದರೂ ವಾಸ್ತವವಾಗಿ ಭಜನೆಯಲ್ಲಿ ವಿಶ್ವಾಸವುಳ್ಳವನು. ಮಿಲ್ಟನ್(Milton)ಎಂಬ ಪ್ರಸಿದ್ಧಕವಿಗೆ ಪ್ರೋತ್ಸಾಹಕೊಟ್ಟವನು.

ಪ್ರೊಟೆಕ್ಟರ್‌ಪದವಿಯನ್ನು ಕ್ರಾಮ್ವೆಲ್‌ವಹಿಸಿದವೇಳೆಗೆ ಡಚ್ಚರು ಸೋತುಹೋಗಿ ಒಪ್ಪಂದಕ್ಕೆ ಸಿದ್ಧರಾಗಿದ್ದರು. ಶಾಂತಿಯ ಒಪ್ಪಂದದ ಪ್ರಸ್ತಾಪವನ್ನು ಕ್ರಾಮ್ವೆಲ್ಲನೇ ನಡೆಸಿದನು. 1654ರಲ್ಲಿ **ವೆಸ್ಟ್ ಮಿನಿಸ್ಟರ್ ಒಪ್ಪಂದ** ನಡೆಯಿತು. ನ್ಯಾವಿಗೇಷನ್ ಕಾನೂನಿಗೆ ತಲೆಬಾಗಿದ್ದಲ್ಲದೆ ಡಚ್ಚರು ಕ್ರಾಮ್ವೆಲ್ ಇಟ್ಟ ಷರತ್ತುಗಳಿಗೊಡಂಬಟ್ಟರು. ಸ್ಟುಯರ್ಟ್ ರಾಜವಂಶದವರಿಗೆ ಆಶ್ರಯಸಹಾಯಗಳನ್ನು ಕೊಡುವುದಿಲ್ಲವೆಂಬುದಾಗಿಯೂ ಬ್ರಿಟಿಷರ ಧ್ವಜಕ್ಕೆ ಗೌರವವನ್ನು ತೋರುವುದಾ ಗಿಯೂ ಒಪ್ಪಿ ಅಂಬಾಯ್ನ ದ್ವೀಪದಲ್ಲಿ 1623ರಲ್ಲಿ ನಡೆದ ಕೊಲೆಗೆ ಪರಿಹಾರದ್ರವ್ಯವನ್ನೂ ಸಲ್ಲಿಸಿದರು. ಈ ಷರತ್ತುಗಳನ್ನು ನಡೆಸುವುದರಲ್ಲಿಯೇ ಕ್ರಾಮ್ವೆಲ್ಲನ ಮನೋಗತವು ಸೂಚಿತವಾಯಿತು. ರಾಜರಹಿತರಾಷ್ಟ್ರವನ್ನು ಕಟ್ಟಿಕೊಂಡಿದ್ದ ಇಂಗ್ಲಂಡಿಗೆ ಗೌರವ ವನ್ನು ಸಂಪಾದಿಸುವುದು, ಅನ್ಯರಾಷ್ಟ್ರಗಳಲ್ಲಿ ರಾಜಪಕ್ಷದವರಿಗೆ ನೆಲೆಯಿಲ್ಲದಂತೆ ನೆರವೇರಿಸುವುದು, ಸಮುದ್ರದಮೇಲೆ ಇಂಗ್ಲಿಷರು ಓಡಾಡಿ ವ್ಯಾಪಾರಸಾಧಿಸುವುದಕ್ಕೆ ಅನುಕೂಲಗಳನ್ನು ಹೊಂದಿಸಿಕೊಳ್ಳುವುದು ಆತನ ಉದ್ದೇಶ ಗಳಾಗಿದ್ದವು. ಅವುಗಳಲ್ಲದೆ ಕ್ರಾಮ್ವೆಲ್ಲನ ಮನಸ್ಸಿನಲ್ಲಿ ಪ್ರಬಲ ವಾಗಿ ಮತ್ತೊಂದು ಲಕ್ಷ್ಯವೂ ಇತ್ತು. ಪ್ರಾಟೆಸ್ಟೆಂಟ್ ದೇಶ ಗಳನ್ನೆಲ್ಲ ಒಟ್ಟುಗೂಡಿಸಿ ಅವುಗಳ ನೇತೃತ್ವವನ್ನು ಇಂಗ್ಲಂಡಿಗೆ ಕಟ್ಟಬೇಕೆಂಬ ಆಶೆಯು ಆತನಿಗೆ ಬಲವಾಗಿತ್ತು. ಡಚ್ಚರೊಡನೆ ಕರಾರು ನಡೆದ ಕೂಡಲೆ ಕ್ರಾಮ್ವೆಲ್ ತನ್ನ ಉದ್ದೇಶಗಳನ್ನನುಸರಿಸಿ **ಡೆನ್ಮಾರ್ಕ್, ಸ್ವೀಡನ್** ದೇಶಗಳೊಂ ದಿಗೆ ಮೈತ್ರಿಯ ಒಪ್ಪಂದಗಳನ್ನು ನಡೆಸಿದನು. ಇಂಗ್ಲಂಡಿನ ವ್ಯಾಪಾರಾಭಿವೃದ್ಧಿಯ

**ಡಚ್ ಯುದ್ಧದ ಮುಕ್ತಾಯ**

**ಕ್ರಾಮ್ವೆಲ್ಲನ ಉದ್ದೇಶಗಳು**

---

*ಸರ್ವಾಧಿಕಾರಿಯಾಗಿದ್ದಾಗ ಈತನ ತಸ್ವೀರನ್ನು ಬರೆದುಕೊಳ್ಳಲು ಹೊರದೇಶದ ಪ್ರಭುವೊಬ್ಬ ನಿಂದ ಪ್ರೇರಿತನಾಗಿದ್ದ ಚಿತ್ರಗಾರನೊಬ್ಬನು ಬಂದನು. ಅವನಿಗೆ "ಎಲೈ, ನನ್ನ ಮುಖವನ್ನು ಬೇಕಾದಂತೆ ಲಕ್ಷಿಸಿ ಚಿತ್ರಿಸಿಕೋ. ಆದರೆ ಇರುವ ಸೊಟ್ಟನ್ನಾಗಲಿ ಗಾಯದ ರೇಖೆಯನ್ನಾಗಲಿ ನೀನು ತೇಲಿಸಿ ಬರೆದುದಾದರೆ ನಿನಗೆ ಶಾಸ್ತಿ. ಮುಖ ವಿರುವಹಾಗೆ ಚಿತ್ರಿಸಿಕೊಂಡು ಹೊರಡು" ಎಂದನಂತೆ.

ದೃಷ್ಟಿಯಿಂದ **ಪೋರ್ಚುಗಲ್** ದೇಶದೊಂದಿಗೂ ಮೈತ್ರಿಯನ್ನು ಕಟ್ಟಿದನು. ಇಂಗ್ಲಿಷ್‌ಜನರು ವ್ಯಾಪಾರವನ್ನು ಅಭಿವೃದ್ಧಿಮಾಡಿಕೊಳ್ಳಲು ಈ ಮೈತ್ರಿಯಿಂದ ಅನುಕೂಲಗಳು ದೊರೆತವು.

ಡಚ್ಚರೊಂದಿಗೆ ಒಪ್ಪಂದನಡೆದ ವೇಳೆಯಲ್ಲಿ ಫ್ರಾನ್ಸಿಗೂ ಸ್ಪೈನಿಗೂ ವಿರೋಧವು ಬೆಳೆಯುತ್ತಿತ್ತು. 1648ರಲ್ಲಿ ಮೂವತ್ತು ವರ್ಷಗಳ ಯುದ್ಧವೆಂಬುದು ಮುಗಿದಿತ್ತು; ಆದರೆ ಆ ಯುದ್ಧದ ಕಡೆಕಡೆಯಲ್ಲಿ ಸ್ಪೈನ್ ಹಿಡಿದಿದ್ದ ಪಕ್ಷಕ್ಕೆ ವಿರುದ್ಧವಾದ ಪಕ್ಷವನ್ನೇ ಫ್ರಾನ್ಸ್ ಸೇರಿಕೊಂಡಿತ್ತು. ಪ್ರಾಟೆಸ್ಟೆಂಟ್‌ದೇಶಗಳನ್ನೊಟ್ಟುಗೂಡಿಸುತ್ತಿದ್ದ ಕ್ರಾಮ್ವೆಲ್ಲನೆದುರಿನಲ್ಲಿ ರೋಮನ್‌ಕ್ಯಾಥಲಿಕ್‌ದೇಶಗಳಲ್ಲಿ ಮುಖ್ಯವೆನಿಸಿದ್ದ ಎರಡು ದೇಶಗಳು ಪರಸ್ಪರ ವೈರಿಗಳಾಗಿದ್ದವು. ಕ್ರಾಮ್ವೆಲ್ಲನ ಸಾಹಸಪ್ರಾಬಲ್ಯಗಳನ್ನು ತಿಳಿದು ಸ್ಪೈನ್ ದೇಶದ ರಾಜನು ಇಂಗ್ಲಂಡಿನ ಮೈತ್ರಿಯನ್ನು ಅಪೇಕ್ಷಿಸಿದನು. ಫ್ರಾನ್ಸ್‌ದೇಶದವರೂ ಕ್ರಾಮ್ವೆಲ್ಲನ ಸಹಾಯವನ್ನು ಬಯಸಿದರು. ಕ್ರಾಮ್ವೆಲ್ಲನ ಮೈತ್ರಿಗಾಗಿ ಆ ಎರಡು ದೇಶಗಳೂ ಪೋಟಾಪೋಟಿಮಾಡುವಂತೆ ಕಾಣಬಂತು. ಕ್ರಾಮ್ವೆಲ್ಲನು ಸ್ಪೈನ್‌ರಾಜನಿಗೆ "ಇಂಗ್ಲಿಷರಿಗೆ ವೆಸ್ಟಿಂಡೀಸ್ ದ್ವೀಪಗಳಲ್ಲಿ ವ್ಯಾಪಾರಸೌಲಭ್ಯಗಳನ್ನೂ ಸ್ಪಾನಿಷ್ ಕ್ಷೇತ್ರಗಳಲ್ಲಿ ಇಂಗ್ಲಿಷರಿಗೆ ಮತಸ್ವಾತಂತ್ರ್ಯವನ್ನೂ ಕೊಟ್ಟುಬಿಟ್ಟರೆ ಮೈತ್ರಿ ಕಟ್ಟಲಾದೀತು" ಎಂದು ಬಿಂಕದಿಂದ ಹೇಳಿಕಳುಹಿಸಿದನು. ಸ್ಪಾನಿಷ್ ರಾಯಭಾರಿಯು ವಿಸ್ಮಯಗೊಂಡು "ನಮ್ಮ ರಾಜನಿಗಿರುವ ಎರಡು ಕಣ್ಣನ್ನೂ ಕೇಳಿದ ಹಾಗಾಯಿತು" ಎಂದನು. ಪರಿಣಾಮವಾಗಿ ಕ್ರಾಮ್ವೆಲ್ ಫ್ರೆಂಚರೊಡನೆ ಮೈತ್ರಿ ಕಟ್ಟಿ **ಸ್ಪಾನಿಷರೊಡನೆ ಯುದ್ಧಕ್ಕೆ** ಅಣಿಯಾದನು. ರೋಮನ್‌ಕ್ಯಾಥಲಿಕ್ ರಾಜ್ಯವಾದ ಸ್ಪೈನನ್ನು ನಾಶಗೊಳಿಸುವ ಇಷ್ಟಮಾತ್ರವಲ್ಲದೆ ಆ ಮೂಲಕ ಇಂಗ್ಲಿಷರ ವ್ಯಾಪಾರ ಐಶ್ವರ್ಯಗಳ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವ ಉದ್ದೇಶವೂ ಇತ್ತು.

**ಕ್ರಾಮ್ವೆಲ್ಲನ ಸ್ನೇಹಕ್ಕೆ ಪೈಪೋಟಿ**

1655ರಲ್ಲಿ **ಹಿಸ್ಪೇನಿಯೋಲ** (Hispaniola) ಎಂಬ ಸ್ಪಾನಿಷ್ ದ್ವೀಪವನ್ನು ಆಕ್ರಮಿಸಲು ಇಂಗ್ಲಿಷರ ಪ್ರಯತ್ನ ನಡೆಯಿತು. ಆ ದ್ವೀಪವು ಸಿಕ್ಕಲಿಲ್ಲ. ಆದರೆ **ಜಮೈಕ** (Jamaica) ಎಂಬ ದ್ವೀಪವು ಇಂಗ್ಲಿಷರ ವಶವಾಯಿತು. ಆ ದ್ವೀಪದಲ್ಲಿ ಇಂಗ್ಲಿಷರನ್ನು ನೆಲೆಗೊಳಿಸಲು ಕ್ರಾಮ್ವೆಲ್ ವಿಳಂಬಮಾಡದೆ ಉದ್ಯುಕ್ತನಾದನು. ದ್ವೀಪಾಂತರಗಳ ಸಂಪಾದನೆಗೆ ಇದೇ ಮೊದಲು. ಅದೇವರ್ಷದಲ್ಲಿಯೇ ಬ್ಲೇಕನು ಇಂಗ್ಲಿಷ್ ಹಡಗುಗಳನ್ನು ಭೂಮಧ್ಯಸಮುದ್ರದಲ್ಲಿ ಒಯ್ದನು. **ಟ್ಯೂನಿಸ್** (Tunis) ಸಂಸ್ಥಾನಿಕನಾಗಿದ್ದ ಮುಸಲ್ಮಾನ್‌ಪ್ರಭುವನ್ನು ಬೆದರಿಸಿದನು. ಕ್ರೈಸ್ತರನ್ನು ಗುಲಾಮರನ್ನಾಗಿ ಹಿಡಿಯುತ್ತಿದ್ದ ಆ ಪ್ರಭುವಿನ ಆಟವು ನಿಂತುಹೋಯಿತು. **ಭೂಮಧ್ಯಸಮುದ್ರದಲ್ಲಿ**

**ಸ್ಪೈನಿನೊಡನೆ ಯುದ್ಧ**

ಇಂಗ್ಲಿಷ್ ಹಡಗುಗಳು ಆಕ್ರಮಣಮಾಡಲು ಇದೇ ಮೊದಲು. ಇದರಿಂದ ಕ್ರೈಸ್ತರೆಲ್ಲರಿಗೂ ರಕ್ಷಕನಂತೆ ಕ್ರಾಮ್ವೆಲ್ ಕಾಣಿಸಿಕೊಂಡನು. ಇಟಲಿಯಲ್ಲಿ **ಸವಾಯ್ ಶ್ರೀಮಂತನು** (Duke of Savoy) ತನ್ನ ಸಂಸ್ಥಾನದಲ್ಲಿದ್ದ ಪ್ರಾಟೆಸ್ಟೆಂಟ್ ಮತಸ್ಥರ ಕೊಲೆ ನಡಸುತ್ತಿದ್ದನು. ಆಗ ಕ್ರಾಮ್ವೆಲ್ ರೋಷದಿಂದ ಆಕ್ಷೇಪವೆತ್ತಿದನು. ಆಗ ಫ್ರೆಂಚ್ ದೊರೆಯು ಕ್ರಾಮ್ವೆಲ್ಲನ ಸಹಾಯಪಡೆಯಲು ಸನ್ನಾಹಮಾಡಿ ಸವಾಯ್ ಶ್ರೀಮಂತನನ್ನು ಬೆದರಿಸಿ ಪ್ರಾಟೆಸ್ಟೆಂಟರ ಕೊಲೆ ನಿಲ್ಲುವಂತೆ ಏರ್ಪಡಿಸಿದನು. ಇದರಿಂದ ಪ್ರಾಟೆಸ್ಟೆಂಟ್ ಪಂಗಡಕ್ಕೆಲ್ಲ ಕ್ರಾಮ್ವೆಲ್ ಆಪದ್ರಕ್ಷಕನಾಗಿ ಕಂಡುಬಂದನು.

**ಕೀರ್ತಿಲಾಭ**

ಫ್ರಾನ್ಸಿನವರು ಕ್ರಾಮ್ವೆಲ್ಲನ ಸಹಾಯವನ್ನು ಪಡೆದರು. 1656ರಲ್ಲಿ ಫ್ರೆಂಚರೂ ಇಂಗ್ಲಿಷರೂ ಕೂಡಿ ಸ್ಪೈನಿನೊಡನೆ ಯುದ್ಧಕ್ಕಣಿಯಾದರು. 1657ರಲ್ಲಿ **ಸಾಂಟಾ ಕ್ರೂಸ್** (Santa Cruz) ಬಳಿಯಿದ್ದ ಸ್ಪಾನಿಷ್ ಹಡಗುಗಳು ಬ್ಲೇಕನ ಆಕ್ರಮಣಕ್ಕೆ ಸಿಕ್ಕಿ ಧ್ವಂಸವಾದವು. 1658ರಲ್ಲಿ ಇಂಗ್ಲಿಷ್ ಸೈನ್ಯವೊಂದು ಫ್ರೆಂಚರೊಡನೆ ಕೂಡಿ ಫ್ರಾನ್ಸಿಗೆ ಉತ್ತರದಲ್ಲಿ ಸ್ಪಾನಿಷ ಸೈನ್ಯವನ್ನು ಸೋಲಿಸಿದರು. ಅದರ ಫಲಿತಾಂಶವಾಗಿ **ಡಂಕರ್ಕ್** (Dunkirk) ಎಂಬ ತೀರಪಟ್ಟಣವು ವಶವಾಗಿ ಇಂಗ್ಲಿಷರ ಪಾಲಿಗೆ ಬಂತು. ಆ ಸಮಯದಲ್ಲಿಯೇ ಕ್ರಾಮ್ವೆಲ್ ತೀರಿಕೊಂಡನು. ಅಧಿಕಾರವಹಿಸಿದ ಐದು ವರ್ಷಗಳಲ್ಲಿ ಇಂಗ್ಲಿಷರ ಸಮುದ್ರಯಾನಪ್ರಾಬಲ್ಯಕ್ಕೂ ವ್ಯಾಪಾರವೃದ್ಧಿಗೂ ದ್ವೀಪಾಂತರ ಸಂಪಾದನೆಗೂ ಪ್ರೋತ್ಸಾಹ ಕೊಟ್ಟಿದ್ದನು. ಇಂಗ್ಲಂಡಿನ ಗೌರವವನ್ನು ಎಲಿಸಬೆತ್ ಕಾಲದಲ್ಲಿದ್ದ ಮಟ್ಟಕ್ಕೆ ತಂದನು. ರಾಜಪಕ್ಷದ ಚರಿತ್ರಕಾರನಾದ ಕ್ಲಾರೆಂಡನ್ (Clarendon) ಅದನ್ನು ಸ್ಮರಿಸಿ ಕ್ರಾಮ್ವೆಲ್ಲನ ಮಹತ್ವವನ್ನು ವಿವರಿಸುತ್ತ "ಹೊರಗಡೆಯೇ ಆತನ ಪ್ರಭಾವ ಪೂರ್ಣಕಳೆಯಿಂದ ಶೋಭಿಸಿತು; ಇಂಗ್ಲಂಡಿನಲ್ಲಿ ಕಂಡುದು ಅದರ ನೆರಳುಮಾತ್ರ" ಎಂದು ಮೆಚ್ಚಿಕೊಂಡನು.

**ಗೆಲುವು**

ಇಂಗ್ಲಂಡ್, ಸ್ಕಾಟ್ಲೆಂಡ್, ಐರ್ಲಂಡ್ ಮೂರನ್ನೂ ಸ್ವಾಧೀನಪಡಿಸಿಕೊಂಡು ಮೂರಕ್ಕೂ ಒಂದೇ ಆಡಳಿತವನ್ನು ಸಾಧಿಸಿದವನು ಕ್ರಾಮ್ವೆಲ್. ಆತನು ಪ್ರೊಟೆಕ್ಟರ್ ಪದವಿಯನ್ನೊಪ್ಪಿಕೊಂಡತರುವಾಯ ಕೇವಲ ವಾದವಿವಾದಗಳಲ್ಲಿ ಕಾಲಹರಣಮಾಡುತ್ತಿದ್ದವರ ಪ್ರಾಬಲ್ಯ ಕುಗ್ಗಿತು. ಅಲ್ಲಲ್ಲಿ ನಡೆಯುತ್ತಿದ್ದ ದೊಂಬಿಗಳು ನಿಂತುಹೋದವು. ವಿಧಿಸೂತ್ರಗಳ ಆಚರಣೆಯು ಕ್ರಮಕ್ಕೆ ಬಂತು. ಕಾರ್ಯಾಂಗದ ನಾಯಕರು ಪ್ಯೂರಿಟನ್ ಮತಸ್ಥರೇ ಆಗಿದ್ದಾಗ್ಗೂ ಮತವಿಚಾರದಲ್ಲಿ ಧಾರಾಳವನ್ನು ತೋರಿದರು. ರೋಮನ್ ಕ್ಯಾಥಲಿಕ್ಕರಲ್ಲದವರೆಲ್ಲರಿಗೂ ಮತಸ್ವಾತಂತ್ರ್ಯವುಂಟಾಯಿತು. ಕ್ರೈಸ್ತರಲ್ಲದವರನ್ನಾದರೂ ಪ್ಯೂರಿಟನ್ನರು ಸಹಿಸಿಯಾರು; ರೋಮನ್ ಕ್ಯಾಥಲಿಕ್ಕರೆಂದರೆ

**ಒಳಾಡಳಿತ**

ಆಗದು. ಕ್ರಾಮ್ವೆಲ್ ಆಡಳಿತ ನಡೆಸಿದಾಗ ಪ್ರಾಟೆಸ್ಟೆಂಟ್ ಪಂಗಡಕ್ಕೆ ಸೇರಿದ್ದವರೆಲ್ಲರಿಗೂ ಮತಾಚಾರಗಳಲ್ಲಿ ಇಷ್ಟಾನುವರ್ತನೆಯ ಆಸ್ಪದ ದೊರಕಿತು. ಯೆಹೂದೀ ಮತಸ್ಥರನ್ನು ಕೂಡ ಕ್ರಾಮ್ವೆಲ್ ಮತಕ್ಕಾಗಿ ಹಿಂಸಿಸಲಿಲ್ಲ. ಯೆಹೂದಿಗಳಿದ್ದರೆ ವ್ಯಾಪಾರಗಾರರಿಗೆ ಅನುಕೂಲವೆಂಬ ದೃಷ್ಟಿಯಿಂದ ಅವರಲ್ಲಿ ಆದರವನ್ನೇ ತೋರಿದನು. ಈ ಬಗೆಯ ಆಡಳಿತದಲ್ಲಿ ತುಂಟರಿಗೆ ಅವಕಾಶವಿರಲಿಲ್ಲ. ಕ್ರಾಮ್ವೆಲ್ಲೆಂದರೆ ಅಂತಹ ಜನರಿಗೆ ಸಿಂಹಸ್ವಪ್ನದಂತಾಯಿತು. ನಾಟಕಶಾಲೆ, ಗೂಳಿಯಾಟ, ಹುಂಜದಕಾಳಗ, ಕುದುರೆಜೂಜು, ದೈವದೂಷಣ, ದ್ವಂದ್ವಕಾಳಗ ಮುಂತಾದವುಗಳನ್ನು ಕ್ರಾಮ್ವೆಲ್ ನಿಲ್ಲಿಸಿಬಿಟ್ಟನು.

ಹೊಸರೂಪದ ಆಡಳಿತದಪ್ರಕಾರ ಕರೆಸಬೇಕಾಗಿದ್ದ ಪಾರ್ಲಿಮೆಂಟ್ ಸಭೆಯನ್ನು ಕ್ರಾಮ್ವೆಲ್ 1654ರಲ್ಲಿ ಕರೆಸಿದನು. ಸೇರಿದ ಸಭಿಕರಲ್ಲಿ ಬಹುಭಾಗದವರು ಪ್ರೆಸ್ಬಿಟೇರಿಯನ್ನರಾಗಿಯೋ ಇಂಡಿಪೆಂಡೆಂಟ್ ಶಾಖೆಯವರಾಗಿಯೋ ಇದ್ದರು. ಸಭೆ ಸೇರಿದಕೂಡಲೆ ಸಭಿಕರು ತಾತ್ಕಾಲಿಕವಾಗಿ ಅವಶ್ಯವಾದ ಶಾಸನರಚನೆಗೆ ತೊಡಗದೆ ರಾಷ್ಟ್ರರೂಪದ ವಿಮರ್ಶೆಗೆ ತೊಡಗಿದರು. ಕ್ರಾಮ್ವೆಲ್ ಒರಟುತನವನ್ನು ತೋರಿ ರಾಷ್ಟ್ರರೂಪವನ್ನೆತ್ತಿ ವಾದಿಸಬೇಡಿರೆಂದು ಕೆಲವರನ್ನು ಸಭೆಯಿಂದ ಬಹಿಷ್ಕರಿಸಬೇಕಾಯಿತು. ಉಳಿದವರು ಸೈನ್ಯವನ್ನಿಳಿಸುವ ಯೋಚನೆಯನ್ನು ಮುಂದಿಟ್ಟುಕೊಂಡು ಚರ್ಚಿಸಲಾರಂಭಿಸಿದರು. ಆಗ ಕ್ರಾಮ್ವೆಲ್ ಸಭೆಯನ್ನು ಮುಕ್ತಾಯಗೊಳಿಸಿ ಸಭಿಕರನ್ನು ಚದರಿಸಿಬಿಟ್ಟನು. ಕ್ರಾಮ್ವೆಲ್ಲನ ನಡತೆಯಲ್ಲಿ ಅಸಮಾಧಾನ ತೋರಲು ಆಸ್ಪದವಾಯಿತು. ಗೋಪ್ಯವಾಗಿ ಅಡಗಿದ್ದ ರಾಜಪಕ್ಷದವರೂ ಇತರರೂ ಕ್ರಾಮ್ವೆಲ್ಲನ ಪ್ರಾಣವನ್ನು ತೆಗೆಯುವ ಪಿತೂರಿ ಕಟ್ಟಿದರು. ಒಂದು ಸ್ಥಲದಲ್ಲಿ ರಾಜಪಕ್ಷದವರು ಸಣ್ಣ ದಂಗೆಯನ್ನು ಎಬ್ಬಿಸಿದರು. ಆಗ ಕ್ರಾಮ್ವೆಲ್ ದಂಗೆಕೋರರನ್ನೂ ಪಿತೂರಿಗಾರರನ್ನೂ ದಂಡಿಸಿ ರಾಜ್ಯದ ವಿಭಾಗಗಳಿಗೆ ದಳಪತಿಗಳನ್ನೇ ಮುಖ್ಯಾಧಿಕಾರಿಗಳಾಗಿ ಏರ್ಪಡಿಸಿದನು. ಆಂಗ್ಲಿಕನ್ ಮತಗುರುಗಳು ಗುಮಾನಿಗೆ ಪಾತ್ರರಾದರು.

**ಪ್ರೊಟೆಕ್ಟೊರೇಟ್ ಪಾರ್ಲಿಮೆಂಟ್**

ಸ್ಪೈನಿನೊಡನೆ ಯುದ್ಧವೊದಗಿದಾಗ ಹೆಚ್ಚು ಹಣ ಬೇಕಾಗಿಬಂದು ಕ್ರಾಮ್ವೆಲ್ ತನ್ನ ಎರಡನೆ ಪಾರ್ಲಿಮೆಂಟ್ ಸಭೆಯನ್ನು ಕರೆಸಿದನು. ಆಗಿನ ಆಡಳಿತಕ್ಕೆ ವಿರೋಧಿಗಳಾಗಿದ್ದವರನೇಕರು ಸಭಿಕರಾಗಿ ಬಂದರು. ಅವರಲ್ಲಿ ನೂರುಜನರನ್ನು ಕ್ರಾಮ್ವೆಲ್ಲನೇ ಸಭೆಯಿಂದ ಹೊರಗಿಟ್ಟನು. ಉಳಿದ ಸಭಿಕರು ಹಣವನ್ನೇನೋ ಕೊಡಿಸಿದರು; ಆದರೆ ಆಡಳಿತದ ರೂಪದಲ್ಲಿ ಅತೃಪ್ತಿಯನ್ನು ಕಾಣಿಸಿ ರಾಜತ್ವವನ್ನು ಪುನಃ ಸ್ಥಾಪಿಸಬೇಕೆಂಬ ಆಸೆಯನ್ನು ಸೂಚಿಸಿದರು. ಕ್ರಾಮ್ವೆಲ್ಲನೇ ದೊರೆತನವನ್ನು ಸ್ವೀಕರಿಸಬೇಕೆಂದು

**ದೊರೆಯಾಗೆಂಬ ಅರ್ಜಿ**

**ಅರ್ಜಿ** (Humble Petition and Advice) ಮಾಡಿ ಶ್ರೀಮಂತಸಭೆಯೊಂದನ್ನು ರಚಿಸಬೇಕೆಂದರು. ಕ್ರಾಮ್ವೆಲ್ ದೊರೆತನಬೇಡವೆಂದುಹೇಳಿ ಶ್ರೀಮಂತಸಭೆಯನ್ನು ಹೊಸದಾಗಿ ರಚಿಸಿದನು. ಕೂಡಲೆ ಎರಡುಸಭೆಗಳಿಗೂ ವಿರೋಧಹುಟ್ಟಿ ವ್ಯಾಜ್ಯಗಳು ಹೆಚ್ಚಿದವು. ಬೇಜಾರುಪಟ್ಟ ಕ್ರಾಮ್ವೆಲ್ ಹಟಾತ್ತಾಗಿ ಪಾರ್ಲಿಮೆಂಟ್‌ಸಭೆಯನ್ನು ಮುಕ್ತಾಯಗೊಳಿಸಿದನು. ಸಭಾಮುಕ್ತಾಯವಾದ ಏಳು ತಿಂಗಳಲ್ಲಿ ಕ್ರಾಮ್ವೆಲ್ಲನೇ ಕಾಲವಶನಾದನು.*

**ರಿಚರ್ಡ್**

ಆಲಿವರ್ ಕ್ರಾಮ್ವೆಲ್ ತೀರಿಕೊಂಡಕೂಡಲೆ ಸೈನ್ಯಮುಖ್ಯರೂ ಇತರರೂ ಆತನ ಮಗ **ರಿಚರ್ಡ್‌ಕ್ರಾಮ್ವೆಲ್ಲನಿಗೆ ಪ್ರೊಟೆಕ್ಟರ್** ಪದವಿಯನ್ನು ಕಟ್ಟಿದರು. ರಿಚರ್ಡ್ ಬುದ್ಧಿವಂತನಾಗಿದ್ದನು; ಆದರೆ ತಂದೆಯ ಪ್ರತಾಪಪೌರುಷಗಳನ್ನು ಪಡೆದಿರಲಿಲ್ಲ. 1659ರಲ್ಲಿ ರಿಚರ್ಡ್ ಹೊಸಪಾರ್ಲಿಮೆಂಟನ್ನು ಕರೆಸಿದನು. ಸಭಿಕರಾಗಿ ಬಂದವರು ಅನೇಕಾಂಶಗಳನ್ನೆತ್ತಿಕೊಂಡು ಆಕ್ಷೇಪಗಳನ್ನೊಡ್ಡಿದರು. ಕ್ರಾಮ್ವೆಲ್ ಸತ್ತಬಳಿಕ ಸೇನಾಮುಖ್ಯರಲ್ಲಿ ಕಕ್ಷಿಗಳು ಬಲವಾಗಿದ್ದವು. ಒಂದು ಕಕ್ಷಿಯವರು ರಿಚರ್ಡನಿಗೆ ಬೆಂಬಲಕೊಟ್ಟು ಪಾರ್ಲಿಮೆಂಟನ್ನು ಮುಕ್ತಾಯಗೊಳಿಸಿದರು. **ಲ್ಯಾಂಬರ್ಟ್** (Lambert) ಎಂಬ ದಳಪತಿಯು ಪ್ರಬಲನಾಗಿದ್ದು ರಂಪ್‌ಸಭಿಕರನ್ನು ಪುನಃ ಕರೆಸಿ ಅವರ ಇಷ್ಟಪಟ್ಟಂತೆ ಆಡಳಿತ ನಡೆಯಬೇಕೆಂದನು. ಈ ವ್ಯಾಜ್ಯಗಳಲ್ಲಿ ಬೇಸರಪಟ್ಟಿದ್ದ ರಿಚರ್ಡ್ ಹಾಗೆಯೇ ಆಗಲೆಂದು ತನ್ನ ಪದವಿಗೆ ರಾಜಿನಾಮೆ ಕೊಟ್ಟುಬಿಟ್ಟನು.

**ಸೈನ್ಯದ ಒಡಕು**

ಲಂಡನ್ನಿನಲ್ಲಿ ಪ್ರಬಲರಾಗಿದ್ದವರು ಪುನಃ ಕಾಮನ್ವೆಲ್ತ್ ಸ್ಥಾಪನೆಗೆ ಸಿದ್ಧರಾದರು. ದಳಪತಿ ಲ್ಯಾಂಬರ್ಟ್ ತಾನು ಎರಡನೆ ಕ್ರಾಮ್ವೆಲ್ಲನಂತೆ ಆಗಲು ಯತ್ನಿಸಿದನು. ಅತ್ತ ಸ್ಕಾಟ್ಲೆಂಡಿನಲ್ಲಿದ್ದ **ದಳಪತಿ ಮಾಂಕನು** ಲ್ಯಾಂಬರ್ಟನ ಪಕ್ಷಕ್ಕೆ ವಿರೋಧಿಯಾಗಿ ಲಂಡನ್‌ಕಡೆ ಸೈನ್ಯಸಮೇತ ಹೊರಟನು; ನಡೆದ ದಾರಿಯಲ್ಲಿ ಜನರ ಮನೋಗತವನ್ನರಿತುಕೊಂಡನು; ಮಾಂಕನು ಲಂಡನ್ನನ್ನು ಸಮೀಪಿಸಿದಂತೆಲ್ಲ ಜನರು ಹೆಚ್ಚುಹೆಚ್ಚಾಗಿ ಆತನ ಪಕ್ಷವನ್ನು ಸೇರಿದರು. ಲ್ಯಾಂಬರ್ಟನ ಸೈನಿಕರೇ ಮಾಂಕನನ್ನು ಸೇರಿದರು. ಕಡೆಗೆ ಲ್ಯಾಂಬರ್ಟ್ ಮಾಂಕನಿಗೆ ವಶನಾದನು. ಲಂಡನ್ನಿಗೆ ಬಂದಕೂಡಲೆ ಮಾಂಕನು ಲಾಂಗ್ ಪಾರ್ಲಿಮೆಂಟನ್ನು ಉದ್ಧರಿಸಲು ರಂಪ್ ಸಭಿಕರನ್ನಲ್ಲದೆ ಪ್ರೈಡನ ಜಾಪಾಳಕ್ಕೆ ಸಿಕ್ಕಿದ್ದವರನ್ನೂ ಕರೆಸಿ ಸಭೆಸೇರಿಸಿ ಸ್ವಂತಸಂಕಲ್ಪದಿಂದಲೇ ಸಭಾ ಮುಕ್ತಾಯವಾಗುವಂತೆ ನೆರವೇರಿಸಿ

---

*ಸೆಪ್ಟೆಂಬರ್ 3ನೇ ತಾರೀಖಿನದಿನ ತನ್ನ ಭಾಗ್ಯದದಿನವೆಂಬ ವಿಚಿತ್ರಮೌಢ್ಯವಂಟಿತ್ತು ಈತನಿಗೆ. ಡನ್ಬಾರ್, ವೂರ್ಸ್ಟರ್ ಗೆಲುವುಗಳಾದುದು ಅಂದೇ. ಪಾರ್ಲಿಮೆಂಟನ್ನು ಕರೆಸಿದುದು ಅಂದೇ. ಕೊನೆಗೆ ಪ್ರಾಣಬಿಟ್ಟುದೂ ಅಂದೇ.

**ಹೊಸ ಪಾರ್ಲಿಮೆಂಟ್**

ಯಾವಬಗೆಯ ಅಡ್ಡಿಯೂ ಇಲ್ಲದೆ ಹೊಸ ಚುನಾವಣೆಗಳಾಗಿ **ಹೊಸದಾದ ಪಾರ್ಲಿಮೆಂಟ್‌ಸಭೆ** ಸೇರುವಂತೆ ಏರ್ಪಡಿಸಿದನು. ಹಾಗೆ ನೆರೆದ ಪಾರ್ಲಿಮೆಂಟ್ **ಕನ್ವೆನ್ಷನ್ ಪಾರ್ಲಿಮೆಂಟ್** (Convention Parliament) ಎನ್ನಿಸಿತು. ಹಾಗೆ ಸೇರಿದ ಸಭಿಕರು ಮಾಂಕನ ವರ್ತನೆಯನ್ನು ಮೆಚ್ಚಿ ಕೆಲವು ಷರತ್ತುಗಳಮೇಲೆ ಯುವರಾಜ ಚಾರ್ಲ್ಸ್‌ನನ್ನು ದೊರೆತನಕ್ಕೆ ಕರೆದು ರಾಜತ್ವವನ್ನು ಪುನಃ ಸ್ಥಾಪಿಸಿಬಿಟ್ಟರು.

**ಪ್ಯೂರಿಟನ್ನರ ವೈಪರೀತ್ಯ**

ಈರೀತಿಯಲ್ಲಿ 1640ರಲ್ಲಿ ಮೊದಲಾದ **ಲಾಂಗ್ ಪಾರ್ಲಿಮೆಂಟ್** ಸಭೆಯು ಕೊನೆಗಂಡಿತು. ತಪ್ಪಿಹೋಗಿದ್ದ ರಾಜತ್ವವು ಪುನಃ ಸ್ಥಾಪನೆಯಾಯಿತು. ರಾಜತ್ವದೊಂದಿಗೆ ಆಂಗ್ಲಿಕನ್‌ಮತವೂ ಪುನಃ ಬಂತು. ಪಾರ್ಲಿಮೆಂಟ್‌ಸಭೆಯ ಅಧಿಕಾರವೂ ಪುನಃ ತೋರುವಹಾಗಾಯಿತು. ಪ್ಯೂರಿಟನ್‌ಪಂಥದವರ ಪ್ರಾಬಲ್ಯವು ತಗ್ಗಿತು. ರಾಜವಧೆಯಿಂದ ಪುನಾರಾಜತ್ವಪ್ರಾಪ್ತಿಯವರೆಗೆ ಪ್ಯೂರಿಟನ್ನರದೇ ಪ್ರಾಬಲ್ಯ. ಮೂರ್ಖತನದಿಂದ ಅಕ್ರಮಗಳನ್ನು ನಡೆಸುತ್ತಲಿದ್ದ ಹಿರೇಚಾರ್ಲ್ಸ್‌ದೊರೆಗೆ ಪ್ರಬಲವಿರೋಧಿಗಳಾಗಿ ಮೊದಲಿಟ್ಟು ಪ್ಯೂರಿಟನ್ನರು ರಾಜತ್ವವನ್ನೇ ಕೊನೆಗಾಣಿಸಿ ಹೊಸರೀತಿಯ ಆಡಳಿತವನ್ನು ಸ್ಥಾಪಿಸಿದರು. ಅದನ್ನು **ಪ್ಯೂರಿಟನ್ ರೆವೊಲ್ಯೂಷನ್** (Puritan Revolution) ಎಂದು ಚರಿತ್ರೆಯಲ್ಲಿ ಕರೆಯುತ್ತಾರೆ. ಆಚಾರವಿಚಾರಗಳಲ್ಲಿ ಅತಿಶುದ್ಧಿಗಾಸೆಪಟ್ಟು ಅತಿನಮ್ರರೂ ಅತಿಭಕ್ತರೂ ಆಗಿ ಸಾಧುಸಂತರ ಬಳಗದಲ್ಲಿ ಸೇರತಕ್ಕವರು ರಾಜವಿರೋಧಿಗಳಾಗಿ ಅತ್ಯುಗ್ರರೂಪಿಗಳಾದರು. ಅವರ ಆಳಿಕೆಯಲ್ಲಿ ಜನಸಾಮಾನ್ಯರ ವಿನೋದಕ್ಕೆ ಆಸ್ಪದವೇ ಇಲ್ಲದಾಯಿತು. ಜೂಜಾಟಗಳನ್ನೂ ನಾಟಕಮಂದಿರಗಳನ್ನೂ ಉತ್ಸವಮೆರವಣಿಗೆಗಳನ್ನೂ ನಿಲ್ಲಿಸಿದ ಪ್ಯೂರಿಟನ್ನರ ಚಿತ್ತವೃತ್ತಿಯಲ್ಲಿ ವಿಚಿತ್ರವಾದ ವೈಪರೀತ್ಯಗಳು ತೋರಿಕೊಂಡವು. ಗೂಳಿಯಾಟವನ್ನು ನಿಲ್ಲಿಸಿದ ಪ್ಯೂರಿಟನ್ನರ ಮನಸ್ಸಿನಲ್ಲಿ "ಮೂಕಪ್ರಾಣಿಗೆ ಹಿಂಸೆಯಾಗುವುದೆಂಬ ಕನಿಕರವಿರಲಿಲ್ಲ, ಅದನ್ನು ಕಂಡು ಜನರು ವಿನೋದಗೊಳ್ಳುವುದರಲ್ಲಿ ಅಸಹನವಿತ್ತು." "ಭಗವಂತನೆದುರಿನಲ್ಲಿ ಮಣ್ಣುಮುಕ್ಕುವಷ್ಟು ದೈನ್ಯವನ್ನು ಸಾಧಿಸಿದವರು ತಮ್ಮ ರಾಜನ ಶಿರಸ್ಸನ್ನು ಕಾಲಿನಿಂದ ತುಳಿಯುವ ದರ್ಪಿಷ್ಠರಾದರು." ದೈವಭಕ್ತಿಯಲ್ಲಿ ಅಗ್ರಗಣ್ಯರಾಗಿ ಯತಿಗಳರಾಶಿಗೆ ಸೇರಿ ಅಹಿಂಸೆಯನ್ನೇ ಧರ್ಮವನ್ನಾಗಿ ಸ್ವೀಕರಿಸಿದವರು ಅವರಲ್ಲಿದ್ದರು. ತಾವು ಮಾತ್ರವೇ ಪುಣ್ಯಭಾಜನರೆಂಬ ವಿಶ್ವಾಸದಿಂದ ಇತರ ಮತಸ್ಥರನ್ನು ದ್ವೇಷಿಸಿ ಕಠೋರವರ್ತಿಗಳಾದವರೂ ಅವರಲ್ಲಿದ್ದರು. ಅವರ ಆಳಿಕೆಯು ಜನಸಾಮಾನ್ಯರಿಗೆ ಸಹಿಸದಾಯಿತು. ಅವರ ಆಳಿಕೆಯು ಸೈನ್ಯಬಲದಿಂದಲೇ ನಡೆಯಿತು; ಶಾಂತಿಯಿಂದ ನಡೆಯಲಿಲ್ಲ. ಆದ್ದರಿಂದ ಅವರ ಆಳಿಕೆಯನ್ನು "ಯತಿಗಳ ಆಳ್ವಿಕೆ" ಯೆಂದು ವ್ಯಂಗ್ಯವಾಗಿ ವರ್ಣಿಸುವುದುಂಟು. ವಾಸ್ತವವಾಗಿ ಕತ್ತಿಹಿರಿದು

ನಿಂತ ಯತಿಗಳ ಆಡಳಿತವಾಯಿತು. ಪ್ರತಾಪಶಾಲಿ ಕ್ರಾಮ್ವೆಲ್ ಬದುಕಿದ್ದವರೆಗೆ ಆಡಳಿತವಿತ್ತು ; ಆತನ ಸಾವಿನ ತರುವಾಯ ಆಡಳಿತ ಅಸ್ತವ್ಯಸ್ತವಾಗಿಹೋಯಿತು.

1649ರಿಂದ 1658ರವರೆಗಿನ ಕಾಲವನ್ನು ಆಲಿವರ್ ಕ್ರಾಮ್ವೆಲ್ಲನಕಾಲವೆಂದೇ ಕರೆಯಬೇಕು. ಇಂಗ್ಲಂಡಿನ ಮೇಲ್ಮೆಯನ್ನು ಕಟ್ಟಿದ ಮಹಾಪುರುಷರಲ್ಲಿ ಕ್ರಾಮ್ವೆಲ್ ಅಗ್ರಗಣ್ಯನು. ಸಮಕಾಲಿಕರು ಆತನನ್ನು ಕಂಡು ಅಂಜುತ್ತಿದ್ದರು; ವಿರೋಧಿಗಳಿಗೆ ರಾವಣಾಸುರನಹಾಗೆಯೇ ಇತ್ತು. ಆತನು ಕಾಲವಶನಾದಾಗ ರಾಜಪಕ್ಷದವರಿಗೆ ತಲೆಮೇಲಿದ್ದ ಬೆಟ್ಟ ಕರಗಿದಹಾಗಾಯಿತು. ಆದರೆ ಆ ಹನ್ನೊಂದುವರ್ಷಕಾಲದಲ್ಲಿ ಇಂಗ್ಲಂಡಿನ ಮೇಲ್ಮೆಯನ್ನು ಸಾಧಿಸಿದ **ಕ್ರಾಮ್ವೆಲ್** ಮತ್ತು **ಬ್ಲೇಕ್** ಇಬ್ಬರೂ ಇಂಗ್ಲಿಷರಿಗೆ ಚಿರಸ್ಮರಣೀಯರಾಗಿದ್ದಾರೆ.

# ಎರಡನೆ ಚಾರ್ಲ್ಸ್ (1660—1685)

ಯುವರಾಜ 1649 ; ಬ್ರಗಾನ್ಸ ಕಥರೀನಳೊಡನೆ ವಿವಾಹ 1662

**ಸಮಕಾಲಿಕ ಪ್ರಭುಗಳು**

| ಹಾಲಂಡ್ | ಫ್ರಾನ್ಸ್ | ಸ್ಪೈನ್ |
|---|---|---|
| ಆರೆಂಜಿನ 2ನೆ ವಿಲಿಯಂ | 14ನೆ ಲೂಯಿ<br>1643–1715 | 4ನೆ ಫಿಲಿಪ್<br>1621—1665<br>2ನೆ ಚಾರ್ಲ್ಸ್<br>1665—1700 |

ಷಾಹಿದ್ ಎನಿಸಿಕೊಂಡ ಹಿರೇ ಚಾರ್ಲ್ಸ್ ದೊರೆಯ ಹಿರೇ ಮಗನಾದ ಚಾರ್ಲ್ಸ್ ಯುವರಾಜನಾಗಿದ್ದಾಗಲೇ ತಂದೆಯ ಕಷ್ಟಗಳನ್ನು ತಿಳಿದಿದ್ದವನು. ತಾನೂ ನಾನಾ ತೊಂದರೆಗಳಲ್ಲಿ ಬಿದ್ದು ತಲೆಮರೆಸಿಕೊಂಡು ಅಲೆದಾಡಿದವನು. ವೂರ್ಸ್ಟರ್ ಕದನದ ಬಳಿಕ ದೇಶಭ್ರಷ್ಟನಾಗಿ ಪರಿವಾರವೆಂಬುದಿಲ್ಲದೆ ಹಣವನ್ನು ಕಾಣದೆ ಕಡೆಗೆ ಫ್ರಾನ್ಸಿನ ಉತ್ತರದಲ್ಲಿ ಎಲ್ಲಿಯೋ ಅಡಗಿದ್ದನು. ಕ್ರಾಮ್ವೆಲ್ ಸತ್ತ ಬಳಿಕ ಸ್ವಲ್ಪಸ್ವಲ್ಪವಾಗಿ ಬೆಳೆದ ಆತನ ಆಸೆಯು 1660ರಲ್ಲಿ ಪೂರ್ತಿಯಾಯಿತು. ದಳಪತಿ ಮಾಂಕನು ಸೂಚಿಸಿದ ಷರತ್ತುಗಳಿಗೆ ಚಾರ್ಲ್ಸ್ ಒಪ್ಪಿ ಅದರಂತೆ ಪ್ರಕಟನೆ ಹೊರಡಿಸಿ ಇಂಗ್ಲಂಡಿಗೆ ಬಂದನು. ಆಗ ಅಭೂತಪೂರ್ವವೆನಿಸಿದ ಮೆರವಣಿಗೆ ಉತ್ಸವಗಳು ನಡೆದು ಇಂಗ್ಲಂಡಿನ ಜನರು ಮೈಮರೆತು ನಲಿದಾಡಿದರು. ಪ್ಯೂರಿಟನ್ನರ ಆಡಳಿತ ಮುಗಿಯಿತೆಂದು ಜನಸಾಮಾನ್ಯರು ಪಟ್ಟ ಸಂತೋಷಕ್ಕೆ ಮೇರೆಯೇ ಇಲ್ಲ. ಅಲ್ಲಾವುದೀನ್ ಖಿಲ್ಜಿ ಸತ್ತು ಮುಬಾರಕ್ ಖಿಲ್ಜಿಯು ಸುಲ್ತಾನನಾದಾಗ ದಿಲ್ಲಿಯ ಜನರಾಡಿದಂತೆ ಲಂಡನ್ನಿನ ಜನರಾಡಿದರು. 2ನೆ ಚಾರ್ಲ್ಸ್ ಪಟ್ಟವೇರಿದ ವೇಳೆಯಲ್ಲಿ ಜನರು ತೋರಿದ ಅತ್ಯುತ್ಸಾಹಕ್ಕೆ ರಾಜಭಕ್ತಿಮಾತ್ರವೇ ಕಾರಣವಲ್ಲ. ಅದುವರೆಗೂ ಪ್ಯೂರಿಟನ್ನರ ಆಡಳಿತದಲ್ಲಿ ಪಟ್ಟಿದ್ದ ಬೇಸರವು ಪ್ರಬಲ ಕಾರಣವಾಗಿತ್ತು.

**ರಾಜತ್ವದ ಸ್ಥಾಪನೆ**

ಈ 2ನೆ ಚಾರ್ಲ್ಸ್ ದೊರೆಗೆ ಅಸಾಧಾರಣವಾದ ಜಾಣತನವೂ ಬುದ್ಧಿಶಕ್ತಿಯೂ ಇತ್ತು. ಮಾತಿನ ಚಾತುರ್ಯದಲ್ಲಿ ಅತಿಪ್ರವೀಣ. ಸದಾ ಹಾಸ್ಯಕುಚೋದ್ಯಗಳನ್ನು ಮಾಡುತ್ತಲಿದ್ದು ವಿನೋದಪ್ರಿಯನೆನಿಸಿದವನು. ಮನಸ್ತಾಪತೋರಬಹುದಾದ ಪ್ರಸಂಗ ತೋರಿಕೊಂಡೊಡನೆ ಏನಾದರೂ ಕುಚೋದ್ಯದ ಮಾತನಾಡಿ ಮಾತುಮರೆಸತಕ್ಕವನು. ವಿನೋದಪ್ರೀತಿಗೆ ಸಮಾನವಾದಷ್ಟು ಸೋಮಾರಿತನವೂ

**2ನೆ ಚಾರ್ಲ್ಸ್ ಸ್ವಭಾವ**

ಇತ್ತು. ಈತನು ತಿಳಿಯಲಾಗದ ವಿಷಯವಿಲ್ಲವೆನ್ನುವಷ್ಟು ಚುರುಕುಬುದ್ಧಿಯಿತ್ತು; ವಿನೋದದಲ್ಲಿಯೂ ಲೋಲುಪ್ತಿಯಲ್ಲಿಯೂ ಕಾಲಕಳೆಯುತ್ತಿದ್ದುದರಿಂದ ಸೋಮಾರಿ ತನದಲ್ಲಿ ಆ ಚುರುಕು ಅಡಗಿದಂತಿತ್ತು. ಈ ರಾಜನೂ ರಾಜಾಧಿಕಾರವೇ ಸರ್ವ ಶ್ರೇಷ್ಠವಾಗಿರತಕ್ಕುದೆಂಬ ಅಭಿಲಾಷೆಯನ್ನು ಅಂತರಂಗದಲ್ಲಿ ಭದ್ರಪಡಿಸಿಕೊಂಡಿದ್ದನು. ರೋಮನ್ ಕ್ಯಾಥಲಿಕ್ ಮತದಲ್ಲಿ ಗೋಪ್ಯವಾಗಿ ಭಕ್ತಿವಿಶ್ವಾಸಗಳನ್ನು ಬೆಳೆಸಿದ್ದನು. ಆದರೆ ತನ್ನ ಅಂತರಂಗವನ್ನು ಮರೆಮಾಚಿ ಉಪಾಯದಿಂದ ತನ್ನ ಉದ್ದೇಶವನ್ನು ಸಾಧಿಸುತ್ತಿದ್ದನು. ತಂದೆಯ ಗಾಂಭೀರ್ಯವೂ ಇಲ್ಲ, ಮೂರ್ಖ ತನವೂ ಇಲ್ಲ; ತಂದೆಯಲ್ಲಿ ಕಾಣದಿದ್ದ ಯುಕ್ತಿಯಿತ್ತು.

ತನಗೆ ಪಟ್ಟ ಬರುವಂತೆ ಯತ್ನಿಸಿದ್ದ ದಳಪತಿ ಮಾಂಕನಿಗೆ ದೊರೆ ಶ್ರೀಮಂತ ಪದವಿಯನ್ನು ಕೊಟ್ಟನು. ದೇಶಾಂತರವಾಸವನ್ನು ಕೊನೆಮಾಡಿ ಸ್ವದೇಶಕ್ಕೆ ಹಿಂತಿರುಗಿಬಂದ ರಾಜಭಕ್ತರಲ್ಲಿ ಎಡ್ವರ್ಡ್ ಹೈಡ್ ಎಂಬಾತನನ್ನು ತನ್ನ ಮಂತ್ರಿಯಾಗಿಟ್ಟುಕೊಂಡನು. ಆತನು **ಕ್ಲಾರೆಂಡನ್ನಿನ ಅರ್ಲ್** (Earl of Clarendon) ಎಂಬ ಬಿರುದನ್ನು ಪಡೆದು ಪ್ರಸಿದ್ಧನಾದನು. ಈರೀತಿ ಮಂತ್ರಿ ತನಕ್ಕೆ ಯೋಗ್ಯನಾದಾತನನ್ನು ಗೊತ್ತುಮಾಡಿದ ತರುವಾಯ ದೊರೆ ತಾನು ಕೊಟ್ಟ ಪ್ರಕಟನೆಯ ಅಂಶಗಳನ್ನು ಆಚರಣೆಗೆ ತರುವ ಕೆಲಸವನ್ನು ಪಾರ್ಲಿಮೆಂಟಿಗೆ ಬಿಟ್ಟುಕೊಟ್ಟು ತಾನು ಯಾವ ಗೋಜಿಗೂ ಬಾರದವನಂತೆ ಇದ್ದುಬಿಟ್ಟನು. ಫ್ರಾನ್ಸ್‌ದೊರೆಯ ಸ್ನೇಹವನ್ನಲ್ಲದೆ ಇತರ ರಾಜರ ಸ್ನೇಹವನ್ನೂ ಸಂಪಾದಿಸಿಕೊಂಡು "ಪುನಃ ನನಗೆ ಅಲೆದಾಟ ಬೇಕಾಗಿಲ್ಲ"ವೆನ್ನುತ್ತಿದ್ದನು.

**ಮಂತ್ರಿ ಕ್ಲಾರೆಂಡನ್**

ದಳಪತಿ ಮಾಂಕನು ಕರೆಸಿದ ಪಾರ್ಲಿಮೆಂಟ್ ಸಭೆ ರಾಜತ್ವವನ್ನು ಪುನಃ ಸ್ಥಾಪಿಸಿದ ತರುವಾಯ ಆಡಳಿತದರೀತಿಯನ್ನೂ ಗೊತ್ತುಪಡಿಸಿತು. ರಾಜನು ಪ್ರಕಟನೆಯಲ್ಲಿ ಸರ್ವರಿಗೂ ಕ್ಷಮೆಯನ್ನುನೀಡಿ ಗತವೃತ್ತಾಂತವನ್ನು ಮರೆಯುವುದಾಗಿ ವಾಗ್ದಾನಮಾಡಿದ್ದನು. ರಾಜವಿರೋಧಿಗಳಾಗಿದ್ದವರಿಗೆ ಅಭಯದಾನ ಅದು. ಕನ್ವೆನ್ಷನ್ ಪಾರ್ಲಿಮೆಂಟಿನವರು ಆ ಅಂಶವನ್ನೆತ್ತಿಕೊಂಡು ಬಹುಭಾಗವಾಗಿ ಕ್ಷಮೆಯನ್ನು ಒಪ್ಪಿದಾಗ್ಯೂ ಕೆಲವರನ್ನು ಮಾತ್ರ ಬಿಡಲಿಲ್ಲ. ರಾಜಹಂತಕರೆನಿಸಿದ್ದವರಲ್ಲಿ ಇನ್ನೂ ಬದುಕಿದ್ದ 13ಮಂದಿಗೆ ಶಿರಚ್ಛೇದನವಾಯಿತು; ಬೇರೆ 25ಮಂದಿಗೆ ಆಜೀವವಾದ ಸೆರೆಯಾಯಿತು. ಕ್ರಾಮ್ವೆಲ್ಲನ ಶವವನ್ನು ಗೋರಿಯಿಂದತೆಗೆಸಿ ಗಲ್ಲಿಗೆಹಾಕಿಸಿ ಆ ಬಳಿಕ ಅಲ್ಲಿಯೇ ಹೂಳಿಸಿದ್ದೂ ಆಯಿತು. ಸಭಿಕರಿಗೆ ರಾಜಭಕ್ತಿಯು ಅಷ್ಟು ಬಲವಾಗಿತ್ತು. ದಳಪತಿ ಮಾಂಕನ ಸೈನ್ಯಕ್ಕೆ ಬಾಕಿಯಾಗಿದ್ದ ಸಂಬಳಗಳನ್ನು ಸಲ್ಲಿಸುವುದಾಗಿ ರಾಜನು ವಾಗ್ದಾನಮಾಡಿದ್ದನು. ಪಾರ್ಲಿಮೆಂಟಿನವರು ಅದನ್ನು

**ಪ್ರಕಟನೆಯ ವಾಗ್ದಾನಗಳು**

ನೆರವೇರಿಸಿದರು. ಕ್ರಾಮ್ವೆಲ್ ಕಟ್ಟಿದ್ದ ಸೇನಾಬಲವು ಇದಕ್ಕೆ ಮೊದಲೇ ಕಡಿಮೆಯಾಗಿತ್ತು; ಉಳಿದಿದ್ದುದು ಇನ್ನೂ ಕಡಿಮೆಯಾಗಿ ಎರಡು ಸಣ್ಣದಳಗಳುಮಾತ್ರ ಉಳಿದವು. ಈ ಎರಡಂಶಗಳನ್ನು ನಿರ್ವಹಿಸಿದ ಆ ಪಾರ್ಲಿಮೆಂಟ್‌ಸಭಿಕರು ಇತರ ಅಂಶಗಳನ್ನು ತೃಪ್ತಿಕರವಾಗಿ ನಡೆಸಲಾರದೆಹೋದರು. ಯುದ್ಧಮೊದಲಾದಕಾಲದಿಂದ ಭೂಮಿಗಳ ಆಸ್ತಿಪಾಸ್ತಿಗಳು ಕೈಯಿಂದಕೈಗೆ ಬದಲಾಗಿದ್ದವು. ಆ ಆಸ್ತಿಗಳನ್ನು ಇತರರು ನ್ಯಾಯವಾಗಿ ಕೊಂಡುಕೊಂಡಿದ್ದರು. ಇವುಗಳವಿಷಯದಲ್ಲಿ ಎಲ್ಲರಿಗೂ ಸಮಾಧಾನವಾಗಿ ಇತ್ಯರ್ಥಗೊಳಿಸುವುದು ಅಸಾಧ್ಯವಾಯಿತು. ಐರ್ಲಂಡಿನಲ್ಲಿ ಅನೇಕ ರಾಜಭಕ್ತರೂ ರೋಮನ್‌ಕ್ಯಾಥಲಿಕ್ಕರೂ ಪಟ್ಟಿದ್ದ ನಷ್ಟವನ್ನು ಸರಿಪಡಿಸಲಾಗಲೇ ಇಲ್ಲ. ಐರಿಷರಿಗೆ ಅನ್ಯಾಯವೇ ಶಾಶ್ವತವಾಯಿತು. ಅದನ್ನು ಐರ್ಲಂಡಿನ ವೃತ್ತಾಂತದಲ್ಲಿ ಪುನಃ ಕಾಣಬೇಕಾಗುವುದು. ಪ್ರಕಟನೆಯಲ್ಲಿ ದೊರೆ ಮತ್ತೊಂದು ದುಸ್ಸಾಧ್ಯವಾದ ಮಾತನ್ನೂ ಕೊಟ್ಟಿದ್ದನು. ಇಷ್ಟವಾದ ಮತಶಾಖೆಯನ್ನು ಸೇರಿಕೊಂಡಿರುವ ಸ್ವಾತಂತ್ರ್ಯವನ್ನು ಎಲ್ಲರಿಗೂ ಕೊಡಿಸಲಾಗುವುದೆಂಬ ಆ ಅಂಶವನ್ನು ಚರ್ಚಿಗಿಟ್ಟುಕೊಂಡಾಗ ಗೊಂದಲವಾಗಿ **ಕನ್ವೆನ್ಷನ್ ಪಾರ್ಲಿಮೆಂಟ್‌ಸಭೆ ಮುಕ್ತಾಯವಾಗಬೇಕಾಯಿತು.**

ಆದರೆ ಕನ್ವೆನ್ಷನ್‌ಸಭೆಯವರು ವಿಸ್ತಾರವಾದ ಕೆಲಸಕಾರ್ಯಗಳನ್ನು ನಡೆಸಿದ್ದರು. ಕಾಮನ್ವೆಲ್ತ್ ಮತ್ತು ಪ್ರೊಟೆಕ್ಟೊರೇಟ್ ಎಂಬ ವ್ಯವಸ್ಥೆಯ ಲಕ್ಷಣಗಳೆಲ್ಲವನ್ನೂ ಬದಲಾಯಿಸಿದರು. ಲಾಂಗ್‌ಪಾರ್ಲಿಮೆಂಟಿನವರು 1640-1641ರಲ್ಲಿ ಮಾಡಿದ್ದ ಶಾಸನಗಳನ್ನು ಕಾಪಾಡಿಟ್ಟು ಕಾಮನ್ವೆಲ್ತ್‌ಕಾಲದಲ್ಲಿ ನಡೆದಿದ್ದ ನ್ಯಾವಿಗೇಷನ್‌ಕಾನೂನು ಮುಂತಾದ ಕೆಲವು ಏರ್ಪಾಟುಗಳನ್ನು ರಕ್ಷಿಸಿಕೊಂಡರು.

**ಸಮಾಧಾನದ ಏರ್ಪಾಟು** ಸ್ಕಾಟ್ಲೆಂಡ್ ಮತ್ತು ಐರ್ಲಂಡ್‌ಗಳಲ್ಲಿ ಹಿಂದಿನ ಆಡಳಿತದರೀತಿಯನ್ನೇ ಪುನಃ ನೆಲೆಗೊಳಿಸಿದರು. ರಾಜತ್ವವನ್ನು ಸ್ಥಾಪಿಸಿದವರು ಪಾರ್ಲಿಮೆಂಟಿನಪ್ರಾಬಲ್ಯವನ್ನೂ ಸ್ಥಾಪಿಸಿದರು. ಹಣದವಸೂಲಿಯಲ್ಲಿ ಅಕ್ರಮಗಳಿಗೆ ಅವಕಾಶವಿಲ್ಲದಂತೆ ದೊರೆಯ ವೆಚ್ಚಕ್ಕೆ ತಕ್ಕಷ್ಟು ಆದಾಯವನ್ನು ಗೊತ್ತುಮಾಡಿದರು. ಆದರೆ ಮತವಿಷಯದಲ್ಲಿಮಾತ್ರ ವ್ಯವಸ್ಥೆಮಾಡಲಾರದೆ ಹೋದರು.

1661ರಲ್ಲಿ ಕನ್ವೆನ್ಷನ್‌ಪಾರ್ಲಿಮೆಂಟ್‌ಸಭೆಯು ಮುಕ್ತಾಯವಾಯಿತು. ಅತೃಪ್ತಿಗೊಂಡಿದ್ದ ರಾಜಪಕ್ಷದವರು ಸಭಿಕರ ಕಾರ್ಯಕಲಾಪಗಳನ್ನು ನಿಂದಿಸುತ್ತಿದ್ದರು. ಜನರಲ್ಲಿ ರಾಜಭಕ್ತಿಯು ವಿಪರೀತವಾಗುತ್ತ ಪ್ಯೂರಿಟನ್ನರಲ್ಲಿ ಅಸಹನವು ಹೆಚ್ಚುತ್ತಿತ್ತು. ಕಾಮನ್ವೆಲ್ತ್‌ಕಾಲದ ಚರ್ಚಿನ ಆಡಳಿತದಲ್ಲಿ ಅನೇಕ ಪ್ಯೂರಿಟನ್ನರಿಗೆ ಪುರೋಹಿತರ ಹುದ್ದೆಗಳು ದೊರಕಿದ್ದವು. ಅವರನ್ನು ಕಂಡು ರಾಜಭಕ್ತರು ಸಹಿಸಲಿಲ್ಲ. ಹೊಸದಾಗಿ 1661ರಲ್ಲಿ ನೆರೆದ ಪಾರ್ಲಿಮೆಂಟ್‌ಸಭೆಯಲ್ಲಿ ಕವೆಲಿಯರ್‌ಪಕ್ಷದವರು ಅತಿ ಪ್ರಬಲರಾದರು. ಆದ್ದರಿಂದ ಅದಕ್ಕೆ **ಕವೆಲಿಯರ್ ಪಾರ್ಲಿಮೆಂಟ್** (Cavalier

Parliament) ಎಂಬ ಹೆಸರು. ಪ್ಯೂರಿಟನ್ ಪಂಥದವರನ್ನು ದ್ವೇಷಿಸುತ್ತಿದ್ದ ಆ ಸಭಿಕರು ರಾಜನ ವಾಗ್ದಾನವನ್ನು ಒಪ್ಪಿಕೊಳ್ಳಲಿಲ್ಲ. ಆ ಪಂಥದವರಿಗೆ ಹಿಂಸೆ ಕೊಡುವಂತಹ ಕಾನೂನುಗಳನ್ನು ರಚಿಸಿದರು. ಪಟ್ಟಣದ ಸಭೆಗಳಲ್ಲಿದ್ದವರೆಲ್ಲರೂ ಆಂಗ್ಲಿಕನ್ ಚರ್ಚಿನ ಸಂಪ್ರದಾಯಕ್ಕೆ ಒಗ್ಗಿರತಕ್ಕುದೆಂದು **ಕಾರ್ಪೊರೇಷನ್ ಆಕ್ಟ್** (Corporation Act) ಆಯಿತು. ಪೌರಸಭೆಗಳಲ್ಲಿದ್ದ ಪ್ಯೂರಿಟನ್ನರಿಗೆ ಸಭಿಕರಾಗಿರಲು ಅನರ್ಹತೆಯುಂಟಾದಂತೆ ಆಯಿತು. 1662ರಲ್ಲಿ **ಯೂನಿಫಾರ್ಮಿಟಿ ಕಾನೂನ್** (Uniformity Act) ಎಂಬುದು ರೂಪಗೊಂಡಿತು. ಆಂಗ್ಲಿಕನ್ ಪಂಥದ ಪ್ರಾರ್ಥನಾಪುಸ್ತಕದ ಉಪಯೋಗವನ್ನು ಎಲ್ಲೆಲ್ಲಿಯೂ ಬಲವಂತಗೊಳಿಸುವುದು ಆ ಕಾನೂನಿನ ಉದ್ದೇಶ. ಪುಸ್ತಕದ ಪ್ರಾರ್ಥನೆಗೆ ವಿರೋಧಿಗಳಾಗಿದ್ದ ಪ್ಯೂರಿಟನ್ ಪುರೋಹಿತರಿಗೆ ಬಂತು ಕಷ್ಟ. ಅವರಿಗೆ ಬಿಷಪ್ಪರ ಅಧಿಕಾರ ಬೇಡವೆನಿಸಿತ್ತಲ್ಲವೆ! ಪುರೋಹಿತರೆಲ್ಲರೂ ಬಿಷಪ್ಪರ ಹಸ್ತಸ್ಪರ್ಶದಿಂದ ದೀಕ್ಷೆವಹಿಸಿದವರೇ ಆಗಿರಬೇಕೆಂಬ ನಿರ್ಬಂಧವೂ ತೋರಿತು. ಉದ್ಯೋಗದಲ್ಲಿದ್ದ ಪ್ಯೂರಿಟನ್ನರನೇಕರು ಉದ್ಯೋಗಗಳನ್ನು ಬಿಟ್ಟುಕೊಟ್ಟರು. ಆಂಗ್ಲಿಕನ್ ಸಂಪ್ರದಾಯಗಳಿಗೊಡಂಬಡದೆ ಅವರು ತಮ್ಮ ಪ್ರಾರ್ಥನೆ ಮುಂತಾದುವನ್ನು ಪ್ರತ್ಯೇಕವಾಗಿ ನಡೆಸಿಕೊಳ್ಳಲು ತೊಡಗಿದರು. ಪ್ಯೂರಿಟನ್‌ಪಾದ್ರಿಗಳು ಪ್ರತ್ಯೇಕವಾಗಿ ಮತಾಚಾರಗಳನ್ನು ನಡೆಸಿ ಶಿಷ್ಯವೃಂದಗಳನ್ನು ಸಂಪಾದಿಸದಂತೆ 1664ರಲ್ಲಿ **ಕಾನ್ವೆಂಟಿಕಲ್ ಆಕ್ಟ್** (Conventicle Act) ಎಂಬುದು ರಚನೆಯಾಯಿತು. ಅದರಿಂದ ಆಂಗ್ಲಿಕನ್ ಸಂಪ್ರದಾಯಗಳಿಗೆ ಭಿನ್ನವಾದರೀತಿಯಲ್ಲಿ ಮತಾಚಾರಗಳನ್ನು ನಡೆಸಿಕೊಳ್ಳುವವರು ಐವರಿಗಿಂತ ಹೆಚ್ಚಾಗಿ ಒಂದೆಡೆಯಲ್ಲಿ ಸೇರುವುದು ಅಪರಾಧವೆನಿಸಿತು. 1665ರಲ್ಲಿ **5ಮೈಲಿ ಕಾನೂನು** (Five Mile Act) ಎಂಬುದೂ ಆಯಿತು. ಉದ್ಯೋಗಭ್ರಷ್ಟರಾದ ಪ್ಯೂರಿಟನ್ ಪಾದ್ರಿಗಳು ತಾವಿದ್ದ ಊರಿಂದ ಐದುಮೈಲಿಗಳಹೊರಗೇ ಇರಬೇಕಾಯಿತು. ಅನ್ಯಾಯದ ಹಿಂಸೆಗೆ ಸಿಕ್ಕಿದ ಪ್ಯೂರಿಟನ್ ಮತಸ್ಥರು ಈ *ಕಾನೂನುಗಳನ್ನು ಉಲ್ಲಂಘಿಸಿ ವರ್ಷಗಟ್ಟಲೆ ಕಾರಾಗೃಹವಾಸವನ್ನು ಅನುಭವಿಸಿದರು.

**ಆಂಗ್ಲಿಕನ್ನರ ವೈಪರೀತ್ಯ**

ಹಿಂದೆ ಆರ್ಚ್‌ಬಿಷಪ್ ಲಾಡನು ಯಾವ ಕೆಲಸಕ್ಕೆ ತೊಡಗಿ ಪಾರ್ಲಿಮೆಂಟಿನ ಆಗ್ರಹಕ್ಕೆ ಗುರಿಯಾಗಿ ತಲೆಯನ್ನೊಪ್ಪಿಸಿದನೋ ಅದೇ ಕೆಲಸವನ್ನೇ ಪಾರ್ಲಿಮೆಂಟಿನವರು ಕ್ರೌರ್ಯದಿಂದ ನಿರ್ವಹಿಸಿಬಿಟ್ಟರು. ಕಾಲವೈಪರೀತ್ಯ! ಪ್ಯೂರಿಟನ್ನರೆಂದರೆ ಪಾರ್ಲಿಮೆಂಟಿಗೆ ದ್ವೇಷ. ಆ ದ್ವೇಷದಿಂದ ರಾಜಭಕ್ತಿಯಲ್ಲಿ ವೈಪರೀತ್ಯ. ಹಿರೇ

*ಈ ಕಾನೂನುಗಳೆಲ್ಲಕ್ಕೂ ಒಟ್ಟಿಗೆ ಕ್ಲಾರೆಂಡನ್ ಕೋಡ್ (Clarendon Code) ಎಂಬ ಹೆಸರು ರೂಢಿ. ಕಾನೂನುಗಳಿಗೆ ಸಿಕ್ಕಿಕೊಂಡು ಬಹಿಷ್ಕೃತರಾದವರಿಗೆ ನಾನ್‌ಕನ್‌ಫಾರ್ಮಿಸ್ಟ್ ಮತ್ತು ಡಿಸ್ಸೆಂಟರ್ ಎಂಬ ಹೆಸರು ಕಾಲಕ್ರಮದಲ್ಲಿ ರೂಢಿಯಾಯಿತು.

ಚಾರ್ಲ್ಸ್‌ದೊರೆಯನ್ನು ಪೂಜ್ಯಯತಿಯೆಂದು ಭಾವಿಸಿ ಆತನ ಹೆಸರಿನಲ್ಲಿ ಚರ್ಚುಗಳನ್ನು ಕಟ್ಟಿಸಿದರು. ರಾಜನು ದೈವದತ್ತಾಧಿಕಾರವುಳ್ಳವನೆಂದೂ

**ಪ್ಯೂರಿಟನ್ನರಿಗೆ ಹಿಂಸೆ**

ರಾಜವಿರೋಧವು ಪಾಪಕರವೆಂದೂ ಪುರೋಹಿತರು ಉಪದೇಶ ಮಾಡಲಾರಂಭಿಸಿದರು. ಪ್ಯೂರಿಟನ್ನರನ್ನು ರಾಜನು ಕ್ಷಮಿಸಿದರೂ ಪ್ರಜೆಗಳು ಕ್ಷಮಿಸದೆ ಹಿಯ್ಯಾಳಿಸಿ ನಾನಾಹಿಂಸೆಗಳಿಗೆ ಗುರಿಮಾಡಿದರು. ಅದರ ಪರಿಣಾಮವಾಗಿ ಪ್ಯೂರಿಟನ್‌ಶಾಖೆಗಳವರು ಪ್ರತ್ಯೇಕರಾಗಿಯೇ ಉಳಿದರು. ಹಳೆಯ ಹೆಸರುಗಳು ಹೋಗಿ ಹೊಸಹೆಸರುಗಳು (Non-conformists) ಉಂಟಾದವು. ಆಗ ದೇಶಾಂತರಹೊರಡುವುದು ಅವರಿಗೆ ಒಂದು ದಾರಿಯಾಯಿತು.

ಒಳಾಡಳಿತದಲ್ಲಿ ಮಂತ್ರಿಗೂ ಪಾರ್ಲಿಮೆಂಟಿಗೂ ಅಧಿಕಾರಬಿಟ್ಟುಕೊಟ್ಟವನಂತೆ ಕಾಣಿಸುತ್ತಿದ್ದ ದೊರೆ ಅನ್ಯರಾಷ್ಟ್ರಗಳ ಸಂಬಂಧಗಳನ್ನು ತಾನೇ ನಡೆಸುತ್ತಿದ್ದನು. ಫ್ರಾನ್ಸಿಗೆ ದೊರೆಯಾಗಿದ್ದ **14ನೆ ಲೂಯಿಯ** ಸ್ನೇಹ ಚಾರ್ಲ್ಸ್‌ಗೆ ಅಗತ್ಯವೆನಿಸಿತ್ತು. ಆದ್ದರಿಂದ ಪಟ್ಟಕ್ಕೆಬಂದಕೂಡಲೆ ತನ್ನ ತಂಗಿ **ಹೆನ್ರಿಯಟ ಮೇರಿಯ** (Henrietta Maria) ಎಂಬಾಕೆಯನ್ನು ಆ ದೊರೆಯತಮ್ಮನಿಗೆ ಕೊಟ್ಟು ಮದುವೆನಡೆಸಿದನು. ಕ್ರಾಮ್ವೆಲ್ ಸಂಪಾದಿಸಿದ್ದ ಡಂಕರ್ಕ್‌ಪಟ್ಟಣವನ್ನು ಆ ರಾಜ

**ರಾಜನ ಸಂಬಂಧಗಳು**

ನಿಗೆ ಮಾರಿಬಿಟ್ಟನು. ಆತನ ಇಷ್ಟವನ್ನನುಸರಿಸಿ ತಾನು ಪೋರ್ಚುಗಲ್‌ದೊರೆಯ ತಂಗಿ **ಕಥರೀನ್** (Catharine of Braganza) ಎಂಬಾಕೆಯನ್ನು ಮದುವೆಮಾಡಿಕೊಂಡನು. ಹಿಂದೆ 2ನೆ ಫಿಲಿಪ್ಪನ ಆಕ್ರಮಣಕ್ಕೆ ಸಿಕ್ಕಿದ್ದ ಪೋರ್ಚುಗಲ್ ರಾಜ್ಯವು 1640ರಲ್ಲಿ ಸ್ವತಂತ್ರವಾಗಿ ಫ್ರಾನ್ಸಿನ ಸ್ನೇಹದಿಂದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡಿತ್ತು. ಸ್ಪೈನ್ ರಾಜ್ಯವನ್ನು ದುರ್ಬಲಗೊಳಿಸುವುದು ಫರಾನ್ಸೀ ಉದ್ದೇಶ. ಪೋರ್ಚುಗೀಸರು ಅಳಿಯನಿಗೆ ಮರ್ಯಾದೆ ಮಾಡುತ್ತ ಹೇರಳವಾದ ಹಣವನ್ನಲ್ಲದೆ **ಟಾಂಜಿಯರ್**(Tangier)ಮತ್ತು **ಮುಂಬಯಿ** (Bombay)ಗಳನ್ನು ಬಿಟ್ಟುಕೊಟ್ಟರು. ಇದರಿಂದ ಇಂಗ್ಲಿಷರಿಗೆ ಭೂಮಧ್ಯಸಮುದ್ರದಲ್ಲಿಯೂ ಹಿಂದೂಸ್ಥಾನದಲ್ಲಿಯೂ ಸ್ವತಂತ್ರ ಸ್ಥಲಗಳು ದೊರೆತವು. ರಾಜನಿಗಂತೂ ಬೇಕಾದಷ್ಟು ಹಣ ಕೈಸೇರಿತು. ಆ ಹಣ ವಿಲಾಸವಿನೋದಗಳಿಗಾಗಿ ವೆಚ್ಚವಾಗುತ್ತಿದ್ದುದರಿಂದ ವರ್ತಕತನಕ್ಕೆ ಬಲವೊದಗಿತು.

1665ರಲ್ಲಿ ಡಚ್ಚರೊಂದಿಗೆ ಯುದ್ಧ ಮೊದಲಾಯಿತು. ನ್ಯಾವಿಗೇಷರ್ಕಾನೂನು ಪುನಃ ರೂಪಗೊಂಡುದು ಅವರಿಗೆ ಸರಿಬೀಳಲಿಲ್ಲ. ಆಫ್ರಿಕಾ, ಉತ್ತರ ಅಮೆರಿಕಾ ಕ್ಷೇತ್ರಗಳಲ್ಲಿ ಇಂಗ್ಲಿಷರಿಗೂ ಡಚ್ಚರಿಗೂ ಕಲಹಗಳಾಗುತ್ತಲೇ ಇದ್ದವು. ಕ್ಷೇತ್ರ ಸಂಪಾದನೆಯಲ್ಲಿಯೂ ವ್ಯಾಪಾರಸಾಧನೆಯಲ್ಲಿಯೂ ಇಬ್ಬರಿಗೂ ಪೈಪೋಟಿ. ಇಂಗ್ಲಂಡಿನ ವರ್ತಕಜನರು ಡಚ್ಚರೊಡನೆ ಯುದ್ಧವಾಗಬೇಕೆಂದು ಹಟತೊಟ್ಟರು.

ಅವರ ಬಲವಂತದಿಂದಲೂ ಫ್ರೆಂಚ್‌ದೊರೆಯ ಪ್ರೋತ್ಸಾಹದಿಂದಲೂ ಇಂಗ್ಲಿಷ್‌ದೊರೆ ಡಚ್ಚರೊಡನೆ ಯುದ್ಧಕ್ಕೆ ತೊಡಗಿದನು. ರೂಪರ್ಟ್‌ರಾಜಕುಮಾರನೂ ದಳಪತಿ ಮಾಂಕನೂ ಹಡಗುಪಡೆಗಳಿಗೆ ನಾಯಕರಾಗಿ ಡಚ್ಚರೊಡನೆ ಅಲ್ಲಲ್ಲಿ ಲಡಾಯಿ ನಡೆಸಿದರು. ಎರಡು ವರ್ಷಕಾಲ ಎರಡುಕಡೆಯವರೂ ಶಕ್ತಿಗುಂದದೆ ಹೋರಾಡಿದರು. ಸಮಯಹೊಂಚಿದ್ದ ಡಚ್‌ಜನರು ಒಂದುಸಲ ಥೇಮ್ಸ್‌ನದಿಯಲ್ಲಿಯೇ ನುಗ್ಗಿ ಕೆಲವು ಇಂಗ್ಲಿಷ್ ಪಡಗುಗಳನ್ನು ಸುಟ್ಟುಬಿಟ್ಟರು. ಫ್ರೆಂಚ್‌ದೊರೆಯಾದ ಲೂಯಿಯಾದರೋ ಒಂದುವೇಳೆ ಇಂಗ್ಲಿಷರಿಗೂ ಇನ್ನೊಂದುವೇಳೆ ಡಚ್ಚರಿಗೂ ಸಹಾಯ ಕೊಡುತ್ತ, ಪರಸ್ಪರವಾಗಿ ಇಬ್ಬರೂ ತಮ್ಮ ಬಲಗಳನ್ನು ನಾಶಗೊಳಿಸಿಕೊಳ್ಳಲೆಂಬ ಉಪಾಯವನ್ನು ಹಿಡಿದಿದ್ದನು. ಕಡೆಗೆ 1667ರಲ್ಲಿ ಡಚ್ಚರೂ ಇಂಗ್ಲಿಷರೂ ಒಪ್ಪಂದ ಮಾಡಿಕೊಂಡರು. ಫ್ರೆಂಚ್‌ದೊರೆಯೇ ತಮ್ಮ ಶತ್ರುವೆಂದು ಭಾವಿಸಿ ಡಚ್‌ಜನರು ಇಂಗ್ಲಿಷರ ಮೈತ್ರಿಗಾಸೆಪಟ್ಟರು. **ಬ್ರೆಡ** (Breda) ಎಂಬೆಡೆಯಲ್ಲಿ **ಕರಾರು** ನಡೆದು ಪರಸ್ಪರ ಸ್ನೇಹವು ಗೊತ್ತಾಯಿತು. ಆ ಸಂದರ್ಭದಲ್ಲಿಯೇ ಡಚ್ಚರು ಉತ್ತರ ಅಮೆರಿಕದಲ್ಲಿ ತಾವು ಕಟ್ಟಿದ್ದ **ನ್ಯೂ ಆಮ್‌ಸ್ಟರ್ಡಾಂ** (New Amsterdam) ಎಂಬ ಕ್ಷೇತ್ರವನ್ನು ಇಂಗ್ಲಿಷರಿಗೆ ಬಿಟ್ಟುಕೊಟ್ಟರು. ಚಾರ್ಲ್ಸ್ ಅದನ್ನು ತನ್ನ ತಮ್ಮ **ಯಾರ್ಕಿನ ಡ್ಯೂಕನೆನಿಸಿದ್ದ ಜೇಮ್ಸಿಗೆ** (James, Duke of York) ಕೊಟ್ಟನು. ಅದರಿಂದ ಅದಕ್ಕೆ **ನ್ಯೂ ಯಾರ್ಕ್** (New York) ಎಂಬ ಹೆಸರುಂಟಾಯಿತು. ಆ ಖಂಡದಲ್ಲಿ ಇಂಗ್ಲಿಷರ ನೆಲಸುಗಳು ಅಖಂಡವಾಗಿ ಬೆಳೆಯಲು ಇದರಿಂದ ಅನುಕೂಲವಾಯಿತು. ದೇಶಾಂತರಹೊರಟ ಪ್ಯೂರಿಟನ್ನರು ಅಲ್ಲಲ್ಲಿ ನೆಲೆಸಿಕೊಂಡರು.

**ಎರಡನೆ ಡಚ್ ಯುದ್ಧ**
**1665 - 1667**

ಡಚ್ಚರೊಡನೆ ಯುದ್ಧನಡೆಯುತ್ತಿದ್ದ ಕಾಲದಲ್ಲಿ ಇಂಗ್ಲಂಡಿನಲ್ಲಿ ಎರಡು ಅನಾಹುತಗಳು ಸಂಭವಿಸಿದವು. 1665ರಲ್ಲಿ **ಲಂಡನ್** ನಗರದಲ್ಲಿ **ಪ್ಲೇಗ್** ರೋಗವು ಪ್ರಬಲವಾಗಿ ತಗುಲಿ ಬಹುಜನರು ಸತ್ತರು. ಆ ಅಂಟುರೋಗ ಅಡಗಿದಂತೆ ಕಾಣಿಸಿದ ಕೂಡಲೆ 1666ರಲ್ಲಿ ನಗರದ ಅರ್ಧಭಾಗವು **ಬೆಂಕಿಗೆ** ಸಿಕ್ಕಿ ಸುಟ್ಟುಹೋಯಿತು. ಅಲ್ಲಿಯ ಜನರಿಗೆ ಪ್ರಳಯದಮೇಲೆ ಪ್ರಳಯ ತೋರಿದಂತೆ ಆಯಿತು. ನಾನಾಕಷ್ಟಗಳಿಗೆ ಸಿಕ್ಕಿದ ಜನರಿಗೆ ಆಡಳಿತದಲ್ಲಿ ಅಸಮಾಧಾನ ಹುಟ್ಟಿತು. ಮಂತ್ರಿಯನ್ನು ನಿಂದಿಸಲು ಮೊದಲಾಯಿತು. ಕ್ಲಾರೆಂಡನ್ ಶ್ರೀಮಂತನನ್ನು ಅನೇಕರು ಸಹಿಸುತ್ತಿರಲಿಲ್ಲ. ಆತನ ಮಗಳು ಯಾರ್ಕ್ ಶ್ರೀಮಂತನೆನಿಸಿದ ಜೇಮ್ಸನ್ನು ಮದುವೆಯಾಗಿ ಅರಮನೆಯಲ್ಲಿಯೇ ಇದ್ದಾಗ್ಗೂ ಕ್ಲಾರೆಂಡನ್ನನಿಗೆ ಆಸ್ಥಾನಿಕರ ಬೆಂಬಲವಿರಲಿಲ್ಲ. 1667ರಲ್ಲಿ ಕಾಮನ್ಸ್‌ಸಭಿಕರು ಮಂತ್ರಿಯಲ್ಲಿ ದೋಷಾರೋಪಣೆಮಾಡಿದಾಗ ರಾಜನು ಆತನನ್ನು ಕೆಲಸದಿಂದ ತಪ್ಪಿಸಿದನು. ಸಭಿಕರು ಇಂಪೀಚ್ಮೆಂಟ್ ನಡೆಸಿದರು; ಆದರೆ

**ಕ್ಲಾರೆಂಡನ್ನಿಗೆ ದುರ್ಗತಿ**

ಸಾಕಾದಷ್ಟು ಕಾರಣವಿರಲಿಲ್ಲ. ಆಗ ರಾಜನು ಉಪಾಯವಾಗಿ ಕ್ಲಾರೆಂಡನ್ನನಿಗೆ ದೇಶಾಂತರ ಹೊರಡುವುದು ಕ್ಷೇಮವೆಂದು ಸೂಚಿಸಿದನು. ಅದರಂತೆ ಕ್ಲಾರೆಂಡರ್ ಫ್ರಾನ್ಸಿಗೆ ಹೊರಟು ಅಲ್ಲಿಯೇ ತನ್ನ ಕಾಲವನ್ನು ಕಳೆದನು.

ಕ್ಲಾರೆಂಡನ್ ಹೊರಟುಹೋದಬಳಿಕ ರಾಜನು ಒಬ್ಬ ಮಂತ್ರಿಯನ್ನಿಟ್ಟುಕೊಳ್ಳದೆ ಐವರನ್ನು ಇಟ್ಟುಕೊಂಡನು. ಕ್ಲಾರೆಂಡನ್ನಿಗೆ ವಿರೋಧಿಗಳಾಗಿದ್ದ ಆಸ್ಥಾನಿಕರಲ್ಲಿಯೂ ಪಾರ್ಲಿಮೆಂಟ್‌ಸಭಿಕರಲ್ಲಿಯೂ ಮುಖಂಡರಾಗಿದ್ದವರು ಆ ಐವರು. ಅವರಲ್ಲಿ ಒಬ್ಬೊಬ್ಬರೊಂದೊಂದು ಬಗೆಯವರಾಗಿದ್ದರು; ಕ್ಲಾರೆಂಡನ್ನಿನಲ್ಲಿ ವಿರೋಧವೊಂದು ಮಾತ್ರವೇ ಅವರೆಲ್ಲರಿಗೂ ಸಮಾನಲಕ್ಷಣ. ಉಪಾಯಶಾಲಿಯಾದ ದೊರೆ ಆ ಐವರನ್ನು ಕಟ್ಟಿ ಸ್ವಲ್ಪಕಾಲದಲ್ಲಿ ತಾನೇ ಗೋಪ್ಯವಾಗಿ ಕೆಲಸಗಳನ್ನು ನಡೆಸಲಾರಂಭಿಸಿದನು. ಆ ಐವರ ಗುಂಪಿಗೆ **ಕಬಾಲ್** (Cabal) ಎಂಬ ಹೆಸರುಂಟು. **ಕ್ಲಿಫರ್ಡ್, ಆರ್ಲಿಂಗ್ಟನ್, ಬಕಿಂಘಂ, ಆಷ್ಲಿ, ಲಾಡರ್ಡೇಲ್** (Clifford, Arlington, Buckingham, Ashley, Lauderdale) ಎಂಬ ಅವರ ಹೆಸರುಗಳ ಪ್ರಥಮಾಕ್ಷರಗಳಿಂದ ಹುಟ್ಟಿತು ಆ ಹೆಸರು.

**ಕಬಾಲ್ ಕೂಟ**

ಫ್ರಾನ್ಸಿನ ರಾಜನಾಗಿದ್ದ 14ನೆ ಲೂಯಿಗೆ ದೊಡ್ಡ ಆಸೆಗಳಿದ್ದವು. ಇಂಗ್ಲಂಡಿನ ದೊರೆಗೆ ಸಮೀಪಬಂಧುವಾಗಿದ್ದ ಆತನು ಸ್ಪೈನನ್ನು ದುರ್ಬಲಗೊಳಿಸುವುದಕ್ಕೆ ಹವಣಿಸಿದ್ದನ್ನು ಕಂಡೆವು. ಲೂಯಿ ಸ್ಪೈನ್ ರಾಜಪುತ್ರಿಯನ್ನು ಮದುವೆಯಾಗಿ ಆಮೂಲಕ ತನ್ನ ರಾಜ್ಯಕ್ಕೆ ಉತ್ತರದಲ್ಲಿದ್ದ ನೆದರ್ಲಂಡ್ಸ್ ಕ್ಷೇತ್ರವನ್ನು ಆಕ್ರಮಿಸಿಕೊಳ್ಳಲು ಉದ್ಯಮಿಸಿದ್ದನು. ಅಲ್ಲಿಯ ದುರ್ಗಗಳಲ್ಲಿ ತನ್ನ ಸೈನ್ಯಗಳನ್ನಿಡಿಸಿದನು. ಆತನ ಮನಸ್ಸಿನಲ್ಲಿ ಫ್ರಾನ್ಸ್ ದೇಶಕ್ಕೆ ರೈನ್ ನದಿಯೇ ಉತ್ತರದ ಮೇರೆಯಾಗಬೇಕೆಂದಿತ್ತು. ಅದಕ್ಕೆ ಹಾಲಂಡ್‌ದೇಶವು ಅಡ್ಡಿ. ಅಲ್ಲಿಯ ಜನರಾದರೋ ಪ್ರಾಟೆಸ್ಟೆಂಟರು. ವ್ಯಾಪಾರಪ್ರಾಬಲ್ಯಕ್ಕಾಗಿ ಇಂಗ್ಲಂಡಿನೊಡನೆ ಡಚ್ಚರು ಯುದ್ಧ ಮಾಡಿದ್ದರು. ಆದರೆ ಲೂಯಿಯ ಉದ್ಯಮವನ್ನು ಕಂಡ ಡಚ್ಚರು ಚಿಂತೆಗೊಳಗಾಗಿ ಇಂಗ್ಲಿಷರ ಮೈತ್ರಿಯನ್ನು ಸಂಪಾದಿಸಲು ತವಕಪಟ್ಟರು. ಕಬಾಲ್‌ಮಂತ್ರಿಗಳು ಡಚ್ಚರಲ್ಲಿ ಸಖ್ಯವನ್ನು ತೋರಿದರು. 1668ರಲ್ಲಿ ಹಾಲಂಡ್, ಸ್ವೀಡ್ ಮತ್ತು ಇಂಗ್ಲಂಡ್ ಮೂರೂ ಸೇರಿ **ಟ್ರಿಪ್ಲ್ ಅಲಯನ್ಸ್** (Triple Alliance) ಎಂಬ ಮಿತ್ರವ್ಯೂಹವನ್ನು ಲೂಯಿಗೆ ವಿರೋಧವಾಗಿ ಕಟ್ಟಿಕೊಂಡವು. ಈ ಸಂದರ್ಭದಲ್ಲಿ ಕಬಾಲ್‌ಮಂತ್ರಿಗಳು ಅನುಸರಿಸಿದ ದಾರಿಯು 'No Holland, No England'—ಹಾಲಂಡಿಗೆ ವಿಪತ್ತು ತೋರಿದರೆ ಇಂಗ್ಲಂಡಿಗೂ ವಿಪತ್ತು—ಎಂಬ ಸೂತ್ರದಂತಿತ್ತು. ಆದರೆ ಲೂಯಿ ಅತಿಪ್ರಭಾವಶಾಲಿಯಾಗಿದ್ದನು. ಚಾರ್ಲ್ಸ್‌ದೊರೆ ಆತನ ಸ್ನೇಹವನ್ನು ಬಿಡಲಾರದವನು. ತನ್ನ

**ಡಚ್ಚರ ವಿಪತ್ತು**

ತಂಗಿಯಮೂಲಕ ರಹಸ್ಯವಾಗಿ ಮಾತು ನಡೆಸಿ ಈ ದೊರೆ 1670ರಲ್ಲಿ **ಡೋವರ್** (Dover) ಪಟ್ಟಣದಲ್ಲಿ ಲೂಯಿಯೊಡನೆ **ಗೋಪ್ಯಕರಾರು** ನಡೆಸಿದನು. ಡಚ್ಚರ ಮೇಲೆ ಲೂಯಿ ಯುದ್ಧ ನಡೆಸಿದಾಗ ಸಹಾಯಮಾಡುವುದಾಗಿ

**ರಾಜನ ರಹಸ್ಯವರ್ತನೆ**

ಚಾರ್ಲ್ಸ್ ಒಪ್ಪಿದನು. ಇಂಗ್ಲಂಡಿನಲ್ಲಿ ತನ್ನ ವಿರೋಧಿಗಳನ್ನ ಡಗಿಸುವುದರಲ್ಲಿಯೂ ಕ್ಯಾಥಲಿಕ್ಕರಿಗೆ ಸಹಾಯಮಾಡುವುದ ರಲ್ಲಿಯೂ ಚಾರ್ಲ್ಸ್‌ದೊರೆಗೆ ಹಣವನ್ನೂ ಬಲವನ್ನೂ ಕೊಡುವುದಾಗಿ ಲೂಯಿ ಒಪ್ಪಿದನು. ಅತ್ತ ಮಂತ್ರಿಗಳೊಂದನ್ನು ನಡೆಸಿದರೆ ಇತ್ತ ರಾಜನು ಮತ್ತೊಂದನ್ನು ನಡೆಸಿದನು. ಈ ಗೋಪ್ಯಕರಾರಿನ ವಿಷಯವನ್ನು ರಾಜನು ತನ್ನ ಮಂತ್ರಿಗಳಲ್ಲಿಬ್ಬರಿಗೆ ಮಾತ್ರ ತಿಳಿಸಿದನು. ಇನ್ನಿಬ್ಬರಿಗೆ ಸ್ವಲ್ಪಸ್ವಲ್ಪ ಹೇಳಿದನು. ಹಾಗೂಹೀಗೂ ಉಪಾಯಮಾಡಿ ಫ್ರಾನ್ಸಿನ ಪಕ್ಷವನ್ನೊಪ್ಪುವಂತೆ ಮಂತ್ರಿಗಳನ್ನು ದೊರೆ ಪ್ರೇರಿಸಿದನು.

ಡಚ್ಚರಿಗೆ ಇತರರ ಸಹಾಯವನ್ನು ತಪ್ಪಿಸಿದ ಲೂಯಿಯ ಸಹಾಯಕ್ಕಾಗಿ ಡಚ್ಚ ರೊಡನೆ ಯುದ್ಧ ನಡೆಸಲು ಚಾರ್ಲ್ಸ್ ತೊಡಗಿದನು. ಆದರೆ ಸಾಕಾದಷ್ಟು ಹಣವಿಲ್ಲದೆ ಪ್ರಯತ್ನವು ಕಷ್ಟವಾಯಿತು. ಅತ್ತ ಡಚ್ಚರು ಧೈರ್ಯದಿಂದ ತಮ್ಮ ದೇಶವನ್ನುಳಿಸಿ ಕೊಳ್ಳಲು ಸಿದ್ಧರಾದರು. **ಆರೆಂಜ್** ಸಂಸ್ಥಾನಿಕನಾದ **ವಿಲಿಯಂ** ಎಂಬ ಸಾಹಸಿ ಯನ್ನು ಮುಂದಿಟ್ಟುಕೊಂಡು ಲೂಯಿಯನ್ನು ಎದುರಿಸಿದರು. ಅವರ ಧೈರ್ಯೋ ತ್ಸಾಹಗಳನ್ನೂ ಲೂಯಿಯ ದುರಾಸೆಯನ್ನೂ ಕಂಡ ಇತರ ಸಂಸ್ಥಾನಿಕರು ಡಚ್ಚರಲ್ಲಿ ಅನುಕಂಪವನ್ನು ತೋರಲು ಮೊದಲಾಯಿತು. ಆಗ ಇಂಗ್ಲಿಷ್ ಜನರೂ ಡಚ್ಚರಲ್ಲಿ ಮೈತ್ರಿಯನ್ನು ತೋರಿದರು. ಹಿಂದೆ ಸ್ಪೈನ್ ರಾಜ ಫಿಲಿಪ್ಪನ ಎದುರಿನಲ್ಲಿ ಡಚ್ಚರ ನಾಯಕನಾಗಿದ್ದ ವಿಲಿಯಮ್ಮನ ವಂಶದವನಾದ ಇನ್ನೊಬ್ಬ ವಿಲಿಯಂ ಫ್ರಾನ್ಸ್ ರಾಜ್ಯದ ಲೂಯಿಯ ಎದುರಾದುದನ್ನು ಇಂಗ್ಲಿಷರು ಮೆಚ್ಚಿದರು. ಟ್ರಿಪ್ಲ್ ಅಲಯನ್ಸ್ ಎಂಬುದನ್ನು ಪ್ರಕಟವಾಗಿ ಕಟ್ಟಿದ ಮಂತ್ರಿಗಳು ಅದಕ್ಕೆ ವಿರುದ್ಧವಾಗಿ ವರ್ತಿಸುತ್ತಿ ದ್ದುದು ಪಿತೂರಿಯಾಗಿ ಕಂಡುಬಂತು. ಮಂತ್ರಿಗಳಲ್ಲಿ ಜನರ ವಿಶ್ವಾಸಕೆಡುತ್ತಿತ್ತು. ಆಗ ಮಂತ್ರಿಗಳು ಮತವಿಷಯದಲ್ಲಿ ಸಮಾಧಾನದ ಏರ್ಪಾಟನ್ನು ನಡೆಸುವಯೋಚನೆ ಮಾಡಿದರು. ಕ್ಲಾರೆಂಡನ್ ಕೋಡ್ ಎಂಬ ವಿಧಿಗಳ ದೆಸೆಯಿಂದ ಹಿಂಸೆಪಟ್ಟ **ಡಿಸ್ಸೆಂಟರ್** (Dissenter) ಪಂಗಡದವರಿಗೆ ಅನುಕೂಲ ನಡೆಸಲು ಪಾರ್ಲಿಮೆಂಟಿನವರು ಒಪ್ಪುವಹಾಗಿರಲಿಲ್ಲ. ಆದ್ದರಿಂದ ಮಂತ್ರಿಗಳು ರಾಜಾಧಿಕಾರವನ್ನು ಆ ದಾರಿಯಲ್ಲಿ ಪ್ರಯೋಗಿಸುವ ಉಪಾಯವನ್ನು ಕಂಡರು.

2ನೆ ಚಾರ್ಲ್ಸ್‌ದೊರೆಗೆ ಕ್ಯಾಥಲಿಕ್ ಮತದಲ್ಲಿ ವಿಶ್ವಾಸವಿತ್ತು. ರಾಣಿಯಂತೂ ಕ್ಯಾಥಲಿಕ್ ಮತದವಳು. ತಮ್ಮ ಜೇಮ್ಸ್ ಆ ಮತದಲ್ಲಿಯೇ ಭಕ್ತಿಯನ್ನು ಬೆಳೆಸಿ ಕೊಂಡಿದ್ದು ಎಲ್ಲರೆದುರಿನಲ್ಲಿ ರೋಮನ್ ಕ್ಯಾಥಲಿಕ್ ನಿಷ್ಠೆಯಿಂದಿದ್ದನು. ಡೋವರ್ ಕರಾರಿನಂತೆ ಚಾರ್ಲ್ಸ್‌ದೊರೆ ಕ್ಯಾಥಲಿಕ್ಕರಿಗೆ ಅನುಕೂಲಮಾಡಿಕೊಡುವ ಸಂಕಲ್ಪ

ತಾಳಿದ್ದನು. ಅದಕ್ಕಾಗಿ ಲೂಯಿ ಹಣವನ್ನೂ ಸಲ್ಲಿಸಿದ್ದನು. ಕರಾರಿನಂತೆ ಆಚರಿಸಲು ರಾಜನು ರೋಮನ್‌ಕ್ಯಾಥಲಿಕ್ಕರಿಗೆ ಮತಸ್ವಾತಂತ್ರ್ಯವನ್ನು ಕೊಡಬೇಕಾಗಿತ್ತು. ಆತನ ಇಷ್ಟವೂ ಹಾಗೆಯೇ ಇತ್ತು. ಡಿಸ್ಸೆಂಟರ್ ಮತ್ತು ಕ್ಯಾಥೊಲಿಕ್ ಗುಂಪುಗಳೆರಡಕ್ಕೂ ರಾಜಪ್ರಕಟನೆಯಮೂಲಕ ಮತಸ್ವಾತಂತ್ರ್ಯವನ್ನು ಕೊಡಿಸುವುದು ಮಂತ್ರಿಗಳಿಗೂ ರಾಜನಿಗೂ ಒಳ್ಳೆಯ ಉಪಾಯವಾಗಿ ಕಂಡಿತು. ಕಾನೂನು ನಿಬಂಧನೆಗಳ ಪ್ರಯೋಗವನ್ನು ತಡೆಯುವ ಅಧಿಕಾರವನ್ನು ರಾಜನು ವಹಿಸಬಹುದೆಂದು ತೋರಿತು. ಕಾನೂನು ನಿಬಂಧನೆಗಳನ್ನು ***ಸಸ್ಪೆಂಡ್** ಮಾಡಿಡುವುದಕ್ಕೂ **ಡಿಸ್ಪೆನ್ಸ್** ಮಾಡಿಕೊಳ್ಳುವುದಕ್ಕೂ ರಾಜನಾದಾತನಿಗೆ ಜನ್ಮಸಿದ್ಧವಾದ ಅಧಿಕಾರವುಂಟೆಂದು ಹೇಳಿಕೊಂಡು ರಾಜನು **ಡಿಕ್ಲರೇಷನ್ ಆಫ್ ಇನ್‌ಡಲ್ಜೆನ್ಸ್** (Declaration of Indulgence) ಎಂಬ ಪ್ರಕಟನೆ ಕೊಟ್ಟನು. ಆಂಗ್ಲಿಕನ್ ಚರ್ಚಿನ ಆಚಾರಸಂಪ್ರದಾಯಗಳಿಗೊಪ್ಪದಿದ್ದವರಿಗೆ ರಾಜನ ಕ್ಷಮೆಯುಂಟೆಂದು ಅದರ ಸಾರಾಂಶ. ಕ್ಯಾಥಲಿಕ್ಕರನ್ನೂ ಡಿಸ್ಸೆಂಟರುಗಳನ್ನೂ ದಂಡಿಸಲು ಇದ್ದ ವಿಧಿಗಳು ಇದರಿಂದ ಮೂಲೆಗೆ ಬಿದ್ದಂತಾಯಿತು. ಕ್ಷಮಾದಾನದಲ್ಲಿ ಪಕ್ಷಪಾತವಿದ್ದುದು ಎಲ್ಲರಿಗೂ ತಿಳಿಯಿತು. ಮಂತ್ರಿಗಳಲ್ಲಿಯೇ ವಿರೋಧತೋರಿತು. **ಆಷ್ಲಿ**ಯೆಂಬಾತನು ಕ್ಯಾಥಲಿಕ್ಕರಿಗೆ ಕ್ಷಮಾದಾನವಾಗುವುದನ್ನು ಸಹಿಸದೆ ಮಂತ್ರಿಪದವಿಯನ್ನು ಬಿಟ್ಟು ಪಾರ್ಲಿಮೆಂಟಿನಲ್ಲಿ ಸೇರಿದನು. ಗೋಪ್ಯವಾಗಿದ್ದ ಕರಾರಿನ ವಿವರಗಳು ಆಗ ಒಂದೊಂದಾಗಿ ಬಯಲಾದವು.

**ರಾಜಾಧಿಕಾರ ಪ್ರಯೋಗ**

**ಕ್ಷಮಾದಾನ ಪ್ರಕಟನೆ**

ಪಾರ್ಲಿಮೆಂಟ್‌ಸಭೆಯಲ್ಲಿ ಸೇರಿಕೊಂಡು ಆಷ್ಲಿ ರೋಮನ್‌ಕ್ಯಾಥಲಿಕ್ ಮತದ ಪಕ್ಷಪಾತವನ್ನು ಖಂಡಿಸುತ್ತ **ಟೆಸ್ಟ್ ಆಕ್ಟ್** (Test Act)† ಎಂಬ ಹೊಸ ಕಾನೂನನ್ನು ರೂಪಗೊಳಿಸಿದನು. ಉದ್ಯೋಗಸ್ಥರೆಲ್ಲರೂ ಆಂಗ್ಲಿಕನ್ ಪದ್ಧತಿಯ

---

***ಸಸ್ಪೆಂಡ್** ಎಂದರೆ ತಾತ್ಕಾಲಿಕವಾಗಿ ಕಾನೂನಿನ ಜಾರಿಯನ್ನು ನಿಲ್ಲಿಸಿಡುವುದು. **ಡಿಸ್ಪೆನ್ಸ್** ಎಂದರೆ ವ್ಯಕ್ತಿಗಳಲ್ಲಿ ಕ್ಷಮೆತೋರಿ ಜಾರಿಯನ್ನು ತಡೆಯುವುದು. ಎರಡೂ ಕಾನೂನನ್ನು ಆಚರಣೆಗೆತಾರದೆ ತಡೆಯುವ ವಿಧಾನಗಳು. ಕಾನೂನನ್ನು ಅಡ್ಡಿಪಡಿಸುವ ಅಧಿಕಾರ ರಾಜಪುರುಷನಿಗುಂಟೆಂಬ ತತ್ತ್ವದಿಂದ ಪಾರ್ಲಿಮೆಂಟಿನ ಅಧಿಕಾರಕ್ಕೇ ಲೋಪತೋರಿದಂತಾಯಿತು.

†ಪಾರ್ಲಿಮೆಂಟಿನಲ್ಲಿ ಪ್ರತಿಪಕ್ಷವೆಂಬುದು ಇಲ್ಲಿ ಪ್ರಾರಂಭ. ಮಂತ್ರಿಗಳ ಅನುಯಾಯಿಗಳಾದವರು **ಆಡಳಿತದ ಪಕ್ಷ**, ಮಂತ್ರಿಗಳ ಕರ್ತವ್ಯನಿರ್ವಾಹದಲ್ಲಿ ದೋಷಗಳನ್ನು ತೋರುತ್ತಲಿರುವುದು **ಪ್ರತಿಪಕ್ಷ** (Opposition). ಷಾಫ್ಟ್ಸ್‌ಬೆರಿಯಿಂದ ಪ್ರತಿಪಕ್ಷವೆನ್ನುವುದು ಸಭೆಯಲ್ಲಿ ಮೊದಲಾಯಿತೆಂದು ಭಾವಿಸಬೇಕು. ರಾಜನ ಪ್ರಕಟನೆಗೆ ಟೆಸ್ಟ್ ಆಕ್ಟೆಂಬುದು ನಾಗಾಸ್ತ್ರಕ್ಕೆದುರಾಗಿ ತೊಟ್ಟ ಗಾರುಡಾಸ್ತ್ರದಂತೆ.

ಆಚರಣೆಗಳನ್ನೊಪ್ಪಿಕೊಳ್ಳುವ ಪ್ರಮಾಣಮಾಡಬೇಕಾಯಿತು. ಆ ಪ್ರಮಾಣಮಾಡ ಲೊಪ್ಪದೆ ಕ್ಯಾಥಲಿಕ್‌ಮತಸ್ಥ ಕ್ಲಿಫರ್ಡ್‌ಮಂತ್ರಿಯು ಉದ್ಯೋಗ ಬಿಟ್ಟನು. ನೌಕಾಪತಿಯಾಗಿದ್ದ ಜೇಮ್ಸ್‌ರಾಜಕುಮಾರನು ರಾಜಿನಾಮೆ

**ಪ್ರತಿಪಕ್ಷದ ಆಟ**

ಕೊಟ್ಟನು. ಕಬಾಲ್ ಮಂತ್ರಿಮಂಡಲಿಯು ಒಡೆದುಹೋ ಯಿತು. ಟೆಸ್ಟ್‌ಆಕ್ಟ್ ಆದಬಳಿಕ ಪಾರ್ಲಿಮೆಂಟಿನವರು ರಹಸ್ಯಕರಾರನ್ನು ಖಂಡಿಸಿದರು; ಡಚ್ಚರೊಡನೆ ಮೈತ್ರಿಕಟ್ಟಬೇಕೆಂದು ಬಲವಂತ ಮಾಡಿದರು. ಅಂತರಂಗದಲ್ಲಿ ಎಷ್ಟು ಅಸಮಾಧಾನವಾದರೂ ರಾಜನು ಅದನ್ನು ತೋರ್ಪಡಿಸದೆ ತನ್ನ ಪ್ರಕಟನೆಯನ್ನು ತಳ್ಳಿಬಿಟ್ಟು ಡಚ್ಚರೊಡನೆ ಸಮಾಧಾನಮಾಡಿ ಕೊಂಡನು.

ಕವೆಲಿಯರ್ ಪಾರ್ಲಿಮೆಂಟೆಂಬುದೇ ಇನ್ನೂ ನಡೆಯುತ್ತಿತ್ತು. ಆಂಗ್ಲಿಕನ್ ಪಕ್ಷಪಾತಿಗಳು ಆ ಸಭೆಯಲ್ಲಿ ಪ್ರಬಲರು. **ಷಾಫ್ಟ್ಸ್‌ಬೆರಿ**(Earl of Shaftesbury) ಎಂಬ ಬಿರುದಿಗೆ ಪಾತ್ರನಾಗಿದ್ದ ಆಷ್ಲಿಯೇ ಸಭಿಕರಿಗೆ ನಾಯಕ. ಈ ಸಭೆಯವ ರನ್ನು ಮೆಚ್ಚಿಸುವಂತೆ ರಾಜನು ಆಂಗ್ಲಿಕನ್‌ಮತನಿಷ್ಠನಾಗಿದ್ದ **ಡ್ಯಾನ್ಬಿಯ ಶ್ರೀಮಂತ** ನನ್ನು (Sir Thomas Osborne, Earl of Danby) ಮಂತ್ರಿಪದವಿಯಲ್ಲಿ ಗೊತ್ತು ಮಾಡಿದನು. ಆದರೆ ರಾಜಾಮಂತ್ರಿಗಳಲ್ಲಿ ಪರಸ್ಪರ ವಿಶ್ವಾಸವಿಲ್ಲ. ಡ್ಯಾನ್ಬಿಯು ಮಂತ್ರಿಯಾದಬಳಿಕ ಫ್ರೆಂಚ್‌ದೊರೆಗೆ ವಿರೋಧವಾದ ಸನ್ನಾಹಗಳನ್ನು ನಡೆಸಿದನು. ರಾಜನಾದರೋ ಗೋಪ್ಯವಾಗಿ ಲೂಯಿಯೊಡನೆ ಸಂಧಾನ

**ಡ್ಯಾನ್ಬಿ ಶ್ರೀಮಂತ**

ಗಳನ್ನೂ ಒಪ್ಪಂದಗಳನ್ನೂ ನಡೆಸುತ್ತಿದ್ದನು. ಹೊರಗಡೆ ಮಂತ್ರಿಯನ್ನು ಮೆಚ್ಚುವಂತೆ ನಟಿಸುತ್ತಲಿದ್ದು ಚಾರ್ಲ್ಸ್ ಒಳಗೊಳಗೆ ಆತನ ಪ್ರಯತ್ನಗಳಿಗೆ ಅಡ್ಡಿಮಾಡುತ್ತಿದ್ದನು. ಪ್ರಾಟೆಸ್ಟೆಂಟ್ ಪಕ್ಷಪಾತಿ ಯಾಗಿ ಡ್ಯಾನ್ಬಿಯು ಡಚ್ಚರೊಡನೆ ಸಂಬಂಧವನ್ನು ಗೊತ್ತುಮಾಡಿದನು. ರಾಜ ಕುಮಾರ ಜೇಮ್ಸನ ಮಗಳು **ಮೇರಿಯೆಂಬಾಕೆಯನ್ನು ಆರೆಂಜಿನ ವಿಲಿಯಮಿಗೆ** ಕೊಟ್ಟು ಮದುವೆಯಾಯಿತು. ಈ ವಿವಾಹ ನಡೆದಮೇಲೆ ಲೂಯಿ ಬೇಸರಪಟ್ಟು ತಾತ್ಕಾಲಿಕವಾಗಿ ಡಚ್ಚರೊಡನೆ ತಾನೂ ಸಮಾಧಾನಮಾಡಿಕೊಂಡು ಚಾರ್ಲ್ಸ್‌ರಾಜನಲ್ಲಿ ಅತೃಪ್ತಿತೋರಿ ತಾನು ಕೊಡುತ್ತಿದ್ದ ಹಣವನ್ನು ರಾಜನಿಗೆ ಕೊಡದೆ ರಾಜವಿರೋಧಿಗಳಿಗೆ ಕೊಡಿಸಲಾರಂಭಿಸಿದನು. ರಹಸ್ಯವಾಗಿ ನಡೆದಿದ್ದ ಒಪ್ಪಂದಗಳ ಸುದ್ದಿಯು ಬಯ ಲಾಯಿತು. ಆಗ ಪಾರ್ಲಿಮೆಂಟ್‌ಸಭಿಕರು ಆಡಳಿತದನೀತಿಯನ್ನು ಖಂಡಿಸಿ, ಡ್ಯಾನ್ಬಿಯನ್ನು ಇಂಪೀಚ್‌ಮಾಡಲು ಸಿದ್ಧರಾದರು. ಆಗ ರಾಜನು ಸಭೆಯನ್ನು ಮುಕ್ತಾಯಗೊಳಿಸಿದನು. 1661 ರಿಂದ 1678ರವರೆಗೆ ಕವೆಲಿಯರ್ ಪಾರ್ಲಿಮೆಂ ಟೆಂಬುದೇ ನಡೆದಿತ್ತು. ರಾಜಭಕ್ತಿಯಿಂದ ಮೊದಲಿಟ್ಟು ಸಭೆಯು ರಾಜವಿರೋಧದಲ್ಲಿ ಕೊನೆಯಾಯಿತು. ಮತವಿಚಾರದ ವಿರೋಧವೇ ಕಾರಣ. ಸಭಿಕರಿಗೆ ರಾಜನಲ್ಲಿ

ಅಪನಂಬಿಕೆ ಹೆಚ್ಚಿತ್ತು. ರೋಮನ್‌ಕ್ಯಾಥಲಿಕ್ಕರಿಗೆ ಅನುಕೂಲಗಳನ್ನೊದಗಿಸಲು ರಹಸ್ಯಪ್ರಯತ್ನಗಳಾಗುತ್ತಲಿವೆಯೆಂಬ ಗುಮಾನಿ ಬಲವಾಯಿತು.

ಅಂತಹವೇಳೆಯಲ್ಲಿ **ಟೈಟಸ್ ಓಟ್ಸ್** (Titus Oates) ಎಂಬ ಭ್ರಷ್ಟಪುರೋಹಿತನೊಬ್ಬನು ಲಂಡನ್ನಿನ ದಂಡಧಾರಿ (Magistrate) ಯೊಬ್ಬಾತನಬಳಿಗೆಹೋಗಿ ರೋಮನ್‌ಕ್ಯಾಥಲಿಕ್ಕರು ರಾಜನವಧೆ ನಡೆಸಲು ಪಿತೂರಿ ಕಟ್ಟಿರುವರೆಂಬ ಸುದ್ದಿಯನ್ನು ಕೊಟ್ಟನು. ಅಂತಹ ಪಿತೂರಿ ಅಸಂಭವವಾಗಿದ್ದಾಗ್ಗೂ ಸಾಮಾನ್ಯಜನರು ಸುದ್ದಿಯನ್ನು ನಂಬಿಬಿಟ್ಟರು. ಬಕವರ್ತಿಗಳಾಗಿದ್ದ ನಾನಾಜನರು ಅದೇಸಮಯವೆಂದು ರೋಮನ್‌ಕ್ಯಾಥಲಿಕ್ಕರಮೇಲೆ ಇಲ್ಲದಸಲ್ಲದ ಅಪವಾದಗಳನ್ನು ಹೊರಿಸಿದರು. ಪರಿಣಾಮವಾಗಿ ಅನೇಕ ನಿರಪರಾಧಿರೋಮನ್‌ಕ್ಯಾಥಲಿಕ್ಕರನ್ನು ಸುಳ್ಳುಸಾಕ್ಷ್ಯದಮೇಲೆ ಗಲ್ಲಿಗೇರಿಸಿದರು. ಜನರಿಗೆ ಜ್ವರ ಹಿಡಿದಂತಾಗಿ ರಾಜವಿರೋಧಿಪಕ್ಷದವರಲ್ಲಿ ಪ್ರಜಾವಿಶ್ವಾಸವು ಬೆಳೆಯಿತು. 1679ರಲ್ಲಿ ಸೇರಿದ ಹೊಸಪಾರ್ಲಿಮೆಂಟ್ ಸಭೆಯಲ್ಲಿ ಷಾಫ್ಟ್ಸ್‌ಬೆರಿಯು ನಾಯಕನಾಗಿ ತನ್ನ ಉದ್ದೇಶಗಳನ್ನು ಸಾಧಿಸಿಕೊಳ್ಳಲು ಹವಣಿಸಿದನು. ಮೊದಲು **ಹೆಬಿಯಸ್ ಕೋರ್ಪಸ್** (Habeas Corpus) ಎಂಬ ಕಾನೂನು ರಚನೆಯಾಯಿತು. ಕಾರಣತೋರದೆ ಅಥವಾ ವಾರಂಟಿಲ್ಲದೆ ಪ್ರಜೆಯನ್ನು ದಸ್ತಗಿರಿಮಾಡುವುದಕ್ಕೂ ವಿಚಾರಣೆಗೆ ನಿಲ್ಲಿಸದೆ ನಿರ್ಬಂಧದಲ್ಲಿಡುವುದಕ್ಕೂ ರಾಜಾಧಿಕಾರಿಗಳಿಗೆ ಅಧಿಕಾರವಿಲ್ಲವೆಂದು ಆ ಕಾನೂನು ಸ್ಥಾಪಿಸಿತು. ಪ್ರಜೆಯ ಸ್ವಾತಂತ್ರ್ಯವನ್ನು ಪೋಷಿಸಿದ ಆ ಕಾನೂನು ಮುಖ್ಯವೆನಿಸಿದೆ. ಆದರೆ ವಿರೋಧಪಕ್ಷದ ನಾಯಕನಾಗಿದ್ದ ಷಾಫ್ಟ್ಸ್‌ಬೆರಿಯು ರೋಮನ್‌ಕ್ಯಾಥಲಿಕ್‌ಮತಕ್ಕೆ ಅವಕಾಶವಿಲ್ಲದಂತೆ ನೆರವೇರಿಸಲು ಮತ್ತೊಂದು ಮಸೂದೆಯನ್ನು ರೂಪಗೊಳಿಸಿದನು. ಸಂತಾನಹೀನನಾದ 2ನೆ ಚಾರ್ಲ್ಸ್ ತರುವಾಯ ಪಟ್ಟಕ್ಕೆ ಹಕ್ಕುದಾರನಾಗಿದ್ದ ಯಾರ್ಕಿನ ಶ್ರೀಮಂತ ಜೇಮ್ಸನು ಕ್ಯಾಥಲಿಕ್‌ಮತಸ್ಥನಾದುದರಿಂದ ಪಟ್ಟವನ್ನೇರಕೂಡದೆಂಬುದು ಆ ಮಸೂದೆಯ ಸಾರಾಂಶ. **ದೂರೀಕಾರದ ಮಸೂದೆ**(Exclusion Bill)ಯೆನ್ನಬಹುದಾದ ಆ ಯೋಚನೆಯು ಪ್ರಕಟವಾದಾಗ ದೊರೆ ಸಭೆಯನ್ನು ಮುಕ್ತಾಯಗೊಳಿಸಿದನು.

**ಕ್ಯಾಥಲಿಕ್ಕರಲ್ಲಿ ಗುಮಾನಿ**

ಆದರೆ ಷಾಫ್ಟ್ಸ್‌ಬೆರಿ ಸಾಮಾನ್ಯನಾಗಿರಲಿಲ್ಲ. ಜೇಮ್ಸ್ ಮುಂದಿನದೊರೆಯಾದಪಕ್ಷದಲ್ಲಿ ರೋಮನ್‌ಕ್ಯಾಥಲಿಕ್‌ಮತವನ್ನು ಸ್ಥಾಪಿಸುವ ಪ್ರಯತ್ನ ನಡೆಯುವುದೆಂದೂ ಪ್ರಾಟೆಸ್ಟೆಂಟ್‌ಮತಕ್ಕೆ ವಿಪತ್ತು ತೋರುವುದೆಂದೂ ಜನರಿಗೆ ಎಚ್ಚರಿಕೆಯನ್ನುಂಟುಮಾಡಿದನು. ದೂರೀಕಾರಮಸೂದೆಯು ಅವಶ್ಯವೆಂದು ಭಾವಿಸಿದ ಅನೇಕರು ರಾಜಸಮುಖದಲ್ಲಿ ಅರ್ಜಿಗಳನ್ನು ಕೊಟ್ಟು ಪಾರ್ಲಿಮೆಂಟ್‌ಸಭೆಯನ್ನು ಸೇರಿಸಬೇಕೆಂದು ಕೇಳಿದರು.

**ಕಕ್ಷಿಪ್ರತಿಕಕ್ಷಿಗಳು**

ಈಬಗೆಯ ಅರ್ಜಿಗಳನ್ನು ಖಂಡಿಸುತ್ತ ರಾಜಭಕ್ತರಾದ ಅನೇಕರು ಪ್ರತಿಯಾದ ಅರ್ಜಿಗಳನ್ನಿಟ್ಟರು. **ಅರ್ಜಿದಾರ** ( Petitioners ) ರೊಂದುಪಕ್ಷವಾದರೆ **ಹಾಹಾಕಾರಪಟ್ಟವರು** (Abhorers) ಪ್ರತಿಪಕ್ಷವಾದರು. ಅಂತರ್ಯುದ್ಧದ ಸಮಯದಲ್ಲಿ ರೌಂಡ್‌ಹೆಡ್ ಮತ್ತು ಕವೆಲಿಯರ್ ಪಕ್ಷವಿಪಕ್ಷಗಳು ತೋರಿದ್ದಂತೆಯೇ ರಾಜವಿರೋಧಿಗಳೂ ರಾಜಭಕ್ತರೂ ಅಥವಾ ಉಗ್ರಪ್ರಾಟೆಸ್ಟೆಂಟರೂ ಸೌಮ್ಯಪ್ರಾಟೆಸ್ಟೆಂಟರೂ ಎದುರುಬದುರಾಗಿ ಜರೆದಾಡಿದರು. ರಾಜವಿರೋಧಿಗಳನ್ನು ವ್ಹಿಗ್ಗರೆಂಬ (Whigs) ಅಡ್ಡಹೆಸರಿನಿಂದ ರಾಜಪಕ್ಷದವರು ಕರೆದರು; ರಾಜಪಕ್ಷದವರನ್ನು **ಟೋರಿ** ಗಳೆಂಬ ( Tories ) ಅಡ್ಡಹೆಸರಿನಿಂದ ಷಾಫ್ಟ್ಸ್‌ಬೆರಿಯಕಡೆಯವರು ಕರೆದರು. ಬೈಗಳವಾಗಿ ಮೊದಲಾದ ಈ ಅಡ್ಡಹೆಸರುಗಳು* ಶಾಶ್ವತವಾಗಿ ನಿಂತವು. ರಾಜಭಕ್ತಿಯುತರಾಗಿ ಹಾಹಾಕಾರಗೊಂಡವರ ಮತವ್ಯವಸ್ಥೆಗೆ **ಹೈ ಚರ್ಚ್** ( High Church ) ಎಂದೂ ಪ್ರತಿಪಕ್ಷದವರವ್ಯವಸ್ಥೆಗೆ **ಲೋ ಚರ್ಚ್** (Low Church) ಎಂದೂ ಹೆಸರುಂಟಾಯಿತು.

ವ್ಹಿಗ್‌ಟೋರಿಗಳ ಬಯ್ದಾಟ ಜರೆದಾಟಗಳು ಈಬಗೆ ರೇಗುತ್ತಿದ್ದಾಗ ಸ್ಕಾಟ್ಲೆಂಡಿನ ಪ್ರೆಸ್ಬಿಟೇರಿಯನ್‌ಮತಸ್ಥರಲ್ಲಿಯೂ ಗೊಡ್ಡುಗಳೆನಿಸಿದವರು ದಂಗೆಯನ್ನೆಬ್ಬಿಸಿದರು. ಆ ದಂಗೆಯನ್ನು ಅಡಗಿಸಲು ದೊರೆಯ ಬಂಗಾರದ ಮಗನೆನಿಸಿದ **ಮಾನ್ಮತ್ ಡ್ಯೂಕನು** ( Duke of Monmouth ) ಹೊರಟು ದಂಗೆಕೋರರನ್ನು **ಬಾತ್ವೆಲ್ ಬ್ರಿಡ್ಜ್**(Bothwell Bridge)ಎಂಬಲ್ಲಿ ಸೋಲಿಸಿದನು. ಪ್ರೆಸ್ಬಿಟೇರಿಯನ್ನರವಾದವು ವ್ಹಿಗ್ಗರಿಗೇ ಸರಿಬೀಳಲಿಲ್ಲ. ಆಗ ಟೋರಿಗಳಿಗೆ ಬಲಬಂತು. ಏಕಂದರೆ

**ರಾಜನ ನಿದಾನ**

ಟೋರಿಗಳ ಅಭಿಪ್ರಾಯವನ್ನು ಜನರು ಮೆಚ್ಚುವಂತಾಯಿತು. ಜೇಮ್ಸನನ್ನು ಪಟ್ಟದಿಂದ ಬಹಿಷ್ಕರಿಸಿ ಮಾನ್ಮತ್ತಿಗೆ ಪಟ್ಟಕೊಡಿಸಬೇಕೆಂದು ಷಾಫ್ಟ್ಸ್‌ಬೆರಿ ಸೂಚಿಸುತ್ತಿದ್ದನು. ಅದಕ್ಕೆ ರಾಜನು ಸಮ್ಮತಿಸಲಿಲ್ಲ. ಜನಸಾಮಾನ್ಯರಲ್ಲಿ ಅನೇಕರು ಜೇಮ್ಸ್ ಪಕ್ಷಪಾತಿಗಳಾಗಿದ್ದರು. ಸಮಯನೋಡಿಕೊಂಡಿದ್ದ ಚಾರ್ಲ್ಸ್ 1680ರಲ್ಲಿ ಪಾರ್ಲಿಮೆಂಟನ್ನು ಕರೆಸಿದನು. ಕಾಮನ್ಸ್ ಸಭಿಕರು ದೂರೀಕಾರಮಸೂದೆಯನ್ನು ಒಪ್ಪಿದರು; ಶ್ರೀಮಂತಸಭೆಯವರು ಒಪ್ಪಲಿಲ್ಲ. ಮಸೂದೆ ಬಿದ್ದುಹೋಯಿತು. ರಾಜನು ಪಾರ್ಲಿಮೆಂಟ್ ಸಭೆಯನ್ನು ಮುಕ್ತಾಯಗೊಳಿಸಿದನು. 1681ರಲ್ಲಿ ಹೊಸ

---

* **ಪಾರ್ಟಿ ಸಿಸ್ಟೆಂ** (Party System) ಎಂಬ ಆಚಾರವು ಮೊದಲಾದುದು ಇಲ್ಲಿ. ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ವ್ಹಿಗ್ ಮತ್ತು ಟೋರಿ ಎಂಬ ಕಕ್ಷಿಪ್ರತಿಕಕ್ಷಿಗಳು ಪರಸ್ಪರವಾಗಿ ಬಹುಕಾಲ ಸ್ಪರ್ಧಿಸುತ್ತಿದ್ದವು. ಸ್ಪರ್ಧೆಯು ರೂಢಿಯಾದಬಳಿಕ ಒಂದೊಂದು ಕಕ್ಷಿಗೂ ನಾಯಕ, ಉಪನಾಯಕ, ಶಿಸ್ತು, ಮುಂತಾದ ಲಕ್ಷಣಗಳು ತೋರಿಕೊಂಡವು.

ಪಾರ್ಲಿಮೆಂಟನ್ನು ಕರೆಸಿ ನೋಡಿದನು. ವ್ಹಿಗ್ಗರು ಆವೇಶಪೂರಿತರಾಗಿ ಹೊಡೆದಾಟಕ್ಕೆ ಸಿದ್ಧರಾದವರಂತೆ ಕಾಣಿಸಿಕೊಂಡರು. ರಾಜನು ಆ ಸಭೆಯನ್ನೂ ಮುಗಿಸಿ ತನ್ನ ಅಧಿಕಾರವನ್ನು ಉಳಿಸಿಕೊಂಡನು.

ವ್ಹಿಗ್ಗರು ಆತುರಪಟ್ಟು ಅತ್ಯಾಚಾರಕ್ಕೆ ಸಿದ್ಧರಾದಂತೆ ಕಾಣಿಸಿಕೊಂಡುದು ಉಪಾಯಶಾಲಿಯಾದ ರಾಜನಿಗೆ ಅನುಕೂಲವಾಯಿತು. ರಾಜನು ವಿಲಂಬವನ್ನು ಅವಲಂಬಿಸಿದ್ದರಿಂದ ಟೋರಿಗಳು ಬಲಗೊಳ್ಳಲು ಆಸ್ಪದದೊರಕಿತು. ಮಾನ್ಮತ್ ಮತ್ತು ಷಾಫ್ಟ್ಸ್‌ಬೆರಿಯಿಬ್ಬರೂ ಕಾಲಕೆಟ್ಟಿತೆಂದುಕೊಂಡು

**ವ್ಹಿಗ್ಗರ ಪರಾಭವ**

ಹಾಲಂಡಿಗೆ ಹೊರಟುಬಿಟ್ಟರು. ಆಶಾಭಂಗವನ್ನು ಸಹಿಸದಿದ್ದ ಕೆಲವರು ವ್ಹಿಗ್ ಅತ್ಯಾಚಾರಿಗಳು ರಾಜನನ್ನೂ ರಾಜಕುಮಾರನನ್ನೂ .ರೈ ಹೌಸ್ (Rye House) ಎಂಬಲ್ಲಿ ಗೋಪ್ಯವಾಗಿ ಕೊಲ್ಲಿಸುವ ಪಿತೂರಿಕಟ್ಟಿದರು. ಪಿತೂರಿ ಪತ್ತೆಯಾಗಿ ವ್ಹಿಗ್ ಪಕ್ಷದವರನೇಕರಿಗೆ ಶಿಕ್ಷೆಯಾಯಿತು. ವ್ಹಿಗ್ ನಾಯಕರು ಕೆಲವರು ಮರಣದಂಡನೆಗೆ ಸಿಕ್ಕಿದರು. ತಮ್ಮ ಕಾಲ ಬಂತೆಂದು ಟೋರಿ ಪಕ್ಷದವರು ಕ್ರೌರ್ಯದಿಂದ ವ್ಹಿಗ್ಗರನ್ನು ಅಡಗಿಸಿದರು. ರಾಜಭಕ್ತರದೇ ಮೇಲ್ಗೈಯಾಯಿತು.

ಡ್ಯಾನ್ಬಿ ಮಂತ್ರಿಯ ಇಂಪೀಚ್ಮೆಂಟಾದ ಬಳಿಕ ದೊರೆಯು ಸ್ವಯಂರಾಜಾ ಸ್ವಯಂ ಮಂತ್ರಿಯಾಗಿದ್ದುಬಿಟ್ಟನು. ಕೆಲವರು ಹುಡುಗರನ್ನು ಕಟ್ಟಿ

**ಚಿಳ್ಳೆ ಮಂತ್ರಿಗಳು**

ಕೊಂಡು ಅವರನ್ನು ಮಂತ್ರಿಗಳೆಂದು ಕರೆಯುತ್ತ ಕುಚೋದ್ಯ ಮಾಡುವವನಂತೆ ನಟಿಸುತಲಿದ್ದು ಸಮಯಕ್ಕೆತಕ್ಕ ಜಾಣತನವನ್ನು ತಾಳಿ ತನ್ನ ಅಧಿಕಾರಕ್ಕೆ ಲೋಪಬಾರದಂತೆ ನಡೆಸಿಕೊಂಡನು. ಪರಮ ಸ್ವಾರ್ಥಿಯಾಗಿ ಎಲ್ಲರನ್ನೂ ಮೋಸಗೊಳಿಸುವ ಚರ್ಯೆಯುಳ್ಳವನಾದಾಗ್ಯೂ ಪ್ರಜೆಗಳ ವಿಶ್ವಾಸವೇ ತನ್ನ ಬಲವೆಂದರಿತಿದ್ದವನು. ಆದುದರಿಂದ ಜನಾಭಿಪ್ರಾಯವೆಂಬುದನ್ನು ಗುರುತಿಸುತ್ತ ಎಚ್ಚರಿಕೆಯಿಂದಲೂ ಉಪಾಯದಿಂದಲೂ ರಾಜ್ಯಭಾರ ನಡೆಸಿಕೊಂಡನು. 1682 ರಿಂದ 1685ರವರೆಗೆ ಈ ದೊರೆಯ ಅಧಿಕಾರಕ್ಕೆ ಅಡ್ಡಿಯೇ ಇಲ್ಲದಂತಿತ್ತು. 1685ರಲ್ಲಿ ಅನಿರೀಕ್ಷಿತನಾಗಿ ದೊರೆ ಕಾಲವಾದಾಗ ಜನರೆಲ್ಲರೂ ವ್ಯಸನಪಟ್ಟರು. ಆದರೂ ಈ ದೊರೆಯ ಅಂತರಂಗದ ಆಸೆಗಳು ಜನರ ಅಭಿ

**ರಾಜನ ಜಾಣ್ಮೆ**

ಪ್ರಾಯಕ್ಕೆ ವಿರುದ್ಧವಾಗಿಯೇ ಇದ್ದವು. ರೋಮನ್ ಕ್ಯಾಥಲಿಕ್ ಮತದಲ್ಲಿ ವಿಶ್ವಾಸವನ್ನು ಗೋಪ್ಯವಾಗಿ ಬೆಳೆಸಿಕೊಂಡು ಪರದೇಶದ ದೊರೆಯ ಊಳಿಗದವನಂತೆ ಹಣವನ್ನು ಸ್ವೀಕರಿಸಿ ತನ್ನ ಜೀವನವನ್ನು ನೀತಿಹೀನಲೋಲುಪ್ತಿಯಲ್ಲಿ ಕಾಲಕಳೆದ ದೊರೆಯಾದರೂ ಪ್ಯೂರಿಟನ್ನರಿಗೆ ಕೆಟ್ಟಿ ಕಾಲವಾದುದರಿಂದಲೂ ಸಹಜಚತುರನಾದುದರಿಂದಲೂ ತನ್ನ ಅಧಿಕಾರವನ್ನು

ನಿರ್ವಹಿಸಿದನು. ಕ್ಷಮಾದಾನಪ್ರಕಟನೆವೇಳೆಯಲ್ಲಿ ವಿಶೇಷಾಧಿಕಾರವನ್ನು ವಹಿಸಿದವನು ಪ್ರಬಲವಿರೋಧವನ್ನು ಕಂಡೊಡನೆ ಒರಟುಹಟಹಿಡಿಯದೆ ಉಪಾಯವನ್ನು ಹಿಡಿದನು.

ಎರಡನೆ ಚಾರ್ಲ್ಸ್ ಕಾಲವಾದ ತರುವಾಯ ಪಟ್ಟಕ್ಕೆ ಆತನ ತಮ್ಮನೇ ಬಾಧ್ಯನಾದನು.

# ಎರಡನೆ ಜೇಮ್ಸ್ (1685—1688)

ಯಾರ್ಕಿನ ಡ್ಯೂಕ್ ; ಆ್ಯ ಹೈಡ್ ಮೊದಲನೆರಾಣಿ, ಮೇರಿ ಮತ್ತು ಆ್ಯ ಕುವರಿಯರು ; ಮೊಡೇನದ ಮೇರಿ ಎರಡನೆ ರಾಣಿ, ಜೇಮ್ಸ್ ಸ್ಟೂಯರ್ಟ್ ಕುವರ ; 1688ರಲ್ಲಿ ಪಲಾಯನ ; 1702ರಲ್ಲಿ ಮರಣ.

## ಸಮಕಾಲಿಕರು

| ಹಾಲೆಂಡ್ | ಫ್ರಾನ್ಸ್ | ಸ್ಪೈನ್ |
|---|---|---|
| ಆರೆಂಜಿನ 3ನೆ ವಿಲಿಯಂ | 14ನೆ ಲೂಯಿ | 2ನೆ ಚಾರ್ಲ್ಸ್ |
| | 1643—1714 | 1665—1700 |

ಡಚ್ಚರೊಡನೆ ಯುದ್ಧದಲ್ಲಿ ಯಶಸ್ಸನ್ನು ಪಡೆದು ಕ್ಲಾರೆಂಡರ್ಶ್ರೀಮಂತನಮಗಳನ್ನು ಮದುವೆಯಾಗಿದ್ದ ಜೇಮ್ಸ್ ಎಲ್ಲರೆದುರಿಗೆ ರೋಮನ್‌ಕ್ಯಾಥಲಿಕ್‌ಮತವನ್ನನುಸರಿಸುತ್ತಿದ್ದನು. ಅಣ್ಣತಮ್ಮಂದಿರಿಗೆ ಬಲುದೂರ. ಅಣ್ಣ ಚಾರ್ಲ್ಸ್‌ ಎಷ್ಟು ಸೋಮಾರಿಯೋ ಜೇಮ್ಸ್ ಅಷ್ಟು ಉದ್ಯೋಗಿ, ಚಾರ್ಲ್ಸ್ ಎಷ್ಟು ಆಚಾರಹೀನನೋ ಜೇಮ್ಸ್ ಅಷ್ಟು ನಿಷ್ಠಾವಂತ. ಅಣ್ಣನ ಕುಚೋದ್ಯವಾಗಲಿ ಠಕ್ಕುತನವಾಗಲಿ ತಮ್ಮನಲ್ಲಿಲ್ಲ, ನೀತಿಹೀನತೆಯಂತೂ ಇಲ್ಲವೇಇಲ್ಲ. ಬಲ್ಲವನಾಗಿದ್ದ ಅಣ್ಣನಿಗೆ ಸದುದ್ದೇಶವಿಲ್ಲ; ಸದುದ್ದೇಶವುಳ್ಳತಮ್ಮನಿಗೆ ಬಿಂಕಬಿಟ್ಟ ಬಲ್ಪಿಲ್ಲ. ಜೇಮ್ಸ್ ಉಪಾಯವನ್ನೇ ಕಾಣ. ಹೆಡ್ಡತನವನ್ನು ಸಮೃದ್ಧಿಯಾಗಿ ಸಂಪಾದಿಸಿಕೊಂಡಿದ್ದನು. ಸ್ಟೂಯರ್ಟ್‌ವಂಶಕ್ಕೆ ಲಕ್ಷಣವೆನಿಸಿದ ಮೂರ್ಖತನವನ್ನು ಗಂಟುಕಟ್ಟಿಕೊಂಡಿದ್ದನು. ದೈವದತ್ತರಾಜಾಧಿಕಾರದಲ್ಲಿ ಭಕ್ತಿಯಿಟ್ಟು ರೋಮನ್‌ಕ್ಯಾಥಲಿಕ್‌ಮತದಲ್ಲಿ ಅತಿಶ್ರದ್ಧೆಯನ್ನುತಾಳಿ ಶತಮೂರ್ಖನೆನಿಸಿ ಮೂರುವರ್ಷಗಳಲ್ಲಿಯೇ ಸರ್ವನಾಶವನ್ನು ಮಾಡಿಕೊಂಡನು. ನಿಷ್ಠಾವೈಪರೀತ್ಯದೊಂದಿಗೆ ಹೆಡ್ಡತನವೂ ಸೇರಿದಾಗ ಮತ್ತೇನಾದೀತು ?

**ಸ್ವಭಾವ**

ಪಟ್ಟವನ್ನೇರಿದವೇಳೆಯಲ್ಲಿ ಜೇಮ್ಸನನ್ನು ಎಲ್ಲರೂ ಗೌರವಿಸಿದರು. ಟೋರಿಪಕ್ಷದವರು ಪ್ರಬಲರಾಗಿದ್ದು ರಾಜಭಕ್ತಿಯನ್ನು ಪೋಷಿಸಿದರು. ಟೆಸ್ಟ್‌ಆಕ್ಟ್, ದೂರೀಕಾರಮಸೂದೆಗಳ ಅವಾಂತರದಲ್ಲಿ ಈ ರಾಜಕುಮಾರನಿಗೆ ಅನ್ಯಾಯನಡೆಯಿತೆಂದು ಜನರು ಭಾವಿಸಿ ಅನುಕೂಲರಾದರು. ಸ್ಕಾಟ್ಲೆಂಡಿನಲ್ಲಿಯೂ ಇಂಗ್ಲೆಂಡಿನಲ್ಲಿಯೂ ಪಾರ್ಲಿಮೆಂಟ್‌ಸಭೆಗಳವರು ಜೇಮ್ಸನಲ್ಲಿ ಆದರವನ್ನು ತೋರಿದರು. ಜೀವಪರ್ಯಂತ ಹೇರಳವಾದ ಹಣವೊದಗುವಂತೆ ಏರ್ಪಡಿಸಿದರು. ರೋಮ್ಸ್

**ಪಾರ್ಲಿಮೆಂಟಿನ ವಿಶ್ವಾಸ**

ಕ್ಯಾಥಲಿಕ್ಕರಮೇಲೆ ಸುಳ್ಳುಆಪಾದನೆ ಹೊರೆಸಿದ್ದವರನ್ನು ಹುಡುಕಿಸಿ ದಂಡಿಸಿದರು. ಟೈಟಸ್‌ಓಟ್ಸನ್ನು ಹಿಡತರಿಸಿ ಬದುಕಿದ್ದೇ ಆಶ್ಚರ್ಯವೆನ್ನುವಂತೆ ಚಾಟಿಯಿಂದ ಹೊಡೆಸಿದರು. ಜೇಮ್ಸನೂ ಸಮಾಧಾನವನ್ನು ಬೀರುತ್ತ ಹೈಚರ್ಚ್ ಅಥವಾ ಟೋರಿಪಕ್ಷದವರ ವಿಶ್ವಾಸಕೆಡದಂತೆ ನಡೆದುಕೊಂಡನು.

ಇಷ್ಟು ಸಮಾಧಾನದಿಂದ ರೋಮನ್‌ಕ್ಯಾಥಲಿಕ್‌ದೊರೆ ಆಳಿಕೆಗೆ ಮೊದಲಿಟ್ಟುದನ್ನು ಕಂಡು ಹಾಲಂಡಿನಲ್ಲಿ ಅಡಗಿದ್ದ ವ್ಹಿಗ್‌ಪಕ್ಷದವರು ತಮ್ಮ ವಿರೋಧವನ್ನು ದಂಗೆಯೆಬ್ಬಿಸುವ ಮೂಲಕವೇ ಸಾಧಿಸಲು ಸಿದ್ಧರಾದರು. ಸ್ಕಾಟ್ಲೆಂಡಿನಲ್ಲಿ ನಡೆದ ಪ್ರಯತ್ನ ಸುಲಭವಾಗಿ ಅಡಗಿಹೋಯಿತು. ಇಂಗ್ಲಂಡಿನಲ್ಲಿ ಯುದ್ಧಕ್ಕಿಟ್ಟುಕೊಂಡಿತು. ಪಟ್ಟಕ್ಕೆ ವಾರಸುದಾರನೆನಿಸಿದ **ಮಾನ್ಮತ್ತಿನ ಡ್ಯೂಕನು** ಡಾರ್ಸೆಟ್ ಜಿಲ್ಲೆಯಲ್ಲಿ ಕಾಣಿಸಿಕೊಂಡು ಪ್ಯೂರಿಟನ್ನರನ್ನು ಸೇರಿಸಿ ಸೈನ್ಯ ಕಟ್ಟಿದನು. **ಸೆಡ್ಜ್‌ಮೂರ್** (Sedgemoor) ಎಂಬಲ್ಲಿ ರಾಜಸೈನ್ಯಕ್ಕೂ ಮಾನ್ಮತ್ತಿಗೂ ಲಡಾಯಿ ನಡೆಯಿತು. ಮಾನ್ಮತ್ ಪಕ್ಷಕ್ಕೆ ಸೋಲಾಯಿತು. ಹಲಕೆಲವುದಿನಗಳಲ್ಲಿ ಆತನು ಸೆರೆಸಿಕ್ಕಿ ಶಿರಚ್ಛೇದನಕ್ಕೆ ಗುರಿಯಾದನು. ಆತನ ಪಕ್ಷವನ್ನು ಸೇರಿಕೊಂಡಿದ್ದವರಿಗೆ ಕ್ರೂರಶಿಕ್ಷೆಗಳಾಗಿಹೋದವು. ಆ ಸಂದರ್ಭದಲ್ಲಿ ನ್ಯಾಯಾಧಿಪತಿಯಾಗಿದ್ದ **ಜೆಫ್ರೇಸ್** (Jeffreys) ಎಂಬಾತನು ಕಠೋರನಾಗಿ ವರ್ತಿಸಿ ವಿಚಾರಣೆಗೆ **ಬ್ಲಡಿ ಅಸ್ಸೈಸ್** (Bloody Assize) ಎಂಬ ಹೆಸರುಂಟಾಗಲು ಕಾರಣನಾದನು.

**ಮಾನ್ಮತ್ ದಂಗೆ 1685**

ವಿರೋಧಿಗಳ ಧ್ವಂಸವಾಯಿತು. ಜೇಮ್ಸ್‌ದೊರೆಯು ಜೆಫ್ರೇಸಿಗೆ ಶ್ರೀಮಂತ ಬಿರುದನ್ನೂ ದೊಡ್ಡ ಹುದ್ದೆಯನ್ನೂ ಬಹುಮಾನಕೊಟ್ಟನು. 'ತನ್ನ ಅಧಿಕಾರ ಭದ್ರವಾದುದನ್ನು ತಿಳಿದ ಜೇಮ್ಸಿಗೆ ಅಂತರಂಗದಲ್ಲಿ ಸಹಧರ್ಮಿಗಳಾದ ರೋಮನ್ ಕ್ಯಾಥಲಿಕ್ಕರಿಗಿದ್ದ ಅಡ್ಡಿಗಳನ್ನು ನಿವಾರಿಸಬೇಕೆಂಬ ಇಷ್ಟ ಹುಟ್ಟಿತು. ಟೆಸ್ಟ್ ಆಕ್ಟನ್ನು ರದ್ದುಗೊಳಿಸಬೇಕೆಂದು ಪಾರ್ಲಿಮೆಂಟ್‌ಸಭೆಗೆ ಹೇಳಿಕಳುಹಿಸಿದನು. ಸಭಿಕರು ಬಿಲ್ಕುಲ್ ಆಗುವುದಿಲ್ಲವೆಂದುಬಿಟ್ಟರು. ಆಗ ದೊರೆ ಪಾರ್ಲಿಮೆಂಟನ್ನು ಮುಕ್ತಾಯಗೊಳಿಸಿ ಟೋರಿಪಕ್ಷದ ಮಂತ್ರಿಗಳನ್ನು ಕೆಲಸದಿಂದ ತಪ್ಪಿಸಿಬಿಟ್ಟನು. ತನಗೆ ದೊರೆತನವನ್ನು ಕೊಡಿಸಿದ್ದವರನ್ನೇ ದೂರಮಾಡಿಕೊಂಡನು.

**ರಾಜನ ಯೋಚನೆ**

ತಾನು ಬಲಿಷ್ಠನೆಂದು ಭಾವಿಸಿದ ಈ ದೊರೆಯ ಮನಸ್ಸಿನಲ್ಲಿ ರಾಜಾಧಿಕಾರವನ್ನು ನಿರಂಕುಶವಾಗಿ ನೆಲೆಗೊಳಿಸುವ ಕನಸಿನೊಂದಿಗೆ ರೋಮನ್‌ಕ್ಯಾಥಲಿಕ್‌ಮತವನ್ನೆತ್ತಿ ಹಿಡಿಯುವ ಸಂಕಲ್ಪವು ತೋರಿತು. ರೋಮನ್‌ಕ್ಯಾಥಲಿಕ್‌ಮತವನ್ನು ಸ್ವೀಕರಿಸಿದಂತೆ ನಟಿಸಿದ **ಸಂಡರ್ಲಂಡ್ ಶ್ರೀಮಂತ**( Earl of Sunderland )ನೆಂಬೊಬ್ಬ

ಚಕವರ್ತಿಯನ್ನು ನಂಬಿ ಜೇಮ್ಸ್ ಆತನನ್ನು ಮಂತ್ರಿಸ್ಥಾನದಲ್ಲಿಟ್ಟುಕೊಂಡನು. ಎರಡನೆ ಚಾರ್ಲ್ಸ್‌ಕಾಲದಲ್ಲಿ ರಾಜಪುರುಷನಿಗೆ ಕಾನೂನನ್ನು ತಳ್ಳಿಡುವ ಅಧಿಕಾರದ ಪ್ರಸ್ತಾಪ ಹುಟ್ಟಿತ್ತಷ್ಟೆ. ಅದರಂತೆ ತನಗೆ **ಸಸ್ಪೆಂಡ್** ಮತ್ತು **ಡಿಸ್ಪೆನ್ಸ್**‌ಮಾಡುವ ಅಧಿಕಾರವಿದೆಯೆಂದು ಜೇಮ್ಸ್ ಪ್ರಾರಂಭಿಸಿ ಭೀರುಗಳಾಗಿದ್ದ

**ಕ್ಯಾಥಲಿಕ್ ಪಕ್ಷಪಾತ**

ಕೆಲವು ಜಡ್ಜಿಗಳಿಂದ ತನಗನುಕೂಲವಾದ ತೀರ್ಪನ್ನು ಹೊರಡಿಸಿದನು. ಸೈನ್ಯದಲ್ಲಿ ಒಂದುದಳಕ್ಕೆ ರೋಮನ್‌ಕ್ಯಾಥಲಿಕ್ಕನೊಬ್ಬಾತನನ್ನು ಕರ್ನಲ್ಲಾಗಿ ಗೊತ್ತುಮಾಡಿದನು. ಆತನು ಆಂಗ್ಲಿಕನ್ ಆಚಾರಗಳಿಗೂ ಒಪ್ಪಲಿಲ್ಲ, ರಾಜನ ಮತಾಧಿಕಾರಕ್ಕೂ ಒಪ್ಪಲಿಲ್ಲ. ಆ ಕರ್ನಲ್ಲನ ಸಾರಥಿಯೇ ಆತನಮೇಲೆ ದಾವಾ ಮಾಡಿದನು. ಟೆಸ್ಟ್ ಆಕ್ಟ್‌ಪ್ರಕಾರ ಪ್ರಮಾಣಮಾಡದೆ ಅಧಿಕಾರಸ್ವೀಕಾರವಾಯಿತೆಂಬ ನಿಯಮಭಂಗದ ವಿಚಾರಣೆಯಾಯಿತು. ರಾಜನು ಕೊಟ್ಟ ಹುದ್ದೆಯಾದುದರಿಂದ ನಿಯಮಭಂಗವಲ್ಲವೆಂದು ಆ ಜಡ್ಜಿ ಹೇಳಿದನು. ಇದರಿಂದ ಜೇಮ್ಸಿಗೆ ಧೈರ್ಯ ಹೆಚ್ಚಿತು. ಅನೇಕ ಹುದ್ದೆಗಳಲ್ಲಿ ರೋಮನ್‌ಕ್ಯಾಥಲಿಕ್ಕರನ್ನು ಗೊತ್ತುಮಾಡಿದನು. ಕೇಂಬ್ರಿಡ್ಜ್ ಆಕ್ಸ್‌ಫರ್ಡ್ ವಿದ್ಯಾಪೀಠಗಳಲ್ಲಿ ರೋಮನ್‌ಕ್ಯಾಥಲಿಕ್ಕರಿಗೆ ಗೌರವನಡೆಯುವಂತೆ ಬಲಾತ್ಕರಿಸಿದನು. **ಹೈಕಮಿಷನ್ ಕೋರ್ಟೆ**ಂಬ ಹೊಸನ್ಯಾಯಸ್ಥಾನವನ್ನು ನಿರ್ಮಿಸಿ ಅಲ್ಲಿಗೆ ಜೆಫ್ರೇಸನನ್ನು ನಿಯಮಿಸಿದನು. ಇದು ಲಾಂಗ್‌ಪಾರ್ಲಿಮೆಂಟ್ ನಡೆಸಿದುದಕ್ಕೆ ವಿರೋಧವಾಯಿತು. ತನಗೆ ಎದುರುಬೀಳಬಹುದಾದವರನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದ ರಾಜನು ಸೈನ್ಯವನ್ನು ಹೆಚ್ಚಿಸಿಕೊಂಡು, ರೋಮನ್‌ಕ್ಯಾಥಲಿಕ್ಕರಿಗೆ ಅಲ್ಲಿ ಅಧಿಕಾರಗಳನ್ನು ಕೊಟ್ಟು ರಾಜಧಾನಿಯ ಸಮೀಪದಲ್ಲಿಯೇ ಅದನ್ನು ಬಿಡಾರಗೊಳಿಸಿದನು.

ಜೆಫ್ರೇಸನು ತನ್ನ ಕೆಲಸವನ್ನು ಯಥಾಕ್ರೌರ್ಯದಿಂದ ನಡೆಸಿ ವಿಜೃಂಭಿಸಿದನು. ನ್ಯಾಯವಿಧಿಗಳಲ್ಲಿಲ್ಲದ ಶಿಕ್ಷೆಗಳನ್ನೂ ಕೊಡಿಸಿದನು. ಕೇಂಬ್ರಿಡ್ಜ್ ಆಕ್ಸ್‌ಫರ್ಡ್ ವಿದ್ಯಾಪೀಠಗಳ ವಿದ್ವಾಂಸರಿಗೆ ಸ್ಥಾನಭ್ರಷ್ಟತೆಯಾಯಿತು. ರಾಜನು ನಡೆಸಿದ ಅಧರ್ಮವನ್ನು ಪ್ರತಿಭಟಿಸಿದ್ದೇ ಅವರ ತಪ್ಪು. ಆಗ ಜನರಲ್ಲಿ ಹಾಹಾಕಾರ

**ಪ್ರಾಟೆಸ್ಟೆಂಟರ ಶಂಕೆ**

ಮೊದಲಾಯಿತು. ಪ್ರಾಟೆಸ್ಟೆಂಟ್‌ಮತಕ್ಕೆ ವಿಪತ್ತು ತೋರಿತೆಂಬ ಕೂಗೆದ್ದಿತು. ಇಂತಹವೇಳೆಯಲ್ಲಿ ಫ್ರಾನ್ಸಿನ ಹ್ಯೂಗಿನೋಜನರು ಸ್ವದೇಶಭ್ರಷ್ಟರಾಗಿ ಸಾವಿರಗಟ್ಟಲೆಯಾಗಿ ಇಂಗ್ಲಂಡಿಗೆ ಓಡಿಬಂದರು. ಅಲ್ಲಿಯ 14ನೆ ಲೂಯಿದೊರೆ ರೋಮನ್‌ಕ್ಯಾಥಲಿಕ್‌ಮತನಿಷ್ಠೆಯನ್ನು ಬೆಳೆಸಿಕೊಂಡು ಹಿಂದಿನ 4ನೆ ಹೆನ್ರಿದೊರೆ ಹ್ಯೂಗಿನೋಜನರಿಗೆ ಕೊಟ್ಟಿದ್ದ ಮತಸ್ವಾತಂತ್ರ್ಯವನ್ನು ರದ್ದುಗೊಳಿಸಿದ್ದನು( Revocation of the Edict of Nantes). ತಂಡತಂಡವಾಗಿ ಬಂದ ಹ್ಯೂಗಿನೋಜನರನ್ನು ಕಂಡು ತಮಗೂ ಅದೇಗತಿಯಾದೀತೆಂಬ ಶಂಕಾಭಯಗಳು ಇಂಗ್ಲಿಷರಲ್ಲಿ ಹುಟ್ಟಿದವು. ಟೋರಿಪಕ್ಷದವರಲ್ಲಿಯೂ ಕಳವಳಮೊದಲಾಯಿತು.

ಇಂಗ್ಲಂಡಿನಲ್ಲಿ ರೋಮನ್‌ಕ್ಯಾಥಲಿಕ್ಕರು ಸಂಖ್ಯಾಬಲವನ್ನಾದರೂ ಪಡೆದಿದ್ದರೆ ರಾಜನಿಗೆ ಬೆಂಬಲವಿರಬಹುದಾಗಿತ್ತು. ರೋಮನ್‌ಕ್ಯಾಥಲಿಕ್ಕರು ಅಲ್ಪಸಂಖ್ಯಾಕರು; ಅದನ್ನು ಕಂಡು ದೊರೆ ಐರಿಷ್‌ಕ್ಯಾಥಲಿಕ್ಕರನ್ನು ಮೆಚ್ಚಿಸುವ ಯೋಚನೆಮಾಡಿದನು.

**ಐರ್ಲಂಡ್**

ಐರ್ಲಂಡಿಗೆ **ಟಿರ್ಕಾನೆಲ್ ಶ್ರೀಮಂತ**(Earl of Tyrconnel) ನೆಂಬ ರೋಮನ್‌ಕ್ಯಾಥಲಿಕ್‌ಮತಸ್ಥನನ್ನು ಅಧಿಕಾರಿಯಾಗಿ ನೇಮಿಸಿದನು. ಆದರೆ ಪರಿಣಾಮದಲ್ಲಿ ಕೆಲಸಕೆಟ್ಟಿತು. ಆತನು ಅಲ್ಲಿಯ ಪ್ರಾಟೆಸ್ಟೆಂಟರಿಗೆ ವಿರೋಧತೋರಲು ಐರಿಷ್‌ಪ್ರಾಟೆಸ್ಟೆಂಟರು ದೊರೆಗೆ ವಿರೋಧಿಗಳಾದರು.

ಚಾತುರ್ಯವನ್ನರಿಯದ ದೊರೆ ಹೆಡ್ಡತನದಉಪಾಯವನ್ನು ಯೋಚಿಸಿದನು. ರೋಮನ್‌ಕ್ಯಾಥಲಿಕ್ಕರಂತೆ ಡಿಸ್ಸೆಂಟರ್‌ಗುಂಪಿನವರಿಗೂ ಮತಸ್ವಾತಂತ್ರ್ಯವಿರಲಿಲ್ಲ ವಷ್ಟೆ. ಡಿಸ್ಸೆಂಟರ್‌ಗುಂಪಿನವರು ತನ್ನಕಡೆ ಸೇರಿಕೊಂಡಾರೆಂದು ನಿರೀಕ್ಷಿಸಿ ಈ

**ದೈವದತ್ತಾಧಿಕಾರ ಪ್ರಯೋಗ**

ದೊರೆ ಎರಡುಪಂಗಡಗಳಿಗೂ ದಂಡವಿಧಿಗಳಿಂದ ಬಿಡುಗಡೆ ಕೊಡಿಸುವ ಯೋಚನೆಹಿಡಿದನು. ಕ್ಯಾಥಲಿಕ್ಕರೊಂದಿಗೆ ತಮ್ಮನ್ನು ಜತೆಗೂಡಿಸಿದ್ದನ್ನುಕಂಡು ಡಿಸ್ಸೆಂಟರುಗಳು ಅಸಹ್ಯ ಗೊಂಡರು. ದಡ್ಡತನದ ಉಪಾಯವೆಂದೆಲ್ಲರೂ ತಿಳಿದರು. 1687ರಲ್ಲಿ ಜೇಮ್ಸ್ ಡಿಕ್ಲರೇಷನ್ ಆಫ್ ಇಂಡಲ್ಜೆನ್ಸ್‌ಎಂಬ **ಕ್ಷಮಾದಾನಪ್ರಕಟನೆ** ಯನ್ನು ಹೊರಡಿಸಿದನು. ಈ ಬಗೆಯ ನಿರಂಕುಶಾಧಿಕಾರದ ಪ್ರಯೋಗವನ್ನಾಗಲಿ ಪರಿಣಾಮದಲ್ಲಿ ಪ್ರಾಟೆಸ್ಟೆಂಟ್‌ಮತಕ್ಕೆ ಆಪತ್ತನ್ನಾಗಲಿ ಒಪ್ಪಲಾರದೆ ಡಿಸ್ಸೆಂಟರುಗಳು ಆಂಗ್ಲಿಕನ್ನರೊಂದಿಗೆಸೇರಿ ರಾಜವಿರೋಧಿಗಳಾದರು. ಅದೇವರ್ಷ ಪಾರ್ಲಿಮೆಂಟ್ ಸಭೆಯನ್ನು ಮುಕ್ತಾಯಮಾಡಿ ಹೊಸಸಭೆಗೆ ತನ್ನವರೇ ಸಭಿಕರಾಗುವಂತೆ ನೆರವೇರಿ ಸುವ ಉಪಾಯವನ್ನೂ ಯೋಚಿಸಿದನು. ಜಿಲ್ಲಾಧಿಕಾರಿಗಳಿಗೆ ತಮ್ಮ ಜಿಲ್ಲೆಗಳಲ್ಲಿದ್ದ ರೋಮನ್‌ಕ್ಯಾಥಲಿಕ್ ಮತ್ತು ನಾನ್‌ಕನ್ಫಾರ್ಮಿಸ್ಟ್‌ಜನರ ಪಟ್ಟಿಯನ್ನೊದಗಿಸತಕ್ಕು ದೆಂದು ಆಜ್ಞೆಕೊಟ್ಟನು. ಉದ್ದೇಶತಿಳಿದ ಆ ಅಧಿಕಾರಿಗಳಲ್ಲಿ ಅನೇಕರು ರಾಜಿನಾಮೆ ಕೊಟ್ಟರು. ಮುಂದೆ ಅನಾಹುತವು ಸಿದ್ಧವಾಗಿದೆಯೆಂದು ಎಲ್ಲರೂ ಹೇಳಿಕೊಳ್ಳು ವಂತಾಯಿತು.

1688ರಲ್ಲಿ ದೊರೆ **ಎರಡನೆ ಪ್ರಕಟನೆ**ಯನ್ನು ಹೊರಡಿಸಿದನು. ಅಷ್ಟಕ್ಕೆ ಜೇಮ್ಸ್ ತೃಪ್ತನಾಗದೆ ಆ ಪ್ರಕಟನೆಯನ್ನು ಪುರೋಹಿತರು ಎಲ್ಲ ಚರ್ಚುಗಳಲ್ಲಿಯೂ ಓದಿ ಹೇಳಬೇಕೆಂದು ಕಟ್ಟಾಜ್ಞೆಮಾಡಿದನು. ರೋಮನ್‌ಕ್ಯಾಥಲಿಕ್ ಮತಾಚರಣೆಗಳು ಪಾತಕಗಳೆಂದು ವ್ಯಾಖ್ಯಾನಬೆಳೆಸುತ್ತಿದ್ದ ಪಾದ್ರಿಗಳು ಅವುಗಳನ್ನು ಸನ್ಮಾನಿಸಬೇಕಾಗಿ ಬಂತು. ಪುರೋಹಿತಪ್ರಮುಖರೇ ಎದುರುಬಿದ್ದರು. ಕ್ಯಾಂಟರ್ಬರಿಯ ಆರ್ಚ್

ಬಿಷಪ್ ಮೊದಲ್ಗೊಂಡು ಏಳುಬಿಷಪ್ಪರು ರಾಜನಿಗೆ ಅರ್ಜಿಕೊಟ್ಟು ಕ್ಷಮಾದಾನದ ಪ್ರಕಟನೆಯನ್ನು ಓದಿಸುವ ಆಜ್ಞೆಯನ್ನು ತಡೆಯಬೇಕೆಂದು

**ಬಿಷಪ್ಪರ ವಿರೋಧ**

ಕೇಳಿದರು. ಬಹುಮಂದಿ ಪುರೋಹಿತರು ಆ ಪ್ರಕಟನೆಯನ್ನು ಓದಿಹೇಳುವುದಿಲ್ಲವೆಂದುಬಿಟ್ಟರು. ಆಗ ಜೇಮ್ಸಿಗೆ ಮೈಯೆಲ್ಲ ರೇಗಿತು. ಆ ಏಳುಬಿಷಪ್ಪರನ್ನು ರಾಜದ್ರೋಹದ ಆಪಾದನೆಯಮೇಲೆ ವಿಚಾರಣೆಗೆ ನಿಲ್ಲಿಸಿದನು. ಲಂಡನ್ನಿನಲ್ಲಿ ಮೊಖದ್ದಮೆ ಪ್ರಾರಂಭವಾಗುವುದೇ ತಡ, ಎಲ್ಲೆಲ್ಲಿಯೂ ಜನರ ಗೊಂದಲವೆದ್ದಿತು. ಆಪಾದಿತರಾದ ಮತಗುರುಗಳು

**ವಿಚಾರಣೆ**

ನ್ಯಾಯಸ್ಥಾನಕ್ಕೆ ಬಂದುಹೋಗುವುದು ಜನಸಂದಣಿಯ ಮೆರವಣಿಗೆಯಾಯಿತು. ವಿಚಾರಣೆ ಮುಂದುವರಿಯುತ್ತ ಜನರ ಕೋಲಾಹಲವು ಹೆಚ್ಚಿತು. ಕಾರ್ನ್‌ವಾಲ್‌ಜಿಲ್ಲೆಯ ಜನರು ತಮ್ಮ ಮತಗುರು ಅನ್ಯಾಯಕ್ಕೆ ಸಿಕ್ಕಿದನೆಂಬುದನ್ನು ತಿಳಿದಕೂಡಲೆ ಗುಂಪುಕಟ್ಟಿಕೊಂಡು

"ಏನು, ನಮ್ಮ ಟ್ರೆಲಾನಿಯ ಜೀವ ತೆಗೆಯುವರೇ !
ಏನು, ನಮ್ಮ ಮತಗುರು ಪ್ರಾಣ ಹಿಂಡುವರೇ !
ಏಕೆಂದು ಹತ್ತುಸಾವಿರಮಂದಿ ಕೇಳದೆ ಬಿಟ್ಟಾರೇ ? "

ಎಂಬ ಪಲ್ಲವಿಯನ್ನು ಹಾಡಿಕೊಳ್ಳುತ್ತ ದಂಗೆಯೇಳುವುದಕ್ಕೂ ಸಿದ್ಧರಾದರು.

ಏಳುಬಿಷಪ್ಪರುಗಳ ವಿಚಾರಣೆ ನಡೆಯುತ್ತಿದ್ದಾಗಲೇ ರಾಜನಿಗೆ ಗಂಡುಮಗು ವಾಯಿತು. ಮೊದಲನೆಹೆಂಡತಿ ಆನ್ ಹೈಡ್ ತೀರಿಕೊಂಡಬಳಿಕ ಜೇಮ್ಸ್ ಇಟಲಿಯಲ್ಲಿ **ಮೊಡೇನ** ಸಂಸ್ಥಾನದ **ಮೇರಿ** (Mary of Modena) ಎಂಬ ರೋಮನ್ ಕ್ಯಾಥಲಿಕ್ ರಾಜಪುತ್ರಿಯನ್ನು ಮದುವೆಯಾಗಿದ್ದನು. ಕ್ಯಾಥಲಿಕ್ ರಾಜದಂಪತಿಗಳಿಗೆ ಪುತ್ರೋತ್ಸವವಾದುದು ಪ್ರಾಟೆಸ್ಟೆಂಟರ ಶಂಕಾಭಯಗಳನ್ನು ದ್ವಿಗುಣಗೊಳಿಸಿತು. ಕ್ಯಾಥಲಿಕ್‌ಮತದಲ್ಲಿ ಬೆಳೆಯುವ ರಾಜಕುವರನು ಮುಂದಿನಅರಸಾದರೇನುಗತಿಯೆಂದು ಹಾರಾಟಕ್ಕಿಟ್ಟುಕೊಂಡಿತು. ಜೂನ್ ತಿಂಗಳ 10ನೆ ದಿನ ಪುತ್ರೋತ್ಸವ; 30ನೆ ದಿನ ಬಿಷಪ್ಪರ ಮೊಖದ್ದಮೆ ಮುಕ್ತಾಯ. ಮತ

**ಪ್ರಮುಖರ ವರ್ತನೆ**

ಗುರುಗಳು ನಿರಪರಾಧಿಗಳೆಂದೂ ಆಜ್ಞೆಕೊಟ್ಟರಾಜನವೇ ಅಕ್ರಮವೆಂದೂ ತೀರ್ಪು. ಆ ದಿನವೇ ದೇಶಪ್ರಮುಖರು **ಆಹ್ವಾನಪತ್ರಿಕೆ** ಬರೆದು ಹಾಲಂಡಿನಲ್ಲಿದ್ದ **ಆರೆಂಜಿನ ವಿಲಿಯಮಿಗೆ** ಕೊಟ್ಟುಕಳುಹಿಸಿ ಕೂಡಲೆ ಹೊರಟುಬರಬೇಕೆಂದು ಕೇಳಿದರು.

ಇಂತಹ ಸನ್ನಿವೇಶವನ್ನೇ ಕಾದುಕೊಂಡಿದ್ದ ಆ ವಿಲಿಯಂ ಜೇಮ್ಸಿಗೆ ಅಳಿಯನಾದವನು. ಜೇಮ್ಸಿಗಿದ್ದ ಇಬ್ಬರು ಕುವರಿಯರಲ್ಲಿ ಮೇರಿಯೆಂಬ ಹಿರಿಯಾಕೆಯನ್ನು ಡ್ಯಾನ್ಬಿಮಂತ್ರಿಯಕಾಲದಲ್ಲಿ ಆ ವಿಲಿಯಂ ಮದುವೆಯಾಗಿದ್ದನು. ಅದಲ್ಲದೆ ಆತನು

ಹಿರೇಚಾರ್ಲ್ಸ್‌ನ ದೌಹಿತ್ರನಾದವನು. ಫ್ರಾನ್ಸಿನ 14ನೆ ಲೂಯಿಯ ಎದುರಿನಲ್ಲಿ ಡಚ್ಚರ ನಾಯಕನಾಗಿ ಸರ್ವೋಪಾಯಗಳಿಂದಲೂ ಸನ್ನಾಹ

**ವಿಲಿಯಮನ ಸಿದ್ಧತೆ**

ಮಾಡುತ್ತಿದ್ದ ಆತನಿಗೆ ಇಂಗ್ಲಂಡಿನ ಸ್ನೇಹವೂ ಸಹಕಾರವೂ ಅತ್ಯಗತ್ಯವಾಗಿತ್ತು. ಡಚ್ಚರೊಡನೆ ಇಂಗ್ಲಂಡಿನವರು ಸೇರಿಕೊಳ್ಳದಂತೆ ನೆರವೇರಿಸಲು ಲೂಯಿ ಇಂಗ್ಲಿಷ್ ದೊರೆಗಳನ್ನೇ ತನ್ನ ವಶದಲ್ಲಿಟ್ಟುಕೊಂಡಿರುತ್ತಿದ್ದನು. ಅಂತಹ ಸಮಯದಲ್ಲಿ ಕಾತರದಿಂದಿದ್ದ ವಿಲಿಯಮನಿಗೆ ಆಹ್ವಾನ ತಲಪಿದಕೂಡಲೆ ಆತನು ಸಣ್ಣದಳವನ್ನೆತ್ತಿಕೊಂಡು ಹೊರಟು ಇಂಗ್ಲಂಡಿನ ನೈರುತ್ಯ ಭಾಗದಲ್ಲಿ ಟಾರ್ಬೆ(Torbay) ಎಂಬಲ್ಲಿಳಿದು ನಿದಾನವಾಗಿ ಲಂಡನ್ನಕಡೆಗೆ ಹೊರಟನು.

ಬಿಷಪ್ಪರ ಬಿಡುಗಡೆಯಕಾಲದಲ್ಲಿ ನಡೆದ ಗಡಿಬಿಡಿಯನ್ನು ಕೇಳಿದ ಲೂಯಿ ಜೇಮ್ಸಿಗೆ ಬೇಕಾದ ಸೈನ್ಯಸಹಾಯವನ್ನು ಕಳುಹಿಸುವುದಾಗಿ ಹೇಳಿಕಳುಹಿಸಿದನು. ಸಹಾಯಬೇಕಿಲ್ಲವೆಂದು ಜೇಮ್ಸ್ ಹೇಳಿಬಿಟ್ಟನು. ಲೂಯಿ ತನ್ನ ಸೈನ್ಯಗಳನ್ನು ಬೇರೆದಿಕ್ಕಿಗೆ ಕಳುಹಿಸಿಕೊಂಡನು. ನೊಖದ್ದಮೆ ಮುಗಿದಮೇಲೆ ವಿಲಿಯಂ ಬರುವ ಸಮಾಚಾರ ಹರಡಿತು. ಕೆಟ್ಟಮೇಲೆ ಬುದ್ಧಿಬಂದಹಾಗೆ

**ಜೇಮ್ಸನ ಹೆಡ್ಡತನ**

ಜೇಮ್ಸ್ ಹೈಕಮಿಷನ್ ಕೋರ್ಟನ್ನು ರದ್ದುಮಾಡಿದನು. ರಾಕ್ಷಸನಿಗೆ ಅರೆಕಾಸಿನ ಹಪ್ಪಳವನ್ನೆ ಸೆದಹಾಗಾಯಿತು. ವಿಲಿಯಂ ಇಂಗ್ಲಂಡಿನಲ್ಲಿ ಕಾಣಿಸಿಕೊಂಡು ಪ್ರಾಟೆಸ್ಟೆಂಟರನ್ನು ಕಟ್ಟಿಕೊಳ್ಳುತ್ತಿದ್ದವೇಳೆಯಲ್ಲಿ ಜೇಮ್ಸ್ ತನ್ನ ಸೈನ್ಯವನ್ನೆತ್ತಿಹೊರಟನು. ಸೇನಾಪತಿಗಳಲ್ಲಿ ಸಮರ್ಥನಾದ **ಜಾನ್ ಚರ್ಚಿಲ್** (John Churchill) ಎಂಬಾತನು ವೇಗವಾಗಿ ಮುಂದೆ ಹೊರಡಬೇಕೆಂದು ಸಲಹೆಕೊಟ್ಟನು. ಆಗತಾನೆ ಜೇಮ್ಸನ ಮೂಗಿನಲ್ಲಿ ರಕ್ತಕಾರಿತು; ಹೊರಡುವುದು ತಡವಾಯಿತು. ಹೇಗಾದರೂ ವಿಲಿಯಂ ಗೆಲ್ಲತಕ್ಕವನೆಂದು ತಿಳಿದ ಆ ಸೇನಾಪತಿ ಜೇಮ್ಸ್ ಪಕ್ಷವನ್ನು ಬಿಟ್ಟುಹೊರಟು ವಿಲಿಯಂ ಪಕ್ಷವನ್ನು ಸೇರಿದನು. ಜೇಮ್ಸನ ಸ್ವಂತಮಗಳಾದ ಆನಳೇ ಹೊರಟುಬಿಟ್ಟಳು. ಸ್ವಂತ ಸೈನ್ಯದಲ್ಲಿದ್ದ ಪ್ರಾಟೆಸ್ಟೆಂಟರು ಶತ್ರುಪಕ್ಷವನ್ನು ಸೇರಿಕೊಳ್ಳುತ್ತಿದ್ದರು.

ಜೇಮ್ಸಿಗೆ ದಿಗ್ಭ್ರಮೆ ಹಿಡಿಯುವಂತಾಯಿತು. ತನ್ನ ರಾಣಿಯನ್ನೂ ಕೂಸನ್ನೂ ಆ ವೇಳೆಗೆ ಫ್ರಾನ್ಸಿಗೆ ಕಳುಹಿಸಿಕೊಟ್ಟಿದ್ದನು. ತಂದೆಯಪಾಡು ಪ್ರಾಪ್ತಿಯಾದಂತಾಯಿತು. ಯುಕ್ತಿಹೀನನಾದ ಈ ದೊರೆಗೆ ಹಿಂದಿದ್ದ ಧೈರ್ಯವೂ ಆ ಸಮಯದಲ್ಲಿ ಮಾಯವಾಗಿಹೋಯಿತು. ಲಂಡನ್ನಿಗೆ ಬಂದವನು ತನ್ನ ಅರ

**ಪರಾರಿ**

ಮನೆ ಶೂನ್ಯವಾಗಿದ್ದುದನ್ನು ಕಂಡು ಅಲ್ಲಿ ನಿಲ್ಲದೆ ಪಲಾಯನ ಮಾಡಿದನು. ದಾರಿಯಲ್ಲಿ ಸೆರೆಸಿಕ್ಕಿದನು. ಆದರೆ ಜಾಣನಾದ ವಿಲಿಯಂ ಆತನನ್ನು ಪಹರೆಯಲ್ಲಿ ಬಂಧಿಸದೆ ಎಚ್ಚರಿಕೆಯಿಂದಿದ್ದು ಫ್ರಾನ್ಸಿಗೆ ದಾರಿ

ಬಿಟ್ಟುಕೊಟ್ಟನು. ಪರಾರಿಯ ದಾರಿಯನ್ನೇ ಜೇಮ್ಸ್ ಹಿಡಿದನು. ಇಂಗ್ಲಂಡ್ ರಾಜ್ಯವನ್ನು ಬಿಟ್ಟು ಫ್ರಾನ್ಸಿಗೋಡಿಹೋದನು.

ಸಣ್ಣದಾದ ಡಚ್ ಸೈನ್ಯವನ್ನು ತಂದಿದ್ದಾಗ್ಯೂ ವಿಲಿಯಂ ಇಂಗ್ಲಿಷರ ಸಹಾಯ ದಿಂದಲೇ ಮುಂದೆ ನಡೆದನು. ಹೊಡೆದಾಟವಿಲ್ಲದೆ ಲಂಡನ್ ಸೇರಿ ರಾಜ್ಯವನ್ನು ಪಡೆದನು. ವ್ಹಿಗ್ ಪಕ್ಷದವರಂತೂ ಆತನಿಂದ ರಾಜ್ಯದ ಉದ್ಧಾರವಾಯಿತೆಂದುಕೊಂಡರು. ಲಂಡನ್ ಸೇರಿದಬಳಿಕ ವಿಲಿಯಂ ಪಾರ್ಲಿಮೆಂಟ್ ಸಭೆಯನ್ನು ಕರೆಸಿದನು. ಸಭಿಕರು ಸೇರಿ

**ವಿಲಿಯಮನ ಜಾಣ್ಮೆ**

ಜೇಮ್ಸ್ ರಾಜ್ಯತ್ಯಾಗಮಾಡಿದನೆಂದು ನಿಶ್ಚಯಿಸಿ ರಾಜ್ಯಾಧಿಕಾರನಿಷ್ಕರ್ಷೆಯಪತ್ರ ವನ್ನು ಸಿದ್ಧಗೊಳಿಸಿ ಅದಕ್ಕೆ ವಿಲಿಯಮನ ಒಪ್ಪಿಗೆಪಡೆದು ಆ ತರುವಾಯ ರಾಜ್ಯ ವನ್ನು ವಿಲಿಯಂ ಮತ್ತು ಮೇರಿಯಿಬ್ಬರಿಗೂ ಒಪ್ಪಿಸಿಬಿಟ್ಟರು.

1688ರಲ್ಲಿ ಜೇಮ್ಸ್‌ದೊರೆ ಪಲಾಯನಸೂತ್ರವನ್ನು ಹಿಡಿದು ಪಾರ್ಲಿಮೆಂಟ್ ಸಭಿಕರು ಕೆಲವು ಷರತ್ತುಗಳಮೇಲೆ ವಿಲಿಯಮಿಗೆ ರಾಜ್ಯಕಟ್ಟಿದ ಸಂಗತಿಗೆ ಘನವಾದ ಸ್ಥಾನವುಂಟು. ಅದನ್ನು ಇಂಗ್ಲಿಷರು **ರಕ್ತಪಾತರಹಿತರಾಷ್ಟ್ರಪಲ್ಲಟ** ( Bloodless Revolution )ವೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಪ್ರಭುವಿಗೂ ಪಾರ್ಲಿ ಮೆಂಟಿಗೂ ಸುಮಾರು 1600ರಿಂದ ನಡೆಯುತ್ತಿದ್ದ ಜಗಳವು ಇತ್ಯರ್ಥವಾದುದು ಆ ಘಟನೆಯಿಂದ.

## ರಕ್ತಪಾತರಹಿತರಾಷ್ಟ್ರಪಲ್ಲಟ

ಲಂಡನ್ ಸೇರಿದಮೇಲೆ ಆರೆಂಜಿನ ವಿಲಿಯಂ ಹೊಸಪಾರ್ಲಿಮೆಂಟ್ ಸಭೆಸೇರುವ ಏರ್ಪಾಟುಮಾಡಿದನಷ್ಟೆ. ಆರೀತಿ ನೆರೆದ ಸಭೆಗೆ ಸಭಿಕರಾದವರಲ್ಲಿ ಹ್ವಿಗ್‌ಪಕ್ಷದವರು ಪ್ರಬಲರಾಗಿದ್ದರು. ಟೋರಿಗಳು ದುರ್ಬಲರಾಗಿದ್ದರು. ಟೋರಿಗಳಿಗೆ ವಿಲಿಯಮನ್ನು ದೊರೆಯಾಗಿ ಸ್ವೀಕರಿಸುವ ಇಷ್ಟವಿರಲಿಲ್ಲ. ಆದ್ದರಿಂದ

**ಕನ್ವೆನ್ಷನ್ ಪಾರ್ಲಿಮೆಂಟ್**

ಅವರು ಹೆಸರಿಗೆಮಾತ್ರ ಜೇಮ್ಸನೇ ದೊರೆಯಾಗಿರಲೆಂದೂ ಆತನ ಪ್ರತಿನಿಧಿಯಂತೆ ವಿಲಿಯಂ ಆಡಳಿತವನ್ನು ನಡೆಸಲೆಂದೂ ಸೂಚಿಸಿದರು. ಆ ಸೂಚನೆಯನ್ನು ಹ್ವಿಗ್ಗರು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಜೇಮ್ಸ್ ರಾಜ್ಯತ್ಯಾಗಮಾಡಿದನೆಂದು ಸ್ಥಾಪಿಸಿ ರಾಜ್ಯಾಧಿಕಾರವನ್ನು ಕುರಿತು ಸ್ಪಷ್ಟವಾಗಿ ಒಂದು ಒಕ್ಕಣಿಕೆಯನ್ನು ಸಿದ್ಧಗೊಳಿಸಿ ಅದಕ್ಕೆ ವಿಲಿಯಮನ ಸಮ್ಮತಿಯನ್ನು ಪಡೆದರು. ಆ ತರುವಾಯ **ವಿಲಿಯಂ** ಮತ್ತು **ಮೇರಿ**ಯಿಬ್ಬರೂ ರಾಜಾರಾಣಿಯರೆಂದು ಗೊತ್ತುಮಾಡಿ ಅವರಿಗೆ ರಾಜ್ಯವನ್ನೊಪ್ಪಿಸಿದರು.

ಜೇಮ್ಸ್ ಪರಾರಿಯಾಗಿ ವಿಲಿಯಂ ರಾಜನಾದ ಒಂದು ಅಂಶಮಾತ್ರವಲ್ಲ. ಅದೇವೇಳೆಯಲ್ಲಿಯೇ ಪಾರ್ಲಿಮೆಂಟ್‌ಸಭಿಕರು ಒಕ್ಕಣಿಕೆಯಲ್ಲಿ ರಾಜಾಧಿಕಾರದ ಮೇರೆಯನ್ನು ನಿರ್ದೇಶಮಾಡಿ ಪಾರ್ಲಿಮೆಂಟ್‌ಸಭೆಯ ಅಧಿಕಾರವನ್ನು ಮುಂದೆ ಲೋಪತೋರದಪರೀತಿಯಲ್ಲಿ ಸ್ಫುಟವಾಗಿ ವಿವರಿಸಿ ಅದಕ್ಕೆ ರಾಜನಿಂದ ತಥಾಸ್ತು ಎನಿಸಿಕೊಂಡರು. 1688ರಲ್ಲಿ ನಡೆದ ಈ ಸಂಗತಿಯು ಆರಂ

**ರಾಷ್ಟ್ರಪಲ್ಲಟ**

ಭದಹಾಗೆ. ಪಾರ್ಲಿಮೆಂಟ್‌ಸಭಿಕರು ತಮ್ಮ ಅಧಿಕಾರವನ್ನು ಪ್ರತಿಷ್ಠೆಮಾಡಿಕೊಂಡು ಕಳೆದಎಂಭತ್ತು ವರ್ಷಗಳಿಂದ ರಾಜಪುರುಷರಿಗೂ ಪ್ರಜಾನಾಯಕರಿಗೂ ಮನಸ್ತಾಪಕ್ಕೆ ಕಾರಣಗಳಾಗಿದ್ದ ಅಂಶಗಳೆಲ್ಲವನ್ನೂ ಇತ್ಯರ್ಥಮಾಡಿದರು. 1688ರಲ್ಲಿ ಮೊದಲಾದ ಈ ರಾಷ್ಟ್ರರೂಪದ ಅಥವಾ ಆಡಳಿತದರೀತಿಯ ವ್ಯವಸ್ಥೆಯು 1702ರವೇಳೆಗೆ ಮುಗಿಯಿತೆಂದು ಒಂದು ದೃಷ್ಟಿಯಿಂದ ಹೇಳಬಹುದು. ಜೇಮ್ಸನ ಓಟದಿಂದ ಮೊದಲ್ಗೊಂಡು ನಡೆದ ಆ ಸಂಗತಿಗಳ ಮೊತ್ತಕ್ಕೆ ರಾಷ್ಟ್ರಪಲ್ಲಟ ಅಥವಾ ರೆವೊಲ್ಯೂಷನ್‌ಶಬ್ದವು ಅನ್ವಯಿಸುವುದು. ಅದರ ಪರಿಣಾಮವಾಗಿ ಇಂಗ್ಲಂಡಿನಲ್ಲಿ ಸಾಂಕುಶಪ್ರಭುತ್ವವೆನ್ನುವುದು ಸುವ್ಯವಸ್ಥಿತವಾಯಿತು. ಸುಮಾರು ಒಂದು ಶತಮಾನದಜಗಳ ತೀರ್ಮಾನವಾಯಿತು. ನಡೆದ ಎಲ್ಲ ಅಂಶಗಳನ್ನೂ ಒಪ್ಪಲಾರದಿದ್ದ ಟೋರಿಗಳು ಅವನ್ನು ಹ್ವಿಗ್‌ರೆವೊಲ್ಯೂಷನ್ ಎನ್ನುತ್ತಿದ್ದರು. ಹ್ವಿಗ್‌ಪಕ್ಷದವರಂತೂ ಹೆಮ್ಮೆಯಲ್ಲಿ ಮೈಮರೆತರು. ಅದನ್ನು Glorious Revolution **ಅಥವಾ ಯಶಃಪೂರಿತವೆಂದು ಆಡಿಕೊಂಡರು. ಒಟ್ಟಿನಲ್ಲಿ ಎಲ್ಲರೂ**

ಅದನ್ನು ರಕ್ತಪಾತರಹಿತವಾದ ರಾಷ್ಟ್ರಪಲ್ಲಟ ( Bloodless Revolution ) ಎಂದು ಹೇಳಿಕೊಂಡರು. ರಾಷ್ಟ್ರದಲ್ಲಿ ಸುವ್ಯವಸ್ಥೆ ತೋರಬೇಕಾದರೆ

**ರಕ್ತಪಾತರಾಹಿತ್ಯ**

ಪ್ರತಿ ಐರೋಪ್ಯದೇಶದಲ್ಲಿಯೂ ಎಷ್ಟೋ ಅನರ್ಥಗಳು ನಡೆಯಬೇಕಾಯಿತು. ಇಂಗ್ಲಂಡಿನಲ್ಲಿ ಪ್ರಾಣಹಾನಿರಕ್ತಪಾತಗಳಿಲ್ಲದೆ ನಡೆಯಿತೆಂಬ ಹೆಮ್ಮೆಯಿಂದ ಆಡಿಕೊಳ್ಳುವಮಾತು ಅದು. ಆ ಮಾತು ಮುಕ್ಕಾಲುಪಾಲು ನಿಜ. ಏಕಂದರೆ ನಡೆದ ರಾಷ್ಟ್ರಪಲ್ಲಟವನ್ನು ಉಳಿಸಿಕೊಳ್ಳಲು ಇಂಗ್ಲಿಷರು ಯುದ್ಧವನ್ನೂ ನಡೆಸಬೇಕಾಯಿತು, ಹಲಕೆಲವು ದಂಗೆಗಳನ್ನೂ ಅಡಗಿಸಬೇಕಾಯಿತು.

ಪಲ್ಲಟದ ಪರಿಣಾಮವಾಗಿ ರಾಷ್ಟ್ರದಲ್ಲಿ ಸುವ್ಯವಸ್ಥೆ ತೋರಿದುದು ಎರಡುಬಗೆಯಾಗಿ. 1688ರಲ್ಲಿ ಪಾರ್ಲಿಮೆಂಟಿನವರು ಅಧಿಕಾರವಿಷಯವಾಗಿ ಒಂದು ದಿಬ್ಬಣವನ್ನು ಪ್ರಕಟಗೊಳಿಸಿ ರಾಜನ ಒಪ್ಪಿಗೆಯನ್ನು ಪಡೆದು ಅದನ್ನು ಶಾಸನವನ್ನಾಗಿ ರೂಪಗೊಳಿಸಿದರು. ಅದನ್ನು ಸಾಧಾರಣವಾಗಿ ಬಿಲ್ ಆಫ್

**ವ್ಯವಸ್ಥೆ**

ರೈಟ್ಸ್ ( Bill of Rights ) ಎಂದು ಕರೆಯುವುದುಂಟು. ಅದರ ಹಿಂದೆಯೇ 1689ರಲ್ಲಿ ಮ್ಯೂಟಿನಿ ಆಕ್ಟ್ (Mutiny Act) ಎಂಬ ಶಾಸನವಾಯಿತು. 1689ರಲ್ಲಿ ಟಾಲರೇಷನ್ ಆಕ್ಟ್ (Act of Toleration) ಎಂಬ ಕಾನೂನು ಆಯಿತು. 1694ರಲ್ಲಿ ಟ್ರಿಯನ್ನಿಯಲ್ ಆಕ್ಟ್ (Triennial Act) ಆಯಿತು; 1695ರಲ್ಲಿ ಮುದ್ರಣಪರೀಕ್ಷಕ (Censor) ಹುದ್ದೆಯು ಮಾಯವಾಯಿತು. 1701ರಲ್ಲಿ ಆಕ್ಟ್ ಆಫ್ ಸೆಟ್ಲ್‌ಮೆಂಟ್ (Act of Settlement) ಎಂಬ ಶಾಸನವೂ ಆಯಿತು. ಇವಿಷ್ಟೂ **ಪತ್ರರೂಪ**ದಲ್ಲಿರತಕ್ಕವು. ರಾಷ್ಟ್ರದ ವಿಧಿಕೋಶದಲ್ಲಿ ಅತಿ ಮುಖ್ಯವೆನಿಸಿದ ಶಾಸನಗಳು. ಇವುಗಳಲ್ಲದೆ ಪಲ್ಲಟದ ಪರಿಣಾಮವು ಬೇರೆ ರೀತಿಯಲ್ಲಿಯೂ ತೋರಿಕೊಂಡು ಆಡಳಿತದ ಕ್ರಮವನ್ನು ರೂಢಿಗೆ ತಂದವು. ಅವುಗಳನ್ನು **ಸಂಪ್ರದಾಯರೂಪ**ವಾಗಿರತಕ್ಕವೆನ್ನಬೇಕು. ಏಕಂದರೆ ಯಾವ ಒಂದು ಪತ್ರದಲ್ಲಿಯೂ ಆ ಅಂಶಗಳನ್ನು ನಿರ್ದಿಷ್ಟವಾಗಿ ಬಿತ್ತರಿಸಿಲ್ಲ. ಪತ್ರರೂಪವಾಗಿಯೂ ಸಂಪ್ರದಾಯರೂಪವಾಗಿಯೂ ತೋರಿಕೊಂಡ ನಿಷ್ಕರ್ಷೆಯೇ ಆಧುನಿಕಕಾಲದ ಇಂಗ್ಲಂಡಿನ ಆಡಳಿತಕ್ರಮವಾಯಿತು.

1. ಪತ್ರರೂಪವಾದಭಾಗದಲ್ಲಿ **ಬಿಲ್ ಆಫ್ ರೈಟ್ಸ್** ಎಂಬುದು ಮೊದಲನೆಯದು. ಅದರ ಮುಖ್ಯಾಂಶಗಳು—

(1) ಪಟ್ಟ; ವಿಲಿಯಂ ಮತ್ತು ಮೇರಿ ರಾಜಾರಾಣಿಯರಾಗತಕ್ಕದ್ದು. ಅವರಿಗೆ ಸಂತಾನವಿಲ್ಲದಿದ್ದಪಕ್ಷದಲ್ಲಿ ಅವರ ತರುವಾಯ ರಾಜಕುಮಾರಿ ಆನ್ ರಾಣಿಯಾಗತಕ್ಕದ್ದು. ರೋಮನ್‌ಕ್ಯಾಥಲಿಕ್

ಮತವನ್ನು ಸ್ವೀಕರಿಸಿದಾತನಿಗಾಗಲಿ ಆ ಮತಸ್ಥರನ್ನು ಮದುವೆಯಾದವರಿಗಾಗಲಿ ಪಟ್ಟಕ್ಕೆ ಅಧಿಕಾರವಿಲ್ಲ.

(2) ರಾಜಾಧಿಕಾರ; ರಾಜಪುರುಷನಿಗೆ ರಾಷ್ಟ್ರವಿಧಿಗಳನ್ನು ಸಸ್ಪೆಂಡ್ ಅಥವಾ ಡಿಸ್ಪೆನ್ಸ್‌ಮಾಡುವ ಅಧಿಕಾರವಿಲ್ಲ; ಹೈಕಮಿಷನ್‌ಕೋರ್ಟ್ ಮುಂತಾದ ವಿಶಿಷ್ಟನ್ಯಾಯಸ್ಥಾನಗಳನ್ನು ಸ್ಥಾಪಿಸುವ ಅಧಿಕಾರವಿಲ್ಲ; ಸದಾಸನ್ನದ್ಧಸೈನ್ಯವನ್ನಿಟ್ಟುಕೊಳ್ಳುವ ಅಧಿಕಾರವಿಲ್ಲ.

(3) ಪಾರ್ಲಿಮೆಂಟ್‌ಸಭೆಯ ಅನುಮತಿಯಿಲ್ಲದೆ ಯಾವಬಗೆಯ ತೆರಿಗೆಸುಂಕಗಳನ್ನೂ ಎತ್ತಲಾಗದು. ಸಭಿಕರ ಚುನಾವಣೆಯು ನಿರಾತಂಕವಾಗಿರತಕ್ಕುದು. ಸಭಿಕರಿಗೆ ಭಾಷಣಸ್ವಾತಂತ್ರ್ಯವಿರತಕ್ಕುದು. ಸಭೆಯು ಆಗಾಗ್ಗೆ ಸೇರುತ್ತಲಿರಬೇಕು.

(4) ಪ್ರಜೆಗಳಿಗೆ ರಾಜನಲ್ಲಿ ಅರ್ಜಿಮಾಡಿಕೊಳ್ಳುವ ಅಧಿಕಾರವುಂಟು; ಅಪರಾಧಿಗಳ ವಿಚಾರಣೆಯಲ್ಲಿ ಅತ್ಯಧಿಕವಾದ ಜುಲ್ಮಾನೆಗಳನ್ನು ಹಾಕಬಾರದು.

ಈ ರೀತಿ ಪಟ್ಟದಲ್ಲಿ ಪ್ರಾಟೆಸ್ಟೆಂಟ್‌ಮತಸ್ಥರೇ ಇರತಕ್ಕ ವ್ಯವಸ್ಥೆಯೊಂದಿಗೆ ರಾಜಾಧಿಕಾರಕ್ಕೆ ಮೇರೆಯೂ ಪಾರ್ಲಿಮೆಂಟ್‌ಸಭೆಯ ಅಧಿಕಾರವೂ ಪ್ರತಿಷ್ಠೆಯಾದವು. ಬಿಲ್ ಆಫ್ ರೈಟ್ಸ್ ನಡೆದ ಸಂದರ್ಭದಲ್ಲಿಯೇ ಪಾರ್ಲಿಮೆಂಟಿನವರು ಮತ್ತೊಂದು ಉಪಾಯವನ್ನೂ ಅವಲಂಬಿಸಿ ಸಭೆಸೇರದಆಡಳಿತ ನಡೆಯದಂತೆ ಏರ್ಪಡಿಸಿಕೊಂಡರು. ತೆರಿಗೆ ಸುಂಕಗಳಿಗೆ ಒಪ್ಪಿಗೆ ಕೊಡುವಾಗ ಒಂದುವರ್ಷದ ವಸೂಲಿಗೆಮಾತ್ರ ಒಪ್ಪಿಕೊಂಡರು. ಸೈನ್ಯದ ವೆಚ್ಚವನ್ನು ( Mutiny Act ) ಒಂದುವರ್ಷಕ್ಕೆ ಮಾತ್ರ ಕೊಡಿಸಿದರು. ವರ್ಷಮುಗಿದಕೂಡಲೆ ಮುಂದಿನವರ್ಷದ ವೆಚ್ಚವನ್ನೊಪ್ಪುವುದಕ್ಕಾಗಿ ಸಭೆ ಸೇರಲೇಬೇಕಾಯಿತು. ಈ ರೀತಿಯಲ್ಲಿ ಪಾರ್ಲಿಮೆಂಟ್‌ಸಭೆಸೇರದೆ ವರ್ಷ ಕಳೆಯುವುದು ಅಸಾಧ್ಯವಾಯಿತು.

2. ಅದೇ ವರ್ಷವೇ **ಆಕ್ಟ್ ಆಫ್ ಟಾಲರೇಷನ್** (Act of Toleration) ಎಂಬ ಕಾನೂನು ರೂಪಗೊಂಡಿತು. ಮತಸಂಬಂಧವಾದ ಮನಸ್ತಾಪಗಳನ್ನು ಹೋಗಲಾಡಿಸುವ ಇಷ್ಟದಿಂದ ಮೊದಲಾದರೂ ಎಲ್ಲರಿಗೂ ಸಮಾಧಾನಕೊಡಿಸುವುದು ಆಗ ಕಷ್ಟವಾಗಿತ್ತು. ಆಂಗ್ಲಿಕನ್‌ಮತದ ಪ್ರಾರ್ಥನಾಪುಸ್ತಕದ 39 ಅಂಶಗಳಲ್ಲಿ ಮೂವತ್ತಂಶಗಳನ್ನೊಪ್ಪಿಕೊಂಡವರೆಲ್ಲರಿಗೂ ಮತಸ್ವಾತಂತ್ರ್ಯ ಆ ಕಾನೂನಿನಿಂದ ಸ್ಥಾಪಿತವಾಯಿತು. ರೋಮನ್‌ಕ್ಯಾಥಲಿಕ್ಕರಿಗೂ ಡಿಸ್ಸೆಂಟರ್‌ಪಂಗಡದವರಿಗೂ ಆ ಅಂಶಗಳಲ್ಲಿ ಒಪ್ಪಿಗೆಯಿಲ್ಲ; ಆದ್ದರಿಂದ ಅವರಿಗೆ ಮತಸ್ವಾತಂತ್ರ್ಯ ಲಭಿಸಲಿಲ್ಲ.

ಆದರೆ ಆಂಗ್ಲಿಕನ್ ಪದ್ಧತಿಗಳನ್ನೇ ಬಲಾತ್ಕಾರಗೊಳಿಸುತ್ತಿದ್ದ ಚರ್ಯೆ ನಿಂತಹಾಗಾಯಿತು. ಪ್ರಾಟೆಸ್ಟೆಂಟರಲ್ಲಿ ಆಂಗ್ಲಿಕನ್ ಮತದ ಹಲಕೆಲವಂಶಗಳನ್ನೊಪ್ಪಿಕೊಳ್ಳದಿದ್ದವರಿಗೆ ನಿರಾತಂಕವಾಯಿತು.

ಮತಸಹನದ ಕಾನೂನೆಂದು ಇದರ ಹೆಸರು. ಆದರೆ ಡಿಸ್ಸೆಂಟರುಗಳಲ್ಲಾಗಲಿ ರೋಮನ್ ಕ್ಯಾಥಲಿಕ್ಕರಲ್ಲಾಗಲಿ ಇತರರಿಗೆ ಸಹನವಿಲ್ಲ. ಆ ಕಾಲದಲ್ಲಿ ಐರೋಪ್ಯರಿಗೆ ಅನ್ಯಮತಸಹಿಷ್ಣುತೆಯೆಂಬುದು ಇನ್ನೂ ಅಧರ್ಮವೆಂದೇ ತೋರುತ್ತಿತ್ತು. ಆ ಎರಡು ಪಂಗಡಗಳನ್ನು ಬಿಟ್ಟು ಉಳಿದವರಾದರೂ ಧಾರಾಳತೆಯನ್ನು ತಾಳಿದುದೇ ಆ ಕಾಲಕ್ಕೆ ಹೆಚ್ಚು.

3. 1695ರಲ್ಲಿ ಒಂದು ಉದ್ಯೋಗವು ಮಾಯವಾಯಿತು. ಅಚ್ಚಾದ ಪುಸ್ತಕಗಳೆಲ್ಲವನ್ನೂ ಪರೀಕ್ಷೆಮಾಡಿ ಪ್ರಕಟನೆಯಾಗಬಹುದೆಂದು ಸಮ್ಮತಿಕೊಡಲು ಒಬ್ಬ ಹುದ್ದೆದಾರನಿರುತ್ತಿದ್ದನು. ಆತನೊಪ್ಪದಿದ್ದ ಪುಸ್ತಕ ಪ್ರಕಟವಾಗುತ್ತಲೇ ಇರಲಿಲ್ಲ. ಆತನು ರಾಜನಿಂದ ಗೊತ್ತಾದ ಅಧಿಕಾರಿ. ಪಾರ್ಲಿಮೆಂಟಿನವರೂ ಅದುವರೆಗೆ ಆ ಪರೀಕ್ಷೆಯಾಗಬೇಕೆಂದೇ ಅಭಿಪ್ರಾಯಪಡುತ್ತಿದ್ದರು. 1688ರ ರಾಷ್ಟ್ರ ಪಲ್ಲಟದ ತರುವಾಯ ಜನರಿಗೆ **ಮುದ್ರಣಸ್ವಾತಂತ್ರ್ಯ**ವಿರಬೇಕೆಂಬ ಅಭಿಪ್ರಾಯವು ಬಲಗೊಂಡಿತು. 1695ರಲ್ಲಿ ಪಾರ್ಲಿಮೆಂಟಿನವರು ಆ ಸ್ವಾತಂತ್ರ್ಯವಿರುವಂತೆ ಏರ್ಪಡಿಸಿದರು. ಆ **ಪರೀಕ್ಷಕನ** ಹುದ್ದೆ **ವಜಾ** ಆಗಿಹೋಯಿತು.

ಜನರ ವಾಕ್ಸ್ವಾತಂತ್ರ್ಯಕ್ಕೆ ಸಂಬಂಧಿಸಿದುದು ಮುದ್ರಣ. 2ನೆ ಚಾರ್ಲ್ಸ್‌ನ ಕಾಲದಲ್ಲಿ ಒಟ್ಟು ರಾಜ್ಯಕ್ಕೆ ಇಪ್ಪತ್ತೇ ಮುದ್ರಣಾಲಯಗಳಿದ್ದವು. 1695ರ ತರುವಾಯ ಬೇಗನೆ ಇನ್ನೂರಾಗಿಹೋದವು. ವೃತ್ತಪತ್ರಿಕೆಗಳಿಗೂ ಪುಸ್ತಕಗಳಿಗೂ ಅಡ್ಡಿಯಿಲ್ಲದಾಯಿತು.

4. ನಾಲ್ಕನೆಯದು **ಆಕ್ಟ್ ಆಫ್ ಸೆಟ್ಲ್‌ಮೆಂಟ್** (Act of Settlement). ಆ ಕಾನೂನು ರೂಪಗೊಂಡುದು 1701ರಲ್ಲಿ, ಅಂದರೆ ವಿಲಿಯಮನ ಆಳಿಕೆಯ ಕಡೆಗಾಲದಲ್ಲಿ. 1694ರಲ್ಲಿ ರಾಣಿ ಮೇರಿ ಬಂಜೆಯಾಗಿಯೇ ತೀರಿಕೊಂಡಳು. ವಿಲಿಯಂ ಒಂಟಿಯಾಗಿಯೇ ಆಡಳಿತವನ್ನು ನಡೆಸುತ್ತಲಿದ್ದನು. ಆತನ ತರುವಾಯ ಆನ್ ರಾಣಿಯಾಗತಕ್ಕುದೆಂದು ತೀರ್ಮಾನವಾಗಿತ್ತು. ಆದರೆ ಆಕೆಗೂ ಮಕ್ಕಳಿರಲಿಲ್ಲ. ಆದ್ದರಿಂದ ಮುಂದಿನ ದೊರೆಯಾರೆಂದು ಗೊತ್ತುಮಾಡಬೇಕಾಗಿತ್ತು ಸೆಟ್ಲ್‌ಮೆಂಟ್ ಕಾನೂನಿನಲ್ಲಿ.

(1) ಆನ್ ತರುವಾಯ ಹಾನೊವರ್ ಸಂಸ್ಥಾನಿಕ (ಹಿರೇ ಜೇಮ್ಸನ ಮೊಮ್ಮಗಳ ಮಗ) ಜಾರ್ಜ್ ಎಂಬಾತನು ದೊರೆಯಾಗತಕ್ಕದ್ದು

(2) ನ್ಯಾಯಾಧಿಪತಿಗಳು ಆಜೀವಪರ್ಯಂತ ಅಧಿಕಾರದಲ್ಲಿರತಕ್ಕದ್ದು

(3) ಪಾರ್ಲಿಮೆಂಟಿನ ಅನುಮತಿಯಿಲ್ಲದೆ ಪ್ರಭು ದೇಶವನ್ನು ಬಿಟ್ಟು ಹೊರಡ ಕೂಡದು, ಅನ್ಯದೇಶಗಳೊಡನೆ ಕರಾರ್ನಾಮೆಗಳಿಗೆ ದಸ್ಕತ್ತಿಡ ಬಾರದು

(4) ಇಂಪೀಚ್ಮೆಂಟ್ ನಡೆದಾಗ ರಾಜನು ತನ್ನ ಕನಿಕರದ ಅಧಿಕಾರವನ್ನು ಉಪಯೋಗಿಸಬಾರದು.

ಎಂದು ನಿಷ್ಕರ್ಷೆಯಾಯಿತು. ಪರಿಣಾಮವಾಗಿ ಎರಡನೆ ಜೇಮ್ಸ್ವಂಶದವರಿಗೆ ರಾಜ್ಯಪ್ರಾಪ್ತಿಯಿಲ್ಲದೆಹೋದುದಲ್ಲದೆ ರಾಜನ ಸ್ವಾತಂತ್ರ್ಯಕ್ಕೆ ಕೆಲವು ಆತಂಕಗಳು ತೋರಿಕೊಂಡವು. ವಿಲಿಯಂರಾಜನಲ್ಲಿ ಆಗಿನ ಸಭಿಕರಿಗೆ ತೋರಿದ್ದ ಅನುಮಾನ ಮೂರನೆ ಅಂಶಕ್ಕೆ ಕಾರಣ.

ಆದರೆ ಎರಡನೆ ಅಂಶವೇ ಅತಿಮುಖ್ಯವಾದುದು. ಒಂದುಬಾರಿ ನ್ಯಾಯಾಂಗ ದಲ್ಲಿ ಪ್ರವೇಶಪಡೆದು ನ್ಯಾಯಾಧಿಕಾರಿಯಾದಾತನು ಸಾಯುವವರೆಗೂ ಅಥವಾ ತಾನಾಗಿ ಬಿಟ್ಟುಕೊಡುವವರೆಗೂ ಚ್ಯುತಿಯಿಲ್ಲದೆ ಅಧಿಕಾರದಲ್ಲಿರತಕ್ಕುದೆಂದು ಆದರಿಂದ ಗೊತ್ತಾಯಿತು. ನ್ಯಾಯಾಧಿಕಾರಿಗಳ ಸ್ವಾತಂತ್ರ್ಯವು ಇದರಿಂದ ಸ್ಥಾಪನೆಯಾಯಿತು. ಯಾರಿಗೂ ಹೆದರದೆ ನ್ಯಾಯವನ್ನೇ ಸಮರ್ಥಿಸುವಂತೆ ನ್ಯಾಯಾಧಿಕಾರಿಗಳು ಸ್ವತಂತ್ರ ರಾದರು. ಇಂಗ್ಲಂಡಿನ ನ್ಯಾಯಾಂಗದ ಸ್ವಾತಂತ್ರ್ಯವೆಂಬುದು ಇದರಿಂದ ಪ್ರತಿಷ್ಠೆ ಯಾಯಿತು.

ಈ ನಾಲ್ಕು ಕಾನೂನುಗಳೂ ಹಿಂದಿನ ಮ್ಯಾಗ್ನಕಾರ್ಟ ಎಂಬ ಸನ್ನದಿಗೆ ಸಮಾನವಾದ ಘನತೆಯುಳ್ಳವು. ಪಾರ್ಲಿಮೆಂಟಿನ ಸರ್ವಾಧಿಕಾರವನ್ನೂ ರಾಜನ ಮೇರೆಯನ್ನೂ ನ್ಯಾಯಶುದ್ಧಿಯನ್ನೂ ಪ್ರಜಾಸ್ವಾತಂತ್ರ್ಯವನ್ನೂ ಸ್ಪಷ್ಟವಾಗಿ ವಿವರಿಸಿ ಭದ್ರಗೊಳಿಸಿದವು. ರಾಷ್ಟ್ರಪಲ್ಲಟದ ಭಾಗವಾಗಿ ರೂಪಗೊಂಡ ಈ ನಾಲ್ಕು ಕಾನೂ ನುಗಳು ಆಧಾರಭೂತವೆನಿಸಿರುವುದು ಆ ಕಾರಣದಿಂದಲೇ. ಆದರೆ ಅವುಗಳ ರಚನೆಯಕಾಲದಲ್ಲಿ ಅದುವರೆಗೂ ನಡೆದಿದ್ದ ಅಕ್ರಮಗಳಿಗೆ ಚಿಕಿತ್ಸೆಮಾಡುವ ಯೋಚ ನೆಯೇ ಮುಂದಾಗಿದ್ದಿತೆಂಬುದನ್ನು ಮರೆಯಬಾರದು. ಹಿರೇಜೇಮ್ಸ್ ಕಾಲದಿಂದ ನಡೆದುಬಂದಿದ್ದ ವಾದವಿವಾದಗಳೂ ಮನಸ್ತಾಪವೈಷಮ್ಯಗಳೂ ಈ ಕಾನೂನುಗಳಿಂದ ಇತ್ಯರ್ಥವನ್ನು ಪಡೆದವು.

ಈ ಇತ್ಯರ್ಥವನ್ನು ಒಂದಾನೊಂದು ನಾಟಕದ ಕಡೆಯದೃಶ್ಯವೆಂದು ಭಾವಿಸ ಬೇಕು. ಹಿರೇಜೇಮ್ಸ್ ಮತ್ತು ಹಿರೇಚಾರ್ಲ್ಸ್‌ದೊರೆಗಳ ಆಳಿಕೆ ಮೊದಲನೆಯಂಕ,

ಅಂತರ್ಯುದ್ಧ ರಾಜವಧೆಗಳು ಎರಡನೆಯಂಕ. ಪ್ಯೂರಿಟನ್ನರ ಪ್ರಾಬಲ್ಯ ಮೂರನೆ ಯದು. ಎರಡನೆಯ ಚಾರ್ಲ್ಸ್, ಎರಡನೆಯ ಜೇಮ್ಸ್‌ದೊರೆಗಳ ಆಳಿಕೆ ನಾಲ್ಕನೆ ಯಂಕ. ರಕ್ತಪಾತರಹಿತಪಲ್ಲಟವೆಂಬುದು ಪಂಚಮಾಂಕ, ಸಮಾಪ್ತಿ.

**ಸಂಪ್ರದಾಯವಿಭಾಗ**ವೆಂಬುದನ್ನೂ ಗುರುತಿಟ್ಟುಕೊಳ್ಳಬೇಕು. ಪತ್ರರೂಪ ದಲ್ಲಿ ತೋರಿದ ಪರಿಣಾಮಕ್ಕಿಂತಲೂ ಅದೇ ದೊಡ್ಡದು. ಪ್ರತಿವರ್ಷವೂ ಪಾರ್ಲಿ ಮೆಂಟ್ ಸೇರಲೇಬೇಕೆಂಬ ನಿಯಮವಿಲ್ಲ; ಆದರೆ ಸೇರದಿದ್ದರೆ ಆಡಳಿತವೇ ನಡೆಯುವು ದಿಲ್ಲ. ತೆರಿಗೆ ಸುಂಕಗಳನ್ನು ಒಂದುವರ್ಷಕ್ಕೆ ಮಾತ್ರ ಕೊಡಿಸಿದಾಗ ವರ್ಷೇವರ್ಷೇ ಸಭೆ ನೆರೆಯಲೇಬೇಕಾಗಿಬಂತು. ಈ ಬಗೆಯ ನಿರ್ಬಂಧಗಳು ತೋರಿಕೊಳ್ಳುತ್ತ ಆಚಾರಗಳೂ ಸಂಪ್ರದಾಯಗಳೂ ರೂಢಿಗೊಂಡವು. ತೆರಿಗೆ ಸುಂಕಗಳನ್ನು ಕೊಡಿಸುತ್ತ ಕಳೆದವರ್ಷದ ಲೆಕ್ಕವನ್ನೊಪ್ಪಿಸಿಕೊಳ್ಳುವುದು ಪದ್ಧತಿಯಾಯಿತು. ಹೀಗೆ **ಬಜೆಟ್‌ಪದ್ಧತಿ** ಆಚರಣೆಗೆ ಬಂತು. ಕಾಲಕಳೆಯುತ್ತ ಕಾಮನ್ಸ್‌ಸಭೆಯು ಶ್ರೀಮಂತರಸಭೆಗಿಂತ ಪ್ರಬಲವಾಯಿತು. ಶ್ರೀಮಂತರಸಭೆ ಗೊಡ್ಡುಗಳಕೂಟವಾಗಿ ಹೋಯಿತು. ಕಾಮನ್ಸ್‌ಸಭಿಕರಲ್ಲಿ ನಾಯಕರಾದವರನ್ನೇ ಮಂತ್ರಿಗಳನ್ನಾಗಿಟ್ಟು ಕೊಳ್ಳುವುದು ರೂಢಿಯಾಯಿತು. ರಾಜರಿಗೆ ಆ ಮಾರ್ಗವೇ ಕ್ಷೇಮವಾಗಿ ತೋರಿ ಬಂದು **ಬಹುಪಕ್ಷದನಾಯಕ**ರನ್ನೇ ಮಂತ್ರಿಗಳಾಗಿ ನಿಯೋಗಿಸುತ್ತಬಂದರು. ರಾಜಾಧಿಕಾರವು ಇದರಿಂದ ಇನ್ನೂ ತಗ್ಗಿತು. ಕಾಮನ್ಸ್‌ಸಭಾನಾಯಕನಾಗಿ ಮಂತ್ರಿ ಗಳಿಗೆ ಪ್ರಧಾನನಾದಾತನು ಸಭೆಯಬೆಂಬಲಕ್ಕಾಸೆಪಟ್ಟನೇವಿನಾ ರಾಜನಬೆಂಬಲಕ್ಕಾಸೆ ಪಡಲಿಲ್ಲ. ರಾಜನು ಬರಬರುತ್ತ ಪ್ರಧಾನನಿಗೆ ವಿಧೇಯನಾಗಿರತಕ್ಕವನಾದನು. ಹೀಗೆ ನಿದಾನವಾಗಿ ಬೆಳೆದ ಪದ್ಧತಿ **ಕ್ಯಾಬಿನೆಟ್‌ಪದ್ಧತಿ**ಯೆಂಬ ಹೆಸರುಪಡೆಯಿತು.

ಇಂಗ್ಲಿಷ್‌ಜನರಿಗಿದೊಂದು ಹೆಮ್ಮೆ; ತಮ್ಮ ರಾಷ್ಟ್ರಕ್ರಮದಲ್ಲಿ ಸಂಪ್ರದಾಯವಾಗಿ ಸಿದ್ಧವಾದಭಾಗವೇ ಹೆಚ್ಚೆಂದು. ಫ್ರಾನ್ಸ್, ಅಮೆರಿಕ ಮುಂತಾದ ರಾಷ್ಟ್ರಗಳಲ್ಲಿ ರಾಷ್ಟ್ರರೂಪನಿರ್ಮಾಣವು ಪತ್ರಸ್ಥಗಿತವಾಗಿ ಯಾವುದೋ ಒಂದು ಸಮಯದಲ್ಲಿ ಸಿದ್ಧ ವಾದುದು. ತಮ್ಮ ರಾಷ್ಟ್ರದ್ದಾದರೋ ಗಿಡ ಮರವಾಗಿಬೆಳೆದಂತೆ ಬೆಳೆದು ದೃಢವಾಗಿ ಕಾಲಾನುಗುಣವಾಗಿ ವಿಕಾಸಹೊಂದಿತೆಂಬುದು ಅವರ ಹೆಮ್ಮೆ.

# ಮೂರನೆ ವಿಲಿಯಂ (1688—1702)

## ಸಮಕಾಲಿಕ ಪ್ರಭುಗಳು

| ಫ್ರಾನ್ಸ್ | ಸಾಮ್ರಾಜ್ಯ | ಸ್ಪೈನ್ |
|---|---|---|
| 14ನೆ ಲೂಯಿ | ಲಿಯೋಪೋಲ್ಡ್ | 2ನೆ ಚಾರ್ಲ್ಸ್ |
| 1643—1715 | 1658—1705 | 1665—1700 |

ಡಚ್ಚರಿಗೆ ನಾಯಕನಾಗಿ 14ನೆ ಲೂಯಿಗೆ ಪರಮವಿರೋಧಿಯಾಗಿದ್ದ ವಿಲಿಯಂ ಇಂಗ್ಲಂಡಿಗೆ ದೊರೆಯಾದುದು ಡಚ್ಚರ ಕ್ಷೇಮಚಿಂತನೆಯಿಂದ. ಇಂಗ್ಲಂಡಿನ ಸ್ನೇಹವನ್ನು ಡಚ್ಚರಿಗೆ ಒದಗಿಸಿ ಫ್ರಾನ್ಸ್‌ದೊರೆಯನ್ನು ವಿರೋಧಿಸುವುದೊಂದೇ ಆತನ ಮನಸ್ಸಿನಲ್ಲಿ ನಾಟಿತ್ತು. ಪ್ರಸಿದ್ಧ ವಂಶಕ್ಕೆ ಸೇರಿದವನಾಗಿದ್ದರೂ ಇಂಗ್ಲಿಷ್‌ಜಾತಿಯವನಲ್ಲ. ಪ್ರಾಟೆಸ್ಟೆಂಟ್‌ಮತಸ್ಥನಾದರೂ ಕ್ಯಾಲ್ವಿನ್‌ಗುಂಪಿನವನು. ಹೆಚ್ಚಾಗಿ ಮಾತನ್ನೇ ಆಡತಕ್ಕವನಲ್ಲ; ಸ್ನೇಹಿತರೊಡನೆ ಕಾಲಕಳೆಯುವುದಂತೂ ಇಲ್ಲವೇ ಇಲ್ಲ. ಇದ್ದ ಸ್ನೇಹಿತರೂ ಡಚ್ಚರು. ಸದಾ ಕಾರ್ಯಮಗ್ನನಾಗಿರುತ್ತಿದ್ದವನು. ದೃಢವಾದ ಆರೋಗ್ಯವನ್ನೂ ಪಡೆದವನಲ್ಲ; ರೋಗಗ್ರಸ್ತನಂತೆಯೇ ಇರುತ್ತಿದ್ದನು. ಇವುಗಳಿಂದ ಆತನಿಗೆ ಇಂಗ್ಲಿಷ್‌ಜನರ ವಿಶ್ವಾಸದ ಸಂಪಾದನೆಯಾಗಲಿಲ್ಲ. ಆತನ ರಾಣಿಯನ್ನು ಇಂಗ್ಲಿಷರು ಬಹಳ ಮೆಚ್ಚಿದರು. ವಿಲಿಯಂ ಎಷ್ಟು ಮೌನಿಯೋ ಮೇರಿ ಅಷ್ಟು ಹರಟೆಯವಳು. ಎಲ್ಲರಿಗೂ ಒಳ್ಳೆಯವಳು. ಹಾಗಾಗಿ ಮೇರಿ ಬದುಕಿದ್ದವರೆಗೂ ವಿಲಿಯಮಿಗೆ ಕಷ್ಟ ತೋರಲಿಲ್ಲ. 1694ರಲ್ಲಿ ಆಕೆ ಸತ್ತಳು; ಆ ತರುವಾಯ ಈ ದೊರೆಗೆ ಜನರನ್ನು ಮೆಚ್ಚಿಸುವುದು ಕಷ್ಟವಾಯಿತು.

**ಸ್ವಭಾವ**

ದೊರೆಯಾಗೆಂದು ವಿಲಿಯಮನನ್ನು ಹ್ವಿಗ್‌ಪ್ರಮುಖರೂ ಕೆಲವು ಟೋರಿ ನಾಯಕರೂ ಒಟ್ಟುಸೇರಿ ಕರೆದಿದ್ದರು. **ಡ್ಯಾನ್ಬಿ** ಶ್ರೀಮಂತನಂತಹ ಟೋರಿಯೂ **ಮಾರ್ಲ್‌ಬರೋ** ಶ್ರೀಮಂತ(ಹಿಂದಿನ ಚರ್ಚಿಲ್)ನಂತಹ ಸೇನಾಪತಿಯೂ ಅದರಲ್ಲಿ ಸೇರಿದ್ದರು. ಆದ್ದರಿಂದ ವಿಲಿಯಮಿಗೆ ರಾಜ್ಯವು ಸುಲಭವಾಗಿಯೇ ವಶವಾಯಿತು. ಫ್ರಾನ್ಸ್‌ರಾಜನುಮಾತ್ರ ವಿಲಿಯಮನ ದೊರೆತನವನ್ನೊಪ್ಪದೆ ಜೇಮ್ಸಿಗೆ ಸಹಾಯಮಾಡಿ ಯುದ್ಧ ನಡೆಸಿದನು. ಆ ಯುದ್ಧದ ವಿವರವನ್ನು ಪ್ರತ್ಯೇಕವಾಗಿ ತಿಳಿಯಬಹುದು. ಯುದ್ಧವಾದರೂ ಇಂಗ್ಲಿಷರು ವಿಲಿಯಮನ ಪಕ್ಷವನ್ನೇ ಅವಲಂಬಿಸಿದರು. ಆದರೆ ವಿಲಿಯಮನಲ್ಲಿ ವಿಶೇಷಭಕ್ತಿಯಾಗಲಿ ಉತ್ಸಾಹವಾಗಲಿ ಇಲ್ಲ. ಹಾಲಂಡಿನ ಕ್ಷೇಮಕ್ಕೋಸ್ಕರ ಇಂಗ್ಲಂಡಿನ ರಾಜನಾದನೆಂದು ಎಲ್ಲರಿಗೂ ತಿಳಿದಿತ್ತು. ಆದ್ದರಿಂದ ಆತನಲ್ಲಿ ವಿರೋಧವಿಲ್ಲದಿದ್ದರೂ ವಿಶ್ವಾಸವಿರಲಿಲ್ಲ.

ಇಂಗ್ಲಿಷರ ಸಹಾಯದಿಂದಲೇ ಇಂಗ್ಲಂಡನ್ನು ಸಂಪಾದಿಸಿಕೊಂಡ ಜಾಣ ವಿಲಿಯಂ ದೂರಾಲೋಚನೆಯುಳ್ಳವನಾಗಿ ಹತ್ಯಗಳಿಲ್ಲದಂತೆ ಉಪಾಯವಾಗಿರಾಜನಾದ ಮೇಲೆ ಪಾರ್ಲಿಮೆಂಟಿನವರಿಟ್ಟ ಷರತ್ತುಗಳಿಗೊಪ್ಪಿಕೊಂಡನು. **ಬಿಲ್ ಆಫ್ ರೈಟ್ಸ್, ಆಕ್ಟ್ ಆಫ್ ಟಾಲರೇಷನ್** ಮುಂತಾದ ಶಾಸನಗಳು ಸಭೆಯವರ ಇಷ್ಟದಂತೆ ಜಾರಿಗೆ ಬಂದವು. ವಿಲಿಯಂ ಅತ್ತ ಯುದ್ಧವನ್ನು ನಡೆಸುತ್ತಲಿದ್ದು ಒಳಾಡಳಿತದಲ್ಲಿ ನಿಷ್ಪಕ್ಷಪಾತದಿಂದಿರುವ ಎಚ್ಚರಿಕೆತಾಳಿ ವ್ಹಿಗ್‌ಟೋರಿಪಕ್ಷಗಳೆರಡನ್ನೂ ಸಮಾನವಾಗಿ ಗೌರವಿಸುತ್ತಿದ್ದನು. ಟೋರಿನಾಯಕ ಡ್ಯಾನ್ಬಿ ಕೆಲವುಕಾಲ ಮುಖ್ಯಮಂತ್ರಿಯಾಗಿದ್ದನು. ಆದರೆ ಟೋರಿಗಳಲ್ಲನೇಕರಿಗೆ ಒಳಗೊಳಗೆ ಅಸಮಾಧಾನವಿತ್ತು. ಫ್ರಾನ್ಸ್‌ರಾಜನೊಡನೆ ಯುದ್ಧವನ್ನು ಮುಂದುವರಿಸುವ ಉತ್ಸಾಹ ಅವರಿಗಿರಲಿಲ್ಲ. ಯುದ್ಧವನ್ನು ನಡೆಸುತ್ತಿದ್ದ ವಿಲಿಯಂ ಟೋರಿಗಳನ್ನು ಬಿಟ್ಟು ವ್ಹಿಗ್ಗರನ್ನೇ ಅವಲಂಬಿಸಬೇಕಾಯಿತು.

ವ್ಹಿಗ್ಗರ ಮೇಲ್ಗೈ

ಒಳಾಡಳಿತದಲ್ಲಿ ಎರಡು ಮುಖ್ಯಸಂಗತಿಗಳು ನಡೆದವು. 1693ರಲ್ಲಿ **ರಾಷ್ಟ್ರೀಯಸಾಲ** (National Debt) ಎಂಬುದು ಮೊದಲಾಯಿತು. ಯುದ್ಧಕಾಲದಲ್ಲಿ ಬೇಕಾಗಿದ್ದ ಹೆಚ್ಚು ಹಣವನ್ನು ಜನರಿಂದ ಸಾಲವಾಗಿ ತೆಗೆದುಕೊಳ್ಳುವ ಆ ಪದ್ಧತಿ ಮುಖ್ಯ. 1697ರಲ್ಲಿಯೇ ಆ ಸಾಲವು 2ಕೋಟಿ ಪೌಂಡುಗಳಷ್ಟು ಏರಿತು. 1694ರಲ್ಲಿ **ಇಂಗ್ಲಂಡಿನ ಬ್ಯಾಂಕ್**(Bank of England)ಸ್ಥಾಪಿತವಾಯಿತು. ಅದಕ್ಕೆ ಮೊದಲು ಲೇವಾದೇವಿಯೆಂಬುದು ಸುವ್ಯವಸ್ಥಿತವಾಗಿರಲಿಲ್ಲ. ಆ ಬ್ಯಾಂಕು ಮೊದಲಾದಮೇಲೆ ಹಣಕಾಸಿನ ವ್ಯವಸ್ಥೆ ಉತ್ತಮಗೊಂಡುದಲ್ಲದೆ ವ್ಯಾಪಾರೋದ್ಯೋಗಗಳಿಗೆ ಬಹಳ ಅನುಕೂಲವಾಯಿತು.

ಒಳಾಡಳಿತ

ಪರಾರಿಯಾದ ಜೇಮ್ಸಿನೊಡನೆ ಯುದ್ಧವೆನ್ನುವುದು ಬೇಗನೆ ಮುಗಿಯಿತು. ಆದರೆ ಲೂಯಿಯೊಡನೆ ಯುದ್ಧ ಮುಗಿಯಲೇ ಇಲ್ಲ. 1697ರಲ್ಲಿ ಮೊದಲನೆಯುದ್ಧ ನಿಂತಿತು; ಆದರೆ ಮತ್ತೊಂದು ಭಾರಿ ಜಗಳವು ಮೂಡುತ್ತಿತ್ತು. ಇಂಗ್ಲಂಡಿನ ಸಹಾಯವಿಲ್ಲದೆ ಹಾಲಂಡಿರಲಾರದೆಂದು ವಿಲಿಯಂ ತಿಳಿದಂತೆಯೇ ಹಾಲಂಡಿಲ್ಲದೆ ಇಂಗ್ಲಂಡಿರಲಾರದೆಂದೂ ತಿಳಿದಿದ್ದನು. ಆತನ ದೂರಾಲೋಚನೆಯು ಇಂಗ್ಲಿಷ್‌ಜನರಿಗೆ ಸರಿಯಾಗಿ ತಿಳಿಯಲಿಲ್ಲ. ಆತನಲ್ಲಿ ಸಂದೇಹಪಡುತ್ತಿದ್ದು ಆತನ ಕೈಕಟ್ಟುವಂತೆ ಶಾಸನಗಳಲ್ಲಿ ಅಂಶಗಳನ್ನು ಜೋಡಿಸಿದರು. ರಾಜಾಧಿಕಾರವನ್ನೂ ಸ್ವಾತಂತ್ರ್ಯವನ್ನೂ ಅಡ್ಡಿಪಡಿಸಿದರು. ಈ ತೊಂದರೆಗಳನ್ನು ಸೈರಿಸಿಕೊಂಡು ವಿಲಿಯಂ ಭಗೀರಥಪ್ರಯತ್ನಮಾಡಿ 1702ರಲ್ಲಿ ಫ್ರೆಂಚ್‌ದೊರೆಗೆದುರಾಗಿ **ಗ್ರಾಂಡ್ ಅಲಯನ್ಸ್**(Grand Alliance)ಎಂಬ **ಮಿತ್ರವ್ಯೂಹವನ್ನು ಕಟ್ಟಿದನು.**

ಯುದ್ಧಗಳು

ದಳಪತಿಗಳಲ್ಲಿ ಜಯದಮೇಲೆಜಯುವನ್ನು ಪಡೆಯುತ್ತ ಸೈನಿಕರ ಉತ್ಸಾಹ ಬಲದಿಂದ ಕೂಡಿದಾತನು ಹೆಚ್ಚೋ? ಅಡಿಗಡಿಗೆ ಸೋತು ಖಿನ್ನರಾದ ಸೈನಿಕರಲ್ಲಿ ಧೈರ್ಯೋತ್ಸಾಹಗಳನ್ನು ತುಂಬುತ್ತ ಪ್ರಬಲಶತ್ರುವಿನೆದುರಿನಲ್ಲಿ ಪುನಃಪುನಃ ಎದ್ದು ನಿಲ್ಲಿಸುವಾತನು ಹೆಚ್ಚೋ? ವಿಲಿಯಂ ಎರಡನೆ ತರಗತಿಯ

**ವಿಲಿಯಂ ಯೋಗ್ಯತೆ**

ದಳಪತಿ. ಆತನಿಂದ ಇಂಗ್ಲಂಡಿನ ಪ್ರಬಲಶತ್ರುವಿಗೆ ಬೆನ್ನು ಮೂಳೆ ಮುರಿದಂತಾಯಿತು. ರಾಜ್ಯದ ಆಡಳಿತದಲ್ಲಿ ಪಾರ್ಲಿಮೆಂಟಿನ ಸರ್ವಾಧಿಕಾರಸ್ಥಾಪನೆಗೆ ಅಸ್ತಿಭಾರವೇರ್ಪಟ್ಟಿತು.

1702ರಲ್ಲಿ ವಿಲಿಯಂ ಕಾಲವಾಗಲು ಅ್ಯನ ರಾಣಿಯಾದಳು. ಇಂಗ್ಲಂಡಿನಲ್ಲಿ ಆಳಿದ ಸ್ಟೂಯರ್ಟ್‌ವಂಶಸ್ಥರಲ್ಲಿ ಆಕೆಯೇ ಕೊನೆಯುವಳು.

## 14ನೆ ಲೂಯಿಯೊಡನೆ ಹೋರಾಟ (1689—1713)

### 1. ಇಂಗ್ಲಿಷ್‌ಪಟ್ಟದ ಜಗಳ (1689—1697)

ಫ್ರಾನ್ಸ್‌ದೇಶವನ್ನು ತಲಪಿದಬಳಿಕ 2ನೆ ಜೇಮ್ಸ್ ಅಲ್ಲಿಯ ದೊರೆ ಲೂಯಿಯ ಎದುರಾದನು. "ಎಂತಹ ಮುಟ್ಠಾಳಕೆಲಸ ನಡೆದುಹೋಯಿತು! ಆ ಡಚ್ಚರವನಿಗೆ ನಿಮ್ಮ ರಾಜ್ಯವನ್ನೊಪ್ಪಿಸಿಬಿಡುವುದುಂಟೇ! ನಿಮಗೆ ಸಹಾಯಮಾಡಲು ನಾನಿಲ್ಲವೇ? ಈಗಲಾದರೂ ಸರಿಯೆ, ತಕ್ಷಣ ಸೈನ್ಯವೆತ್ತಿಕೊಂಡುಹೊರಡಿ. ಇಂಗ್ಲಂಡನ್ನು ಉಳಿಸಿಕೊಳ್ಳಿ" ಎಂದ ಲೂಯಿಗೆ ಪ್ರತಿಯಾಗಿ "ಪ್ರಯತ್ನ

**ಜೇಮ್ಸಿಗೆ ಸಹಾಯ**

ಮಾಡದೆ ಬಿಡುವುದಿಲ್ಲ. ನಿಮ್ಮನ್ನು ನಂಬಿಕೊಂಡೇ ಇದ್ದೇನೆ. ಇಂಗ್ಲಂಡಿಗಿಂತ ಐರ್ಲಂಡಿನಲ್ಲಿಮೊದಲುಮಾಡುವುದುಮೇಲು. ಅಲ್ಲಿಯವರು ನಮ್ಮ ಮತಸ್ಥರು" ಎಂದನು ಆ ನಿರ್ಭಾಗ್ಯದೊರೆ. ಲೂಯಿಯ ಸಹಾಯದಿಂದ ಐರ್ಲಂಡಿಗೆ ಹೊರಡುವುದಕ್ಕೂ ಅಣಿಯಾದನು. ಐರಿಷರ ಸಹಾಯದಿಂದ ಇಂಗ್ಲಂಡ್‌ಸ್ಕಾಟ್ಲೆಂಡುಗಳನ್ನು ಸಾಧಿಸಿಕೊಳ್ಳಬಹುದೆಂಬ ಯೋಚನೆ ಆತನ ಮನಸ್ಸಿನಲ್ಲಿ.

ಇಂಗ್ಲಂಡಿನಲ್ಲಿ ಜೇಮ್ಸ್‌ಪರವಾಗಿ ಯಾರೂ ಯತ್ನಿಸಲಿಲ್ಲ. ಸ್ಕಾಟ್ಲೆಂಡಿನಲ್ಲಿ ಮಾತ್ರ ಜೇಮ್ಸನಲ್ಲಿ ಋಣಿಯಾಗಿದ್ದ ಒಬ್ಬ ಶ್ರೀಮಂತನು ಸ್ವಾಮಿಭಕ್ತಿಯಿಂದ ತನ್ನ ಕುಲಸ್ಥರ ಸೈನ್ಯಕಟ್ಟಿದನು. **ವೈಕೌಂಟ್ ಡಂಡೀ** (Viscount Dundee) ಎಂಬ ಆ ಶ್ರೀಮಂತನಿಗೆ ಪ್ರೆಸ್ಬಿಟೇರಿಯರ್ಮತನಿಷ್ಠರೆಲ್ಲರೂ ವಿರೋಧಿಗಳೇ. ಆ ಪಕ್ಷಕ್ಕೆ ಪ್ರಮುಖನಾಗಿದ್ದ **ಅರ್ಗೈಲ್ ಶ್ರೀಮಂತನು** ಅತಿಪ್ರಬಲನಾಗಿದ್ದನು. ತನ್ನ ಶೌರ್ಯವನ್ನು

ನಂಬಿಕೊಂಡು **ವೈಕೌಂಟ್ ಡಂಡೀ** ಸೈನ್ಯದೊಡನೆ **ಕಿಲ್ಲೀಕ್ರಾಂಕಿ** (Killiecrankie) ಎಂಬ ಕಣಿವೆಯಲ್ಲಿ ಶತ್ರುಸೈನ್ಯವನ್ನು ತಾಗಿ ಆವೇಶದಿಂದ ಹೊಡೆದಾಡಿ ಗೆದ್ದನು. ಆದರೆ ಗೆಲುವಿನವೇಳೆಯಲ್ಲಿಯೇ ಗುಂಡಿನೇಟಿಗೆ ಸಿಕ್ಕಿ ಪ್ರಾಣಬಿಟ್ಟನು. ಆತನ ಕುಲಸ್ಥರು ನಾಯಕನಿಲ್ಲದೆ ಗತಿಗೆಟ್ಟು ತಮ್ಮ ಮನೆಗಳಿಗೆ ಹೊರಟುಬಿಟ್ಟರು. ಡಂಡೀಶ್ರೀಮಂತನ ಪ್ರಯತ್ನ ಭಂಗವಾದಮೇಲೆ ಸ್ಕಾಟ್ಲೆಂಡಿನಲ್ಲಿ ಜೇಮ್ಸ್‌ಪಕ್ಷದವರು ಯಾರೂ ಇಲ್ಲವಾಯಿತು. ಎಡಿನ್ಬರೊ ಪಾರ್ಲಿಮೆಂಟಿನವರು ವಿಲಿಯಮನನ್ನು ದೊರೆಯೆಂದೊಪ್ಪಿದರು. ಆದರೆ ಸ್ಕಾಟ್ಲೆಂಡಿನಲ್ಲಿ ಕುಲವೈರಗಳು ಪ್ರಬಲ. ಆರ್ಗೈಲನ ಕುಲವಾದ **ಕೇಂಬೆಲ್** (Campbell) ಕುಲಕ್ಕೂ **ಮಕ್ಡಾನಲ್ಡ್** (Macdonald) ಎಂಬ ಮತ್ತೊಂದು ಕುಲಕ್ಕೂ ಪರಂಪರಾಗತದ್ವೇಷ. ವಿಲಿಯಮನ ದೊರೆತನವನ್ನು ಸ್ಥಾಪಿಸುವುದರಲ್ಲಿ ಕೇಂಬೆಲ್ಲರು ಮುಂದಾಗಿದ್ದರು. ಆ ಕಾರಣದಿಂದ ಮಕ್ಡಾನಲ್ಡರು ತಟಸ್ಥರಾಗಿದ್ದರು. ಅದನ್ನೇ ನೆಪಮಾಡಿಕೊಂಡು ಕೇಂಬೆಲ್‌ಕುಲಸ್ಥರು ಮಕ್ಡಾನಲ್ಡ್‌ಕುಲಮುಖ್ಯನ ಮನೆಗೆ ಅಭ್ಯಾಗತರಾಗಿ ಹೊರಟರು. ಅಯರ್ನ್ ಮಕ್ಡಾನಲ್ಡ್ (Ian Macdonald) ಎಂಬ ಆತನು **ಗ್ಲೆನ್ಕೊ**(Glencoe) ಎಂಬಲ್ಲಿದ್ದನು. ಶತ್ರುಗಳಾದರೂ ತನ್ನ ಮನೆಗೆ ಬಂದವರೆಂದು ಆತನು ಔತಣವನ್ನು ನಡೆಸಿದನು. ಔತಣವಿನೋದಗಳೆಲ್ಲ ಮುಗಿದಮೇಲೆ ಕೇಂಬೆಲ್ಲರು ಸಮಯಹೊಂಚಿ ಎಲ್ಲರೂ ನಿದ್ರಿಸುತ್ತಿದ್ದ ವೇಳೆಯಲ್ಲಿ ಮಕ್ಡಾನಲ್ಡರಮೇಲೆಬಿದ್ದು ಸಿಕ್ಕಿದಂತೆ ಎಳೆದಾಡಿ ನರಕಿಬಿಟ್ಟರು. ಕುಲವೈರದಿಂದ ನಡೆದ ಘೋರ **ಕೊಲೆ**ಯಾಗಿದ್ದಾಗ್ಗೂ ಕೇಂಬೆಲ್‌ಪಕ್ಷದವರು ಬೇರೊಂದು ನೆಪವನ್ನು ತೋರಿದರು.

**ಸ್ಕಾಟ್ಲೆಂಡಿನಲ್ಲಿ**

ಡಂಡೀಯ ಸಾವಾದಕೂಡಲೆ ವಿಲಿಯಂ ಸ್ಕಾಟ್ಲೆಂಡಿನಲ್ಲಿ ತೊಂದರೆಯಾಗಲಾರದೆಂದು ತಿಳಿದು ಯಾರನ್ನೂ ಹೆಚ್ಚುಬಲವಂತಗೊಳಿಸಬಾರದೆಂದು ಅಪೇಕ್ಷೆಪಟ್ಟಿದ್ದನು. ಗ್ಲೆನ್ಕೊ ಕೊಲೆಯೊಂದು ಅನಿರೀಕ್ಷಿತವಾಗಿ ಆಕಸ್ಮಿಕವಾಗಿ ನಡೆದುಹೋಯಿತು. ಆ ಕೊಲೆ ಕಾರಣವಾಗಿ ಮುಂದೆ ಅನರ್ಥಗಳಾಗದಂತೆ ವಿಲಿಯಂ ಎಚ್ಚರಿಕೆ ವಹಿಸಿದನು. ಸ್ಕಾಟ್ಲೆಂಡಿನಲ್ಲಿ ಒರಟರಾದ ಮಲೆನಾಡಿನವರು (Highlanders) ಅನಾಯಕರಾಗಿದ್ದುದರಿಂದ ಯಾವಬಗೆಯ ತೊಂದರೆಯೂ ತೋರಲಿಲ್ಲ.

ಐರ್ಲೆಂಡಿನ ಉತ್ತರದವಿಭಾಗ ಅಲ್‌ಸ್ಟರಿನಲ್ಲಿಮಾತ್ರ ಪ್ರಾಟೆಸ್ಟೆಂಟ್ ಮತಸ್ಥರಿದ್ದರು. ಉಳಿದ ವಿಭಾಗಗಳಲ್ಲೆಲ್ಲ ರೋಮನ್‌ಕ್ಯಾಥಲಿಕ್‌ಮತಸ್ಥರಾಗಿದ್ದ ಐರಿಷರೇ ಹೆಚ್ಚಾಗಿದ್ದವರು. ಕ್ರಾಮ್ವೆಲ್ಲನೆದುರಿಗೆ ಐರಿಷರ ಪ್ರಯತ್ನ ನಡೆಯದೆಹೋಗಿತ್ತು. ಪರಿಣಾಮದಲ್ಲಿ ಐರಿಷರು ತಮ್ಮ ಆಸ್ತಿಪಾಸ್ತಿಗಳನ್ನೂ ಭೂಮಿಕಾಣಿಗಳನ್ನೂ ಕಳೆದುಕೊಂಡಿದ್ದರು. ಇಂಗ್ಲಿಷರಿಗೆ ಅಡಿಯಾಳುಗಳಾಗಿರಬೇಕಾದುದಲ್ಲದೆ ತಮಗಿಷ್ಟವಾದ

**ಐರಿಷರು**

ಮತವನ್ನನುಸರಿಸುವುದಕ್ಕೂ ತೊಂದರೆಪಟ್ಟು ನಾನಾ ಕಷ್ಟಗಳಿಗೆ ಸಿಕ್ಕಿದ್ದ ಐರಿಷರು ಎರಡನೆ ಚಾರ್ಲ್ಸ್ ಎರಡನೆ ಜೇಮ್ಸ್‌ದೊರೆಗಳಲ್ಲಿ ಆಸೆ ಬೆಳೆಸಿದ್ದರು. ಜೇಮ್ಸ್ ದೇಶವನ್ನೇ ಬಿಟ್ಟು ಪರಾರಿಯಾದಾಗ ಐರಿಷರು ಇನ್ನು ಸಮಯನಿರೀಕ್ಷೆಯಲ್ಲಿ ಕಾಲತಳ್ಳಬಾರದೆಂದು ನಿಶ್ಚಯಿಸಿಕೊಂಡು ಪ್ರಾಟೆಸ್ಟೆಂಟರೊಡನೆ ಯುದ್ಧಮಾಡಲು ಸಿದ್ಧರಾದರು. ಫ್ರಾನ್ಸ್‌ದೊರೆಯ ಸಹಾಯಪಡೆದು ಜೇಮ್ಸ್ ಸ್ವತಃ ಬರುವ ಸುದ್ದಿಕೇಳಿ ತಾವೇ ಮುಂದಾಗಿ ಅಲ್‌ಸ್ಟರ್ ಪ್ರಾಂತವನ್ನು ವಶಪಡಿಸಿಕೊಳ್ಳುವ ಯೋಚನೆಯಿಂದ ಅಲ್ಲಿ ನುಗ್ಗಿದರು. ಪ್ರಾಟೆಸ್ಟೆಂಟರು **ಲಂಡನ್ಡೆರಿ** (Londonderry) ಮತ್ತು **ಎನ್ನಿಸ್ಕಿಲ್ಲೆನ್** (Enniskillen)ಎಂಬ ಪಟ್ಟಣಗಳಲ್ಲಿ ಸೇರಿಕೊಂಡರು. ಆ

**ಮುತ್ತಿಗೆಗಳು**

ಪಟ್ಟಣಗಳನ್ನು ಐರಿಷರು ಮುತ್ತಿದರು. ಪ್ರಾಟೆಸ್ಟೆಂಟರು ಸಹಾಯಬರುವುದೆಂಬ ಭರವಸೆಯಿಂದಕೂಡಿ ಮುತ್ತಿಗೆಯನ್ನು ಪ್ರತಿಭಟಿಸಿದರು. ಎನ್ನಿಸ್ಕಿಲ್ಲೆನ್ ಪ್ರಾಟೆಸ್ಟೆಂಟರು ಸಮಯಹೊಂಚಿ ತಾವೇ ಮುಂದೆ ನುಗ್ಗಿ ಐರಿಷರಮೇಲೆಬಿದ್ದು **ನ್ಯೂಟನ್ ಬಟ್ಲರ್** (Newton Butler) ಎಂಬಲ್ಲಿ ಸೋಲಿಸಿಬಿಟ್ಟರು. ಮುತ್ತಿಗೆಗೆ ಸಿಕ್ಕಿದ್ದ ಪ್ರಾಟೆಸ್ಟೆಂಟರಿಗೆ ಬೇಗನೆ ಸಹಾಯಬಂತು. ಐರಿಷರಿಗೆ ಸಹಾಯಮಾಡಬೇಕಾಗಿದ್ದ ಜೇಮ್ಸ್ ಬರುವುದು ತಡವಾಯಿತು.

ಕಡೆಗೆ ಜೇಮ್ಸ್ ಬಂದನು. ಆತನ ಪ್ರಯಾಣವನ್ನೇ ಹೊಂಚಿನೋಡುತ್ತಿದ್ದ ವಿಲಿಯಂ ಐರ್ಲಂಡಿನಲ್ಲಿ ಸಿದ್ಧನಾದನು. **ಬಾಯ್ನ್**(Boyne)ಎಂಬ ನದೀತೀರದಲ್ಲಿ ಇಬ್ಬರಿಗೂ ಯುದ್ಧವಾಯಿತು. ಜೇಮ್ಸ್ ಪೂರಾಸೋತನು.

**ಬಾಯ್ನ್ ಕದನ**
**1690**

ಸೋತವನು ಐರಿಷರನ್ನು ಒಟ್ಟುಗೂಡಿಸಿ ಮತ್ತೊಂದು ಕದನಕ್ಕೆ ನಿಲ್ಲುವ ಯೋಚನೆಮಾಡದೆ ಪುನಃ ಫ್ರಾನ್ಸಿಗೆ ಹೊರಟೇಬಿಟ್ಟನು. ಹತಾಶರಾದ ಐರಿಷರು ತಮ್ಮ ಮತಕ್ಕಾಗಿ ಹಾಗೂ ಹೀಗೂ ಯುದ್ಧಮಾಡಿದರು. ಜೇಮ್ಸ್ ಹೊರಟಕೂಡಲೆ ವಿಲಿಯಂ ತನ್ನ ದಳಪತಿಗಳಿಗೆ ಐರಿಷರನ್ನಡಗಿಸುವ ಕೆಲಸವನ್ನು ವಹಿಸಿ ಇಂಗ್ಲಂಡಿಗೂ ಅಲ್ಲಿಂದ ಫ್ರಾನ್ಸಿನ ಉತ್ತರಕ್ಕೂ ಹೊರಟು ಲೂಯಿಯ ಸೈನ್ಯಗಳೆದುರಿನಲ್ಲಿ ಡಚ್ಚರನ್ನು ನಿಲ್ಲಿಸಲು ಸಿದ್ಧನಾದನು. ಐರಿಷರು ಮತ್ತೆಮತ್ತೆ ಸೋತರು. ಅಸಹಾಯರಾಗಿದ್ದರೂ ಹೊಡೆದಾಡುತ್ತ ಕಡೆಗೆ **ಲಿಮೆರಿಕ್**(Limerick)ಪಟ್ಟಣದಲ್ಲಿ ಗುಂಪುಕೂಡಿದರು. ವಿಲಿಯಮನ ದಳಪತಿ **ಗಿಂಕೆಲ್** (Ginckel) ಎಂಬಾತನು ಆ ಪಟ್ಟಣವನ್ನು ಮುತ್ತಿದನು. ಎಷ್ಟು ಕಷ್ಟಪಟ್ಟರೂ ಗತ್ಯಂತರವಿಲ್ಲದೆ ಐರಿಷರು ಸೋಲನ್ನೊಪ್ಪಿಕೊಳ್ಳಬೇಕಾಯಿತು.

**ಲಿಮೆರಿಕ್ ಕರಾರು**

ಐರಿಷರನ್ನು ಸಮಾಧಾನಗೊಳಿಸಿಟ್ಟುಕೊಳ್ಳಬೇಕೆಂದಿದ್ದ ವಿಲಿಯಮನ ಮನೋಗತವನ್ನು ತಿಳಿದ ಆ ದಳಪತಿಯು ಸೋತ ಐರಿಷರೊಡನೆ ಕರಾರು ನಡೆಸಿದನು. ದೇಶಾಂತರಹೊರಡಲಿಷ್ಟಪಟ್ಟ ಐರಿಷಸೈನಿಕರಿಗೆ ದಾರಿಬಿಟ್ಟುಕೊಡುವುದಲ್ಲದೆ ಕ್ಯಾಥಲಿಕ್ಕರಿಗೆ ಎರಡನೆ

ಚಾರ್ಲ್ಸ್ ದೊರೆಯ ಕಾಲದಲ್ಲಿದ್ದಂತೆಯೇ ಹಕ್ಕು ಬಾಧ್ಯತೆಗಳನ್ನು ಮುಂದೆಯೂ ರಕ್ಷಿಸಿ ಕೊಡಲಾಗುವುದೆಂದು ಕರಾರಿನಲ್ಲಿ ನಿಶ್ಚಯವಾಯಿತು. ಲಿಮೆರಿಕ್ ನಗರವು ವಿಲಿಯಂ ವಶವಾಯಿತು.

ಇಂಗ್ಲಂಡ್ ಸ್ಕಾಟ್ಲಂಡ್ ಐರ್ಲಂಡ್‌ಗಳಲ್ಲಿ ಜೇಮ್ಸ್ ಪಕ್ಷದವರಾರೂ ತಲೆಯೆತ್ತದಂತಾಯಿತು. ಆದರೆ ಫ್ರಾನ್ಸ್ ದೊರೆಯೋ! ಸೋತ ಜೇಮ್ಸ್ ಹಿಂತಿರುಗಿಬಂದೊಡನೆ ಆತನನ್ನು ಸತ್ಕರಿಸಿ ಆತನಿಗಾಗಿ ಒಂದು ಅರಮನೆ ಬಿಟ್ಟುಕೊಟ್ಟು ಆತನನ್ನೇ ಇಂಗ್ಲಂಡಿನ ರಾಜನೆಂದು ಗೌರವಿಸಿದ ಲೂಯಿಗೆ ವಿಲಿಯಂ ಪರಮವಿರೋಧಿ. ವಿಲಿಯಂ ಇಂಗ್ಲಂಡಿಗೆ ದೊರೆಯೆಂದು ಆತನು ಒಪ್ಪಿಕೊಳ್ಳತಕ್ಕವನಲ್ಲ. ಡಚ್ಚರನ್ನು ಸೋಲಿಸಲು ದೊಡ್ಡ ಪ್ರಯತ್ನವನ್ನು ಮಾಡುತ್ತಿದ್ದ ಆ ಲೂಯಿಯೊಡನೆ ವಿಲಿಯಂ ಡಚ್ಚರ ಪರವಾಗಿಯೂ ಇಂಗ್ಲಿಷರಪರವಾಗಿಯೂ ನೆದರ್ಲಂಡ್ಸ್ ಕ್ಷೇತ್ರದಲ್ಲಿ ಹೋರಾಡಬೇಕಾಯಿತು.

1660ರಲ್ಲಿ ರಾಜ್ಯಾಧಿಕಾರವಹಿಸಿದ ಲೂಯಿ ರ್ಹೈನ್‌ನದಿಯ ಮೇರೆಯನ್ನು ಸಾಧಿಸುವ ಆಸೆಯನ್ನು ಬೆಳೆಸಿಕೊಂಡು ಅದಕ್ಕಾಗಿ ಇಂಗ್ಲಂಡಿನ ದೊರೆಗಳನ್ನು ಡಚ್ಚರಿಂದ ಬೇರೆಯಾಗಿಡುವ ಪ್ರಯತ್ನ ಮಾಡುತ್ತಿದ್ದುದನ್ನು ಹಿಂದೆಯೇ ಕಂಡೆವು. ಯೂರೋಪಿನ ಪಶ್ಚಿಮದ ರಾಜ್ಯಗಳಲ್ಲೆಲ್ಲ ಫ್ರಾನ್ಸ್ ರಾಜ್ಯವೇ ಆಗ ಪ್ರಬಲವಾಗಿತ್ತು. ರಾಜಾಧಿಕಾರವು ನಿರಂಕುಶವಾಗಿತ್ತು. ಯೌವನದಲ್ಲಿ ರಾಜನಾದ ಲೂಯಿ ಹೆಬ್ಬಾಸೆಗಳನ್ನು ಬೆಳೆಸಿ ಸಮರ್ಥಮಂತ್ರಿದಳಪತಿಗಳಿಂದಕೂಡಿ ಬಲು ಬಿಂಕದಿಂದ ಅರಸುತನಮಾಡಿದನು. ಫ್ರಾನ್ಸ್ ಚರಿತ್ರೆಯಲ್ಲಿ ಆತನಿಗೆ Louis le Grand—ವೈಭವಶಾಲಿ ಲೂಯಿಯೆಂದೇ ಹೆಸರು.

**14ನೆ ಲೂಯಿ**

ಸ್ಪೈನ್‌ರಾಜಪುತ್ರಿಯನ್ನು ಮದುವೆಯಾದ ಆ ರಾಜನು ಪೋರ್ಚುಗಲ್ ದೇಶವನ್ನೆತ್ತಿಕಟ್ಟಿ ಸ್ಪೈನ್‌ರಾಜನನ್ನು ದುರ್ಬಲಗೊಳಿಸಿದ್ದನು. ಸ್ಪೈನಿಗೆ ಸೇರಿದ್ದ ನೆದರ್ಲಂಡ್ಸ್ ಕ್ಷೇತ್ರವು* ಫ್ರಾನ್ಸಿಗೂ ಹಾಲಂಡಿಗೂ ನಡುವೆ ಇತ್ತು. ಆ ನೆದರ್ಲಂಡ್ಸ್ ಕ್ಷೇತ್ರದಲ್ಲಿದ್ದ ಕೋಟೆಗಳಲ್ಲಿ ತನ್ನ ಸೈನ್ಯಗಳನ್ನಿಟ್ಟಿರಲು ಲೂಯಿ ಸ್ಪೈನ್‌ರಾಜನೊಡನೆ

---

*ನೆದರ್ಲಂಡ್ಸ್ ಅಥವಾ ತಗ್ಗುದೇಶವೆಂಬುದು ಫ್ರಾನ್ಸ್ ಮತ್ತು ಜರ್ಮನಿಗೆ ಮಧ್ಯೆ ಇರತಕ್ಕುದು. ಆ ಭಾಗದಲ್ಲಿ ಉತ್ತರಭಾಗದವರು ಡಚ್ಚರು (ಹಾಲಂಡ್). ದಕ್ಷಿಣಭಾಗವು ಸ್ಪೈನ್ ಅಧೀನದಲ್ಲಿಯೇ ಇತ್ತು. ಅದಕ್ಕೆ ಸ್ಪಾನಿಷ್ ನೆದರ್ಲಂಡ್ಸ್ ಎಂದು ಹೆಸರು. ಯುಟ್ರೆಕ್ಟ್ ಕರಾರಿನ ತರುವಾಯ ಅದು ಆಸ್ಟ್ರಿಯಕ್ಕೆ ಸೇರಿತು. 1830ರ ತರುವಾಯ ಅದು ಬೆಲ್ಜಿಯಂ ಎಂಬ ಸ್ವತಂತ್ರ ರಾಷ್ಟ್ರವಾಯಿತು.

ಸ್ಪಾನಿಷ್ ನೆದರ್ಲಂಡ್ಸ್ ಎನಿಸಿದ್ದ ಕ್ಷೇತ್ರವು ಪಶ್ಚಿಮ ಯೂರೋಪಿಗೆ ರಣಭೂಮಿ (Cockpit of Europe). ಅಲ್ಲಿ ನಡೆದಷ್ಟು ಕದನಗಳು ಮತ್ತೆಲ್ಲಿಯೂ ನಡೆಯಲಿಲ್ಲ.

ಒಡಂಬಡಿಕೆ ನಡೆಸಿದ್ದನು. ಫ್ರೆಂಚ್‌ದಳಗಳು ಆಂಟ್ವರ್ಪ್, ಲಿಯೇಜ್, ನಮೂರ್ ಮುಂತಾದ ದುರ್ಗಗಳನ್ನಾಕ್ರಮಿಸಿಕೊಂಡವು. ಈ ದುರ್ಗಗಳು **ಗಡಿದುರ್ಗ** (Barrier Fortresses)ಗಳೆಂದು ಹೆಸರಾದವು. ಅಲ್ಲಿ ಫ್ರೆಂಚ್ ಸೈನ್ಯಗಳು ಬಿಡಾರ ಮಾಡಿದುದನ್ನು ಕಂಡ ಡಚ್ಚರು ಅವುಗಳನ್ನು ವಿರೋಧಿಸಬೇಕಾಯಿತು.

ಹಾಲಂಡಿಗೂ ಫ್ರಾನ್ಸಿಗೂ ನಡೆಯುತ್ತಿದ್ದ ಈ ಜಗಳದಲ್ಲಿ ಇಂಗ್ಲಂಡಿನ ದೊರೆತನ ಯಾರಿಗೆಂಬುದು ಒಂದುಅಂಶಮಾತ್ರವಾಯಿತು. ಇಂಗ್ಲಂಡಿನ ಪಟ್ಟದ ಜಗಳ ವೆಂಬುದು ಮತ್ತೊಂದು ದೃಷ್ಟಿಯಿಂದ ಡಚ್ಚರ ಆಪದ್ರಕ್ಷಣೆಯ ಜಗಳವಾಯಿತು. ಆದ್ದರಿಂದ 1689ರಿಂದ1697ರವರೆಗೆ ಐರ್ಲಂಡ್, ಸ್ಕಾಟ್ಲೆಂಡ್, ನೆದರ್ಲಂಡ್ಸ್ ಮತ್ತು ಸಮುದ್ರಗಳಲ್ಲಿ ನಡೆದ ಯುದ್ಧಕ್ಕೆ **ಆಗ್ಸ್‌ಬುರ್ಗ್ ಲೀಗಿನ ಯುದ್ಧ** (War of the League of Augsburg) ಎಂಬ ಹೆಸರೂ ಉಂಟು.

ಡಚ್ಚರ ನಾಯಕನಾದ **ವಿಲಿಯಂ** ನೆದರ್ಲಂಡ್ಸ್‌ಭಾಗದಲ್ಲಿ ಫರಾನ್ಸಿದಳಪತಿ **ಲುಕ್ಸೆಂಬುರ್ಗ್ ಶ್ರೀಮಂತ** ( Marshal Luxembourg ) ನೊಡನೆ ಹೆಣಗಾಡ ಬೇಕಾಯಿತು. ಈಸೋಪನ ಕಥೆಯಲ್ಲಿ ಆಮೆ ಮೊಲಗಳಿದ್ದಹಾಗೆ ಇಬ್ಬರು. ತೆರ ಪಿಲ್ಲದೆ ಪ್ರಯಾಸಪಡುವವನು ವಿಲಿಯಂ; ಒಂದುಕ್ಷಣ ರಂಜಕದಂತೆ ಮತ್ತೊಂದುಕ್ಷಣ ಶತಸೋಮಾರಿಯಂತೆ ಅವನಎದುರಾಳು. ದುರ್ಗಗಳ ಆಕ್ರ

**ನೆದರ್ಲಾಂಡ್ಸಿನಲ್ಲಿ**

ಮಣಪ್ರತ್ಯಾಕ್ರಮಣವೇ ಹೋರಾಟದ ರೀತಿಯಾಯಿತು. ಅತಿಜಾಗರೂಕತೆಯಿಂದ ಚಲಿಸುತ್ತ ವಿಲಿಯಂ 1692ರಲ್ಲಿ ಫ್ರೆಂಚರೆದುರಿಗೆ **ಸ್ಟೆಯನ್‌ಕರ್ಕ್** (Steinkirk) ಎಂಬಲ್ಲಿ ಅನಿರೀಕ್ಷಿತವಾಗಿ ಕಾಣಿಸಿ ಕೊಂಡು ಕಾಳಗಗೊಟ್ಟನು. ಆದರೆ ಲುಕ್ಸೆಂಬುರ್ಗನಿಗೇ ಜಯವಾಯಿತು. 1693ರಲ್ಲಿ ಮತ್ತೊಮ್ಮೆ ಇಬ್ಬರಿಗೂ **ನೀರ್ವಿಂಡೆನ್** (Neerwinden) ಬಳಿ ಕದನವಾಯಿತು. ಪುನಃ ವಿಲಿಯಂ ಸೋತನು. ಸೋತರೂ ಧೈರ್ಯಗೆಡದೆ ವಿಲಿಯಂ ಹೋರಾಟ ನಡೆ ಸುತ್ತಿದ್ದು 1695ರವೇಳೆಗೆ **ನಮೂರ್** (Namur) ಕೋಟೆಯನ್ನು ಸಾಧಿಸಿ ಜಯ ಮುಖವನ್ನು ಕಂಡನು. ಆದರೆ ಅದರಿಂದ ಫ್ರೆಂಚರು ಸೋತಹಾಗಾಗಲಿಲ್ಲ. ಬೆಟ್ಟ ಹೊತ್ತು ಸಾಗಿಸುವಭಾರ ವಿಲಿಯಮಿಗೆ.

ಇಷ್ಟುಕಾಲವೂ ಸಮುದ್ರದಮೇಲೆ ಇಂಗ್ಲಿಷ್ ಮತ್ತು ಡಚ್ಚರೊಂದುಕಡೆ ಫ್ರೆಂಚರೊಂದುಕಡೆಯಾಗಿ ಓಡಾಟಗಳೂ ಲಡಾಯಿಗಳೂ ಆಗುತ್ತಲೇ ಇದ್ದವು. ಫ್ರೆಂಚರ ನೌಕಾಪತಿ **ಟೂರ್ವಿಲ್** (Tourville) ಅತಿಸಮರ್ಥನಾಗಿದ್ದನು. ಆದರೆ ಆತನು ತಕ್ಕಷ್ಟು ಚಾತುರ್ಯವನ್ನು ವಹಿಸದೆಹೋದನು. 1690ರಲ್ಲಿ ಆತನ ನೌಕಾ ವ್ಯೂಹಕ್ಕೆ **ಬೀಚಿಹೆಡ್** (Beachy Head) ಬಳಿ ಇಂಗ್ಲಿಷ್‌ನೌಕಾಪತಿ **ಟಾರಿಂಗ್ಟನ್** (Torrington)ಎದುರಾಗಿ ಸಿಕ್ಕಿಬಿದ್ದನು. ಒಂದುಕಣ್ಣೇ ಆ ಟಾರಿಂಗ್ಟನ್ನಿಗಿದ್ದುದು.

ಬಲವಂತದ ಯುದ್ಧಕ್ಕೆ ಆತನು ಸಿದ್ಧನಾಗಿ ಕಾದಾಟ ನಡೆಸಿದನು. ಟೂರ್ವಿಲನಿಗೇ ಜಯವಾಯಿತು. ಆ ತರುವಾಯ ಫ್ರೆಂಚರು ಮುಂದೆನುಗ್ಗಿ ಇಂಗ್ಲಂಡನ್ನು ಆಕ್ರಮಿಸುವರೇನೋ ಎಂಬ ಭಯ ತೋರಿತು. ಆದರೆ ಟೂರ್ವಿಲನು

**ಸಮುದ್ರದ ಮೇಲೆ**

ಸಮಯನಷ್ಟ ಮಾಡಿಕೊಂಡನು. 1692ರಲ್ಲಿ **ಲಾ ಹೋಗ್** (La Hogue) ಬಳಿ ಹೊಡೆದಾಟವಾಯಿತು. ಸಾಕಾದಷ್ಟು ಬಲವಿಲ್ಲದಿದ್ದರೂ ಫ್ರೆಂಚರು ಧೈರ್ಯದಿಂದ ಹೋರಾಡಿದರು. ಹೊರಟುಹೋಗುವಾಗ ಹದಿಮೂರು ಫ್ರೆಂಚ್ ಹಡಗುಗಳು ಇರುಕಿನಲ್ಲಿ ಸಿಕ್ಕಿಕೊಂಡವು. ಇಂಗ್ಲಿಷ್ ನೌಕಾಪತಿ **ರಸ್ಸೆಲ್** (Russell) ಅವುಗಳನ್ನು ಸಿಕ್ಕಿಸಿಕೊಂಡು ಬೆಂಕಿಯಿಡಿಸಿದನು. ಈ ಸುದ್ದಿ ಕೇಳಿದಾಗ ಇಂಗ್ಲಿಷ್ ಜನರು ತಮಗೊದಗಿದ್ದ ಗಂಡತಪ್ಪಿತೆಂದುಕೊಂಡರು. ತರುವಾಯ ಕಡಲ್ಕಾಳುವೆಯಲ್ಲಿ ಇಂಗ್ಲಿಷರದೇ ಮೇಲ್ಕೈಯಾಯಿತು. ಆದರೂ ಫ್ರೆಂಚರು ಸುಮ್ಮನೆ ಬಿಡಲಿಲ್ಲ. ಇಂಗ್ಲಿಷ್ ವ್ಯಾಪಾರದ ಹಡಗುಗಳನ್ನು ಸಿಕ್ಕಿದೆಡೆಯಲ್ಲಿ ಧ್ವಂಸಮಾಡುತ್ತಿದ್ದರು. 1694ರಲ್ಲಿ ಈಬಗೆಯ ಓಡಾಟದಲ್ಲಿ ಇಂಗ್ಲಿಷ್ ಹಡಗುಗಳು ಭೂಮಧ್ಯಸಮುದ್ರದಲ್ಲಿ ಹೊರಟು **ಬಾರ್ಸಿಲೋನ** (Barcelona) ಬಳಿ ಫ್ರೆಂಚರನ್ನು ತಡೆದವು. ಸ್ಪೈನ್ ರಾಜನಿಗೆ ಇದರಿಂದ ಸಹಾಯವಾಯಿತು.

ನೆದರ್ಲಂಡ್ಸ್ ಭಾಗದಲ್ಲಿಮಾತ್ರ ಹೋರಾಟಮುಗಿಯುವ ಸೂಚನೆ ಕಾಣಲಿಲ್ಲ. ಫ್ರೆಂಚ್ ಸೈನ್ಯಗಳು ಅದ್ವಿತೀಯವೆನಿಸಿದ್ದವು. ಹಾಗೂಹೀಗೂ ನಡೆಯುತ್ತಿದ್ದ ಯುದ್ಧವು 1697ರಲ್ಲಿ ಬೇರೊಂದುಕಾರಣದಿಂದ ನಿಂತಿತು. ವಿಲಿಯಂ ಲೂಯಿ ಇಬ್ಬರೂ ಆತುರದಿಂದ ಸಮಾಧಾನಮಾಡಿಕೊಂಡರು. ಜಗಳವೇನೋ ನಿಲ್ಲಲಿಲ್ಲ; ಹೊಡೆದಾಟ ನಿಂತಿತು. **ರಿಸ್ವಿಕ್** (Ryswick) **ಒಪ್ಪಂದ**ವೆಂಬುದು ನಡೆಯಿತು. ವಿಲಿಯಂ ಇಂಗ್ಲಂಡಿಗೆದೊರೆಯೆಂದು ಲೂಯಿ ಒಪ್ಪಿಕೊಂಡನು.

**ಕುಂಟು ಕರಾರು**

ಎರಡುಕಡೆಯವರೂ ಹೋರಾಟವನ್ನು ನಿಲ್ಲಿಸಿಕೊಂಡು ಯುದ್ಧಪೂರ್ವದಲ್ಲಿದ್ದಂತೆ ಇರುವುದಾಗಿ ಒಪ್ಪಿದರು. ಯಥಾಪೂರ್ವವಾಗಿರಬೇಕೆಂದ ಈ ಕರಾರು ಕುಂಟುಕರಾರು; ಜಗಳದ ಇತ್ಯರ್ಥವನ್ನು ನೆರವೇರಿಸಲಿಲ್ಲ. ತಾತ್ಕಾಲಿಕವಾಗಿ ಹೋರಾಟವನ್ನು ಮಾತ್ರ ನಿಲ್ಲಿಸಿತು.

ಪ್ರಬಲವಿರೋಧಿಗಳಿಬ್ಬರೂ ಈರೀತಿಯಲ್ಲಿ ಶಾಂತಿಯನ್ನು ಮಾಡಿಕೊಂಡುದೇಕೆ? ಸೋಲದಿದ್ದ ಲೂಯಿಗೇಕೆ ಶಾಂತಿಯ ಆತುರ? ರ್‍ಹೈನ್ ನದಿಯ ಆಸೆಯನ್ನು ಇದ್ದಕ್ಕಿದ್ದಹಾಗೆಯೇ ಆ ದೊರೆ ತ್ಯಜಿಸಿದನೇ?

ಸ್ಪೈನ್ ದೊರೆಗೆ ಅಸ್ವಸ್ಥತೆತೋರಿ ಆಯುಸ್ಸು ಕಳೆಯುವಂತೆ ತೋರಿತ್ತು. ಅದೇ ಕಾರಣ. ಅದನ್ನು ತಿಳಿದಕೂಡಲೆ ಲೂಯಿಗೆ ಚಿಂತೆಯೂ ಆಸೆಯೂ ಮನಸ್ಸಿನಲ್ಲಿ ಕುಣಿದಾಡಿದವು. ವಿಲಿಯಮಿಗಂತೂ ಅಪಾರವಾದ ಯೋಚನೆ ಹಿಡಿಯಿತು.

## 2. ಸ್ಪೈನ್ ಪಟ್ಟದ ಜಗಳ

ಸ್ಪೈನ್‌ರಾಜ್ಯವು ಪೋರ್ಚುಗಲ್‌ದೇಶವನ್ನು 1640ರಲ್ಲಿ ಕಳೆದುಕೊಂಡಾಗ್ಯೂ ದೊಡ್ಡದಾಗಿಯೇ ಇತ್ತು. ನೆದರ್ಲಂಡ್ಸ್, ಸಾರ್ಡಿನಿಯ, ಸಿಸಿಲಿ, ನೇಪಲ್ಸ್, ಮಿಲನ ಭಾಗಗಳು ಆ ರಾಜನಿಗೆಸೇರಿದ್ದವು; ಅಮೆರಿಕದಲ್ಲಂತೂ ಮೆಕ್ಸಿಕೊಹಿಡಿದು ಪೆರು ಮತ್ತು ಬ್ರಸಿಲ್‌ವರೆಗೆ ವೆಸ್ಟಿಂಡೀಸ್ ದ್ವೀಪರಾಶಿಗಳ ಸಹಿತವಾಗಿ ಎಲ್ಲವೂ ಸ್ಪೈನಿಗೇ ಸೇರಿತ್ತು. ಬಲದಲ್ಲಿ ಕುಗ್ಗಿದ್ದರೂ ಸ್ಪೈನ್‌ರಾಜನು ವಿಸ್ತಾರವಾದ ಭೂಭಾಗಗಳಿಗೆ ಒಡೆಯನಾಗಿದ್ದನು.

**ವಿಸ್ತಾರರಾಜ್ಯ**

1665ರಿಂದ ಆ ರಾಜ್ಯಕ್ಕೆ **2ನೆ ಚಾರ್ಲ್ಸ್** ಎಂಬಾತನು ದೊರೆಯಾಗಿದ್ದನು. ಆತನಿಗೆ ಮಕ್ಕಳಿಲ್ಲ. ಅದರಮೇಲೆ ಚಿತ್ತಸ್ವಾಸ್ಥ್ಯತಪ್ಪುವರೋಗ. 1697ರಲ್ಲಿ ಆತನಿಗೆ ಪ್ರಬಲವಾಗಿ ಚಿತ್ತವೈಕಲ್ಯತೋರಿತು. ಆತನ ತರುವಾಯ ಸ್ಪೈನ್‌ರಾಜ್ಯವು ಯಾರಿಗೆ ಸೇರಬೇಕೆಂಬ ಯೋಚನೆಗೆ ಮೊದಲಾಯಿತು. ಆ ಯೋಚನೆಯನ್ನು ಸ್ಪೈನಿನವರಿಗಿಂತ ನೆರೆಹೊರೆಯವರು ಹೆಚ್ಚಾಗಿ ಕಟ್ಟಿಕೊಂಡರು. ಆಸ್ಟ್ರಿಯದ ಪ್ರಭುವೊಬ್ಬ, ಫ್ರಾನ್ಸ್‌ರಾಜನೊಬ್ಬ, ವಿಲಿಯಂ ಮತ್ತೊಬ್ಬ; ಆ ಮೂವರಲ್ಲದೆ ಸಣ್ಣಪುಟ್ಟ ಸಂಸ್ಥಾನಾಧೀಶರೆಷ್ಟೋಮಂದಿ ಯೋಚನೆ ನಡೆಸಿದರು. ಆ ಯೋಚನೆಯನ್ನು ತಿಳಿಯಬೇಕಾದುದು ಅವಶ್ಯ.

**ಉತ್ತರಾಧಿಕಾರಿ ?**

ಸ್ಪೈನ್‌ದೊರೆ ಹ್ಯಾಪ್ಸ್‌ಬುರ್ಗ್‌ವಂಶದ ಕಿರಿಯಶಾಖೆಯವನು. ಆತನ ಉತ್ತರಾಧಿಕಾರಿಗಳು ಅತ್ತ ಆಸ್ಟ್ರಿಯದ ರಾಜವಂಶದಲ್ಲಿಯೂ ಇದ್ದರು, ಇತ್ತ ಫ್ರಾನ್ಸಿನ ಬೋರ್ಬನ್‌ವಂಶದಲ್ಲಿಯೂ ಇದ್ದರು. ಹಿರಿಯ ರಾಜಕುವರಿಯರಿಬ್ಬರು ಫ್ರಾನ್ಸನ್ನು ಸೇರಿದ್ದರು; ಕಿರಿಯ ರಾಜಕುವರಿಯರಿಬ್ಬರು ಆಸ್ಟ್ರಿಯದ ರಾಜವಂಶವನ್ನು ಸೇರಿದ್ದರು. ಆಸ್ಟ್ರಿಯದ ಪ್ರಭುವಿಗೆ ಹಕ್ಕಿದ್ದಂತೆ ಫ್ರಾನ್ಸ್‌ದೊರೆಗೂ ಹಕ್ಕಿತ್ತು. ಇಬ್ಬರಲ್ಲಿ ಯಾರೊಬ್ಬರಿಗೆ ಸ್ಪೈನ್‌ರಾಜ್ಯ ಸಂದರೂ ಮತ್ತೊಬ್ಬರಿಗೆ ಪ್ರಬಲ ಅಸಮಾಧಾನವಾಗುವುದು ಖಂಡಿತ. ಮೊದಲೇ ಬೋರ್ಬನ್ ಹ್ಯಾಪ್ಸ್‌ಬುರ್ಗ್ ವಂಶಗಳವರು ಸಹಜವೈರಿಗಳು. ಇಬ್ಬರಿಗೂ ಘೋರವಾಗಿ ದ್ವಂದ್ವಬೀಳುವಸಮಯವಾಯಿತು. ಇಬ್ಬರಮಧ್ಯೆ ನಾನಾ ಸಂಸ್ಥಾನಿಕರಿಗೆ ಹೇಗಾದರೂ ಕಷ್ಟ. ಫ್ರಾನ್ಸಿಗೆ ಸ್ಪೈನ್ ಸೇರುವುದಾದರೆ ಫ್ರಾನ್ಸಿಗೆ ಅತಿಪ್ರಾಬಲ್ಯ; ಆಸ್ಟ್ರಿಯಕ್ಕೆ ಸೇರುವುದಾದರೆ ಆಸ್ಟ್ರಿಯಕ್ಕೆ ಅತಿಪ್ರಾಬಲ್ಯ. ಯಾರು ಅತಿಪ್ರಬಲರಾದರೂ ಚಿಕ್ಕ ಸಂಸ್ಥಾನಿಕರಿಗೆ ದುರ್ಗತಿ ಸಿದ್ಧ. ರಾಕ್ಷಸಪ್ರಾಬಲ್ಯ ಯಾರಿಗೂ ಲಭಿಸದಂತೆ ಮಾಡಬೇಕಾದ ಉಪಾಯವೇನೆಂಬ ಚಿಂತೆಗಿಟ್ಟುಕೊಂಡಿತು.

**ವಿಷಮಸಮಸ್ಯೆ**

1698ರಲ್ಲಿ ಈ ಮುಖ್ಯಪ್ರಭುಗಳು ಸೇರಿ ಸ್ಪೈನ್‌ರಾಜ್ಯವು ಪ್ರತ್ಯೇಕವಾಗಿಯೇ ಉಳಿಯುವಂತೆ ಏರ್ಪಡಿಸಬೇಕೆಂದು ಒಡಂಬಟ್ಟರು. **ಬವೇರಿಯ ಸಂಸ್ಥಾನಕ್ಕೆ**

ಉತ್ತರಾಧಿಕಾರಿಯಾಗತಕ್ಕ ಒಂದು ಕೂಸಿಗೆ ಸ್ಪೈನಿನ ರಾಜ್ಯವಾದಲ್ಲಿ ನಿರುಪಾಧಿಕ ವೆಂದುತೋರಿತು. ಆ ವರ್ಷ ಅದರಂತೆ ತೀರ್ಮಾನವಾಯಿತು.

**ಮೊದಲನೆ ಹಂಚಿಕೆ** ಆದರೆ ಸ್ವಲ್ಪಕಾಲದಲ್ಲಿ ಆ ಕೂಸಿಗೆ ಸಿಡುಬುತಗುಲಿ ಸಾವು ಬಂತು. ಆಗ ಮತ್ತೊಂದು ತೀರ್ಮಾನಕ್ಕೆಬರುವುದು ಬಲು ಪ್ರಯಾಸವಾಯಿತು. ಕಡೆಗೆ 1700ರಲ್ಲಿ ಎರಡನೆ ತೀರ್ಮಾನಮಾಡಿಕೊಂಡರು.

---

ಹಕ್ಕುದಾರರನ್ನೂ ಅವರ ಸಂಬಂಧಗಳನ್ನೂ ಈ ವಂಶಾವಳಿಯಲ್ಲಿ ಕಾಣ ಬಹುದು:



ಆಸ್ಟ್ರಿಯಪ್ರಭುವಿನ ಎರಡನೆಮಗ **ಆರ್ಚ್‌ಡ್ಯೂಕ್ ಚಾರ್ಲ್ಸ್**(Archduke Charles) ಎಂಬಾತನಿಗೆ ಸ್ಪೈನ್‌ರಾಜ್ಯದ ಹೆಚ್ಚುಪಾಲು ದೊರಕತಕ್ಕು

**ಎರಡನೆ ಹಂಚಿಕೆ**

ದೆಂದೂ ಫ್ರಾನ್ಸಿನ ಯುವರಾಜನಿಗೆ ಮಿಲನ್ ಮತ್ತು ನೇಪಲ್ಸ್ ಪ್ರಾಂತಗಳು ಸೇರತಕ್ಕುದೆಂದೂ ಒಪ್ಪಿದರು. ಆ ಚಾರ್ಲ್ಸ್ ಎರಡನೆ ಮಗನಾದುದರಿಂದ ಸ್ಪೈನ್ ಪ್ರತ್ಯೇಕವಾಗಿಯೇ ಇರಲಾದೀತೆಂಬ ನಿರೀಕ್ಷೆಯಿತ್ತು.

ಹಾಲಂಡ್, ಇಂಗ್ಲಂಡ್, ಫ್ರಾನ್ಸ್, ಆಸ್ಟ್ರಿಯ ಮುಂತಾದ ದೇಶಗಳ ಪ್ರಭುಗಳು ಈರೀತಿ ಹಂಚಿಕೆಯ ಒಪ್ಪಂದಗಳನ್ನು ನಡೆಸುತ್ತಿದ್ದ ಸಮಾಚಾರವು ಸ್ಪೈನಿನಲ್ಲಿ ತಿಳಿದಾಗ ಅಲ್ಲಿಯ ಜನರಿಗೆ ಸರಿಬೀಳಲಿಲ್ಲ. ಅಲ್ಲಿಯ ದೊರೆ 2ನೆ ಚಾರ್ಲ್ಸ್ ಅದನ್ನು ಕೇಳಿ ರೇಗಿದನು; ಆತನ ರಾಣಿ ಕೋಪವನ್ನು ತಡೆಯಲಾರದೆ ಸುತ್ತಮುತ್ತಲಿದ್ದ ಅಲಂಕಾರವಸ್ತುಗಳನ್ನು ಒಡೆದಳು. ತಮ್ಮ ರಾಜ್ಯಕ್ಕೆ ವಾರಸುದಾರರನ್ನು ಅನ್ಯರು ತೀರ್ಮಾನಿಸುತ್ತಿದ್ದಾಗ ಅವರ ಕೋಪ ಸಹಜವಾಗಿತ್ತು. ತನ್ನನ್ನು ಕೇಳದೆ ಇತರರು ನಡೆಸಿದ್ದ ತೀರ್ಪನ್ನು ಚಾರ್ಲ್ಸ್‌ದೊರೆ ಒಪ್ಪಲಿಲ್ಲ. ತನ್ನ

**ಸ್ಪೈನ್‌ರಾಜನ ಇಷ್ಟ**

ತರುವಾಯ ಸ್ಪೈನಿಗೆ ರಾಜನಾಗತಕ್ಕವನನ್ನು ತಾನೇ ಗೊತ್ತುಮಾಡುವುದಾಗಿ ಹೇಳಿಬಿಟ್ಟನು. ಅಷ್ಟರಲ್ಲಿ ರೋಗವು ಪುನಃ ರೇಗಲಾರಂಭವಾಯಿತು. ಆತನು ಸ್ಪೈನ್‌ರಾಜ್ಯವು ಛಿದ್ರಗಳಾಗದೆ ಒಟ್ಟಾಗಿದ್ದು **ಫಿಲಿಪ್** (Philip, Duke of Anjou) ಎಂಬ ಹೆಸರಿನಫ್ರಾನ್ಸ್ ರಾಜಕುಮಾರನಿಗಾಗತಕ್ಕುದೆಂದು ಸಾಯುವುದರೊಳಗಾಗಿ ನಿಶ್ಚಯಿಸಿದನು. ಆ ಫಿಲಿಪ್ ಫ್ರಾನ್ಸ್ ದೊರೆ 14ನೆ ಲೂಯಿಗೆ ಎರಡನೆ ಮೊಮ್ಮಗನಾಗಿ ಆಂಜೂಶ್ರೀಮಂತನೆಂಬ ಬಿರುದನ್ನು ಪಡೆದಿದ್ದನು. 1700ರಲ್ಲಿಯೇ ಆ 2ನೆ ಚಾರ್ಲ್ಸ್ ಪ್ರಾಣಬಿಟ್ಟನು. ಸ್ಪೈನ್‌ದೇಶದ ಜನರು ಆ ದೊರೆಯ ನಿಶ್ಚಯದಂತೆ ನಡೆದುಕೊಳ್ಳಲು ಸಿದ್ಧರಾದರು.

ಎರಡನೆ ಮೊಮ್ಮಗನನ್ನು ಆರಿಸಿದ್ದರಲ್ಲಿ ಒಂದು ಉದ್ದೇಶವಿತ್ತು. 2ನೆಚಾರ್ಲ್ಸ್ ದೊರೆ ಆ ಉದ್ದೇಶವನ್ನು ಸ್ಪಷ್ಟವಾಗಿ ಹೇಳಿಯೂ ಹೇಳಿದನು. ಸ್ಪೈನ್‌ರಾಜ್ಯವು ಮತ್ತೊಂದು ರಾಜ್ಯಕ್ಕೆ ಸೇರಿ ಅದರ ಹಿತ್ತಿಲಿನಹಾಗಾಗಬಾರದೆಂಬುದು ಆ ಉದ್ದೇಶ. ಫಿಲಿಪ್ ಸ್ಪೈನಿಗೆ ರಾಜನಾದಾಗ ಫ್ರಾನ್ಸಿನಲ್ಲಿದ್ದ ಎಲ್ಲ ಹಕ್ಕುಗಳನ್ನೂ ತ್ಯಜಿಸಬೇಕೆಂದು ಆ ರಾಜನು ಹೇಳಿದ್ದನು. ಹಿರಿಯಸಂಬಂಧವನ್ನೇ

**ಕಾಲಸ್ಥಿತಿ**

ಆರಿಸಿ ಸ್ಪೈನಿನ ಸ್ವಾತಂತ್ರ್ಯವನ್ನುಳಿಸಿಕೊಳ್ಳುವ ಬುದ್ಧಿಯಿಂದ ಈ ಷರತ್ತನ್ನು ಅಪೇಕ್ಷಿಸಿದ ಚಾರ್ಲ್ಸ್‌ನ ತೀರ್ಮಾನ ಒಂದುರೀತಿಯಲ್ಲಿ ನ್ಯಾಯವಾಗಿಯೇ ಕಾಣುವುದು. ಆದರೆ ಆಶಾಭಂಗವನ್ನು ಆಸ್ಟ್ರಿಯದವರು ಸಹಿಸಿಕೊಂಡಿದ್ದಾರೆಯೆ? ಅತಿಪ್ರಬಲನೆನಿಸಿದ್ದ 14ನೆ ಲೂಯಿಯ ಮೊಮ್ಮಗನಿಗೆ

ಸ್ಪೈನ್ ಪ್ರಾಪ್ತಿಯಾಗುವುದನ್ನು ಡಚ್ಚರು ಸಹಿಸಿಕೊಂಡಾರೆ? ಇತರ ಸಂಸ್ಥಾನಿಕರು ಸುಮ್ಮನಿದ್ದಾರೆಯೆ?

2ನೆಚಾರ್ಲ್ಸ್‌ದೊರೆಯ ಮರಣಶಾಸನವು ಡಚ್ಚರಿಗೆ ದೊಡ್ಡವಿಪತ್ತನ್ನು ಸೂಚಿಸಿತು. ಡಚ್ಚರ ನಾಯಕನಾದ ವಿಲಿಯಮಿಗೆ ಅತಿಕಷ್ಟವಾದ ಸಮಸ್ಯೆಯೊದಗಿತು.

**ವಿಲಿಯಮನ ಕಷ್ಟ**

ಇಂಗ್ಲಂಡಿನ ಜನರಿಗೆ ವಿಲಿಯಮನ ಓಡಾಟವಾಗಲಿ ಸಂಧಾನಗಳಾಗಲಿ ಸರಿಬೀಳಲಿಲ್ಲ; ಆತನ ದೂರಾಲೋಚನೆಯು ತಿಳಿಯಲಿಲ್ಲ. ಹಾಗೂಹೀಗೂ ಆತನಲ್ಲಿ ಅನುಮಾನಪಟ್ಟು 1701ರಲ್ಲಿ ಪಾರ್ಲಿಮೆಂಟಿನ ಅನುಮತಿಯಿಲ್ಲದೆ ಹೊರಗೆ ಹೊರಡಕೂಡದೆಂದೂ ಕರಾರುಗಳನ್ನು ಒಪ್ಪಿಕೊಳ್ಳಕೂಡದೆಂದೂ ಸೆಟ್ಲ್‌ಮೆಂಟ್‌ಕಾನೂನಿನಲ್ಲಿ ಗೊತ್ತುಮಾಡಿದರು. ಕಂಭಕ್ಕೆ ಕಟ್ಟಿಹಾಕಿದಂತಾಯಿತು ವಿಲಿಯಮಿಗೆ. ಇಂಗ್ಲಂಡಿನ ಜನರನೇಕರು "ಸ್ಪೈನಿಗೆ ಯಾರು ರಾಜನಾದರೆ ನಮಗೇನು? ಬೇಕಾದರೆ ಡಚ್ಚರು ಹಾರಾಡಲಿ. ನಾವೇಕೆ ಆ ಜಗಳದಲ್ಲಿ ಸಿಕ್ಕಿಕೊಳ್ಳಬೇಕು?" ಎಂದುಕೊಳ್ಳುತ್ತಿದ್ದರು.

ಅಂತಹ ವಿಷಮಸಮಯದಲ್ಲಿ 14ನೆ ಲೂಯಿಯ ನೆತ್ತಿಯಲ್ಲಿ ಹೆಡ್ಡತನವೇರಿತು. ಸಾಮರ್ಥ್ಯವನ್ನೂ ದರ್ಪವನ್ನೂ ಸಮಾನವಾಗಿಬೀರುತ್ತಿದ್ದ ಆ ದೊರೆ ಕ್ಯಾಥಲಿಕ್ ಮತದನಿಷ್ಠೆಯನ್ನು ಅತಿಯಾಗಿ ಬೆಳೆಸಿಕೊಂಡು ಹ್ಯೂಗಿನೋಪ್ರಜೆಗಳನ್ನು ಓಡಿಸಿದಂದಿನಿಂದ ವಿವೇಚನೆಯಿಲ್ಲದ ಹೆಮ್ಮೆಯನ್ನೇ ಬೀರುತ್ತಿದ್ದನು. ಸ್ಪೈನ್‌ರಾಜನ ಉಯಿಲಿನ ಸಮಾಚಾರಕೇಳಿದಾಗ ಲೂಯಿ ಮೈಮರೆತನು. ಮೊಮ್ಮಗನನ್ನು ಬರಮಾಡಿಕೊಂಡು

**ಲೂಯಿಯ ಹೆಡ್ಡತನ**

"ನೀನು ಸ್ಪೈನ್‌ರಾಜನಾಗುವೆ. ಇನ್ನುಮೇಲೆ ಪಿರನೀಸ್ ಪರ್ವತವೇ ಇಲ್ಲವೆಂದು ಭಾವಿಸು" ಎಂಬರ್ಥದಮಾತನ್ನು ಬಿಂಕದಿಂದ ಒದರಿ ಸಮಯಬಂದರೆ ಫಿಲಿಪ್ ಫ್ರಾನ್ಸಿಗೂ ದೊರೆಯಾಗಬಹುದೆಂದನು. ಡಚ್ಚರನ್ನು ಅಲಕ್ಷ್ಯಮಾಡಿ ರಿಸ್ವಿಕ್‌ಕರಾರನ್ನು ಭಂಗಪಡಿಸುವಂತೆ ತನ್ನ ಸೈನ್ಯಗಳನ್ನು ನೆದರ್ಲಂಡ್ಸಿನ ಗಡಿದುರ್ಗಗಳಲ್ಲಿದೂಡಿ ಡಚ್ಚರನ್ನು ಓಡಿಸಿದನು. ಫ್ರಾನ್ಸ್ ಸ್ಪೈನ್ ಒಂದಾಗುವುದೆಂದು ಹಿಗ್ಗಿ ವೆಸ್ಟಿಂಡೀಸ್‌ದ್ವೀಪಗಳಲ್ಲಿ ಫ್ರೆಂಚರಿಗೆ ವ್ಯಾಪಾರಸೌಲಭ್ಯಗಳನ್ನು ದೊರಕಿಸಿಕೊಡಲು ಆತುರಪಟ್ಟನು. ಈ ಆತುರವನ್ನು ತಿಳಿದಾಗ ಇಂಗ್ಲಿಷ್‌ವರ್ತಕರು ಕೈಕೈ ಹಿಸುಕಿಕೊಂಡರು. ತಮಗೆ ಬರಬಹುದಾಗಿದ್ದ ಅನುಕೂಲಗಳು ಫ್ರೆಂಚರಿಗೆ ದೊರೆತವೆಂದು ಅವರಿಗೆ ಆಕ್ರೋಶವೇರಿತು. ಲೂಯಿ ಇನ್ನೂ ದುಡುಕಿದನು. 1702ರಲ್ಲಿ ಪರಾರಿರಾಜ 2ನೆ ಜೇಮ್ಸಿಗೆ ಅವಸಾನಕಾಲ ಬಂತು. ಲೂಯಿಯನ್ನು ಕಂಡು ಕಣ್ಣೀರಿಡುತ್ತ ಜೇಮ್ಸ್ ತನ್ನ ಕುವರನಿಗಾದರೂ ರಾಜ್ಯಬಂದರೆ ಸಾಕೆಂದನು. ಆಗ ಆ ಕುಮಾರನಿಗೆ ಇಂಗ್ಲಂಡಿನ ಪಟ್ಟಕಟ್ಟುವುದಾಗಿ ವಾಗ್ದಾನವಿತ್ತು ಜೇಮ್ಸ್ ತೀರಿಕೊಂಡಮೇಲೆ ಆ ರಾಜಪುತ್ರನನ್ನು

ಮೂರನೆ ಜೇಮ್ಸನೆಂದು ಲೂಯಿ ಸಂಬೋಧಿಸಿದನು. ರಿಸ್ವಿಕ್‌ಕರಾರಿನಭಂಗ ಪೂರ್ತಿಯಾಗಿಹೋಯಿತು.

ಇಷ್ಟು ನಡೆಯುವವೇಳೆಗೆ ಇಂಗ್ಲಿಷರಿಗೂ ಕೋಪ ಕೆರಳಿತು. "ಹಾಲಂಡಿನ ವಿಪತ್ತೇ ನಮ್ಮ ವಿಪತ್ತು" ಎಂಬುದರ ಅರ್ಥವು ಪಾರ್ಲಿಮೆಂಟಿನ ಮುಖ್ಯಸ್ಥರಿಗೆ ತಿಳಿಯಿತು. ವಿಲಿಯಮಿಗೆ ಮುಂದಿನ ಕೆಲಸವು ಸುಲಭವಾಯಿತು. ಹಾಲೆಂಡ್ ಇಂಗ್ಲಂಡುಗಳನ್ನು ಆಸ್ಟ್ರಿಯದೊಂದಿಗೆ ಒಟ್ಟುಗೂಡಿಸಿ ಲೂಯಿಯನ್ನೂ ಆತನ ಮೊಮ್ಮಗನನ್ನೂ ಪ್ರತಿಭಟಿಸುವ ಸನ್ನಾಹಕ್ಕೆ ತೊಡಗಿದನು.

**ಮಿತ್ರಮಂಡಲಿ**

1702ರಲ್ಲಿ ಫ್ರಾನ್ಸ್ ಮತ್ತು ಸ್ಪೈನ್‌ದೇಶಗಳ ಪ್ರಭುಗಳೊಂದಿಗೆ ಯುದ್ಧಮಾಡಲು **ಗ್ರಾಂಡ್ ಅಲಯನ್ಸ್** (Grand Alliance) ಎಂಬ ಮಿತ್ರಮಂಡಲಿ ಸಿದ್ಧವಾಯಿತು. ಮದ್ರಿಡ್‌ನಗರದಲ್ಲಿ ಪಟ್ಟಾಭಿಷಿಕ್ತನಾಗಿದ್ದ ಫಿಲಿಪ್ಪನೂ ಲೂಯಿಯೂ ಒಟ್ಟುಗೂಡಿ ಯುದ್ಧಕ್ಕೆ ಸಿದ್ಧರಾದರು. ಯುದ್ಧಮೊದಲಾಗುವಷ್ಟರಲ್ಲಿ ವಿಲಿಯಂ ತೀರಿಕೊಂಡನು.

ಈ ಪಟ್ಟದ ಜಗಳದಲ್ಲಿ ನಡೆದ ಯುದ್ಧಗಳಿಗಿಂತ ಯುದ್ಧಪೂರ್ವದಲ್ಲಿ ನಡೆದ ಸಂಧಾನಪರಂಪರೆಗಳ ವೃತ್ತಾಂತವನ್ನೇ ಹೆಚ್ಚು ಗಮನವಿಟ್ಟು ಕಾಣಬೇಕು. ವುಲ್ಸಿ ತೋರಿಕೊಟ್ಟ ಬ್ಯಾಲೆನ್ಸ್ ಆಫ್ ಪವರ್ ನೀತಿಗೆ ಅತ್ಯುತ್ತಮದೃಷ್ಟಾಂತ ಅದರಲ್ಲಿ ಕಾಣುವುದು. ಇಂಗ್ಲಂಡಿನ ಪೂರ್ವತೀರಕ್ಕೆ ಎದುರಾಗಿರುವ

**ಸಂಧಾನಗಳ ನೀತಿ**

ಸಮುದ್ರತೀರವು ಪ್ರಬಲವಾದ ಐರೋಪ್ಯರಾಜ್ಯಕ್ಕೆ ಸೇರದಿರಬೇಕೆಂಬ ಇಂಗ್ಲಿಷರ ಮನೋಗತವು ಅವರಲ್ಲಿ ವ್ಯಕ್ತವಾಗುವುದು. ವಿವರವಾಗಿ ವಿಚಾರಿಸಿಕೊಂಡಾಗ ಲೂಯಿಯ ಹೆಡ್ಡತನದಿಂದ ಫ್ರಾನ್ಸ್ ದೇಶಕ್ಕಾದ ನಮುಯನಷ್ಟವೂ ಅದರಲ್ಲಿ ಗೋಚರವಾಗುವುದು.

1702ರಲ್ಲಿ ಯುದ್ಧ ಮೊದಲಾಯಿತು. ಇಂಗ್ಲಿಷ್ ದಳಪತಿ **ಮಾರ್ಲ್‌ಬರೋ ಶ್ರೀಮಂತನೇ** ಮಿತ್ರಮಂಡಲಿಯ ಸೈನ್ಯಗಳಿಗೆ ಸಮಸ್ತದಂಡಾಧಿಪತಿಯಾಗಿ ನೆದರ್ಲಂಡ್ಸ್ ಪ್ರಾಂತದಲ್ಲಿ **ಲಿಯೇಜ್** (Liege) ನಗರವನ್ನು ಫ್ರೆಂಚರಿಂದ ಕಿತ್ತುಕೊಂಡನು. ಆ ವೇಳೆಗೆ ಮಿತ್ರಮಂಡಲಿಯ ಪಕ್ಷವನ್ನು **ಸವಾಯ್**

**ಯುದ್ಧಪ್ರಾರಂಭ**

ಶ್ರೀಮಂತ (Duke of Savoy)ನೂ ಪೋರ್ಚುಗಲ್‌ದೊರೆಯೂ ಸೇರಿಕೊಂಡರು. 1703ರಲ್ಲಿ **ಪೋರ್ಚುಗಲ್** ಇಂಗ್ಲಂಡ್‌ಗಳಿಗೆ **ಮೈತ್ರಿಯ** ಕರಾರು ( Methuen Treaty ) ನಡೆದು ಪರಸ್ಪರವ್ಯಾಪಾರಕ್ಕೆ ಅನುಕೂಲವಾಯಿತು.

**ಯುದ್ಧವು ಇಟಲಿ, ಸ್ಪೈನ್, ನೆದರ್ಲಂಡ್ಸ್, ಜರ್ಮನಿಗಳಲ್ಲಲ್ಲದೆ ಸಮುದ್ರದ ಮೇಲೂ ನಡೆಯಿತು.**

ಸ್ಪೈನಿನಲ್ಲಿ **5ನೆ ಫಿಲಿಪ್** ದೊರೆಯಾಗಿದ್ದನಷ್ಟೆ. ಆತನನ್ನು ತಪ್ಪಿಸಿ ಆರ್ಚ್ ಡ್ಯೂಕ್ ಚಾರ್ಲ್ಸ್‌ಗೆ ಪಟ್ಟಕಟ್ಟುವುದು ಮಿತ್ರಮಂಡಲಿಯುವರ ಉದ್ದೇಶ. 1704 ರಲ್ಲಿ ಇಂಗ್ಲಿಷ್ ನೌಕಾಪತಿ **ಅಡ್ಮಿರಲ್ ರೂಕ್** (Admiral Rooke) ಎಂಬಾತನು **ಜಿಬ್ರಾಲ್ಟರ್** ಭೂಶಿರವನ್ನು ಸಾಧಿಸಿದನು. **ಪೀಟರ್ಬರೋ**(Peterborough) ಎಂಬ ಇಂಗ್ಲಿಷ್ ದಳಪತಿಯು ಭೂಮಧ್ಯಸಮುದ್ರಮಾರ್ಗವಾಗಿ **ಬಾರ್ಸಿಲೋನ** (Barcelona) ಬಳಿ ಸೈನ್ಯವನ್ನಿಳಿಸಿ ಅಲ್ಲಿಯ **ಕ್ಯಾಟಲಾನ್** (Catalan) ಜಾತಿಯುವರನ್ನು ಎತ್ತಿಕಟ್ಟಿ ಆ ಪಟ್ಟಣವನ್ನು ಹಿಡಿದನು. ಆ ಪ್ರಾಂತದಲ್ಲಿ ಚಾರ್ಲ್ಸ್ ದೊರೆಯೆಂದು ಪ್ರಕಟಿಸಿದತರುವಾಯ ಮಡ್ರಿಡ್‌ಕಡೆ ನಡೆದನು. ಲಿಸ್ಬನ್‌ಕಡೆಯಿಂದ ಪೋರ್ಚುಗೀಸ್, ಡಚ್ ಮತ್ತು ಇಂಗ್ಲಿಷ್ ದಳಗಳು ಕೂಡಿ ಮಡ್ರಿಡ್ಡಿಗೆ ಹೊರಟವು. 1706ರಲ್ಲಿ **ಮಡ್ರಿಡ್** ನಗರವು ಫಿಲಿಪ್ಪನ ಕೈತಪ್ಪಿತು. ಆದರೆ ಈ ಜಯವು ಸ್ಥಿರವಾಗಲಿಲ್ಲ. ಫಿಲಿಪ್ಪನಲ್ಲಿ ವಿಶ್ವಾಸತೋರಿದ ಸ್ಪೈನ್‌ಜನರು ಯುದ್ಧಕ್ಕೆ ಸಿದ್ಧರಾದರು. ತಮ್ಮ ದೇಶದಲ್ಲಿ ನುಗ್ಗಿ ಬಂದಿದ್ದ ಪರಸೈನ್ಯಗಳನ್ನು 1707ರಲ್ಲಿ **ಅಲ್ಮಾನ್ಸಾ** (Almanza) ಎಂಬಲ್ಲಿ ಚನ್ನಾಗಿ ಸೋಲಿಸಿ ಮಡ್ರಿಡ್‌ನಗರವನ್ನು ವಶಪಡಿಸಿಕೊಂಡು ಫಿಲಿಪ್ಪನದೊರೆತನವನ್ನು ಭದ್ರಗೊಳಿಸಿದರು. ಸ್ಪೈನಿನಲ್ಲಿ ಇಂಗ್ಲಿಷರಿಗೆ ಸೋಲೇ ತೋರುವಂತಾಯಿತು. ಆಗ ಪುನಃ ಮತ್ತೊಂದುಪ್ರಯತ್ನ ನಡೆಯಿತು. **ಸ್ಟಾನ್ ಹೋಪ್** (Stanhope) ಎಂಬ ದಳಪತಿಯು **ಮೈನಾರ್ಕ**(Minorca) ದ್ವೀಪವನ್ನು ಸ್ವಾಧೀನಪಡಿಸಿಕೊಂಡು 1710ರಲ್ಲಿ ಪುನಃ ಮಡ್ರಿಡ್ಡನ್ನು ಆಕ್ರಮಿಸಿದನು. ಆದರೆ ಸ್ಪಾನಿಷ್ ಜನರನ್ನು ಗೆಲ್ಲಲಾಗಲಿಲ್ಲ. ಅದೇವರ್ಷ ಆ ಜನರು ದೇಶಭಕ್ತಿಯಿಂದಕೂಡಿ **ಬ್ರಿಹ್ಯೂಗ** (Briheuga) ಎಂಬಲ್ಲಿ ಸ್ಟಾನ್ ಹೋಪನಿಗೆ ಅವಮಾನಕರವಾದ ಸೋಲನ್ನು ತಂದಿಟ್ಟರು. ಸ್ಪೈನಿನಲ್ಲಿ ಮಿತ್ರಮಂಡಲಿಯುವರಿಗೆ ಜಯಲಭಿಸಲಿಲ್ಲ. ಫಿಲಿಪ್ಪನದೊರೆತನ ಸ್ಪಾನಿಷರವಿಶ್ವಾಸದಿಂದ ಭದ್ರಗೊಂಡಿತು.

**ಸ್ಪೈನಿನಲ್ಲಿ ಸೋಲು**

ಫ್ರೆಂಚ್‌ಸೈನ್ಯಗಳು ಮೊದಮೊದಲು **ನೆದರ್ಲಂಡ್ಸ್‌ಪ್ರಾಂತ**ದಲ್ಲಿದ್ದವು. ಆ ಸೈನ್ಯಗಳು ತಮ್ಮ ನಾಡನ್ನು ಮುತ್ತಿಯಾವೆಂಬ ಭಯ ಡಚ್ಚರಿಗೆ. ಆದ್ದರಿಂದ ಮಾರ್ಲ್‌ಬರೋ ಅಲ್ಲಿಯೇ ಕಾಲಕಳೆಯುತ್ತಿರಬೇಕಾಯಿತು. 1704ರಲ್ಲಿ ಫ್ರೆಂಚರು ಗೋಪ್ಯವಾಗಿ ಜರ್ಮನಿಯಲ್ಲಿ ನುಗ್ಗಿ ವಿಯೆನ್ನ ನಗರದಕಡೆಗೆ ಹೊರಟರು. ಬವೇರಿಯದ ಸಂಸ್ಥಾನಿಕನೂ ಫ್ರೆಂಚರಕಡೆ ಸೇರಿದ್ದನು. ಆಗ ಮಾರ್ಲ್‌ಬರೋ ಅತಿದಕ್ಷತೆಯಿಂದ ವರ್ತಿಸಿ ತನ್ನ ಸೈನ್ಯವನ್ನು ನಡೆಸಿ **ಬ್ಲೆನ್ಹೆಂ** (Blenheim) ಬಳಿ ಫ್ರೆಂಚರನ್ನು ತಡೆದು ಕದನಕ್ಕೆನಿಂತು ಭಾರಿಜಯುವನ್ನು ಪಡೆದನು. ಫ್ರೆಂಚ್‌ಸೈನ್ಯಗಳು ದೊಡ್ಡ

**ಮಾರ್ಲ್‌ಬರೋ ಜಯಗಳು**

ಅಪಜಯುವನ್ನು ಪಡೆಯಲು ಇದೇ ಮೊದಲು. ಆಸ್ಟ್ರಿಯಕ್ಕೊದಗಿದ್ದ ವಿಪತ್ತು ತೊಲಗಿತು. ಮಾರ್ಲ್‌ಬರೊ ದಳಪತಿಗೆ ವಿಶೇಷ ಖ್ಯಾತಿಬಂತು. ಎರಡುಪಕ್ಷದ ಸೈನ್ಯಗಳೂ ನೆದರ್ಲಂಡ್ಸಿಗೆ ಹಿಂತಿರುಗಿದವು. 1706ರಲ್ಲಿ **ರಾಮಿಲೀಸ್** (Ramillies) ಎಂಬಲ್ಲಿ ಕದನವಾಗಿ ಮಾರ್ಲ್‌ಬರೋ ಜಯುವನ್ನು ಪಡೆದು ಸ್ಪಾನಿಷ್ ನೆದರ್ಲಂಡ್ಸ್ ಎಂಬ ಪ್ರದೇಶವೆಲ್ಲವನ್ನೂ ಆಕ್ರಮಿಸಿಕೊಂಡನು. ಇಟಲಿಯ ಉತ್ತರಭಾಗದಲ್ಲಿಯೂ ಅದೇವರ್ಷ **ಟ್ಯೂರಿನ್** (Turin) ಬಳಿ ಯುದ್ಧನಡೆದು ಫ್ರೆಂಚರು ಸವಾಯಿಯ **ಯೂಜೀನ್** (Eugene) ಎದುರಿನಲ್ಲಿ ಸೋತರು. 1708ರಲ್ಲಿ ಮಾರ್ಲ್‌ಬರೋ ಯೂಜೀನ್ ಜತೆಗೂಡಿ **ಊಡೆನಾರ್ಡ್** (Oudenarde) ಎಂಬಲ್ಲಿ ಫ್ರೆಂಚರನ್ನು ಸೋಲಿಸಿ ಫ್ರಾನ್ಸಿನ ಉತ್ತರದಲ್ಲಿ **ಲೀಯೆ** (Lille) ಎಂಬ ದುರ್ಗವನ್ನು ಹಿಡಿದರು. ಮುಂದೆ ಫ್ರಾನ್ಸ್ ದೇಶದಲ್ಲಿಯೇ ಶತ್ರುಸೈನ್ಯಗಳು ನುಗ್ಗುವಂತಿದ್ದವು.

**ಲೂಯಿಯ ಅವಮಾನ**

ಎಲ್ಲೆಲ್ಲಿಯೂ ತನ್ನ ಸೈನ್ಯಗಳು ಸೋಲುತ್ತಿದ್ದುದನ್ನು ಕಂಡು ಹತಾಶನಾಗಿ ಲೂಯಿ ಸೋಲನ್ನೊಪ್ಪಿಕೊಳ್ಳಲು ಸಿದ್ಧನಾಗಿ 1708ರಲ್ಲಿ ಶಾಂತಿಸಂಧಾನಕ್ಕೆ ತೊಡಗಿದನು. ಆದರೆ ಮಿತ್ರಮಂಡಲಿಯವರು ದರ್ಪದಿಂದಕೂಡಿದವರಾಗಿ ಲೂಯಿ ತನ್ನ ಮೊಮ್ಮಗನನ್ನು ತಾನೇ ಸ್ಪೈನಿನಿಂದ ಓಡಿಸಬೇಕೆಂದು ಕೇಳಿದರು. ತಮ್ಮ ರಾಜನಿಗೆಷ್ಟು ಅವಮಾನಮಾಡಿದರೆಂದು ಫ್ರೆಂಚರು ಕೋಪಗೊಂಡು ಸಾಲಸೋಲಗಳನ್ನೂ ಹಾನಿನಷ್ಟಗಳನ್ನೂ ಲೆಕ್ಕಿಸದೆ ಯುದ್ಧಕ್ಕೆ ನಿಂತರು. 1709ರಲ್ಲಿ **ಮಾಪ್ಲಾಕೆ** (Malplaquet) ಎಂಬಲ್ಲಿ ಫ್ರೆಂಚರು ಭಾರಿಯುದ್ಧ ನಡೆಸಿದರು. ಮಾರ್ಲ್‌ಬರೋ ಶ್ರೀಮಂತನೇ ಗೆದ್ದನು; ಆದರೆ ಸೋತವರಿಗಿಂತ ಗೆದ್ದವರುಪಟ್ಟನಷ್ಟವೇ ಹೆಚ್ಚಾಗಿತ್ತು.

**ಟೋರಿ ಮಂತ್ರಿಗಳು**

ಆ ವೇಳೆಗೆ ಇಂಗ್ಲಂಡಿನಲ್ಲಿ ಮಂತ್ರಿಗಳು ಅಧಿಕಾರಕಳೆದುಕೊಳ್ಳುವ ಸಮಯವೊದಗಿತು. ಮಾರ್ಲ್‌ಬರೋ ಶ್ರೀಮಂತನಿಗೆ ಉದ್ಯೋಗದಿಂದ ಬರತರಫ್ ಆಗಿ ಹೋಯಿತು. ಶುದ್ಧ ಟೋರಿಪಕ್ಷದವರು ಮಂತ್ರಿಗಳಾಗಿ ಯುದ್ಧವನ್ನು ನಿಲ್ಲಿಸುವ ಅಪೇಕ್ಷೆಯಿಂದಿದ್ದರು. ಹೊಸದಾಗಿ ದಳಪತಿಯಾದ **ಆರ್ಮಾಂಡ್ ಶ್ರೀಮಂತನಿಗೆ** (Duke of Ormonde) ಮಂತ್ರಿಗಳು ಯುದ್ಧನಡೆಸದಿರುವಂತೆ ಗೋಪ್ಯವಾಗಿ ಹೇಳಿದರು. ಲೂಯಿಗೆ ಸೋಲಾಗುವುದನ್ನು ಟೋರಿಗಳು ಕಾರಣಾಂತರದಿಂದ ಸಹಿಸದಾದರು. 1709ರಲ್ಲಿ ಟೋರಿಪಕ್ಷದವರು ಅಧಿಕಾರವಹಿಸಿ ಹಾಗೂಹೀಗೂ ಕಾಲತಳ್ಳಿದರು.

1710ರಲ್ಲಿ ಸ್ಪೈನಿನಲ್ಲಿ ಫಿಲಿಪ್ ಭದ್ರನಾದನು. 1711ರಲ್ಲಿ ಆರ್ಚ್‌ಡ್ಯೂಕ್ ಚಾರ್ಲ್ಸ್ ಎನಿಸಿದ್ದವನ ಅಣ್ಣನು ಸತ್ತನು. ಆತನು ಆಸ್ಟ್ರಿಯಕ್ಕೆ ಪ್ರಭುವಾದನು. ಆ

**1689—ಇಂಗ್ಲಿಷ್ ಪಟ್ಟದ ಜಗಳ : ಇಂಗ್ಲಂಡ್+ಹಾಲಂಡ್ > < 14ನೆ ಲೂಯಿ**

| ನೆದರ್ಲಂಡ್ಸ್ | ಸ್ಕಾಟ್ಲಂಡ್ | ಐರ್ಲಂಡ್ | ಸಮುದ್ರ |
|---|---|---|---|
| | 1689—ಕಿಲ್ಲೀ ಕ್ರಾಂಕಿ | 1689—ಲಂಡನ್ಡೆರಿ ಎನ್ನಿಸ್ಕಿಲ್ಲೆನ್ | 1690—ಬೀಚಿಹೆಡ್ |
| | | 1690—ಬಾಯ್ನ್ ಕದನ | |
| 1692—ಸ್ಟೆಯ್ನ್‌ಕರ್ಕ್ | | 1691—ಲಿಮೆರಿಕ್ ಮುತ್ತಿಗೆ | 1692—ಲಾಹೋಗ್ |
| 1693—ನೀರ್ವಿಂಡೆನ್ | | | |
| 1695—ನಮೂರ್ | | | 1694—ಬಾರ್ಸಿಲೋನ |

**1697—ರಿಸ್ವಿಕ್ ಕರಾರು**

**1702—ಸ್ಪೈನ್ ಪಟ್ಟದ ಜಗಳ: ಇಂಗ್ಲಂಡ್+ಹಾಲಂಡ್+ಆಸ್ಟ್ರಿಯ+ಸವಾಯ್> <14ನೆ ಲೂಯಿ+5ನೆ ಫಿಲಿಪ್+ಬವೇರಿಯ**

| ನೆದರ್ಲಂಡ್ಸ್ | ಆಸ್ಟ್ರಿಯ | ಇಟಲಿ | ಸ್ಪೈನ್ |
|---|---|---|---|
| 1702—ಲಿಯೇಜ್ | 1704—ಬ್ಲೆನ್ಹಿಂ | | 1704—ಜಿಬ್ರಾಲ್ಟರ್ ಬಾರ್ಸಿಲೋನ |
| 1706—ರಾಮಿಲೀಸ್ | | 1706—ಟ್ಯೂರಿನ್ | 1706—ಮ್ಯಾಡ್ರಿಡ್ |
| 1708—ಊಡೆನಾರ್ಡ್ ಲಿಲೆ | | | 1707—ಅಲ್ಮಾನ್ಸಾ ಬ್ರೈನಾರ್ಡ |
| 1709—ಮಾಲ್ಪ್ಲಾಕೆ | | | 1710—ಬ್ರಿಹ್ಯೂಗ |

**1713—ಯುಟ್ರೆಕ್ಟ್ ಕರಾರು**

ಸ್ಥಿತಿಯಲ್ಲಿ ಚಾರ್ಲ್ಸ್‌ಗೆ ಸ್ಪೈನ್ ರಾಜ್ಯವನ್ನು ಕೊಡಿಸುವಯೋಚನೆ ದೂರವಾಯಿತು.

**ಮುಕ್ತಾಯ**

ಮಿತ್ರಮಂಡಲಿಯಲ್ಲಿ ಸೇರಿದ್ದ ಇತರರೂ ಯುದ್ಧವನ್ನು ಸಾಕುಮಾಡಿಕೊಂಡರು. ಆ ಚಾರ್ಲ್ಸ್‌ಗೇನೋ ಬಿಟ್ಟು ಕೊಡುವ ಇಷ್ಟವಿಲ್ಲ. ಆದರೆ ಒಂಟಿಯಾಗಿನಿಂತು ಹೋರಾಡ ಲಾರದವನಾದುದರಿಂದ ಕಡೆಗೆ ಎಲ್ಲರೊಪ್ಪಿದ ತೀರ್ಮಾನಕ್ಕೊಪ್ಪಿಕೊಳ್ಳಬೇಕಾಯಿತು.

**ಒಪ್ಪಂದ**

ಇಂಗ್ಲಿಷರೂ ಡಚ್ಚರೂ ಸೇರಿ 1713ರಲ್ಲಿ **ಯುಟ್ರೆಕ್ಟ್** (Utrecht) ಪಟ್ಟಣದಲ್ಲಿ ಫ್ರೆಂಚರೊಡನೆಯೂ ಸ್ಪಾನಿಷರೊಡನೆಯೂ ಕರಾರುಗಳನ್ನು ಗೊತ್ತುಪಡಿಸಿದರು. ಆರುತಿಂಗಳ ತರುವಾಯ ಆಸ್ಟ್ರಿಯದ ಪ್ರಭು ಚಾರ್ಲ್ಸ್‌ನೂ ಅವುಗಳನ್ನೊಪ್ಪಿದನು. ತೀರ್ಮಾನವಾದ ಮುಖ್ಯಾಂಶಗಳು:

(1) ಸ್ಪೈನ್ ಮತ್ತು ಅಮೆರಿಕ ಸೇರಿದ ರಾಜ್ಯಕ್ಕೆ ಫಿಲಿಪ್ಪನೇ ದೊರೆ; ಆತನಿಗಾಗಲಿ ಆತನ ವಂಶಸ್ಥರಿಗಾಗಲಿ ಫ್ರಾನ್ಸ್‌ರಾಜ್ಯದ ಹಕ್ಕಿರುವುದಿಲ್ಲ.

(2) ಸ್ಪೈನ್‌ರಾಜ್ಯದ ಭಾಗಗಳಾಗಿದ್ದ ನೇಪಲ್ಸ್, ಮಿಲನ್, ಸಾರ್ಡಿನಿಯ ಮತ್ತು ನೆದರ್ಲಂಡ್ಸ್‌ಪ್ರಾಂತಗಳು ಆಸ್ಟ್ರಿಯದ ಚಾರ್ಲ್ಸ್‌ಗೆ ಸೇರಿರತಕ್ಕದ್ದು.

(3) ಸಿಸಿಲಿಯು ಸವಾಯ್ ಡ್ಯೂಕನಿಗೆ ಸೇರತಕ್ಕದ್ದು.

(4) ನೆದರ್ಲಂಡ್ಸಿಗೂ ಫ್ರಾನ್ಸಿಗೂ ಮೇರೆಯಲ್ಲಿದ್ದ ದುರ್ಗಗಳಲ್ಲಿ ತಮ್ಮ ಸೈನ್ಯಗಳನ್ನಿಟ್ಟುಕೊಂಡಿರುವುದಲ್ಲದೆ ಅಲ್ಲಿಯ ವ್ಯಾಪಾರಾಧಿಕಾರವನ್ನು ಡಚ್ಚರು ಅನುಭವಿಸತಕ್ಕದ್ದು.

(5) ಇಂಗ್ಲಂಡಿನ ಪಟ್ಟದ ವ್ಯವಸ್ಥೆಯನ್ನು (ಸೆಟ್ಲ್‌ಮೆಂಟ್ ಆಕ್ಟ್ ಪ್ರಕಾರ) ಎಲ್ಲರೂ ಒಪ್ಪತಕ್ಕದ್ದು. ಇಂಗ್ಲಂಡಿಗೆ ಫ್ರಾನ್ಸ್‌ರಾಜನು ನ್ಯೂಫೌಂಡ್ಲಂಡ್ ಮತ್ತು ಅಕೇಡೀ (ನೋವಸ್ಕೋಷಿಯ) ಕ್ಷೇತ್ರಗಳನ್ನೂ ಸ್ಪೈನ್‌ರಾಜನು ಮೈನಾರ್ಕ ಜಿಬ್ರಾಲ್ಟರುಗಳನ್ನೂ ಒಪ್ಪಿಸತಕ್ಕದ್ದು. ಸ್ಪಾನಿಷ್ ಅಮೆರಿಕಾಕ್ಷೇತ್ರಗಳಲ್ಲಿ ನೀಗ್ರೋ ಗುಲಾಮರನ್ನು ಮಾರುವಅಧಿಕಾರವು ಇಂಗ್ಲಿಷರಿಗೆ ಸರ್ವಮಾನ್ಯವಾಗಿರತಕ್ಕದ್ದು; ಅಲ್ಲದೆ ವೆಸ್ಟಿಂಡೀಸ್‌ದ್ವೀಪಗಳಮಧ್ಯೆ ಪೋರ್ಟೊಬೆಲ್ಲೊ (Porto Bello) ಎಂಬಲ್ಲಿ ವರ್ಷಕ್ಕೊಂದು ಹಡಗಿನ ಹೇರಿನಷ್ಟು ವ್ಯಾಪಾರಮಾಡುವ ಅಧಿಕಾರವಿರತಕ್ಕದ್ದು.

ಈರೀತಿ ಸ್ಪೈನ್‌ರಾಜ್ಯವು ಅನೇಕಭಾಗಗಳನ್ನು ಕಳೆದುಕೊಂಡಿತು. ಅದುವರೆಗೂ ಬಲು ಎಚ್ಚರಿಕೆಯಿಂದ ಕಾಪಾಡಿಕೊಂಡಿದ್ದ ವೆಸ್ಟಿಂಡೀಸ್‌ಕ್ಷೇತ್ರಗಳಲ್ಲಿ ಇಂಗ್ಲಿಷರಿಗೆ ಆಸ್ಪದವನ್ನು ಕೊಡಬೇಕಾಯಿತು. ಸ್ಪೈನಿಗಾದ ನಷ್ಟವು ಅನ್ಯಾಯದಂತೆಕಂಡರೂ ವಾಸ್ತವವಾಗಿ ಯುಟ್ರೆಕ್ಟ್ ಕರಾರಿನತರುವಾಯ ಸ್ಪೈನ್ ಚೇತರಿಸಿಕೊಂಡು ಬಲ ವನ್ನು ಪೋಷಿಸಿಕೊಂಡಿತು.

**ಇಂಗ್ಲಂಡಿನ ಮೇಲ್ಮೆ**

ಇಂಗ್ಲಂಡಿಗೆ ವಿಶೇಷವಾದ ಯಶಸ್ಸು ಬಂದುದಲ್ಲದೆ ಉತ್ತಮವಾದ ಕ್ಷೇತ್ರಗಳು ಅಮೆರಿಕದಲ್ಲಿ ದೊರೆತವು. ಅಮೂಲ್ಯವೆನಿಸಿದ ವ್ಯಾಪಾರ ಸೌಕರ್ಯಗಳು ದೊರೆತವು. ಭೂಮಧ್ಯಸಮುದ್ರದಲ್ಲಿ ಅಧಿಕಾರಮಾಡಲು ತಕ್ಕ ಸ್ಥಲಸಂಪಾದನೆಯಾಯಿತು. ನೌಕಾ ಬಲದಲ್ಲಿ ಇಂಗ್ಲಿಷರಿಗೆ ಮೊದಲನೆಯಸ್ಥಾನವೆಂದು ಇತರರು ಒಪ್ಪಿಕೊಂಡಹಾಗೂ ಆಯಿತು.

**ಲೂಯಿಯ ಅವನತಿ**

ಭಾರಿ ನಷ್ಟವಾದುದು ಫ್ರಾನ್ಸಿಗೆ. ಹೆಬ್ಬಾಸೆಹೆಮ್ಮೆಗಳಿಂದ ಮೊದಲುಮಾಡಿದ 14ನೆ ಲೂಯಿಗೆ ಆದ ಪರಾಭವವನ್ನು ಸುಲಭವಾಗಿ ಎಣಿಸಲಾಗುವುದಿಲ್ಲ. ಕ್ಷೇತ್ರ ನಷ್ಟ ಪ್ರಾಣನಷ್ಟಗಳಲ್ಲದೆ ಸಾಲದಹೊರೆ ಅಪಾರವಾಯಿತು. ಸ್ಪೈನಿಗಾಸೆಪಟ್ಟುದು ಬೀದಿ ಯಮಾರಿಯನ್ನು ಬರಮಾಡಿಕೊಂಡಂತಾಯಿತು. 1643ರಲ್ಲಿ ರಾಜನೆನಿಸಿ 1660ರಲ್ಲಿ ಅಧಿಕಾರವಹಿಸಿ 1685ರವರೆಗೂ ಎಷ್ಟು ಉನ್ನತಿ*ಗೇರಿದನೋ ಅಷ್ಟು ಅವನತಿ ಯನ್ನು ಅದರ ತರುವಾಯ ಅನುಭವಿಸಿ ಯುಟ್ರೆಕ್ಟ್ ಕರಾರಾದ ಒಂದೆರಡುವರ್ಷಗಳಲ್ಲಿ 1715ರಲ್ಲಿ ಲೂಯಿ ಕಾಲವಾದನು. ಎಪ್ಪತ್ತೆರಡುವರ್ಷಕಾಲದ ರಾಜ್ಯಭಾರನಡೆಸಿ ಇಂಗ್ಲಂಡಿ ನಲ್ಲಿಯೇ ಒಬ್ಬರತರುವಾಯ ಒಬ್ಬರಂತೆ ಏಳೆಂಟು ಪ್ರಭುಗಳೊಡನೆ ವ್ಯವಹರಿಸಿದ್ದನು. ಹದಿನೇಳನೇ ಶತಮಾನದ ಉತ್ತರಾರ್ಧವು ಯೂರೋಪಿನಲ್ಲಿ ಆತನ ತೇಜಸ್ಸಿನಿಂದಲೇ ತುಂಬಿತ್ತು. ಆತನು ಇಂಗ್ಲಂಡನ್ನು ವಶಪಡಿಸಿಕೊಳ್ಳಲು ನಡೆಸಿದ ಯತ್ನಗಳನ್ನೂ ಯುದ್ಧಗಳನ್ನೂ ಒಟ್ಟಾಗಿಯೇ ಕಾಣಬೇಕು.

---

*ಪ್ರಸಿದ್ಧವಾದ ವರ್ಸೇಲ್ಸ್ (Versailles) ಅರಮನೆಯನ್ನು ಲೂಯಿಯೇ ಕಟ್ಟಿಸಿದುದು.

## ಆರ್ನ್ ರಾಣಿ (1702—1714)

ಜನನ 1665 ; ಡೆನ್ಮಾರ್ಕಿನ ಜಾರ್ಜ್ ಕುಮಾರನೊಡನೆ ಮದುವೆ.

### ಸಮಕಾಲಿಕಪ್ರಭುಗಳು

| ಫ್ರಾನ್ಸ್ | ಸಾಮ್ರಾಜ್ಯ | ಸ್ಪೈನ್ |
|---|---|---|
| 14ನೆ ಲೂಯಿ (1643—1715) | ಲಿಯೋಪೋಲ್ಡ್ (1658—1705) | |
| | 1ನೆ ಜೋಸೆಫ್ (1705—1711) | 5ನೆ ಫಿಲಿಪ್ (1700—1746) |
| | 6ನೆ ಚಾರ್ಲ್ಸ್ (1711—1740) | |

ಎರಡನೆ ಜೇಮ್ಸನ ಎರಡನೆ ಮಗಳಾದ ಆರ್ನ್ 1702ರಲ್ಲಿ ಮೂವತ್ತೇಳುವರ್ಷ ವಯಸ್ಸಿನವಳಾಗಿದ್ದಳು. **ಡೆನ್ಮಾರ್ಕಿನ ರಾಜಪುತ್ರ ಜಾರ್ಜ್** (Prince George of Denmark) ಎಂಬಾತನನ್ನು ಮದುವೆಯಾಗಿದ್ದಳು. ಚಾತುರ್ಯವಾಗಲಿ ವಿಶೇಷವಾದ ಬುದ್ಧಿಯಾಗಲಿ ಆಕೆಯಲ್ಲಿರಲಿಲ್ಲ. ಒಳ್ಳೆತನವಿತ್ತು. ಜನಸಾಮಾನ್ಯರು ಆಕೆಯನ್ನು ಮೆಚ್ಚಿಕೊಂಡಿದ್ದರು. ಸ್ಟೂಯರ್ಟ್‌ವಂಶಕ್ಕೆ ಹಿಡಿದಿದ್ದ ಹಟವು ಆಕೆಯಲ್ಲಿ ತಕ್ಕಮಟ್ಟಿಗಿತ್ತು. ಹೈಚರ್ಚ್ ಎಂಬ ಮತದಲ್ಲಿ ಆಕೆಗೆ ಶ್ರದ್ಧೆಹೆಚ್ಚು; ಆದ್ದರಿಂದ ಟೋರಿ ಪಕ್ಷದವರಲ್ಲಿ ವಿಶ್ವಾಸ. ಆ ಮತದ ವಿಶ್ವಾಸದಿಂದಲೇ ಆಕೆ ತಂದೆಯನ್ನು ಬಿಟ್ಟೋಡಿದ್ದಳು. ಆದರೆ ಆಕೆಯ ಸ್ವಂತಜೀವನದಲ್ಲಿ ಸಂತೋಷವಿರಲಿಲ್ಲ. ಹುಟ್ಟಿದ 19 ಮಕ್ಕಳು ಅಲ್ಪಾಯುಗಳಾಗಿಯೇ ಸತ್ತವು.

**ಸ್ವಭಾವ**

ಚಿಕ್ಕಂದಿನಿಂದಲೂ ಆಕೆಗೆ **ಸೇರಾ ಜೆನ್ನಿಂಗ್ಸ್** (Sarah Jennings) ಎಂಬಾಕೆಯು ಗೆಳತಿ. **ಜಾನ್ ಚರ್ಚಿಲ್** (John Churchill) ಎಂಬ ದಳಪತಿಯನ್ನು ಆ ಸೇರಾ ಮದುವೆಯಾದಳು. ಆ ಗಂಡಹೆಂಡಿರು ಆನಳಿಗೆ ಆಪ್ತರಾಗಿದ್ದರು. ಸೇರಾ ಬಲು ಗಟ್ಟಿಗಳು; ಯಾರೊಡನೆಯಾದರೂ ಜಗಳಕ್ಕೆ ಹೆದರದವಳು. ಆಕೆಯ ಪ್ರಭಾವದಿಂದ ಜಾನ್ ಚರ್ಚಿಲ್ ದೊಡ್ಡ ಉದ್ಯೋಗಕ್ಕೇರಿ ಸ್ವಂತ ಸಾಮರ್ಥ್ಯದಿಂದ ಪ್ರಸಿದ್ಧಚಮೂಪತಿಯಾದನು. ವಿಲಿಯಂದೊರೆಗೆ ಆತನ ಯುದ್ಧಚಾತುರ್ಯವು ತಿಳಿದಿತ್ತು. 1702ರಲ್ಲಿ ವಿಲಿಯಂ ತೀರಿಕೊಂಡಾಗ ಚರ್ಚಿಲ್ಲನೇ ಮುಖ್ಯದಳಪತಿಯಾಗಿ ಯುದ್ಧನಡೆಸಿದನು. ಆತನು

**ಗೆಳತಿ**

ಸಂಪಾದಿಸಿದ ಜಯಕ್ಕಾಗಿ **ಮಾರ್ಲ್‌ಬರೊ ಶ್ರೀಮಂತ**(Duke of Marlborough) ನೆಂಬಬಿರುದನ್ನು ಆನ್ ಕೊಟ್ಟಳು. ಅದ್ವಿತೀಯದಳಪತಿಯೂ ಸಮರ್ಥಮಂತ್ರಿಯೂ ಆದ ಆತನಿಗೆ ದ್ರವ್ಯಾಶೆಯೂ ಸ್ವಾರ್ಥವೂ ಬಕವೃತ್ತಿಯೂ ಯಥೇಷ್ಟವಾಗಿದ್ದುವು.

ಆನ್ ಪಟ್ಟಕ್ಕೆ ಬಂದಾಗ **ಟೋರಿ**ಗಳಿಗೇ **ಮಂತ್ರಿ** ಪದವಿಗಳಿದ್ದವು. **ಮಾರ್ಲ್‌ಬರೋ** ಅವರಿಗೆಲ್ಲ ನಾಯಕನಾಗಿ ಗ್ರಾಂಡ್‌ಅಲಯನ್ಸ್ ಪರವಾಗಿ ಯುದ್ಧಗಳನ್ನೊಂದುಕಡೆ ನಡೆಸುತ್ತ ಮತ್ತೊಂದುಕಡೆ ಆಡಳಿತವನ್ನು ನೋಡಿಕೊಳ್ಳುತ್ತ ಇದ್ದನು.

**ಮಂತ್ರಿಗಳು**

ಆತನಿಗೆ ಸಹಾಯಕನಾಗಿ **ಗೋಡೋಲ್ಫಿನ್** (Godolphin) ಎಂಬಾತನು ಮಂತ್ರಿಯಾಗಿ ಯುದ್ಧದ ವೆಚ್ಚಕ್ಕೆ ಬೇಕಾದ ಹಣವನ್ನೊದಗಿಸುತ್ತಲಿದ್ದನು. ಮಾರ್ಲ್‌ಬರೋ ಶ್ರೀಮಂತಿನಿ (Duchess of Marlborough)ಯಂತೂ ಅರಮನೆಯಲ್ಲಿ ತಾನೇತಾನಾಗಿ ರಾಣಿಯನ್ನು ತನ್ನ ವಶದಲ್ಲಿಟ್ಟುಕೊಂಡವಳಂತಿದ್ದಳು. 1702ರಿಂದ 1708ರವರೆಗೆ ಈರೀತಿಯಾಗಿಯೇ ಕಳೆಯಿತು. ಬ್ಲೆನ್ಹೆಂ, ರಾಮಿಲೀಸ್, ಊಡೆನಾರ್ಡ್ ಜಯಗಳು ಲಭಿಸಿದ್ದಲ್ಲದೆ ಜಿಬ್ರಾಲ್ಟರ್, ಮೈನಾರ್ಕಗಳು ಬಂದುಸೇರಿದವು. ವರ್ಷೇವರ್ಷೇ ಮಾರ್ಲ್‌ಬರೋ ಶ್ರೀಮಂತನ ಕೀರ್ತಿಪ್ರಾಬಲ್ಯಗಳು ಹೆಚ್ಚುತ್ತಿದ್ದವು. ಯುದ್ಧದಿಂದಲೇ ತನ್ನ ಮೇಲ್ಮೆಯೆಂದು ತಿಳಿದ ಆತನು ಸರ್ವಶಕ್ತಿಯಿಂದಲೂ ಯುದ್ಧಮುಖನಾಗಿಯೇ ಇದ್ದನು. ಆಕಾಲದ ಒಳಾಡಳಿತದಲ್ಲಿ ಮುಖ್ಯವಾಗಿ ನಡೆದುದು ಒಂದೇ ಸಂಗತಿ. ಇಂಗ್ಲಂಡ್ + ವೇಲ್ಸ್ ಅಥವಾ ಬ್ರಿಟನ್ ಎಂಬ ರಾಜ್ಯವು **ಗ್ರೇಟ್‌ಬ್ರಿಟನ್** (Great Britain) ರಾಜ್ಯವಾಯಿತು.

ಸ್ಕಾಟ್ಲಂಡಿನಲ್ಲಿ ನಡೆದ ಕಿಲ್ಲೀಕ್ರಾಂಕೀ ಕದನವನ್ನೂ ಗ್ಲೆನ್ಕೊ ಕೊಲೆಯನ್ನೂ ಹಿಂದೆಯೇ ವಿವರಿಸಿಕೊಂಡೆವು. ಯುಕ್ತಿಶಾಲಿಯಾದ ವಿಲಿಯಂ ಸಮಾಧಾನವಾದ ರೀತಿಯಲ್ಲಿಯೇ ವರ್ತಿಸುತ್ತಲಿದ್ದನು. ಸ್ಕಾಟ್ಲಂಡಿನಲ್ಲಿ ಉತ್ತರದವರು ಅಥವಾ ಮಲೆನಾಡಿನವರು ಅಸಭ್ಯರಾಗಿಯೇ ಇದ್ದರು. ದರೋಡೆಯಿಂದ ಜೀವಿಸುವುದೇ

**ಸ್ಕಾಟ್ಲಂಡಿನ ಸ್ಥಿತಿ**

ಅವರಿಗೆ ಅಭ್ಯಾಸ. ಬಯಲುನಾಡಿನಿಂದ ದನಗಳನ್ನು ಕದ್ದುಕೊಂಡುಹೋಗುವುದು ಸಾಧಾರಣ. ಆ ಹೈಲಂಡರ್ಸ್ (ಮಲೆನಾಡಿನವರು) ಒರಟುತನಕ್ಕೆ ಹೆಸರಾದವರು. ತೀರ ಉತ್ತರದಲ್ಲಿದ್ದವರು ಇನ್ನೂ ರೂಕ್ಷರಾಗಿಯೇ ಇದ್ದರು. ತಮ್ಮ ಕುಲನಾಯಕನೊಬ್ಬನೇ ಅವರಿಗೆ ಸ್ವಾಮಿ; ಮತ್ತಾರನ್ನೂ ಅವರು ಲಕ್ಷ್ಯಮಾಡುತ್ತಿರಲಿಲ್ಲ. ಬಯಲುನಾಡಿನಲ್ಲಾದರೋ ಉದ್ಯೋಗವ್ಯಾಪಾರಗಳು ಬಲು ಕಡಿಮೆ; ವ್ಯವಸಾಯ ತಕ್ಕಮಟ್ಟಿಗಿದ್ದರೂ ಒಟ್ಟಿನಲ್ಲಿ ದಾರಿದ್ರ್ಯವೇ. ಇಂತಹ ಜನರಲ್ಲಿ ಉಗ್ರವಾದ ಪ್ರೆಸ್ಬಿಟೇರಿಯನ್‌ಮತ ನೆಲೆಸಿತ್ತು; ಹಲಕೆಲವರುಮಾತ್ರ ಆಂಗ್ಲಿಕನ್‌ಸಂಪ್ರದಾಯಗಳಿಗೆ ಒಪ್ಪಿದ್ದರು, ಅವರಿಗೆ ಉಳಿವಬಾಳಿರಲಿಲ್ಲ.

1688ರತರುವಾಯ ಸ್ಕಾಟ್ಲೆಂಡಿನಲ್ಲಿ ನೆಮ್ಮದಿತೋರಲು ಮೊದಲಾಯಿತು. ಪ್ರೆಸ್ಬಿಟೇರಿಯನ್ ಮತವೇ 1689ರಲ್ಲಿ ಪ್ರತಿಷ್ಠೆಯಾಯಿತು; ಬಿಷಪ್ಪರಿರಬೇಕೆನ್ನುತ್ತಿದ್ದ ಪಂಥದವರಿಗೆ 1712ರಲ್ಲಿ ಮತಸ್ವಾತಂತ್ರ್ಯ ದೊರಕಿತು. ವ್ಯಾಪಾರೋದ್ಯೋಗಗಳಲ್ಲಿಯೂ ಮೇಲ್ಮೆಪಡೆಯಲು ಸ್ಕಾಟರು ತೊಡಗಿದರು. ವಿಲಿಯಂದೊರೆಯ ಕಾಲದಲ್ಲಿ ಸ್ಕಾಟ್ಲೆಂಡಿನ ವರ್ತಕರು ಕೆಲವರು ಒಟ್ಟುಗೂಡಿ ಇಂಗ್ಲಿಷವರ್ತಕರಂತೆಯೇ ಪ್ರಯತ್ನಶೀಲರಾಗಿ ಅಮೆರಿಕದಲ್ಲಿ **ಡೇರಿಯನ್**(Darien)ಎಂಬಲ್ಲಿ ವ್ಯಾಪಾರನಡೆಸಲು **ಕಂಪೆನಿ**ಕಟ್ಟಿದರು. ಅದಕ್ಕೆ ತಕ್ಕ ಸಹಾಯುವನ್ನೂ ಪ್ರೋತ್ಸಾಹವನ್ನೂ ಇಂಗ್ಲಿಷರು ಕೊಡದಾದರು. ಸ್ಕಾಟ್ಲೆಂಡಿನವರಿಗೆ ಅಸಮಾಧಾನವಾಯಿತು.

**ಮನಸ್ತಾಪ**

ನ್ಯಾವಿಗೇಷನ್ ಆಕ್ಟ್ ಎಂಬುದು ಸ್ಕಾಟ್ಲೆಂಡಿಗೂ ಅನ್ವಯಿಸಿತ್ತು; ಸ್ಕಾಟ್‌ಜನರು ವಾಹಕವ್ಯಾಪಾರದಿಂದ ಬಹಿಷ್ಕೃತರಾಗಿದ್ದವರು. ಅಲ್ಲದೆ ಇಂಗ್ಲಿಷ್‌ಜನರು ಸ್ಕಾಟರನ್ನು ಅಲ್ಲಗಳೆಯುತ್ತಿದ್ದರು. ಹೀಗಿದ್ದುದರಿಂದ ಸ್ಕಾಟರಿಗೆ ತಾವೇ ಬೇರೆಯಾಗಬೇಕೆಂಬ ಯೋಚನೆ ಹುಟ್ಟಿಬೆಳೆಯಿತು. ಇಂಗ್ಲಂಡಿನಲ್ಲಿ ಸೆಟ್ಲ್‌ಮೆಂಟ್ ಆಕ್ಟ್ ನಡೆದು ಮುಂದಿನದೊರೆ ಯಾರೆಂದು ನಿಷ್ಕರ್ಷೆಯಾದಾಗ ಎಡಿನ್ಬರೋ ಪಾರ್ಲಿಮೆಂಟಿನಲ್ಲಿ ತಾವು ಪ್ರತ್ಯೇಕರಾಗಿರಬೇಕೆಂಬ ವಾದವು ಬಲವಾಯಿತು. ಇಂಗ್ಲಂಡಿನದೊರೆ ತಮಗೆ ಬೇಕಿಲ್ಲವೆಂದು ಸ್ಕಾಟರು ವಾದಿಸಲಾರಂಭಿಸಿದರು. ಆಗ ಇಂಗ್ಲಂಡಿನ ಜನಮುಖ್ಯರು ಚಿಂತೆಗೊಳಗಾಗಿ ಹೇಗಾದರೂ ಸ್ಕಾಟ್ಲೆಂಡ್ ಇಂಗ್ಲಂಡ್‌ಗಳನ್ನು ಒಟ್ಟುಗೂಡಿಸಬೇಕೆಂದು ಯತ್ನವನ್ನು ಕೈಕೊಂಡರು.

**ಐಕ್ಯತೆಯ ಶಾಸನ**

ಎರಡು ರಾಜ್ಯಗಳು ಮತ್ತೆ ಬೇರೆಯಾದರೆ ಪರಸ್ಪರವೈರವು ಪುನಃ ಸಿದ್ಧವಾಗುವುದೆಂದು ತೋರಿತು. ವಿವೇಕಶಾಲಿಗಳಾದವರು ಎರಡುಕಡೆಯಲ್ಲಿಯೂ ಸಂಧಾನನಡೆಸಿ 1707ರಲ್ಲಿ **ಆಕ್ಟ್ ಆಫ್ ಯೂನಿಯನ್** (Act of Union) ಎಂಬ ಶಾಸನವನ್ನು ರಚಿಸಿದರು. ಅದರಂತೆ ಗ್ರೇಟ್‌ಬ್ರಿಟನ್ ಎಂಬುದು ಒಂದಾಯಿತು; ಲಂಡನ್ನಿನ ಪಾರ್ಲಿಮೆಂಟಿನಲ್ಲಿ ಸ್ಕಾಟ್ಲೆಂಡೂ ಸೇರಿತು. ಆ ಶಾಸನದ ಮುಖ್ಯಾಂಶಗಳು—

(1) ಸ್ಕಾಟ್ಲೆಂಡಿನಿಂದ ಕಾಮನ್ಸ್‌ಸಭೆಗೆ 45ಮಂದಿ ಸಾಮಾನ್ಯಪ್ರತಿನಿಧಿಗಳೂ ಶ್ರೀಮಂತಸಭೆಗೆ 16ಮಂದಿ ಶ್ರೀಮಂತಪ್ರತಿನಿಧಿಗಳೂ ಬಂದು ಸೇರತಕ್ಕದ್ದು.

(2) ಸ್ಕಾಟ್ಲೆಂಡಿನಲ್ಲಿ ಪ್ರೆಸ್ಬಿಟೇರಿಯನ್ ಮತವೇ ಸುಸ್ಥಾಪಿತವಾಗಿರತಕ್ಕದ್ದು.

(3) ನ್ಯಾಯಪದ್ಧತಿಗಳೂ ನ್ಯಾಯಶಾಸ್ತ್ರಸಂಪ್ರದಾಯಗಳೂ ಸ್ಕಾಟ್ಲೆಂಡಿನಲ್ಲಿ ಪ್ರತ್ಯೇಕವಾಗಿರತಕ್ಕದ್ದು.

(4) ಇಂಗ್ಲಂಡಿಗೂ ಸ್ಕಾಟ್ಲೆಂಡಿಗೂ ವ್ಯಾಪಾರವು ನಿರಾತಂಕವಾಗಿ ನಡೆಯತಕ್ಕದ್ದು.

ಈರೀತಿಯಲ್ಲಿ ಸ್ಕಾಟ್‌ಜನರಿಗೆ ಇಷ್ಟವಾದ ಮತಕ್ಕೂ ನ್ಯಾಯಪದ್ಧತಿಗೂ ಲೋಪ ಬಾರದಂತೆ ನಿಶ್ಚಯವಾಗಿ ಏಕರಾಜ್ಯವು ಸಿದ್ಧವಾಯಿತು.

ಅಖಂಡವಾಗಿರುವ ಇಂಗ್ಲಂಡ್ ಮತ್ತು ಸ್ಕಾಟ್ಲಂಡ್ ಒಂದು ಆಡಳಿತಕ್ಕೊಗ್ಗಿ ಒಂದಾಗಲು ಸಾವಿರಾರುವರ್ಷ ಕಳೆಯಬೇಕಾಯಿತು. 1603ರಲ್ಲಿ ರಾಜನೊಬ್ಬನೇ ಆದರೂ ರಾಜ್ಯಗಳು ಬೇರೆಬೇರೆಯಾಗಿಯೇ 1707ರವರೆಗೂ ಇದ್ದವು.

ಮಾರ್ಲ್‌ಬರೋ ಮತ್ತು ಗೊಡೋಲ್ಫಿನ್‌ಮಂತ್ರಿಗಳಕಾಲದಲ್ಲಿಯೇ ಸ್ಕಾಟ್ಲಂಡ್ ಇಂಗ್ಲಂಡ್‌ಗಳ ಏಕೀಕರಣ ನಡೆಯಿತು. ಒಳಾಡಳಿತದಲ್ಲಿ ಇದೊಂದೇ ಮುಖ್ಯ ಸಂಗತಿ. 1702ರಿಂದಮೊದಲಾದ ಯುದ್ಧವನ್ನು ಯಶಸ್ವಿಯಾಗಿ ನಡೆಸುವುದೇ ಮುಖ್ಯ ಕೆಲಸವಾಗಿತ್ತು. ಆ ಯುದ್ಧವನ್ನು ನಡೆಸುವುದರಲ್ಲಿ ವ್ಹಿಗ್‌ಪಕ್ಷದವರಿಗೆ ಆತ್ಯುತ್ಸಾಹವಿತ್ತು. ಟೋರಿ ಪಕ್ಷದವರಿಗೆ ನಡೆದಿದ್ದಷ್ಟು ಸಾಕೆಸಿಸಿತ್ತು. 1708ರವೇಳೆಗೆ ಮಾರ್ಲ್‌ಬರೋ ಅನೇಕ ಜಯಗಳನ್ನು ಪಡೆದಿದ್ದನು; ಆದರೂ ಇನ್ನೂ ಯುದ್ಧವನ್ನು ನಡೆಸಬೇಕೆಂಬ ಆಸೆಯುಳ್ಳವನಾಗಿದ್ದನು. ಉಪಮಂತ್ರಿಗಳಾಗಿದ್ದ ಟೋರಿಪಕ್ಷದವರು ಅದಕ್ಕೆ ಅಡ್ಡಿಯಾದರು. ಆಗ ಮಾರ್ಲ್‌ಬರೋ ವ್ಹಿಗ್ ಪಕ್ಷದವರನ್ನೇ ಸಹಾಯಕಮಂತ್ರಿಗಳನ್ನಾಗಿ ಗೊತ್ತುಮಾಡಿಕೊಂಡನು. ಮುಖ್ಯ ಮಂತ್ರಿಗಳು ಹೆಸರಿಗೆ ಟೋರಿಗಳಾದರೂ ಯುದ್ಧೋತ್ಸಾಹದಲ್ಲಿ ವ್ಹಿಗ್ಗರನ್ನು ಮೀರಿಸಿದರು. ಹೀಗಾಗಿ 1708ರಿಂದ ಮಂತ್ರಿಮಂಡಲವು ವ್ಹಿಗ್ಗರದೇ ಆಯಿತು. ಯುದ್ಧವನ್ನು ನಿಲ್ಲಿಸಬೇಕೆಂದಿದ್ದ ಟೋರಿಗಳಿಗೆ ಅಧಿಕಾರವಿಲ್ಲದಾಯಿತು.

**ಟೋರಿಮಂತ್ರಿಗಳ ವ್ಹಿಗ್ ಚರ್ಯೆ**

ವ್ಹಿಗ್ ಮತ್ತು ಟೋರಿ ಕಕ್ಷಿಪ್ರತಿಕಕ್ಷಿಗಳ ವಾದವಿವಾದಗಳೂ ಪೋಟಾಪೋಟಿಗಳೂ ಆನ್ ರಾಣಿಯಕಾಲದಲ್ಲಿ ಪ್ರಬಲವಾಗಿ ನಡೆದವು. ರಾಷ್ಟ್ರಪಲ್ಲಟವನ್ನು ನಡೆಸಿದವರು ವ್ಹಿಗ್‌ಪಕ್ಷದವರಷ್ಟೆ. ಅವರಿಗೂ ಟೋರಿಗಳಿಗೂ ಮತವಿಷಯದಲ್ಲಿಯೂ ಆಡಳಿತವಿಷಯದಲ್ಲಿಯೂ ಅಭಿಪ್ರಾಯಭೇದಗಳಿದ್ದವು. ಡಿಸ್ಸೆಂಟರುಗಳನ್ನು ಕ್ಷಮಿಸುವ ಇಷ್ಟ ವ್ಹಿಗ್ಗರಿಗೆ; ದಂಡಿಸಿ ಹಿಂಸಿಸುವ ಇಷ್ಟ ಟೋರಿಗಳಿಗೆ. ಕ್ಯಾಥಲಿಕ್ಕರನ್ನು ದೂರದಲ್ಲಿಡಬೇಕೆಂದು ವ್ಹಿಗ್ಗರು, ಕ್ಷಮಿಸಿದರೂ ಕ್ಷಮಿಸಬಹುದೆಂದು ಟೋರಿಗಳು. ಆಂಗ್ಲಿಕನ್‌ಚರ್ಚ್‌ಪದ್ಧತಿಗಳನ್ನು ಬಲಾತ್ಕಾರಗೊಳಿಸುವ ಶ್ರದ್ಧೆಯಿಂದ ಕೂಡಿದ್ದ ಟೋರಿಗಳು ರಾಜಭಕ್ತಿಪ್ರಮಾಣಮಾತ್ರವನ್ನಲ್ಲದೆ ರಾಜಾಧಿಕಾರಶ್ರೇಷ್ಠತೆಗೆ ಒಪ್ಪಿಗೆಯನ್ನೂ ಬಲವಂತಗೊಳಿಸಲು ಸಿದ್ಧರು. ಸೆಟ್ಲ್‌ಮೆಂಟ್ ಕಾನೂನಿಗೊಪ್ಪಿಕೊಂಡಿದ್ದರೂ ಟೋರಿಗಳಲ್ಲಿ ಕೆಲವರಿಗೆ ಹಾನೊವರ್‌ಸಂಸ್ಥಾನಿಕನ ದೊರೆತನವನ್ನು ತಪ್ಪಿಸಿ ಸ್ಟೂಯರ್ಟ್‌ವಂಶವನ್ನೇ ಮುಂದಕ್ಕೂ ನಡೆಸುವ ಇಷ್ಟವಿತ್ತು. ಊಡೆನಾರ್ಡ್‌ಕದನವಾದಬಳಿಕ

**ಟೋರಿ> <ವ್ಹಿಗ್**

ಯುದ್ಧವನ್ನು ನಿಲ್ಲಿಸುವ ಅಭಿಲಾಷೆ ಟೋರಿಗಳಿಗೆ. ಲೂಯಿ ಸೋತುದು ಅವರಿಗೆ ಸಾಕೆನಿಸಿತು. ರೆವೊಲ್ಯೂಷನ್ ನಡೆಸಿದ್ದ ವ್ಹಿಗ್ಗರಿಗಾದರೋ ಲೂಯಿಯು ಸರ್ವನಾಶವಾಗಬೇಕೆನಿಸಿತ್ತು. ಸ್ಟ್ಯುಯರ್ಟ್‌ವಂಶಕ್ಕೆ ಯಾವ ಆಸ್ಪದವೂ ಇಲ್ಲದಿರಬೇಕಾಗಿತ್ತು. ಪಾರ್ಲಿಮೆಂಟಿನ ಅಧಿಕಾರವೇ ಶ್ರೇಷ್ಠವಾಗಿರಬೇಕಾಗಿತ್ತು. ಮತವಿಷಯದಲ್ಲಿ ಡಿಸ್ಸೆಂಟರುಗಳಿಗೆ ಸ್ವಾತಂತ್ರ್ಯವನ್ನು ಕೊಡಿಸುವ ಇಷ್ಟವಿತ್ತು.

ಅಭಿಪ್ರಾಯಭೇದಗಳು ಈ ರೀತಿ. ಆದರೆ ಅಧಿಕಾರಮೋಹದಿಂದ ಎಷ್ಟೋ ಅವಾಂತರ. ಅಧಿಕಾರಪಡೆದವರು ತಮ್ಮ ಪದವಿಗಳನ್ನುಳಿಸಿಕೊಳ್ಳಲು ಎಲ್ಲಪ್ರಯತ್ನಗಳನ್ನೂ ಮಾಡುವರು. ವಿರೋಧಪಕ್ಷದವರು ಸರ್ವೋಪಾಯಗಳನ್ನವಲಂಬಿಸಿ ಅಧಿಕಾರಪಕ್ಷವನ್ನು ಪಲ್ಟಿಹೊಡೆಸಲು ಯತ್ನಮಾಡುವರು. ಟೋರಿಗಳಾಗಿ ಮೊದಲಿಟ್ಟ ಮಾರ್ಲ್‌ಬರೋ ಮತ್ತು ಗೊಡೋಲ್ಫಿನ್ ಕಡೆಗೆ ವ್ಹಿಗ್ಗರಾಗಿಹೋದರು. ಅಲ್ಲಲ್ಲಿ ಡಿಸ್ಸೆಂಟರುಗಳಿಗೆ ಉದ್ಯೋಗಕೊಡಿಸಿದರು. ಲೂಯಿ ಎಷ್ಟು ಸೋತರೂ ಯುದ್ಧವನ್ನು ಬಿಡದಾದರು. ಮುದ್ರಣಸ್ವಾತಂತ್ರ್ಯವಿದ್ದಕಾಲ; ಆದ್ದರಿಂದ ಟೀಕಾಟೂಕೆಗಳು ಪುಸ್ತಕರೂಪದಲ್ಲಿ ಪ್ರಾರಂಭವಾಗಿ ಒಂದರಮೇಲೊಂದು ರಂಜಿಸಿದವು. ಟೋರಿಪಕ್ಷದಪರವಾಗಿ **ಜಾನೆಥನ್ ಸ್ವಿಫ್ಟ್** (Jonathan Swift) ಎಂಬ ವಿಖ್ಯಾತಗದ್ಯಲೇಖಕನು ವ್ಹಿಗ್ಗರಚರ್ಯೆಯನ್ನು ವ್ಯಂಗ್ಯವಾಗಿ ವಿಮರ್ಶಿಸಿ ಬರೆದನು. "ಮಿತ್ರಮಂಡಲಿಯ ವರ್ತನೆ" (Conduct of the Allies) ಎಂಬ ಆತನ ಪುಸ್ತಕದಿಂದ ಎಲ್ಲರಿಗೂ ವ್ಹಿಗ್ ಮಂತ್ರಿಗಳ ದುರಾಸೆಯೂ ಅನ್ಯಾಯವೂ ತಿಳಿಯಿತು. ಮಂತ್ರಿಗಳಲ್ಲಿ ಜನರವಿಶ್ವಾಸ ಕೆಡುತ್ತಬಂತು. ಆಗ ಮಾರ್ಲ್‌ಬರೋ ತನಗೆ ಜೀವಾವಧಿ ಸಮಸ್ತಸೈನ್ಯಾಧಿಪತ್ಯವಿರಬೇಕೆಂಬ ಅತ್ಯಾಸೆಯನ್ನುತೋರಿಸಿದನು. ಇನ್ನೊಬ್ಬ ಕ್ರಾಮ್ವೆಲ್ ಸಿದ್ಧನಾಗುವನೆಂದು ವಿರೋಧಿಗಳಾಡಿಕೊಂಡರು.

**ಅತ್ಯಾಚಾರ**

ಸಮಯಹೊಂಚುತ್ತಿದ್ದ ಟೋರಿಪ್ರಮುಖರು ಉಪಾಯವಾಗಿ ಮಾರ್ಲ್‌ಬರೋ ಪ್ರಾಬಲ್ಯವನ್ನು ಹಾಳುಮಾಡಲು ಪಿತೂರಿಗಾರಂಭಿಸಿದರು. ಅನ್‌ರಾಣಿಗೆ ಟೋರಿ ಅಭಿಪ್ರಾಯಗಳಲ್ಲಿಯೇ ವಿಶ್ವಾಸ. ಆಕೆಗೂ ಮಾರ್ಲ್‌ಬರೋಶ್ರೀಮಂತಿನಿಗೂ ಜಗಳ ತಂದಿಡಲು ಟೋರಿಗಳು ಸಂಧಾನನಡೆಸಿದರು. ಅರಮನೆಯಲ್ಲಿ **ಮಿಸೆಸ್ ಮಾಷಂ** (Mrs. Masham) ಎಂಬ ಟೋರಿಪಕ್ಷದಾಕೆಯು ಸೇರಿಕೊಂಡು ರಾಣಿಯ ಆಪ್ತಸ್ನೇಹಿತೆಯಾದಳು. ಆ ಶ್ರೀಮಂತಿನಿಗೂ ರಾಣಿಗೂ ಜಗಳಬಿತ್ತು; ಗಂಡುಬೀರಿಯಂತಹ ಶ್ರೀಮಂತಿನಿ ಜೋರಾಗಿಯೇ ಜಗಳವಾಡಿದಳು. ರಾಣಿಯು ಅವಳನ್ನು ಅರಮನೆಯಿಂದ ಕಳುಹಿಸಿಬಿಟ್ಟಳು. ಹೆಂಡತಿಗಾದಅವಮಾನ ಗಂಡನನ್ನೂ ಸುತ್ತಿಕೊಂಡಿತು. ಅದೇ

**ಹೊಸಗಳತಿ**

ವೇಳೆಯಲ್ಲಿ ಗೊಡೋಲ್ಫಿನ್‌ಮಂತ್ರಿಯು ದುಡುಕಿ ಗುಬ್ಬಿಮೇಲೆ ಬ್ರಹ್ಮಾಸ್ತ್ರವೆಸೆಯುವ ಕೆಲಸಮಾಡಿಬಿಟ್ಟನು. **ಸ್ಯಾಚಿವೆರೆಲ್** (Sacheverell) ಎಂಬಹೆಸರಿನ ಪುರೋಹಿತನೊಬ್ಬನು ಲಂಡನ್ನಿನಲ್ಲಿ ಉಪನ್ಯಾಸಕೊಡಲು ಪ್ರಯತ್ನಿಸುತ್ತ ವ್ಹಿಗ್ಗರಅಧಿಕಾರದಲ್ಲಿ ಹೈಚರ್ಚ್‌ಮತಕ್ಕೆ ವಿಪತ್ತೆಂಬ ಹುಚ್ಚುಕೂಗನ್ನುಕೂಗಿ ಮಂತ್ರಿಯನ್ನು ಬಯ್ದನು. ಗೊಡೋಲ್ಫಿನ್ ಸುಮ್ಮನಿರದೆ ಆ ಪುರೋಹಿತನನ್ನು ವಿಚಾರಣೆಗೆನಿಲ್ಲಿಸಿದನು.

**ಪಾದ್ರಿಯ ವಿಚಾರಣೆ**

ಮೂರ್ಖರಗುಂಪಿಗೆಸೇರಿದ್ದು ಅನಾಮಧೇಯನಾಗಿರಬೇಕಾಗಿದ್ದ ಆ ಪುರೋಹಿತನು ಇದ್ದಕ್ಕಿದ್ದಹಾಗೆಯೇ ಪ್ರಸಿದ್ಧಪುರುಷನಾಗಿಹೋದನು. ಜನರು ಗುಂಪುಸೇರಿ ಆತನನ್ನು ಪರಮಸಾಧುವೆಂದು ಕೊಂಡಾಡಿದರು. ವಿಚಾರಣೆಯೇನೋ ನಡೆಯಿತು; ಮೇರೆಮೀರಿ ಮಾತನಾಡಿದನೆಂದು ನಿಶ್ಚಯಿಸಿ ಜಡ್ಜಿಗಳು ಮೂರುವರ್ಷಕಾಲ ಆತನು ಉಪನ್ಯಾಸ ಕೊಡದಿರಬೇಕೆಂದು ವಿಧಿಸಿದರು. ಅತಿಸಾಮಾನ್ಯವಾದ ಸಂಗತಿಯಾದರೂ ಈ ಪುರೋಹಿತನ ವಿಚಾರಣೆಯುಸಮಯದಲ್ಲಿ ಮಂತ್ರಿಗಳು ಕೆಟ್ಟವರೆನಿಸಿದರು. ಗೊಡೋಲ್ಫಿನ್ ಮಾರ್ಲ್‌ಬರೋ ಇಬ್ಬರಿಗೂ ಡಿಸ್ಮಿಸ್ ಆಗಿಹೋಯಿತು. ಟೋರಿ ನಾಯಕರಿಗೆ ಆಸ್ಪದದೊರಕಿತು.

1710ರಲ್ಲಿ ಟೋರಿಪಕ್ಷದವರು ಮಂತ್ರಿಪದವಿಗಳನ್ನು ಪಡೆದರು. **ಹಾರ್ಲಿ** (Harley) ಎಂಬಾತನೂ **ಸೆಂಟ್ ಜಾನ್** (St. John) ಎಂಬಾತನೂ ಮಂತ್ರಿಗಳಾಗಿ

**ಹೊಸ ಮಂತ್ರಿಗಳು**

ಸ್ವಲ್ಪಕಾಲದಲ್ಲಿಯೇ ಶ್ರೀಮಂತಪದವಿಗಳನ್ನು ಪಡೆದರು. ಅಧಿಕಾರ ವಹಿಸಿದಕೂಡಲೆ ಯುದ್ಧವನ್ನು ನಿಲ್ಲಿಸಿ ಒಪ್ಪಂದವನ್ನುಮಾಡಿಕೊಳ್ಳುವುದೇ ಮುಖ್ಯಕೆಲಸವಾಯಿತು. ಲೂಯಿಯೊಡನೆ ಗೋಪ್ಯವಾಗಿ ಸಂಧಾನಕ್ಕೆಮೊದಲಿಟ್ಟು ತರುವಾಯ ಪ್ರಕಟವಾಗಿಯೇ ಷರತ್ತುಗಳನ್ನು ಚರ್ಚಿಸಿ 1712ರಲ್ಲಿ ಯುಟ್ರೆಕ್ಟಿನಲ್ಲಿ ಸಭೆಸೇರಿಸಿ 1713ರಲ್ಲಿ ಒಪ್ಪಂದಗಳನ್ನು ಮುಗಿಸಿದರು. ಟೋರಿಗಳುನಡೆಸಿದ ಷರತ್ತುಗಳನ್ನು ವ್ಹಿಗ್‌ಪಕ್ಷದವರು ಖಂಡಿಸಿದರು. ಆದರೆ ಜನರಿಗೆ ಯುದ್ಧ ಸಾಕಾಗಿತ್ತು. ಶಾಂತಿಯಒಪ್ಪಂದವನ್ನು ಎಲ್ಲರೂ ತಕ್ಷಣವೋಮರುಕ್ಷಣವೋ ಸ್ವೀಕರಿಸಿದರು. ಆದರೆ ಟೋರಿಗಳಿಗೆ ಯುದ್ಧಮುಕ್ತಾಯಮಾತ್ರವೇ ಉದ್ದೇಶವಾಗಿರಲಿಲ್ಲ. ಅನ್ ತರುವಾಯ ದೊರೆಯಾಗತಕ್ಕ ಹ್ಯಾನೋವರಿನ ಜಾರ್ಜನು ವ್ಹಿಗ್ಗರಪಕ್ಷಪಾತಿಯೆಂದು ಎಲ್ಲರಿಗೂ ತಿಳಿದಿತ್ತು. ಆತನ ದೊರೆತನದಲ್ಲಿ ಟೋರಿಗಳಿಗೆ ಅಧಿಕಾರತಪ್ಪುವಅಂಶವು ಸ್ಪಷ್ಟವಾಗಿತ್ತು. ಆದ್ದರಿಂದ ಪಟ್ಟದವ್ಯವಸ್ಥೆಯನ್ನು ಬದಲಾಯಿಸಿಕೊಳ್ಳುವಪ್ರಯತ್ನ ನಡೆಯಬೇಕೆನ್ನಿಸಿತ್ತು.

ಟೋರಿಗಳಲ್ಲಿ ಒಂದುಪಂಗಡದವರಿಗೆ **ಜಾಕೊಬೈಟ** (Jacobites) ರೆಂದು ಹೆಸರು. ಅವರು ರಾಜಾಧಿಕಾರ ದೈವದತ್ತವಾದುದೆಂದೂ ನಂಬಿದ್ದುದಲ್ಲದೆ 2ನೆ

ಜೇಮ್ಸ್ನನ ಭಕ್ತರಾಗಿದ್ದರು. ಹೇಗಾದರೂಮಾಡಿ 2ನೆ ಜೇಮ್ಸ್ನನ ಮಗನಿಗೆ ಪಟ್ಟವನ್ನು ಕೊಡಿಸಬೇಕೆಂಬ ಉದ್ದೇಶ ಅವರದು. ಪ್ರಕಟವಾಗಿ ತಮ್ಮಾಸೆಯನ್ನು ಹೇಳಿಕೊಳ್ಳಲಾರದೆ ಗೋಪ್ಯಸಂಧಾನಗಳನ್ನು ನಡೆಸುತ್ತ ಅವರು ಸಮಯವನ್ನು ಕಾದಿದ್ದರು. ಟೋರಿಗಳಲ್ಲಿ ಬಹುಭಾಗದವರು ಹೈಚರ್ಚಿನವರು; ರೋಮನ್‌ಕ್ಯಾಥಲಿಕ್ ದೊರೆಯನ್ನೊಪ್ಪಲಾರದವರು. ರಾಜಾಧಿಕಾರದ ಸರ್ವಶ್ರೇಷ್ಠತೆಯನ್ನು ಸ್ಥಾಪಿಸುವ ಅಭಿಪ್ರಾಯವಿದ್ದರೂ ಅವರಿಗೆ ರೋಮನ್‌ಕ್ಯಾಥಲಿಕ್ ದೊರೆಯನ್ನು ಬರಮಾಡಿಕೊಂಡು ಪ್ರಾಟೆಸ್ಟೆಂಟ್ ಮತಕ್ಕೆ ವಿಪತ್ತನ್ನು ತಂದಿಟ್ಟುಕೊಳ್ಳಲು ಮನಸ್ಸಿಲ್ಲ.

**ಪಟ್ಟದ ಚಿಂತೆ**

ಟೋರಿನಾಯಕರು ಆನ್ ತರುವಾಯ ಜಾರ್ಜ್ ದೊರೆಯಾಗದಂತೆ ನೆರವೇರಿಸುವ ಯೋಚನೆಯನ್ನಿಟ್ಟುಕೊಂಡು ಮೊದಲು ಶಾಂತಿಸಂಧಾನವನ್ನು ಕೈಕೊಂಡು ಅದನ್ನು ಸಾಧಿಸಿದರು. ಮಾರ್ಲ್‌ಬರೋ ಶ್ರೀಮಂತನು ಅಧಿಕಾರವನ್ನು ಕಳೆದುಕೊಂಡುದಲ್ಲದೆ ಹಣವನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡ ಅಪವಾದಕ್ಕೆ ಗುರಿಯಾದನು. ಟೆಸ್ಟ್ ಆಕ್ಟ್ ಪ್ರಕಾರ ಪ್ರಮಾಣಮಾಡದೆಯೋ ಅಥವಾ ತತ್ಕಾಲಕ್ಕೆ ಮಾತ್ರ ಮಾಡಿಯೋ ಕೆಲವು ಡಿಸ್ಸೆಂಟರುಗಳು ಹುದ್ದೆಗಳಲ್ಲಿದ್ದರು. ಅವರು ಉದ್ಯೋಗಗಳನ್ನು ಕಳೆದುಕೊಳ್ಳಬೇಕಾಗಿ ಬಂತು. ಟೋರಿಪ್ರಮುಖ ಲಾರ್ಡ್ ಬಾಲಿಂಗ್‌ಬ್ರೋಕ್ (ಸೆಂಟ್ ಜಾನ್) ತಾತ್ಕಾಲಿಕಪ್ರಮಾಣಮಾಡುವವರನ್ನು ದಂಡಿಸಲು ಪಾರ್ಲಿಮೆಂಟಿನಲ್ಲಿ ಒಂದು ಕಾನೂನು (Occasional Conformity) ಮಾಡಿಸಿದನು. ಮತ್ತೊಂದುಕಾನೂನಿ(Schism Act)ನಿಂದ ಡಿಸ್ಸೆಂಟರುಗಳು ಎಲ್ಲಿಯೂ ಉಪಾಧ್ಯಾಯರಾಗದಂತೆ ನೆರವೇರಿಸಿದನು.

**ಡಿಸ್ಸೆಂಟರುಗಳಿಗೆ ಹಿಂಸೆ**

ಪಟ್ಟದಲ್ಲಿ ಟೋರಿಪಕ್ಷಪಾತಿಯಾದದೊರೆ ಇರಬೇಕೆಂದು ಬಾಲಿಂಗ್‌ಬ್ರೋಕ್ ಶ್ರೀಮಂತನ ಉದ್ದೇಶ. ಆನ್ ರಾಣಿಗೆ ತನ್ನ ಮಲತಮ್ಮನೇ ಮುಂದೆ ರಾಜನಾಗುವುದರಲ್ಲಿ ಇಷ್ಟವಿತ್ತು. ಆದರೆ ಆತನ ಮತವು ಅನಿಷ್ಟವಾಗಿತ್ತು. ಆ ರಾಜಕುಮಾರ ಜೇಮ್ಸ್ನನು ರೋಮನ್‌ಕ್ಯಾಥಲಿಕ್‌ಮತವನ್ನು ಬಿಟ್ಟಿದ್ದರೆ ಒಳ್ಳೆ ಅವಕಾಶ ಸಿದ್ಧವಾಗುತ್ತಿತ್ತು. ಆತನು ರೋಮನ್‌ಕ್ಯಾಥಲಿಕ್ ಮತವನ್ನು ಬಿಡಲಿಲ್ಲ. ಲಾರ್ಡ್ ಆಕ್ಸ್‌ಫರ್ಡ್ (ಹಾರ್ಲಿ) ಆತನೊಡನೆ ಗೋಪ್ಯವಾಗಿ ನಡೆಸಿದ ಸಂಧಾನಗಳು ಫಲಿಸಲಿಲ್ಲ. ಹೀಗಿರಲು ಬಾಲಿಂಗ್‌ಬ್ರೋಕ್ ಮತ್ತು ಆಕ್ಸ್‌ಫರ್ಡ್ ಇಬ್ಬರಿಗೂ ಮನಸ್ತಾಪ ಬೆಳೆಯಿತು. ಸಮರ್ಥನಾಗಿದ್ದ ಬಾಲಿಂಗ್‌ಬ್ರೋಕನು ತನ್ನ ಪದವಿಯನ್ನು ಭದ್ರಗೊಳಿಸಿಕೊಂಡು ಆಕ್ಸ್‌ಫರ್ಡನಿಗೆ ಮಂತ್ರಿತನ ತಪ್ಪಿಸಿದನು. ಮುಂದೇನೇನು ನಡೆಸಬೇಕೆಂದಿದ್ದನೋ

**ಟೋರಿಗಳ ಆಶಾಭಂಗ**

ಆ ಬಾಲಿಂಗ್‌ಬ್ರೋಕನು ! ಎಲ್ಲ ನಾಶವಾಗಿಹೋಯಿತು. ಏಕೆಂದರೆ ಆನ್ ರಾಣಿಯೇ ಬೇಗ ತೀರಿಕೊಂಡಳು. ಮಾಡಬೇಕಾದುದನ್ನು ಆಕೆಯ ಜೀವಿತಕಾಲದಲ್ಲಿಯೇ ಸಾಧಿಸಬೇಕಾಗಿತ್ತು. ಬಾಲಿಂಗ್‌ಬ್ರೋಕನೂ ಟೋರಿಗಳೂ ರಾಣಿಯ ಸಾವಿನಿಂದ ಹತಾಶರಾದರು.

**ವ್ಹಿಗ್ಗರ ಪ್ರಾಪ್ತಿ**

ಅತ್ತ ಮಾರ್ಲ್‌ಬರೊ ಮುಂತಾದ ವ್ಹಿಗ್ಗರು ಬ್ರಸ್ಸೆಲ್ಸ್ ಮುಂತಾದ ಪರಸ್ಥಲಗಳಲ್ಲಿದ್ದು ತಮ್ಮ ಪಕ್ಷದ ಕೆಲಸವನ್ನು ನಡೆಸುತ್ತಿದ್ದರು. ಆನ್ ರಾಣಿ ಸತ್ತಸುದ್ದಿ ಕೇಳಿ ಅವರೆಲ್ಲರೂ ಹಿಂತಿರುಗಿದರು. ಹ್ಯಾನೋವರ್ ಸಂಸ್ಥಾನಿಕ ಜಾರ್ಜನೂ ಬಂದುಬಿಟ್ಟನು. ಸ್ಟೂಯರ್ಟ್ ವಂಶಸ್ಥನಿಗೆ ಅವಕಾಶವಿಲ್ಲದಾಯಿತು.

ಇಲ್ಲಿಗೆ ಸ್ಟೂಯರ್ಟ್‌ವಂಶದ ದೊರೆಗಳ ಆಳಿಕೆಯು ಮುಗಿಯಿತು.

# ಸ್ಟ್ಯುಯರ್ಟ್ ದೊರೆಗಳ ಕಾಲಮಹಿಮೆ

ಸ್ಟ್ಯುಯರ್ಟ್ ದೊರೆಗಳ ಕಾಲವೆಂಬುದು 1603 ರಿಂದ 1714 ರವರೆಗೆ. ಸ್ಥೂಲವಾಗಿ ಅದನ್ನು ನಾವು ಹದಿನೇಳನೆ ಶತಮಾನವೆಂದಿಟ್ಟುಕೊಳ್ಳಬಹುದು. ಆ ಕಾಲದಲ್ಲಿ ಇಂಗ್ಲಿಷರ ಚರಿತ್ರೆಯಲ್ಲಿ ಎದ್ದು ತೋರುವ ಸಂಗತಿಗಳಲ್ಲಿ ಮೊದಲು ಕಾಣುವುದು ಪ್ರಾಯಶಃ ರಾಜಾಧಿಕಾರದಕ್ಷಯ, ಅಥವಾ ಪಾರ್ಲಿಮೆಂಟ್ ಸಂಸ್ಥೆಯ ಪ್ರಾಬಲ್ಯ. ರಾಜನ ಅಧಿಕಾರ ತಗ್ಗಿತೇ ವಿನಾ ರಾಜತ್ವ ಲೋಪವಾಗಲಿಲ್ಲ. ರಾಷ್ಟ್ರಕ್ಕೆ ಭೂಷಣದಂತೆ ರಾಜನಿರಬೇಕು; ಪಾರ್ಲಿಮೆಂಟಿನವರು ಕೊಡಿಸಿದಷ್ಟು ವೇತನವನ್ನು ವೆಚ್ಚಮಾಡಿಕೊಂಡು ವೈಭವವನ್ನು ಕಾಣಿಸಿ ಜನರ ಭಕ್ತಿಗೆ ಪಾತ್ರನಾಗಿ ನಡೆದುಕೊಳ್ಳಬೇಕು; ಗೌರವಕ್ಕೆ ಮೂಲಪುರುಷನಾಗಿ ಸಮಸ್ತಜನರಿಗೂ ಮರ್ಯಾದೆಯ ಆದರ್ಶವನ್ನು ಬೀರುತ್ತಲಿರಬೇಕು. ಮತವಿಷಯಗಳಲ್ಲಿ ಸರ್ವಾಧಿಕಾರಿಯೆಂಬ ಬಿರುದನ್ನು ವಹಿಸಿದ ಕಾರಣದಿಂದ ನೀತಿವಂತನಾಗಿಯೂ ಧರ್ಮಿಷ್ಠನಾಗಿಯೂ ಬಾಳಬೇಕು. ಇದನ್ನು ಸಾಂಕುಶಪ್ರಭುತ್ವವೆಂದು ಸಾಮಾನ್ಯವಾಗಿ ಕರೆಯಬಹುದು. ರಾಜರಾಗಿದ್ದವರು ಹೀಗೇಕೆ ಅಧಿಕಾರವನ್ನು ಕಳೆದುಕೊಂಡರು? ಒಬ್ಬ ರಾಜನ ತಲೆಯನ್ನೇ ಹೊಡೆಸಿದರು! ಮತ್ತೊಬ್ಬ ರಾಜನು ತಾನೇ ಪರಾರಿಯಾದನು! ಇತರ ಐರೋಪ್ಯದೇಶವಾವುದರಲ್ಲಿಯೂ ನಡೆಯದಿದ್ದ ಸಂಗತಿಗಳು ಇಂಗ್ಲಂಡಿನಲ್ಲಿ ಮಾತ್ರ ನಡೆಯಲು ಮೂಲಕಾರಣವೇನು?

**ರಾಜಾಧಿಕಾರದ ಕ್ಷಯ**

ಸ್ಟ್ಯುಯರ್ಟ್ ವಂಶದವರು ಕಾಲಕ್ಕೆ ತಕ್ಕ ಉಪಾಯವನ್ನು ಅವಲಂಬಿಸದ ಹೆಡ್ಡರಾಗಿದ್ದುದೂ ಇಂಗ್ಲಂಡಿನ ಜನಸಮುದಾಯದಲ್ಲಿ ಜಾತಿಹೆಮ್ಮೆಯಿಲ್ಲದ ನೆಮ್ಮದಿವಂತರ ಗುಂಪು ವರ್ಧಿಸಿದ್ದುದೂ ಆ ಕಾಲದಲ್ಲಿ ಅನ್ಯರಾಜನ ಆಕ್ರಮಣದ ಭಯವಿಲ್ಲದಿದ್ದುದೂ ನಿಜ. ಅವು ಪ್ರಬಲ ಕಾರಣಗಳು ಹೌದು. ಆದರೆ ಆ ರಾಜರಲ್ಲಿ ವಿರೋಧವನ್ನು ಹೆಚ್ಚಾಗಿ ರೇಗಿಸಿದುದು ಮತನಿಷ್ಠೆ. ಹದಿನೇಳನೆ ಶತಮಾನದಲ್ಲಿ ಇಂಗ್ಲಿಷ್ ಜನರಿಗೆ ಮತನಿಷ್ಠೆಯು ದೃಢವಾಗಿದ್ದಿತು. ಟ್ಯೂಡರ್ ದೊರೆಗಳ ಕಾಲದಲ್ಲಿ ಮತಸಂಸ್ಕಾರವೆಂಬುದು ಅರ್ಧಂಬರ್ಧವಾಗಿ ನಡೆದು ಕಡೆಗೆ ಇಂಗ್ಲಿಷ್ ಚರ್ಚೆಂಬುದೇ ಬೇರೆಯಾಗಿ ನಿಂತಿತ್ತು. ಹದಿನಾರನೆ ಶತಮಾನದಲ್ಲಿ ಜನರ ಅಂತರಂಗವನ್ನು ಅರ್ಧಂಬರ್ಧವಾಗಿ ಹೊಕ್ಕ ಮತಸಂಸ್ಕಾರ ನಿಷ್ಠಾಭಕ್ತಿಗಳು ಹದಿನೇಳನೆ ಶತಮಾನದಲ್ಲಿ ಪೂರ್ತಿಯಾಗಿ ಭದ್ರತೆ ಪಡೆದವು. ರಾಜರದೊಂದು ಹಟವಾದರೆ ಜನರಲ್ಲಿ ಒಂದೊಂದು ಗುಂಪಿನವರದೂ ಬೇರೆ ಬೇರೆ ಹಟ. ಆ ಹಟಗಳೆಲ್ಲಕ್ಕೂ ಮೂಲ ಕ್ರೈಸ್ತಮತದ ಲಕ್ಷಣಗಳಲ್ಲೊಂದಾದ ಮತಾಂತರ ಅಸಹನ. ತಾನು ನಂಬಿದ ಮತವೊಂದೇ ಸತ್ಯವೆಂಬ ಹಟ ಆ ಮತದ ಪ್ರತಿಶಾಖೆಯಲ್ಲಿಯೂ ಅನಿವಾರ್ಯಲಕ್ಷಣ. ಅತಿಶುದ್ಧಿಗಾಗಿ ತಪಿಸಿದ

**ಮತನಿಷ್ಠೆ**

ಪ್ಯೂರಿಟನ್ನರ ಧೈರ್ಯಸ್ಥೈರ್ಯಗಳಿಗೆ ಅವರ ಮತನಿಷ್ಠೆಯೇ ಮೂಲಬಲವಾಗಿತ್ತು; ಆ ಬಲದೆದುರಿಗೆ ರಾಜರ ಹಟ ನಡೆಯದಾಯಿತು. ಪ್ಯೂರಿಟನ್ನರಿಗೆ ಅಧಿಕಾರ ಬಂದಾಗ ಅವರ ನಿಷ್ಠೆ ಇತರರಿಗೆ ವಿಪರೀತವಾಗಿ ತೋರಿ ಪರಿಣಾಮದಲ್ಲಿ ಆ ಪಂಗಡ ದವರಿಗೆ ಕೆಟ್ಟ ಹೆಸರು, ಅಧಿಕಾರಲೋಪಗಳು ಒದಗಿದವು. ಪ್ಯೂರಿಟನ್ನರ ವೈಪರೀತ್ಯ ದಿಂದಲೇ ಕಿರಿಯ ಚಾರ್ಲ್ಸ್‌ ಕಾಲದಲ್ಲಿ ಹೈಚರ್ಚ್‌ ಗುಂಪಿನವರ ವೈಪರೀತ್ಯ ತೋರಿತು. ರಾಜಭಕ್ತಿಯ ವೈಪರೀತ್ಯಕ್ಕೆ ಹಿಂದಿನ ರಾಜದ್ವೇಷದ ವೈಪರೀತ್ಯವೇ ಕಾರಣ. 2ನೆ ಚಾರ್ಲ್ಸ್‌ ಮತ್ತು 2ನೆ ಜೇಮ್ಸ್‌ ದೊರೆಗಳು ರೋಮನ್‌ ಕ್ಯಾಥಲಿಕ್ ಮತದಲ್ಲಿ ವಿಶ್ವಾಸ ವನ್ನು ತೋರದಿದ್ದರೆ ಅಥವಾ ಕಡೆಕಡೆಗೆ 2ನೆ ಜೇಮ್ಸನ ಮಗನಾದರೂ ಪ್ರಾಟೆಸ್ಟೆಂಟ ನಾಗಿದ್ದರೆ ಸ್ಟೂಯರ್ಟ್‌ವಂಶಕ್ಕೆ ಭ್ರಷ್ಟತೆ ತಪ್ಪುತ್ತಿತ್ತು.

ಮತ್ತಾವ ಐರೋಪ್ಯದೇಶದಲ್ಲಿಯೂ ರಾಜನನ್ನು ಮತಾಚಾರ್ಯನನ್ನಾಗಿ ಸ್ಥಾಪಿಸಿಕೊಂಡ ಮತಶಾಖೆಯು ರೂಪಗೊಳ್ಳಲಿಲ್ಲ. ಮಹಿಷಾಸುರನಂತೆ ಚಿತ್ರದಲ್ಲಿ ಕಾಣುವ 8ನೆ ಹೆನ್ರಿ ಪರಮಸ್ವಾರ್ಥದಿಂದ ಸ್ಥಾಪಿಸಿದ ರಾಜಶ್ರೇಷ್ಠತೆಯು ಕಾಲಕ್ರಮದಲ್ಲಿ ಆಂಗ್ಲಿಕನ್ ಅಥವಾ ಇಂಗ್ಲಿಷ್ ಮತದ ಮುಖ್ಯಲಕ್ಷಣ

**ರಾಷ್ಟ್ರಭಕ್ತಿ**

ವಾದುದಕ್ಕೆ ಇಂಗ್ಲಿಷರ ರಾಷ್ಟ್ರಭಕ್ತಿಯು ಪೋಷಕವಾಯಿತು. ರಾಷ್ಟ್ರಭಕ್ತಿಯೆಂಬುದು ಕೇವಲ ಪುಣ್ಯಸಾಧಕವಲ್ಲ; ಲಾಭ ಸಂಪಾದಿಸಿಕೊಳ್ಳಲು ಅವಶ್ಯವಾದ ಗುಣ. ಎಲಿಸಬೆತ್ ಕಾಲದಿಂದ ಸ್ಪಾನಿಷರನ್ನು ದ್ವೇಷಿಸತಕ್ಕುದು ಇಂಗ್ಲಿಷರ ಧರ್ಮವೆನಿಸಿದ್ದುದಕ್ಕೆ ಅಂತರಂಗ ಪ್ರಯೋಜನಕಾರಿ ಯಾದ ರಾಷ್ಟ್ರಭಕ್ತಿ; ರೋಮನ್‌ಕ್ಯಾಥಲಿಕ್‌ಮತದಲ್ಲಿ ದ್ವೇಷ ಬಹಿರಂಗ. ಆಂಗ್ಲಿಕನ್ ಮತವೇ ಇಂಗ್ಲಂಡಿನಲ್ಲಿ ಬೇರೂರಲು ರಾಷ್ಟ್ರಕ್ಕೆ ಪ್ರಯೋಜನವಾಗುವ ಯೋಚನೆಯೋ ಆಸೆಯೋ ಇಂಗ್ಲಿಷರ ಅಂತರಂಗದಲ್ಲಿ ಆಟವಾಡದೆ ಬಿಡಲಿಲ್ಲ. ರೋಮನ್ ಕ್ಯಾಥಲಿಕ್ ದೊರೆ ಹ್ವಿಗ್ಗರಿಗೆ ಬೇಡವಾದುದಲ್ಲದೆ ಟೋರಿಗಳಿಗೂ ಬೇಡವಾಗಲು ಅಂತರಂಗದಲ್ಲಿ ಅಡಗಿದ್ದ ಆಸೆಯ ಆಟ ಕಾರಣವಾಯಿತು.

ರಾಜಾಧಿಕಾರ ಲುಪ್ತವಾಗಿ ಪಾರ್ಲಿಮೆಂಟಿನ ಅಧಿಕಾರ ಬೆಳೆದ ಅಂಶದಷ್ಟೇ ಮುಖ್ಯವಾದುದು ಇಂಗ್ಲಂಡಿನಲ್ಲಿ ಆಂಗ್ಲಿಕನ್ ಮತವು ಸ್ಥಿರವಾದ ಅಂಶ. ಪ್ಯೂರಿಟನ್ ಮತಸ್ಥರು ಪ್ರಾಬಲ್ಯವನ್ನು ಸಂಪಾದಿಸಿದ ಬಳಿಕ ಹಲಕೆಲವು ವರ್ಷಗಳಲ್ಲಿ ದುರ್ಬಲ ರಾದರು. ಆ ತರುವಾಯ ರಾಜಪುರುಷರು ಪ್ರಯತ್ನಿಸಿದಾಗ್ಯೂ ರೋಮನ್ ಕ್ಯಾಥಲಿಕ್ ಮತಕ್ಕೆ ಬಲ ಬಾರದಾಯಿತು. ಅತ್ಯಾಚಾರ ರಹಿತವಾಗಿ ಕಂಡ ಇಂಗ್ಲಿಷ್ ಚರ್ಚೆಂಬುದೇ ಭದ್ರವಾಯಿತು. ಆದರೆ ಸ್ಟೂಯರ್ಟ್‌ ಕಾಲದ

**ಅನ್ಯಮತ ಸಹನವಲ್ಲ**

ಕಡೆಕಡೆಗೆ ಮತಭೇದಗಳಲ್ಲಿ ಪರಸ್ಪರ ಸಹನ ತೋರಿದಂತೆ ಟಾಲರೇಷನ್ ಆಕ್ಟ್ ಆದುದರ ನಿಜವಾದ ಅರ್ಥವನ್ನು ನಾವು ಗ್ರಹಿಸಬೇಕು. ಆ ಕಾಲದಲ್ಲಿ ಜನರಿಗೆ ಮತಾಂತರಸಹನವು ಶೀಲವಾಯಿತೆಂದು

ಹೇಳಲಾಗುವುದಿಲ್ಲ. ಕಾನೂನಿನಲ್ಲಿ ಎರಡು ಪಂಗಡಗಳ ಜನರಿಗೆ ಬಹಿಷ್ಕಾರವೇ ಇದ್ದಿತು. ಅನ್ಯಮತಗಳೂ ಗೌರವಕ್ಕೆ ಯೋಗ್ಯವೆಂಬ ವಿವೇಚನೆ ಜನರ ಮನಸ್ಸಿನಲ್ಲಿ ತೋರಲಿಲ್ಲ. ತಮ್ಮ ಮತವನ್ನು ಬಲವಂತದಿಂದ ಇತರರಿಗೆ ಕಟ್ಟುವ ಉದ್ಯಮ ಮಾತ್ರ ತಗ್ಗುವ ಸೂಚನೆಗಳು ಕಂಡುಬಂದವು. ಅದುವರೆಗೂ ಅಂತಹ ಬಲಾತ್ಕಾರ ನಡೆದು ವ್ಯರ್ಥಮಾತ್ರವಲ್ಲದೆ ವಿಪತ್ಕಾರಕವಾಗಿದ್ದುದು ಜನರಿಗೆ ಅನುಭವವಾಗಿತ್ತಲ್ಲದೆ ಕಾಲ ಕಳೆಯುತ್ತ ಮತ ನಿಷ್ಠೆಯೂ ತಗ್ಗುತ್ತ ಬಂದಿತು.

**ನಿಷ್ಠಾ ದೌರ್ಬಲ್ಯ**

ವ್ಯಾಪಾರ ಐಶ್ವರ್ಯಗಳು ಹೆಚ್ಚಿ ಭೋಗಭಾಗ್ಯಗಳು ರೂಢವಾಗಿ ನೆಮ್ಮದಿಯು ಬೇರೂರಿದಂತೆ ಜನರಲ್ಲಿ ಮತನಿಷ್ಠೆಯು ದುರ್ಬಲವಾಯಿತು. ಮತಾಚಾರ ವಿಚಾರಗಳಲ್ಲಿ ಶ್ರದ್ಧೆಯು ಕಡಿಮೆಯಾಗಿ ಲೌಕಿಕ ದೃಷ್ಟಿಯೇ ಹೆಚ್ಚಾಗಿ ಬೆಳೆಯಿತು. ಮತವಿಚಾರಗಳಲ್ಲಿ ಉದಾಸೀನತೆ ಹೆಚ್ಚಿತು. ಆದುದರಿಂದ ಬಹುಕಾಲದವರೆಗೆ ಮತಾಂತರಸಹನವಾಗಿ ತೋರಿದುದು ಸಹನವಾಗಿರಲಿಲ್ಲ, ಉದಾಸೀನವೇ ಆಗಿತ್ತು.

ಜನಸಾಮಾನ್ಯರು ಈ ಕಾಲದಲ್ಲಿಯೇ ರಾಜಕೀಯ ವಿಚಾರಗಳಲ್ಲಿ ಆಸಕ್ತಿಯನ್ನು ಹೆಚ್ಚುಹೆಚ್ಚಾಗಿ ವಹಿಸಲಾರಂಭಿಸಿದರು. ಅಂತರ್ಯುದ್ಧದ ತರುವಾಯ ಆಡಳಿತದ ವಿವರಗಳಲ್ಲಿ ಜನರು ಎಚ್ಚರ ವಹಿಸಿದರು. ಪಾರ್ಲಿಮೆಂಟಿನ ಪ್ರಾದುರ್ಭಾವ ಅದಕ್ಕೆ ಕಾರಣವೂ ಹೌದು, ಅದರ ಪರಿಣಾಮವೂ ಹೌದು. ಆ ಸಭೆಗೆ ಅಧಿಕಾರ ಭದ್ರಗೊಂಡ ಹಾಗೆ ಸಭಿಕರೂ ನಾನಾ ವಿಷಯಗಳನ್ನು ತಿಳಿದುಕೊಂಡು ತಮ್ಮ ಅಭಿಪ್ರಾಯಗಳನ್ನು ಸಿದ್ಧಪಡಿಸಿಕೊಳ್ಳಬೇಕಾಯಿತು. ಮತಾಚಾರಗಳಲ್ಲಿಯೂ

**ರಾಜಕೀಯ ಪಕ್ಷಗಳು**

ಆಡಳಿತದ ವಿಚಾರಗಳಲ್ಲಿಯೂ ಪ್ರಬಲವಾದ ಅಭಿಪ್ರಾಯಭೇದಗಳು ತೋರಿ ಶತಮಾನದ ಉತ್ತರಾರ್ಧದಲ್ಲಿ ವ್ಹಿಗ್ ಟೋರಿ ಪಕ್ಷಗಳು ತೋರಿದವು. ಆ ಪಾರ್ಟಿಗಳ ವಿವರವನ್ನು ಆಗಲೇ ಕಂಡೆವು. ಆದರೆ ಪಾರ್ಟಿಗಳ ವಿರೋಧವನ್ನು ವಿವರಿಸಿಕೊಳ್ಳುವಾಗ ಪ್ರಧಾನಾಂಶವೊಂದನ್ನು ಮರೆಯಬಾರದು. ದೇಶಭಕ್ತಿಯೆಂಬುದು ಎರಡುಪಾರ್ಟಿಗಳಿಗೂ ಸಾಮಾನ್ಯಗುಣ. ದೇಶಕ್ಕೆ ವಿಪತ್ತು ತೋರಿದಾಗ ಎರಡು ಪಾರ್ಟಿಗಳೂ ಒಟ್ಟುಗೂಡತಕ್ಕವಾಗಿದ್ದವು.

ಒಳಜಗಳದ ಅವಾಂತರದಿಂದ ತುಂಬಿದ್ದಂತೆ ಕಾಣಬಂದರೂ ಸ್ಟ್ಯುಯರ್ಟ್ ದೊರೆಗಳ ಕಾಲದಲ್ಲಿ ಇಂಗ್ಲಿಷ್ ಜನರ ಐಶ್ವರ್ಯದ ಅಭಿವೃದ್ಧಿಯು ನಡೆದೇ ನಡೆಯಿತು. ಉತ್ತರ ಅಮೆರಿಕ, ವೆಸ್ಟಿಂಡೀಸ್, ಆಫ್ರಿಕ ಮತ್ತು ಇಂಡಿಯದಲ್ಲಿ ವ್ಯಾಪಾರ ಸ್ಥಲಗಳ ಸ್ಥಾಪನೆಯಾಯಿತು. **ಗುಲಾಮರ ಮಾರಾಟ**ದಿಂದಲೂ **ಭಾರತೀಯ ವ್ಯಾಪಾರ**ದಿಂದಲೂ ಹೇರಳವಾದ ಹಣವೊದಗಿತು. ಪ್ರತಿಸ್ಪರ್ಧಿಗಳಾಗಿದ್ದ ಡಚ್ಚರ ಪ್ರಾಬಲ್ಯ ನಾಶವಾಯಿತು. ಶತಮಾನದ ಕಡೆಕಡೆಗೆ ಫ್ರಾನ್ಸಿನ ಬಲ ಕುಗ್ಗಿತು.

ಯುಟ್ರೆಕ್ಟ್ ಕರಾರು ನಡೆದ ವೇಳೆಗೆ ವ್ಯಾಪಾರಸಾಧನೆಯಲ್ಲಿ ಐರೋಪ್ಯ ರಾಷ್ಟ್ರಗಳಲ್ಲೆಲ್ಲ ಇಂಗ್ಲಂಡೇ ಮೊದಲನೆಯದೆನಿಸಿತ್ತು. ಇಂಗ್ಲಿಷ್ ಜನರ ಮನಸ್ಸಿನಲ್ಲಿ ವ್ಯಾಪಾರವು ದೊಡ್ಡದೆನಿಸಿತು. ದೂರ ದೇಶಗಳಿಂದ ವಸ್ತುಗಳನ್ನು ತಂದು ಮಾರುವುದಲ್ಲದೆ ದೇಶದಿಂದ ದೇಶಕ್ಕೆ ಸರಕನ್ನು ಸಾಗಿಸುವ ಉದ್ಯೋಗವನ್ನೂ ಅವಲಂಬಿಸಿದವರಿಗೆ **ನೌಕಾ ವಿದ್ಯೆ**ಯು ಅವಶ್ಯವಾಗಿತ್ತು. ಆಗ **ವ್ಯಾಪಾರ**ವನ್ನು ಇಂಗ್ಲಿಷರು ಒಂದು **ಶಾಸ್ತ್ರ**ವಾಗಿ ಕಂಡರು. ಸ್ವದೇಶದಲ್ಲಿ ಚಿನ್ನಬೆಳ್ಳಿಗಳು ಬಂದು ಸೇರಿದಷ್ಟೂ ಮೇಲೆಂಬ ತತ್ತ್ವವನ್ನು ಕಂಡು ಆಮದಿಗಿಂತ ರಫ್ತು ಹೆಚ್ಚಾಗಿರುವಂತೆ ನಡೆಸಲು ತೊಡಗಿದರು. ಇಂಗ್ಲಂಡಿನಲ್ಲಿ ಮೆಲ್ಲಮೆಲ್ಲಗೆ ಕೈಗಾರಿಕೆಗಳು ಮೊದಲಾಗಿ ಈ ತತ್ತ್ವಸಾಧನೆಯಿಂದ ಪ್ರೋತ್ಸಾಹ ಪಡೆದವು. 2ನೆ ಫಿಲಿಪ್ ದೊರೆಯ ಹಿಂಸೆ ತಾಳಲಾರದೆ ಫ್ಲಾಂಡರ್ಸ್ ಪ್ರಾಂತದಿಂದ **ವಲ್ಲೂನ್ಸ್** (Walloons) ಎಂಬವರು ನೆಲೆಸಿದ್ದೂ ಫ್ರಾನ್ಸ್ ದೊರೆ ಲೂಯಿಯ ಅತಿ ನಿಷ್ಠೆಯಿಂದ **ಹ್ಯೂಗಿನೊ** ಜನರು ಬಂದು ಸೇರಿಕೊಂಡದ್ದೂ ಇಂಗ್ಲಂಡಿನ ಕೈಗಾರಿಕೆಗಳಿಗೆ ಅನುಕೂಲವಾಯಿತು. ಆ ಜನರು ಹಡಗು ಕಟ್ಟುವುದರಲ್ಲಿಯೂ ನೆಯ್ಗೆಯಲ್ಲಿಯೂ ಕುಶಲಿಗಳಾಗಿದ್ದರು. ಆದರೂ ಇಂಗ್ಲಿಷ್ ಜನರಿಗೆ ಬೇಕಾಗಿದ್ದ ಭೋಗ್ಯ ವಸ್ತುಗಳು ಹೊರಗಿನಿಂದಲೇ ಬರಬೇಕಾಗಿತ್ತು. ಭಾರತದಿಂದ ಬಂದ ಹತ್ತಿ ಬಟ್ಟೆಗಳನ್ನೂ ಸಂಬಾರದ ಸಾಮಗ್ರಿಯನ್ನೂ ಇಂಗ್ಲಂಡಿನಲ್ಲಿ ನೆಮ್ಮದಿವಂತರೆಲ್ಲರೂ ಉಪಯೋಗಿಸುತ್ತಿದ್ದರು.

ವ್ಯಾಪಾರ

ಕೈಗಾರಿಕೆ

ಇಂಗ್ಲಂಡಿನ ಜನಸಂಖ್ಯೆ ಆಗ 50 ಲಕ್ಷದಷ್ಟೇ ಇತ್ತು. ಹಳ್ಳಿಗಾಡುಪ್ರದೇಶವೇ ಹೆಚ್ಚಾಗಿತ್ತು. ದೊಡ್ಡ ಪಟ್ಟಣವೆಂಬುದು ಒಂದೇ ಒಂದು. ಅದೇ ರಾಜಧಾನಿಯಾದ ಲಂಡನ್. ಆ ನಗರ ಮಾತ್ರ ಬೇಗ ಬೇಗ ಬೆಳೆಯಿತು. ಸುಮಾರು 5 ಲಕ್ಷ ಜನರು ಅಲ್ಲಿದ್ದರು. ಬೆಂಕಿಯ ಹಾವಳಿ ಕಳೆದ ಮೇಲೆ ಅಲ್ಲಿ ಇಟ್ಟಿಗೆ ಗೋಡೆಗಳೆದ್ದವು; ಅದಕ್ಕೆ ಮೊದಲು ಕಟ್ಟಡಕ್ಕೆ ಮರವೇ ಇತ್ತು. ನಗರದ ಬಹುಭಾಗ ಹೊಲಸಿನಿಂದಲೇ ಕೂಡಿತ್ತು. ನೆಮ್ಮದಿವಂತ ಜನರು, ಆಸ್ಥಾನಿಕರು, ಪಾರ್ಲಿಮೆಂಟ್ ಸಭಿಕರು ಒಂದು ಭಾಗದಲ್ಲಿ ಸೇರಿಕೊಂಡಿರುತ್ತಿದ್ದರು. ಭೋಗಭಾಗ್ಯಗಳು ಹೆಚ್ಚಿದಂತೆ ಜನರಿಗೆ ವಿನೋದಗಳೂ ಹೆಚ್ಚಾಗಿ ಬೇಕಾದವು. ಕುದುರೆ ಜೂಜು, ಹುಂಜದ ಕಾಳಗ, ದ್ವಂದ್ವಕಾಳಗ (Duels)ಗಳಲ್ಲದೆ ನಾಟಕ ನೃತ್ಯಗಳು ಅಭಿವೃದ್ಧಿಗೊಂಡವು. ಕರಡಿಯಾಟ ಗೂಳಿಯಾಟಗಳನ್ನು ಹಿಂದಿನಂತೆ ನೆಮ್ಮದಿವಂತರು ಮೆಚ್ಚಲಿಲ್ಲ. ಪ್ಯೂರಿಟನ್ನರ ಆಡಳಿತ ಮುಗಿದ ತರುವಾಯ ನಾಟಕಶಾಲೆಗಳು, ವಿಹಾರವನಗಳು, ನೃತ್ಯಗಳು ಹೆಚ್ಚು ಪ್ರೋತ್ಸಾಹ ಪಡೆದವು. ಪುನಾರಾಜತ್ವ ಪ್ರಾಪ್ತಿಯ ಅನಂತರ **ಕಾಫಿಕ್ಲಬ್ಬು**ಗಳೆಂಬವು

ಜನ ಜೀವನ

ಹೆಚ್ಚಿದವು. ಕಾಫಿ ಮತ್ತು ಟೀ ಎರಡೂ 2ನೆ ಚಾರ್ಲ್ಸ್‌ ಕಾಲದಲ್ಲಿ ಮೊದಲಾದವು. ಕ್ಲಬ್ಬುಗಳಲ್ಲಿ ದಿನದಿನದ ಹರಟೆ ಹರಟುವುದಕ್ಕೆ ನೆಮ್ಮದಿವಂತರು ಸೇರುತ್ತಲಿದ್ದರು.

ನೆಮ್ಮದಿವಂತರಲ್ಲಿಯೇ ವ್ಹಿಗ್ ಮತ್ತು ಟೋರಿ ಪಂಗಡಗಳು. 1660 ರ ತರುವಾಯ ಫ್ರೆಂಚ್ ಜನರ ನಡೆನುಡಿಗಳ ಅನುಕರಣ ಹೆಚ್ಚಿತು. 14ನೆ ಲೂಯಿಯ ಆಸ್ಥಾನವೆಂಬುದು ಯೂರೋಪಿಗೆಲ್ಲ ಮರ್ಯಾದೆಯ ರೀತಿಗೆ ಆದರ್ಶವಾಗಿತ್ತು. ಫ್ರೆಂಚ್ ಭಾಷೆಯನ್ನಾಡುವುದು ವಿಸೇತರ ಲಕ್ಷಣವೆನಿಸಿತು. ಇಂಗ್ಲಂಡಿನಲ್ಲಿ ಅದೇ ರೀತಿಯು ನೆಲೆಸಿ ಉಡುಗೆತೊಡಿಗೆಗಳಲ್ಲಿ ಹೊಸ ಬಿಂಕಬಿತ್ತರಗಳು ತೋರಿಕೊಂಡವು. ಪುರುಷರು ತಲೆಯನ್ನು ಕ್ಷೌರವಾಡಿಸಿ ಟೋಪನ್ನು ಕಟ್ಟುವುದು ಸಾಧಾರಣ

**ಅಲಂಕಾರ ವೈಖರಿ**

ವಾಯಿತು. ಸ್ತ್ರೀಯರ ಅಲಂಕಾರವೂ ಬದಲಾಯಿತು. ಪಾರ್ಟಿಗಳ ಪೈಪೋಟಿಯಿಂದ ವ್ಹಿಗ್ಗರ ಕಾಫಿಕ್ಲಬ್ಬುಗಳು ಬೇರೆ ಟೋರಿಗಳ ಕಾಫಿಕ್ಲಬ್ಬುಗಳು ಬೇರೆಯಾಗಿದ್ದಂತೆ ವೇಷಭೂಷಣಗಳ ಬಿನ್ನಾಣದಲ್ಲಿಯೂ ವ್ಹಿಗ್ಗರದೊಂದು ಬಗೆ ಟೋರಿಗಳದೊಂದು ಬಗೆ. ವ್ಹಿಗ್ ಸ್ತ್ರೀಯರು ಮುಖದ ಒಂದು ಪಕ್ಕಕ್ಕೆ ಅಲಂಕಾರದ ಮಚ್ಚೆಗಳನ್ನು ಧರಿಸಿಕೊಂಡರೆ ಟೋರಿ ಸ್ತ್ರೀಯರು ಮತ್ತೊಂದು ಪಕ್ಕಕ್ಕೇ ಧರಿಸತಕ್ಕವರು. ಅಲಂಕಾರದ ಬೀಸಣಿಗೆಯನ್ನಾಡಿಸುವುದರಲ್ಲಿ ವ್ಹಿಗ್ಗರ ಒಯ್ಯಾರ ಬೇರೆ ಟೋರಿ ಒಯ್ಯಾರ ಬೇರೆ. ಆನ್ ರಾಣಿಯ ಕಾಲದಲ್ಲಿ ವ್ಹಿಗ್ ಟೋರಿ ಗುಂಪುಗಳ ಪೋಟಾಪೋಟಿಯು ಇಂತಹ ವಿನೋದ ವಿಚಿತ್ರಗಳಿಗೆ ಆಸ್ಪದ ಕೊಟ್ಟಿತ್ತು.

ನೆಮ್ಮದಿಯ ಜೀವನ ಹೆಚ್ಚಿದಂತೆ ವಾಸ್ತುಚಿತ್ರಸಾಹಿತ್ಯಕಲೆಗಳಿಗೂ ಉತ್ತೇಜನ ದೊರೆಯುವುದಷ್ಟೆ. ಲಂಡನ್ನಿಗೆ ಬೆಂಕಿ ಬಿದ್ದ ಮೇಲೆ ವಾಸ್ತುವಿದ್ಯಾನಿಪುಣನೊಬ್ಬನಿಗೆ ಅವಕಾಶ ದೊರಕಿತು. ಆ ನಗರದ ಚರ್ಚುಗಳಲ್ಲಿ ಪ್ರಸಿದ್ಧವಾದ **ಸೆಂಟ್ ಪಾಲ್ಸ್ ಕಥಿಡ್ರಲ್** (St. Paul's Cathedral) ಎಂಬುದನ್ನು **ಸರ್ ಕ್ರಿಸ್ಟೊಫರ್ ರೆನ್** (Sir Christopher Wren) ಎಂಬಾತನು ಹೊಸದಾಗಿ ಕಟ್ಟಿದನು. ಆನ್ ರಾಣಿಯ ಕಾಲದಲ್ಲಿ ವಾಸ್ತುವಿದ್ಯೆಗೆ ಪ್ರೋತ್ಸಾಹವುಂಟಾಯಿತು. ಚಿತ್ರ

**ಕಲೆ**

ಕಲೆ ಹಿರೇ ಚಾರ್ಲ್ಸ್ ದೊರೆಯ ಕಾಲದಲ್ಲಿಯೂ ಆ ತರುವಾಯವೂ ಅಭ್ಯುದಯಕ್ಕೆ ಬಂದಿತು. ಪ್ಯೂರಿಟನ್ ಪ್ರಾಬಲ್ಯದ ಕಾಲದಲ್ಲಿ ಗಾನಕಲೆಗೆ ಪ್ರೋತ್ಸಾಹ ತಗ್ಗಿತ್ತು; ಆದರೂ ಕ್ರಾಮ್ವೆಲ್ಲಿಗೆ ಭಕ್ತಿಗಾನ ಇಷ್ಟವಾಗಿತ್ತು. ಎರಡನೆ ಚಾರ್ಲ್ಸ್ ಕಾಲದಲ್ಲಿ **ಆಪೆರ** (Opera) ಎಂಬ ಮೊದಲಿನಿಂದ ಕೊನೆಯವರೆಗೂ ಹಾಡಿನಿಂದಲೇ ನಡೆಯುವ ನಾಟಕದ ರೀತಿಯು ಆರಂಭವಾಗಿ ಗಾನಕಲೆಗೆ ಅವಕಾಶ ಕೊಟ್ಟಿತು. ಸಾಹಿತ್ಯದಲ್ಲಿ ನೋಡುವುದಾದರೆ ಹಿರೇ ಜೇಮ್ಸ್ ಕಾಲವೆಂಬುದು ಎಲಿಸಬೆತ್ ಕಾಲದಂತೆಯೇ. **ಷೇಕ್ಸ್‌ಪಿಯರ್** ಪರಿಣತಿಯನ್ನು

ಪಡೆದು ವಿಖ್ಯಾತನಾದ ಕಾಲ ಅದೇ. ಆತನ ತರುವಾಯ **ಮಿಲ್ಟನ್** (Milton) ಎಂಬ ಪ್ಯೂರಿಟನ್ ಕವಿ ಪ್ರಸಿದ್ಧನಾದವನು. ಕ್ರಾಮ್ವೆಲ್ ಕಾಲದಲ್ಲಿದ್ದು ಆತನು **ಪ್ಯಾರಡೈಸ್ ಲಾಸ್ಟ್** (Paradise Lost) ಎಂಬ ಗಂಭೀರ ಕಾವ್ಯವನ್ನು ಬರೆದನು. ಪ್ಯೂರಿಟನ್ನರ ಪ್ರಾಬಲ್ಯ ನಷ್ಟವಾದ ತರುವಾಯ ವಿನೋದಪ್ರಧಾನವಾದ ನಾಟಕಗಳೂ ಸಣ್ಣಸಣ್ಣ ಕಾವ್ಯಗಳೂ ಹೆಚ್ಚಿದವು. ಬರಬರುತ್ತ ಪದ್ಯಕ್ಕಿಂತ ಗದ್ಯ ಪ್ರಬಲವಾಯಿತು. ಅಂತರ್ಯುದ್ಧ ಕಾಲದಲ್ಲಿಯೂ ಅನಂತರವೂ ಪಕ್ಷವಿಪಕ್ಷಗಳು ಸ್ಪರ್ಧಿಸುತ್ತಲಿದ್ದಾಗ ಪತ್ರಿಕೆಗಳೂ ಪುಟ್ಟ ಪ್ರಬಂಧಗಳೂ ರೇಗಿದವು. ಆಗ ಗದ್ಯದ ರೀತಿಯು ಸಾಮಾನ್ಯ ವ್ಯವಹಾರದ ಭಾಷೆಗೆ ಹೊಂದಿಕೊಂಡು ಅಭಿವೃದ್ಧಿ ಪಡೆಯಿತು. ಪದ್ಯಗದ್ಯಗಳೆರಡರಲ್ಲಿಯೂ ಎರಡನೆ ಚಾರ್ಲ್ಸ್ ದೊರೆಯ ಕಾಲದಿಂದ ಫ್ರೆಂಚರ ಮೇಲ್ಪಙ್ಕ್ತಿಯನ್ನು ಇಂಗ್ಲಿಷರು ಅನುಸರಿಸಿದರು. ವಿಡಂಬನಾರೂಪದ ಕಾವ್ಯಗಳು ಪಾರ್ಟಿಪ್ರಪಂಚದಲ್ಲಿ ಅಭಿವೃದ್ಧಿಯಾದವು. **ಪೋಪ್** (Pope) ಎಂಬ ಹೆಸರಿನ ಕವಿಯಿಂದ ಮೊದಲಾಗಿ ಎಲ್ಲರೂ ಅಪಹಾಸ್ಯ ತುಂಬಿದ ಗ್ರಂಥಗಳನ್ನು ಬರೆಯುತ್ತಿದ್ದರು. ಆನ್ ರಾಣಿಯ ಕಾಲದಲ್ಲಿ **ಸ್ವಿಫ್ಟ್** (Swift), **ಆಡಿಸನ್** (Addison), **ಸ್ಟೀಲ್** (Steele) ಮುಂತಾದವರು ಸರಲವಾಗಿಯೂ ಸೊಗಸಾಗಿಯೂ ಇರುವ ಗದ್ಯವನ್ನು ಬರೆದರು. ಸ್ಟ್ಯೂಯರ್ಟ್ ಕಾಲದಲ್ಲಿಯೇ ಇಂಗ್ಲಿಷ್ ಗದ್ಯರೀತಿಯೂ ರೂಢಿಗೆ ಬಂದಿತು.

**ಸಾಹಿತ್ಯ**

ಟ್ಯೂಡರ್ ದೊರೆಗಳ ಕಾಲ ಮೊದಲಾದಾಗ ಐರೋಪ್ಯರಿಗೆ ಪೃಥ್ವಿಯೆಷ್ಟು ವಿಸ್ತಾರವಾಯಿತೆಂಬುದು ತಿಳಿಯಿತಷ್ಟೆ. ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ ಸಾಹಸದಿಂದ ಐರೋಪ್ಯರು ಹೊರಟಾಗ ಪೂರ್ವದಿಕ್ಕಿನಲ್ಲಿ ವ್ಯಾಪಾರ ಸಾಧನೆಯೇ ಮುಖ್ಯ ಗುರಿಯಾಯಿತು. ಪಶ್ಚಿಮದಲ್ಲಾದರೆ ಕ್ಷೇತ್ರಸಂಪಾದನೆ ಗುರಿಯಾಯಿತು. ಐರೋಪ್ಯರಲ್ಲಿ ಬೇರೆ ಬೇರೆ ಗುಂಪುಗಳಿದ್ದಾಗ್ಯೂ ಎಲ್ಲರೂ ಬಿಳಿಯ ಗುಂಪಿನವರು. ಐರೋಪ್ಯರೆಲ್ಲರೂ ಒಂದು ಜಾತಿಯಂತೆ. ಕ್ರೈಸ್ತಮತವನ್ನವಲಂಬಿಸಿದ್ದವರು; ಅವರ ದೃಷ್ಟಿಯಲ್ಲಿ ಕ್ರೈಸ್ತರಲ್ಲದವರೆಲ್ಲರೂ ಪತಿತರು ಅಥವಾ ಭ್ರಷ್ಟರು. ಹೀಗಿದ್ದುದರಿಂದ ಸ್ಪೈನ್ ದೇಶಸ್ಥರು ಕ್ಷೇತ್ರ ಸಂಪಾದನೆ ಮಾಡಿದಾಗ ಅಮೆರಿಕದಲ್ಲಿ ಕ್ರೂರ ಕೃತ್ಯಗಳನ್ನು ನಡೆಸಲು ಸ್ವಲ್ಪವಾದರೂ ಹಿಂಜರಿಯಲಿಲ್ಲ. ಇಂಗ್ಲಿಷರು ನೀಗ್ರೋ ಜನರನ್ನು ಹಿಡಿದು ಸಾಗಿಸುವುದರಲ್ಲಿ ಯಾವ ಶಂಕೆಯನ್ನೂ ತಾಳಲಿಲ್ಲ. ಪಶ್ಚಿಮ ಭಾಗದ ಯೂರೋಪ್ ದೇಶಗಳ ಜನರಿಗೆ ಇತರ ಭೂಭಾಗಗಳು ತಮ್ಮ ಆಕ್ರಮಣಕ್ಕೆ ಸಿದ್ಧವಾಗಿರುವ ಕ್ಷೇತ್ರಗಳಂತೆಯೇ ಕಾಣಿಸಿದವು. ಅನ್ಯಮತಸ್ಥರನ್ನು ನಾಶಗೊಳಿಸಿದಷ್ಟೂ ಪುಣ್ಯಲಾಭವೆಂಬ ನಂಬಿಕೆ ಕ್ರೈಸ್ತಮತಕ್ಕವಶ್ಯವಲ್ಲದಿದ್ದರೂ ಆ ನಂಬಿಕೆಯನ್ನು ಬೆಳೆಸಿಕೊಳ್ಳುವುದು ಅನುಕೂಲವಾಯಿತು. ಉತ್ತರ ಅಮೆರಿಕದಲ್ಲಿ ಮೆಕ್ಸಿಕೊ ಹಿಡಿದು

**ದೂರಕ್ಷೇತ್ರ ಸಂಪಾದನೆ**

ದಕ್ಷಿಣ ಅಮೆರಿಕದಲ್ಲಿ ಲಾಪ್ಲಾಟಾವರೆಗೆ ಸ್ಪಾನಿಷರು ರಾಕ್ಷಸಕೃತ್ಯಗಳನ್ನು ನಡೆಸಿದಾಗ ಕ್ರೈಸ್ತಮತ ಗುರುಗಳು ಆ ಕೃತ್ಯಗಳನ್ನು ಮೆಚ್ಚಿದರು. 16ನೆ ಮತ್ತು 17ನೆ ಶತಮಾನಗಳು ಯುರೋಪಿಯನ್ನರ ಮತಭೇದಗಳಿಗೂ ನಿಷ್ಕಾರಣವೈಪರೀತ್ಯಕ್ಕೂ ಹೆಸರಾದಂತೆ ಇತರ ಭೂಭಾಗಗಳ ಆಕ್ರಮಣಸಾಹಸಗಳಿಗೂ ಹೆಸರಾದವು.

ಇಂಗ್ಲಂಡಿನಲ್ಲಿ ಮತನಿಷ್ಠೆಗೂ ರಾಷ್ಟ್ರಭಕ್ತಿಗೂ ಎಷ್ಟು ಆಪ್ತತೆಯಿತ್ತೆಂಬುದನ್ನು ಕಂಡೆವು. ಆಂಗ್ಲಿಕನ್ ಮತವೆಂಬುದು ಇಂಗ್ಲಿಷ್ ಜಾತಿಯ ಹೆಮ್ಮೆಗೆ ಪೋಷಕವಾಯಿತು; ಇತರ ಐರೋಪ್ಯರಿಂದ ಇಂಗ್ಲಿಷರನ್ನು ಬೇರೆ ಮಾಡಿತು. ಹೀಗಾದುದು ಸ್ಟ್ಯುಯರ್ಟ್ ಕಾಲದ ಕ್ಷೇತ್ರಸಂಪಾದನೆಗೆ ಸಹಾಯಕವಾಯಿತು. ರೋಮನ್ ಕ್ಯಾಥಲಿಕ್ಕರನ್ನು ದ್ವೇಷಿಸುತ್ತ ಸ್ಪಾನಿಷರನ್ನು ದರೋಡೆ ಹೊಡೆದ ತರುವಾಯ ರೋಮನ್ ಕ್ಯಾಥಲಿಕ್ಕರು ಕಟ್ಟಿದ್ದ ನೆಲೆಗಳನ್ನು ಇಂಗ್ಲಂಡಿಗಾಗಿ ಸಂಪಾದಿಸಲು ಆಂಗ್ಲಿಕನ್ ಮತಸ್ಥರು ಸಿದ್ಧರಾದರು. ವ್ಯಾಪಾರ ಐಶ್ವರ್ಯಗಳ ಸೆಳೆತ ಹೆಚ್ಚುತ್ತ ಮತನಿಷ್ಠೆಯೂ ಬದಲಾಯಿತು. ಟ್ಯೂಡರ್ ಕಾಲದಲ್ಲಿ ಸ್ಪಾನಿಷರನ್ನು ವೈರಿಗಳೆಂದು ಭಾವಿಸಿದ ಇಂಗ್ಲಿಷರು ಸ್ಟ್ಯುಯರ್ಟ್ ಕಾಲದಲ್ಲಿ ಡಚ್ಚರನ್ನು ವೈರಿಗಳೆಂದು ಭಾವಿಸಿ ಎರಡು ಯುದ್ಧಗಳನ್ನು ಅವರೊಂದಿಗೆ ನಡೆಸಿದರು. ಐಶ್ವರ್ಯಸಾಧನೆಯ ಉದ್ದೇಶವು ಮತಭಕ್ತಿಯನ್ನು ಸೋಲಿಸಿತು. ರಾಷ್ಟ್ರಭಕ್ತಿಯು ಮತಭಕ್ತಿಗಿಂತ ಮಿಗಿಲೆನಿಸಿತು.

ಟ್ಯೂಡರ್ ದೊರೆಗಳ ಕಾಲದಲ್ಲಿ ಇಂಗ್ಲಿಷರ ನೌಕಾಬಲ ಅಭಿವೃದ್ಧಿ ಪಡೆದಾಗ್ಯೂ ಕ್ಷೇತ್ರಾಂತರ ಸಾಧನೆಯಲ್ಲಿ ಇಂಗ್ಲಂಡ್‌ರಾಜ್ಯವು ಸ್ಪೈನ್ ಪೋರ್ಚುಗಲ್ ದೇಶಗಳಿಗೆ ಬಲು ಹಿಂದಿತ್ತು. ಸ್ಪೈನಿನ ಭಾಗವಾಗಿಯೋ ಫ್ರಾನ್ಸಿನ ಹಿತ್ತಿಲಾಗಿಯೋ ಪರಿಣಮಿಸದೆ ಪ್ರತ್ಯೇಕವಾಗಿಯೂ ಸ್ವತಂತ್ರವಾಗಿಯೂ ಇಂಗ್ಲಂಡ್ ಉಳಿದುಕೊಂಡುದು ಟ್ಯೂಡರ್ ಪ್ರಭುಗಳ ಜಾಣತನಮಾತ್ರದಿಂದ. ಸ್ಟ್ಯುಯರ್ಟ್ ಪ್ರಭುಗಳ ಕಾಲದಲ್ಲಿ ಇಂಗ್ಲಿಷರು ಸಮುದ್ರಯಾನ, ವ್ಯಾಪಾರ ಮತ್ತು ಕ್ಷೇತ್ರಾಂತರ ಸಂಪಾದನೆಯಲ್ಲಿ ಮುಂದಾದರು. ಅಟ್ಲಾಂಟಿಕ್ ಸಾಗರದ ಎರಡು ಕಡೆ ಆಫ್ರಿಕದ ತೀರದಲ್ಲಿಯೂ ಉತ್ತರಅಮೆರಿಕದ ತೀರದಲ್ಲಿಯೂ ಪ್ರಬಲರಾದುದಲ್ಲದೆ ಹಿಂದೂಸಾಗರದ ತೀರಗಳಲ್ಲಿಯೂ ಪ್ರಬಲರಾದರು. ಹದಿನೇಳನೆ ಶತಮಾನದ ಕಡೆಗಾಲದಲ್ಲಿ ಇಂಗ್ಲಿಷರು ಫ್ರೆಂಚರಿಗೆ ಪ್ರತಿಸ್ಪರ್ಧಿಗಳಾಗಿ ನಿಂತರು. ಸ್ಪೈನ್ ಪೋರ್ಚುಗಲ್ ಹಾಲಂಡ್ ದೇಶಗಳನ್ನು ದುರ್ಬಲಗೊಳಿಸಿದ ತರುವಾಯ ಫ್ರಾನ್ಸಿನ ಸರದಿ ಬಂತು.

**ಇಂಗ್ಲಿಷರ ಪ್ರಾಬಲ್ಯ**

ಸಮುದ್ರವನ್ನು ಸಾಧಿಸಿ ದೂರಕ್ಷೇತ್ರಗಳನ್ನು ಸಂಪಾದಿಸಿಕೊಳ್ಳುವ ಉದ್ಯಮದಲ್ಲಿ ಇಂಗ್ಲಂಡಿಗೆ ಒಂದು ಅನುಕೂಲವಿತ್ತು. ಯುರೋಪಿನಲ್ಲಿ ಇಂಗ್ಲಿಷರು ಕ್ಷೇತ್ರಸಂಪಾದನೆ ಮಾಡುವ ಆಸೆಯನ್ನಾಗಲಿ ಉದ್ದೇಶವನ್ನಾಗಲಿ ಬೆಳೆಸುವ ಅವಶ್ಯವಿರಲಿಲ್ಲ.

ಹಿಂದಿನ ಶತಮಾನಗಳ ಅನುಭವದಿಂದ ಆ ಆಸೆ ವ್ಯರ್ಥವೆನ್ನಿಸಿತ್ತು. ಸ್ಪೈನ್ ಫ್ರಾನ್ಸ್ ಮುಂತಾದ ರಾಜ್ಯಗಳಿಗಾದರೆ ಆ ಬಗೆಯ ಉದ್ದೇಶಗಳು ಅವಶ್ಯವೂ ಅನಿವಾರ್ಯವೂ ಆಗಿದ್ದವು. ಯೂರೋಪ್ ಖಂಡಕ್ಕೆ ಸೇರಿಯೂ ಸೇರದಂತಿರುವ ಸ್ಥಾನಮಹಿಮೆ ಬ್ರಿಟಿಷರ ಸಾಮ್ರಾಜ್ಯ ಸಂಪಾದನೆಗೆ ಅನುಕೂಲವಾಯಿತು. ಸ್ಟೂಯರ್ಟ್ ದೊರೆಗಳ ಕಾಲದಲ್ಲಿಯೇ ಸಾಮ್ರಾಜ್ಯ ಸಂಪಾದನೆಗೆ ಮೊದಲಾಯಿತು. ಪಶ್ಚಿಮದಲ್ಲಿ ಜಮೈಕಾ ದೊರಕಿತ್ತು. ಹಿಂದೂಸ್ಥಾನದಲ್ಲಿ ಮದರಾಸು ಮುಂಬಯಿ ಕಲ್ಕತ್ತೆಗಳಲ್ಲಿ ಸ್ಥಲ ಸಂಪಾದನೆಯಾಗಿತ್ತು. ಭೂಮಧ್ಯಸಮುದ್ರದಲ್ಲಿ ಇಂಗ್ಲಿಷ್ ಹಡಗು ಪಡೆಗೆ ಪ್ರವೇಶವಾಗಿತ್ತು. ಉತ್ತರ ಅಮೆರಿಕದ ಪೂರ್ವತೀರಪ್ರದೇಶದಲ್ಲಿ ಅನೇಕ ನೆಲಸುಗಳು ಅಭಿವೃದ್ಧಿಯಾಗುತ್ತಿದ್ದವು. ಹದಿನೆಂಟನೆ ಶತಮಾನದಲ್ಲಿ ಈ ಸಾಮ್ರಾಜ್ಯ ವಿಸ್ತಾರಕ್ಕಾಗಿ ಬ್ರಿಟಿಷರೂ ಫ್ರೆಂಚರೂ ಪ್ರಬಲವಾದ ಹೋರಾಟಕ್ಕೆ ಸಿಲ್ಲತಕ್ಕವರಾದರು.

**ಸ್ಥಾನಮಹಿಮೆ**

# ಹ್ಯಾನೊವರ್ ವಂಶ

ಹಿರೇ ಜೇಮ್ಸ್ (1603—1625)

|

ಎಲಿಸಬೆತ್ = ಫ್ರೆಡರಿಕ್ (ಪ್ಯಾಲಟಿನೇಟ್ ಸಂಸ್ಥಾನಿಕ)

|

ಸೋಫಿಯ = ಹ್ಯಾನೊವರ್ ಸಂಸ್ಥಾನಿಕ

|

**1ನೆ ಜಾರ್ಜ್ ದೊರೆ**(1714—1727)

|

**2ನೆ ಜಾರ್ಜ್**(1727—1760)

|

ಫ್ರೆಡರಿಕ್ ಯುವರಾಜ

|

**ಮೂರನೆ ಜಾರ್ಜ್**(1760—1820)

|

| | | |
|---|---|---|
| **4ನೆ ಜಾರ್ಜ್** (1820—1830) | **4ನೆ ವಿಲಿಯಂ** (1830—1837) | ಎಡ್ವರ್ಡ್, ಡ್ಯೂಕ್ ಆಫ್ ಕೆಂಟ್ |
| | | **ವಿಕ್ಟೋರಿಯ** (1837—1901) |

# ಹ್ಯಾನೊವರ್ ವಂಶದ ದೊರೆಗಳ ಕಾಲ

ಆನ್‌ರಾಣಿ ಸತ್ತ ಬಳಿಕ ಹ್ಯಾನೊವರ್ ಸಂಸ್ಥಾನಿಕನಾದ ಜಾರ್ಜ್ ಗ್ರೇಟ್‌ಬ್ರಿಟನ್ ಐರ್ಲಂಡುಗಳಿಗೆ ದೊರೆಯಾದನು. ತಾನು ನಡೆಸಿದ ಪ್ರಯತ್ನ ವ್ಯರ್ಥವಾಗಲು ಬಾಲಿಂಗ್‌ಬ್ರೋಕ್ ಶ್ರೀಮಂತನು ದೇಶಾಂತರ ಹೊರಟುಬಿಟ್ಟನು. 1714ರಲ್ಲಿ ಪಟ್ಟವೇರಿದ ಜಾರ್ಜ್ ಕಾಲದಿಂದ ಬ್ರಿಟಿಷರ ಚರಿತ್ರೆಯು ಹೊಸ ರೂಪವನ್ನು ತಾಳುವುದು. 18ನೆ ಶತಮಾನದ ಪೂರ್ವಾರ್ಧದಲ್ಲಿ, ಅಂದರೆ 1760ರ ವರೆಗೆ, ಹಿರಿಯ ಜಾರ್ಜ್ ಮತ್ತು 2ನೆ ಜಾರ್ಜ್ ದೊರೆಗಳು ಆಳಿದರು. ಇಬ್ಬರ ಆಳಿಕೆಯಲ್ಲಿಯೂ ವ್ಹಿಗ್ ಪಕ್ಷದವರೇ ಪ್ರಬಲರಾಗಿದ್ದರು. **1714**ರಿಂದ **1760**ರ ವರೆಗೆ **ವ್ಹಿಗ್ ಮಂತ್ರಿಗಳ** ಆಳಿಕೆಯೇ ನಡೆಯಿತು. ದೊರೆಗಳು ಆಡಳಿತದಲ್ಲಿ ಹೆಚ್ಚು ಪ್ರವೇಶ ಮಾಡದೆ ಮಂತ್ರಿಗಳಿಗೆಲ್ಲವನ್ನೂ ಒಪ್ಪಿಸಿ ತಟಸ್ಥರಾಗಿದ್ದುಬಿಟ್ಟರು. ಆ ನಲವತ್ತಾರು ವರ್ಷಗಳ ಕಾಲದಲ್ಲಿ ನಡೆದ ಸಂಗತಿಗಳನ್ನು ಬೇರೆ ಬೇರೆಯಾಗಿ ವಿಂಗಡಿಸಿಕೊಂಡು ವಿವರಿಸಿಕೊಳ್ಳುವುದೇ ಮೇಲು. ದೊರೆಗಳು, ಅವರ ಮಂತ್ರಿಗಳು, ಸ್ಟೂಯರ್ಟ್ ವಂಶಸ್ಥರ ಪ್ರಯತ್ನ, ಪ್ರಸಿದ್ಧ ಮಂತ್ರಿಗಳು, ಅನ್ಯ ರಾಷ್ಟ್ರಗಳೊಡನೆ ನಡೆದ ವ್ಯವಹಾರಗಳು ಮುಂತಾಗಿ ಒಂದೊಂದನ್ನಾಗಿ ವಿವರಿಸಿಕೊಳ್ಳಬೇಕು. ಅಧಿಕಾರ ನಡೆಸಿದವರು ರಾಜಪುರುಷರಲ್ಲ; ಮಂತ್ರಿಗಳಾದವರು. ಆದ್ದರಿಂದ ಮಂತ್ರಿಮಂಡಲಿಯವರ ರಚನೆಯ ಕ್ರಮವೂ ಕಾರ್ಯನಿರ್ವಾಹದ ಸಂಪ್ರದಾಯಗಳೂ ಗಮನಾರ್ಹವಾಗುವುವು.

**1760** ರಿಂದ **1820** ರ ವರೆಗೆ **3ನೆ ಜಾರ್ಜ್** ಎಂಬ ದೊರೆ ಆಳಿದನು. ಆತನು ಟೋರಿ/ಪಕ್ಷದಲ್ಲಿ ವಿಶ್ವಾಸ ತೋರಿ ರಾಜಾಧಿಕಾರವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಿದನು. ಆ ಉದ್ದೇಶವೇನೋ ಕಡೆಗೆ ನೆರವೇರಲಿಲ್ಲ. ಆತನ ಆಳಿಕೆಯಲ್ಲಿಯೂ ವಿಷಯಗಳನ್ನು ಪ್ರತ್ಯೇಕವಾಗಿ ವಿವರಿಸಿಕೊಳ್ಳುವುದೇ ಸ್ಪಷ್ಟತೆಗೆ ಅನುಕೂಲ. 1820 ತರುವಾಯ ಹೊಸ ಕಾಲ. ಅದನ್ನು ಹತ್ತೊಂಬತ್ತನೆ ಶತಮಾನದ ವೃತ್ತಾಂತವೆಂದು ಬೇರ್ಪಡಿಸಿಕೊಳ್ಳಬೇಕು.

# ಹಿರೇ ಜಾರ್ಜ್ ಕಿರೇ ಜಾರ್ಜ್ ದೊರೆಗಳು, ವ್ಹಿಗ್ಗರು

## 1714-1760

### ಸಮಕಾಲಿಕರು

| ಫ್ರಾನ್ಸ್ | ಸ್ಪೈನ್ | ಆಸ್ಟ್ರಿಯ | ಪ್ರಷ್ಯ |
|---|---|---|---|
| 14ನೆ ಲೂಯಿ | 5ನೆ ಫಿಲಿಪ್ | 6ನೆ ಚಾರ್ಲ್ಸ್ | 1ನೆ ಫ್ರೆಡರಿಕ್ ವಿಲಿಯಂ |
| 1643—1715 | 1700—1746 | 1711—1740 | 1713—1740 |
| 15ನೆ ಲೂಯಿ | 6ನೆ ಫರ್ಡಿನೆಂಡ್ | ಮರೀಯ ಥೆರೀಸ | ಫ್ರೆಡರಿಕ್ ದಿ ಗ್ರೇಟ್ |
| 1715—1774 | 1746—1759 | 1740—1765 | 1740—1786 |
| | 3ನೆ ಚಾರ್ಲ್ಸ್ | | |
| | 1759—1788 | | |

ಸೆಟ್ಲ್‌ಮೆಂಟ್ ಕಾನೂನಿನಂತೆ ದೊರೆಯಾದ ಜಾರ್ಜ್ ಜನ್ಮತಃ ಜರ್ಮನ್. ಬ್ರಿಟಿಷರ ದೊರೆಯಾದಾಗ ಆತನಿಗೆ 54ನೆ ವರ್ಷ. ಮತದಲ್ಲಿ ಪ್ರಾಟೆಸ್ಟೆಂಟನಾಗಿ ಹ್ಯಾನೊವರ್ ಸಂಸ್ಥಾನದಲ್ಲಿ ನಿರಂಕುಶನಾಗಿ ಆಳಿದ್ದವನು. ಆತನಿಗೆ ಇಂಗ್ಲಿಷ್ ಭಾಷೆಯೇ ಬರುತ್ತಿರಲಿಲ್ಲ. ನಡೆನುಡಿಗಳಲ್ಲಿ ಗಾಂಭೀರ್ಯವೂ ಇಲ್ಲದೆ ಬರ್ಬರನಂತಿದ್ದನು. ಗ್ರೇಟ್ ಬ್ರಿಟನ್ನಂತಹ ರಾಜ್ಯ ತನಗೆ ದೊರಕಿದಾಗ ಪರಮ ಸಂತೋಷಪಟ್ಟನು. ಆದರೆ ಬ್ರಿಟಿಷರ ವಿಶ್ವಾಸವನ್ನು ಮಾತ್ರ ಸಂಪಾದಿಸಲಾರದವನು. ಹ್ಯಾನೊವರಿನಲ್ಲಿದ್ದಾಗಲೇ ತನ್ನ ಪತ್ನಿಯೊಡನೆ ಜಗಳವಾಡಿ ಆಕೆಯನ್ನು 30 ವರ್ಷ ಕಾರಾಗೃಹದಲ್ಲಿಟ್ಟಿದ್ದನು. ಹಿರಿಯ ಮಗನಾಗಿ ಪ್ರಿನ್ಸ್ ಆಫ್ ವೇಲ್ಸ್ ಎನಿಸಿದ ಜಾರ್ಜ್ ಕುಮಾರನಿಗೂ ಈ ತಂದೆಗೂ ನಿರಂತರ ವ್ಯಾಜ್ಯವೇ.

**ಹಿರೇ ಜಾರ್ಜ್**

ಈ ಹಿರಿಯ ಜಾರ್ಜಿಗೆ ಕುದ್ರತನವು ಈರೀತಿ ಅಂಟಿಕೊಂಡಿತ್ತು. ಜರ್ಮನ್ ಜಾತಿಯ ಕೆಲವರು ಮಾತ್ರ ಆಪ್ತರೊಡನೆ ಕಾಲ ಕಳೆಯುತ್ತಲಿದ್ದು ಇಂಗ್ಲಿಷ್ ಜನರನ್ನು ಕೆಟ್ಟವರೆಂದು ಭಾವಿಸಿ ಅವರನ್ನು ರೇಗಿಸದಂತೆ ದೂರದೂರವಾಗಿದ್ದನು. ತನಗೆ ಪಟ್ಟವನ್ನು ಕೊಡಿಸಿದ ವ್ಹಿಗ್ ಪಕ್ಷದವರ ಬೆಂಬಲವನ್ನು ಮಾತ್ರ ಎಚ್ಚರಿಕೆಯಿಂದ ಕಾಪಾಡಿಕೊಂಡಿದ್ದುಬಿಟ್ಟನು. ರಾಜ್ಯಚ್ಯುತಿಯಾಗದಿದ್ದರೆ ಅಷ್ಟೇ ಸಾಕೆಂಬ ಬುದ್ಧಿಯಿಂದ ಪಾರ್ಲಿಮೆಂಟಿನವರ ವಿರೋಧವನ್ನು ರೇಗಿಸದೆ ಇದ್ದುಬಿಟ್ಟನು. ತನ್ನ ಪಟ್ಟಕ್ಕೆ ಟೋರಿಪಕ್ಷದವರು ಅಡ್ಡಿಯಾಗತಕ್ಕವರೆಂದು ತಿಳಿದಿದ್ದುದರಿಂದ ಟೋರಿಗಳನ್ನು ದೂರವಾಗಿಟ್ಟನು. ವ್ಹಿಗ್ ಪಕ್ಷದವರಿಗೇ ಮಂತ್ರಿ

ಪದವಿಯಾಯಿತು. ಆ ವ್ಹಿಗ್ ಮಂತ್ರಿಗಳೂ ಕೂಡ ರಾಜನನ್ನು ಯಾರಿಗೂ ಚನ್ನಾಗಿ ಬಾರದ ಲ್ಯಾಟಿನ್ ಭಾಷೆಯಲ್ಲಿ ಮಾತನಾಡಿಸಬೇಕಾಗಿತ್ತು.

**ಕಿರೀ ಜಾರ್ಜ್**

1727ರಲ್ಲಿ ಹಿರಿಯ ಜಾರ್ಜ್ ಮೃತನಾಗಿ ಕಿರಿಯ ಜಾರ್ಜ್ ದೊರೆಯಾದನು. ಯುವರಾಜನಾಗಿದ್ದಾಗಲೇ ತಂದೆಯೊಡನೆ ಜಗಳವಾಡಿ ಅರಮನೆಬಿಟ್ಟು ಬೇರೆಯಾಗಿದ್ದು ನೀತಿರಹಿತವಾದ ಜೀವನದಲ್ಲಿ ತೊಡಗಿದ್ದ 2ನೆ ಜಾರ್ಜನಿಗೂ ಇಂಗ್ಲಿಷ್ ಭಾಷೆ ಚೆನ್ನಾಗಿ ಬರುತ್ತಿರಲಿಲ್ಲ. ಕೆಟ್ಟ ಬೈಗಳನ್ನು ಅಲ್ಲಲ್ಲಿ ಕಲಿತು ಧಾರಾಳವಾಗಿ ಆ ಶಬ್ದಗಳನ್ನು ಉಪಯೋಗಿಸುತ್ತಲಿದ್ದನು. ಯುದ್ಧಕ್ಕೆ ಬೇಕಾದ ಗುಣಗಳೇನೋ ಈತನಲ್ಲಿದ್ದವು. ರಾಜಪದವಿಗೆ ಬೇಕಾದ ಗಾಂಭೀರ್ಯವಿರಲಿಲ್ಲ. ಈತನೂ ವ್ಹಿಗ್ ಪಕ್ಷದವರಿಗೆ ಮಾತ್ರವೇ ಆಶ್ರಯ ಕೊಟ್ಟು ಟೋರಿಗಳನ್ನು ದೂರದಲ್ಲಿಟ್ಟನು. ಪಾರ್ಲಿಮೆಂಟಿನವರ ಇಷ್ಟವನ್ನು ವಿರೋಧಿಸದಂತೆ ನಡೆದುಕೊಳ್ಳುತ್ತ ಆಡಳಿತವನ್ನು ಮಂತ್ರಿಗಳಿಗೆ ಬಿಟ್ಟುಕೊಟ್ಟನು.

**ಟೋರಿ ದೌರ್ಬಲ್ಯ**

ರಾಷ್ಟ್ರದ ಅಧಿಕಾರವೆಲ್ಲ ವ್ಹಿಗ್ಗರ ಪಾಲಾಗಲು ಟೋರಿಪಕ್ಷದವರಿಗೆ ಸಹಜವಾಗಿ ಅಸಮಾಧಾನವಾಯಿತು. ಹಿರಿಯ ಜಾರ್ಜ್ ಪಟ್ಟಕ್ಕೆ ಬಂದಕೂಡಲೆ ಸ್ಟೂಯರ್ಟ್ ವಂಶಭಕ್ತರು ಪಟ್ಟದಲ್ಲಿ 2ನೆ ಜೇಮ್ಸನ ಮಗನನ್ನು ಕುಳ್ಳಿರಿಸಲು ಪ್ರಯತ್ನಿಸಿದರು. ಆ ಪ್ರಯತ್ನ ವ್ಯರ್ಥವಾಯಿತು. ಸ್ಟೂಯರ್ಟ್ ವಂಶದವರಲ್ಲಿ ಅಭಿಮಾನ ಭಕ್ತಿಗಳುಳ್ಳವರೆಂಬ ಹೆಸರು ಟೋರಿ ಪಕ್ಷದವರಿಗೆ ಅಂಟಿಕೊಂಡಿತು. 2ನೆ ಜಾರ್ಜ್ ಕಾಲದಲ್ಲಿ ಮತ್ತೊಂದು ಜಾಕೊಬೈಟ್ ಉದ್ಯಮ ನಡೆದು ಅದೂ ಹಾಳಾಯಿತು. ಅವುಗಳ ಪರಿಣಾಮವಾಗಿ ಟೋರಿಗಳು ದುರ್ಬಲರಾದರು. ವ್ಹಿಗ್ಗರು ಪ್ರಬಲರಾದರು. 1760ರಲ್ಲಿ 3ನೆ ಜಾರ್ಜ್ ಎಂಬ ಹಟಮಾರಿ ದೊರೆ ಪಟ್ಟವನ್ನೇರಿದಾಗ ಮಾತ್ರ ಟೋರಿಗಳಿಗೆ ಅವಕಾಶ ದೊರೆಯಿತು.

1714ರಿಂದ 1760 ರವರೆಗೆ ಆಳಿದ ಇಬ್ಬರು ದೊರೆಗಳು ವ್ಹಿಗ್ ಪಕ್ಷದವರನ್ನು ಅಧಿಕಾರದಲ್ಲಿಟ್ಟು ಆಡಳಿತವನ್ನು ಅವರಿಗೇ ಬಿಟ್ಟುಕೊಟ್ಟು ತಮಗೆ ಚ್ಯುತಿಯಿಲ್ಲದಂತೆ ನಡೆದರೆ ಸಾಕೆಂದಿದ್ದರು. ವ್ಹಿಗ್ ಪಕ್ಷದವರಿಗೆ 46 ವರ್ಷಕಾಲ ಅವಿಚ್ಛಿನ್ನವಾದ ಅಧಿಕಾರಪ್ರಾಬಲ್ಯ ದೊರಕಿತು. ಆ ವರ್ಷಗಳಲ್ಲಿ ಮೆಲ್ಲಮೆಲ್ಲನೆ ಮಂತ್ರಿ ಮಂಡಲಿಯ ಸಂಪ್ರದಾಯಗಳು ನೆಲೆಯಾದವು. ಹಿಂದಿನ ಪ್ರಭುಗಳು ಮಂತ್ರಿಸಭೆಯಲ್ಲಿ ಹಾಜರಿದ್ದು ಮಂತ್ರಾಲೋಚನೆಯಲ್ಲಿ ಭಾಗವಹಿಸುತ್ತಿದ್ದರು. ಹಿರಿಯ ಕಿರಿಯ ಜಾರ್ಜ್ ದೊರೆಗಳಿಗೆ ಇಂಗ್ಲಿಷ್ ಭಾಷೆಯೇ ಬಾರದಿದ್ದುದರಿಂದ ಅವರು ಸಭೆಗೆ

ಬರುತ್ತಿರಲಿಲ್ಲ. ಆಗ ಮಂತ್ರಿಗಳು ಸಭೆ ಸೇರಿದಾಗ ತಮ್ಮಲ್ಲಿಯೇ ಅಧ್ಯಕ್ಷನೆಂದೊಬ್ಬಾತನನ್ನು ಚುನಾಯಿಸಿಕೊಳ್ಳಬೇಕಾಯಿತು. ಆ ರೀತಿಯಲ್ಲಿ ನಾಯಕನಾದವನು ಪ್ರಧಾನನಾದನು. ಸಭೆಯಲ್ಲಿ ನಡೆದ ನಿಶ್ಚಯವೇನೆಂದು ರಾಜನಿಗೆ ಆತನು ತಿಳಿಸುತ್ತಿದ್ದನು; ಮಂತ್ರಿಗಳು ನಿಶ್ಚಯಮಾಡಿದಂತೆ ದೊರೆಯೊಪ್ಪಿಕೊಳ್ಳುವ ಪದ್ಧತಿ ರೂಢಿಯಾಯಿತು. ಪ್ರಧಾನನಾದವನು ಪ್ರಬಲನಾಗುತ್ತ ತನ್ನ ಜೊತೆಗಾರರನ್ನು ತಾನೇ ಆರಿಸಿಕೊಳ್ಳಲು ಮೊದಲಿಟ್ಟನು. ತನಗೆ ವಿಧೇಯರಾಗಿರುವವರನ್ನು ಸಹಾಯಮಂತ್ರಿಗಳ ಪದವಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದನು. ಕ್ಯಾಬಿನೆಟ್ ಪದ್ಧತಿಯೆಂಬುದು ಹೀಗೆ ರೂಢಿಯಾಯಿತು.

**ಕ್ಯಾಬಿನೆಟ್ ಪದ್ಧತಿ**

ದೊರೆ ಬಿಟ್ಟುಕೊಟ್ಟ ಅಧಿಕಾರವು ಮಂತ್ರಿಮಂಡಲಿಗೆ ಸೇರಿತು. ಮಂತ್ರಿಗಳೆಲ್ಲರೂ ಪಾರ್ಲಿಮೆಂಟ್ ಸಭಿಕರಾಗಿ ಕಾಮನ್ಸ್ ಸಭೆಯ ಬಹುಪಕ್ಷದ ಬೆಂಬಲ ಪಡೆಯಬೇಕಾಗಿದ್ದುದರಿಂದ ಪಾರ್ಲಿಮೆಂಟಿನವರಿಗೇ ಅಧಿಕಾರ ಸೇರಿತು. ಆದರೆ ಪಾರ್ಲಿಮೆಂಟ್ ಸಭಿಕರೆಲ್ಲರೂ ದೊಡ್ಡ ಸಣ್ಣ ಜಮೀನ್ದಾರ ಗುಂಪಿನವರು. ಆದುದರಿಂದ ರಾಜನು ಕಳೆದುಕೊಂಡ ಅಧಿಕಾರವು ಕಡೆಗೆ ಜಮೀನ್ದಾರರ ವರ್ಗಕ್ಕೆ ಪ್ರಾಪ್ತಿಯಾಯಿತು. ಆ ವರ್ಗದಲ್ಲಿಯೂ ವ್ಹಿಗ್ಗರಾದವರು ತಮ್ಮ ಬಹುಪಕ್ಷಕ್ಕೆ ದೌರ್ಬಲ್ಯ ಬಾರದಂತೆ ನಾನಾ ಉಪಾಯಗಳನ್ನು ಪರಮಸ್ವಾರ್ಥದಿಂದ ಅವಲಂಬಿಸಬೇಕಾಯಿತು. ಸಭಿಕರ ಚುನಾವಣೆಗಳಲ್ಲಿಯೂ ಸಭೆಗಳ ಕೂಟಗಳಲ್ಲಿಯೂ ಬಾಯುಳ್ಳ ಸಭಿಕರನ್ನು ಸಮಾಧಾನಗೊಳಿಸುವುದಕ್ಕೋಸ್ಕರ ಮಂತ್ರಿಗಳು ನೀತಿರಹಿತವಾದ ಅನೇಕ ಉಪಾಯಗಳನ್ನು ಸಾಧಿಸಿದರು. ಈ ಬಗೆಯಾಗಿ ವ್ಹಿಗ್ ಮಂತ್ರಿಗಳು 45 ವರ್ಷಗಳ ಕಾಲ ತಮ್ಮ ಅಧಿಕಾರವನ್ನು ನಡೆಸಿದರು. ಅದು ವ್ಹಿಗ್ ಜಮೀನ್ದಾರ ಗುಂಪಿನ ಆಡಳಿತವಾಯಿತೇ ವಿನಾ ಜನಸಾಮಾನ್ಯರ ಪ್ರತಿನಿಧಿಗಳದಾಗಲಿಲ್ಲ.

**ವ್ಹಿಗ್ ಜಮೀನ್ದಾರ ಗುಂಪು**

## ಜಾಕೊಬೈಟ್ ದಂಗೆಗಳು

ಜಾಕೊಬೈಟರೆಂದು ಹೆಸರಾದ ಸ್ಟೂಯರ್ಟ್ ವಂಶಭಕ್ತರು ಆನ್ ರಾಣಿಯ ತರುವಾಯ ಜರ್ಮನ್ ಜಾತಿಯ ಜಾರ್ಜನ್ನು ದೊರೆಯೆಂದು ಸ್ವೀಕರಿಸಲಾರದೆ ಹೋದರು. ಆನ್ ರಾಣಿಯು ಅನಿರೀಕ್ಷಿತವಾದ ರೀತಿಯಲ್ಲಿ ಪ್ರಾಣ ಬಿಟ್ಟಾಗ ಆ ಭಕ್ತರಿಗೆ ಸೆಟ್ಲ್‌ಮೆಂಟ್ ಆಕ್ಟನ್ನು ತಿದ್ದುವ ಅವಕಾಶ ಮಾಯವಾಯಿತು. ಸಾಹಸದ ದಾರಿಯೊಂದೇ ಉಳಿಯಿತು.

ಸ್ಕಾಟ್ಲೆಂಡಿನ ಮಲೆನಾಡಿನ ಜನರಲ್ಲಿಯೇ ಸ್ಟ್ಯುಯರ್ಟ್ ಭಕ್ತಿ ದೃಢವಾಗಿತ್ತು. 1715ರಲ್ಲಿ ಸ್ಕಾಟ್ಲೆಂಡಿನ ಜಾಕೊಬೈಟರನ್ನು ಗುಂಪುಕೂಡಿಸಿ ಬಲವನ್ನು ಕಟ್ಟಲು ಅಲ್ಲಿಯ ಶ್ರೀಮಂತರಲ್ಲೊಬ್ಬನಾದ **ಮಾರ್ ಶ್ರೀಮಂತ**(Earl of Mar)ನೆಂಬಾತನು ಸಿದ್ಧನಾದನು. ರಾಜಪದವಿಗೇರಬೇಕಾಗಿದ್ದ **ಜೇಮ್ಸ್ ಕುಮಾರನೂ** (James, the Old Pretender) ಫ್ರಾನ್ಸಿನಿಂದ ಹೊರಟು ಬಂದು ಸೇರಿಕೊಳ್ಳುವಂತೆ ಏರ್ಪಾಡಾಯಿತು. **ಆರ್ಮಾಂಡಿನ ಡ್ಯೂಕ**(Duke of Ormonde)ನು ಇಂಗ್ಲಂಡಿನಲ್ಲಿ ಯಥಾಶಕ್ತಿ ಉದ್ಯಮಿಸಲೊಪ್ಪಿದನು. ಆದರೆ ಇಂಗ್ಲಂಡಿನ ಪಡುವಲ ಜಿಲ್ಲೆಗಳಲ್ಲಿ ಎದ್ದ ದಂಗೆಗೆ ಸ್ವಲ್ಪ ಜನ ಮಾತ್ರ ಸೇರಿಕೊಂಡರು. ಸ್ಕಾಟ್ಲೆಂಡಿನಲ್ಲಿಯೂ ಮಾರ್ ಶ್ರೀಮಂತನು ಏರ್ಪಡಿಸಿದ್ದಂತೆ ನಡೆಯಲಿಲ್ಲ. ಮಲೆನಾಡಿನವರನ್ನು ಕಟ್ಟಿಕೊಂಡು ಆ ಶ್ರೀಮಂತನು **ಷೆರಿಫ್‌ಮೂರ್** (Sheriffmuir) ಎಂಬೆಡೆಯಲ್ಲಿ ಹ್ಯಾನೊವರ್ ಪಕ್ಷದವರೊಡನೆ ಕಾಳಗ ನಡೆಸಿದನು. ಜಯಾಪಜಯಗಳು ನಿರ್ಣಯವಾಗದೆ ಕಾಳಗವು ಮುಗಿಯಿತು. ಆವೇಳೆಗಾಗಲೆ ಇತರೆಡೆಗಳಲ್ಲಿ ದಂಗೆಯೆದ್ದಿದ್ದವರು ಸಿಕ್ಕಿಬಿದ್ದರು. ವ್ಹಿಗ್ ಮಂತ್ರಿಗಳು ದಂಗೆಯ ಮುಖಂಡರನ್ನು ಹಿಡತರಿಸಿ ಕೆಲವರನ್ನು ಶಿರಚ್ಛೇದನಕ್ಕೆ ಗುರಿಮಾಡಿದರು. ಪ್ರಯತ್ನವು ಸುಲಭವಾಗಿಯೇ ಅಡಗಿತು.

**1715ರ ದಂಗೆ**

ಕಾಳಗ ಮುಗಿದಮೇಲೆ ಸ್ಕಾಟ್ಲೆಂಡಿನಲ್ಲಿ ಕಾಲಿಟ್ಟ ಆ ನಿರ್ಭಾಗ್ಯ ಜೇಮ್ಸ್ ಕುಮಾರನು ಉತ್ಸಾಹಿಯಾಗಿರಲಿಲ್ಲ. ದುರದೃಷ್ಟವೆಂಬುದು ತನಗೆ ಹೊಸದಲ್ಲವೆಂದು ಕೊಂಡ ಆ ಕುಮಾರನ ಚರ್ಯೆಯನ್ನು ಕಂಡವರಿಗೆ ಇದ್ದ ಉತ್ಸಾಹವೂ ತೇಲಿ ಹೋಯಿತು. ಮಾರ್ ಶ್ರೀಮಂತನ ನೇತೃತ್ವದಲ್ಲಿ ದಕ್ಷತೆ ಸಾಲದಾಗಿತ್ತು. ಇಷ್ಟಲ್ಲದೆ ಜಾಕೊಬೈಟರ ಆಶೆಯನ್ನು ಮುರಿದುದು ಫ್ರಾನ್ಸ್ ರಾಜ್ಯದ ಸ್ಥಿತಿ. 14ನೆ ಲೂಯಿ ಸತ್ತುಹೋಗಿದ್ದನು. ಆತನ ಬಳಿಕ ದೊರೆಯೆನಿಸಿದಾತನು ಇನ್ನೂ ಸಣ್ಣ ವಯಸ್ಸಿನವನು. ರೀಜೆಂಟ್ ಪದವಿಯನ್ನು ವಹಿಸಿದ್ದ **ಆರ್ಲಿಯನ್ಸ್ ಶ್ರೀಮಂತನು** (Regent, Duke of Orleans) ಇಂಗ್ಲಂಡಿನವರೊಡನೆ ವಿರೋಧ ಬೇಡವೆಂದು ನಿಶ್ಚಯಿಸಿಕೊಂಡು ಜಾಕೊಬೈಟರಿಗೆ ಯಾವ ಸಹಾಯವನ್ನೂ ಮಾಡದಾದನು. ವ್ಹಿಗ್ ಮಂತ್ರಿಗಳೂ ಕೂಡ ಚುರುಕಿನಿಂದಿದ್ದು ದಂಗೆಯನ್ನು ಪ್ರಾರಂಭದಲ್ಲಿಯೇ ಮುರಿದರು.

ಜೇಮ್ಸ್ ಕುಮಾರನು ಸ್ಕಾಟ್ಲೆಂಡ್ ಬಿಟ್ಟು ಪುನಃ ದೇಶಾಂತರ ಹೊರಟನು. 1766ರ ವರೆಗೆ ಜೀವಂತನಾಗಿದ್ದರೂ ಆತನು ಪುನಃ ಪ್ರಯತ್ನಮಾಡಲಿಲ್ಲ. ಆತನಿಗೆ ಇಬ್ಬರು ಕುಮಾರರಿದ್ದರು. ಅವರಲ್ಲಿ ಹಿರಿಯವನಾದ **ಚಾರ್ಲ್ಸ್ ಎಡ್ವರ್ಡ್** (Charles Edward) ಎಂಬಾತನು ಸ್ವಭಾವವಾಗಿ ಉತ್ಸಾಹಿ ಮತ್ತು ಸಾಹಸಿ.

ಸಮಯ ಕಾದಿದ್ದು 1745ನೆ ಇಸವಿಯಲ್ಲಿ ಪ್ರಯತ್ನವನ್ನು ಹೂಡಿದನು. ಆಗ ಇಂಗ್ಲಂಡಿಗೂ ಫ್ರಾನ್ಸಿಗೂ ಯುದ್ಧ ನಡೆಯುತ್ತಿದ್ದುದರಿಂದ ಫ್ರಾನ್ಸಿನವರು ಸಹಾಯಕೊಡಬಹುದಾಗಿದ್ದ ಕಾಲ. ಏಳು ಮಂದಿ ಮಾತ್ರರನ್ನು ಹಿಂದಿಟ್ಟುಕೊಂಡು ಸ್ಕಾಟ್ಲಂಡಿನ ವಾಯುವ್ಯದಲ್ಲಿ ಕಾಣಿಸಿಕೊಂಡು ಈ ಕುಮಾರನು ಜನರನ್ನು ಮೆಚ್ಚಿಸಿ ಅಲ್ಲಿಯ **ಕಾಮಿರಾನ್,** (Cameron) **ಮಕ್ಡಾನಲ್ಡ್,** (Macdonald) ಮುಂತಾದ ಮಲೆನಾಡಿನ ಕುಲಸ್ಥರ ಭಕ್ತಿವಿಶ್ವಾಸಗಳಿಗೆ ಪಾತ್ರನಾದನು. ಅವರನ್ನು ಗುಂಪುಕೂಡಿಸಿ **ಬಾನಿ ಪ್ರಿನ್ಸ್ ಚಾರ್ಲೀ** (Bonnie Prince Charlie) ಎಂಬ ಮುದ್ದು ಹೆಸರನ್ನು ಸಂಪಾದಿಸಿದ್ದ ಕುಮಾರನು **ಎಡಿನ್ಬರೊ**ಕಡೆಗೆ ಹೊರಟನು. ಆ ನಗರವು ವಶವಾಯಿತು. ಅನಂತರ ಹ್ಯಾನೊವರ್ ಸೈನ್ಯವನ್ನು ಎದುರುಗೊಳ್ಳಲು ಸಾಹಸದಿಂದ ದುರ್ಗಮವಾದ ಮಾರ್ಗವನ್ನು ಸಾಧಿಸಿ **ಪ್ರೆಸ್ಟನ್‌ಪ್ಯಾನ್ಸ್** ( Prestonpans ) ಎಂಬೆಡೆಯಲ್ಲಿ ವಿರೋಧಿದಳವನ್ನು ತಾಗಿ ಹತ್ತು ನಿಮಿಷಗಳು ಕಳೆಯುವುದರೊಳಗಾಗಿ ಜಯ ಪಡೆದು ಶತ್ರುಸೈನಿಕರನ್ನು ಚಲ್ಲಾಪಿಲ್ಲಿಯಾಗಿ ಚದರಿಸಿಬಿಟ್ಟನು. ಸ್ಕಾಟ್ಲಂಡಿನ ಮುಕ್ಕಾಲು ಮೂರು ವೀಸದಷ್ಟು ಭಾಗದವರು ಆತನನ್ನು ಆದರ ಸಂತೋಷಗಳಿಂದ ಸ್ವೀಕರಿಸಿದರು. ಸ್ಕಾಟ್ಲಂಡಿಗೆ ದೊರೆಯೆನಿಸಿದಂತೆ ಆಯಿತು. ಆ ಬಳಿಕ ಚಾರ್ಲಿಯು ಇಂಗ್ಲಂಡಿನಲ್ಲಿ ನುಗ್ಗಿದನು.

**1745ರ ದಂಗೆ**

ಆ ಸಮಯದಲ್ಲಿ ಲಂಡನ್ನಿನಲ್ಲಿ ಎಲ್ಲರಿಗೂ ಭಯವಿಸ್ಮಯಗಳು ತೋರಿದವು. ರಾಜಾಮಂತ್ರಿಗಳು ತಳಮಳದಲ್ಲಿದ್ದರು. ಉತ್ತರದಿಂದ ಹೊರಟ ರಾಜಕುಮಾರನು ನೇರವಾಗಿ ಲಂಡನ್ನಿಗೆ ನುಗ್ಗಿದ್ದರೆ ಏನಾಗುತ್ತಿದ್ದಿತೋ ಏನೋ ! ಆದರೆ ರಾಜಕುಮಾರನಿಗೆ ಪ್ರತಿಯಾಗಿ ಸ್ಕಾಟ್ಲಂಡಿನಲ್ಲೊಂದು ಇಂಗ್ಲಂಡಿನ ಉತ್ತರದಲ್ಲೊಂದು ಲಂಡನ್ ಬಳಿ ಮತ್ತೊಂದು ಸೈನ್ಯವಿದ್ದ ಕಾರಣದಿಂದ ರಾಜಕುಮಾರನು **ಡಾರ್ಬಿ** (Derby) ಪಟ್ಟಣದವರೆಗೆ ಬಂದಿದ್ದರೂ ಮುಂದಕ್ಕೆ ನುಗ್ಗದೆ ಹಿಂತಿರುಗಿದನು. ಇಂಗ್ಲಂಡಿಗೆ ಒದಗಿದ್ದ ವಿಪತ್ತು ಮಾಯವಾದಹಾಗಾಯಿತು. ಸ್ಕಾಟ್ಲಂಡನ್ನು ಸೇರಿದ ಬಳಿಕ ಚಾರ್ಲಿಗೂ ಹ್ಯಾನೊವರ್ ಪಕ್ಷದ ಸೈನ್ಯಕ್ಕೂ **ಫಾಲ್ಕರ್ಕ್** (Falkirk) ಎಂಬಲ್ಲಿ ಕದನವಾಯಿತು. ಚಾರ್ಲಿಯೇ ಗೆದ್ದನು. ಆದರೆ ಹ್ಯಾನೊವರ್ ಪಕ್ಷಕ್ಕೆ ಹೊಸದಂಡನಾಯಕನಾಗಿ ಬಂದ **ಕಂಬರ್ಲಂಡಿನ ಡ್ಯೂಕನು** (Duke of Cumberland) ಸಮರ್ಥನಾಗಿದ್ದನು. ಆತನು ತನ್ನ ಕಡೆ ಸೈನ್ಯವನ್ನು ಚನ್ನಾಗಿ ಶಿಕ್ಷಿಸಿಕೊಂಡು ಚಾರ್ಲಿ ಸೈನ್ಯವನ್ನು **ಕಲ್ಲೊಡೆನ್** (Culloden) ಎಂಬಲ್ಲಿ ಎದುರಿಸಿ ಭಾರಿ ಜಯವನ್ನು ಸಂಪಾದಿಸಿದನು. ಚಾರ್ಲಿಯ ಸೈನ್ಯ ದಿಕ್ಕಾಪಾಲಾಗಿ ಚದರಿತು. ಕೈಗೆ ಸಿಕ್ಕಿದವರನ್ನೆಲ್ಲ ಕಂಬರ್ಲಂಡ್ ಶ್ರೀಮಂತನು ದಯಾದಾಕ್ಷಿಣ್ಯಗಳಿಲ್ಲದೆ ಬಲಿಯಿಟ್ಟನು. ಈ ಶ್ರೀಮಂತನು ತೋರಿದ ಕ್ರೌರ್ಯದಿಂದ ದಂಗೆಯೆನ್ನುವುದು ಧ್ವಂಸವಾಯಿತು.

ಚಾರ್ಲಿಕುಮಾರನು ಪ್ರಾಣವನ್ನುಳಿಸಿಕೊಂಡು ದೇಶಾಂತರವನ್ನು ತಲಪುವುದೇ ಅತಿ ಕಷ್ಟವಾಯಿತು.

ತಲೆತಪ್ಪಿಸಿಕೊಂಡು ಹೊರಟ ಚಾರ್ಲಿ ಪುನಃ ಪ್ರಯತ್ನಮಾಡಲಿಲ್ಲ. ಫ್ರಾನ್ಸಿನಲ್ಲಿರುತ್ತ 1788 ರವರೆಗೆ ಬದುಕಿದ್ದನು. ಇತ್ತ ಸ್ಕಾಟ್ಲೆಂಡಿನಲ್ಲಿ ಹೈಲಂಡರ್ ಜನರೆಲ್ಲ ಕಷ್ಟಕ್ಕೆ ಸಿಕ್ಕಿದರು. ಇಂಗ್ಲಿಷ್ ಸರ್ಕಾರದವರು ಅವರ ಆಯುಧಗಳೆಲ್ಲವನ್ನು ಕಿತ್ತುಕೊಂಡುಬಿಟ್ಟರು. ಕಾಲಕ್ರಮದಲ್ಲಿ ಆ ಮಲೆನಾಡಿನವರು ತಮ್ಮ ಪ್ರತ್ಯೇಕತೆಯನ್ನು ಮರೆತು ಬ್ರಿಟಿಷರ ಗುಂಪಿನಲ್ಲಿ ಸೇರಿಕೊಂಡರು. ಕುಲಾಭಿಮಾನವೇ ಸರ್ವಸ್ವವಲ್ಲವೆಂದು ತಿಳಿದರು.

**ಮಲೆನಾಡಿನ ಶಾಂತಿ**

## ವ್ಹಿಗ್ ಮಂತ್ರಿಗಳ ಆಡಳಿತ—ಸ್ಟಾನ್ಹೋಪ್
### 1714–1720

ಹ್ಯಾನೊವರ್ ಸಂಸ್ಥಾನದ ಜಾರ್ಜ್ ದೊರೆಯೆನಿಸಿದ ಕೂಡಲೆ ಟೋರಿಗಳೆಲ್ಲ ದುರ್ಬಲರಾದರು. ವ್ಹಿಗ್ ಪಕ್ಷದ **ಟೌನ್ಷೆಂಡ್** (Townshend), **ವಾಲ್ಪೋಲ್** (Walpole), **ಸ್ಟಾನ್ಹೋಪ್** (Stanhope), **ಸಂಡರ್ಲಂಡ್** (Sunderland) ಮುಂತಾದವರು ದೊರೆಗೆ ಬೇಕಾದವರೆನಿಸಿ ಮಂತ್ರಿಗಳಾದರು. ಪಾರ್ಲಿಮೆಂಟ್ ಸಭೆಯಲ್ಲಿಯೂ ವ್ಹಿಗ್ಗರದೇ ಬಹುಪಕ್ಷವಾಯಿತು. ಟೋರಿ ಪಕ್ಷದವರು ಯುಟ್ರೆಕ್ಟ್ ಕರಾರಿನ ವೇಳೆಯಲ್ಲಿ ಕೆಲಸಕೆಡಿಸಿದರೆಂಬ ಆಪಾದನೆಗೊಳಗಾದರು. 1715ರಲ್ಲಿ ನೆರೆದ ಪಾರ್ಲಿಮೆಂಟ್ ಸಭೆಯವರು ಅದರ ವಿಚಾರಣೆನಡೆಸಿದರು. ಆಗ ಬಾಲಿಂಗ್ಬ್ರೋಕ್, ಆರ್ಮಂಡ್ ಶ್ರೀಮಂತರು ಫ್ರಾನ್ಸಿಗೆ ಹೊರಟು ಅಲ್ಲಿ ಜಾಕೊಬೈಟರನ್ನು ಸೇರಿಕೊಂಡು ಸ್ಟೂಯರ್ಟ್ ರಾಜಪಿಳ್ಳೆಯನ್ನು ದೊರೆತನಕ್ಕೇರಿಸುವ ಪಿತೂರಿಯಲ್ಲಿ ತೊಡಗಿದರು. ಆ ರಾಜಕುಮಾರನು ರೋಮರ್ಕ್ಯಾಥಲಿಕ್ ಮತವನ್ನು ಬಿಡಲೊಲ್ಲದಿದ್ದುದರಿಂದ ಆ ಪಿತೂರಿಗೆ ಇಂಗ್ಲೆಂಡಿನಲ್ಲಿ ಸಹಾಯ ದೊರಕಲಿಲ್ಲ. ಸ್ಕಾಟ್ಲೆಂಡಿನಲ್ಲಿ ಮಾತ್ರ ಕಾರಣಾಂತರದಿಂದ ಜಾಕೊಬೈಟ್ ದಂಗೆಯೆದ್ದು ಸ್ವಲ್ಪಕಾಲದಲ್ಲಿಯೇ ಅಡಗಿತು.

**ಟೋರಿಗಳಿಗೆ ಗ್ರಹಣ**

ದಂಗೆ ನಿಂತಕೂಡಲೆ ವ್ಹಿಗ್ಗರು ಯೋಚನೆಮಾಡಿ ತಮ್ಮ ಪಕ್ಷದ ಪ್ರಾಬಲ್ಯವೇ ಸ್ಥಿರವಾಗುವಂತೆ 1716ರಲ್ಲಿ **ಸೆಪ್ಟೆನಿಯಲ್ ಆಕ್ಟ್** (Septennial Act) ಎಂಬ ಕಾನೂನನ್ನು ರಚನೆಮಾಡಿದರು. ಇದ್ದ ಪಾರ್ಲಿಮೆಂಟ್ ಸಭೆಗೆ ಅದರಿಂದ

ಆಯುಸ್ಸು ಹೆಚ್ಚಿತು; ವ್ಹಿಗ್ಗರ ಪ್ರಾಬಲ್ಯಕ್ಕೆ ಆತಂಕವಿಲ್ಲದಾಯಿತು. ಹೊಸ ಚುನಾವಣೆಗಳು ನಡೆದಿದ್ದರೆ ಆ ಪ್ರಾಬಲ್ಯ ತಪ್ಪುತ್ತಿತ್ತೋ ಏನೋ! ಒಂದು ಬಾರಿ ಚುನಾವಣೆಯಾಗಿ ಸೇರಿದ ಸಭೆಗೆ ಮೂರು ವರ್ಷ ಮಾತ್ರ ಪರಮಾವಧಿಯಾಗಿದ್ದುದು ಏಳು ವರ್ಷಗಳ ಅವಧಿಯಾಗಬಹುದೆಂದು ಕಾನೂನಿಂದ ಏರ್ಪಟ್ಟಿತು. ಆ ಕಾನೂನಿಂದ ವ್ಹಿಗ್ಗರ ಸ್ಥಾನ ಭದ್ರವಾದುದಲ್ಲದೆ ಹ್ಯಾನೊವರ್ ವಂಶಸ್ಥರ ದೊರೆತನವೂ ಭದ್ರಗೊಂಡಿತು.

ಒಳಾಡಳಿತದಲ್ಲಿ ಒಟ್ಟಾಗಿ ವರ್ತಿಸಿದ ವ್ಹಿಗ್ ನಾಯಕರು ಹೊರಗಿನ ವಿಚಾರಗಳಲ್ಲಿ ಒಟ್ಟಾಗಿ ವರ್ತಿಸದಾದರು. ಸ್ಟಾನ್ಹೋಪ್ ಸಂಡರ್ಲ್ಯಾಂಡ್ ಎಂಬಿಬ್ಬರು ಒಂದುಜೋಡಿ ಯಾದರು; ಅವರಿಗೆ ವಿರೋಧವಾಗಿ ಟೌನ್ಷೆಂಡ್ ಮತ್ತು ವಾಲ್ಪೋಲ್ ಎಂಬಿಬ್ಬರು ಅಭಿಪ್ರಾಯಪಟ್ಟರು. ಆ ವೇಳೆ ಯಲ್ಲಿ ಸ್ಟಾನ್ಹೋಪ್ ಎಂಬಾತನೇ ದೊರೆಗೆ ವಿಶ್ವಾಸಪಾತ್ರ ನಾಗಿದ್ದುದರಿಂದ ಟೌನ್ಷೆಂಡ್ ವಾಲ್ಪೋಲರಿಬ್ಬರು ಅಧಿಕಾರವನ್ನು ಕಳೆದುಕೊಳ್ಳ ಬೇಕಾಯಿತು. ವ್ಹಿಗ್ ಪಕ್ಷದಲ್ಲಿ ಈ ಒಡಕು 1717ರಲ್ಲಿ ಹುಟ್ಟಿತು.

**ವ್ಹಿಗ್ಗರಲ್ಲಿ ಒಡಕು**

ಯುಟ್ರೆಕ್ಟ್ ಕರಾರಿನ ತರುವಾಯ ಫ್ರಾನ್ಸ್ ರಾಜ್ಯದಲ್ಲಿ 14ನೆ ಲೂಯಿ ಸತ್ತ ನಷ್ಟೆ. ಆತನ ತರುವಾಯ ಪಟ್ಟಕ್ಕೆ ಗೊತ್ತಾದ 15ನೆ ಲೂಯಿಗೆ ಇನ್ನೂ ಚಿಕ್ಕ ವಯಸ್ಸಾದುದರಿಂದ ಆತನ ಚಿಕ್ಕಪ್ಪನಾದ **ಆರ್ಲಿಯನ್ಸ್ ಶ್ರೀಮಂತನು** (Philip, Duke of Orleans) **ರೀಜೆಂಟ್** ಎಂದು ಗೊತ್ತಾಗಿತ್ತು. ಆ ಹುಡುಗನಿಲ್ಲದೆ ಹೋದಪಕ್ಷದಲ್ಲಿ ತನಗೇ ದೊರೆತನವಾದೀತೆಂದು ಆಸೆಪಡುತ್ತಿದ್ದ ರೀಜೆಂಟನ ಮನಸ್ಸಿನಲ್ಲಿ ಸ್ಪೈನ್ ದೊರೆಯನ್ನು ದೂರವಾಗಿಟ್ಟಿರಬೇಕೆಂಬ ಉದ್ದೇಶವಿತ್ತು. ಈ ರೀತಿ ಯಲ್ಲಿ ಒಂದೇ ವಂಶದವರಾದರೂ ಫ್ರಾನ್ಸಿನ ರೀಜೆಂಟ್ ಫಿಲಿಪ್ಪನು ಸ್ಪೈನಿನ ದೊರೆ ಫಿಲಿಪ್ಪನನ್ನು ಅಂತರಂಗದಲ್ಲಿ ಶತ್ರುವೆಂದು ಭಾವಿಸಿದ್ದನು. ಸ್ಪೈನ್ ರಾಜ್ಯಕ್ಕಂತೂ ಯುಟ್ರೆಕ್ಟ್ ಕರಾರಿನಿಂದ ಭಾರಿ ನಷ್ಟವಾಗಿ ಹೋಗಿತ್ತು. ಹೇಗಾದರೂಮಾಡಿ ಆ ಕರಾರನ್ನು ಬದಲಾಯಿಸಿಕೊಳ್ಳುವ ಆಸೆ ಸ್ಪೈನ್ ರಾಜನಿಗೂ ಆತನ ಮಂತ್ರಿಗೂ ಸಹಜವಾಗಿತ್ತು; ಅಲ್ಲಿಗೆ ಮಂತ್ರಿಯಾಗಿದ್ದ **ಕಾರ್ಡಿನಲ್ ಆಲ್ಬೆರೋನಿ** (Cardinal Alberoni) ಎಂಬಾತನು ಸಂಧಾನಚತುರನಾಗಿದ್ದನು. ಹಿಂದೆ ತಮಗೆ ಸೇರಿದ್ದ ಇಟಲಿಯ ಭಾಗಗಳನ್ನು ಆಸ್ಟ್ರಿಯದ ಹಿಡಿತದಿಂದ ತಪ್ಪಿಸಿ ಪುನಃ ಪಡೆಯುವ ಪ್ರಯತ್ನಮಾಡಿದಲ್ಲಿ ಬ್ರಿಟನ್ನಿನವರು ವಿರೋಧಿಗಳಾಗುವರೆಂದು ಸ್ಪೈನಿನವರಿಗೆ ತಿಳಿದಿತ್ತು. ಕರಾರನ್ನುಳಿಸಿ ಕೊಳ್ಳುವುದೇ ಬ್ರಿಟನ್ನಿಗೆ ಬೇಕಾಗಿತ್ತು. ಏಕೆಂದರೆ ಬ್ರಿಟನ್ನಿಗೆ ಅದರಿಂದ ಅನುಕೂಲ ವಾಗಿತ್ತು. ನಷ್ಟವಾಗಿದ್ದುದು ಫ್ರಾನ್ಸ್ ಮತ್ತು ಸ್ಪೈನ್ ರಾಜ್ಯಗಳಿಗೆ. ಆ ಎರಡು

**ಯುಟ್ರೆಕ್ಟ್ ತರುವಾಯ**

ರಾಜ್ಯಗಳೂ ಒಂದುಗೂಡಬೇಕಾಗಿದ್ದ ಕಾಲ; ಆದರೆ ರೀಜೆಂಟಿನ ಆಸೆ ಅನ್ಯಥಾ ಇದ್ದುದರಿಂದ ಫ್ರಾನ್ಸ್ ಬ್ರಿಟನ್ನೊಂದಿಗೆ ಸೇರಿಕೊಂಡಿತು. ಬ್ರಿಟನ್ನೇ ಮುಖ್ಯ ವಿರೋಧಿಯೆಂಬುದನ್ನು ತಿಳಿದ ಆಲ್ಬೆರೋನಿಯು ಯೂರೋಪಿನಲ್ಲಿ ಬ್ರಿಟಿಷರಿಗೆ ವಿರೋಧಿಗಳಾಗುವಂತೆ ಸ್ವೀಡ್, ರಷ್ಯಾ ಮುಂತಾದ ದೊಡ್ಡ ರಾಜ್ಯಗಳ ಪ್ರಭುಗಳನ್ನು ಪ್ರೇರಿಸುತ್ತಿದ್ದನು. ಅಂತಹ ಸಂದರ್ಭದಲ್ಲಿ ಹ್ಯಾನೊವರ್ ಸಂಸ್ಥಾನಕ್ಕೂ ಸ್ವೀಡೆನ್ನಿಗೂ ಜಗಳವಾದೀತೆಂಬ ಶಂಕೆಯಿಂದ ಜಾರ್ಜ್‌ದೊರೆ ತವಕಪಟ್ಟನು. ಸ್ಟಾನ್ಹೋಪ್ ಮಂತ್ರಿಯು ಸಂಧಾನ ನಡೆಸಿ 1717ರಲ್ಲಿ ಬ್ರಿಟನ್, ಫ್ರಾನ್ಸ್ ಮತ್ತು ಹಾಲಂಡ್ ದೇಶಗಳನ್ನು ಒಟ್ಟುಗೂಡಿಸಿ ಯುಟ್ರೆಕ್ಟ್ ಕರಾರಿಗೆ ಭಂಗಬಾರದಂತೆ ರಕ್ಷಿಸುವುದಕ್ಕಾಗಿ ವ್ಯೂಹಕಟ್ಟಿದನು. ಇದಕ್ಕೆ **ಟ್ರಿಪ್ಲ್ ಅಲಯನ್ಸ್** (Triple Alliance) ಎಂದು ಹೆಸರು. ಅತ್ತ ಸ್ಪೈನಿನವರು ಸಿಸಿಲಿ ದ್ವೀಪವನ್ನು ಮುತ್ತಿ ವಶಪಡಿಸಿಕೊಂಡರು; ಅದನ್ನು ಕಳಕೊಂಡ ಆಸ್ಟ್ರಿಯದ ಚಕ್ರವರ್ತಿ ಚಾರ್ಲ್ಸ್ (Charles VI) ಬ್ರಿಟನ್ನಿನವರ ಸ್ನೇಹಕ್ಕೆ ಆಸೆಪಡುವಂತಾಯಿತು. 1718ರಲ್ಲಿ ವ್ಯೂಹಕ್ಕೆ ಚಾರ್ಲ್ಸ್ ಸೇರಿದನು; **ಕ್ವಾಡ್ರುಪ್ಲ್ ಅಲಯನ್ಸ್** (Quadruple Alliance) ಆಯಿತು, ಮೂವರ ಕೂಟ ನಾಲ್ವರದಾಯಿತು. ಇಂಗ್ಲಿಷರ ನೌಕಾ ಪಡೆಯನ್ನು ನಡೆಸಿ **ನೌಕಾಪತಿ ಬಿಂಗ್** (Admiral Byng) ಭೂಮಧ್ಯಸಮುದ್ರದಲ್ಲಿ ಪ್ರವೇಶಿಸಿ **ಪಸ್ಸಾರೋ** (Cape Passaro) ಭೂಶಿರದ ಹತ್ತಿರ ಸ್ಪೈನಿನ ನೌಕೆಗಳನ್ನು ನಾಶಮಾಡಿದನು. ಸ್ಪೈನಿನೊಂದಿಗೆ ಇನ್ನೊಮ್ಮೆ ದೊಡ್ಡಯುದ್ಧ ಮೊದಲಾದಂತಿತ್ತು. ಆದರೆ ಮುಂದಿನ ವರುಷ 1719ರಲ್ಲಿ ಆಲ್ಬೆರೋನಿ ಸ್ಥಾನಭ್ರಷ್ಟನಾದನು. ಸ್ಪೈನಿನ ರಾಜನು ಒಪ್ಪಂದಮಾಡಿಕೊಂಡನು. ಆದರೆ ಬ್ರಿಟಿಷರಿಗೂ ಸ್ಪಾನಿಷರಿಗೂ ಮನಸ್ತಾಪ ಮಾತ್ರ ನಿಲ್ಲಲಿಲ್ಲ.

ಟ್ರಿಪ್ಲ್ ಅಲಯನ್ಸ್ ಎಂಬ ವ್ಯೂಹವನ್ನು ಸ್ಟಾನ್ಹೋಪ್ ರಚಿಸಿದಾಗ ಅದಕ್ಕೆ ಟೌನ್ಷೆಂಡ್ ಒಪ್ಪಲಿಲ್ಲ. ಯುದ್ಧವಾಗದಂತೆ ನೆರವೇರಿಸುವ ಉದ್ದೇಶವನ್ನಿಟ್ಟುಕೊಂಡಿದ್ದ ವಾಲ್ಪೋಲನಿಗೂ ವಿದ್ಯಮಾನಗಳು ಸರಿಬೀಳಲಿಲ್ಲ. ಆದ್ದರಿಂದ ಇಬ್ಬರೂ ಅಧಿಕಾರವನ್ನು 1717ರಲ್ಲಿಯೇ ಬಿಟ್ಟುಕೊಟ್ಟರು. 1717 ರಿಂದ 1721ರ ವರೆಗೆ ಸ್ಟಾನ್ಹೋಪನೇ ಮಂತ್ರಿಯಾಗಿದ್ದನು. 1720ರಲ್ಲಿ ನಡೆದ ಒಂದಾನೊಂದು ಕಂಪನಿಯ ಭಂಗದಿಂದ ಸ್ಟಾನ್ಹೋಪನ ಪ್ರಾಬಲ್ಯ ಕೆಟ್ಟಿತು.

**ಸ್ಟಾನ್ಹೋಪ್**

1711ರಲ್ಲಿ ಸೌತ್ ಸೀ ಕಂಪನಿಯೆಂಬುದು ಸ್ಥಾಪಿತವಾಗಿತ್ತು. ದಕ್ಷಿಣ ಅಮೆರಿಕದ ಒತ್ತಿನಲ್ಲಿರುವ ದ್ವೀಪಗಳ ಬಳಿ ಹಡಗುಗಳನ್ನೋಡಾಡಿಸಿ ವ್ಯಾಪಾರ ಮಾಡಿ ಲಾಭ ಸಂಪಾದಿಸುತ್ತಿದ್ದ ಆ ಕಂಪನಿಗೆ ಯುಟ್ರೆಕ್ಟ್ ಕರಾರಿನಿಂದ ಲಬ್ಧವಾದ ಅನುಕೂಲಗಳು ದೊರೆತಿದ್ದವು. 1717ರಲ್ಲಿ ಆ ಕಂಪನಿಯ ಡೈರೆಕ್ಟರುಗಳು ತಮ್ಮ ಬಂಡವಾಳವನ್ನು

ಹೆಚ್ಚಿಸಿಕೊಳ್ಳಲು ಒಂದು ಯೋಚನೆ ನಡೆಸಿದರು. ಮಂತ್ರಿಗಳೂ ಕಂಪನಿಯ ಷೇರುದಾರರಾಗಿದ್ದುದರಿಂದ ಮಂತ್ರಿಗಳ ಬೆಂಬಲ ಸಿಗುವಂತಿತ್ತು. ಇಂಗ್ಲಂಡಿನ ಬ್ಯಾಂಕಿನಲ್ಲಿ ಠೇವಣಿಯಾಗಿರುತ್ತಿದ್ದ ಸರ್ಕಾರದ ಹಣವನ್ನು ಕಂಪನಿಯಲ್ಲಿಯೇ ಠೇವಣಿಯಿಡಬೇಕೆಂದು ಡೈರೆಕ್ಟರುಗಳು ಕೇಳಲು ಮಂತ್ರಿಗಳು ಅದಕ್ಕೊಪ್ಪಿದರು. ರಾಷ್ಟ್ರೀಯ ಸಾಲದ ಪತ್ರಗಳನ್ನು ತೆಗೆದುಕೊಂಡು ಅವುಗಳಿಗೆ ಬದಲಾಗಿ ಹೆಚ್ಚು ಲಾಭದಾಯಕವಾದ ತಮ್ಮ ಷೇರುಗಳನ್ನು ಕೊಡುವುದಕ್ಕೂ ಡೈರೆಕ್ಟರುಗಳು ಸಿದ್ಧರಾದರು. ಸರ್ಕಾರದವರ ಬೆಂಬಲವಿದಕ್ಕುಂಟೆಂದು ತಿಳಿದಬಳಿಕ ಧನವಂತರೆಲ್ಲರೂ ಈ ಕಂಪನಿಯ ಷೇರುಗಳನ್ನು ಕೊಳ್ಳಲು ಆತುರಪಟ್ಟರು. ಷೇರುಗಳ ಬೆಲೆ ಅತಿಯಾಗಿ ಏರಿತು. ಆಗ ಷೇರುಗಳನ್ನು ಕೊಳ್ಳಲು ಕೈಲಿ ಹಣ ಹಿಡಿದು ಅನೇಕರು ಓಡಾಡುತ್ತಿದ್ದರು. ಆ ಜನರನ್ನು ನೋಡಿದ ಕೆಲವರು ಮೋಸಗಾರರು ಮೋಸದ ಕಂಪನಿಗಳನ್ನು ಕಟ್ಟಿದರು. ಒಂದೆರಡು ದಿನಗಳಲ್ಲಿ ಆ ಕಂಪನಿಗಳು ಹಾಳಾದವು. ಅವುಗಳಲ್ಲಿ ಷೇರುದಾರರಾಗಿದ್ದವರ ಹಾಹಾಕಾರವನ್ನು ಕೇಳಿದವರು ತಮ್ಮಲ್ಲಿದ್ದ ಸೌತ್ ಸೀ ಕಂಪನಿಯ ಷೇರುಗಳನ್ನು ಮಾರಲು ಆತುರಪಟ್ಟರು. ಎಲ್ಲರೂ ಮಾರುವವರೇ ಆದ್ದರಿಂದ ಷೇರುಗಳ ಬೆಲೆ ಬಿದ್ದುಹೋಯಿತು. ಅನೇಕರು ನಷ್ಟಪಟ್ಟರು. ಒಳಗೊಳಗೆ ಏನೋ ನಡೆದಿರಬೇಕೆಂದು ಕೂಗೆದ್ದಿತು. ವಿಚಾರಣಾ ಮಂಡಲಿಯೊಂದು ಗೊತ್ತಾಯಿತು. ರಾಷ್ಟ್ರೀಯ ಸಾಲ (National Debt)ದ ಪತ್ರಗಳನ್ನು ಷೇರುಗಳಿಗೆ ಬದಲಾಯಿಸಿಕೊಳ್ಳುವ ವೇಳೆಯಲ್ಲಿ ಮಂತ್ರಿಗಳಲ್ಲಿ ಕೆಲವರು ಲಂಚತಿಂದಿದ್ದರೆಂದು ಬಯಲಾಯಿತು. ಒಬ್ಬ ಮಂತ್ರಿ ಆತ್ಮಹತ್ಯಮಾಡಿಕೊಂಡನು; ಕೆಲವರು ಮಂತ್ರಿಗಳು ಅಧಿಕಾರಭ್ರಷ್ಟರಾದರು. ಇದಾದ ಸ್ವಲ್ಪಕಾಲದಲ್ಲಿಯೇ ಸ್ಟಾನ್ಹೋಪ್ ಮಂತ್ರಿಯು 1721ರಲ್ಲಿ ಆಕಸ್ಮಿಕವಾಗಿ ತೀರಿಕೊಂಡನು. ವಾಲ್ಪೋಲ್ ಪುನಃ ಮಂತ್ರಿಯಾಗುವ ಸಂದರ್ಭವೊದಗಿತು. ಅವಾಂತರದ ಸಂಗತಿ ಸಂಭವಿಸುವ ಮೊದಲೇ ವಾಲ್ಪೋಲ್ ಮಂತ್ರಿತನ ಬಿಟ್ಟಿದ್ದನು. ವ್ಹಿಗ್ ಪಕ್ಷದವರನ್ನೇ ಬಯಸುತ್ತಿದ್ದ ದೊರೆ ವಾಲ್ಪೋಲನನ್ನು ಮಂತ್ರಿಯಾಗಿ ಗೊತ್ತುಮಾಡಿದನು. ಲೆಕ್ಕಾಚಾರದಲ್ಲಿ ನಿಪುಣನೆನಿಸಿದ್ದುದರಿಂದ ಆ ಸಮಯಕ್ಕೆ ತಕ್ಕ ಮಂತ್ರಿಯೂ ಆಗಿದ್ದನು.

**ಸೌತ್ ಸೀ ಕಂಪನಿ ಅವಾಂತರ**

**ವಾಲ್ಪೋಲನಿಗೆ ಅಧಿಕಾರ**

## ಸರ್ ರಾಬರ್ಟ್ ವಾಲ್ಪೋಲ್ (1721-1742)

ನಾರ್ಫೋಕ್ ಜಿಲ್ಲೆಯಲ್ಲಿ ಒಬ್ಬ ಜಮೀನ್ದಾರನಾಗಿದ್ದ ಈತನು ತಕ್ಕಮಟ್ಟಿಗೆ ಶಿಕ್ಷಣವನ್ನು ಪಡೆದು ಒಳ್ಳೆಯವನೆನಿಸಿದ್ದನು. ಸುಧಾರಣೆಗಳನ್ನು ನಡೆಸಬೇಕೆಂದಾಗಲಿ

ನೀತಿನಿಯಮಗಳನ್ನು ನಿಷ್ಠೆಯಿಂದ ಅನುಸರಿಸಬೇಕೆಂದಾಗಲಿ ಆತನಿಗಿರಲಿಲ್ಲ. ಘನವಾದ ಉದ್ದೇಶವಾವುದನ್ನೂ ಆತನು ಪೋಷಿಸಲಿಲ್ಲ. ಆದರೆ ಒಳ್ಳೆ ಉದ್ಯೋಗಿ, ನಿದಾನಸ್ಥ, ಲೆಕ್ಕಾಚಾರದಲ್ಲಿ ನಿಪುಣ. ಇಂಗ್ಲೆಂಡಿನ ವ್ಯಾಪಾರ ಬೆಳೆದು ಆ ಮೂಲಕ ಐಶ್ವರ್ಯ ಹೆಚ್ಚಬೇಕೆಂಬುದೇ ಆತನ ಉದ್ದೇಶ. ಮಂತ್ರಿತನಕ್ಕೇರಿದ ಮೇಲೆ ಅದಷ್ಟು ಕಾಲ ಅಧಿಕಾರವನ್ನನುಭವಿಸಿದನು. 1720ರಲ್ಲಿ ಮಂತ್ರಿಯಾದವನು 1742ರ ವರೆಗೆ ಜಿಗಣೆಯಂತೆ ಆ ಪದವಿಗೆ ಅಂಟಿಕೊಂಡಿದ್ದನು.

**ಉದ್ದೇಶ**

ಸ್ಟಾನ್‌ಹೋಪ್ ನಡೆಸಿದ ಟ್ರಿಪ್ಲ್ ಅಲಯನ್ಸ್ ಸರಿಬೀಳದೆ ವಾಲ್ಪೋಲ್ ಹಿಂದೆ ರಾಜಿನಾಮೆ ಕೊಟ್ಟಿದ್ದನಷ್ಟೆ. ಆ ಬಗೆಯ ವ್ಯಾಪಸನ್ನಾಹಗಳಾವುವೂ ಇಲ್ಲದೆ ಯುಟ್ರೆಕ್ಟ್ ಷರತ್ತುಗಳನ್ನು ಪಾಲಿಸಿಕೊಂಡು ಬರಬಹುದಾಗಿತ್ತೆಂದು ಈತನೂ ಟೌನ್ಷೆಂಡೆಂಬಾತನೂ ಅಭಿಪ್ರಾಯಪಟ್ಟವರು. ಯುದ್ಧಕ್ಕೂ ಜಗಳಕ್ಕೂ ಅವಕಾಶವಿಲ್ಲದೆ ಸಂಧಿಸಂಧಾನಗಳನ್ನು ನಡೆಸಿಕೊಳ್ಳುವುದು ಈತನ ಚಾಳಿ. "ತೂಕಡಿಸುವವರನ್ನು ಎಚ್ಚರಗೊಳಿಸಬಾರದು" ಎಂಬುದು ಈತನ ಪಲ್ಲವಿ. ಸ್ವಲ್ಪಕಾಲದಲ್ಲಿ ಟೌನ್ಷೆಂಡ್ ನಿವೃತ್ತನಾಗಲು ವಾಲ್ಪೋಲ್ ತಾನೇತಾನಾದನು. ಮಂತ್ರಿಯಾಗಿದ್ದ ಇಪ್ಪತ್ತೆರಡು ವರುಷಕಾಲ ಯಾವ ಭಾರಿ ಯುದ್ಧದಲ್ಲಿಯೂ ಇಂಗ್ಲಂಡ್ ಸಿಕ್ಕಿಕೊಳ್ಳದಿದ್ದುದಕ್ಕೆ ಈತನ ಉಪಾಯವೇ ಕಾರಣ. 1720ರಲ್ಲಿ ಕ್ವಾಡ್ರುಪ್ಲ್ ಅಲಯನ್ಸ್ ಆಚರಣೆಯಲ್ಲಿತ್ತು. ಆದರೆ ಹಲಕೆಲವರ್ಷಗಳಲ್ಲಿ ಸ್ಪೈನ್ ಮತ್ತು ಆಸ್ಟ್ರಿಯಗಳೆರಡೂ ಒಟ್ಟುಗೂಡಿ ಯುಟ್ರೆಕ್ಟಿನ ಷರತ್ತುಗಳನ್ನು ಮುರಿಯಲು ಸನ್ನಾಹಗೊಂಡವು. ಆಗ ಫ್ರಾನ್ಸಿನ ಸ್ನೇಹವನ್ನು ಕಾಪಾಡಿಕೊಂಡು ವಾಲ್ಪೋಲ್ ಯುದ್ಧ ರೇಗದಂತೆ ಉಪಾಯವಾಗಿ ಕಾಲ ತಳ್ಳಿದನು.

**ಶಾಂತಿಸಾಧನೆ**

1725ರಲ್ಲಿ ಒಂದು ಯುದ್ಧ ಸಂಭವಿಸಿತು. ಆ ಯುದ್ಧ ಮುಗಿದಮೇಲೆ ಸ್ಪೈನ್ ಆಸ್ಟ್ರಿಯಗಳಿಗೆ ಇಟಲಿಯಭಾಗಗಳಿಗಾಗಿ ಪುನಃ ಜಗಳವೂ ಹೊಡೆದಾಟವೂ ರೇಗಿತು. ಆಗ ಜಾಣತನದಿಂದ ತಟಸ್ಥನಾಗಿದ್ದು ವಾಲ್ಪೋಲ್ "ಈ ವರ್ಷ ಯೂರೋಪಿನಲ್ಲಿ 10,000 ಪ್ರಾಣಗಳು ಯುದ್ಧದಲ್ಲಿ ಹೋದವು, ಇಂಗ್ಲಿಷ್ ಪ್ರಾಣವೊಂದಾದರೂ ಆ ರೀತಿ ಹೋಗಲಿಲ್ಲ" ಎಂದು ಹೆಮ್ಮೆಯಿಂದ ಹೇಳಿಕೊಂಡನು. ಆದರೆ ಅಷ್ಟು ಕಾಲವೂ ಸ್ಪೈನ್ ಮತ್ತು ಇಂಗ್ಲಂಡ್ ಎರಡಕ್ಕೂ ಅಮೆರಿಕಾ ಕ್ಷೇತ್ರಗಳಲ್ಲಿ ವ್ಯಾಪಾರಸಂಬಂಧವಾಗಿ ಮನಸ್ತಾಪಗಳು ಬೆಳೆಯುತ್ತಲೇ ಇದ್ದವು. ನಾವಿಕರೂ ವರ್ತಕರೂ ವ್ಯಾಜ್ಯವಾಡುತ್ತಲೇ ಇದ್ದರು. 1730ರ ತರುವಾಯ ಫ್ರಾನ್ಸಿನ ರೀಜೆಂಟನ ಅಂತರಂಗದ ಆಸೆಗೆ ಆಧಾರವಿಲ್ಲವಾಯಿತು; ವಯಸ್ಕನಾಗಿದ್ದ 15ನೆ ಲೂಯಿ

ದೃಢಾಂಗಿಯಾಗಿಬೆಳೆದಿದ್ದನು. 1733ರಲ್ಲಿ ಫ್ರಾನ್ಸ್ ಗೋಪ್ಯವಾಗಿ ಸ್ಪೈನೊಂದಿಗೆ ಸೇರಿಕೊಂಡಿತು; ಬೋರ್ಬನ್ ವಂಶದ ದೊರೆಗಳಿಬ್ಬರೂ ತಮ್ಮ **ಬಂಧುತ್ವ** ದೊಡ್ಡದೆಂದು **ಆಪ್ತತೆ** ಕಟ್ಟಿದರು (Family Compact). ಅಲ್ಲಿಂದ ಮುಂದೆ ವಾಲ್ಪೋಲನಿಗೆ ಕಷ್ಟವಾಯಿತು. ಸ್ಪಾನಿಷ್ ಮತ್ತು ಇಂಗ್ಲಿಷ್‌ವರ್ತಕರ ಕಲಹಗಳು ದಿನೇದಿನೇ ಹೆಚ್ಚಿದವು. ಸ್ಪಾನಿಷರೊಂದಿಗೆ ಯುದ್ಧಮಾಡಬೇಕೆಂಬ ಕೂಗು ಮೊದಲಾಗಿ ಪಾರ್ಲಿಮೆಂಟ್ ಸಭಿಕರು ಪದೇಪದೇ ಆ ಪ್ರಸ್ತಾಪವೆತ್ತಿದರು.

**ಸ್ಪಾನಿಷರೊಡನೆ ಜಗಳ** ಕಡೆಗೊಂದು ದಿನ **ಜೆನ್ಕಿನ್ಸ್** (Jenkins) ಎಂಬಾತನೊಬ್ಬನು ಒಂದು ಶೀಸೆಯಲ್ಲೊಂದು ಕಿವಿಯನ್ನಿಟ್ಟುಕೊಂಡು ಬಂದು ಸಭೆಯಲ್ಲಿ ಅದನ್ನು ತೋರಿಸಿ ಸ್ಪಾನಿಷ್ ಜನರು ಮಿತಿಮೀರಿದ ಅನ್ಯಾಯವನ್ನು ಮಾಡುತ್ತ, ಇಂಗ್ಲಿಷ್ ನಾವಿಕರನ್ನು ರಾಕ್ಷಸರೀತಿಯಲ್ಲಿ ಭಂಗಪಡಿಸುತ್ತ ತನ್ನ ಕಿವಿಯನ್ನು ಕುಯ್ದರೆಂದೂ ಅದೇ ಕಿವಿಯನ್ನು ಶೀಸೆಯಲ್ಲಿ ಉಪ್ಪಿನಕಾಯಿಟ್ಟಂತೆ ಇಟ್ಟಿದೆಯೆಂದೂ ಹೇಳಿ ಸಭಿಕರನ್ನು ರೇಗಿಸಿದನು. ಆ ಕಿವಿಯು ಆತನದೇ ಆಗಿದ್ದಿತೋ ಇಲ್ಲವೋ ಸಂದೇಹವಾದರೂ ಆ ಸಮಯದಲ್ಲಿ ಇಂಗ್ಲಿಷ್ ಜನರಿಗೆ ರೋಷವೇರಿತು. 1739ರಲ್ಲಿ ವಾಲ್ಪೋಲ್ ಸ್ಪೈನಿನೊಡನೆ ಯುದ್ಧವನ್ನು ಕಟ್ಟಿಕೊಳ್ಳಬೇಕಾಯಿತು. 1740ರಲ್ಲಿ ಯೂರೋಪಿನಲ್ಲಿ **ಆಸ್ಟ್ರಿಯಪಟ್ಟದ ಜಗಳವೆಂಬ** ಹೆಸರಿನ ಯುದ್ಧ ಮೊದಲಾಯಿತು. ಇಂಗ್ಲಂಡ್ ಅದರಲ್ಲಿ ಪ್ರವೇಶಮಾಡಬೇಕಾಯಿತು. ಆದರೆ ಯುದ್ಧವನ್ನು ಕಟ್ಟಿಕೊಂಡ ತರುವಾಯವೂ ವಾಲ್ಪೋಲ್ ಯುದ್ಧಕ್ಕೆ ತಕ್ಕ ಸನ್ನಾಹಗಳನ್ನು ನಡೆಸದೆ ಇದ್ದನು. ಯುದ್ಧಕಾಲಕ್ಕೆ ತಕ್ಕ ಮಂತ್ರಿ ಆತನಲ್ಲ. ಶಾಂತಿಕಾಲಕ್ಕೆ ತಕ್ಕವನು.

ಯುಟ್ರೆಕ್ಟ್ ಕರಾರಿನ ಕಾಲದಿಂದ 1740ರ ವರೆಗೆ ಬ್ರಿಟನ್ನಿಗೆ ಭಾರಿ ಯುದ್ಧ ಪ್ರಮೇಯವೊದಗಲಿಲ್ಲ. ಆ ಕರಾರಿನ ಷರತ್ತುಗಳಿಂದ ಬ್ರಿಟಿಷರಿಗೆ ಸಮೃದ್ಧಿಯೆನಿಸಿದ ಅನುಕೂಲಗಳು ಒದಗಿದ್ದವು. ವಾಲ್ಪೋಲ್ ಕಾಲದಲ್ಲಿ ಆ ಅನುಕೂಲಗಳನ್ನು ಬ್ರಿಟಿಷರು ರೂಢಿಸಿಕೊಂಡು ಬಲಪಡಿಸಿಕೊಂಡರು. ವ್ಯಾಪಾರ ಹೆಚ್ಚಿತು, ದೇಶಾಂತರ ನೆಲಸುಗಳು ಬಲಗೊಂಡವು, ಸಮುದ್ರದಮೇಲಿನ ಪ್ರಾಬಲ್ಯ ಬೇರೂರಿತು, ಜನರಲ್ಲಿ ಐಶ್ವರ್ಯವೇರಿತು.

**ಶಾಂತಿಕಾಲಕ್ಕೆ ಒಳಾಡಳಿತ** ತಕ್ಕ ಮಂತ್ರಿಯಾದುದರಿಂದ ವಾಲ್ಪೋಲ್ ಅಧಿಕಾರವನ್ನು ವಹಿಸಿಕೊಂಡಕೂಡಲೆ ಸೌತ್ ಸೀ ಕಂಪನಿಯ ಅವಾಂತರವನ್ನು ಜನರು ಮರೆಯುವಂತೆ ತಕ್ಕ ಏರ್ಪಾಟುಗಳನ್ನು ನಡೆಸಿದನು. ವ್ಯಾಪಾರದ ಸುಂಕಗಳಲ್ಲಿ ಕ್ರಮವನ್ನು ನೆಲೆಗೊಳಿಸಿದನು. ಡಿಸ್ಸೆಂಟರ್ ಪಂಗಡದವರಿಗೆ ಉದ್ಯೋಗಗಳನ್ನು **ಕೊಡಿಸುತ್ತ** ಅವರಿಂದ

ತೊಂದರೆಯಿಲ್ಲದಂತೆ ನಡೆಸುತ್ತಿದ್ದರೂ ಅವರಿಗೆ ಅನಾನುಕೂಲವಾಗಿದ್ದ ಕಾನೂನುಗಳನ್ನು ವಜಾಮಾಡುವ ಪ್ರಯತ್ನವನ್ನು ಮಾಡದೆ ಇದ್ದನು. ಹಾಗೆ ಪ್ರಯತ್ನಿಸಿ ಆ ಮೂಲಕ ಹೈಚರ್ಚ್ ಪಂಗಡಕ್ಕೆ ಅಸಮಾಧಾನಮಾಡಿ ಜಗಳಕ್ಕೆ ಅವಕಾಶವೇಕೆಂದು ಆತನ ಯೋಚನೆ. ತನಗೆ ವಿರೋಧ ತೋರುವಂತಿದ್ದರೆ ಹಿಡಿದ ಕೆಲಸವನ್ನಾದರೂ ಬಿಟ್ಟಾನು. 1733ರಲ್ಲಿ ಸುಂಕವನ್ನು ಶಿಸ್ತುಗೊಳಿಸುವುದಕ್ಕಾಗಿ ಹೊಸದಾಗಿ ಒಂದು ಮಸೂದೆಯನ್ನು ಸಭೆಯ ಮುಂದೆ ಒತ್ತಿದವನು ಬಲವಾದ ವಿರೋಧ ತೋರಿದೊಡನೆ ಆ ಆಲೋಚನೆಯನ್ನೇ ಬಿಟ್ಟುಬಿಟ್ಟನು. ದೊಡ್ಡದೆನಿಸಿದ ಯಾವ ಏರ್ಪಾಟನ್ನೂ ಈ ಮಂತ್ರಿ ಮಾಡಲಾರದವನಾಗಿದ್ದನು. ಆದರೆ ಹೆಚ್ಚು ತಂಟೆಗೆ ಹೋಗದೆ ಉಪಾಯವಾಗಿ ಕಾಲ ಹಾಕಿ ಶಾಂತಿಸ್ಥಿತಿಯನ್ನು ಕಾಪಾಡಿದನು.

ಪ್ರಧಾನ

ರಾಜ್ಯದ ಹೊರಗಡೆಯಾಗಲಿ ಒಳಗಡೆಯಾಗಲಿ ವ್ಯಾಜ್ಯಕ್ಕವಕಾಶವಿಲ್ಲದಂತೆ ನಡೆಸಿಕೊಂಡ ಈ ಮಂತ್ರಿ ತನ್ನ ಉಪಾಯಶಕ್ತಿಯನ್ನು ಒಂದುಕಡೆ ದೊರೆಯ ಮೇಲೂ ಮತ್ತೊಂದುಕಡೆ ಪಾರ್ಲಿಮೆಂಟ್ ಸಭೆಯ ಮೇಲೂ ಬೀರುತ್ತಿದ್ದನು. ಇಂಗ್ಲಿಷ್ ಬಾರದ ಹಿರೇ ಜಾರ್ಜ್ ದೊರೆಯನ್ನೂ ಬೈಗಳನ್ನು ಮಾತ್ರ ಕಲಿತಿದ್ದ ಕಿರೇ ಜಾರ್ಜ್ ದೊರೆಯನ್ನೂ ಸಮಾಧಾನವಾಗಿಟ್ಟುಕೊಂಡು ಅವರಿಬ್ಬರ ವಿಶ್ವಾಸವನ್ನೂ ಏಕರೀತಿಯಾಗಿ ಅನುಭವಿಸಿದನು. ಆ ದೊರೆಗಳು ಮಂತ್ರಿಗಳ ಸಭೆಯನ್ನು ಈತನಿಗೇ ಬಿಟ್ಟುಕೊಟ್ಟರು. ಪರಿಣಾಮವಾಗಿ ಈತನ ಇಷ್ಟದಂತೆ ಇತರ ಮಂತ್ರಿಗಳು ಕೇಳಬೇಕಾಯಿತು. ಕೇಳದಿದ್ದ ಮಂತ್ರಿಗಳಿಗೆ ಪದಚ್ಯುತಿ. **ಟೌನ್ಷೆಂಡ್, ಕಾರ್ಟರೆಟ್** (Cartaret) **ಪಲ್ಟೀನಿ** (Pulteney) ಮುಂತಾದ ಇತರ ಮಂತ್ರಿಗಳು ಈ ರೀತಿ ಅಭಿಪ್ರಾಯಭೇದಕ್ಕಾಗಿ ಮಂತ್ರಿತನವನ್ನು ಬಿಟ್ಟುಕೊಡಬೇಕಾಯಿತು. ಪ್ರಧಾನನೆಂಬ ಹೆಸರಿಲ್ಲದಿದ್ದರೂ ವಾಲ್ಪೋಲ್ ಪ್ರಧಾನನಾಗಿದ್ದು ತನಗನುಕೂಲರಾಗಿದ್ದವರನ್ನೇ ಜೊತೆಮಂತ್ರಿಗಳಾಗಿ ಗೊತ್ತುಮಾಡಿಕೊಳ್ಳುತ್ತಿದ್ದನು.

ಲಂಚ ಪ್ರಪಂಚ

ಪಾರ್ಲಿಮೆಂಟ್ ಸಭೆಯಲ್ಲಿಯೂ ಈ ಮಂತ್ರಿಯ ಬಲ ಉಪಾಯದಿಂದಲೇ. ನೌಕರಿಯನ್ನೋ ಸಂಭಾವನೆಯನ್ನೋ ಬಿರುದುಬಾವಲಿಗಳನ್ನೋ ಕೊಡಿಸಿ ಬಾಯಿದ್ದ ಸಭಿಕರನ್ನು ತನ್ನ ಪಕ್ಷಕ್ಕೆ ಸೆಳೆಯುತ್ತಿದ್ದನು. ಚುನಾವಣೆಗಳಾಗುವಕಾಲದಲ್ಲಿ ತನ್ನವರು ಸಭಿಕರಾಗುವಂತೆ ಲಂಚಗಳನ್ನು ಧಾರಾಳವಾಗಿ ಕೊಡಿಸುತ್ತಿದ್ದನು. ಆ ಕಾಲದ ಕಾಮನ್ಸ್ ಸಭೆಯ ರೀತಿಯೇ ನೀತಿಗೆಟ್ಟಿತ್ತು. ವಾಲ್ಪೋಲನಂತೂ ಲಂಚಋಷುವತ್ತುಗಳನ್ನು ಕೊಡಿಸುವುದರಲ್ಲಿ ನಿಪುಣನಾಗಿದ್ದು ಅದನ್ನೇ ಒಂದು ಶಾಸ್ತ್ರವನ್ನಾಗಿ ಮಾಡಿಬಿಟ್ಟನು. ಅಧಿಕಾರವನ್ನು ಬಿಟ್ಟುಬಿಡುವ ಇಷ್ಟವಾಗಲಿ ಯೋಚನೆಯಾಗಲಿ

ಇಲ್ಲದೆ ದುರ್ನೀತಿಯಿಂದ ಕಟ್ಟಿಕೊಂಡ ಬಹುಪಕ್ಷವನ್ನು ನಂಬಿಕೊಂಡು ದೀರ್ಘಕಾಲ ಮಂತ್ರಿಪದವಿಯನ್ನು ಅನುಭವಿಸಿದನು.

ವಾಲ್ಪೋಲ್ ಬ್ರಿಟಿಷರ ಚರಿತ್ರೆಯಲ್ಲಿ ಮೊದಲನೆಯ ಪ್ರಧಾನನೆಂದು ಭಾವಿಸಬಹುದು. ಗಾಳಿ ಬೀಸಿದಂತೆ ತಿರುಗಿಕೊಳ್ಳುತ್ತಿದ್ದ ಆತನಲ್ಲಿ ಮಹತ್ವವಿಲ್ಲ. ಆತನ ಆಳಿಕೆಯಲ್ಲಿ ದೇಶವು ಐಶ್ವರ್ಯವನ್ನು ಗಳಿಸಿತು; ಆದರೆ ಹಿರಿಯತನಕ್ಕೇರಲಿಲ್ಲ. ಆತನನ್ನು ಪ್ರತಿಭಟಿಸಿದ ಸಭಿಕರಲ್ಲಿ ಕಡೆಕಡೆಗೆ ತೋರಿದ **ವಿಲಿಯಂ ಪಿಟ್** (William Pitt) ಎಂಬಾತನೊಬ್ಬನೇ ದೊಡ್ಡರಾಶಿಗೆ ಸೇರತಕ್ಕವನು. ಆತನ ಪ್ರತಿವಾದವನ್ನು ವಾಲ್ಪೋಲ್ ತಡೆಯಲಾಗಲಿಲ್ಲ. 1740ರಲ್ಲಿ ಮೊದಲಾದ ಯುದ್ಧವನ್ನು ಅರೆಮನಸ್ಸಿನಿಂದ ನಡೆಸುತ್ತಿದ್ದನೆಂದು ಅಸಮಾಧಾನ ಹೆಚ್ಚಿತು. ಅಧಿಕಾರಕ್ಕಾಸೆಪಡುತ್ತಿದ್ದ ಇತರ ವ್ಹಿಗ್‌ನಾಯಕರು ಎದುರುಬಿದ್ದರು. 1742ರಲ್ಲಿ ಸಭೆಯ ಬೆಂಬಲ ತಪ್ಪಿತು. ಗತ್ಯಂತರವಿಲ್ಲದೆ ವಾಲ್ಪೋಲ್ ಆ ಇಸವಿಯಲ್ಲಿ ನಿವೃತ್ತನಾದನು.

ನಿವೃತ್ತಿ

## ಸಂಧಿವಿಗ್ರಹ—(1713—1763)

### 1713-1740

ಸ್ಪೈನ್ ಪಟ್ಟಕ್ಕೆ ಆಸೆಪಟ್ಟು ಅಣ್ಣ ಜೋಸೆಫ್ ಸತ್ತಮೇಲೆ ಆಸ್ಟ್ರಿಯದ ಪ್ರಭುವಾದ ಚಾರ್ಲ್ಸ್ (Charles VI) ಯುಟ್ರೆಕ್ಟ್ ಕರಾರಿಗೆ ಮೊದಮೊದಲು ಒಪ್ಪದೆ ಆಮೇಲೆ ಗತ್ಯಂತರವಿಲ್ಲದೆ ಒಪ್ಪಿದನಷ್ಟೆ. ಸ್ಪೈನ್ ರಾಜನೆನಿಸುವ ಕನಸು ತೇಲಿಹೋಯಿತು. ಮಿತ್ರಮಂಡಲಿಯನ್ನಾಶ್ರಯಿಸಿಕೊಂಡು ಯುದ್ಧದಲ್ಲಿ ಸೇರಿದ್ದಕ್ಕೆ ಫಲವಾಗಿ ನೆದರ್ಲಂಡ್ಸ್ ಸಿಸಿಲಿ ಮತ್ತು ಸಾರ್ಡಿನಿಯ ಕ್ಷೇತ್ರಗಳ ಯಾಜಮಾನ್ಯ ಮಾತ್ರ ದೊರಕಿತ್ತು. ಯುಟ್ರೆಕ್ಟ್ ಕರಾರು ನಡೆದ ಬಳಿಕ ಅತ್ತ ಸ್ಪೈನಿನ 5ನೆ ಫಿಲಿಪ್ (Philip V) ರಾಜನಿಗೆ ಹೆಚ್ಚು ಅಸಮಾಧಾನ. ತಂತ್ರನಿಪುಣನಾದ ಆಲ್ಬೆರೋನಿ ಅಲ್ಲಿ ಮಂತ್ರಿಯಾಗಿ ನಷ್ಟವಾದ ಕ್ಷೇತ್ರಗಳನ್ನು ಪುನಃ ಪಡೆಯಲು ತೊಡಗಿದಾಗ ಆಸ್ಟ್ರಿಯದ ಚಾರ್ಲ್ಸ್ ತಳಮಳಿಸಿ ಬ್ರಿಟನ್, ಫ್ರಾನ್ಸ್, ಹಾಲಂಡ್ ದೇಶಗಳ ಜೊತೆಯಲ್ಲಿ ಸೇರಿಕೊಂಡನು. **ಟ್ರಿಪ್ಲ್ ಅಲಯನ್ಸ್, ಕ್ವಾಡ್ರುಪ್ಲ್ ಅಲಯನ್ಸುಗಳ** ಕಾಲ ಕಳೆಯಿತು. ಇಟಲಿಯಲ್ಲಿ ಕೆಲವು ಕ್ಷೇತ್ರಗಳನ್ನು ಸ್ಪೈನ್ ರಾಜನು ಸಾಧಿಸಿಕೊಂಡನು. ಆಗ ತನಗಾದ ನಷ್ಟದಿಂದ ಹೊಸದಾಗಿ ಅಸಮಾಧಾನಪಟ್ಟು ಹಿಂದಿನಂತೆ ತನ್ನನ್ನು ಮಿತ್ರರು ವಂಚಿಸಿದರೆಂದುಕೊಂಡು ಚಾರ್ಲ್ಸ್ ಸ್ಪೈನಿನ ಸಂಗಡ ಮೈತ್ರಿಯನ್ನು ಕಟ್ಟಿದನು. ಸ್ಪೈನ್ ಆಸ್ಟ್ರಿಯಗಳೆರಡೂ ನಷ್ಟಪಟ್ಟ ರಾಜ್ಯಗಳಾಗಿದ್ದುದೇ ಆ ಮೈತ್ರಿಗೆ

**ಯುಟ್ರೆಕ್ಟ್ ತರುವಾಯ**

**ಕಾರಣ.**

1725ರಲ್ಲಿ **ವಿಯೆನ್ನ** (Treaty of Vienna) **ಕರಾರೆಂ**ಬುದು ನಡೆದು ಈ ಇಬ್ಬರು ಪ್ರಭುಗಳು ಯುಟ್ರೆಕ್ಟ್ ಕರಾರನ್ನು ಬದಲಾಯಿಸಿ ಕೊಳ್ಳಬೇಕೆಂದಿದ್ದರು. ಆದರೆ ಬ್ರಿಟನ್ ಮತ್ತು ಫ್ರಾನ್ಸ್ ಎರಡೂ ಪರಸ್ಪರ ಸ್ನೇಹದಿಂದಿದ್ದುದರಿಂದ ಜಗಳವಾಗದೆ ನಿಂತಿತು. ಹೊಸದಾಗಿ ಸಿಕ್ಕಿದ ವ್ಯಾಪಾರವನ್ನು ರೂಢಿಸಿಕೊಳ್ಳುವ ಕಾಲದಲ್ಲಿ ಯುದ್ಧವನ್ನು ತಪ್ಪಿಸಿಕೊಳ್ಳಬೇಕೆಂದು ವಾಲ್ಪೋಲನೂ ಕಳೆದಯುದ್ಧದಲ್ಲಿ ಪಟ್ಟಿದ್ದ ಭಾರಿನಷ್ಟದಿಂದ ಚೇತರಿಸಿಕೊಳ್ಳಲು ಫ್ರಾನ್ಸಿಗೆ ಶಾಂತಿಯೇ ಅತ್ಯವಶ್ಯವೆಂದು ಅಲ್ಲಿಯ ಮಂತ್ರಿ **ಕಾರ್ಡಿನಲ್ ಫ್ಲೂರಿ** (Cardinal Fleury)ಯೆಂಬಾತನೂ ಏಕಾಭಿಪ್ರಾಯದಿಂದಿದ್ದು ಯುದ್ಧ ರೇಗದಂತೆ ನೆರವೇರಿಸಿದರು.

**ಶಾಂತಿಸಾಧನೆ**

ಫ್ರಾನ್ಸಿನಲ್ಲಿ 15ನೆ ಲೂಯಿ ವಯಸ್ಕನಾದ ತರುವಾಯ ಯೋಚನೆಗಳು ಬೇರೆಯಾದುವು. ಸ್ಪೈನಿನ ದೊರೆ 5ನೆ ಫಿಲಿಪ್ಪನ ಬಾಂಧವ್ಯ ಪರಸ್ಪರಆಪ್ತತೆಗೆ ತಳಹದಿಯಾಗಿ ಕಾಣಬಂತು. ಏಕಂದರೆ ಆ ಫಿಲಿಪ್ಪನು ಫ್ರಾನ್ಸಿನ ಪಟ್ಟದ ಆಸೆಯನ್ನು ಪೂರ್ತಿಯಾಗಿ ಬಿಟ್ಟುಕೊಟ್ಟಿದ್ದನು; 15ನೆ ಲೂಯಿ ಇರುವಾಗ ಆತನಿಗೆ ಅವಕಾಶವೂ ಇಲ್ಲ. ಆದ್ದರಿಂದ 1733ರಲ್ಲಿ ಬೋರ್ಬನ್ ಬಂಧುಗಳಿಬ್ಬರೂ ಒಟ್ಟುಗೂಡಿದರು. ಫ್ರಾನ್ಸಿನ ಸ್ನೇಹದಿಂದ ಆಸ್ಟ್ರಿಯವನ್ನು ವಿರೋಧಿಸುತ್ತಿದ್ದ ವಾಲ್ಪೋಲನ ಉಪಾಯಕ್ಕೆ ಅವಕಾಶ ತಪ್ಪುವ ಹಾಗಾಯಿತು. ದೂರಕ್ಷೇತ್ರಗಳಲ್ಲಿ ಅಂದರೆ ಅಮೆರಿಕಾ ಕ್ಷೇತ್ರಗಳಲ್ಲಿ ಮತ್ತು ಹಿಂದುಸ್ಥಾನದಲ್ಲಿ ಬ್ರಿಟಿಷರಿಗೆ ಸ್ಪಾನಿಷರೂ ಫ್ರೆಂಚರೂ ಶತ್ರುಗಳಾಗುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಜೆಂಕಿನ್ಸನ ಕಿವಿಯ ಪ್ರದರ್ಶನವಾಗಿ ಬ್ರಿಟನ್ನಿಗೂ ಸ್ಪೈನಿಗೂ ಯುದ್ಧ ಕೆರಳಿತು.

**ಬೋರ್ಬನ್ ಒಗ್ಗಟ್ಟು**

1714ರಿಂದ 1740ರ ವರೆಗೆ ನಡೆದ ಕಾಲದಲ್ಲಿ ಬ್ರಿಟಿಷರು ಎರಡುಸಲ ಸ್ಪೈನಿನ ವಿರೋಧವಾಗಿ ಯುದ್ಧನಡೆಸಿದರು. 1718ರಲ್ಲಿ **ಪಸ್ಸಾರೊ** ಭೂಶಿರದ ಬಳಿ **ಅಡ್ಮಿರಲ್ ಬಿಂಗ್** ಎಂಬ ಇಂಗ್ಲಿಷ್ ನೌಕಾಪತಿ ಸ್ಪಾನಿಷ್ ಹಡಗುಗಳನ್ನು ನಾಶಮಾಡಿದನು. 1739ರಲ್ಲಿ **ಜೆಂಕಿನ್ಸ್‌ಕಿವಿಯ ಯುದ್ಧ** ಮೊದಲಾದಾಗ ಬ್ರಿಟಿಷ್ ಹಡಗುಗಳು ಭೂಮಧ್ಯ ಸಮುದ್ರಕ್ಕೂ ಅಮೆರಿಕದ ಕಡೆಗೂ ಹೊರಟವು. **ಕಾರ್ಟಾಜಿನ**(Cartagena)ವನ್ನು ಮುತ್ತುವ ಪ್ರಯತ್ನ ಸಫಲವಾಗಲಿಲ್ಲ; ಆದರೆ ವೆಸ್ಟಿಂಡೀಸಿನಲ್ಲಿ ಒಂದು ದ್ವೀಪ ಬ್ರಿಟಿಷರಿಗೆ ಸಿಕ್ಕಿತು. ನಿಧಿ ಹೊತ್ತು ತರುತ್ತಿದ್ದ ಸ್ಪಾನಿಷ್ ಹಡಗುಗಳು ಬ್ರಿಟಿಷ್ **ನೌಕಾಪತಿ ಅನ್ಸನ್ನ**ನಿಗೆ(Admiral Anson) ವಶವಾಯಿತು.

**ಸಣ್ಣ ಯುದ್ಧಗಳು**

ಅರೆಮನಸ್ಸಿನಿಂದ ಈ ಯುದ್ಧವನ್ನು ನಡೆಸುತ್ತಿದ್ದ ವಾಲ್ಪೋಲ್ ಮಂತ್ರಿಯ ಮನಸ್ಸಿನಲ್ಲಿ ಉಪಾಯವಾಗಿ ಜಗಳವನ್ನು ನಿಲ್ಲಿಸಿಕೊಳ್ಳುವ ಕನಸಿತ್ತು. ಆದರೆ

ಆತನ ಅದೃಷ್ಟ ಚನ್ನಾಗಿರಲಿಲ್ಲ. 1740ರಲ್ಲಿ ಯೂರೋಪಿನಲ್ಲಿ ಒಂದು ಭಾರಿ ಜಗಳ ರೇಗಿತು.

## ಆಸ್ಟ್ರಿಯ ಪಟ್ಟದ ಜಗಳ 1740-1748

ಆಸ್ಟ್ರಿಯದ ಚಕ್ರವರ್ತಿಯೆನಿಸಿದ ಚಾರ್ಲ್ಸ್ ಪ್ರಭುವಿಗೆ ಇದ್ದುದು ಒಬ್ಬಳೇ ಮಗಳು. ತನ್ನ ತರುವಾಯ ಆ ಮಗಳಿಗೆ ತನ್ನ ರಾಜ್ಯವೆಲ್ಲವೂ ದೊರಕಬೇಕೆಂಬ ಆಸೆಯೂ ಯೋಚನೆಯೂ ಆತನಿಗೆ ಸಹಜವಾಗಿ ಹುಟ್ಟಿತು. ಜರ್ಮನಿಯಲ್ಲಿದ್ದ ಅನೇಕ ಸಂಸ್ಥಾನಗಳಲ್ಲಿ **ಪ್ರಷ್ಯ**ವೆಂಬುದು ಈಚಿಗೆ ಪ್ರಾಬಲ್ಯಕ್ಕೇರುತ್ತಿತ್ತು. ಅಲ್ಲಿಯವರು ದೊರೆಗಳೆನಿಸಿ ಬಲವಾದ ಸೈನ್ಯ ಕಟ್ಟಿಕೊಂಡು ನೆರೆಹೊರೆಯಲ್ಲಿ ತಮ್ಮ ರಾಜ್ಯ ವಿಸ್ತಾರಕ್ಕೆ ಹೊಂಚುತ್ತಿದ್ದರು. ಇದರಿಂದ ಚಾರ್ಲ್ಸ್‌ನ ಯೋಚನೆ ಹೆಚ್ಚಿತು.

**ಆಸ್ಟ್ರಿಯ ಪ್ರಭುವಿನ ಉಯಿಲು**

ಯುಟ್ರೆಕ್ಟ್ ಕರಾರಿನಲ್ಲಿ ತನಗಾದ ಲಾಭ ನಷ್ಟಗಳ ಚಿಂತೆಯನ್ನು ಪೂರ್ತಿಯಾಗಿ ಬಿಟ್ಟುಬಿಟ್ಟು ತನ್ನ ಮಗಳ ಭವಿಷ್ಯದ ಚಿಂತೆಯನ್ನು ಕಟ್ಟಿಕೊಂಡು ಮೊದಲು ಒಂದು ಉಯಿಲನ್ನು ಬರೆದಿಟ್ಟನು. ತನ್ನ ತರುವಾಯ ತನ್ನ ಪುತ್ರಿ **ಮರಿಯ ಥೆರೀಸ** (Maria Theresa) ಎಂಬಾಕೆಯು ತನ್ನ ರಾಜ್ಯಸರ್ವಸ್ವಕ್ಕೂ ಏಕಮಾತ್ರಾಧಿಕಾರಿಣಿಯೆಂಬ ಆ ಶಾಸನಕ್ಕೆ ಎಲ್ಲ ಐರೋಪ್ಯಪ್ರಭುಗಳ ಸಮ್ಮತಿಯನ್ನು ಸಂಪಾದಿಸುವುದರಲ್ಲಿ ತೊಡಗಿದನು. ಅನೇಕ ಪ್ರಭುಗಳು ಆ ಶಾಸನವನ್ನೊಪ್ಪಿದರು. 1740ರಲ್ಲಿ ಚಾರ್ಲ್ಸ್ ತೀರಿಕೊಂಡನು. ಆಸ್ಟ್ರಿಯ ಹಂಗರಿಗಳಲ್ಲಿ ಮರಿಯ ಥೆರೀಸ ಪಟ್ಟವನ್ನೇರಿದಳು. ಆದರೆ **ಬವೇರಿಯದ ಸಂಸ್ಥಾನಿಕ**ನು ಹೆಂಗಸಿಗೆ ರಾಜ್ಯ ಸಲ್ಲದೆಂದೂ ತಾನೇ ನ್ಯಾಯವಾಗಿ ಆಸ್ಟ್ರಿಯಕ್ಕೆ ಪ್ರಭುವೆಂದೂ ವ್ಯಾಜ್ಯಕ್ಕೆ ಮೊದಲಿಟ್ಟು ಫ್ರಾನ್ಸ್ ದೊರೆಯ ಸಹಾಯಪಡೆದನು.

**ಪ್ರಷ್ಯ**

ಅದೇ ವರ್ಷದಲ್ಲಿಯೇ ಪ್ರಷ್ಯದ ಪಟ್ಟವನ್ನೇರಿದ **ಫ್ರೆಡರಿಕ್ ದಿ ಗ್ರೇಟ್** (Frederick the Great) ಎನಿಸಿದ ದೊರೆಯು ಕುಟಿಲತನದಿಂದ **ಸೈಲೀಷಿಯ**(Silesia) ಎಂಬ ಪ್ರಾಂತವನ್ನು ಆಕ್ರಮಿಸಿಕೊಂಡು ಮರಿಯ ಥೆರೀಸಳಿಗೆ ಪ್ರಬಲವೈರಿಯಾದನು.

ಬ್ರಿಟಿಷ್ ದೊರೆ 2ನೆ ಜಾರ್ಜ್ ಹಾನೊವರ್ ಸಂಸ್ಥಾನಿಕನೂ ಆಗಿದ್ದನಷ್ಟೆ. ಬವೇರಿಯ ಸಂಸ್ಥಾನಿಕನಲ್ಲಿ ಆತನಿಗೆ ಹಗೆತನ, ಆಸ್ಟ್ರಿಯದ ಪ್ರಭುವಿನಲ್ಲಿ ಮೈತ್ರಿ.

**ಬ್ರಿಟಿಷ್ ಪ್ರವೇಶ**

ಯುದ್ಧದಲ್ಲಿ ಸೇರಿಕೊಳ್ಳುವ ಆಸೆ ಆತನಿಗೆ. ಹೀಗೆ ಇಂಗ್ಲಂಡ್ ಫ್ರಾನ್ಸ್ ದೇಶಗಳಿಗೆ ಪುನಃ ವೈರವುಂಟಾಯಿತು. **ಹೊಡೆದಾಟ**ಕ್ಕೂ ಪ್ರಾರಂಭವಾಯಿತು. 1742ರಲ್ಲಿ ವಾಲ್ಪೋಲ್ ಮಂತ್ರಿಪದವಿ ಕಳೆದುಕೊಂಡಮೇಲೆ ಸಂಧಿವಿಗ್ರಹಿಯಾದ **ಕಾರ್ಟರೆಟ್** (Carteret) ಎಂಬಾತನು ಜಾಣತನದಿಂದ ಸಂಧಾನ ನಡೆಸಿ ಅತ್ತ ಫ್ರೆಡರಿಕ್ ಮರಿಯ ಥೆರೀಸರಿಗೆ

ಒಪ್ಪಂದಮಾಡಿಸಲು ಯತ್ನಿಸಿ ಇತ್ತ ಫ್ರಾನ್ಸಿಗೆ ವಿರೋಧವಾಗಿ ಸಾಧ್ಯವಾದಷ್ಟು ಪ್ರಭುಗಳನ್ನೂ ಸಂಸ್ಥಾನಿಕರನ್ನೂ ಒಟ್ಟುಗೂಡಿಸಿದನು. ಯುದ್ಧಮಾಡುವ ಆತುರದಿಂದ ಜಾರ್ಜ್ ದೊರೆಯೇ ಮುಂದೆ ಹೊರಟನು.

1743ರಲ್ಲಿ **ಡೆಟ್ಟಿಂಜೆನ್** (Dettingen) ಎಂಬಲ್ಲಿ ಫ್ರೆಂಚರೊಡನೆ ಬ್ರಿಟಿಷರು ಕಾದಿದರು. ಜರ್ಮನಿಯಲ್ಲಿ ಪ್ರವೇಶಿಸಿದ್ದ ಫ್ರೆಂಚ್ ದಳಗಳನ್ನು ಅಲ್ಲಿಂದ ಓಡಿಸುವುದು ಉದ್ದೇಶ. ನಡೆದ ಕದನದಲ್ಲಿ ಬ್ರಿಟಿಷರು ಪ್ರಯಾಸದಿಂದ ಜಯ ಪಡೆದರು. ಬ್ರಿಟಿಷ್ ದೊರೆಯಾದಾತನು ಕಾಳಗದಲ್ಲಿ ಭಾಗ ವಹಿಸಲು ಇದೇ ಕಡೆ. ಪ್ರಾಣಾಪಾಯವಾಗಬಹುದಾದ ಯುದ್ಧಭೂಮಿಯಲ್ಲಿ ದೊರೆಗಳಾದವರು ಇರಬಾರದೆಂದು ಈ ಕದನದ ತರುವಾಯ ಪಾರ್ಲಿಮೆಂಟಿನವರು ನಿರ್ಧರಮಾಡಿದರು. 1745ರಲ್ಲಿ ಫ್ರೆಂಚರು ಉತ್ತರ ದಿಕ್ಕಿನಲ್ಲಿ ದೊಡ್ಡ ಸೈನ್ಯ ಕಳುಹಿಸಿದರು; **ಫಾಂತನಾಯ್** (Fontenoy) ಎಂಬಲ್ಲಿ ಇಂಗ್ಲಿಷ್ ಸೈನ್ಯವು ಅದಕ್ಕೆದುರಾಗಿ ಸೋತುಹೋಯಿತು. ಅದೇ ವರ್ಷವೇ ಬಾನಿ ಪ್ರಿನ್ಸ್ ಚಾರ್ಲಿಯು ಸ್ಕಾಟ್ಲೆಂಡಿನಲ್ಲಿ ಕಾಣಿಸಿಕೊಂಡು ರಾಜಸೈನ್ಯಗಳನ್ನು ಪದೇ ಪದೇ ಸೋಲಿಸಿದನು. ಹೊರಗಿನ ಸೈನ್ಯಗಳೆಲ್ಲವನ್ನೂ ಹಿಂದಕ್ಕೆ ಕರೆಸಿಕೊಳ್ಳಬೇಕಾಯಿತು. ನೆದರ್ಲ್ಯಾಂಡ್ಸಿನಲ್ಲಿ ಫ್ರೆಂಚರಿಗೇ ಜಯವೊದಗಿತು.

**ಕದನಗಳು**

1744ರಲ್ಲಿ ಬ್ರಿಟಿಷರೂ ಫ್ರೆಂಚರೂ ಹಿಂದುಸ್ತಾನ ಅಮೆರಿಕಗಳಲ್ಲಿ ನೆಲೆಸಿದ್ದ ತಮ್ಮವರಿಗೆ ಯುದ್ಧ ಮಾಡಬೇಕೆಂದು ಹುಕುಂ ಕೊಟ್ಟು ಕಳುಹಿಸಿದರು. ಹಿಂದುಸ್ತಾನದಲ್ಲಿ ಬ್ರಿಟಿಷರ ಹಿಡಿತದಲ್ಲಿದ್ದ **ಮದರಾಸನ್ನು** ಫ್ರೆಂಚರು ಸುಲಭವಾಗಿ ಸಾಧಿಸಿಕೊಂಡರು. ಉತ್ತರ ಅಮೆರಿಕದಲ್ಲಿ **ಲೂಯಿಸ್ಬರ್ಗ್** (Louisburg) ಎಂಬ ಫ್ರೆಂಚರ ಜಲದುರ್ಗವನ್ನು ಇಂಗ್ಲಿಷರು ಸಾಧಿಸಿಕೊಂಡರು.

ಇಂಗ್ಲೆಂಡಿನಲ್ಲಿ ವಾಲ್ಪೋಲ್ ತರುವಾಯ **ಪೆಲ್ಹಂ** (Pelham) ಎಂಬಾತನು ಮುಖ್ಯ ಮಂತ್ರಿಯಾಗಿದ್ದನು. ಸಂಧಿವಿಗ್ರಹದಲ್ಲಿ ಜಾಣನಾಗಿದ್ದ ಕಾರ್ಟರೆಟ್ 1744ರಲ್ಲಿ ರಾಜಿನಾಮೆ ಕೊಟ್ಟಿದ್ದನು. **ಹೆನ್ರಿ ಪೆಲ್ಹಂ** ಎಂಬ ಹೊಸ ಮಂತ್ರಿಗೆ ಯಾವ ದಕ್ಷತೆಯೂ ವಿಶೇಷವಾಗಿರಲಿಲ್ಲ. ವಾಲ್ಪೋಲನ ನೀತಿಯನ್ನೇ ತಕ್ಕಮಟ್ಟಿಗೆ ಅನುಸರಿಸಲು ಯತ್ನಿಸಿದ ಆತನು ಮಂತ್ರಿಯಾಗಿದ್ದಾಗಲೇ 1748ರಲ್ಲಿ ಯುದ್ಧವನ್ನು ನಿಲ್ಲಿಸಿದ ಕರಾರು ನಡೆಯಿತು. **ಐಲಾಷಾಪೆಲ್** (Aix-la-Chapelle) ಎಂಬಲ್ಲಿ ಬ್ರಿಟಿಷರೂ ಫ್ರೆಂಚರೂ ಯುದ್ಧಪೂರ್ವಸ್ಥಿತಿಯನ್ನು ರಕ್ಷಿಸಬೇಕೆಂದೂ ಸೈಲೀಷಿಯ ಪ್ರಾಂತ ವಿನಾ ಉಳಿದ ಆಸ್ಟ್ರಿಯ ಹಂಗರಿ ರಾಜ್ಯಕ್ಕೆಲ್ಲ ಮರಿಯ ಥೆರೀಸ ಚಕ್ರವರ್ತಿನಿಯೆಂದೂ ಗೊತ್ತಾಯಿತು. ಸೈಲೀಷಿಯ ಪ್ರಾಂತವೆಂಬುದು ದರೋಡೆದೊರೆಯೆನಿಸಿದ ಫ್ರೆಡರಿಕ್ಕಿಗೆ ಸೇರತಕ್ಕ

**ಕುಂಟು ಕರಾರು**

ದಾಯಿತು. ಈ ಷರತ್ತಿನ ಪರಿಣಾಮವಾಗಿ ಮದರಾಸು ಬ್ರಿಟಿಷರಿಗೂ ಲೂಯಿಸ್ಬುರ್ಗ್ ಫ್ರೆಂಚರಿಗೂ ಪುನಃ ವಶವಾಯಿತು. ಆದರೆ ಇಬ್ಬರ ಹಗೆತನವೇನೂ ಆರಲಿಲ್ಲ.

ರಿಸ್ವಿಕ್ ಕರಾರನ್ನು ಕುಂಟು ಕರಾರೆಂದಂತೆ ಈ ಕರಾರನ್ನೂ ಕುಂಟು ಕರಾರೆನ್ನ ಬೇಕು. ಬ್ರಿಟಿಷರಿಗೂ ಫ್ರೆಂಚರಿಗೂ ವ್ಯಾಪಾರಸಂಗ್ರಹದಲ್ಲಿ, ಕ್ಷೇತ್ರಸಂಪಾದನೆಯಲ್ಲಿ, ಸಾಮ್ರಾಜ್ಯ ರಚನೆಯಲ್ಲಿ ಪೋಟಾಪೋಟಿ ಅಮೆರಿಕ ಹಿಂದುಸ್ತಾನಗಳಲ್ಲಿ ರೇಗುತ್ತಿತ್ತು. ಹಗೆತನ ಇಬ್ಬರಿಗೂ ದಿನೇ ದಿನೇ ಪ್ರಬಲವಾಗುತ್ತಿತ್ತು. ಇದರ ಸಿರ್ಧರವಂತೂ 1748ರ ಕರಾರಿನಿಂದ ಆಗಲೇ ಇಲ್ಲ; ಸೈಲೀಷಿಯ ನಷ್ಟವನ್ನು ಮರಿಯ ಥೆರೀಸ ಸಹಿ ಸಲೂ ಇಲ್ಲ. ಆದ್ದರಿಂದ ತಾತ್ಕಾಲಿಕವಾಗಿ ಹೋರಾಟವನ್ನು ನಿಲ್ಲಿಸಿದ ಕರಾರಾ ಯಿತೇ ವಿನಾ ಜಗಳವನ್ನು ಸಮಾಧಾನಗೊಳಿಸಿದ ಒಪ್ಪಂದವಾಗಲಿಲ್ಲ.

## ಇಂಗ್ಲಿಷ್ ಫ್ರೆಂಚ್ ಪೋಟಾಪೋಟಿ (1748-1756)

ಐರೋಪ್ಯರು ಪೃಥ್ವಿಯ ವಿಸ್ತಾರವನ್ನು ಕಂಡಮೇಲೆ ಸ್ಪೈನ್ ಪೋರ್ಚುಗಲ್ ದೇಶಗಳ ಜನರು ಮೂಡಲುಪಡವಲುಗಳಲ್ಲಿ ವ್ಯಾಪಿಸಿದರಷ್ಟೆ. ಸರಿ ಸುಮಾರಾಗಿ 16ನೆ ಶತಮಾನದಲ್ಲಿ ಆ ಜನರದೇ ಪ್ರಾಬಲ್ಯ. 17ನೆ ಶತಮಾನದ ಆದಿಯಲ್ಲಿ ಡಚ್ಚರು ಮೂಡಲಿನಲ್ಲಿ ಪ್ರಬಲರಾದರು. ಅದೇ ಶತಮಾನದ ಮಧ್ಯಭಾಗದಲ್ಲಿ ಡಚ್ಚರಿಗೂ ಇಂಗ್ಲಿಷರಿಗೂ ಪೈಪೋಟಿ ನಡೆದು ಹಿಂದುಸ್ತಾನದಲ್ಲಿ ಇಂಗ್ಲಿಷರು ವ್ಯಾಪಾರವನ್ನು ಬಲಪಡಿಸಿಕೊಂಡುದಲ್ಲವೆ ನ್ಯಾವಿಗೇಷನ್ ಆಕ್ಟ್ ಎಂಬ ಏರ್ಪಾಟಿನಿಂದ ತಮ್ಮ ನೌಕಾಪ್ರಾಬಲ್ಯವನ್ನೂ ಸ್ಥಾಪಿಸಿ ಕೊಂಡರು. 18ನೆ ಶತಮಾನದಲ್ಲೆಲ್ಲ ಬ್ರಿಟಿಷ್ ಮತ್ತು ಫ್ರೆಂಚರ ಸಾಮ್ರಾಜ್ಯ ಸಂಪಾದನೆಯ ಸ್ಪರ್ಧೆ ವಿಜೃಂಭಿಸಿತು. ಹಿಂದುಸ್ತಾನದಲ್ಲಿ ಮಾತ್ರವಲ್ಲದೆ ಉತ್ತರ ಅಮೆರಿಕದಲ್ಲಿ ಇಬ್ಬರ ಹಗೆತನವು ರೇಗಿ ಜ್ವಲಿಸಿತು. ಆಸ್ಟ್ರಿಯ ಪಟ್ಟದ ಜಗಳವೆದ್ದ ಕಾಲಕ್ಕೆ ಈ ಪೋಟಾಪೋಟಿಯು ಸ್ಫುಟವಾಗಿತ್ತು.

**ಸಾಮ್ರಾಜ್ಯ ಸ್ಪರ್ಧೆ**

### ಹಿಂದುಸ್ತಾನದಲ್ಲಿ

ಹಿಂದೂಸಾಗರದಲ್ಲಿ ಇಂಗ್ಲಿಷರ ಹಡಗುಗಳು ಎಲಿಸಬೆತ್ ರಾಣಿಯ ಕಾಲ ದಲ್ಲಿಯೇ ತೋರಿಕೊಂಡವು. ಈಸ್ಟಿಂಡಿಯ ಕಂಪನಿಯು 1600ರಲ್ಲಿ ರೂಪಗೊಂಡಿತ್ತು. ಸೂರತ್, ಮಚಲಿಬಂದರ್ ಮುಂತಾದ ತೀರಪಟ್ಟಣಗಳಲ್ಲಿ ಮಳಿಗೆಗಳನ್ನು ಕಟ್ಟಿ ಕೊಂಡು ವ್ಯಾಪಾರ ಮಾಡುತ್ತಿದ್ದ ಆ ಕಂಪನಿಯವರು ಹಿರೇ ಜೇಮ್ಸ್ ದೊರೆಯನ್ನು ಮೆಚ್ಚಿಸಿ ಜಹಾಂಗೀರ್ ಪಾದಶಹನ ಬಳಿಗೊಬ್ಬ ರಾಯಭಾರಿಯನ್ನು ಕಳುಹಿಸಿ ಅನುಕೂಲ ಗಳಿಗಾಗಿ ಯತ್ನಿಸಿದರು. ತರುವಾಯ ಸ್ವತಂತ್ರವಾಗಿ ಮದರಾಸ್ ಕಲಕತ್ತೆ

**ಇಂಗ್ಲಿಷ್ ಕಂಪನಿ**

ಮುಂಬಯಿಗಳಲ್ಲಿ ಸ್ಥಳ ಸಂಪಾದಿಸಿಕೊಂಡು ವ್ಯಾಪಾರ ಹೆಚ್ಚಿಸಿಕೊಂಡು ಅಪಾರ ಲಾಭವನ್ನು ಸಂಪಾದಿಸಿದರು.

**ಫ್ರೆಂಚರ ಜಾಣ್ಮೆ**

ಫ್ರೆಂಚರು ಈ ವ್ಯಾಪಾರದಲ್ಲಿ ಪ್ರವೇಶಿಸಿದ್ದು ನಿದಾನ. 14ನೆ ಲೂಯಿ ದೊರೆಯ ಆಳಿಕೆಯ ಪ್ರಾರಂಭದಲ್ಲಿ ಅವರ ಮಳಿಗೆಗಳು ಸಿದ್ಧವಾಗಿ ಕ್ರಮವಾಗಿ ಬಲಗೊಂಡವು. 17ನೆ ಶತಮಾನದಲ್ಲೆಲ್ಲ ಹಿಂದುಸ್ತಾನದಲ್ಲಿ ಇಂಗ್ಲಿಷರೂ ಫ್ರೆಂಚರೂ ಪರಸ್ಪರಸ್ನೇಹದಿಂದಲೇ ವರ್ತಿಸುತ್ತಿದ್ದರು. ಇಂಗ್ಲಿಷ್ ಪಟ್ಟದ ಜಗಳವೆದ್ದಾಗ ಕೂಡ ಇವರಿಬ್ಬರಿಗೆ ಹೊಡೆದಾಟ ಸಂಭವಿಸಲಿಲ್ಲ. ಮುಘಲ ಬಾದಶಾಹಿಯು ಕೆಟ್ಟ ತರುವಾಯ ತೋರಿಕೊಂಡ ನಾನಾ ನಾಯಕರ ಕಾಲದಲ್ಲಿ ಫ್ರೆಂಚರು ಮುಂದಾದರು. ಆರ್ಕಾಟು ನವಾಬನಿಗೆ ಬೇಕಾದವರಾಗಿ ಪುದುಚೇರಿಯಲ್ಲಿ ಕೋಟೆ ಕಟ್ಟಿದರು. ಇಂಗ್ಲಿಷರೂ ಕೋಟೆಗಳನ್ನು ಕಟ್ಟಿದರು. ಇಬ್ಬರಿಗೂ ಅಸೂಯೆ ಹೆಚ್ಚುತ್ತ ಬಂತು. ಫ್ರೆಂಚರಿಗೆ ಮುಖಂಡನಾಗಿದ್ದ **ಡೂಪ್ಲೆ** (Dupleix)ಯು ಅತಿಚತುರ, ದೂರಾಲೋಚನಾಪರ. ಆಸ್ಟ್ರಿಯ ಪಟ್ಟದ ಜಗಳದಲ್ಲಿ ಫ್ರೆಂಚರು ಮದರಾಸನ್ನು ಇಂಗ್ಲಿಷರಿಂದ ಸುಲಭವಾಗಿ ಕಿತ್ತುಕೊಂಡುದಲ್ಲದೆ **ಅನ್ವರುದ್ದೀನ್** ನವಾಬನ ಸೈನ್ಯವನ್ನು ಸೋಲಿಸಿ ಪ್ರಖ್ಯಾತಿಯನ್ನು ಗಳಿಸಿದರು. ಕರಾರು ಪ್ರಕಾರ ಮದರಾಸನ್ನು ಹಿಂತಿರುಗಿ ಕೊಟ್ಟಮೇಲೆ ಡೂಪ್ಲೆ ಎಂಟು ಕಣ್ಣುಳ್ಳವನಾಗಿ ಸಮಯ ಹೊಂಚುತ್ತಲಿದ್ದು ಅದೇ ವರ್ಷದಲ್ಲಿ ಫ್ರೆಂಚರದೊಂದು ಸಾಮ್ರಾಜ್ಯವನ್ನು ಕಟ್ಟುವ ಸನ್ನಾಹಮಾಡಿದನು. ಹಿಂದುಸ್ತಾನದ ನಿವಾಸಿಗಳು ಸ್ವಭಾವತಃ ಧೀರರಾದುದರಿಂದ ಯೋಗ್ಯರಾದ ನಾಯಕರಿದ್ದಲ್ಲಿ ಭಕ್ತಿ ಸ್ಥೈರ್ಯಗಳಿಂದ ವರ್ತಿಸಿ ನಾನಾ ನಾಯಕರ ಕೂಲಿ ಸೈನ್ಯಗಳನ್ನು ಸುಲಭವಾಗಿ ಸೋಲಿಸಬಲ್ಲರೆಂಬುದನ್ನೂ ಪಟ್ಟದ ಜಗಳಗಳಲ್ಲಿ ಪ್ರವೇಶಿಸಿ ಉತ್ಸವಮೂರ್ತಿಯಂತೆ ಒಬ್ಬ ಪ್ರಭುವನ್ನು ನಿಲ್ಲಿಸಿ ಅಧಿಕಾರವನ್ನು ಜಾಣರಾದವರು ಪಡೆಯಬಹುದೆಂಬುದನ್ನೂ ಆ ಡೂಪ್ಲೆ ಮನಸ್ಸಿನಲ್ಲಿ ಕಂಡಿದ್ದನು. ಹಿಂದುಸ್ತಾನದಲ್ಲಿ ಸಾಮ್ರಾಜ್ಯನಿರ್ಮಾಣವನ್ನು ಹಿಂದುಸ್ತಾನದವರಿಂದಲೇ ಮಾಡಿಸಿಕೊಳ್ಳುವ ಉಪಾಯವನ್ನು ಯೋಚಿಸಿದ್ದನು.

**ಪಟ್ಟದ ಜಗಳಗಳು**

ನೈಸಾಮುಲ್‌ಮುಲ್ಕ್ ತನ್ನ 104ನೆ ವರ್ಷದಲ್ಲಿ ಪ್ರಾಣಬಿಟ್ಟಾಗ ಮೊಮ್ಮಗನಿಗೂ ಮಗನಿಗೂ ಮೊದಲಾದ **ಸುಭಾದಾರಿ ಜಗಳ** ಡೂಪ್ಲೆಗೆ ಒಳ್ಳೆಯ ಸಮಯ. ಹೈದರಾಬಾದಿನಲ್ಲಿ ತನ್ನ ಬೊಂಬೆಯಂತಿರುವ ಸುಭಾದಾರನನ್ನಲ್ಲದೆ **ಆರ್ಕಾಟಿ**ನಲ್ಲಿಯೂ ತನ್ನ ಆಶ್ರಿತನಾದ **ನವಾಬ**ನೊಬ್ಬನನ್ನು ಸ್ಥಾಪಿಸುವ ಯೋಚನೆಮಾಡಿದನು. ಫ್ರೆಂಚ್ ಸೈನ್ಯಗಳು ಸುಲಭವಾಗಿ ಹಿಂದುಸ್ತಾನೀ ಸೈನ್ಯಗಳನ್ನು ಸೋಲಿಸಿದುವು. ಬ್ರಿಟಿಷರೂ ಸುಮ್ಮನಿರಲಾರದೆ ಪ್ರತಿಪಕ್ಷವನ್ನು ಹಿಡಿದರು. **ಅಂಬೂರು ಕಾಳಗ**ವಾಯಿತು,

ಚಂದಾಸಾಹೇಬನ ಮೇಲ್ಮೆಯಾಯಿತು, ಫ್ರೆಂಚರು **ಮುಸಫರ್ ಜಂಗನನ್ನು** ಹೈದರಾಬಾದಿನ ಗದ್ದುಗೆಯಲ್ಲಿ ಪ್ರತಿಷ್ಠೆಮಾಡಿಸಿದ್ದೂ ಆಯಿತು. ಆಗ **ಮಹಮ್ಮದಾಲಿಯ** ಪಕ್ಷವನ್ನು ಹಿಡಿದು ಇಂಗ್ರಿಷರ ಕ್ಲೈವನು ನುಗ್ಗಿ ಆರ್ಕಾಟನ್ನು ಮುತ್ತಿ ಅದನ್ನು ರಕ್ಷಿಸಿದ್ದೂ ಆಯಿತು. ಈ ಹೊಡೆದಾಟಗಳು 1748-1752ರಲ್ಲಿ, ಅಂದರೆ ಯೂರೋಪಿನಲ್ಲಿ ಬ್ರಿಟಿಷರೂ ಫ್ರೆಂಚರೂ ಸ್ನೇಹಶಾಂತಿಗಳಿಂದಿದ್ದಾಗ ನಡೆದುವು. 15ನೆ ಲೂಯಿಯ ಮಂತ್ರಿಗಳು ಕಡೆಗೆ ಡೂಪ್ಲೆಯನ್ನು ಹಿಂತಿರುಗಿ ಕರೆಸಿಕೊಂಡು ಅವಮಾನ ಮಾಡಿದರು. ಆ ದೊರೆಯೂ ಆತನ ಆಸ್ಥಾನಿಕರೂ ದೂರಾಲೋಚನೆಯಿಲ್ಲದ ಅವಿವೇಕಿಗಳಾಗಿ ವರ್ತಿಸಿದರು. ಇತ್ತ ಅಸಮರ್ಥರಾದ ಹಿಂದುಸ್ತಾನೀ ರಾಜರನ್ನು ಗದ್ದುಗೆಗಳಿಗೇರಿಸಿ ಅವರ ಹಣದಿಂದ ತಮ್ಮ ಬಲವನ್ನು ಪೋಷಿಸುವ ಉಪಾಯವನ್ನು ಎಲ್ಲ ಪರಂಗಿಯವರೂ ಮನಗಂಡರು. ಡೂಪ್ಲೆ ತೋರಿಕೊಟ್ಟ ಆ ಉಪಾಯವನ್ನು ಬ್ರಿಟಿಷರು ಹಿಡಿದು ಆರ್ಕಾಟಿನಲ್ಲಿ ತಮ್ಮ ಭೃತ್ಯನಂತಿದ್ದ ನವಾಬನನ್ನಿಟ್ಟು ಪ್ರಬಲರಾದರು. ಫ್ರೆಂಚರಿಗೂ ಬ್ರಿಟಿಷರಿಗೂ ಬಲವಾದ ದ್ವೇಷ ಬೆಳೆದು ಒಬ್ಬರನ್ನೊಬ್ಬರು ಕಚ್ಚಲು ಸಮಯ ಹೊಂಚುತ್ತಿದ್ದರು.

**ನಿತ್ಯಕಲಹ**

ಹಿಂದುಸ್ತಾನದಲ್ಲಿ ಒಬ್ಬರಮೇಲೊಬ್ಬರು ವಿಷಕಾರುತ್ತಿದ್ದಂತೆಯೇ ಉತ್ತರ ಅಮೆರಿಕದಲ್ಲಿ ಫ್ರೆಂಚರೂ ಬ್ರಿಟಿಷರೂ ಹಗೆತನವನ್ನು ಸಾಧಿಸುತ್ತಿದ್ದರು. ಯೂರೋಪಿನಲ್ಲಿ ಜಗಳವಿಲ್ಲದಿದ್ದರೂ ಅಮೆರಿಕ ಹಿಂದುಸ್ತಾನಗಳಲ್ಲಿ ನಿತ್ಯಕಲಹವಾಗಿ ಐಲಾಷಾಪೆಲ್ ಕರಾರೆಂಬುದು ಕಸಕ್ಕಿಂತಲೂ ಕಡೆಯಾಗಿತ್ತು.

### ಉತ್ತರ ಅಮೆರಿಕದಲ್ಲಿ

ಅಮೆರಿಕದಲ್ಲಿ ಸ್ಪೈನಿನವರೇ ಅಗ್ರಗಾಮಿಗಳು. ವೆಸ್ಟಿಂಡೀಸ್ ದ್ವೀಪಗಳು, ಮೆಕ್ಸಿಕೊ, ಮಧ್ಯ ಅಮೆರಿಕ, ದಕ್ಷಿಣ ಅಮೆರಿಕದ ಉತ್ತರ ಪ್ರದೇಶಗಳು ಅವರ ಸ್ವಾಧೀನದಲ್ಲಿದ್ದವು. ಟ್ಯೂಡರ್ ಕಾಲದಲ್ಲಿ ಇಂಗ್ಲಿಷರು ನ್ಯೂಫೌಂಡ್ಲಂಡ್ ಮತ್ತು ಲಾಬ್ರಡಾರ್ ಪ್ರದೇಶಗಳನ್ನು ಕಂಡಾಗ್ಯೂ ಅಲ್ಲಿ ನೆಲೆಸುವ ಪ್ರಯತ್ನ ಮಾಡಲಿಲ್ಲ. ಮಧ್ಯದಾರಿಯಲ್ಲಿ ಹೊಂಚಿ ಸ್ಪಾನಿಷ್ ಹಡಗುಗಳನ್ನು ಲೂಟಿ ಹೊಡೆಯುವುದು ಆಗ ಸುಲಭವಾಗಿತ್ತು. ಆರ್ಮೇಡ ಧ್ವಂಸವಾದಮೇಲೆ ಇಂಗ್ಲಿಷರು ನೆಲಸುಗಳ ಯೋಚನೆ ಮಾಡಿದರು. 1607ರಲ್ಲಿ **ವರ್ಜಿನಿಯ** (Virginia) ಎಂಬ ಪ್ರದೇಶದಲ್ಲಿ

**ಇಂಗ್ಲಿಷರ ಕ್ಷೇತ್ರಗಳು**

ಕೆಲವರು ನೆಲೆಸಿದರು. ನಿದಾನವಾಗಿ ಆ ಕ್ಷೇತ್ರವನ್ನು ಕಟ್ಟಿ ಬಲಪಡಿಸಿಕೊಂಡರು. 1620ರಲ್ಲಿ ಪ್ಯೂರಿಟರ್ ಪಂಥದವರು ಮೇಫ್ಲವರ್ ಹಡಗಿನಲ್ಲಿ ಡಚ್ಚರೊಂದಿಗೆ ಹೊರಟು ಉತ್ತರದಲ್ಲಿ ನೆಲೆಸಲು ಪ್ರಾರಂಭಿಸಿದರು. ಹಿರೇ ಚಾರ್ಲ್ಸ್‌ ಕಾಲದಲ್ಲಿ ಅನೇಕ ಪ್ಯೂರಿಟನ್ನರು ಇಂಗ್ಲಂಡನ್ನು ತ್ಯಜಿಸಿ ಹೊಸ ಕ್ಷೇತ್ರಗಳಲ್ಲಿ ನೆಲೆಸಿಕೊಂಡರು. ಉತ್ತರದಲ್ಲಿ

ಪ್ಯೂರಿಟನ್ನರ ನೆಲಸುಗಳೇ ಆದವು. ಅವರ ನೆಲಸುಗಳಲ್ಲಿ **ಮಾಸಚುಸೆಟ್ಸ್** (Massachusetts) ಎಂಬುದು ಮುಖ್ಯವಾಯಿತು. 2ನೆಚಾರ್ಲ್ಸ್ನ ಕಾಲದ ಯುದ್ಧದಲ್ಲಿ ಪರಾಜಿತರಾದ ಡಚ್ಚರು ತಾವು ಕಟ್ಟಿಕೊಂಡಿದ್ದ ಕ್ಷೇತ್ರಗಳನ್ನು ಬಿಟ್ಟುಕೊಟ್ಟರು. **ನ್ಯೂ ಯಾರ್ಕ್,** (New York) **ನ್ಯೂ ಜರ್ಸಿ,** (New Jersey) **ಪೆನ್ಸಿಲ್ವೇನಿಯ** (Pennsylvania)ಗಳು ಈರೀತಿ ಸಂಪಾದನೆಯಾದಮೇಲೆ ಅಲ್ಲಿಯೂ ಪ್ಯೂರಿಟನ್ನರೇ ನೆಲೆಸಿದರು. ಅದೇ ಕಾಲದಲ್ಲಿ **ಉತ್ತರ ದಕ್ಷಿಣ ಕಾರೊಲೈನ**(Carolinas)ಗಳು ರೂಪಗೊಂಡವು. **ಮೇರಿಲಂಡ್** (Maryland) ಮತ್ತು **ಜಾರ್ಜಿಯ** (Georgia) ಎಂಬವು 1688ರ ತರುವಾಯ ತೋರಿಕೊಂಡವು. ಈರೀತಿ ಪೂರ್ವತೀರಪ್ರದೇಶದಲ್ಲಿ ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ನೆಲಸುಗಳು ಬೆಳೆದವು. ಉತ್ತರದಲ್ಲಿ ಪ್ಯೂರಿಟನ್ನರು ದಕ್ಷಿಣದಲ್ಲಿ ಆಂಗ್ಲಿಕನ್ನರು. 1740ರ ವೇಳೆಗೆ ಒಟ್ಟು ಹದಿಮೂರು ನೆಲಸುಗಳಿದ್ದವು.

ಹದಿನೇಳನೆ ಶತಮಾನದಲ್ಲಿ ಫ್ರೆಂಚರೂ ಹೊರಟರು. ಅವರು **ಸೇಂಟ್ ಲಾರೆನ್ಸ್** ನದೀಮುಖವನ್ನು ಕಂಡು ನದಿಯ ಮೇಲೆ ಪ್ರಯಾಣಮಾಡಿ ಆ ನದಿಯ ಉತ್ತರಪಾರ್ಶ್ವದಲ್ಲಿ **ಕ್ವೆಬೆಕ್** (Quebec) **ಮಾಂಟ್ರೀಲ್**(Montreal)ಗಳನ್ನು ಸ್ಥಾಪಿಸಿದರು. ಖಂಡದಲ್ಲಿ ಮೊದಲಿನಿಂದ ಇದ್ದವರು ತಾಮ್ರವರ್ಣದವರು. ಫ್ರೆಂಚರು ಅವರ ಸ್ನೇಹವನ್ನು ಸಂಪಾದಿಸಿಕೊಂಡು ತಮ್ಮ ಕ್ಷೇತ್ರಗಳನ್ನು ಸಾಹಸದಿಂದ ವಿಸ್ತರಿಸಿಕೊಂಡರು. ಪಂಚಮುಹಾಸರೋವರಗಳನ್ನು ಗೊತ್ತುಮಾಡಿಕೊಂಡಮೇಲೆ ದಕ್ಷಿಣಕ್ಕೂ ಹೊರಟರು. 14ನೆ ಲೂಯಿ ಕಾಲದಲ್ಲಿ ಕೆಲವರು ಸಾಹಸಿಗಳು **ಮಿಸಿಸಿಪ್ಪಿ, ಓಹಿಯೋ** ನದಿಗಳನ್ನೂ ಸುತ್ತಮುತ್ತಣ ಪ್ರದೇಶಗಳನ್ನೂ ಕಂಡರು. ಹಿಂದುಸ್ತಾನದಲ್ಲಿ ಡೂಪ್ಲೆ ಹೇಗೋ ಹಾಗೆಯೇ ಉತ್ತರ ಅಮೆರಿಕದಲ್ಲಿ **ಲಾ ಸಾಲೆ** (La Salle) ಯೆಂಬಾತನು ಓಹಿಯೊ ಮಿಸಿಸಿಪ್ಪಿಗಳನ್ನು ಹಿಡಿದು ಮೆಕ್ಸಿಕೊ ಖಾರಿಯವರೆಗೆ ಹೊರಟು **ನ್ಯೂ ಆರ್ಲಿಯನ್ಸ್** (New Orleans) ಎಂಬ ಪಟ್ಟಣವನ್ನು ಪ್ರಾರಂಭಿಸಿ ವಿಶಾಲವಾದ ಅಷ್ಟು ಪ್ರದೇಶಕ್ಕೂ **ಲೂಯಿಸಿಯಾನ** (Louisiana) ಎಂಬ ಹೆಸರನ್ನಿಟ್ಟನು. ತೀರಪ್ರದೇಶದಲ್ಲಿದ್ದ ಬ್ರಿಟಿಷರಿಗೂ ಒಳಭಾಗದಲ್ಲಿದ್ದ ಫ್ರೆಂಚರಿಗೂ ಕಾಲಕ್ರಮದಲ್ಲಿ ಅಸೂಯೆ ಬೆಳೆಯಿತು. ಆಸ್ಟ್ರಿಯ ಪಟ್ಟದ ಜಗಳದಲ್ಲಿ ಯುದ್ಧವಾಗಿ ಸೆಂಟ್ ಲಾರೆನ್ಸ್ ಮುಖದಲ್ಲಿ ಪ್ರಧಾನ ದುರ್ಗವಾಗಿದ್ದ **ಲೂಯಿಸ್ಬುರ್ಗ್** ಬ್ರಿಟಿಷರ ಕೈ ಸೇರಿತು. 1748ರಲ್ಲಿ ಕರಾರು ನಡೆದ ಬಳಿಕ ಆ ದುರ್ಗವನ್ನು ಬ್ರಿಟಿಷರು ಬಿಡಲಾರದೆ ಬಿಟ್ಟುಕೊಟ್ಟರು.

**ಫ್ರೆಂಚರ ಕ್ಷೇತ್ರಗಳು**

ಕುಂಟುಕರಾರಿನಿಂದ ಜಗಳ ನಿಂತೀತೆ? ಫ್ರೆಂಚರು ದೂರಾಲೋಚನೆ ಮಾಡಿ ಬ್ರಿಟಿಷರನ್ನು ತೀರಪ್ರದೇಶದಲ್ಲಿ ಬಂಧಿಸುವ ಉಪಾಯವನ್ನು ಹಿಡಿದರು. ಈರೀ (Erie) ಸರೋವರದಿಂದ ನ್ಯೂಆರ್ಲಿಯನ್ಸ್ವರೆಗೆ ಅವರದೇ ಆಗಿತ್ತು. ಆ ಪ್ರದೇಶದಲ್ಲಿ

ಬ್ರಿಟಿಷರು ಕಾಲಿಡದಂತೆ ಅಲಿಘನಿಪರ್ವತದ ಉದ್ದಕ್ಕೂ ಕೋಟೆಗಳ ಸಾಲನ್ನು ಕಟ್ಟಲಾರಂಭಿಸಿದರು. ಫ್ರೆಂಚರು ಕಟ್ಟಿದ **ಕ್ರೌನ್ ಪಾಯಿಂಟ್** (Crown Point) ಮತ್ತು **ಟೈಕಾಂಡೆರೋಗ** (Ticonderoga) ಕೋಟೆಗಳಿಗೆದುರಾಗಿ ಇಂಗ್ಲಿಷರು **ಆಸ್ವಿಗೊ**(Oswego) ಮತ್ತು **ವಿಲಿಯಂ ಹೆನ್ರಿ** (Fort William Henry) ಎಂಬ ಕೋಟೆಗಳನ್ನು ಕಟ್ಟಿದರು. ಕೋಟೆಕಟ್ಟುವ ಸ್ಪರ್ಧೆಯಲ್ಲಿ ಚಿಲ್ಲರೆ ಲಡಾಯಿಗಳು ನಡೆಯುತ್ತಿದ್ದವು. ಹೀಗಿರಲು 1754ರಲ್ಲಿ ಫ್ರೆಂಚರು ಇಂಗ್ಲಿಷರ ಪಶ್ಚಿಮಕ್ಕೆ **ದುಕೇನ್** (Fort Duquesne) ಎಂಬ ದೊಡ್ಡ ದುರ್ಗವನ್ನು ಪ್ರಾರಂಭಿಸಿದರು. ಆ ದುರ್ಗ ನಿರ್ಮಾಣವಾದರೆ ತಮಗೆ ಅಷ್ಟದಿಗ್ಬಂಧನದಂತೆ ಭಾವಿಸಿ ಬ್ರಿಟಿಷರು ಅದನ್ನು ಭಂಗಪಡಿಸಲು ಮೊದಲಿಟ್ಟರು. ಬ್ರಿಟಿಷರ ಪ್ರಯತ್ನಗಳು ಹಾಳಾದವು. ಜಗಳವು ಜೋರಾಯಿತು.

**ಕೋಟೆಕಟ್ಟುವ ಜಗಳ**

## ಸಪ್ತವಾರ್ಷಿಕ ಯುದ್ಧ (1756-1763)

1748ರಲ್ಲಿ ಐಲಾಷಾಪೆಲ್ ಕರಾರಾದರೂ ಅಮೆರಿಕ ಹಿಂದುಸ್ತಾನಗಳಲ್ಲಿ ಈ ರೀತಿ ಇಂಗ್ಲಿಷರೂ ಫ್ರೆಂಚರೂ ಯುದ್ಧದಲ್ಲಿಯೇ ತೊಡಗಿದ್ದರು. ಯೂರೋಪಿನಲ್ಲಿ ಶಾಂತತೆಯಿದ್ದರೂ ದೂರಕ್ಷೇತ್ರಗಳಲ್ಲಿರಲಿಲ್ಲ. ದೂರಕ್ಷೇತ್ರಗಳಲ್ಲಿದ್ದ ಅಧಿಕಾರಿಗಳು ಕಳುಹಿಸಿಕೊಟ್ಟ ಬಿನ್ನಹಗಳನ್ನು ಇಂಗ್ಲಿಷ್ ಮಂತ್ರಿಗಳಾಗಲಿ ಫ್ರೆಂಚ್ ದೊರೆಯಾಗಲಿ ಪುರಸ್ಕರಿಸಲಿಲ್ಲ. ಎಂಟು ವರ್ಷಗಳು ಕಳೆಯುವುದರಲ್ಲಿ ಯೂರೋಪಿನಲ್ಲಿಯೇ ಕಾಡ್ಗಿಚ್ಚು ತೋರಿದಂತೆ ಯುದ್ಧರೇಗಿತು. 1756ರಲ್ಲಿ ಆಸ್ಟ್ರಿಯ, ರಷ್ಯ ಮತ್ತು ಫ್ರಾನ್ಸ್ ಮೂರು ಒಟ್ಟುಗೂಡಿ ಪ್ರಷ್ಯದ ಫ್ರೆಡರಿಕ್ಕನ ಸೊಕ್ಕು ಮುರಿಯುವ ಉದ್ದೇಶದಿಂದ ಸೈನ್ಯಗಳನ್ನು ಹೊರಡಿಸಿದವು.

ಸೈಲೀಷಿಯ ಪ್ರಾಂತ ನಷ್ಟವಾದುದನ್ನು ಆ ಚಕ್ರವರ್ತಿನಿ ಮರಿಯ ಥೆರೀಸ ಸಹಿಸಲೇ ಇಲ್ಲ. ಗತ್ಯಂತರವಿಲ್ಲದೆ 1748ರಲ್ಲಿ ಆ ನಷ್ಟವನ್ನೊಪ್ಪಿದ್ದವಳು ಆ ಬಳಿಕ ಹಗಲಿರುಳೂ ಚಿಂತಿಸುತ್ತಿದ್ದು ಕಡೆಗೆ ಫ್ರಾನ್ಸಿನ ಸ್ನೇಹವನ್ನು ಸಂಪಾದಿಸಿಕೊಳ್ಳುವ ಮನಸ್ಸು ಮಾಡಿದಳು. ಬೋರ್ಬನ್ನರಿಗೂ ಹಾಪ್ಸ್‌ಬರ್ಗರಿಗೂ ಮೈತ್ರಿಯೆಂಬುದೇ ಅದುವರೆಗೂ ಇರಲಿಲ್ಲ. ಫ್ರಾನ್ಸಿಗೆ ಆಸ್ಟ್ರಿಯ ಬದ್ಧವೈರಿಯಾಗಿಯೇ ಇತ್ತು. ಆದರೆ ಚಕ್ರವರ್ತಿನಿಯ ಮಂತ್ರಿಯ ಚಾತುರ್ಯದಿಂದಲೂ ಫ್ರೆಂಚ್ ದೊರೆಯ ಅವಿವೇಕದಿಂದಲೂ ಮೈತ್ರಿಯು ಕೂಡಿತು.* ತನ್ನ ಪಕ್ಷಪಾತಿಗಳಾಗಿ ಫ್ರೆಂಚ್ ದೊರೆಯೂ ರಷ್ಯಾದ ಚಕ್ರವರ್ತಿನಿಯೂ ಒಗ್ಗಿದಕೂಡಲೇ ಆಸ್ಟ್ರಿಯದ

**ಮರಿಯ ಥೆರೀಸಳ ಪ್ರಯತ್ನ**

* ಇದನ್ನು ಚರಿತ್ರೆಯಲ್ಲಿ (Diplomatic Revolution) ಸಂಧಿವಿಗ್ರಹದ ಅಚ್ಚರಿಯೆಂದು ಕರೆಯುವರು.

ಚಕ್ರವರ್ತಿನಿ ಪ್ರಷ್ಯದ ದೊರೆಯ ಮೇಲೆ ಯುದ್ಧ ಕಟ್ಟಿದಳು. ಆಗ ಬ್ರಿಟಿಷರು ತಮ್ಮ ಹಗೆಗಳಾದ ಫ್ರೆಂಚರಿಗೆ ಎದುರುಪಕ್ಷವನ್ನು ಹಿಡಿದರು; ಪ್ರಷ್ಯದ ಫ್ರೆಡರಿಕ್ಕಿಗೆ ಸಹಾಯ ಮಾಡುವವರಾದರು. 1756ರಲ್ಲಿ ಯುದ್ಧ ಪ್ರಾರಂಭವಾಯಿತು.

ಇದೇ **ಸಪ್ತವಾರ್ಷಿಕಯುದ್ಧ.** ಬ್ರಿಟಿಷ್ ಸಾಮ್ರಾಜ್ಯವೆಂಬುದು ಭದ್ರಗೊಳ್ಳುವುದಕ್ಕೂ ವಿಸ್ತಾರಪಡೆಯುವುದಕ್ಕೂ ಮೂಲಭೂತವಾದುದು. ಇಂಗ್ಲಂಡ್ ಮತ್ತು ಫ್ರಾನ್ಸ್‌ಗಳ ಪೋಟಾಪೋಟಿಯೊಂದುಕಡೆಯಾದರೆ ಆಸ್ಟ್ರಿಯ ಮತ್ತು ಪ್ರಷ್ಯ ಪ್ರಭುಗಳ ಜಗಳವಿನ್ನೊಂದುಕಡೆ ಈ ಭಾರಿ ಯುದ್ಧಕ್ಕೆ ಕಾರಣಗಳು. 1756ರಲ್ಲಿ ಮೊದಲಾದುದು 1763ರ ವರೆಗೆ ರೇಗಿತು. ಯುದ್ಧಗಳು ಯೂರೋಪ್ ಹಿಂದುಸ್ತಾನ್ ಅಮೆರಿಕಗಳಲ್ಲಿ ಮಾತ್ರವಲ್ಲದೆ ಆಫ್ರಿಕದ ತೀರಗಳಲ್ಲಿಯೂ ಅಟ್ಲಾಂಟಿಕ್ ಪೆಸಿಫಿಕ್ ಹಿಂದೂ ಸಾಗರಗಳಲ್ಲಿಯೂ ನಡೆಯಿತು.

**1756-1763**

ಇಂಗ್ಲಂಡಿನಲ್ಲಿ 2ನೆ ಜಾರ್ಜ್ ದೊರೆಯ ಆಳಿಕೆಯೇ ನಡೆಯುತ್ತಿತ್ತು. ಪೆಲ್ಹಂ ಎಂಬ ಹೆಸರಿನ ಅಣ್ಣತಮ್ಮಂದಿರಲ್ಲಿ ಹೆನ್ರಿ ಸತ್ತು ಥಾಮಸ್ (Thomas) ಎಂಬಾತನು **ನ್ಯೂಕಾಸಲಿನ ಡ್ಯೂಕ್** (Duke of Newcastle) ಎಂಬ ಬಿರುದನ್ನು ತಾಳಿ ಮುಖ್ಯ ಮಂತ್ರಿಯಾಗಿದ್ದನು. ಫ್ರಾನ್ಸ್ ಮತ್ತು ಸ್ಪೈನ್ ದೇಶಗಳು ಒಟ್ಟಾಗಿಯೇ ಯುದ್ಧದಲ್ಲಿ ಸೇರಬಹುದಾಗಿದ್ದುದರಿಂದ ಬ್ರಿಟಿಷರು ಎರಡುದೇಶಗಳೊಡನೆ ಯುದ್ಧನಡೆಸುವ ಸಮಯವಾಗಿತ್ತು. ನ್ಯೂಕಾಸಲ್ ಶ್ರೀಮಂತನಿಗೆ ಯುದ್ಧನಡೆಸುವ ಯೋಗ್ಯತೆ ಸುತರಾಂ ಇರಲಿಲ್ಲ. ಯುದ್ಧವೊದಲಾದಾಗ ಇಂಗ್ಲಿಷರಿಗೆ ಎಲ್ಲೆಡೆಗಳಲ್ಲಿಯೂ ಅಪಜಯವೇ ತೋರಿತು.

**ಅಯೋಗ್ಯಮಂತ್ರಿ**

**ಮೈನಾರ್ಕ ದ್ವೀಪ**ವನ್ನು ಫ್ರೆಂಚರು ಮುತ್ತಿದರು. ಅದನ್ನುಳಿಸಿಕೊಳ್ಳಲು ಇಂಗ್ಲಿಷ್ ಮಂತ್ರಿಗಳು **ಅಡ್ಮಿರಲ್ ಬಿಂಗ**ನನ್ನು ಕಳುಹಿಸಿದರು. ಆ ನೌಕಾಪತಿ ಅಲ್ಲಿ ತಲಪಿದಾಗ ತನ್ನಲ್ಲಿದ್ದ ಬಲ ಸಾಲದಿದ್ದುದರಿಂದ ಅದಷ್ಟುಮಾತ್ರ ಪ್ರಯತ್ನ ಮಾಡಿ ಕಡೆಗೆ ಮೈನಾರ್ಕವನ್ನು ಫ್ರೆಂಚರಿಗೆ ಬಿಟ್ಟುಬಂದನು. ಸಹಜ ಧೀರನಾಗಿದ್ದ ಆ ನೌಕಾಪತಿಯನ್ನು ಹೇಡಿಯೆಂದು ಅವಮಾನಪಡಿಸಿ ಮಂತ್ರಿಗಳು ತಮ್ಮ ಹೆಸರನ್ನುಳಿಸಿಕೊಳ್ಳುವ ಸ್ವಾರ್ಥದಿಂದ ಗುಂಡಿಗಿಟ್ಟರು. ಅತ್ತ ಅಮೆರಿಕದಲ್ಲಿ ಆಸ್ವಿಗೋ ಮತ್ತು ವಿಲಿಯಂ ಹೆನ್ರಿ ಕೋಟೆಗಳೆರಡನ್ನೂ ಫ್ರೆಂಚರು ಕಿತ್ತುಕೊಂಡರು. ಪ್ರಷ್ಯದ ದೊರೆಯ ಸಹಾಯಕ್ಕೆಂದು ಹೊರಟಿದ್ದ ಇಂಗ್ಲಿಷ್ ಸೈನ್ಯವು **ಹೇಸ್ಟೆನ್ಬೆಕ್** (Hastenbeck) ಎಂಬಲ್ಲಿ ಫ್ರೆಂಚರಿಗೆ ಸಿಕ್ಕಿ ಶರಣೆಂದು (Convention of Klosterzeven) ಭಾರಿ

**1756-57ರಲ್ಲಿ**

ಅವಮಾನಪಟ್ಟು ಹಿಂತಿರುಗಿತು. ಬಂಗಾಳದಲ್ಲಿ ಸಿರಾಜುದ್ದೌಲನ ಮುತ್ತಿಗೆಯನ್ನೆದುರಿಸಲಾರದೆ **ಕಲಿಕತ್ತೆ**ಯನ್ನು ಬಿಟ್ಟು ಇಂಗ್ಲಿಷರು ಪಲಾಯನಮಾಡಿದರು. ಎಲ್ಲೆಲ್ಲಿಯೂ ಪರಾಜಯ ಅವಮಾನಗಳೇ ಇಂಗ್ಲಿಷರಿಗಾಯಿತು.

**ಹಿರೇಪಿಟ್ಟನ ಚಾತುರ್ಯ**

1757ರಲ್ಲಿ **ವಿಲಿಯಂಪಿಟ್** ಎಂಬಾತನು ನ್ಯೂಕಾಸಲ್‌ಶ್ರೀಮಂತನ ಜೊತೆಗೆ ಸೇರಿ ಯುದ್ಧದ ಮಂತ್ರಿಯಾದನು. ಸಾಮ್ರಾಜ್ಯವನ್ನು ದೃಢವಾಗಿ ಸಂಪಾದಿಸಿಕೊಳ್ಳಬೇಕೆಂಬ ಆಸೆ ಆತನಲ್ಲಿತ್ತು. ಉತ್ತರ ಅಮೆರಿಕದಲ್ಲಿ ಫ್ರೆಂಚರು ಸೆಂಟ್ ಲಾರೆನ್ಸ್‌ನದಿಯ ಪಕ್ಕದಲ್ಲಿ ಕಟ್ಟಿಕೊಂಡಿದ್ದ ಕನಡ ಕ್ಷೇತ್ರದ ಮೇಲೆ ಆತನಿಗೆ ನಟ್ಟ ದೃಷ್ಟಿ. "ಎಲ್ಬ್ ನದೀತೀರದಮೇಲೆ ನಾನು ಕನಡವನ್ನು ಗೆಲ್ಲುವೆ"ನೆನ್ನುತ್ತ ಅಧಿಕಾರವಹಿಸಿದ ಕೂಡಲೆ ಪಿಟ್ಟನು ಅಮೆರಿಕ ಹಿಂದುಸ್ತಾನಗಳಲ್ಲಿದ್ದ ಬ್ರಿಟಿಷ್ ಸೈನ್ಯಗಳಿಗೆ ಸಮಯಕ್ಕೆ ತಕ್ಕ ಸಹಾಯ ಹೊರಡುವಂತೆ ಏರ್ಪಡಿಸಿದನು. ನಿರ್ದಾಕ್ಷಿಣ್ಯದಿಂದ ವರ್ತಿಸಿ ಅಯೋಗ್ಯರೆನಿಸಿದ ದಳಪತಿಗಳನ್ನು ಮನೆಗೆ ಕಳುಹಿಸಿ ಉತ್ಸಾಹಿಗಳೂ ಸಮರ್ಥರೂ ಆದವರನ್ನೇ ಆರಿಸಿ ಗೊತ್ತುಮಾಡಿದನು. ದೂರಕ್ಷೇತ್ರಗಳಲ್ಲಿ ಫ್ರೆಂಚ್ ಸೈನ್ಯಗಳು ದುರ್ಬಲವಾಗಿಯೂ, ಅಸಹಾಯವಾಗಿಯೂ ಉಳಿದುಕೊಳ್ಳುವಂತೆ ಸಂಧಾನ ಹೂಡಿದನು. ಫ್ರೆಂಚರ ಸ್ಥಲಜಲಸೈನ್ಯಗಳು ಯೂರೋಪನ್ನು ಬಿಟ್ಟು ಹೊರಡದಂತೆ ನೆರವೇರಿಸಲು ಪ್ರಷ್ಯದ ಫ್ರೆಡರಿಕ್ಕಿಗೆ ಬೇಕಾದಷ್ಟು ಹಣವನ್ನು ಕಳುಹಿಸಿ ಆತನು ಪುನಃ ಪುನಃ ಸೈನ್ಯ ನಿರ್ಮಿಸಿಕೊಂಡು ಯುದ್ಧಕ್ಕೆ ನಿಲ್ಲುವಂತೆ ಸಹಾಯಮಾಡಿದನು. ಮಧ್ಯೇ ಮಧ್ಯೇ ಫ್ರಾನ್ಸಿನ ಪಶ್ಚಿಮತೀರ ಪ್ರದೇಶದಲ್ಲಿ ಬ್ರಿಟಿಷರು ದೊಡ್ಡಮುತ್ತಿಗೆ ನಡೆಸಲು ಹವಣಿಸುತ್ತಿರುವರೆಂಬ ಶಂಕೆ ಫ್ರೆಂಚರಮನಸ್ಸಿನಲ್ಲಿ ಬಲವಾಗಿ ತೋರಿಕೊಳ್ಳುವಂತೆ ಅಲ್ಲಲ್ಲಿ ಬ್ರಿಟಿಷಹಡಗುಗಳನ್ನು ಕಳುಹಿಸಿ ಫ್ರಾನ್ಸ್‌ತೀರ ಸ್ಥಳಗಳಿಗೆ ಬೆಂಕಿ ಇಡಿಸಿದನು. ಈ ಮಂಕುಬೂದಿಯ ಮಹಿಮೆಗೆ ಫ್ರೆಂಚರು ಮರುಳಾಗಿ ತಮ್ಮ ಸ್ವಂತದೇಶಕ್ಕೆ ಆಪತ್ತು ತೋರಬಹುದೆಂದು ಸೈನ್ಯಗಳನ್ನು ಮತ್ತೆಲ್ಲಿಗೂ ಕೊಟ್ಟು ಕಳುಹಿಸದೆ ಯೂರೋಪಿನಲ್ಲಿಯೇ ಸಿದ್ಧವಾಗಿಟ್ಟುಕೊಂಡರು. ಯೂರೋಪಿನಲ್ಲಿ ದೃಷ್ಟಿಯುಳ್ಳವರಾಗಿ ಅಮೆರಿಕ ಹಿಂದುಸ್ತಾನಗಳಲ್ಲಿ ತೊಂದರೆಗೆ ಸಿಕ್ಕಿದ್ದ ತಮ್ಮವರಿಗೆ ತಕ್ಕ ಸಹಾಯವನ್ನು ಕಳುಹಿಸದೆ ಇದ್ದುಬಿಟ್ಟರು.

1757-8 ವರುಷಗಳಲ್ಲಿ ಈ ಸಂಧಾನ ಸನ್ನಾಹಗಳು ನಡೆದವು. ಅಮೆರಿಕದಲ್ಲಿ ಮೂರು ಬ್ರಿಟಿಷ್ ಸೈನ್ಯಗಳು ನುಗ್ಗಿದವು. 1758 ರಲ್ಲಿ **ಲೂಯಿಸ್ಬುರ್ಗ್** ಮತ್ತು **ದುಕೇನ್** ಬ್ರಿಟಿಷರ ವಶವಾದವು. ತರುವಾಯ ಬ್ರಿಟಿಷರು ಸೆಂಟ್‌ಲಾರೆನ್ಸ್ ನದಿ ಗಭಿಮುಖವಾಗಿ ಹೊರಟು ಕ್ವಿಬೆಕ್ಕನ್ನು ಹಿಡಿಯುವ ಸನ್ನಾಹ ನಡೆಸಿದರು. ಬ್ರಿಟಿಷ್ ದಳಪತಿ **ವುಲ್ಫ್** (Wolfe) ಎಂಬುವವನು ಪರಮಸಾಹಸಿಯಾಗಿದ್ದನು. ಫ್ರೆಂಚರ

ಕಡೆ **ಮಾಂಟ್ಕಾಂ** (Montcalm) ಎಂಬಾತನೂ ಅತಿಧೀರರಲ್ಲಿ ಗಣ್ಯನಾಗತಕ್ಕವನು.

**ಉ. ಅಮೆರಿಕದಲ್ಲಿ**

1759 ರಲ್ಲಿ ಬ್ರಿಟಿಷರು ನದಿಯಮೇಲೆ ಯಾನಮಾಡಿ **ಕ್ವೆಬೆಕ್ ಕೋಟೆಯನ್ನು** ಅನಿರೀಕ್ಷಿತರೀತಿಯಲ್ಲಿ ಮುತ್ತಿ ಹಿಡಿದರು. **ಅಬ್ರಾಹಾಂಬೋರೆ** (Heights of Abraham) ಮೇಲೆ ಎರಡು ಕಡೆಯ ದಳಪತಿಗಳೂ ಸೈನ್ಯಗಳನ್ನು ನಿಲ್ಲಿಸಿ ಕದನವಾಡಿದರು. ಬ್ರಿಟಿಷರ ಕಡೆ ಜಯವಾಯಿತು; ಆದರೆ ಇಬ್ಬರು ದಳಪತಿಗಳಿಗೂ ಮೃತ್ಯುವೊದಗಿತು. ಫ್ರೆಂಚರಿಗೆ ಬೇರೆ ಸೈನ್ಯಗಳಿರಲಿಲ್ಲ. ಇದ್ದುದನ್ನುಳಿಸಿಕೊಳ್ಳಲು ಅವರು ಪಟ್ಟ ಸಾಹಸ ನಿರರ್ಥಕವಾಯಿತು. 1760 ರಲ್ಲಿ **ಮಾಂಟ್ರೀಲ್** ಪಟ್ಟಣವು ಬ್ರಿಟಿಷರ ಕೈಸೇರಿತು. **ಕನಡ** ಎಂಬ ಫ್ರೆಂಚ್ ಕ್ಷೇತ್ರವೆಲ್ಲ ಬ್ರಿಟಿಷರ ವಶವಾಯಿತು.

ಪಿಟ್ ಮಂತ್ರಿಯಾಗುವ ಮೊದಲೇ ಹಿಂದುಸ್ತಾನದಲ್ಲಿ **ಕ್ಲೈವ್ ವಾಟ್ಸನ್** ಇಬ್ಬರೂ ಕಲಿಕತ್ತೆಯನ್ನು ಪುನಃ ಸಂಪಾದಿಸಿ ಪಿತೂರಿನಡೆಸಿದ್ದರು. **ಪಲಾಸಿಕದನ**ವಾದಕೂಡಲೆ 'ಕ್ಲೈವನ ಕತ್ತೆ'ಯೆನಿಸಿದ ಮೀರ್‌ಜಾಫರನಿಗೆ ನವಾಬ್‌ಗಿರಿಯಾಯಿತು.

**ಹಿಂದುಸ್ತಾನದಲ್ಲಿ**

ಯೂರೋಪಿನ ಯುದ್ಧ ಸಮಾಚಾರ ಬಂದೊಡನೆ ಫ್ರೆಂಚರು **ಸೆಂಟ್‌ಡೇವಿಡ್ ಕೋಟೆ**ಯನ್ನು ಇಂಗ್ಲಿಷರಿಂದ ಕಿತ್ತುಕೊಂಡರು. ಆದರೆ ಕಾಲಕ್ಕೆ ಬರಬೇಕಾದ ಸಹಾಯವೊದಗದೆ ಹೋಯಿತು. ಇಂಗ್ಲಿಷರು ಸಮಯ ಸಾಧಿಸಿ **ಕುಂದೂರು** ಕದನವನ್ನು ಹೂಡಿ ಉತ್ತರ ಸರ್ಕಾರಗಳನ್ನು ವಶಪಡಿಸಿಕೊಂಡರು. 1760 ರಲ್ಲಿ **ವಂದವಾಸಿಕದನ**ದಲ್ಲಿ ಫ್ರೆಂಚರ ಸೈನ್ಯವನ್ನು ಸೋಲಿಸಿ ಪ್ರಸಿದ್ಧ **ದಳಪತಿ ಬುಸ್ಸಿ**ಯನ್ನು ಸೆರೆಮಾಡಿದರು. ತರುವಾಯ **ಪುದುಚೇರಿ** ಮುಂತಾದ ಫ್ರೆಂಚರ ಸ್ಥಳಗಳನ್ನು ಸುಲಭವಾಗಿ ಕಿತ್ತುಕೊಂಡರು. ಇಂಗ್ಲಿಷರಿಗೆ ಸಮಯೋಚಿತ ಸಹಾಯವೊದಗಿತು; ಫ್ರೆಂಚರಿಗೆ ಒದಗಲಿಲ್ಲ.

ಕನಡ ಮತ್ತು ಹಿಂದುಸ್ತಾನಗಳೆರಡರಲ್ಲಿಯೂ ಫ್ರೆಂಚರ ಸಾಮ್ರಾಜ್ಯವೆಲ್ಲ ಬ್ರಿಟಿಷರಿಗೆ ಸೇರಿಹೋದುದಕ್ಕೆ ಸಮುದ್ರಮಾರ್ಗಗಳ ಸ್ವಾಧೀನತೆಯನ್ನು ಬ್ರಿಟಿಷರು ಕಾಪಾಡಿಕೊಂಡು ಸಮುದ್ರಗಳ ಮೇಲೆ ಫ್ರೆಂಚರಿಗೆ ಅವಕಾಶವಿಲ್ಲದಂತೆ ಮಾಡಿದುದು ಮುಖ್ಯಕಾರಣ.

**ಸಮುದ್ರದ ಮೇಲೆ**

1759 ರಲ್ಲಿ ಫ್ರೆಂಚರು ತಮ್ಮ ನೌಕಾದಳವನ್ನು ಉಪಯೋಗಿಸಿ ಇಂಗ್ಲಂಡನ್ನು ಮುತ್ತುವ ಯೋಚನೆಯಿಂದ **ಟುಲಾನ್** (Toulon) ಮತ್ತು **ಬ್ರೆಸ್ಟ್** (Brest) ಎಂಬಲ್ಲಿ ಯುದ್ಧದ ಹಡಗುಗಳನ್ನು ಸಜ್ಜುಗೊಳಿಸಿದರು. ಇಂಗ್ಲಿಷ್ ನೌಕಾಪತಿಗಳು ಅವುಗಳನ್ನು ಹೊಂಚುತ್ತಲಿದ್ದರು. ಟುಲಾನಿನಿಂದ ಫ್ರೆಂಚ್ ಹಡಗುಗಳು ಹೊರಟಕೂಡಲೆ ಇಂಗ್ಲಿಷ್ **ಅಡ್ಮಿರಲ್ ಬೊಸ್ಕೇವನ್** (Boscawen) ಅವು

ಗಳನ್ನಟ್ಟಿಸಿಕೊಂಡು ಹೊರಟು **ಲೇಗಾಸ್** (Lagos) **ಕೊಲ್ಲಿ**ಬಳಿ ಅವುಗಳನ್ನು ಚದರಿಸಿ ಧ್ವಂಸಮಾಡಿದನು. ಬ್ರೆಸ್ಟಿನಿಂದ ಹೊರಟ ಹಡಗುಗಳನ್ನು **ಅಡ್ಮಿರಲ್ ಹಾಕ್** (Hawke) ಎಂಬ ಇಂಗ್ಲಿಷ್ ನೌಕಾಪತಿಯು ಅಟ್ಟಿಸಿಕೊಂಡು **ಕಿಬೆರಾ್ ಕೊಲ್ಲಿ** (Quiberon Bay) ಬಳಿ ಸೋಲಿಸಿದನು. ಫ್ರೆಂಚರ ಹಡಗುಗಳು ತೀರ ದುರ್ಬಲವಾದವು. ಇಂಗ್ಲಂಡಿನ ಮುತ್ತಿಗೆ ಯೋಚನೆಯನ್ನು ಫ್ರೆಂಚರು ಬಿಟ್ಟು ಬಿಡಬೇಕಾಯಿತು. ಈಯೆರಡು ಕಡಲ್ಗದನಗಳ ಪರಿಣಾಮವಾಗಿ ಬ್ರಿಟಿಷರಿಗೆ ಸಮುದ್ರಗಳ ಮೇಲೆ ಅಡ್ಡಿ ಇಲ್ಲದಾಯಿತು.

**ಯೂರೋಪಿನಲ್ಲಿ**

ಅತ್ತ ಯೂರೋಪಿನಲ್ಲಿ ಪ್ರಷ್ಯದ ದೊರೆ ಮಹಾಸಾಹಸಿಯಾಗಿ ತನ್ನ ರಾಜ್ಯದ ಮೇಲೆ ಕವಿದ ಶತ್ರು ಸೈನ್ಯಗಳನ್ನು ಸೋಲಿಸಿದನು. ಇಂಗ್ಲಂಡಿನಿಂದ ಹಣ ಸಹಾಯವು ಯಥೇಚ್ಛವಾಗಿ ದೊರಕುತ್ತಬರಲು ಆ ದೊರೆ ಪುನಃಪುನಃ ಸೈನ್ಯಗಳನ್ನು ಸಜ್ಜುಗೊಳಿಸಿಕೊಂಡು ಆಸ್ಟ್ರಿಯ ಫ್ರಾನ್ಸ್ ರಷ್ಯ ಪ್ರಭುಗಳೊಡ್ಡಿದ ದಳಗಳನ್ನು ಪರಾಭವಿಸಿದನು. ಆ ಫ್ರೆಡರಿಕ್ಕನಿಗೆ ಸಹಾಯವಾಗುವಂತೆ ಪಿಟ್ಟನು **ಬ್ರನ್ಸ್‌ವಿಕ್** (Brunswick) ಸಂಸ್ಥಾನದ **ಫರ್ಡಿನೆಂಡ್** (Ferdinand) ಎಂಬಾತನನ್ನು ಎತ್ತಿ ನಿಲ್ಲಿಸಿದ್ದನು. 1759ರಲ್ಲಿ ಈ ಫರ್ಡಿನೆಂಡ್ ಫ್ರೆಂಚರ ಸೈನ್ಯವೊಂದನ್ನು **ಮಿಂಡೆನ್** (Minden) ಎಂಬೆಡೆಯುಲ್ಲಿ ಸೋಲಿಸಿದನು. ಕ್ಲಾಸ್ಟರ್ ಸಿವೆರ್ ಶರಣಾಗತಿಯ ಅವಮಾನವು ಅದರಿಂದ ಮಾಯವಾಯಿತು.

**ಬ್ರಿಟಿಷ್ ಸಾಹಸ**

1760 ರಲ್ಲಿ ಇಮ್ಮಡಿ ಜಾರ್ಜ್ ದೊರೆ ಕಾಲವಶನಾಗಲು ಮುಮ್ಮಡಿ ಜಾರ್ಜ್ ಎಂಬ ಹೊಸ ದೊರೆ ಗದ್ದುಗೆಯನ್ನೇರಿದನು. ಪರಿಣಾಮವಾಗಿ ಹೊಸ ಮಂತ್ರಿಗಳು ನಿಯುಕ್ತರಾದರು. 1761 ರಲ್ಲಿ ಬ್ರಿಟಿಷ್ ಹಡಗುಗಳು ಫ್ರೆಂಚ್ ತೀರದಲ್ಲಿ **ಬೆಲ್ಲೈಲ್** (Bellcisle) ಎಂಬ ದುರ್ಗವನ್ನು ಹಿಡಿದವು. ಆಗ ಸ್ಪೈನಿನವರು ಫ್ರಾನ್ಸಿನ ಸಹಾಯಕ್ಕೆ ಸಿದ್ಧರಾಗಿ ಯುದ್ಧದಲ್ಲಿ ಸೇರಿಕೊಳ್ಳುವಂತೆ ಕಂಡಿತು. ತಾವೇ ಮೊದಲು ಯುದ್ಧವನ್ನಾರಂಭಿಸಬೇಕೆಂದು ಪಿಟ್ಟನು ಅಭಿಪ್ರಾಯಪಟ್ಟಿದ್ದನು. ಇತರ ಮಂತ್ರಿಗಳು ಅದನ್ನೊಪ್ಪಲಿಲ್ಲ. ಆಗ ಪಿಟ್ಟನು ರಾಜಿನಾಮೆ ಕೊಟ್ಟು ಮಂತ್ರಿಪದವಿಯಿಂದ ನಿವೃತ್ತನಾದನು.

ಸ್ಪೈನ್ ಸೇರಿಕೊಂಡಕೂಡಲೆ ಇಂಗ್ಲಿಷರು ಸಮುದ್ರಗಳಲ್ಲಿ ಓಡಾಡಿ ಸ್ಪಾನಿಷರು ಗೆದ್ದುಕೊಂಡಿದ್ದ ದೂರಕ್ಷೇತ್ರಗಳನ್ನು ಮುತ್ತಿದರು. ಕ್ಯೂಬ ದ್ವೀಪದಲ್ಲಿ **ಹವನ್ನ** (Havannah) ಫಿಲಿಪ್ಪೈನ್ ದ್ವೀಪಗಳಲ್ಲಿ **ಮನಿಲ್ಲ** (Manilla) ಇಂಗ್ಲಿಷರ ವಶವಾದವು. ಆಫ್ರಿಕದಲ್ಲಿ **ಗೋರೀ** (Goree) ವೆಸ್ಟಿಂಡೀಸಿನಲ್ಲಿ **ಮಾರ್ಟಿನೀಕ್, ಗ್ರಾಡೆ**

**ಲೂಪ್, ಸೇಂಟ್ ಲೂಸಿಯ** ಮುಂತಾದ ದ್ವೀಪಗಳು ಫ್ರೆಂಚರ ಕೈತಪ್ಪಿ ಇಂಗ್ಲಿಷರ ಹಸ್ತಗತವಾದವು.

**ಪ್ಯಾರಿಸ್ ಒಪ್ಪಂದ**

1763 ರಲ್ಲಿ ಇಂಗ್ಲಂಡ್, ಫ್ರಾನ್ಸ್ ಮತ್ತು ಸ್ಪೈನ್ ದೇಶಗಳಿಗೆ ಒಪ್ಪಂದವಾಗಿ ಯುದ್ಧ ನಿಂತಿತು. ಎಲ್ಲೆಲ್ಲಿಯೂ ಬ್ರಿಟಿಷರೇ ಜಯಶಾಲಿಗಳಾಗಿದ್ದರು. ಆ ಒಪ್ಪಂದದಲ್ಲಿ ಮುಖ್ಯವಾದ ಅಂಶಗಳು:—

(1) ಉತ್ತರ ಅಮೆರಿಕಖಂಡದಲ್ಲಿ ಇಂಗ್ಲಿಷರಿಗೆ ಕನಡಕ್ಷೇತ್ರವಲ್ಲದೆ, ಮಿಸಿಸಿಪ್ಪಿ ನದಿಗೆ ಮೂಡಲ ಪ್ರದೇಶ, ಸೇಂಟ್‌ಲಾರೆನ್ಸ್ ನದೀ ಮುಖದಲ್ಲಿದ್ದ ಎಲ್ಲ ದ್ವೀಪಗಳೂ, ಕೇಪ್‌ಬ್ರೆರ್ಟ ದ್ವೀಪವೂ ಸೇರತಕ್ಕದೆಂದು ಗೊತ್ತಾಯಿತು. ಸ್ಪೈನಿಗೆ ಹವನ್ನ ಹಿಂದಕ್ಕೊಪ್ಪಿಸಿ ಅದಕ್ಕೆ ಬದಲಾಗಿ ಫ್ಲಾರಿಡ ಪರ್ಯಾಯ ದ್ವೀಪವನ್ನು ಪಡೆಯಲಾಯಿತು. ವೆಸ್ಟಿಂಡೀಸ್ ದ್ವೀಪಗಳಲ್ಲಿ ಡುಮಿನಿಕ, ಟೊಬಾಗೊ, ಗ್ರೆನಡ ಎಂಬವು ಹೊಸದಾಗಿ ಲಭಿಸಿದವು. ಆಫ್ರಿಕದಲ್ಲಿ ಸೆನೆಗಾಲ್ ನದಿಯ ಪ್ರದೇಶವು ದೊರಕಿತು. ಭೂಮಧ್ಯಸಮುದ್ರದಲ್ಲಿ ಮೈನಾರ್ಕ ವಶವಾಯಿತು.

(2) ಸ್ಪೈನಿಗೆ ಫ್ಲಾರಿಡ ನಷ್ಟವಾಗಿ ಹವನ್ನ ಮತ್ತು ಮನಿಲ್ಲ ಉಳಿದವು. ಬೆಲ್ಲೈಲ್, ಗೋರೀ, ಮಾರ್ಟಿನೀಕ್, ಸೇಂಟ್ ಲೂಸಿಯಗಳು ಫ್ರಾನ್ಸಿಗೇ ಉಳಿದವು. ಹಿಂದುಸ್ತಾನದಲ್ಲಿ ಕೋಟೆ ಕಟ್ಟಕೂಡದೆಂಬ ಷರತ್ತಿನಮೇಲೆ ಪುದುಚೇರಿ ಮುಂತಾದ ಸ್ಥಳಗಳು ಪುನಃ ಫ್ರೆಂಚರಿಗೆ ಸಂದವು.

ಪಿಟ್ಟನ ಜಾಣತನ ಫಲಿಸಿ ಇಂಗ್ಲಂಡಿಗೆ ಪೂರ್ವಪಶ್ಚಿಮ ದಿಕ್ಕುಗಳಲ್ಲಿ ಅಪಾರವಾದ ಸಾಮ್ರಾಜ್ಯ ಲಭಿಸಿತು. ವಿಸ್ಮಯಕರವಾದ ಈ ಲಾಭಕ್ಕೆ ಫ್ರಾನ್ಸಿನಲ್ಲಿ ಆಳುತ್ತಿದ್ದ ನೀತಿಭ್ರಷ್ಟದೊರೆ 15ನೆ ಲೂಯಿಯ ಹೆಡ್ಡತನವೂ ಕಾರಣವಾಯಿತು. ಅಮೆರಿಕದ

**ಜಯದ ಕಾರಣಗಳು**

ತಾಮ್ರವರ್ಣದವರಾಗಲಿ ಹಿಂದುಸ್ತಾನದ ಪ್ರಭುಗಳಾಗಲಿ ಐರೋಪ್ಯ ಜನರನ್ನು ಸೋಲಿಸಿ ಸ್ವಂತಕ್ಷೇತ್ರಗಳನ್ನು ರಕ್ಷಿಸಿಕೊಳ್ಳಬಲ್ಲವರಾಗಿರಲಿಲ್ಲ. ಆಸ್ಟ್ರಿಯ ಪ್ರಷ್ಯಗಳ ಕಡೆಗೆ ಫ್ರಾನ್ಸ್ ಮುಖ ತಿರುಗಿಸಿಕೊಂಡಿದ್ದಾಗ ಬ್ರಿಟಿಷರು ಕನಡಕಡೆಗೆ ಮುಖ ಮಾಡಿ ಸಮಯ ಸಾಧನೆ ಮಾಡಿದರು. ಭಾರಿ ಸಾಮ್ರಾಜ್ಯಕಟ್ಟಿ ಅದನ್ನು ರಕ್ಷಿಸಿಕೊಳ್ಳಲು ಸಮುದ್ರ ಬಲವೇ ಪ್ರಧಾನಸಾಧಕವೆಂದು ತಿಳಿದರು. ಏಷ್ಯ ಅಮೆರಿಕಗಳಲ್ಲಿ ಸಾಮ್ರಾಜ್ಯವನ್ನು ರೂಢಿಸಿಕೊಳ್ಳಲು ಐರೋಪ್ಯರಿಗೆ ಸಮುದ್ರ ಸ್ವಾಧೀನವಾಗದಿದ್ದರೆ ಹೇಗೆ? ಫ್ರೆಂಚರಿಗೆ ಸಮುದ್ರಬಲ ಸಾಲದಿದ್ದುದು ತಮ್ಮ ನಷ್ಟಕ್ಕೆ ಮೂಲಕಾರಣವಾಯಿತೆಂಬುದು ತಿಳಿಯಿತು.

# ಸಪ್ತವಾರ್ಷಿಕ ಯುದ್ಧ (1756-1763)

ಇಂಗ್ಲೆಂಡ್, ಪ್ರಷ್ಯ >< ಫ್ರಾನ್ಸ್, ಸ್ಪೈನ್, ಆಸ್ಟ್ರಿಯ, ರಷ್ಯ

| ಇಸವಿ | ಇಂಗ್ಲಿಷ್‌ಮಂತ್ರಿ | ಯೂರೋಪ್ | ಅಟ್ಲಾಂಟಿಕ್ | ಅಮೆರಿಕ | ಹಿಂದುಸ್ತಾನ | ಇತರೆಡೆ |
|---|---|---|---|---|---|---|
| 1756 | ನ್ಯೂಕಾಸಲ್ | ಮೈನಾರ್ಕ (ಅ) | | ಆಸ್ವಿಗೊ (ಅ) | ಕಲಿಕತ್ತೆ (ಅ) | |
| | | | | ವಿಲಿಯುಂಹೆನ್ರಿ (ಅ) | | |
| 1757 | ಪಿಟ್ | ಹೇಸ್ಟೆನ್‌ಬೆಕ್ (ಅ) | | | ಪಲಾಸಿ (ಜ) | |
| 1758 | | | | | | |
| 1759 | | ಮಿಂಡೆನ್ (ಜ) | ಲೇಗಾಸ್ (ಜ) | ಕ್ವಿಬೆಕ್ (ಜ) | | |
| | | | ಕಿಬೆರಾನ್ (ಜ) | ಆಬ್ರಹಾಂಮೋರಿ (ಜ) | | |
| | | | | ಗ್ವಾಡೆಲೂಪ್ (ಜ) | | |
| | | | | | ವಂದವಾಸಿ (ಜ) | |
| 1760 | ಬ್ಯೂಟ್ | | | | ಪುದುಚೇರಿ (ಜ) | |
| | | | | | | ಹವನ್ನ (ಜ) |
| 1761 | | | ಬೆಲ್ಲೈಲ್ (ಜ) | ಮಾಂಟ್ರೀಲ್ (ಜ) | | ಮನಿಲ್ಲ (ಜ) |
| 1763 | ಪ್ಯಾರಿಸ್ ಒಪ್ಪಂದ | | | | | |

## ಹಿರೇ ಪಿಟ್ (ಚಾಥಂ ಶ್ರೀಮಂತ)

ಸಪ್ತ ವಾರ್ಷಿಕ ಯುದ್ಧದಲ್ಲಿ ಜಯವನ್ನು ಸಾಧಿಸಲು ಚತುರೋಪಾಯಗಳನ್ನು ಹೆಣೆದ ವಿಲಿಯಂ ಪಿಟ್ಟನನ್ನು ಹಿರಿಯ ಪಿಟ್ಟನೆಂದು ಕರೆಯಬೇಕು. **ಓಲ್ಡ್ ಸೇರಂ** (Old Sarum) ಎಂಬ ಹಾಳೂರಿನಲ್ಲಿ ಜಮೀನ್ದಾರರಾಗಿದ್ದ ಪಿಟ್ ಮನೆತನದವರಲ್ಲಿ ಒಬ್ಬನು ಮದರಾಸಿನ ಗವರ್ನರಾಗಿದ್ದು ವಿಶೇಷ ಹಣವನ್ನು ಸಂಪಾದಿಸಿದ್ದನು. ಆತನ ಮೊಮ್ಮಗನಾಗಿ ಹುಟ್ಟಿದ ವಿಲಿಯಂ ಪಿಟ್ಟನು ಶಿಕ್ಷಣ ಮುಗಿದ ಮೇಲೆ ಸೈನ್ಯದಲ್ಲಿ ಹುದ್ದೆದಾರನಾಗಿದ್ದು 1735ರಲ್ಲಿ ಕಾಮನ್ಸ್ ಸಭಿಕನಾದನು. ಆಗ ವಾಲ್ಪೋಲನ ಕಾರ್ಭಾರು ನಡೆಯುತ್ತಿತ್ತು. ಸಭೆಯಲ್ಲೆಲ್ಲ ಲಂಚದ ಪ್ರಪಂಚ. ವಾಲ್ಪೋಲನಿಗೆ ಪಿಟ್ ಎದುರುಬಿದ್ದು ಆ ಮಂತ್ರಿಯ ಕೆಲಸಗಳನ್ನು ವಿರೋಧಿಸಿದನು. ವಾಲ್ಪೋಲ್ ತರುವಾಯ ಮಂತ್ರಿಗಳಾದ ಕಾರ್ಟರೆಟ್, ಪೆಲ್ಹಂ, ನ್ಯೂಕಾಸಲ್ ಮುಂತಾದವರೆಲ್ಲರಿಗೂ ಪಿಟ್ ವಿರೋಧಿಯಾಗಿಯೇ ಇದ್ದನು.

**1756ರ ವರೆಗೆ**

ಈ ಹಿರೇ ಪಿಟ್ಟನಿಗೆ ಗರುಡಮೂಗಿದ್ದುದಲ್ಲದೆ ತೀಕ್ಷ್ಣದೃಷ್ಟಿಯಿತ್ತು. ಸಭೆಯಲ್ಲಿ ಭಾಷಣ ಮಾಡುವಾಗ ಆತನಿಗೆದುರೇ ಇಲ್ಲ. ಆತನ ವಾಗ್ಮಿತೆಯು ಅದ್ಭುತವಾಗಿತ್ತು. ಇತರ ಸಭಿಕರು ಆತನನ್ನು ಕಂಡು ಅಂಜುವಂತಿತ್ತು. ಲಂಚಕೋರತನವನ್ನೂ ಅಯೋಗ್ಯತೆಯನ್ನೂ ಖಂಡಿಸುತ್ತಲಿದ್ದ ಈತನನ್ನು ಸಮಾಧಾನದಲ್ಲಿಟ್ಟುಕೊಳ್ಳುವುದು ನ್ಯೂಕಾಸಲ್ ಶ್ರೀಮಂತನಿಗೆ ಆಗಲಿಲ್ಲ. ಆ ಶ್ರೀಮಂತನಿಗೆ ಬೇಕಾಗಿದ್ದುದು ಛತ್ರದ ಪಾರುಪತ್ಯದಂತಹ ಯಾಜಮಾನ್ಯ. ಗುಡುಗುಡನೆ ಒದರಿದ್ದನ್ನೇ ಒದರುತ್ತ ವಿಚಾರ ಹೀನನಾಗಿ ಕಾರ್ಭಾರು ನಡೆಸುತ್ತಿದ್ದರೂ ಕೈತುಂಬ ಲಂಚಗಳನ್ನೋ ಪಿಂಚನ್ನುಗಳನ್ನೋ ಕೊಡಿಸಿ ಸಭಿಕರಲ್ಲಿ ತನ್ನ ಬಳಗವನ್ನು ಕಟ್ಟಿಕೊಂಡು ಆ ಬಲದಿಂದಲೇ ಮಂತ್ರಿತನವನ್ನು ನಡೆಸುತ್ತಿದ್ದ ಆ ಶ್ರೀಮಂತನು ಯುದ್ಧಕಾಲದಲ್ಲಿ ಅನಿವಾರ್ಯವಾಗಿ ಪಿಟ್ಟನನ್ನು ಸಹಾಯಮಂತ್ರಿಯಾಗಿ ಕರೆಯಬೇಕಾಯಿತು. "ಈ ಯುದ್ಧವನ್ನು ಗೆಲ್ಲುವುದು ನನ್ನೊಬ್ಬನಿಂದಲೇ, ಮತ್ತಾರಿಂದಲೂ ಸಾಧ್ಯವಿಲ್ಲ" ಎಂದು ಹೇಳಿಕೊಳ್ಳುತ್ತ ಮಂತ್ರಿಯಾದಕೂಡಲೆ ಪಿಟ್ಟನು ಯುದ್ಧದ ಏರ್ಪಾಟನ್ನು ವಹಿಸಿಕೊಂಡನು. ತನ್ನ ಯಾಜಮಾನ್ಯಕ್ಕೆ ಅಡ್ಡಿಯಾಗದಿದ್ದರೆ ಸಾಕೆಂದು ನ್ಯೂಕ್ಯಾಸಲ್ ಶ್ರೀಮಂತನು ಯುದ್ಧ ನೀತಿಯ ಗೋಜಿಗೆ ಬಾರದಿದ್ದುಬಿಟ್ಟನು. ಪಿಟ್ಟನಲ್ಲಿ ಹೆಮ್ಮೆಯಿತ್ತು, ಧೈರ್ಯವಿತ್ತು, ಸಾಹಸವಿತ್ತು, ಸಾಮ್ರಾಜ್ಯದಾಸೆಯಿತ್ತು, ದೂರಾಲೋಚನೆಯಿತ್ತು. ಎಲ್ಲಕ್ಕಿಂತಲೂ ಹೆಚ್ಚಾಗಿ ಆತನಲ್ಲಿ ನೀತಿನಿಷ್ಠೆಯಿತ್ತು. ಲಂಚಕೋರತನವನ್ನು ಕಂಡರೆ ಆತನಿಗೆ ಆಗುತ್ತಿರಲಿಲ್ಲ. ಆಡಳಿತದಲ್ಲಿ ವ್ಯಾಪಿಸಿದ್ದ ಲಂಚಕೋರತನವು ಆತನಿಂದ ಕಡಮೆಯಾಯಿತು.

**ನ್ಯೂ ಕ್ಯಾಸಲ್ ಶ್ರೀಮಂತನೊಡನೆ**

**ತರುವಾಯ**

1757 ರಿಂದ 1761ರ ವರೆಗೆ ಮಂತ್ರಿಯಾಗಿದ್ದ ಪಿಟ್ಟನಿಗೆ ಶ್ರೀಮಂತ ಪದವಿ ದೊರೆತು **ಲಾರ್ಡ್ ಚಾಥಂ** (Earl of Chatham) ಎಂಬ ಬಿರುದು ಬಂತು. ಪುನಃ 1766–67ರಲ್ಲಿ, ಸ್ವಲ್ಪಕಾಲಮಾತ್ರ ಆತನು ಮಂತ್ರಿಯಾಗಿದ್ದನು. ಮಂತ್ರಿಯಾಗದಿದ್ದರೂ ಸಭೆಯಲ್ಲಿ ಆತನು ಪ್ರಭಾವಶಾಲಿಯಾಗಿದ್ದನು. ಅಧಿಕಾರದಲ್ಲಿದ್ದಿದ್ದರೆ ಅಮೆರಿಕ, ಹಿಂದುಸ್ತಾನ, ಐರ್ಲಂಡ್‌ಗಳಲ್ಲಿ ಪ್ರಾಯಶಃ ಆಡಳಿತದ ನೀತಿ ಬೇರೆಯಾಗಿರುತ್ತಿತ್ತು. ಕಾಮನ್ಸ್ ಸಭೆಯ ರಚನೆಯೂ ಉತ್ತಮಪಡುತ್ತಿತ್ತು. ಆದರೆ ಹೊಸ ದೊರೆ ಮುಮ್ಮಡಿ ಜಾರ್ಜನಿಗೆ ವ್ಹಿಗ್ಗರಂದರೆ ಸಹಿಸುತ್ತಿರಲಿಲ್ಲ. ಹಿರೇ ಪಿಟ್ಟನಿಗೆ ಹೆಚ್ಚು ಯೋಗ್ಯತೆಯಿದ್ದರೂ ಮಂತ್ರಿತನ ಹೆಚ್ಚುಕಾಲ ನಡೆಯದಾಯಿತು. ಅಧಿಕಾರದಾಸೆಯನ್ನು ಬೆಳೆಸಿಕೊಂಡಿದ್ದರೂ ಮಂತ್ರಿಮಂಡಲಿಯಲ್ಲಿ ತಾನೇತಾನಾಗಿ ವರ್ತಿಸುತ್ತ ಇತರರನ್ನು ಗದರಿಸುವ ಸ್ವಭಾವದವನು. ಜೊತೆ ಮಂತ್ರಿಗಳಿಗೆ ಸದಾ ತೊಂದರೆಯೇ ಈತನೊಡನೆ. ಮೂರನೆ ಜಾರ್ಜ್ ಪಟ್ಟಕ್ಕೆ ಬಂದಮೇಲೆ ಈತನಿಗೆ ಆರೋಗ್ಯವೂ ಕೆಟ್ಟು ಆಗಾಗ್ಗೆ ಹಾಸಿಗೆ ಹಿಡಿಯುತ್ತಿದ್ದನು. ಸ್ವಾಭಿಮಾನಬಲದಿಂದಮಾತ್ರ ಸಭೆಗೆ ಬರುತ್ತ ಊರುಗೋಲು ಕಕ್ಷಪಾದಗಳ ಸಹಾಯದಿಂದ ಎದ್ದುನಿಂತು ಭಾಷಣ ಮಾಡುತ್ತಿದ್ದನು.

ಇಂಗ್ಲಂಡಿನ ಒಳಾಡಳಿತದಲ್ಲಿ ನೀತಿನಿಯಮಗಳನ್ನು ಅನುಸರಿಸಿದ ಕೀರ್ತಿ ಈತನದು. ಮತಗುರುವೆನಿಸಿ ಹೊಸ ಶಾಖೆಯೊಂದನ್ನು ಮೊದಲಿಟ್ಟ **ವೆಸ್ಲಿ** (Wesley) ಎಂಬಾತನಿಗೆ ಈತನ ಸಹಾಯವಿತ್ತು. ಸಾಮ್ರಾಜ್ಯಸ್ಥಾಪನೆಮಾಡುವುದರಲ್ಲಿಯೂ ಯುದ್ಧ ನಡೆಸುವ ಚಾಕಚಕ್ಯದಲ್ಲಿಯೂ ಹಿರೇಪಿಟ್ಟನು ಅದ್ವಿತೀಯನೆನಿಸಿದವನು. ಎರಡನೆ ಜಾರ್ಜ್‌ದೊರೆ ಕಾಲದಲ್ಲಿಯೂ ಮೂರನೆ ಜಾರ್ಜ್‌ದೊರೆಯ ಆಳಿಕೆಯ ಮೊದಲಲ್ಲಿಯೂ ಇಂಗ್ಲಂಡಿನ ಮುಖಂಡರಲ್ಲಿ ಹಿರೇ ಪಿಟ್ಟನೇ ಅಗ್ರೇಸರನು.

# ಮೂರನೆ ಜಾರ್ಜ್ (1760–1820)

## ಮುಖ್ಯ ವಿಭಾಗಗಳು

1. ಮೂರನೆ ಜಾರ್ಜ್‌ದೊರೆ, ಮಂತ್ರಿಗಳು (1760-1783)
2. ಅಮೆರಿಕದ ಸ್ವಾತಂತ್ರ್ಯಸಾಧನೆ (1763-1784)
3. ಫ್ರಾನ್ಸಿನ ಮಹಾಪಲ್ಲಟ (1789-1802)
4. ನಪೋಲಿಯನ್ (1802-1815)
5. ಮಂತ್ರಿಗಳು, (1783-1820)
6. ಐರ್ಲಂಡ್ (1691-1800)
7. ವ್ಯಾಪಾರಸಾಮ್ರಾಜ್ಯ ಹಿಂದುಸ್ತಾನ್ (1760-1820)
8. ವ್ಯವಸಾಯ, ಕೈಗಾರಿಕೆಗಳ ಪರಿವರ್ತನ (1700-1800)
9. ಮತಶಾಖೆಗಳು, ಧಾರ್ಮಿಕವಿಚಾರಗಳು.

## ಸಮಕಾಲಿಕರು

| ಫ್ರಾನ್ಸ್ | ಸ್ಪೈನ್ | ಆಸ್ಟ್ರಿಯ | ರಷ್ಯ |
|---|---|---|---|
| 15ನೆ ಲೂಯಿ | 3ನೆ ಚಾರ್ಲ್ಸ್ | 1ನೆ ಫ್ರಾನ್ಸಿಸ್ | ಎಲಿಸಬೆತ್ |
| 1715-1774 | 1759-1788 | 1745-1765 | 1741-1762 |
| 16ನೆ ಲೂಯಿ | 4ನೆ ಚಾರ್ಲ್ಸ್ | 2ನೆ ಜೋಸೆಫ್ | 3ನೆ ಪೀಟರ್ |
| 1774-1792 | 1788-1808 | 1765-1790 | 1762 |
| | | | 3ನೆ ಕಥರೀನ್ |
| | | | 1762-1796 |

## 1. ಮೂರನೆ ಜಾರ್ಜ್‌ದೊರೆ, ಮಂತ್ರಿಗಳು (1760–1783)

2ನೆ ಜಾರ್ಜ್‌ದೊರೆಯ ಹಿರಿಯ ಮಗ **ಫ್ರೆಡರಿಕ್** (Frederick) ಎಂಬಾತನು **ಯುವರಾಜ**ನಾಗಿದ್ದಾಗಲೆ ತಂದೆಗೆ ವಿರೋಧವಾಗಿ ವರ್ತಿಸಿ ಕಾಲವಾಗಿದ್ದನು. ಆದ್ದರಿಂದ 1760 ರಲ್ಲಿ 2ನೆ ಜಾರ್ಜ್ ತೀರಿಕೊಂಡಾಗ ಫ್ರೆಡರಿಕ್ಕನ ಮಗನಿಗೆ ಪಟ್ಟವಾಯಿತು. **ಮೂರನೆ ಜಾರ್ಜ್** ಎನಿಸಿ ಪಟ್ಟವೇರಿದವನು 1760 ರಿಂದ 1820ರ ವರೆಗೆ ಅರುವತ್ತು ವರ್ಷಕಾಲ ಆಳಿಕೆ ನಡೆಸಿದನು.

ಈ ಜಾರ್ಜ್ ಇಂಗ್ಲಂಡಿನಲ್ಲಿ ಹುಟ್ಟಿ ಬೆಳೆದವನು. ತಕ್ಕಮಟ್ಟಿಗೆ ಶಿಕ್ಷಣವನ್ನು ಪಡೆದಿದ್ದವನು. ಮಂತ್ರಿಗಳ ಕೈಗೊಂಬೆಗಳಾಗಿ ತನ್ನ ತಾತ ಮುತ್ತಾತಂದಿರು ದೊರೆತನ

ಮಾಡಿದುದು ಈತನಿಗೆ ಸರಿದೋರಲಿಲ್ಲ. ದೊರೆತನದ ವಿಚಾರದಲ್ಲಿ ಸ್ಟೂಯರ್ಟ್ ರಾಜರಿಗಿದ್ದ ಅಭಿಮಾನ ಹೆಮ್ಮೆಗಳು ಈತನಿಗೂ ಇದ್ದವು. ಮಂತ್ರಿಗಳು ರಾಜನ ಆಜ್ಞಾಧಾರಕರಾಗಿ ವಿಧೇಯರಾಗಿರಬೇಕೆಂದು ಈತನ ಇಷ್ಟ. ರಾಜತನದ ಬಿಂಕವನ್ನು ಕಾಪಾಡುವ ಪಟವಲ್ಲದೆ ಈತನಿಗೆ ಯಥೇಷ್ಟವಾದ ಮೂರ್ಖ

**ಸ್ವಭಾವ**

ತನವೂ ಇತ್ತು. ಆದರೆ 2ನೆ ಜೇಮ್ಸನಷ್ಟು ಯುಕ್ತಿಹೀನನಲ್ಲ. ಆಂಗ್ಲಿಕರ್ನಮತದಲ್ಲಿ ನಿಷ್ಠೆಯುಳ್ಳವನು. ತನ್ನ ಸ್ವಂತ ಜೀವನ ದಲ್ಲಿ ನೀತಿನಿಯಮಗಳನ್ನು ಬಿಡದೆ ಆಚರಿಸುತ್ತಲಿದ್ದು ಆಸ್ಥಾನವನ್ನು ಶುದ್ಧಿಗೊಳಿಸಿ ದವನು. ಹಿಂದಿನ ದೊರೆಗಳ ಕಾಲದಲ್ಲಿ ಆಸ್ಥಾನಿಕರೂ ನೆಮ್ಮದಿವಂತರೂ ಹೆಮ್ಮೆ ಯಿಂದ ನಡೆಸುತ್ತಿದ್ದ ಕುಡಿತ, ಜೂಜು ಮುಂತಾದ ಅನಾಚಾರ ದುರಾಚಾರಗಳನ್ನು ಈ ದೊರೆ ಅಡಗಿಸಿದನು. ಅರುವತ್ತು ವರ್ಷಕಾಲದ ಈ ದೊರೆಯ ಆಳಿಕೆಯಲ್ಲಿ ಭಾರಿ ಘಟನೆಗಳು ನಡೆದುವು. ಅವುಗಳನ್ನು ಬೇರೆಬೇರೆಯಾಗಿ ಕಾಣುವುದೇ ಒಳ್ಳೆಯದು.

ಪಟ್ಟಕ್ಕೆ ಬಂದಾಗ ಈ ದೊರೆಗೆ ವ್ಹಿಗ್ ಪಕ್ಷದವರ ಪ್ರಾಬಲ್ಯವನ್ನು ಮುರಿಯುವ ಉದ್ದೇಶವಿತ್ತು. 1714 ರಿಂದ 1760ರ ವರೆಗೆ ಅಧಿಕಾರವನ್ನನುಭವಿಸಿದ್ದ ಆ ಪಕ್ಷದವರು ಸಭಿಕರ ಚುನಾವಣೆಗಳಲ್ಲಿ ಕೈಯಾಡಿಸಿ ತಮ್ಮವರೇ ಸಭಿಕರಾಗುವಂತೆ ನೆರವೇರಿಸಿ ಕೊಳ್ಳುತ್ತಿದ್ದರು. ಹಲಕೆಲವು ಪಟ್ಟಣಗಳು ವಿನಾ ಉಳಿದ ಚುನಾವಣೆ ಕ್ಷೇತ್ರಗಳಲ್ಲ ವೋಟುದಾರರೆನಿಸಿದ್ದವರು ಕೆಲವರುಮಾತ್ರ. ಮತ್ತೆ ಕೆಲವು ಸ್ಥಲಗಳಲ್ಲಿ ಅಲ್ಲಿಯ ಜಮೀನ್ದಾರನ ಮಾತಿನಂತೆ ಚುನಾವಣೆ ನಡೆದುಬಿಡುತ್ತಿತ್ತು. ಹೀಗಿದ್ದುದರಿಂದ ವ್ಹಿಗ್ ಪಕ್ಷದ ಜಮೀನ್ದಾರರು ವಾಸ್ತವವಾಗಿ ತಮಗೆ ಬೇಕಾದವರನ್ನು

**ವ್ಹಿಗ್ ಪಾರ್ಟಿ**

ಸಭಿಕರನ್ನಾಗಿ ಗೊತ್ತುಮಾಡಿಕೊಳ್ಳುತ್ತಿದ್ದರು. ಪಾರ್ಲಿಮೆಂಟ್ ಸಭೆಯಲ್ಲಿ ವ್ಹಿಗ್ ಪಕ್ಷವೇ ಬಹುಪಕ್ಷವಾಗಿರುತ್ತಿತ್ತು. ಭಾರಿ ಪಕ್ಷವಾದುದರಿಂದ ಅದರೊಳಗೆ ಬೇರೆಬೇರೆ ಗುಂಪುಗಳು ಹುಟ್ಟಿಕೊಳ್ಳುತ್ತಿದ್ದವು. ಮಂತ್ರಿಗಳಾದ ವಾಲ್ಪೋಲ್ ನ್ಯೂಕ್ಯಾಸಲ್ ಮುಂತಾದವರು ಹಣ ಚೆಲ್ಲಿಯೋ ಬಿರುದುಬಿಲ್ಲೆಗಳನ್ನು ಬೀರಿಯೋ ಕಂಟ್ರಾಕ್ಟುಗಳನ್ನು ಕೊಡಿಸಿಯೋ ಈ ಗುಂಪುಗಳ ವೋಟುಗಳನ್ನು ಶೇಖರಮಾಡಿಕೊಳ್ಳುತ್ತಿದ್ದರು. ನೀತಿಹೀನವಾದ ಇಂತಹ ಉಪಾಯ ಗಳನ್ನು ಸಾಧಿಸುತ್ತ ವ್ಹಿಗ್ಗರು ಅಧಿಕಾರವನ್ನನುಭವಿಸುತ್ತಿದ್ದರು.

ರಾಜಾಧಿಕಾರವನ್ನೆತ್ತಿಹಿಡಿಯಬೇಕೆಂದಿದ್ದ ಜಾರ್ಜ್‌ದೊರೆಗೆ ವ್ಹಿಗ್ಗರ ಪ್ರಾಬಲ್ಯ ಅನಿಷ್ಟವಾಗಿತ್ತು. ಆತ ಪಟ್ಟವೇರಿದ ಕಾಲದಲ್ಲಿ **ನ್ಯೂಕ್ಯಾಸಲ್** ಮತ್ತು **ಹಿರೇ ಪಿಟ್** ಇಬ್ಬರೂ ಮಂತ್ರಿಗಳಾಗಿದ್ದರು. ಸಪ್ತವಾರ್ಷಿಕ ಯುದ್ಧ ನಡೆಯುತ್ತಿತ್ತು. 1760ರಲ್ಲಿ ಸ್ಪೈನಿನ ಮೇಲೆ ತಾವೇ ಮುಂದಾಗಿ ಯುದ್ಧವನ್ನಾರಂಭಿಸತಕ್ಕುದೆಂದು ಹಿರೇ ಪಿಟ್ ಹೇಳಿದುದನ್ನು ರಾಜನು ವಿರೋಧಿಸಿದನು. ಪಿಟ್ಟನು ರಾಜೀನಾಮೆ ಕೊಟ್ಟನು.

ಸಭೆಯಲ್ಲಿ ಲಂಚ ಪಿಂಚನ್ ಬಿರುದು ಬಿಲ್ಲೆಗಳನ್ನು ನ್ಯೂಕ್ಯಾಸಲ್ ಶ್ರೀಮಂತನು ಕೊಡಿಸುತ್ತಿದ್ದುದು ರಾಜನ ಹೆಸರಿನಲ್ಲಿಯೇ. ಈ ದೊರೆಯು ಅವುಗಳನ್ನೆಲ್ಲ ತನ್ನ ವಶದಲ್ಲಿ ಇಟ್ಟುಕೊಂಡು ತನಗೆ ಬೇಕಾದವರಿಗೆ ಮಾತ್ರ ಕೊಡಿಸುತ್ತ **'ರಾಜಮಿತ್ರ'**ರೆನಿಸಿದ ಪಕ್ಷವನ್ನು ಕಟ್ಟಲಾರಂಭಿಸಿದನು. ಆಗ ತನ್ನ ಪಾರುಪತ್ಯ ನಿಂತುಹೋದುದನ್ನು ಕಂಡು ಆ ಶ್ರೀಮಂತನು ಮಂತ್ರಿತನವನ್ನು ಬಿಟ್ಟುಕೊಡಬೇಕಾಯಿತು. ವ್ಹಿಗ್ಗರೆನಿಸಿದ್ದ ಮಂತ್ರಿಗಳನ್ನು ತಪ್ಪಿಸಿದಬಳಿಕ ದೊರೆ ತನಗೆ ಹಿಂದೆ ಉಪಾಧ್ಯಾಯನಾಗಿದ್ದ **ಬ್ಯೂಟ್ ಶ್ರೀಮಂತ**(Earl of Bute)ನೆಂಬಾತನನ್ನು ಮಂತ್ರಿಯೆಂದು ಗೊತ್ತು ಮಾಡಿದನು.

**ಹೊಸಮಂತ್ರಿ**

ಬ್ಯೂಟ್ ಶ್ರೀಮಂತನು ಅಸಮರ್ಥನಲ್ಲದಿದ್ದರೂ ರಾಜನ ಚಿತ್ತವನ್ನನುಸರಿಸ ತಕ್ಕವನಾಗಿದ್ದನು. ಕಾಮನ್ಸ್ ಸಭಿಕರನ್ನು ತನ್ನ ಅನುಯಾಯಿಗಳಂತೆ ನೆರವೇರಿಸಿಕೊಳ್ಳುವ ಉಪಾಯುಗಳನ್ನು ಚನ್ನಾಗಿ ತಿಳಿಯದವನು. 1763ರಲ್ಲಿ **ಪ್ಯಾರಿಸ್ ಕೌಲ**ನ್ನು ಅತನೇ ನಡೆಸಿದನು. ಅದನ್ನು ಸರಿಯಾಗಿ ನಡೆಸಲಿಲ್ಲವೆಂದು ಸಭಿಕರು ಆಕ್ಷೇಪಿಸಿದರು. ಸಭೆಯ ವಿರೋಧವನ್ನು ತಡೆಯಲಾರದೆ ಆ ಶ್ರೀಮಂತನು ನಿವೃತ್ತನಾಗಿ ಸ್ವಸ್ಥಚಿತ್ತನಾದನು.

ಆಗ ರಾಜನು ಯಾರನ್ನು ಮಂತ್ರಿಯನ್ನಾಗಿಟ್ಟುಕೊಳ್ಳಬೇಕು? ಟೋರಿ ಪಕ್ಷದವರೂ ರಾಜಮಿತ್ರರೂ ಸಭೆಯಲ್ಲಿ ಇನ್ನೂ ದುರ್ಬಲರು. ಆದ್ದರಿಂದ ಜಾರ್ಜ್ ವ್ಹಿಗ್ ಪ್ರಮುಖರಲ್ಲಿಯೇ **ಗ್ರೆನ್ವಿಲ್**(George Grenville) ಎಂಬಾತನನ್ನು ಗೊತ್ತು ಮಾಡಿದನು. ಗ್ರೆನ್ವಿಲ್ ನ್ಯಾಯವಾದಿಯಾಗಿ ವರ್ತಿಸಿದ್ದವನು, ಲೆಕ್ಕಾಚಾರ ತಿಳಿದವನು; ಆದರೆ ಜನಾಭಿಪ್ರಾಯದ ಬಲಾಬಲಗಳನ್ನು ಗುರುತಿಸಲಾರದವನು. ವಿಧಿಕೋಶಕ್ಕೂ ತನಗೆ ತಿಳಿದ ನ್ಯಾಯಶಾಸ್ತ್ರಕ್ಕೂ ಒಪ್ಪಿದರೆ ಎಲ್ಲವೂ ಸರಿಯೆಂಬ ಹಟ ಹಿಡಿಯತಕ್ಕವನಾಗಿ ಅಮೆರಿಕದಲ್ಲಿ ನೆಲೆಸಿದ್ದ ಇಂಗ್ಲಿಷರ ಮೇಲೆ ತೆರಿಗೆ ಹಾಕಿ ಅವರ ವಿರೋಧವನ್ನು ಎಬ್ಬಿಸಿದನು. ಅದರ ಪರಿಣಾಮವು ಗ್ರೆನ್ವಿಲ್ ತರುವಾಯ ತೋರಿಕೊಂಡಿತು. ಗ್ರೆನ್ವಿಲ್ ಕಾಲದಲ್ಲಿಯೇ ಪರಿಣಾಮಕಾರಕವಾದುದು **ಜಾನ್ ವಿಲ್ಕ್ಸ**(John Wilkes) ಎಂಬಾತನ ವಿಚಾರಣೆ ಸಂಬಂಧವಾದ ಗಲಾಟೆ.

ಜಾನ್‌ವಿಲ್ಕ್ಸ ಎಂಬಾತನು ಚತುರನೂ ಸಾಹಸಿಯೂ ಆದ ಸಭಿಕ. ಎಷ್ಟು ಚತುರನೋ ಅಷ್ಟು ನೀತಿಭ್ರಷ್ಟ. ನೀಚ ಜೀವನದಲ್ಲಿ ಸರ್ವಸ್ವವನ್ನೂ ನೀಗಿಕೊಂಡ ಬಳಿಕ ಪಾರ್ಲಿಮೆಂಟ್ ಸಭಿಕನಾಗಿ ಆಮೂಲಕ ಒಳ್ಳೆ ಹುದ್ದೆಯನ್ನೋ ಪಿಂಚನ್ನನ್ನೋ ಸಂಪಾದಿಸಿಕೊಳ್ಳಲು ಹವಣಿಸಿದ್ದವನು. ಆಶಾಪೂರ್ತಿಯಾಗದಿರಲು ವಿಲ್ಕ್ಸ

ರಾಜನನ್ನೂ ಆಡಳಿತವನ್ನೂ ಆಕ್ಷೇಪಿಸುವ ಉದ್ದೇಶದಿಂದ ***ನಾರ್ತ್ ಬ್ರಿಟನ್** (North Briton) ಎಂಬ ಒಂದು ವರ್ತಮಾನಪತ್ರಿಕೆಯನ್ನು ಹೊರಡಿಸಿ ಒಂದುಸಲ ರಾಜ ಭಾಷಣವನ್ನು ತೀವ್ರವಾಗಿ ಟೀಕಿಸಿದನು. ರಾಜನಿಗೆ ಕೋಪ ಬಂತು. ಗ್ರೆನ್ವಿಲ್ ಸುಮ್ಮನಿದ್ದುಬಿಟ್ಟಿದ್ದರೆ ಪ್ರಾಯಶಃ ಯಾವ ತೊಂದರೆಯೂ ಸಂಭವಿಸುತ್ತಿರಲಿಲ್ಲ. ರಾಜನ ಕೋಪವನ್ನು ತಾನೂ ಹಂಚಿಕೊಂಡು ಆ ವರ್ತಮಾನಪತ್ರಿಕೆಯ ಸಂಪಾದಕ ಪ್ರಕಟನಕಾರರೆಲ್ಲರನ್ನೂ ಒಟ್ಟಿಗೆ ದಸ್ತಗಿರಿ ಮಾಡಿಸಿದನು. ರಾಜದ್ರೋಹದ ಆರೋಪಣೆಗೆ ಗುರಿಯಾಗಿ ಆ ವಿಲ್ಕ್ಸ್ ಸೆರೆಗೆ ಮಾತ್ರವಲ್ಲದೆ ದಂಡದ ಹಣವನ್ನು ತೆರುವ ಶಿಕ್ಷೆಗೂ ಸಿಕ್ಕಿದನು. ಪಾರ್ಲಿಮೆಂಟ್ ಸಭಿಕರು ಆತನು ಸಭಾಯೋಗ್ಯನಲ್ಲವೆಂದು ಸಭೆಯಿಂದ ಬಹಿಷ್ಕರಿಸಿದರು. ಸಭಿಕನನ್ನು ದಸ್ತಗಿರಿ ಮಾಡಕೂಡದೆಂದು ಹೇಳಬೇಕಾದವರು ರಾಜನಿಗೆ ವಿಧೇಯರಾಗಿ ಆತನನ್ನು ಹೊರದೂಡಿದಾಗ ಜನರಿಗೆ ವಿಲ್ಕ್ಸನಲ್ಲಿ ಪರಿತಾಪವೂ ಮೆಚ್ಚುಗೆಯೂ ಉಂಟಾದವು. ಆತನಿಗೆ ಅನ್ಯಾಯ ನಡೆಯಿತೆಂದೆಲ್ಲರೂ ಕೂಗಿದರು. ವಿಲ್ಕ್ಸ್ ಮಂತ್ರಿಗಳಮೇಲೆ ನ್ಯಾಯಸ್ಥಾನದಲ್ಲಿ ಅಕ್ರಮುವರ್ತನೆಯ ಆಪಾದನೆ ಹೊರೆಸಿ ನಷ್ಟದ ದಾವಾ ನಡೆಸಿದನು. ಯಾರ ಹೆಸರನ್ನೂ ಎತ್ತಿ ಹೇಳದೆ ಸಂಪಾದಕಪ್ರಕಟನಕಾರರ ಗುಂಪನ್ನು ದಸ್ತಗಿರಿ ಮಾಡಿಸಿದ್ದು ತಪ್ಪೆಂದು ನ್ಯಾಯಾಧೀಶ **ಪ್ರಾಟ್** (Pratt) ತೀರ್ಪು ಕೊಟ್ಟು ವಿಲ್ಕ್ಸಿಗೆ ಪರಿಹಾರ ದ್ರವ್ಯ ಕೊಡಿಸಿದನು. ಗ್ರೆನ್ವಿಲ್ಲನ ಮಾನ ಹೋದಂತಾಯಿತು. ಒರಟುತನದಿಂದ ರಾಜನಬಳಿ ವಾದ ಮಾಡುತ್ತಲಿದ್ದುದರಿಂದ ರಾಜನಿಗೂ ಬೇಸರವಾಗಿತ್ತು. 1763ರಲ್ಲಿ ಮಂತ್ರಿಯಾದಾತನು 1765ರಲ್ಲಿ ನಿವೃತ್ತನಾದನು.

**ನಾರ್ತ್ ಬ್ರಿಟನ್ ಮೊಕದ್ದಮೆ**

ತರುವಾಯ **ರಾಕಿಂಘಂ ಶ್ರೀಮಂತ** (Rockingham)ನನ್ನು ಮಂತ್ರಿಪದವಿಗೆ ದೊರೆ ನಿಯಮಿಸಿದನು. ವ್ಹಿಗ್ ಪಕ್ಷದ ನಾಯಕರಲ್ಲಿ ಆತನು ವಯೋವೃದ್ಧ ಮಾತ್ರನಲ್ಲದೆ ಜ್ಞಾನವೃದ್ಧನೂ ಆಗಿ ನ್ಯಾಯಭಕ್ತನೆನಿಸಿದ್ದವನು. ಒಂದು ವರ್ಷ ಮಾತ್ರ ಆತನ ಅಧಿಕಾರ ನಡೆಯಿತು. ಪಾರ್ಲಿಮೆಂಟಿನಲ್ಲಿ ಹಳೇ ಹುಲಿಯಂತಿದ್ದ **ಲಾರ್ಡ್ ಚಾಥಂ** (ಹಿರೇ ಪಿಟ್) ಆತನೊಂದಿಗೆ ಸೇರಿಕೊಳ್ಳದಾದನು. 'ದೊರೆ ಅದನ್ನು ತಿಳಿದು ಚಾಥಮನೊಡನೆ ಸಂಧಾನ ನಡೆಸುತ್ತ ರಾಕಿಂಘಮನಿಗೆ ಬೆಂಬಲ ಕೊಡದೆ ಸ್ವಲ್ಪಕಾಲದಲ್ಲಿಯೇ ಆತನನ್ನು ನಿವೃತ್ತಿಮಾಡಿಸಿ ಚಾಥಮನನ್ನು ಮಂತ್ರಿಯೆಂದು ಗೊತ್ತುಮಾಡಿದನು. ಸ್ವಾಭಿಮಾನಶಾಲಿಯಾದ ಚಾಥಂ ಬೆಟ್ಟದ ಕೋಡಿನಂತೆ ತಲೆ ಬೀಗಿರತಕ್ಕವನು. ನಾನಾಬಗೆಯುವರನ್ನು ಸಹಾಯಕರನ್ನಾಗಿಟ್ಟುಕೊಂಡು ಅಧಿ

**ಮಂತ್ರಿಗಳ ಲಾಗ**

---

*ಬ್ಯೂಟ್ ಶ್ರೀಮಂತ ಸ್ಕಾಟ್ಲಂಡಿನವನು. ಆತನನ್ನು ಅಣಕಿಸುವ ಹೆಸರು ನಾರ್ತ್ ಬ್ರಿಟನ್.

ಕಾರಕ್ಕೆ ಮೊದಲಿಟ್ಟನು. ಸ್ವಲ್ಪಕಾಲದಲ್ಲಿಯೇ ಆತನಿಗೆ ಬಲವಾದ ರೋಗ ತಟ್ಟಿತು. ದೊರೆಯು ಇಷ್ಟದಂತೆ ನಡೆಸಬೇಕೆಂದು ಚಾಥಂ ಮೊದಲಿಟ್ಟಿದ್ದನು. ಆತನ ಸಹಾಯಕ ಮಂತ್ರಿ **ಟೌನ್ಷೆಂಡ್** (Townshend) ಎಂಬಾತನೇ ಅಮೆರಿಕದ ವ್ಯಾಜ್ಯವನ್ನು ಪುನಃ ಮೊದಲಿಟ್ಟನು. ಅಸ್ವಸ್ಥತೆಯಿಂದ ನರಳುತ್ತಿದ್ದ ಚಾಥಂ 1768ರಲ್ಲಿ ಉದ್ಯೋಗವನ್ನು ಬಿಟ್ಟುಕೊಟ್ಟನು. ಆಗ **ಡ್ಯೂಕ್ ಆಫ್ ಗ್ರಾಫ್ಟನ್** (Duke of Grafton) ಎಂಬ ಮತ್ತೊಬ್ಬ ವ್ಹಿಗ್ ಶ್ರೀಮಂತನು ಮಂತ್ರಿಯಾಗಿ ಪುನಃ ವಿಲ್ಕ್ಸ್ ಸಂಬಂಧವಾದ ಗಲಾಟೆಯಲ್ಲಿ ಸಿಕ್ಕಿಕೊಂಡು ಅಧಿಕಾರವನ್ನು ಕಳೆದುಕೊಂಡನು.

ಕೆಲವುಕಾಲ ತಲೆತಪ್ಪಿಸಿಕೊಂಡು ಹೊರದೇಶದಲ್ಲಿದ್ದು ಹಿಂತಿರುಗಿ ಬಂದಿದ್ದ ವಿಲ್ಕ್ಸ್ ಯಾವುದೋ ತಪ್ಪಿಗಾಗಿ ಸ್ವಲ್ಪಕಾಲ ಸೆರೆಯನ್ನನುಭವಿಸಿದನು. ಜನರು ಆತನನ್ನು ಎಲಿಯಟ್ ಹ್ಯಾಂಪ್ಡೆನ್ ಮುಂತಾದ ಹಿಂದಣ ನ್ಯಾಯವೀರರಿಗೆ ಹೋಲಿಸುತ್ತಲಿದ್ದರು. ಸೆರೆಯಿಂದ ಹೊರಗೆಬಿದ್ದ ಕೂಡಲೆ ಅವನನ್ನು ಮಿಡ್ಲ್‌ಸೆಕ್ಸ್ ಜಿಲ್ಲೆಯವರು ತಮ್ಮ ಪ್ರತಿನಿಧಿಯೆಂದು ಚುನಾಯಿಸಿದರು. ಕಾಮನ್ಸ್ ಸಭೆಯವರು ಆತನು ಅಯೋಗ್ಯನೆಂದು ಪ್ರಕಟಿಸಿ ಆ ಚುನಾವಣೆಯನ್ನು ತಾವೇ ರದ್ದುಗೊಳಿಸಿ ಹೊಸ ಚುನಾವಣೆಯ ಆಜ್ಞೆ ಕೊಟ್ಟರು. ಎರಡನೆ ಮತ್ತು ಮೂರನೆಸಲವೂ ವಿಲ್ಕ್ಸ್‌ನೇ ಗೆದ್ದನು. ಜನರ ಇಷ್ಟವೇನೆಂದು ಮೂರುಸಲ ಪ್ರಕಟನೆಯಾದಾಗ್ಗೂ ಸಭೆಯವರು ಆ ಚುನಾವಣೆಗಳನ್ನು ಅಸಡ್ಡೆಮಾಡಿ ಮತ್ತೊಬ್ಬನು ಜಯಶಾಲಿಯೆಂದು ಸಭೆಗೆ ಸೇರಿಸಿಕೊಂಡರು. ಸಭೆಯವರೇ ಇಷ್ಟು ದೊಡ್ಡ ಅನ್ಯಾಯವನ್ನು ನಡೆಸಿದುದಕ್ಕೆ ಮೂಲಕಾರಣ ಸಭೆಯ ಸ್ಥಿತಿ. ಪಾರ್ಲಿಮೆಂಟೆಲ್ಲ ಲಂಚದ ಜಗತ್ತಾಗಿ ಹೋಗಿತ್ತು.

**ಮಿಡ್ಲ್‌ಸೆಕ್ಸ್ ಜಿಲ್ಲೆ ಚುನಾವಣೆ**

ಗ್ರೆನ್ವಿಲ್, ರಾಕಿಂಘಂ ಮುಂತಾದವರಲ್ಲೊಬ್ಬರಾದರೂ ಮಂತ್ರಿ ಪದವಿಯನ್ನು ಸ್ಥಿರವಾಗಿ ನಿರ್ವಹಿಸಲಾರದೆ ಹೋದರು. ವ್ಹಿಗ್‌ಪಕ್ಷದ ಇತರರೇ ಅವರನ್ನು ಆಕ್ಷೇಪಿಸುತ್ತಿದ್ದರು. ಅವರಲ್ಲಿ ಕೆಲವರು ನ್ಯಾಯದೃಷ್ಟಿಯನ್ನು ತಾಳಿ ಆಕ್ಷೇಪಿಸುತ್ತಿದ್ದವರಾದರೆ ಅನೇಕರು ತಮಗೆ ಲಭ್ಯವಾಗಲಿಲ್ಲವೆಂಬ ಅಸೂಯೆಯಿಂದ ಆಕ್ಷೇಪಿಸುತ್ತಿದ್ದವರು. ವಿಲ್ಕ್ಸ್ ಸಂಬಂಧವಾದ ಗಲಾಟೆಗಳಿಗಾರಂಭವಾದಾಗ ವ್ಹಿಗ್ಗರಲ್ಲಿಯೇ ವಿದ್ವಾಂಸರೂ ನ್ಯಾಯಭಕ್ತರೂ ಆದವರು ಆಡಳಿತದ ನೀತಿಯನ್ನು ಪ್ರಬಲವಾಗಿ ಟೀಕಿಸಿದರು. ಅವರಲ್ಲೆಲ್ಲ ಅತಿ ವಿಖ್ಯಾತನಾದಾತನು **ಎಡ್ಮಂಡ್ ಬರ್ಕ್** (Edmund Burke). ಪ್ರಚಂಡ ವಾಗ್ಮಿಮಾತ್ರವಲ್ಲದೆ ಅಸಾಧಾರಣ ಪಾಂಡಿತ್ಯವನ್ನು ಪಡೆದಿದ್ದ ಆತನ ಭಾಷಣಗಳೂ ಲೇಖನಗಳೂ ಅಮೂಲ್ಯಸಾಹಿತ್ಯರಾಶಿಗೆ ಸೇರತಕ್ಕವು. ಯಾವ ಭಾರಿ ಉದ್ಯೋಗವೂ ಆತನಿಗೆ ದೊರಕಲಿಲ್ಲ. ಆದರೆ ಕಾಮನ್ಸ್ ಸಭೆಯಲ್ಲಿ ಆತನ

ಭಾಷಣಗಳಿಗಿದ್ದ ಪ್ರಭಾವವು ಅದ್ವಿತೀಯವಾಗಿತ್ತು. ಆತನ ಲೇಖನಗಳನ್ನೆಲ್ಲರೂ ಶ್ರದ್ಧಾಗೌರವಗಳಿಂದ ಓದುತ್ತಿದ್ದರು.

**ವ್ಹಿಗ್ಗರ ಪರಾಭವ**

ವ್ಹಿಗ್ ಪಕ್ಷದ ನಾಯಕರು ವ್ಹಿಗ್ಗರಿಂದಲೇ ಅವಮಾನ ಪಡೆದ ಹಾಗೆ ನೆರವೇರಿದ ವೇಳೆಗೆ ದೊರೆ ತನ್ನ 'ರಾಜಮಿತ್ರ'ರ ಗುಂಪನ್ನು ಬಲಪಡಿಸಿ ಕೊಂಡಿದ್ದನು. ಗ್ರಾಫ್ಟನ್ ಶ್ರೀಮಂತನು ನಿವೃತ್ತನಾದ ವೇಳೆಗೆ (1770) ವ್ಹಿಗ್ಗರ ಬಲವನ್ನು ಜಾರ್ಜ್‌ದೊರೆ ಮುರಿದು ತನ್ನ ಪರಿವಾರವನ್ನು ಬಲಪಡಿಸಿಕೊಂಡಿದ್ದನು. ಆಗ ತನ್ನ ಇಷ್ಟವನ್ನನುಸರಿಸಿ ವರ್ತಿಸತಕ್ಕ **ನಾರ್ತ್ ಶ್ರೀಮಂತ** (Lord North)ನನ್ನು ರಾಜನು ಮಂತ್ರಿಪದವಿಗೆ ಗೊತ್ತುಮಾಡಿದನು. ಯಥಾಪೂರ್ವ ಲಂಚ ಪಿಂಚಣ ಬಿರುದುಬಿಲ್ಲೆಗಳ ಉಪಾಯ ಸಾಧನೆಯಿಂದ ಆ ಶ್ರೀಮಂತನು ಪಾರ್ಲಿಮೆಂಟಿನಲ್ಲಿ ಬಹುಪಕ್ಷವನ್ನು ಕಟ್ಟಿಕೊಂಡನು.

ನಾರ್ತ್ ಶ್ರೀಮಂತನ ಮಂತ್ರಿತನ 1770 ರಿಂದ 1782ರ ವರೆಗೆ ನಡೆಯಿತು. ರಾಜನ ಚಿತ್ತವನ್ನನುಸರಿಸಿ ನಡೆದುದೆಷ್ಟೋ ಅಷ್ಟೇ ಆತನ ಪ್ರವೃತ್ತಿ. ಆಡಳಿತದಲ್ಲಿ ರಾಜನು ಹೆಚ್ಚುಹೆಚ್ಚಾಗಿ ಪ್ರವೇಶಿಸಿ ಮಂತ್ರಿಗಳನ್ನು 'ಜೋಹುಕುಂ'ಗಾರರನ್ನಾಗಿ ಮಾಡಿಕೊಂಡನು. ಈ ಕಾಲದಲ್ಲಿ ನಡೆದುದು ಅಮೆರಿಕದ ಸ್ವಾತಂತ್ರ್ಯಸಾಧನೆ ಅಥವಾ ಅಮೆರಿಕದ ನಷ್ಟ.

## 2. ಅಮೆರಿಕದ ಸ್ವಾತಂತ್ರ್ಯಸಾಧನೆ (1763-1784)

1763 ರಲ್ಲಿ ಪ್ಯಾರಿಸ್‌ಕೌಲು ನಡೆಯಿತು. ಕನಡ ಪ್ರಾಂತವೆಲ್ಲ ಬ್ರಿಟಿಷರ ಪಾಲಾಯಿತು. ಉತ್ತರ ಅಮೆರಿಕದಲ್ಲಿ ಫ್ರೆಂಚರ ಬಲವೇ ಇಲ್ಲವೆನ್ನುವಹಾಗಾಯಿತು. ಯುದ್ಧದಲ್ಲಿ ಪ್ರವೇಶಮಾಡಿದ್ದ ಇಂಗ್ಲಿಷ್ ನೆಲಸುಗಾರರು ತಮಗೆ ಶತ್ರುಭಯವಿಲ್ಲವೆಂದು ಹೆಮ್ಮೆಸಂತೋಷಗಳನ್ನು ಪಟ್ಟರು. 13 ಬೇರೆ ಬೇರೆ ಕಾಲೊನಿಗಳಲ್ಲಿದ್ದ ಬೇರೆಬೇರೆ ಪಂಥದ ಇಂಗ್ಲಿಷರು ಪರಸ್ಪರ ಪರಿಚಯಗಳನ್ನು ಮಾಡಿಕೊಂಡವರಾಗಿ ಫ್ರೆಂಚರ ನಾಶವನ್ನು ಕಂಡು ಆನಂದಪಟ್ಟರು.

**ಔತ್ತರೇಯರು**

ಆ ಹದಿಮೂರರಲ್ಲಿ ಮೆಯ್ನ್, ನ್ಯೂಹ್ಯಾಂಪ್‌ಷೈರ್, ಮಾಸಚುಸೆಟ್ಸ್, ಪೆನ್ಸಿಲ್ವೇನಿಯ ಮುಂತಾದ **ಉತ್ತರ ಕಾಲೊನಿ**ಗಳಲ್ಲಿ **ಪ್ಯೂರಿಟನ್ನ**ರು ಮುಖ್ಯರಾಗಿದ್ದರು. ಹೊಸ ಇಂಗ್ಲಂಡ್(New England) ಎಂಬ ಹೆಸರನ್ನು ತಮ್ಮ ಕ್ಷೇತ್ರಕ್ಕಿಟ್ಟುಕೊಂಡು ತಮ್ಮ ಧರ್ಮನಿಯಮಗಳಿಗನುಸಾರವಾಗಿ ಆ ಜನರು ವ್ಯವಸಾಯವನ್ನೂ ತಕ್ಕಮಟ್ಟಿಗೆ ಉದ್ಯೋಗ ಕೈಗಾರಿಕೆಗಳನ್ನೂ ಅವಲಂಬಿಸಿದ್ದರು. ವರ್ಜಿನಿಯ, ಮೇರಿಲಂಡ್, ಕ್ಯಾರೊಲೈನ

ಮುಂತಾದ **ದಕ್ಷಿಣ ಕಾಲೊನಿ**ಗಳಲ್ಲಿ ಮುಖ್ಯವಾಗಿ **ಕವೆಲಿಯರ್** ಗುಂಪಿನವರೇ ನೆಲೆಸಿದ್ದರು. ಅವರಿಗೆ ವ್ಯವಸಾಯವೇ ಪ್ರಧಾನವಾಗಿತ್ತು.

**ದಾಕ್ಷಿಣಾತ್ಯರು**

ಅದರಲ್ಲಿಯೂ ಹೊಗೆಸೊಪ್ಪಿನ ಬೆಳೆ ವಿಶೇಷ. ವಿಶಾಲವಾದ ಹೊಲಗಳನ್ನು ಕಟ್ಟಿಕೊಂಡಿದ್ದ ಈ ದಾಕ್ಷಿಣಾತ್ಯರು ನೀಗ್ರೋ ಜಾತಿಯ ಗುಲಾಮರನ್ನು ದನಗಳಂತೆ ಕಟ್ಟಿಕೊಂಡು ಬೇಸಾಯಮಾಡಿಸಿಕೊಳ್ಳುತ್ತಿದ್ದರು. ಔತ್ತರೇಯರಿಗೂ ದಾಕ್ಷಿಣಾತ್ಯರಿಗೂ **ಮತ ಭೇದ**ವಲ್ಲದೆ **ವೃತ್ತಿಭೇದ**ವೂ ಈ ರೀತಿಯಲ್ಲಿತ್ತು. ಫ್ರೆಂಚರೊಡನೆ ಹೋರಾಡುವಾಗ ಒಟ್ಟುಕೂಡಿದ್ದರೂ ಇವರಲ್ಲಿ ಪರಸ್ಪರ ವ್ಯತ್ಯಾಸವೈಷಮ್ಯಗಳು ಹೆಚ್ಚಾಗಿಯೇ ಇದ್ದುವು. ಅನ್ಯೋನ್ಯತೆ ದೃಢವಾಗಿ ಬೆಳೆದಿರಲಿಲ್ಲ. ಮೂರನೆ ಜಾರ್ಜ್‌ದೊರೆಯ ಹೆಡ್ಡತನದಿಂದ ಅನ್ಯೋನ್ಯತೆಯೂ ಒಗ್ಗಟ್ಟೂ ಉಂಟಾಯಿತು.

ಹದಿಮೂರು ಕಾಲೊನಿಗಳಿಗೆ ಒಟ್ಟಾದ ಆಡಳಿತವೂ ಇರಲಿಲ್ಲ. ಒಂದೊಂದು ಕಾಲೊನಿ ಒಂದೊಂದುರೀತಿ. ಪ್ರತಿ ಕಾಲೊನಿಗೂ ಇದ್ದ ಗವರ್ನರ್ ಮುಂತಾದ ಮುಖ್ಯಾಧಿಕಾರಿಗಳು ಇಂಗ್ಲಂಡಿನ ರಾಜನಿಂದ ಗೊತ್ತಾಗಿ ಇಂಗ್ಲಂಡಿನಿಂದಲೇ ಬಂದಿಳಿಯುತ್ತಿದ್ದರು. ಆಡಳಿತದಲ್ಲಿ ಕಾಲೊನಿಗಳ ಅಭಿವೃದ್ಧಿಯು

**ಕಾಲೊನಿ ಆಡಳಿತ**

ದೊಡ್ಡ ಗುರಿಯಾಗಿರಲಿಲ್ಲ. ಇಂಗ್ಲಂಡಿನ ಅಭಿವೃದ್ಧಿಯೇ ಗುರಿ. ಇಂಗ್ಲಂಡಿನ ಅನುಕೂಲಕ್ಕೆ ಕಾಲೊನಿಗಳಿರತಕ್ಕುವೆಂದು ಆಗಿನ ಮಂತ್ರಿಸಾಮಾಜಿಕರ ಅಭಿಪ್ರಾಯ. ಮನೆಗೆ ಹಿತ್ತಿಲಿದ್ದಂತೆ ದೇಶಕ್ಕೆ ಕಾಲೊನಿಗಳಿರಬೇಕೆಂದು ಭಾವಿಸಿದ್ದ ಇಂಗ್ಲಂಡಿನವರು ಕಾಲೊನಿಗಳ ಸ್ವತಂತ್ರ ಅಭಿವೃದ್ಧಿಗೆ ಅಡ್ಡಿಯಾಗಿದ್ದರು. ನ್ಯಾವಿಗೇಷನ್ ಕಾನೂನು ಕಾಲೊನಿಗಳಿಗೂ ತಗಲಿದ್ದುದರಿಂದ ಕಾಲೊನಿಗಳವರು ಹಡಗುಗಳನ್ನು ಕಟ್ಟಿಕೊಂಡು ಓಡಾಡುವಹಾಗಿರಲಿಲ್ಲ. ಇಂಗ್ಲಂಡಿನ ಹಡಗುಗಳಿಗೇ ಇತ್ತು ಸಮಸ್ತ ವಾಹಕವ್ಯಾಪಾರ. ಕಾಲೊನಿಗಳಲ್ಲಿ ಬೆಳೆದ ಸಾಮಗ್ರಿಯೆಲ್ಲವನ್ನೂ ಮಾರಬೇಕಾದುದು ಇಂಗ್ಲಂಡಿಗೆ; ಸರಕನ್ನು ಕೊಂಡಾಗ ಕೊಳ್ಳಬೇಕಾದುದು ಇಂಗ್ಲಂಡಿನಿಂದ. ಮಧ್ಯವರ್ತನದ ಲಾಭವೆಲ್ಲ ಇಂಗ್ಲಂಡಿಗೆ. ಇಂಗ್ಲಂಡಿನ ಕೈಗಾರಿಕೆಗಳೊಡನೆ ಸ್ಪರ್ಧಿಸಬಹುದಾದ ಕೈಗಾರಿಕೆ

**ಆರ್ಥಿಕ ನಿರ್ಬಂಧಗಳು**

ಯೊಂದನ್ನೂ ಕಾಲೊನಿಗಳವರು ಬೆಳೆಸಬಾರದಾಗಿತ್ತು. ಈ ನಿಯಮಗಳು ಪ್ರಬಲ ನಿರ್ಬಂಧಗಳೆಂದು ಈಗ ನಮಗೆ ಕಂಡರೂ 18ನೆ ಶತಮಾನದಲ್ಲಿ ಕಾಲೊನಿಗಳವರಿಗಾಗಲಿ ಇಂಗ್ಲಂಡಿನವರಿಗಾಗಲಿ ಹಾಗೆ ತೋರಲಿಲ್ಲ. ಈ ಅನ್ಯಾಯದ ನಿರ್ಬಂಧಗಳಿಂದ ವಾಜ್ಯ ಹುಟ್ಟಲಿಲ್ಲ. ವ್ಯಾಜ್ಯವೈಷಮ್ಯಗಳು ತೋರಿಕೊಂಡುದು ಬೇರೆ ರೀತಿಯಲ್ಲಿ.

ಸಪ್ತವಾರ್ಷಿಕ ಯುದ್ಧದ ಸಲುವಾಗಿ ಇಂಗ್ಲಂಡಿಗೆ ವಿಶೇಷ ವೆಚ್ಚವಾಗಿತ್ತು. ಇಂಗ್ಲಂಡಿನ ಮಂತ್ರಿಗಳು ಆದಾಯವನ್ನು ಹೇಗೆ ಹೆಚ್ಚಿಸಬಹುದೆಂದು ನೋಡು

ತ್ತಿದ್ದರು. 1763ರಲ್ಲಿ ಬ್ಯೂಟ್ ಶ್ರೀಮಂತನು ಮಂತ್ರಿತನ ಬಿಟ್ಟುಕೊಟ್ಟಾಗ **ಗ್ರೆನ್ವಿಲ್** (Grenville) ಎಂಬಾತನು ಮಂತ್ರಿಯಾದನು. ಆತನು ಹುಡುಕಿನೋಡುವಲ್ಲಿ ಕಾಲೊನಿಗಳಿಂದ ಬರಬೇಕಾದಷ್ಟು ಸುಂಕದಾದಾಯ ಬಾರದಿದ್ದುದು ಕಂಡಿತು. ಕಳ್ಳವ್ಯಾಪಾರವನ್ನು ನಿಲ್ಲಿಸಬೇಕೆಂದು ಆತನು ಮಾಡಿದ ಯೋಚನೆ ಕಾಲೊನಿಗಳವರಿಗೆ ಸಹಿಸಲಿಲ್ಲ. ಸುಂಕದ ವಸೂಲಿಯೂ ಸುಲಭವಾಗಿರಲಿಲ್ಲ.

**ಮಂತ್ರಿಯ ಆಲೋಚನೆ**

ಆಗ ಗ್ರೆನ್ವಿಲ್ ಒಂದು ನ್ಯಾಯವನ್ನು ತೆಗೆದನು. ಕಾಲೊನಿಗಳ ಕ್ಷೇಮಕ್ಕಾಗಿ ಯುದ್ಧ ನಡೆದಿದ್ದುದಲ್ಲದೆ ಅವುಗಳ ರಕ್ಷಣೆಗಾಗಿ ಸನ್ನದ್ಧ ಸೈನ್ಯವನ್ನಿಟ್ಟಿರಬೇಕಾದುದರಿಂದ ಆ ವೆಚ್ಚದ ಪಾಲನ್ನು ಕಾಲೊನಿಗಳವರು ಒದಗಿಸತಕ್ಕದು ನ್ಯಾಯವೆಂದು ಸಾವಕಾಶವಾಗಿ ವಿವರಿಸಿ ಅದಕ್ಕಾಗಿ 1765ರಲ್ಲಿ **ಸ್ಟಾಂಪ್ ಆಕ್ಟ್** (Stamp Act) ಎಂಬ ಕಾನೂನನ್ನು ಜಾರಿಗೆ ತಂದನು. ಕಾಲೊನಿಗಳವರು ತಮ್ಮ ಕಾಗದಪತ್ರಗಳಿಗಾಗಿ ಸ್ಟಾಂಪುಕಾಗದಗಳನ್ನು ಪಯೋಗಿಸಬೇಕೆಂಬುದು ಆ ಕಾನೂನಿನ ಸಾರಾಂಶ. ಮಂತ್ರಿಯು ಇದರ ನ್ಯಾಯವನ್ನು ಬಿತ್ತರಿಸುತ್ತಿದ್ದಾಗಲೆ ಪ್ಯೂರಿಟನ್ ಕಾಲೊನಿಗಳವರು "ನಮ್ಮ ಪ್ರತಿನಿಧಿಗಳೇ ಲಂಡನ್ನಿನ ಪಾರ್ಲಿಮೆಂಟಿನಲ್ಲಿಲ್ಲದಿರುವಾಗ ನಮ್ಮಮೇಲೆ ಈ ಕಾನೂನು ಹೇಗೆ ಪ್ರಯೋಗವಾದೀತು!" ಎನ್ನುತ್ತ ಅಲ್ಲಲ್ಲಿ ಗೊಣಗುಟ್ಟಿದರು. 'ಪ್ರಾತಿನಿಧ್ಯವಿಲ್ಲದೆ ತೆರಿಗೆ ಹೊರೆಯಿಲ್ಲ'ವೆಂಬ ಕೂಗು ಊರೂರಿನಲ್ಲಿ ಕೇಳಿಸಿತು. ಎಲ್ಲರ ಬಾಯಲ್ಲಿಯೂ ಅದೇ ಪಲ್ಲವಿಯಾಯಿತು. ಈ ಗೊಣಗಾಟವನ್ನು ಲಕ್ಷಿಸದೆ ಗ್ರೆನ್ವಿಲ್ ಕಾನೂನನ್ನು ಮಾಡಿಸಿದ ಸುದ್ದಿ ತಲಪಿದಾಗ ಉತ್ತರದ ಕಾಲೊನಿಗಳಲ್ಲಿ ಜನರು ಗುಂಪುಸೇರಿ ಗಲಾಟೆ ಮಾಡಿದರು. ಒಂಭತ್ತು ಕಾಲೊನಿಗಳಿಂದ ಬಂದು ಸಭೆ ಸೇರಿದ್ದ ನಿಯೋಗಿಗಳು ಕಾನೂನನ್ನು ಖಂಡಿಸಿದರು. ಈ ಮಧ್ಯೆ ಗ್ರೆನ್ವಿಲ್ ಮಂತ್ರಿಗೆ ಪದಚ್ಯುತಿಯಾಗಿ **ರಾಕಿಂಘಂ ಶ್ರೀಮಂತ**ನೆಂಬಾತನು ಮಂತ್ರಿಯಾಗಿದ್ದನು.

**ಕಾಲೊನಿಗಳ ವಿರೋಧ**

**"ಪ್ರಾತಿನಿಧ್ಯವಿಲ್ಲದೆ ಅಧಿಕಾರವಿಲ್ಲ"**

ಕಾಲೊನಿ ಜನರ ವಿರೋಧವನ್ನು ತಿಳಿದ ಈ ಮಂತ್ರಿಯು ಸ್ಟಾಂಪ್ ಆಕ್ಟನ್ನು ರದ್ದುಮಾಡಿಸಿದನು. ಆದರೆ ಇಂಗ್ಲಂಡಿನ ಪಾರ್ಲಿಮೆಂಟಿನವರು ಕಾಲೊನಿಗಳ ಮೇಲೆ ತೆರಿಗೆ ಹಾಕುವ ಅಧಿಕಾರವುಳ್ಳವರೆಂದು ಘೋಷಣೆಮಾಡಿದನು. ಕಾಲೊನಿಗಳ ಪ್ಯೂರಿಟನ್ನರಿಗೆ ಚೇಳುಕಡಿದಹಾಗಾಯಿತು. ಹಣ ಸಲ್ಲಿಸಬೇಕೆಂಬ ಚಿಂತೆಯಲ್ಲ ಅವರಿಗಿದ್ದುದು; ತಮ್ಮ ಪ್ರತಿನಿಧಿಗಳಿಲ್ಲದ ಸಭೆಗೆ ತಮ್ಮಮೇಲೆ ಅಧಿಕಾರ ಹೇಗೆಂಬ ರೋಷ. ರಾಕಿಂಘಮನ ಘೋಷಣೆಯನ್ನು ಚಾಥಂ ಶ್ರೀಮಂತನು ಖಂಡಿಸಿದನು. ಆದರೂ **ಟೌನ್ಷೆಂಡ್** (Townshend) ಎಂಬ ಮಂತ್ರಿಯು ಬೆಂಕಿಗೆಣ್ಣೆಯನ್ನೆರಚಿದಂತೆ ಕಾಲೊನಿಗಳ ಜನರು ಆಮದುಮಾಡಿಕೊಳ್ಳುತ್ತಿದ್ದ **ಟೀ ಗಾಜು ಕಾಗದಗಳ ಮೇಲೆ ಸುಂಕವನ್ನೆ**ತ್ತುವ ಆಜ್ಞೆಕೊಟ್ಟನು. ಕಾಲೊನಿಗಳ ಜನರು ಅಲ್ಲಲ್ಲಿ ಸಭೆ ಸೇರಿ

ಅದನ್ನು ಖಂಡಿಸಿದ್ದಲ್ಲದೆ ಅವುಗಳನ್ನು ಕೊಡಬಾರದೆಂದು ಪ್ರತಿಜ್ಞೆ ಮಾಡಿಕೊಂಡರು.

**ಸುಂಕದ ರಂಪು** ಇಂತಹ ಪರಿಸ್ಥಿತಿಯಲ್ಲಿ **ಬೋಸ್ಟನ್** (Boston) ಪಟ್ಟಣದಲ್ಲಿ ಜನರಿಗೂ ಕೆಲವರು ಸೈನಿಕರಿಗೂ ಬೀದಿಯ ವ್ಯಾಜ್ಯವೊಂದಾಯಿತು; ಆ ಸೈನಿಕರು ಕೆಲವರನ್ನು ಗುಂಡಿನಿಂದ ಸುಟ್ಟರು. ಅದನ್ನು **"ಬೋಸ್ಟನ್ನಿನ ಘೋರ ಹತ್ಯ"**ವೆಂದು ಕಾಲೊನಿಗಳ ಜನರು ವಿವರಿಸಿಕೊಳ್ಳುತ್ತ ಬೆಬ್ಬರಿಸಿದರು.

1770ರಲ್ಲಿ **ಲಾರ್ಡ್ ನಾರ್ತ್** (Lord North) ಎಂಬ ಶ್ರೀಮಂತನು ದೊರೆಗೆ ಮಂತ್ರಿಯಾಗಿ ದೊರೆತನು. ಬುದ್ಧಿವಂತನಾಗಿದ್ದರೂ ದೊರೆಯ ಮಾತಿನಂತೆ ನಡೆಸುತ್ತಿದ್ದ ಆ ಮಂತ್ರಿ ಕಾಲೊನಿಗಳವರ ಕೋಪತಾಪಗಳನ್ನು ಕಂಡು 1773ರಲ್ಲಿ ಸುಂಕಗಳನ್ನು ರದ್ದುಮಾಡಲು ನಿಶ್ಚಯಿಸಿದನು. ಆದರೆ ಗಾಜು ಕಾಗದಗಳ ಮೇಲಿನ ಸುಂಕವನ್ನು ತೆಗೆದವನು ರಾಜನ ಮಾತನ್ನು ಕೇಳಿ ಟೀ ಮೇಲಿನದನ್ನು ಹಾಗೆಯೇ ಉಳಿಸಿದನು. ಕಾಲೊನಿಗಳ ಜನರಿಗೆ ರೇಗಿತು. ಟೀ ಸೊಪ್ಪು ಹೊತ್ತ ಕೆಲವು

**ಸಮುದ್ರಕ್ಕೆ ಟೀ (1773)** ಹಡಗುಗಳು ಬೋಸ್ಟನ್ ಬಂದರಿಗೆ ಬಂದಾಗ ಕಾಲೊನಿಗಳ ಜನರು ಕೆಲರು ತಾಮ್ರವರ್ಣದವರಂತೆ ವೇಷಧರಿಸಿಕೊಂಡು ದೋಣಿಗಳಲ್ಲಿ ನುಗ್ಗಿ ಹೊರಟು ಹಡಗನ್ನು ಮುತ್ತಿ 340 ಟೀ ಹೊರೆಗಳನ್ನು ಎಳೆದಾಡಿ ಸಮುದ್ರಕ್ಕೆಸೆದರು. ಇದನ್ನು ದಂಗೆಯೆಂದು ಕರೆದು ಇಂಗ್ಲಿಷ ಅಧಿಕಾರಿಗಳು ಬೋಸ್ಟನ್ ಬಂದರನ್ನು ಮುಚ್ಚಿಸಿಬಿಟ್ಟು ಮ್ಯಾಸಚುಸೆಟ್ಸ್ ಕಾಲೊನಿಯಲ್ಲಿ **ಲಷ್ಕರೀ ಪಾರುಪತ್ಯ**ವನ್ನು ಮೊದಲಿಟ್ಟರು. ಆ ಕಾಲೊನಿಯ ಜನರು ರೋಷಗೊಂಡು ಹೊಡೆದಾಟಕ್ಕೆ ಸಿದ್ಧರಾಗಿ 1775ರಲ್ಲಿ ಇಂಗ್ಲಿಷರ ಸೈನ್ಯವನ್ನೆದುರಿಸಿ ಚೆನ್ನಾಗಿಯೇ ಯುದ್ಧಮಾಡಿ ತಮ್ಮ ಬಲವನ್ನು ತಿಳಿದುಕೊಂಡರು.

ದೊರೆಯು ಹಟದಿಂದ ಹಿಡಿದ ನೀತಿಯನ್ನು ಇಂಗ್ಲಂಡಿನಲ್ಲಿ ಚಾಥಂ, ಬರ್ಕ್ ಮುಂತಾದ ಪಾರ್ಲಿಮೆಂಟ್ ಸಭಿಕರು ಆಕ್ಷೇಪಿಸುತ್ತ ಕಾಲೊನಿ ಜನರ ವಿರೋಧವನ್ನು ಮೆಚ್ಚುತ್ತ ಇದ್ದರು. ಅತ್ತ ಕಾಲೊನಿಗಳ ಪ್ರತಿನಿಧಿಗಳೂ ನಿಯೋಗಿಗಳೂ **ಫಿಲಡೆಲ್ಫಿಯ** (Philadelphia) ಪಟ್ಟಣದಲ್ಲಿ **ಕಾಂಗ್ರೆಸ್** (Congress) ಎಂಬ ಮಹಾಸಭೆ ಸೇರಿ ಯುದ್ಧಕ್ಕೆ ತಕ್ಕ ಸನ್ನಾಹಮಾಡಿದರು. 1776ರಲ್ಲಿ ಹದಿಮೂರು ಕಾಲೊನಿಗಳೂ ಒಟ್ಟುಗೂಡುವಂತಾಯಿತು. ಆ ವರ್ಷದ **ಜುಲೈ 4ನೆ** ತಾರೀಖಿನ ದಿನ

**ಸ್ವಾತಂತ್ರ್ಯ ಪ್ರಕಟನೆ** ಆ ಫಿಲಡೆಲ್ಫಿಯ ಕಾಂಗ್ರೆಸ್ಸಿನವರು ಇಂಗ್ಲಂಡಿಗೆ ಅಧೀನವಾಗಿರುವುದನ್ನು ತ್ಯಜಿಸಿ ಸ್ವತಂತ್ರರಾಗಿರುವುದಾಗಿ ಜಗತ್ತಿಗೆ **ಪ್ರಕಟನೆ** ಕೊಟ್ಟರು. ತಮ್ಮ ಕ್ಷೇತ್ರಕ್ಕೆ **ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕ** (U.S.A.) ಎಂಬ ಹೆಸರಿಟ್ಟು ಇಂಗ್ಲಂಡಿನೊಡನೆ ಯುದ್ಧಕ್ಕೆ ಸರ್ವ

ಸನ್ನಾಹ ನಡೆಸಿ **ಜಾರ್ಜ್ ವಾಷಿಂಗ್ಟನ್** (George Washington) ಎಂಬಾತನನ್ನು ತಮ್ಮ ದಳಪತಿಯನ್ನಾಗಿ ಗೊತ್ತುಮಾಡಿಕೊಂಡರು.

ವಿಶೇಷ

ಹದಿಮೂರು ಕಾಲೊನಿಗಳ ಜನರೂ ಒಗ್ಗಟ್ಟನ್ನು ಪಡೆದು ಅತ್ಯುತ್ಸಾಹದಿಂದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧರಾದರು. ತಡೆಯುವಷ್ಟು ತಡೆದು ಕಡೆಗೆ ಗತ್ಯಂತರವಿಲ್ಲದೆ ಯುದ್ಧಕ್ಕೆ ನಿಂತು ಪ್ರತ್ಯೇಕವಾದ ರಾಷ್ಟ್ರವನ್ನು ಕಟ್ಟಿದರು. ರಾಷ್ಟ್ರ ಕಟ್ಟಿದಾಗ ರಾಜನನ್ನೊಲ್ಲದೆ ರಿಪಬ್ಲಿಕ್ ರೂಪವನ್ನು ಕಟ್ಟಿದುದು ವಿಶೇಷವಾದ ಅಂಶ. ಮತಭೇದ ವೃತ್ತಿಭೇದಗಳನ್ನು ಮರೆತು ಅನ್ಯೋನ್ಯತೆಯಿಂದ ಸೇರಿಕೊಂಡು ಯುದ್ಧನಡೆಸಿ ತಮ್ಮ ನೂತನ ರಾಷ್ಟ್ರವನ್ನು ಉಳಿಸಿಕೊಳ್ಳುವ ಮಹೋದ್ಯಮದಲ್ಲಿ ವಾಷಿಂಗ್ಟನ್ ಎಂಬಾತನಲ್ಲದೆ **ಜೆಫರ್ಸನ್** (Jefferson), **ಪೇಯ್ನ್** (Paine), **ಪ್ಯಾಟ್ರಿಕ್ ಹೆನ್ರಿ** (Patrick Henry), **ಆಡಮ್ಸ್** (Adams), **ಮಾಡಿಸನ್** (Madison), **ಫ್ರಾಂಕ್ಲಿನ್** (Franklin) ಮುಂತಾದ ಧೀರನಾಯಕರು ಪ್ರಸಿದ್ಧರಾದರು.

ಕದನಗಳು

1775ರಲ್ಲಿ ಹೊಡೆದಾಟ ಪ್ರಾರಂಭವಾಯಿತು. ಬೋಸ್ಟನ್ ಬಳಿ **ಲೆಕ್ಸಿಂಗ್ಟನ್** (Lexington) ಎಂಬಲ್ಲಿಯೂ **ಬಂಕರ್ಸ್ ಹಿಲ್** (Bunker's Hill) ಎಂಬಲ್ಲಿಯೂ ಸಣ್ಣ ಕದನಗಳು ನಡೆದಿದ್ದುವು. ಅನುಭವವಾಗಲಿ ಶಿಕ್ಷಣವಾಗಲಿ ಇಲ್ಲದ ಕಾಲೊನಿಗಳವರು ಹುರುಪಿನಿಂದ ಹೋರಾಡಿ ಸೋಲದಿದ್ದರು. 1776ರಲ್ಲಿ ಇಂಗ್ಲಂಡಿನಿಂದ ಸೈನ್ಯ ಬಂತು. ಅದರಲ್ಲಿ ಜರ್ಮನ್ ಜಾತಿಯ ಕೂಲಿ ಸಿಪಾಹಿಗಳೂ ಇದ್ದರು. ತಮ್ಮ ಮೇಲೆ ಆ ಕೂಲಿಯವರನ್ನು ಕಳುಹಿಸಿದ ಇಂಗ್ಲಿಷ್ ಸರ್ಕಾರವನ್ನು ಕಾಲೊನಿಗಳವರೆಲ್ಲರೂ ತಿರಸ್ಕರಿಸುತ್ತ ಯುದ್ಧಕ್ಕೆ ನಿಂತರು. **ಬ್ರೂಕ್ಲಿನ್** (Brooklyn) ಬಳಿ ಯುದ್ಧ ನಡೆದು ವಾಷಿಂಗ್ಟನ್ ಸೋತನು. ಅದರೆ 1777ರಲ್ಲಿ ಇಂಗ್ಲಂಡಿನ ಸೈನ್ಯವನ್ನು ಕನಡದ ಕಡೆಯಿಂದ ತರುತ್ತಿದ್ದ **ಬರ್ಗಾಯ್ನ್** (Burgoyne) ಎಂಬ ದಳಪತಿಗೆ ಎದುರಾಗಿ **ಸರಟೋಗ** (Saratoga) ಎಂಬಲ್ಲಿ **ಗೇಟ್ಸ್** (Gates) ಎಂಬ ಕಾಲೊನಿ ದಳಪತಿಯು ಕಾಣಿಸಿಕೊಂಡು ಇಂಗ್ಲಂಡಿನ ದಳಕ್ಕೆ ಅಷ್ಟದಿಗ್ಬಂಧನೆ ಮಾಡಿಬಿಟ್ಟನು. **ಶರಣಾಗತಿ**ಯೇ ಬರ್ಗಾಯ್ನನ ಗತಿಯಾಯಿತು.

1778ರಲ್ಲಿ ಫ್ರಾನ್ಸ್ ದೇಶದವರು ಕಾಲೊನಿಗಳ ಪಕ್ಷವನ್ನು ಸೇರಿ ಇಂಗ್ಲಿಷರಿಗೆ ವಿರೋಧವಾಗಿ ಯುದ್ಧ ನಡೆಸಲು ನಿಶ್ಚಯಿಸಿದರು. **ಲಫಯೆತ್** (Lafayette) ಶ್ರೀಮಂತನೆಂಬಾತನು ಕೆಲವರು ಫ್ರೆಂಚರನ್ನು ಕರೆದುಕೊಂಡು ವಾಷಿಂಗ್ಟನ್ನನ ಸಹಾಯಕ್ಕೆ ಮೊದಲೆ ಹೊರಟಿದ್ದನು. ಅದೇವೇಳೆಯಲ್ಲಿ ಇಂಗ್ಲಿಷರು ಒಂದುಬಗೆಯ ಭಂಡತನದಿಂದ ಇತರ ಐರೋಪ್ಯರನ್ನೂ ರೇಗಿಸಿದರು. ಅನ್ಯದೇಶಗಳ ಹಡಗುಗಳನ್ನು

ದಾರಿಯಲ್ಲಿ ತಡೆದು ಅವುಗಳಲ್ಲಿದ್ದ ಶತ್ರುಸಾಮಗ್ರಿಯನ್ನು ಕಸಿದುಕೊಳ್ಳುವ ಅಧಿಕಾರ ತಮ್ಮದೆಂದು ಬ್ರಿಟಿಷರು ಹಟ ಮಾಡಿದರು. ಅದಕ್ಕೊಪ್ಪದೆ

**ಐರೋಪ್ಯ ವಿರೋಧ** 1780ರಲ್ಲಿ ಡಚ್ಚರು ಬ್ರಿಟಿಷರ ವಿರೋಧಿಗಳಾದರು. ರಷ್ಯ, ಡೆನ್ಮಾರ್ಕ್ ಮತ್ತು ಸ್ವೀಡ್‌ದೇಶಗಳವರು ಎಚ್ಚರಿಕೆ ವಹಿಸಿ ಇಂಗ್ಲಿಷರ ಶತ್ರುಗಳಂತೆ ಯುದ್ಧಸಿದ್ಧತೆ ಮಾಡಿಕೊಂಡರು. 1779ರಲ್ಲಿ ಸ್ಪೈನ್ ದೇಶವು ಫ್ರಾನ್ಸಿನೊಡನೆ ಸೇರಿಕೊಂಡಿತ್ತು. ಪರಿಣಾಮವಾಗಿ ಜಿಬ್ರಾಲ್ಟರ್ ಮೈನಾರ್ಕ ಗಳನ್ನು ಶತ್ರುಗಳು ಮುತ್ತಿ ಸಮುದ್ರದಮೇಲೆ ಬ್ರಿಟಿಷರಿಗೆ ತೊಂದರೆಕೊಡಲಾರಂಭಿಸಿ ದರು. ಅದೇವೇಳೆಯಲ್ಲಿ ಹಿಂದುಸ್ತಾನದಲ್ಲಿ ಮೊದಲನೆ ಮರಾಟೆಯುದ್ಧವಲ್ಲದೆ ಎರಡನೆ ಮೈಸೂರು ಯುದ್ಧವೂ ನಡೆಯುತ್ತಿತ್ತು. ಬ್ರಿಟಿಷರಿಗೆ ಕಷ್ಟಕಾಲ ವಾಯಿತು.

ಸರಟೋಗದ ಶರಣಾಗತಿಯು ತರುವಾಯ ಉತ್ತರದ ಕಾಲೊನಿಗಳಲ್ಲಿ ಬ್ರಿಟಿಷರು ದುರ್ಬಲರಾಗಿದ್ದರು. ಆದ್ದರಿಂದ ದಕ್ಷಿಣದ ಕಾಲೊನಿಗಳಲ್ಲಿ ಬ್ರಿಟಿಷರು ಯುದ್ಧ ನಡೆಸಲು ನಿಶ್ಚಯಿಸಿಕೊಂಡು **ಲಾರ್ಡ್ ಕಾರ್ನ್‌ವಾಲಿಸ್** (Lord Cornwallis) ಎಂಬ ಪ್ರಖ್ಯಾತ ದಳಪತಿಯನ್ನು ಕಳುಹಿಸಿದರು. ಆತನು ಎರಡು ಕದನಗಳಲ್ಲಿ ಗೆದ್ದು ವರ್ಜಿನಿಯಕ್ಷೇತ್ರದಲ್ಲಿ ನುಗ್ಗಿ ಆ ತರುವಾಯ ಹಿಮ್ಮೆಟ್ಟಿ **ಯಾರ್ಕ್ ಟೌನಿನಲ್ಲಿ** (Yorktown) ಸೇರಿಕೊಂಡನು. ಆವೇಳೆಗೆ ಸರಿಯಾಗಿ ನೆಲದ

**ಶರಣಾಗತಿ** ಕಡೆ ವಾಷಿಂಗ್ಟನ್ನನೂ ಸಮುದ್ರದಕಡೆ ಫ್ರೆಂಚರೂ ಸಿದ್ಧರಾಗಿ ಕಾರ್ನ್‌ವಾಲಿಸನನ್ನು ಅಲ್ಲಿಯೇ ಮುತ್ತಿ ಬಂಧಿಸಿದರು. ಗತ್ಯಂತರವಿಲ್ಲದೆ ಆತನು 1781ರಲ್ಲಿ ಶರಣೆಂದನು. ಆ ಬಳಿಕ ವಾಷಿಂಗ್ಟನ್ ಪಕ್ಷದವರು ನಷ್ಟವಾಗಿದ್ದ ಸ್ಥಲಗಳನ್ನು ಸುಲಭವಾಗಿ ವಶಪಡಿಸಿಕೊಂಡರು. ಕಾಲೊನಿಗಳಲ್ಲಿ ಹೊಡೆದಾಟವು ನಿಂತುಹೋಯಿತು. ಕಾಲೊನಿಗಳವರಿಗೆ ಎಲ್ಲೆಲ್ಲಿಯೂ ಜಯವೇ ನಡೆಯಿತು.

ಅತ್ತ 1782ರಲ್ಲಿ **ಮೈನಾರ್ಕ** ಫ್ರೆಂಚರಿಗೆ ವಶವಾಯಿತು. **ಜಿಬ್ರಾಲ್ಟರನ್ನು** ಉಳಿಸಿಕೊಳ್ಳಲು ಬ್ರಿಟಿಷರು ಬಲು ಪ್ರಯಾಸದಿಂದ ಹೋರಾಟ ನಡೆಸುತ್ತಿದ್ದರು. ವೆಸ್ಟಿಂಡೀಸ್ ದ್ವೀಪಗಳಲ್ಲಿ ಬ್ರಿಟಿಷರಿಗೆ ಸೇರಿದ್ದ ಅನೇಕ ದ್ವೀಪಗಳು ಶತ್ರುಗಳ ಪಾಲಾದವು. ಆದರೆ ಅದೇವರ್ಷ ಇಂಗ್ಲಿಷ್ ಮತ್ತು ಫ್ರೆಂಚ್

**ಜಲಯುದ್ಧ** ನೌಕಾದಳಗಳಿಗೆ **ಡಾಮಿನೀಕ್** (Dominique) ಬಳಿ ಭಾರಿ ಕದನ ನಡೆಯಿತು. ಇಂಗ್ಲಿಷ್ **ನೌಕಾಪತಿ ರಾಡ್ನಿ** (Rodney) ಯೆಂಬಾತನು ಸಾಹಸದಿಂದ ಗೆದ್ದನು. ಆ ಕದನಕ್ಕೆ **ಯತಿಗಳ ದಿನದ ಯುದ್ಧ** (Battle of the Saints) ಎಂದು ಹೆಸರು. ಜಿಬ್ರಾಲ್ಟರ್ ಮುತ್ತಿಗೆಯೂ ನಿಂತು ಇಂಗ್ಲಿಷರಿಗೆ ಜಯ ಬಂತು.

1783ರಲ್ಲಿ ಸಂಧಿ ಸಂಧಾನಗಳು ನಡೆದವು. **ವರ್ಸೇಲ್ಸ್** (Versailles) ಅರಮನೆಯಲ್ಲಿ **ಒಪ್ಪಂದ**ಗಳು ರೂಪಗೊಂಡವು. ಯುನೈಟೆಡ್ ಸ್ಟೇಟ್ಸ್ ಎಂಬ ಹೊಸ ರಾಷ್ಟ್ರದ ಸ್ವಾತಂತ್ರ್ಯವನ್ನೆಲ್ಲರೂ ಒಪ್ಪಿಕೊಂಡು ಗೌರವಿಸಿದರು. ಸ್ಪೈನಿಗೆ ಫ್ಲಾರಿಡ ಮತ್ತು ಮೈನಾರ್ಕಗಳು ಸಂದವು. ಫ್ರಾನ್ಸಿಗೆ ಟೊಬಾಗೊ, ಸೆನೆಗಾಲ್ ಮುಂತಾದ ಕೆಲವು ಪ್ರದೇಶಗಳನ್ನು ಇಂಗ್ಲಿಷರು ಬಿಟ್ಟುಕೊಡಬೇಕಾಯಿತು. ಸಪ್ತವಾರ್ಷಿಕಯುದ್ಧದಲ್ಲಿ ಸೋತ ಅವಮಾನವನ್ನು ಫ್ರೆಂಚರು ಈ ಸಮಯದಲ್ಲಿ ಮರೆತರು.

ಒಪ್ಪಂದ

ಅಮೆರಿಕದ ಸ್ವಾತಂತ್ರ್ಯದ ವಿವರ ಕೆಲವು ಕಾರಣಗಳಿಂದ ಮುಖ್ಯವಾದುದು. ಅದರಲ್ಲಿ ಯುದ್ಧಕ್ಕೆ ಮೊದಲು ನಡೆದ ಕಲಹವೇ ವಿಶೇಷ. ಇಂಗ್ಲಿಷ್ ಜಾತಿಯವರು ತಮ್ಮ ಮಾತೃದೇಶದೊಂದಿಗೇ ಯುದ್ಧಕ್ಕೆ ನಿಂತು ಬೇರೆಯಾದ ವಿವರ ಅದು. ರಾಜನಿಲ್ಲದ ರಾಷ್ಟ್ರವು ದೊಡ್ಡದಾಗಿ ಮೊದಲಾದುದು ಮತ್ತೊಂದಂಶ. ಉತ್ತರ ಅಮೆರಿಕದಲ್ಲಿ ಆಗ ಸುಮಾರು 40 ಲಕ್ಷ ಸಂಖ್ಯೆಯುಷ್ಟಿದ್ದ ಜನರು ತಮ್ಮ ಅಭ್ಯುದಯ ಸಾಧನೆಯಲ್ಲಿ ಮೊದಲನೆ ಮೆಟ್ಟಲಾಗಿ ಒಗ್ಗಟ್ಟನ್ನೂ ಸ್ವಾತಂತ್ರ್ಯವನ್ನೂ ಸಾಧಿಸಿಕೊಂಡರು. ಇಂಗ್ಲಿಷರಿಗೂ ಅಮೂಲ್ಯ ಅನುಭವಲಾಭವಾಯಿತು. ಸಮುದ್ರಪ್ರಾಬಲ್ಯಕ್ಕೆ ಲೋಪ ತೋರಿದರೆ ಸರ್ವಹಾನಿಯಾದೀತೆಂದು ತಿಳಿದುದಲ್ಲದೆ ಕಾಲೊನಿಗಳನ್ನು ಕಟ್ಟಿಕೊಂಡು ಆಳುವುದರಲ್ಲಿ ಮಾಡಬಾರದ ಕೆಲಸವೇನೆಂದು ಬುದ್ಧಿ ಬಂತು. ಏಕಕಾಲದಲ್ಲಿ ಅಮೆರಿಕದ ಯುದ್ಧ, ಫ್ರಾನ್ಸ್ ಸ್ಪೈನ್‌ಗಳೊಡನೆ ಯುದ್ಧ, ಹಾಲಂಡ್ ಸ್ವೀಡ್ ಡೆನ್ಮಾರ್ಕ್‌ದೇಶಗಳ ವಿರೋಧ, ನಾನಾಫಡನವೀಸ್ ಮಹದೇವಸಿಂಧೆ ಹೈದರಾಲಿಗಳೊಡನೆ ಹೋರಾಟಗಳನ್ನು ಕಟ್ಟಿ ನಡೆಸಿದ ಬ್ರಿಟಿಷರು ತಮ್ಮ ಐಕಮತ್ಯ ದೇಶಭಕ್ತಿಗಳ ಬಲದಿಂದ ಹೆಚ್ಚು ಹಾನಿಗೆ ಗುರಿಯಾಗದಿದ್ದ ಅಂಶವೂ ಗಮನಾರ್ಹವಾದುದು.

ಮಹತ್ವ

# ಘಟನಾವಳಿ (ಅಮೆರಿಕದ ಸ್ವಾತಂತ್ರ್ಯ)

| ಇಸವಿ | ರಾಜಕೀಯ | ಅಮೆರಿಕದಲ್ಲಿ ಹೊಡೆದಾಟ | ಇತರೆಡೆಗಳಲ್ಲಿ |
|---|---|---|---|
| 1775 | ಕಾಂಗ್ರೆಸ್ ಯಾಜಮಾನ್ಯ .... | ಲೆಕ್ಸಿಂಗ್ಟನ್, ಬೋಸ್ಟನ್<br>ಬಂಕರ್ಸ್ ಹಿಲ್ | |
| 1776 | ಜುಲೈ 4, ಸ್ವಾತಂತ್ರ್ಯಘೋಷಣೆ .... | ಬ್ರೂಕ್ಲಿನ್ (ಜಯ)<br>ಟ್ರೆಂಟನ್ (ಅ) | |
| 1777 | .... ... | ಸರಟೋಗ (ಅ) | |
| 1778 | ಚಾಥಂಸಾವು,<br>ಫ್ರಾನ್ಸ್ >< ಇಂಗ್ಲಂಡ್ ಯುದ್ಧ | ಫಿಲಡೆಲ್ಫಿಯ ಬಿಡುಗಡೆ | |
| 1779 | ಸ್ಪೈನ್ >< ಇಂಗ್ಲಂಡ್ ,, ... | ... | ಜಿಬ್ರಾಲ್ಟರ್ ಮುತ್ತಿಗೆ ಪ್ರಾರಂಭ |
| 1780 | ಹಾಲಂಡ್>< ಇಂಗ್ಲಂಡ್ ,, .... | .... | ಹೈದರಾಲಿಯ ಧಾಳಿ |
| 1781 | ... | ಯಾರ್ಕ್‌ಟೌನ್ (ಅ) .... | ಪೊರ್ಟೋನೋವೊ ಕದನ |
| 1782 | ನಾರ್ತನ ರಾಜಿನಾಮೆ | ... | ಮೈನಾರ್ಕನಷ್ಟ, ಯತಿಗಳ ದಿನದ ಕದನ, ಜಿಬ್ರಾಲ್ಟರ್ ಜಯ. |
| 1783 | ವರ್ಸೈಲ್ಸ್ ಒಪ್ಪಂದ | | |

# 3 ಫ್ರಾನ್ಸಿನ ಮಹಾಪಲ್ಲಟ

## ಕಾಲಸೂಚೀ

| ಇಂಗ್ಲೆಂಡ್ | ಫ್ರಾನ್ಸ್ | ಸ್ಪೈನ್ | ಆಸ್ಟ್ರಿಯ | ರಷ್ಯ |
|---|---|---|---|---|
| ಕಿರಿಯಪಿಟ್ ಮಂತ್ರಿ 1783-1801 | 16ನೆ ಲೂಯಿ 1774-1792 | 4ನೆ ಚಾರ್ಲ್ಸ್ 1788-1808 | 2ನೆ ಲಿಯೊಪೋಲ್ಡ್ 1790-1792 | 2ನೆ ಕಥರೀನ್ 1762-1796 |
| | ರಿಪಬ್ಲಿಕ್ 1792-1799 | 7ನೆ ಫರ್ಡಿನೆಂಡ್ 1808 | 2ನೆ ಫ್ರಾನ್ಸಿಸ್ 1792-1804-1835 | ಪಾಲ್ 1796-1801 |
| ಆಡಿಂಗ್ಟನ್ ಮಂತ್ರಿ 1801-1804 | ಕಾನ್ಸಲೇಟ್ 1799-1804 | ಜೋಸೆಫ್ ಬೋನಪಾರ್ಟ್ 1808-1813 | | 1ನೆ ಅಲೆಕ್ಸಾಂಡರ್ 1801-1825 |
| ಕಿರಿಯಪಿಟ್ 1804-1806 | ಚಕ್ರವರ್ತಿ ನಪೋಲಿಯನ್ 1804-1814 | 7ನೆ ಫರ್ಡಿನೆಂಡ್ 1813-1833 | | |
| | 18ನೆ ಲೂಯಿ 1814-1824 | | | |

ಅಮೆರಿಕ ಸ್ವಾತಂತ್ರ್ಯದ ಸಂಗ್ರಾಮ ನಡೆಯುತ್ತಿದ್ದಾಗ ಫ್ರಾನ್ಸಿನಲ್ಲಿ **16ನೆ ಲೂಯಿ** ದೊರೆ. ನೀತಿಭ್ರಷ್ಟನಾಗಿ ಸರ್ವವಿಧದಲ್ಲಿಯೂ ವಿನಾಶಕಾರಕವಾಗಿ ವರ್ತಿಸಿದ್ದ 15ನೆ ಲೂಯಿ 1774ರಲ್ಲಿ ತೀರಿಕೊಂಡಿದ್ದನು. ಹೊಸ ದೊರೆ 16ನೆ ಲೂಯಿ ಆಸ್ಟ್ರಿಯದ ರಾಜಪುತ್ರಿ ***ಮರೀ ಆಂತ್ವಾನೆತ್** (Marie Antoinette) ಎಂಬಾಕೆಯನ್ನು ಮದುವೆಯಾಗಿದ್ದನು. ಆಳಿಕೆಯನ್ನು ಸದುದ್ದೇಶದಿಂದ ಮೊದಲಿಟ್ಟನು. ಆದರೆ ಫ್ರಾನ್ಸ್ ದೇಶದಲ್ಲಿ ಪ್ರಳಯದಂತಹ ಘೋರ ಘಟನೆ ಸಿದ್ಧವಾಗುತ್ತಿತ್ತು. ಅಂತಹ ವಿಪತ್ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವ ಜಾಣತನವಾಗಲಿ ಸಾಮರ್ಥ್ಯವಾಗಲಿ 16ನೆ ಲೂಯಿಯಲ್ಲಿರಲಿಲ್ಲ.

**ರಾಜಾರಾಣಿ**

---

*ಮರಿಯ ಥೆರೀಸ ಚಕ್ರವರ್ತಿನಿಯ ಮಗಳು. ಈಕೆಯ ಚರಿತ್ರೆ ಮೇರಿಸ್ಟೂಯರ್ಟ್ ಚರಿತ್ರೆಗಿಂತ ವಿಷಾದಾಂತವಾದುದು.

ಫ್ರಾನ್ಸ್ ದೇಶದಲ್ಲಿ ಇಂಗ್ಲಿಷ್ ಪಾರ್ಲಿಮೆಂಟಿನಂತಹ ಪ್ರತಿನಿಧಿಗಳ ಸಭೆ ಇರಲಿಲ್ಲ. ಆಡಳಿತವೆಲ್ಲವೂ ದೊರೆಯ ಕೈಲಿತ್ತು. 14ನೆ, 15ನೆ ಲೂಯಿಯರಿಬ್ಬರೂ ನಿರಂಕುಶಾಧಿಕಾರವನ್ನು ಚಲಾಯಿಸಿದ್ದರು. ಇಬ್ಬರ ಆಳಿಕೆಯಲ್ಲಿಯೂ ಫ್ರಾನ್ಸಿಗೆ ನಷ್ಟದಮೇಲೆ ನಷ್ಟವೇ ಸಂಭವಿಸಿತು. ಯುದ್ಧಗಳ ನಷ್ಟದಿಂದಲೂ ರಾಜಾಸ್ಥಾನದ ದುಂದುಗಾರಿಕೆಯಿಂದಲೂ ಬೆಟ್ಟದಷ್ಟು ಸಾಲವೇರಿತ್ತು. ರಾಜ್ಯದ ಒಟ್ಟು ಸ್ವತ್ತಿನಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ಶ್ರೀಮಂತರಿಗೂ ಪುರೋಹಿತರಿಗೂ ಪಾಲಾಗಿತ್ತು. ಆಯೆರಡು ವರ್ಗದವರು ಕಂದಾಯ ತೆರಿಗೆಗಳನ್ನು ಕೊಡತಕ್ಕವರಾಗಿರಲಿಲ್ಲ. ಸಾಮಾನ್ಯಜನರೇ ಎಲ್ಲ ತೆರಿಗೆಗಳನ್ನೂ ತೆರಬೇಕಾಗಿತ್ತು. ದಿನೇದಿನೇ ಏರುತ್ತಿದ್ದ ಸಾಲವೊಂದುಕಡೆ ಆಸ್ಥಾನದ ದುಂದುಗಾರಿಕೆಯಿನ್ನೊಂದುಕಡೆ ಆಗಿದ್ದಾಗ ತೆರಿಗೆಯ ಭಾರವೆಲ್ಲ ಬಡ ಜನರಮೇಲೆ ಬಿತ್ತು. ಆ ಸಮಯಕ್ಕೆ ಸರಿಯಾಗಿ ಕ್ಷಾಮ ತಲೆಹಾಕಿತು. ಆಹಾರವನ್ನು ಕಾಣದೆ ಜನರು ಮೈಮರೆತು ಮೃಗಗಳಂತಾಡುವ ಕಾಲ ಬಂತು.

**ಸಾಲದ ಹೊರೆ**

18ನೆ ಶತಮಾನದ ಪೂರ್ವಾರ್ಧದಲ್ಲಿ ಫ್ರಾನ್ಸಿನಲ್ಲಿ ತೇಜಸ್ವಿಗಳಾದ ತತ್ವಜ್ಞರು ಹುಟ್ಟಿದ್ದರು. ಪುರೋಹಿತರನ್ನು ದೇವತೆಗಳಂತೆ ಸನ್ಮಾನಿಸುತ್ತಿದ್ದ ಸಾಮಾನ್ಯ ಜನರಲ್ಲಿ **ವಾಲ್ಟೇರ್** (Voltaire) ಎಂಬ ಪ್ರಚಂಡ ಪುರುಷನ ವಿಚಾರಸರಣಿಯು ಹರಡಿ ಮೂಢಭಕ್ತಿ ತೊಲಗಿತ್ತು. ರಾಜರನ್ನು ದೇವಾಂಶಸಂಭೂತರೆಂದು ಭಾವಿಸಿದ್ದ ಜನರಲ್ಲಿ **ರೂಸೊ** (Rousseau) ಎಂಬ ತತ್ವಜ್ಞನ ಬೋಧೆಯು ವ್ಯಾಪಿಸಿ ರಾಜತ್ವವೆಂಬುದು ಜನನಿರ್ಮಿತಮಾತ್ರವೆಂಬ ನಂಬಿಕೆ ಬೆಳೆದಿತ್ತು. ಹಳೆಯ ಆಚಾರಸಂಪ್ರದಾಯಗಳಲ್ಲಿ ಜನರಿಗಿದ್ದ ಭಕ್ತಿಯು ಮಾಯವಾಗಿ ಅವಿಶ್ವಾಸವೇ ಹೆಚ್ಚಿತ್ತು. ಪಟ್ಟಣಿಗರಲ್ಲಿಯೂ ನೆಮ್ಮದಿವಂತರಲ್ಲಿಯೂ ನೂತನ ವಿಚಾರಬುದ್ಧಿಯು ಬಲವಾಗುತ್ತಿದ್ದಂತೆ ಗ್ರಾಮಸ್ಥರಲ್ಲಿಯೂ ಬಡವರಲ್ಲಿಯೂ ಅಸಮಾಧಾನ ಹೆಚ್ಚುತ್ತಿತ್ತು. ಅಂತಹ ಕಾಲದಲ್ಲಿ ಆಸ್ಥಾನಿಕರ ಅನಾಚಾರವೂ ಶ್ರೀಮಂತರ ದರ್ಪ ಪ್ರತಿಷ್ಠೆಗಳೂ ಮಿತಿಮೀರಿ ನಡೆಯುತ್ತಿದ್ದವು.

**ನವ್ಯಪ್ರಜ್ಞೆ**

1783ರಲ್ಲಿ ಅಮೆರಿಕದ ಸ್ವಾತಂತ್ರ್ಯ ಸ್ಥಾಪಿತವಾಯಿತು. ಆ ತರುವಾಯ ಲೂಯಿಗೆ ಹಣ ಹುಟ್ಟದೆ ಕಷ್ಟವಾಯಿತು. ಬೇರಾವುದೂ ಸಾಧ್ಯವಿಲ್ಲದ ಆ ರಾಜನು 1789ರಲ್ಲಿ ಶ್ರೀಮಂತ ಪುರೋಹಿತ ವರ್ಗಗಳವರನ್ನೂ ಸಾಮಾನ್ಯವರ್ಗದ **ಪ್ರತಿನಿಧಿಗಳನ್ನೂ ಸಭೆ** (States General) ಸೇರಿಸಿದನು. ಆಗ ಶ್ರೀಮಂತ ಪುರೋಹಿತ ವರ್ಗಗಳವರು ತಮ್ಮ ವಿಶಿಷ್ಟ ಹಕ್ಕುದಾರಿಕೆಗಳನ್ನು ಬಿಟ್ಟುಕೊಟ್ಟು ತೆರಿಗೆ ಕೊಡಲೊಪ್ಪಬೇಕೆಂದು ಮೂರನೆ ವರ್ಗದವರು ಮುಷ್ಕರ ಹಿಡಿದರು. ಆ ಮುಷ್ಕರವನ್ನು ಮುರಿಯಲು ರಾಜಾರಾಣಿಯರೂ ಆಸ್ಥಾನಿಕರೂ ಸಂಧಾನ ಮಾಡುತ್ತಿದ್ದಾಗ ಹೊಟ್ಟೆಗಿಲ್ಲದೆ ನರಳುತ್ತಿದ್ದ

**ರಾಷ್ಟ್ರಸಭೆ**

ಜನರ ಸಂಕಟವು ಅಸಹ್ಯವಾಗಿ ದೊಂಬಿಗಳೂ ಗಲಾಟೆಗಳೂ ನಿತ್ಯಗಟ್ಟಲೆಯಾದವು. ಅದೇವರ್ಷ ಜುಲೈ 14ನೆ ದಿನ ಪ್ಯಾರಿಸ್‌ನಗರದ ಜನರು ಗುಂಪೆದ್ದು ಅಲ್ಲಿದ್ದ **ಬಾಸ್ತೀಲ್** (Bastille) ಎಂಬ ಸೆರೆಮನೆಯನ್ನು ಮುತ್ತಿ ವಶಪಡಿಸಿಕೊಂಡರು. ಅಂದೇ ಪ್ರಳಯದಂತಹ ಮಹಾಪಲ್ಲಟ ಪ್ರಾರಂಭಿಸಿತೆಂದು ಭಾವನೆ.

**ಪ್ರಳಯ ಸೂಚನೆ**

ಈ ಸಮಾಚಾರ ಕೇಳಿದ ಇಂಗ್ಲಿಷರಲ್ಲಿ ಅನೇಕರು ಶಹಬಾಸೆಂದರು. ವ್ಹಿಗ್ ಪಕ್ಷದವರಿಗೆ ಆನಂದವಾಯಿತು. ಶತಮಾನಗಳಿಂದ ಪರಂಪರೆಯಾಗಿ ಬಂದಿದ್ದ ಮೌಢ್ಯವು ತೊಲಗಲಾರಂಭವಾಯಿತೆಂದರು. ಕವಿಗಳು ಬಾಸ್ತೀಲ್ ಪತನವನ್ನು ಕುರಿತು ಗೀತೆಗಳನ್ನು ಕಟ್ಟಿದರು. ಟೋರಿ ಪಕ್ಷದವರಿಗಾದರೆ ವಿದ್ಯಮಾನಗಳೊಂದಾದರೂ ಸರಿಬೀಳಲಿಲ್ಲ. ರಾಜಬಂಧುಗಳಿಗೂ ಶ್ರೀಮಂತರಿಗೂ ಫ್ರೆಂಚ್ ಜನರ ವರ್ತನೆ ರುಚಿಸಲಿಲ್ಲ. ಆಗ ಪ್ರಧಾನ ಮಂತ್ರಿಯಾಗಿದ್ದಾತನು ಕಿರಿಯ ಪಿಟ್. ಆತನು ಟೋರಿ ಪಕ್ಷದವನಾಗಿದ್ದರೂ ಪಾರ್ಲಿಮೆಂಟ್ ಸಭೆಯಲ್ಲಿ **ಫಾಕ್ಸ್** (Fox) **ಷೆರಿಡನ್** (Sheridan) **ಬರ್ಕ್** (Burke) ಎಂಬ ಪ್ರಸಿದ್ಧ ವಾಗ್ಮಿಗಳು ವ್ಹಿಗ್ಗರಾಗಿದ್ದರು. ಇವರು ನೋಡುತ್ತಿದ್ದಹಾಗೆಯೇ ಫ್ರಾನ್ಸಿನಲ್ಲಿ ರಾಕ್ಷಸಲೀಲೆಗಿಟ್ಟುಕೊಂಡಿತು. ಆಗ ಬರ್ಕ್ ಒಂದು ಪುಸ್ತಕ ಬರೆದು ಪ್ರಕಟಿಸಿದನು. ಸುವಿಚಾರಪೂರಿತವಾದ ಆ ಪುಸ್ತಕವನ್ನು ಓದಿದವರೆಲ್ಲರಿಗೂ ಫ್ರಾನ್ಸಿನ ಮಹಾಪಲ್ಲಟವನ್ನು ಕಂಡು ಶಂಕಾವಿಸ್ಮಯಗಳು ತೋರಲಾರಂಭವಾಯಿತು. ಸ್ವಲ್ಪಕಾಲದಲ್ಲಿಯೇ ಇಂಗ್ಲಂಡಿಗೂ ಫ್ರಾನ್ಸಿಗೂ ಯುದ್ಧಕ್ಕಿಟ್ಟುಕೊಂಡಿತು.

**ಇಂಗ್ಲಂಡಿನಲ್ಲಿ ಪರಿಣಾಮ**

ಬಾಸ್ತೀಲ್ ಪತನದ ಬಳಿಕ ಫ್ರಾನ್ಸಿನಲ್ಲಿ ಸಾಮಾನ್ಯಜನರ ಪ್ರತಿನಿಧಿಗಳು ಶ್ರೀಮಂತವರ್ಗದವರ ಹಕ್ಕುದಾರಿಕೆಗಳನ್ನು ವಜಾಮಾಡಿ ಸಾಂಕುಶಪ್ರಭುತ್ವ ಕಟ್ಟಬೇಕೆಂದು ಯತ್ನಿಸಿದರು. ರಾಜಪಕ್ಷದವರೂ ಶ್ರೀಮಂತರೂ ಅದಕ್ಕೆ ವಿರೋಧಿಗಳಾಗಿ ಪಿತೂರಿಗಳನ್ನು ಕಟ್ಟಿದರು. ಪಾರ್ಟಿಗಳು ಬೆಳೆದು ದಿನೇದಿನೇ ಉತ್ಸಾಹ ಪಕ್ಷಪಾತಗಳು ಸನ್ನಿಪಾತಸೂಚಕಗಳಾಗಿ ರೇಗಿದವು. ರಾಜಾರಾಣಿಯರು ಪಿತೂರಿಯಲ್ಲಿ ಸಿಕ್ಕಿದರು. ರಾಜವಧೆಯಾಗಿಹೋಯಿತು. ರಾಣಿಯ ವಧೆಯೂ ಆಯಿತು. ವಿರೋಧಿಗಳನ್ನೂ ಪಿತೂರಿಗಾರ ಶ್ರೀಮಂತರನ್ನೂ ಅಡಗಿಸುವ ಭರದಲ್ಲಿ ಪಿಶಾಚಕೃತ್ಯಗಳು ನಡೆದವು. 1793ರಲ್ಲಿ ರಾಜಪುರುಷರ ವಧೆಯಾದಮೇಲೆ ರಿಪಬ್ಲಿಕ್‌ರೂಪದ ರಚನೆಯಾಯಿತು. ರಾಷ್ಟ್ರನಾಯಕರಾಗಿದ್ದವರು ಸರ್ವಸಮತ್ವ, ಸರ್ವಭ್ರಾತೃತ್ವ, ಸರ್ವಸ್ವಾತಂತ್ರ್ಯಗಳನ್ನು ಆದರ್ಶಗಳೆಂದು ಸಾರಿದ್ದಲ್ಲದೆ ನೆರೆಹೊರೆಯ ರಾಜ್ಯಗಳ ಜನರಿಗೂ

**ಫ್ರಾನ್ಸಿನಲ್ಲಿ ರಿಪಬ್ಲಿಕ್**

ಆ ಆದರ್ಶಗಳನ್ನು ತಿಳಿಯಹೇಳಿ ತಮ್ಮಂತೆಯೇ ಅವರೂ ಯತ್ನಿಸಬೇಕೆಂದೂ ಅಂತಹ ಯತ್ನದಲ್ಲಿ ತಾವು ಸಹಾಯಮಾಡತಕ್ಕವರೆಂದೂ ಪ್ರಕಟಿಸಿದರು. ಇದನ್ನು ಕೇಳಿದ ನೆರೆರಾಜರಿಗೆ ಸಹಜವಾಗಿ ಕೋಪತಾಪಗಳುಂಟಾದವು. ಫ್ರಾನ್ಸ್‌ದೇಶದಿಂದೋಡಿದ್ದ ರಾಜಬಂಧುಗಳೂ ಶ್ರೀಮಂತರೂ ನೆರೆರಾಜರನ್ನು ಯುದ್ಧಮಾಡಬೇಕೆಂದು ಪ್ರೇರಿಸುತ್ತಲೂ ಇದ್ದರು. ಆಸ್ಟ್ರಿಯ ಮತ್ತು ಪ್ರಷ್ಯ ದೊರೆಗಳು ಈರೀತಿ ಮೊದಲು ಫ್ರಾನ್ಸಿಗೆ ವಿರೋಧಿಗಳಾಗಿ ಯುದ್ಧಕ್ಕೆ ಸಿದ್ಧರಾದರು. ಉತ್ಸಾಹವುತ್ತರಾದ ಫ್ರೆಂಚರು ನೆದರ್ಲಾಂಡ್ಸಿನಲ್ಲಿ ಆಸ್ಟ್ರಿಯ ಪ್ರಭುವಿನ ಸೈನ್ಯಗಳನ್ನು ಎದುರಿಸಿ ಹುರುಪಿನಿಂದ ಹೋರಾಡಿ ಸೋಲಿಸಿಯೂ ಬಿಟ್ಟರು.

**ಪ್ರಕಟಣೆ**

ಇಂಗ್ಲಂಡಿನ ನಾಯಕರು ಫ್ರಾನ್ಸಿನಲ್ಲಿ ನಡೆದ ದೈತ್ಯಲೀಲೆಯನ್ನು ಕೇಳಿ ಹಾಹಾಕಾರಪಟ್ಟರು. ಫ್ರಾನ್ಸ್ ಕ್ರಾಂತಿಕಾರರು ಪ್ರಕಟನೆ ಕೊಟ್ಟಮೇಲೆ ಅದರ ಪರಿಣಾಮವಾಗಿ ಇಂಗ್ಲಂಡಿನ ಕೆಲವೆಡೆಗಳಲ್ಲಿ ಜನರು ದಂಗೆಯೆಬ್ಬಿಸುವ ಯೋಚನೆ ಮಾಡಿದ್ದನ್ನು ತಿಳಿದು ಇಂಗ್ಲಿಷ್ ಮಂತ್ರಿಗಳು ಎಚ್ಚರಗೊಂಡರು. 1792ರಲ್ಲಿ ಆಸ್ಟ್ರಿಯದ ಶತ್ರುಗಳಾಗಿ ಫ್ರೆಂಚರು ಯುದ್ಧವನ್ನಾರಂಭಿಸಿ ಉತ್ತರದಲ್ಲಿ ನುಗ್ಗಿ ಜಯಪಡೆದಮೇಲೆ **ಷೆಲ್ಟ್** (Scheldt) ನದಿಯಮೇಲೆ ಎಲ್ಲರೂ ವ್ಯಾಪಾರ ನಡೆಸಬಹುದೆಂದು ಪ್ರಕಟಿಸಿ ಆ ಮೂಲಕ ಡಚ್ಚರ ಮತ್ತು ಇಂಗ್ಲಿಷರ ವ್ಯಾಪಾರಕ್ಕೆ ಹಾನಿಯನ್ನೊಡ್ಡಿದರು. ಕೂಡಲೆ ಹಾಲಂಡನ್ನು ಆಕ್ರಮಿಸುವ ಯೋಚನೆಯನ್ನೂ ಮಾಡಿದರು. ಹಾಲಂಡಿನ ವಿಪತ್ತು ತಮ್ಮ ವಿಪತ್ತೆಂಬ ಹಳೇ ಸೂತ್ರವನ್ನನುಸರಿಸುವ ಸ್ಥಿತಿಯೊದಗಿತು. ಇಂಗ್ಲಂಡಿನವರು ಯುದ್ಧಕ್ಕಣಿಯಾಗಬೇಕಾಯಿತು. 1793ರಲ್ಲಿ ರಾಜವಧೆಯೂ ಆಯಿತು. ಆಗ ಫ್ರಾನ್ಸಿನೊಡನೆ ಯುದ್ಧಮಾಡಲು ಆಸ್ಟ್ರಿಯ, ಪ್ರಷ್ಯ, ಹಾಲಂಡ್, ಸ್ಪೈನ್, ಸಾರ್ಡಿನಿಯ ದೇಶಗಳೊಡನೆ ಬ್ರಿಟಿಷರು ಸೇರಿ **ಮೊದಲನೆ ಮಿತ್ರವ್ಯೂಹ** (First Coalition) ಎಂಬುದನ್ನು ಸಿದ್ಧಗೊಳಿಸಿದರು.

**ಇಂಗ್ಲಿಷರ ಯೋಚನೆ**

1793ರಲ್ಲಿ ಯುದ್ಧ ಮೊದಲಾಯಿತು. ಮಿತ್ರಮಂಡಲಿಯ ಸೈನ್ಯಗಳು ಫ್ರಾನ್ಸನ್ನು ಮುತ್ತಿ ಅಲ್ಲಿಯ ಪಲ್ಲಟವಿರೋಧಿಗಳಿಗೆ ಸಹಾಯಮಾಡಲು ಯತ್ನಿಸಿದವು. ಇಂಗ್ಲಿಷ್ ಸೈನ್ಯಗಳು **ಟುಲಾನ್** (Toulon), **ಕಿಬೆರಾನ್** (Quiberon), ಮತ್ತು **ಡಂಕರ್ಕ್** (Dunkirk) ಎಂಬೆಡೆಗಳಲ್ಲಿ ಸಮುದ್ರದ ಕಡೆಯಿಂದ ಮುತ್ತಿದವು. ಮಿತ್ರಮಂಡಲಿಯ ಇತರರು ಒಟ್ಟುಗೂಡದೆ ಬೇರೆಬೇರೆಯಾಗಿ ಅಲ್ಲಲ್ಲಿ ಮುತ್ತಲು ತೊಡಗಿದರು. ಫ್ರೆಂಚರು ಸ್ವದೇಶವನ್ನು ರಕ್ಷಿಸಲು ಉತ್ಸಾಹಭಕ್ತಿಗಳಿಂದ ತೊಡಗಿ

**1ನೆ ವ್ಯೂಹದ ಹೊಡೆದಾಟ**

ಶತ್ರುಸೈನ್ಯಗಳನ್ನು ಓಡಿಸಿದ್ದಲ್ಲದೆ ನೆದರ್ಲಂಡ್ಸಿನಲ್ಲಿ ನುಗ್ಗಿ ಹಾಲಂಡನ್ನು ಆಕ್ರಮಿಸಿ ರ್ಹೈನ್‌ನದಿಯವರೆಗೂ ಜಯಿಸಿಬಿಟ್ಟರು. ಹಿಂದಿನಕಾಲದಲ್ಲಿ ಎಷ್ಟು ಪ್ರಯತ್ನ ಮಾಡಿದಾಗ್ಗೂ ಸಾಧನೆಯಾಗದಿದ್ದ **ರ್ಹೈನ್ ಮೇರೆಯು** ಈಗ ಸುಲಭವಾಗಿ ಲಭಿಸಿತು. ಇತ್ತ ಇಂಗ್ಲಿಷ್ ಸೈನ್ಯಗಳಿಗೆ ಜಯಸಿಕ್ಕಲಿಲ್ಲ. ಆಗ ಪ್ರಷ್ಯ ಮತ್ತು ಸ್ಪೈನ್ ದೇಶಗಳ ರಾಜರು ಸೋಲನ್ನು ಕಂಡು ಮಿತ್ರವ್ಯೂಹದಿಂದ ಜಾರಿಕೊಂಡರು. ಮಿತ್ರಮಂಡಲಿಯು ದುರ್ಬಲವಾಯಿತು. ಇಂಗ್ಲಿಷರಾವರೆ ಟುಲಾ ಡಂಕರ್ಕುಗಳಲ್ಲಿ ಹಿಮ್ಮೆಟ್ಟಿದಾಗ್ಗೂ ಸಮುದ್ರದ ಮೇಲಿನ ಪ್ರಾಬಲ್ಯದಿಂದ ಇತರ ಕಡೆಗಳಲ್ಲಿ ಫ್ರೆಂಚರ ಕ್ಷೇತ್ರಗಳನ್ನು ಆಕ್ರಮಿಸಿದರು. ಹಿಂದುಸ್ತಾನದಲ್ಲಿ ಫ್ರೆಂಚರಿಗಿದ್ದ ಸ್ಥಲಗಳೂ ವೆಸ್ಟಿಂಡೀಸಿನಲ್ಲಿ ಕೆಲವು ದ್ವೀಪಗಳೂ ಇಂಗ್ಲಿಷರ ಹಸ್ತಗತವಾದವು. ಡಚ್ಚರಿಗೆ ಸೇರಿದ್ದ **ಗುಡ್‌ಹೋಪ್** ಭೂಶಿರ ಇದೇ ಕಾಲದಲ್ಲಿ ಇಂಗ್ಲಿಷರದಾಯಿತು. 1794ರಲ್ಲಿ **ಜೂನ್ ಒಂದನೆದಿನ** ಅಟ್ಲಾಂಟಿಕ್ ಸಾಗರದಲ್ಲಿ ಒಂದು ನೌಕಾಯುದ್ಧದಲ್ಲಿಯೂ ಇಂಗ್ಲಿಷರು ಗೆದ್ದರು (Glorious First of June).

ಒಂದು ವರ್ಷದಲ್ಲಿ ಮಿತ್ರವ್ಯೂಹ ಒಡೆಯಿತು. ಹಾಲಂಡ್, ಸ್ಪೈನ್, ಪ್ರಷ್ಯಗಳು ಜಾರಿಕೊಂಡಮೇಲೆ ಇಂಗ್ಲಂಡ್ ಆಸ್ಟ್ರಿಯಗಳೆರಡೇ ಯುದ್ಧವನ್ನು ನಡೆಸುತ್ತಿದ್ದವು. ಅಂತಹ ಕಾಲದಲ್ಲಿ ಫ್ರಾನ್ಸಿನಲ್ಲಿ **ಡೈರೆಕ್ಟರಿ** (Directory) ಎಂಬ ಹೆಸರಿನ ಸರ್ಕಾರವು ಸ್ಥಾಪಿತವಾಗಿತ್ತು. 1795ರಲ್ಲಿ ಪ್ಯಾರಿಸ್ಸಿನಲ್ಲಿ ಅತಿ ತೇಜಸ್ವಿಯಾದ ದಳಪತಿಯೊಬ್ಬನು ಪ್ರಕಾಶಕ್ಕೆ ಬಂದನು. ಅವನೇ ಟುಲಾನಿನಲ್ಲಿ ಇಂಗ್ಲಿಷರ ಮುತ್ತಿಗೆಯನ್ನು ಪರಾಭವಿಸಿದ್ದ **ನಪೋಲಿಯನ್ ಬೋನಪಾರ್ಟ್**. ಆತನು 1796ರಲ್ಲಿ ಆಸ್ಟ್ರಿಯದೊಡನೆ ಹೋರಾಡಲು ಇಟಲಿಯ ಉತ್ತರಭಾಗದಲ್ಲಿ ನುಗ್ಗಿ ಮಿಂಚಿನ ವೇಗದಿಂದ ತನ್ನ ಸೈನ್ಯವನ್ನು ನಡೆಸಿ ಅನೇಕ ಜಯಗಳನ್ನು ಪುನಃ ಪುನಃ ಸಾಧಿಸಿದನು. ಅದರಿಂದ ಸಾರ್ಡಿನಿಯ ಸಂಸ್ಥಾನಿಕನು ಫ್ರೆಂಚರ ಆಶ್ರಿತನಾದುದಲ್ಲದೆ ಆಸ್ಟ್ರಿಯದ ಬಲ ಮುರಿಯಿತು. 1797ರಲ್ಲಿ ಆಸ್ಟ್ರಿಯದ ಪ್ರಭು ಸೋಲನ್ನೊಪ್ಪಿಕೊಂಡು ಯುದ್ಧ ನಿಲ್ಲಿಸಿದನು.

ಫರಾನ್ಸಿ ಜಯ

1793ರಲ್ಲಿ ರೂಪಗೊಂಡ ಮಿತ್ರವ್ಯೂಹ ಈ ರೀತಿಯಲ್ಲಿ ಮುರಿದುಹೋಯಿತು. ನಾಲ್ಕು ವರ್ಷಗಳು ಕಳೆಯುವುದರಲ್ಲಿ ಇಂಗ್ಲಂಡೊಂದು ವಿನಾ ಉಳಿದ ಶತ್ರುಗಳೆಲ್ಲರೂ ಸೋತು ಫ್ರೆಂಚರೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡರು. ಯೂರೋಪ್ ಖಂಡದ ಪಶ್ಚಿಮದಲ್ಲಿ ಫ್ರಾನ್ಸ್‌ದೇಶವು ವಿಸ್ತಾರ ಪ್ರಾಬಲ್ಯಗಳನ್ನು ಪಡೆಯಿತು. ಆದರೆ ಸಮುದ್ರದ ಮೇಲೆ ಫ್ರೆಂಚರು ಗೆಲ್ಲಲಾಗಲಿಲ್ಲ. ಇಂಗ್ರಿಷರು ಸಂಧಿಗೆ ಬರಲಿಲ್ಲ. ಸಮುದ್ರಗಳ ಮೇಲೆ ಸಂಚರಿಸುತ್ತ ದೂರಕ್ಷೇತ್ರಗಳನ್ನು ಜಯಿಸುತ್ತ ವಿರೋಧವನ್ನು ಬಿಡದಿದ್ದರು.

1797 ರಿಂದ 1799 ರವರೆಗೆ ಇಂಗ್ಲಿಷರೊಬ್ಬರೇ ಫ್ರೆಂಚರೊಡನೆ ಯುದ್ಧ ನಡೆಸ ಬೇಕಾಯಿತು. ಹಿಂದುಸ್ತಾನದಲ್ಲಿ ಆಗ ನಾನಾಫಡನವೀಸ್

**ಒಂಟಿ ಇಂಗ್ಲಂಡ್**

ಟಿಪ್ಪುಸುಲ್ತಾನರ ಕಾಲ. ಟಿಪ್ಪು ಫ್ರೆಂಚರ ಸ್ನೇಹಸಹಾಯ ಗಳಿಗೆ ಆಸೆಪಡುತ್ತಿದ್ದನು. ಯುರೋಪಿನಲ್ಲಾದರೆ ಎಲ್ಲ ಪ್ರಭುಗಳೂ ಫ್ರಾನ್ಸಿಗೆ ಸೋತು ಇಂಗ್ಲಂಡನ್ನು ಒಂಟಿಯಾಗಿ ಬಿಟ್ಟವರೇ. 1797ರಲ್ಲಿ ಇಂಗ್ಲಂಡಿನ ನಾವಿಕರೂ ಅಸಮಾಧಾನಪಟ್ಟು ದಂಗೆಯೆದ್ದರು. ಐರ್ಲಂಡಿನಲ್ಲಿ ದೊಡ್ಡ ದಂಗೆಯೇಳುವಂತಿತ್ತು. ಆದರೆ ನಿಪುಣರಾದ ಇಂಗ್ಲಿಷ್ ನೌಕಾಪತಿಗಳು ನಾವಿಕರನ್ನು ಸಮಾಧಾನಗೊಳಿಸಿ ಡಚ್ಚರ ಜಲಬಲವನ್ನು **ಕ್ಯಾಂಪರ್‌ಡೌನ್** (Camper-down) ಎಂಬಲ್ಲಿ ಧ್ವಂಸಮಾಡಿದರು. **ಸೆಂಟ್ ವಿನ್ಸೆಂಟ್ ಭೂಶಿರ**ದ (Cape St. Vincent) ಬಳಿ ಇಂಗ್ಲಿಷ್ ನೌಕಾಪತಿಗಳಾಗಿದ್ದ **ಜರ್ವಿಸ್** (Jervis) ಮತ್ತು **ನೆಲ್ಸನ್** (Nelson) ಎಂಬಿಬ್ಬರೂ ಸ್ಪೈನಿನ ನೌಕಾಬಲವನ್ನು ಎದುರುಗೊಂಡು ಬಲಿ ಯಿಟ್ಟರು. ಇಂಗ್ಲಂಡಿನ ಸುತ್ತಣ ಸಮುದ್ರಭಾಗಗಳು ನಿರುಪಾಧಿಕವಾಯಿತೆಂದು ಕೊಳ್ಳುವಷ್ಟರಲ್ಲಿ ಫ್ರೆಂಚ್ ದಂಡನಾಯಕ ನಪೋಲಿಯನ್ 1798 ರಲ್ಲಿ **ಬ್ರೆಸ್ಟ್** (Brest) ಬಳಿಗೆ ಬಂದಿದ್ದು ಐರ್ಲಂಡಿನ ಮುತ್ತಿಗೆಯನ್ನು ಕುರಿತು ಯೋಚಿಸುತ್ತಿದ್ದನು. ಆದರೆ ಕೆಲವು ಕಾರಣಗಳಿಂದ ಆತನು ಆ ಯೋಚನೆಯನ್ನು ಬಿಟ್ಟು ಸೈನ್ಯವನ್ನು ಗೋಪ್ಯವಾಗಿ ಸಾಗಿಸಿ ಭೂಮಧ್ಯಸಮುದ್ರದಲ್ಲಿ ಯಾನಮಾಡಿ **ಮಾಲ್ಟ** ದ್ವೀಪವನ್ನು (Malta) ಗೆದ್ದು ಈಜಿಪ್ಟಿಗೆ ಹೊರಟುಬಿಟ್ಟನು. ಆ ಸಮುದ್ರದಲ್ಲಿ ಹೊಂಚುತ್ತಿದ್ದ ನೆಲ್ಸನ್ನಿಗೆ ನಪೋಲಿಯನ್ನನ ಹಡಗುಗಳು ಸಿಕ್ಕಲೇ ಇಲ್ಲ. 1798ರಲ್ಲಿ ಫ್ರೆಂಚರು ಈಜಿಪ್ಟಿನಲ್ಲಿಳಿದರು. ಅಲ್ಲಿಯ ಮುಸಲ್ಮಾನ ಪ್ರಭುವಿನ ಸೈನ್ಯವನ್ನು ನಪೋಲಿಯನ್ ಸುಲಭವಾಗಿ **ಪಿರಮಿಡ್ಡುಗಳ ಕದನ** (Battle of the Pyramids)ದಲ್ಲಿ ಸೋಲಿಸಿ ಬಿಟ್ಟನು. ಹಿಂದೆಯೇ ಅಟ್ಟಿಸಿಕೊಂಡುಬಂದ ನೆಲ್ಸನ್ನಿಗೆ ನೈಲ್

**ಈಜಿಪ್ಟಿನಲ್ಲಿ**

ನದೀ ಮುಖದ ಬಳಿ **ಅಬೂಕಿರ್** ಕೊಲ್ಲಿಯಲ್ಲಿದ್ದ ಫ್ರೆಂಚ್ ಹಡಗುಗಳು ಸಿಕ್ಕಿದವು. ತಕ್ಷಣವೇ ಯುದ್ಧನಡೆಸಿ ನೆಲ್ಸನ್ ಆ ಹಡಗುಗಳನ್ನು ಧ್ವಂಸಮಾಡಿಬಿಟ್ಟನು. ಇದೇ **ನೈಲನದೀಕದನ**ವೆಂಬುದು (Battle of the Nile, 1798). ಅದರ ಪರಿಣಾಮವಾಗಿ ಫ್ರೆಂಚರು ಈಜಿಪ್ಟಿನಲ್ಲಿ ಸಿಕ್ಕಿ ಕೊಂಡರು. ಹಿಂತಿರುಗಿ ಹೊರಡಲು ಅವಕಾಶವೇ ಇಲ್ಲ. ಆದರೆ ನಪೋಲಿ ಯನ್ನನು ಈಜಿಪ್ಟನ್ನು ವಶಪಡಿಸಿಕೊಂಡ ತರುವಾಯ ಸಿರಿಯದಕಡೆ ಹೊರಟನು. ಇಂಗ್ಲಿಷರು ಅಲ್ಲಿಯ ಮುಸಲ್ಮಾನಪ್ರಭುಗಳೊಡನೆ ಸೇರಿ **ಆಕರ್** (Acre) ಎಂಬ ಪಟ್ಟಣವನ್ನು ಉಳಿಸಿಕೊಳ್ಳಲು ತೊಡಗಿದರು. ತುರ್ಕಿ ಸುಲ್ತಾನನ ಸ್ನೇಹವನ್ನು ಸಂಪಾದಿಸಿ ಇಂಗ್ಲಿಷರು ನಪೋಲಿಯನ್ನನ್ನು ವಿರೋಧಿಸಿದರು.

ನೈಲ್‌ನದಿ ಕದನದ ಸುದ್ದಿ ಹರಡಿದಮೇಲೆ ಇತರ ಐರೋಪ್ಯಪ್ರಭುಗಳಿಗೂ ಧೈರ್ಯಬರುವಹಾಗಾಯಿತು. ಭೂಮಧ್ಯಸಮುದ್ರವೆಲ್ಲ ಇಂಗ್ಲಿಷರ ಕಯ್ಯಲ್ಲಿ. ನಪೋಲಿಯನ್ ಸೈನ್ಯದೊಡನೆ ದೂರದ ಸಿರಿಯದಲ್ಲಿ ಸಿಕ್ಕಿಕೊಂಡಿದ್ದಹಾಗಿತ್ತು. ಫ್ರಾನ್ಸಿನಲ್ಲಿ ಆಡಳಿತವೂ ಕೆಟ್ಟಿತ್ತು. ಸಮಯ ಅನುಕೂಲವಾಗಿತ್ತು. ಇಟಲಿಯಲ್ಲಿ ಕಳೆದುಕೊಂಡಿದ್ದ ಪ್ರದೇಶಗಳನ್ನು ಗೆದ್ದುಕೊಳ್ಳಬಹುದೆಂದು ಆಸ್ಟ್ರಿಯದವರು ಯುದ್ಧಕ್ಕೆ ಸಿದ್ಧರಾದರು. ರಷ್ಯದ ಚಕ್ರವರ್ತಿಯೂ ಫ್ರೆಂಚರ ಶತ್ರು ವೆನಿಸಿದನು. ಹೀಗಾಗಿ 1799ರಲ್ಲಿ ಆಸ್ಟ್ರಿಯ, ರಷ್ಯ, ಹಾಲಂಡ್ ದೇಶಗಳು ಇಂಗ್ಲಂಡಿನೊಡನೆ ಸೇರಿ ಯುದ್ಧಕ್ಕೆ ಸನ್ನಾಹ ಗೊಂಡವು. ಇದು **ಎರಡನೆ ಮಿತ್ರವ್ಯೂಹ**(Second Coalition).

**2ನೆ ವ್ಯೂಹ**

ಇಂಗ್ಲಂಡಿನವರು ಹಾಲಂಡಿಗೆ ಸೈನ್ಯ ಕಳುಹಿಸಿದರು. ರಷ್ಯಾ ಆಸ್ಟ್ರಿಯಗಳ ಸೈನ್ಯಗಳು ಫ್ರಾನ್ಸಿನ ಮೂಡಲಲ್ಲಿ ಜೊತೆಗೂಡಿ ಯುದ್ಧಕ್ಕೆ ತೊಡಗಿದವು. ಆದರೆ ಫ್ರೆಂಚರಿಗೇ ಜಯವಾಯಿತು. ಅತ್ತ ಆಕರ್ ಮುತ್ತಿಗೆಯನ್ನು ತನ್ನಿಷ್ಟದಂತೆ ನಡೆಸ ಲಾರದೆ ನಪೋಲಿಯನ್ ಈಜಿಪ್ಟಿಗೆ ಹಿಂತಿರುಗಿ ಅಲ್ಲಿಂದ ಯಾರಿಗೂ ಪತ್ತೆ ಕೊಡದಂತೆ ಯಾನಮಾಡಿ ಫ್ರಾನ್ಸಿಗೆ ಬಂದುಬಿಟ್ಟನು. ಬಂದವನು ಹೊಸ ಆಡಳಿತವನ್ನು ರಚಿಸಿ **ಪ್ರಧಾನ ಕಾನ್ಸಲ್** (First Consul) ಎಂಬ ಬಿರುದಿನಿಂದ ಸರ್ವಾಧಿಕಾರಿಯಾದನು. ತಕ್ಷಣವೇ ಆಸ್ಟ್ರಿಯದ ಸೈನ್ಯಗಳನ್ನು ಸೋಲಿಸುವ ಸನ್ನಾಹವನ್ನು ಕೈಗೊಂಡನು. **ಹೊಹೆನ್ಲಿಂಡೆನ್** (Hohenlinden) ಎಂಬಲ್ಲಿಯೂ **ಮರೆಂಗೊ** (Marengo) ಎಂಬಲ್ಲಿಯೂ ನಡೆದ ಕದನಗಳಲ್ಲಿ ಆಸ್ಟ್ರಿಯ ದವರು ಸೋತು ಮಣ್ಣು ಮುಕ್ಕಿದರು. ಈ ಸೋಲು ಗಳಿಂದ 2ನೆ ಮಿತ್ರವ್ಯೂಹಕ್ಕೆ ಭಂಗಬಂತು. ಆ ಸಮಯಕ್ಕೆ ಸರಿಯಾಗಿ ರಷ್ಯ, ಡೆನ್ಮಾರ್ಕ್ ಮತ್ತು ಸ್ವೀಡನ್ ದೇಶಗಳವರಿಗೆ ಇಂಗ್ಲಿಷರ ಚರ್ಯೆ ಯಿಂದ ಅಸಮಾಧಾನವಾಗಿತ್ತು. ಸಮುದ್ರದ ಮೇಲೆ ಸಂಚರಿಸುತ್ತಿದ್ದ ಯಾವ ಹಡಗನ್ನಾದರೂ ನಿಲ್ಲಿಸಿ ಶತ್ರುದೇಶಕ್ಕೆ ಸಾಗುತ್ತಿದ್ದ ಸಾಮಾ ನನ್ನು ಕಿತ್ತುಕೊಳ್ಳುತ್ತಿದ್ದ ಇಂಗ್ಲಿಷರ ಹಟದಿಂದ ಆ ದೇಶಗಳ ವ್ಯಾಪಾರಕ್ಕೆ ಅಡ್ಡಿಯಾಗುತ್ತಿತ್ತು. ಅತಿ ಚತುರನಾಗಿದ್ದ ನಪೋಲಿಯನ್ ಆಸ್ಟ್ರಿಯದೊಡನೆ ಸಂಧಿ ನಡೆಸಿದ ಬಳಿಕ ಈ ಪರಿಸ್ಥಿತಿಯಲ್ಲಿ ತನ್ನ ಸಮಯವನ್ನು ಕಂಡು ಆ ಅಸಮಾಧಾನವನ್ನು ಹೆಚ್ಚಿಸಿದನು. 1800ರ ವೇಳೆಗೆ ರಷ್ಯ, ಡೆನ್ಮಾರ್ಕ್, ಸ್ವೀಡನ್ ದೇಶಗಳು ಬೇರೆಯಾಗಿ (Armed Neutrality) ವ್ಯೂಹ ಕಟ್ಟಿದವು.

**ಮಿತ್ರಮಂಡಲಿಯ ಸೋಲು**

**ಇಂಗ್ಲಂಡಿಗೆ ವಿರೋಧ**

ಮತ್ತೊಮ್ಮೆ ಇಂಗ್ಲಿಷರು ಒಂಟಿಯಾಗಬೇಕಾಯಿತು. ಒಂಟಿಯಾಗಿಯೇ ಯುದ್ಧ ವನ್ನು ಸಾಧಿಸಿದರು. 1801ರಲ್ಲಿ ಈಜಿಪ್ಟಿನಕಡೆ **ಅಲೆಕ್ಸಾಂಡ್ರಿಯ** ( Alexandria)

ಬಳಿ ಇಂಗ್ಲಿಷರು ಅಲ್ಲಿ ಉಳಿದಿದ್ದ ಫ್ರೆಂಚರನ್ನು ಜಲಯುದ್ಧದಲ್ಲಿ ಸೋಲಿಸಿ ಜಯಶಾಲಿಗಳಾದರು. ಅದೇ ವೇಳೆಯಲ್ಲಿ ಇಂಗ್ಲಿಷ್ ನೌಕಾಪತಿ ನೆಲ್ಸನ್ ಸಾಹಸ ದಿಂದ ಬಾಲ್ಟಿಕ್ ಸಮುದ್ರದಲ್ಲಿ ನುಗ್ಗಿದನು. **ಕೋಪೆನ್‌ಹಾಗೆನ್** (Copenhagen) ಬಳಿ ಇಂಗ್ಲಿಷರಿಗೂ ಡೆನ್ಮಾರ್ಕಿನವರಿಗೂ ಜಲಯುದ್ಧವಾಯಿತು. ನೆಲ್ಸನ್ ಗೆದ್ದು ಡೇನರ ನೌಕೆಗಳನ್ನು ಮುಳುಗಿಸಿ ಬಾಲ್ಟಿಕ್ ಸಮುದ್ರದಲ್ಲಿ ಇಂಗ್ಲಿಷರ ಬಲಕ್ಕೆದುರಿಲ್ಲ ದಂತೆ ನೆರವೇರಿಸಿದನು.

ಸಮುದ್ರದ ಮೇಲೆ ಎಲ್ಲೆಲ್ಲಿಯೂ ಜಯಶೀಲರಾಗಿ ವೆಸ್ಟಿಂಡೀಸ್, ಆಫ್ರಿಕ, ಹಿಂದುಸ್ತಾನಗಳಲ್ಲಿ ಶತ್ರುಕ್ಷೇತ್ರಗಳನ್ನು ಇಂಗ್ಲಿಷರು ಆಕ್ರಮಿಸಿದ್ದರು. ಆಗ ಇಂಗ್ಲಂಡಿನ ಪ್ರಧಾನನಾಗಿದ್ದಾತನು ಶಾಂತಿಸಂಧಾನಕ್ಕೆ ಮನಸ್ಸು ಕೊಟ್ಟನು. 1799 ರಲ್ಲಿ ಶ್ರೀರಂಗಪಟ್ಟಣ ಇಂಗ್ಲಿಷರಿಗೆ ವಶವಾಗಿತ್ತು. 1800ರಲ್ಲಿ ಮಾಲ್ಟದ್ವೀಪವು ಹಸ್ತಗತವಾಗಿತ್ತು. ಫ್ರಾನ್ಸಿನಲ್ಲಿ ಸರ್ವಾಧಿಕಾರಿ ನಪೋಲಿಯನ್ನನಿಗೂ ಶಾಂತಿ ಅವಶ್ಯವಾಗಿತ್ತು. 1802ರಲ್ಲಿ **ಆಮಿಯಾನ್ ಒಪ್ಪಂದ** (Peace of Amiens) ನಡೆಯಿತು.

ಒಪ್ಪಂದ

ಸಿಂಹಳ ಮತ್ತು ಟ್ರಿನಿಡಾಡ್ (Trinidad) ದ್ವೀಪಗಳನ್ನು ಮಾತ್ರ ಇಟ್ಟುಕೊಂಡು ಇಂಗ್ಲಿಷರು ಉಳಿದೆಲ್ಲ ಕ್ಷೇತ್ರಗಳನ್ನೂ ಹಿಂದಿನಂತೆ ಇತರ ದೇಶಗಳಿಗೆ ಬಿಟ್ಟುಕೊಡ ಲೊಪ್ಪಿದರು. ಈಜಿಪ್ಟನ್ನು ತುರ್ಕಿಯ ಸುಲ್ತಾನನಿಗೊಪ್ಪಿಸಲಾಯಿತು. ಫ್ರಾನ್ಸಿನ ಹೊಸ ರಾಷ್ಟ್ರಬಂಧವನ್ನು ಇಂಗ್ಲಿಷರು ಗೌರವಿಸಲೊಡಂಬಟ್ಟರು. ಮಾಲ್ಟ ದ್ವೀಪವು ಫ್ರೆಂಚರಿಗಾಗಲಿ ಇಂಗ್ಲಿಷರಿಗಾಗಲಿ ಬೇಡವೆಂದೂ ಹಿಂದೆ ಅಲ್ಲಿ ನೆಲಸಿದ್ದ ಸೆಂಟ್ ಜಾನ್ ಗುಂಪಿನವರಿಗೆ (Knights of St. John) ಬಿಟ್ಟುಕೊಡತಕ್ಕುದೆಂದೂ ಗೊತ್ತಾಯಿತು.

ಈ ಕರಾರು ನಡೆದಾಗ **ಆಡಿಂಗ್ಟನ್** (Addington) ಎಂಬಾತನು ಮುಖ್ಯ ಮಂತ್ರಿಯಾಗಿದ್ದನು. ಪ್ರಭಾವಶಾಲಿಯಾದ ಮಂತ್ರಿಯಾಗಿ ಎರಡು ಮಿತ್ರವ್ಯೂಹ ಗಳನ್ನೂ ಕಟ್ಟಿ ಏಕಪ್ರಕಾರವಾಗಿ ಯುದ್ಧನಡೆಸಿ ವಿಪತ್ಕಾಲದಲ್ಲಿ ಇಂಗ್ಲಂಡನ್ನು ಕಾಯ್ದು ಕಿರೇಪಿಟ್ಟನು ಆ ಸಮಯದಲ್ಲಿ ಅಧಿಕಾರಚ್ಯುತನಾಗಿದ್ದನು. ಸ್ಥಿರವಾದ ಶಾಂತಿ ಸಾಧ್ಯವೆಂದು ಆತನಿಗೆ ತೋರಲಿಲ್ಲ. ವಾಸ್ತವವಾಗಿ ಶಾಂತಿಸ್ಥಿತಿಯು ಅತ್ಯಲ್ಪಕಾಲ ನಡೆಯಿತು. ಒಂದೂವರೆ ವರ್ಷದೊಳಗಾಗಿ ಪುನಃ ನಪೋಲಿಯನ್ನೊ ಡನೆ ಹೋರಾಟ ಕೆರಳಿತು.

1793ರಿಂದ 1802ರ ವರೆಗೆ ನಡೆದ ಯುದ್ಧಭಾಗಕ್ಕೆ **ಪಲ್ಲಟಯುದ್ಧ** (Revolutionary war) ಎಂದು ಹೆಸರಿಡುವುದುಂಟು. ಪುನಃ ರೇಗಿದ್ದಬಳಿಕ 1815 ರವರೆಗೆ ಯುದ್ಧವು ಪ್ರಚಂಡವಾಗಿ ಸಾಗಿತು. ಆ ಭಾಗಕ್ಕೆ **ನಪೋಲಿಯನ್ ಯುದ್ಧ** (Napoleonic War) ಎನ್ನುವುದು ರೂಢಿ.

# 4. ನಪೋಲಿಯನ್ ಬೋನಪಾರ್ಟ್

ನಪೋಲಿಯನ್ನನಷ್ಟು ಪ್ರಸಿದ್ಧಿಯನ್ನು ಪಡೆದವರು ಅತಿ ವಿರಳ. ಐರೋಪ್ಯರಲ್ಲಿ **ಸಿಕಂದರ್, ಹ್ಯಾನಿಬಾಲ್, ಸೀಸರ್** ಎಂಬ ಪ್ರಚಂಡ ದಿಗ್ವಿಜಯಿಗಳ ಗುಂಪಿಗೆ ಸೇರಿದವನಾತನು. ಕಾರ್ಸಿಕ ದ್ವೀಪದಲ್ಲಿ ಹುಟ್ಟಿ ಫ್ರಾನ್ಸಿನಲ್ಲಿ ಶಿಕ್ಷಿತನಾಗಿ ತೋಫ್ ಮದ್ದು ಶಾಸ್ತ್ರದಲ್ಲಿ ನೈಪುಣ್ಯ ಪಡೆದ ನಪೋಲಿಯನ್ 1795ರಲ್ಲಿ ಪ್ರಖ್ಯಾತನಾದನು. ಸಿಕಂದರ್ ಸೀಸರರಂತೆ ತಾನೂ ದಿಗ್ವಿಜಯಗಳನ್ನು ನಡೆಸಿ ವಿಸ್ತಾರ ಸಾಮ್ರಾಜ್ಯ ಕಟ್ಟಬೇಕೆಂದು ಆಸೆಯನ್ನು ಅಂತರಂಗದಲ್ಲಿ ಬೆಳೆಸಿದ್ದನು. ಸರ್ವಸಮತ್ವ ಭ್ರಾತೃತ್ವ ಸ್ವಾತಂತ್ರ್ಯಗಳನ್ನು ಸಾಧಿಸಬೇಕೆಂಬ ಆಸೆಯನ್ನು ಸಾಧಿಸುವುದರಲ್ಲಿ ಫ್ರೆಂಚ್ ಜನರು ರಾಷ್ಟ್ರಪಲ್ಲಟಕ್ಕೆ ತೊಡಗಿ ಘೋರ ಕೃತ್ಯಗಳನ್ನು ನಡೆಸಿದರಷ್ಟೆ. ಆಗ ಫ್ರೆಂಚರಿಗೂ ಇತರ ಐರೋಪ್ಯರಿಗೂ ಅವಿರತವಾಗಿ ಯುದ್ಧ ಕೆರಳಿದಾಗ ನಪೋಲಿಯನ್ನನಿಗೆ ಸಮಯ ದೊರಕಿತು. ಆತನ ಅಪ್ರತಿಮ ಸಾಹಸಚಾತುರ್ಯಗಳು ಆ ಮೊದಲು **ಟುಲಾನ್ ಪ್ಯಾರಿಸ್ಸು**ಗಳಲ್ಲಿಯೂ ಆತರುವಾಯ **ಇಟಲಿ ಈಜಿಪ್ಟ್** ದೇಶಗಳಲ್ಲಿಯೂ ಪ್ರಕಾಶಕ್ಕೆ ಬಂದು ಐರೋಪ್ಯ ಜಗತ್ತಿಗೇ ವಿಸ್ಮಯವನ್ನುಂಟುಮಾಡಿದವು. ಒಂದನೆ ಎರಡನೆ ವ್ಯೂಹಗಳು ಧ್ವಂಸವಾಗಿ ಹೋದವು. ಫ್ರೆಂಚ್ ಜನರಿಗಂತೂ ನಪೋಲಿಯನ್ ದೇವಾಂಶ ಸಂಭೂತನಾಗಿ ಕಾಣಿಸಿದನು. ಶಿಬಿರದಲ್ಲಿ ಆತನೊಬ್ಬನಿದ್ದರೆ ಹತ್ತು ಸಾವಿರ ಜನರಿದ್ದಂತೆ ಬಲಪೌರುಷಗಳೇರುತ್ತಿದ್ದವು. ಆತನೆದುರಿನಲ್ಲಿ ಯುದ್ಧ ಮಾಡಿ ಗೆಲ್ಲತಕ್ಕವರೇ ಇಲ್ಲವೆನ್ನಿಸಿತ್ತು.

**ವಿಖ್ಯಾತಿ ಪ್ರಾಪ್ತಿ**

ಆಮಿಯಾನ್ ಕರಾರೆಷ್ಟಾದರೂ ಕುಂಟು ಕರಾರೇ. ನಪೋಲಿಯನ್ನನ ಅಧಿಕಾರವನ್ನು ಒಪ್ಪಿಕೊಳ್ಳುವ ಮನಸ್ಸು ಬ್ರಿಟಿಷರಿಗಿರಲಿಲ್ಲ. ಎಲ್ಲರೂ ತನ್ನೆದುರಿಗೆ ಸೋತಾಗ್ಯೂ ಬ್ರಿಟಿಷರು ಸೋಲದೆ ಒಂಟಿಯಾಗಿಯಾದರೂ ನಿಂತು ಹೋರಾಡಿದರೆಂಬ ಭಾವನೆ ನಪೋಲಿಯನ್ನನ ಮನಸ್ಸಿನಲ್ಲಿತ್ತು. ಕೈಗೆ ಸಿಕ್ಕಿದ್ದ ಮಾಲ್ಟ ದ್ವೀಪವನ್ನು ಬ್ರಿಟಿಷರು ಬಿಟ್ಟುಕೊಡದಾದರು. ಇಂಗ್ಲಂಡಿನಲ್ಲಿ ಬೂರ್ಬನ್ ಪಕ್ಷಪಾತಿಗಳಿಗೆ ಆಶ್ರಯಕೊಟ್ಟಿತ್ತು. ಇವೆರಡರಿಂದ ನಪೋಲಿಯನ್ನನಿಗೆ ಅಸಮಾಧಾನವಾಯಿತು. ಕರಾರಾದ ಕೂಡಲೆ ಫ್ರಾನ್ಸ್ ದೇಶದ ಆಡಳಿತದ ಕ್ರಮವನ್ನೂ ನ್ಯಾಯವನ್ನೂ ಸ್ಥಾಪಿಸಿ ರಾಷ್ಟ್ರವನ್ನುದ್ಧರಿಸಿದ ವೇಳೆಯಲ್ಲಿ ಬ್ರಿಟಿಷರೇ ಫ್ರಾನ್ಸಿನ ವ್ಯಾಪಾರೈಶ್ವರ್ಯವೃದ್ಧಿಗೆ ಪರಮವೈರಿಗಳೆಂದು ಸ್ಪಷ್ಟವಾಯಿತು. ನಷ್ಟವಾಗಿದ್ದ ದೂರಕ್ಷೇತ್ರಗಳನ್ನು ಪುನಃ ಪಡೆದುಕೊಳ್ಳುವುದಕ್ಕೂ ದೇಶಾಂತರವ್ಯಾಪಾರದಲ್ಲಿ ಪ್ರವೇಶಿಸಿ ಸಮುದ್ರದಮೇಲೆ ವ್ಯವಹರಿಸುವುದಕ್ಕೂ ಬ್ರಿಟಿಷರ ಪ್ರಾಬಲ್ಯ ದೊಡ್ಡ ಅಡ್ಡಿಯಾಗಿತ್ತು. ಆದ್ದರಿಂದ ಉಭಯತಃ ಜಗಳವು ಬೇಗನೆ

**ಜಗಳದ ಕಾರಣಗಳು**

ಹುಟ್ಟಿತು. ಆಮಿಯಾನ್ ಕರಾರಾದ ಹದಿನಾಲ್ಕು ತಿಂಗಳೊಳಗಾಗಿ 1803ರಲ್ಲಿಯೇ ಪುನಃ ಪ್ರಾರಂಭವಾಗಿ ವಿರಾಮವಿಲ್ಲದೆ 1814 ರವರೆಗೆ ನಡೆಯಿತು.

**ಕಾನ್ಸಲ್** (First Consul) ಎಂಬ ಹೆಸರಿನಿಂದ ಸರ್ವಾಧಿಕಾರವನ್ನು ಹೊತ್ತಿದ್ದ ನಪೋಲಿಯನ್ ದೇಶದ ಆಡಳಿತದ ಸೂತ್ರಗಳನ್ನು ಹಿಡಿಯುವುದರಲ್ಲಿ ಅಸಾಧಾರಣ ಪ್ರಜ್ಞೆಯುಳ್ಳವನಾಗಿದ್ದನು. ಎರಡು ಮೂರು ವರ್ಷಗಳಲ್ಲಿ ಫ್ರಾನ್ಸ್‌ದೇಶವನ್ನು ಸುಸ್ಥಿತಿಗೆ ತಂದು ತನ್ನ ಅಧಿಕಾರವನ್ನು ಭದ್ರಗೊಳಿಸಿದನು. 1804 ರಲ್ಲಿ ಬ್ರಿಟನ್ ಬಿಟ್ಟರೆ ಆತನಿಗೆ ಹಗೆಯಿರಲಿಲ್ಲ. ನೆರೆಹೊರೆಯ ಐರೋಪ್ಯದೇಶಗಳು ಸೋತು ಶರಣೆಂದಿದ್ದವು. ಆಗ 1804ರಲ್ಲಿ **ನಪೋಲಿಯನ್ ಚಕ್ರವರ್ತಿ** (Emperor Napoleon) ಯೆನಿಸಿದನು. ಆಸ್ಥಾನವನ್ನು ಕಟ್ಟಿ ಹೊಸ ಶ್ರೀಮಂತರನ್ನು ಗೊತ್ತು ಮಾಡಿದನು. ಫ್ರೆಂಚರ ವಿಶ್ವಾಸಭಕ್ತಿಗಳಂತೂ ಆತನಲ್ಲಿ ಅಮಿತವಾಗಿದ್ದುವು. ಅಂತಹ ಸಮಯದಲ್ಲಿ ಬ್ರಿಟನ್ನನ್ನು ಸೋಲಿಸಿಬಿಡಬೇಕೆಂಬ ಸಂಕಲ್ಪದಿಂದ ನಪೋಲಿಯನ್ ತನ್ನ ಸೈನ್ಯಗಳನ್ನು **ಬೊಲೋನ್** (Boulogne) ಬಳಿ ಕೂಡಿಸಿ ಉಪಾಯದಿಂದ ಬ್ರಿಟಿಷರ ನೌಕಾಬಲವನ್ನು ದೂರಕ್ಕೆ ಕಳುಹಿಸಿ ಇಂಗ್ಲಿಷ್ ಕಡಲನ್ನು ದಾಟಿ ಇಂಗ್ಲಂಡನ್ನು ಮುತ್ತುವ ಯೋಚನೆ ಮಾಡಿದನು. ಅದಕ್ಕನುಸಾರವಾಗಿ ತಾನೇ ಬೊಲೋನ್ ಬಳಿ ಶಿಬಿರಮಾಡಿ ಸಮಯನಿರೀಕ್ಷಣೆಯಲ್ಲಿದ್ದನು.

**ಸಮ್ರಾಟ್ ಪದವಿ**

**ಇಂಗ್ಲಂಡನ್ನು ಮುತ್ತುವ ಪ್ರಯತ್ನ**

ನಿಜವಾಗಿ ಆಗ ಇಂಗ್ಲಂಡಿಗೆ ಪ್ರಾಣಾಪಾಯವೊದಗಿದಂತೆ ತೋರಿತು. ಅತ್ತ ಐರ್ಲಂಡಿನಲ್ಲಿ ಐರಿಷರ ಅಸಮಾಧಾನ, ಇತ್ತ ಹಿಂದೂಸ್ತಾನದಲ್ಲಿ ಪ್ರಬಲ ಮಹಾರಾಷ್ಟ್ರ ನಾಯಕರೊಡನೆ ಯುದ್ಧಗಳು. ಅದೇ ವೇಳೆಗೆ ಅತಿಸಮರ್ಥನಾದ ನಪೋಲಿಯನ್ ತಮ್ಮ ದ್ವೀಪಭೂಮಿಯನ್ನೇ ಮುತ್ತುವ ಭಯ. ಆಗ **ಕಿರೇಪಿಟ್ಟನೇ ಮಂತ್ರಿ** ಯಾಗಬೇಕೆಂದು ಎಲ್ಲರೂ ಕೂಗಿಟ್ಟರು. ಆಡಿಂಗ್ಟನ್ ಮಂತ್ರಿ ಅಧಿಕಾರವನ್ನು ಪಿಟ್ಟನಿಗೆ ಬಿಟ್ಟುಕೊಡಬೇಕಾಯಿತು. ಪುನಃ ಮಂತ್ರಿಪದವಿಯನ್ನು ವಹಿಸಿದಕೂಡಲೆ ಪಿಟ್ಟನು ಸರ್ವಪ್ರಯತ್ನಗಳನ್ನೂ ಸರ್ವೋಪಾಯಗಳನ್ನೂ ಕೈಕೊಂಡನು. ಸಮುದ್ರದ ಮೇಲೆ ಫ್ರೆಂಚ್ ಹಡಗುಗಳಾಗಲಿ ಅವರ ಜೊತೆಸೇರಿದ್ದ ಸ್ಪೈನ್ ಹಡಗುಗಳಾಗಲಿ ಪ್ರಾಬಲ್ಯಪಡೆಯದಂತೆ ಬ್ರಿಟಿಷ್ ನೌಕಾಪತಿಗಳಿಗೆ ಪ್ರೋತ್ಸಾಹ ಸಹಾಯಗಳನ್ನು ಯಥೇಚ್ಛವಾಗಿ ಕೊಟ್ಟು ಎಚ್ಚರಿಸಿದನು. ನಪೋಲಿಯನ್ನನ ವೈರಿಗಳನ್ನು ಹುಡುಕಿ ಧೈರ್ಯಕೊಟ್ಟು ಅವರನ್ನೊಂದುಗೂಡಿಸುವ ಸಂಧಾನ ನಡೆಸಿದನು. ಎಷ್ಟು ಪ್ರಯತ್ನವನ್ನು ನಡೆಸಿದಾಗ್ಯೂ ಮುಂದೇನಾಗುವುದೋ ಎಂಬ ಭಯವಿದ್ದೇ ಇತ್ತು. ಬ್ರಿಟಿಷ್ ಜನರೆಲ್ಲರೂ ಈ ರೀತಿಯಾಗಿ ತಳಮಳಿಸುತ್ತಿದ್ದಾಗ ಅಟ್ಲಾಂಟಿಕ್

**ಆಪನ್ನಿವಾರಣೆ**

ಸಾಗರದಲ್ಲಿ **ಬ್ರಿಟಿಷ್ ನೌಕಾಪತಿ ನೆಲ್ಸನ್** ಫ್ರೆಂಚರ ಹಡಗುಗಳನ್ನು ಅಟ್ಟಿಸಿಕೊಂಡು ಓಡಾಡಿದನು. ಫ್ರೆಂಚ್ ಹಡಗುಗಳೂ ಸ್ಪೈನ್ ಹಡಗುಗಳೂ ಕಣ್ಣಿಗೆ ಕಾಣವೆ ಎಲ್ಲೆಲ್ಲಿಯೋ ಓಡಾಡುತ್ತಿದ್ದವು. ಕಣ್ಣುಮುಚ್ಚಾಟದಂತೆ ಓಡಾಟ ನಡೆಯಿತು. ಕಡೆಗೆ **ಟ್ರಫಾಲ್ಗರ್** ( Trafalgar ) ಭೂಶಿರದ ಬಳಿ ನೆಲ್ಸನ್ನನಿಗೆ ಶತ್ರುನೌಕೆಗಳು ಕಾಣಿಸಿದವು. ದೊಡ್ಡ ಜಲಯುದ್ಧ ನಡೆಯಿತು. ಇಂಗ್ಲಿಷರಿಗೆ ಜಯವಾಯಿತು. ಶತ್ರುಬಲವು ಹಾಳಾಯಿತು. ಆದರೆ ಜಯಸಿದ್ಧಿಯಾದಕ್ಷಣದಲ್ಲಿ ನೆಲ್ಸನ್ನನ ಪ್ರಾಣಹೋಯಿತು. ಜಯದ ಸುದ್ದಿ ಇಂಗ್ಲಂಡಿನಲ್ಲಿ ತಿಳಿದಕೂಡಲೆ ಜನರು ಮೈಮರೆತು ಕುಣಿದಾಡಿದರು. ಆದರೆ ಸಂತೋಷದಲ್ಲಿಯೇ ವಿಷವಿಟ್ಟಂತೆ ನೆಲ್ಸನ್ನನ ಸಾವಿನ ಸಮಾಚಾರವೂ ಬಂದಿತು.

ನಪೋಲಿಯನ್ ಪ್ರಯಾಸಪಟ್ಟು ಕಟ್ಟಿಕೊಂಡಿದ್ದ ನೌಕಾಬಲವು ಟ್ರಫಾಲ್ಗರ್ ಕದನದಿಂದ ಹಾಳಾಯಿತು. ಇಂಗ್ಲಂಡನ್ನು ಮುತ್ತುವ ಯೋಜನೆ ದೂರವಾಯಿತು. ಅಟ್ಲಾಂಟಿಕ್ ಸಾಗರದಲ್ಲಿ ಹಡಗುಗಳನ್ನು ನೆಲ್ಸನ್ ಓಡಾಡಿಸುತ್ತಿದ್ದಾಗಲೇ ನಪೋಲಿಯನ್ನನಿಗೆ ತನ್ನ ಉದ್ಯಮದಲ್ಲಿ ಸಂದೇಹ ತೋರಿತ್ತು. ಆದೇವೇಳೆಗೆ ಪಿಟ್ಟನ ಸಂಧಾನವೂ ಫಲಿಸುತ್ತಿತ್ತು. ಬೊಲೋನ್ ಬಳಿ ಸಮಯನಿರೀಕ್ಷಣೆಯಲ್ಲಿದ್ದ ನಪೋಲಿಯನ್ನಿಗೆ ಆಸ್ಟ್ರಿಯ, ರಷ್ಯ ಮತ್ತು ಸ್ವೀಡ್ ದೇಶಗಳ ಪ್ರಭುಗಳು ಗುಂಪುಕೂಡಿ ಯುದ್ಧಕ್ಕೆ ಸಿದ್ಧರಾಗುತ್ತಿದ್ದ ವೃತ್ತಾಂತ ತಿಳಿಯಿತು. ಇದು **ಮೂರನೆ ಮಿತ್ರವ್ಯೂಹ** (Third Coalition).

**ಪಿಟ್ಟನ ಸಂಧಾನಫಲ**

ಪಿಟ್ಟನ ಚಾತುರ್ಯದ ಫಲ. ಇಂಗ್ಲಂಡನ್ನು ಮುತ್ತಲಾಗುವುದಿಲ್ಲವೆಂದು ತಿಳಿದಕೂಡಲೆ ನಪೋಲಿಯನ್ ತನ್ನ ಶಿಬಿರವನ್ನೆತ್ತಿ ಆಸ್ಟ್ರಿಯದವರ ಮೇಲೆ ಹೊರಟನು. ಅದ್ಭುತವಾದ ವೇಗದಿಂದ ಸೈನ್ಯವನ್ನು ಸಾಗಿಸಿಕೊಂಡು ಆಸ್ಟ್ರಿಯದ ಮೂಡಲಲ್ಲಿ ಕಾಣಿಸಿಕೊಂಡು ಆಸ್ಟ್ರಿಯ ರಷ್ಯಗಳ ಜತೆಗೂಡಿದ್ದ ದೊಡ್ಡಸೈನ್ಯವನ್ನು **ಔಸ್ಟರ್‌ಲಿಟ್ಸ್** (Austerlitz) ಎಂಬಲ್ಲಿ ತಾಕಿ ಸದೆಬಡಿದನು. ಆಸ್ಟ್ರಿಯದ ಪ್ರಭು ದಮ್ಮಯ್ಯಯೆಂದು ಮತ್ತೊಮ್ಮೆ ಶರಣಾಗತನಾಗಿ ಶಾಂತಿಯನ್ನು ಬೇಡಿದನು. ಮೂರನೆ ಮಿತ್ರವ್ಯೂಹ ಧ್ವಂಸವಾಯಿತು. ಅಲ್ಲಿಂದ ಮುಂದೆ ಪ್ರಷ್ಯವನ್ನು ವಶಪಡಿಸಿಕೊಂಡು ರಷ್ಯದ ಸೇನೆಗಳನ್ನು ಸೋಲಿಸಲು ನಪೋಲಿಯನ್ ಹೊರಟನು.

ಔಸ್ಟರ್ಲಿಟ್ಸ್ ಕದನದ ಸುದ್ದಿ ಕೇಳಿದಾಗ ಇತರರಿಗೆ ನಡುಕ ಹತ್ತಿದಂತಾಯಿತು. ಅಸ್ವಸ್ಥನಾಗಿದ್ದ ಪಿಟ್ಟನಿಗೆ ಆ ಸಮಾಚಾರದಿಂದ ರೋಗ ಬಲವಾಗಿ ಸ್ವಲ್ಪ ಕಾಲದಲ್ಲಿಯೇ ಪ್ರಾಣವೂ ಹೋಯಿತು. "ತನ್ನ ರಕ್ಷಣೆಯನ್ನು ತಾನು ಮಾಡಿಕೊಳ್ಳಬಲ್ಲುದಲ್ಲದೆ ಇಂಗ್ಲಂಡ್ ಅನ್ಯರಾಷ್ಟ್ರಗಳಿಗೆ ಆದರ್ಶವನ್ನು ತೋರಬಲ್ಲುದು" ಎಂದು ಹೇಳುತ್ತ ಇಂಗ್ಲಂಡನ್ನು ಘೋರ ವಿಪತ್ಕಾಲದಲ್ಲಿ ರಕ್ಷಿಸಿದ ಕೀರ್ತಿ ಆತನದು. ಜಲಬಲವನ್ನು

ಚಾಕಚಕ್ಯದಿಂದ ನಡೆಸಿ ಶತ್ರುಗಳಿಗೆ ಸಮುದ್ರಗಳಲ್ಲಿ ಆಸ್ಪದವಿಲ್ಲದಂತೆ ಮಾಡಿ ಟ್ರಫಾಲ್ಗರ್ ಕದನದಲ್ಲಿ ಗೆದ್ದ ನೆಲ್ಸನ್ ಆ ಕೀರ್ತಿಯಲ್ಲಿ ಭಾಗಿ. ಪಿಟ್ ನೆಲ್ಸನ್ ಇಬ್ಬರೂ ಸುಮಾರಾಗಿ ಏಕಕಾಲದಲ್ಲಿಯೇ ಸತ್ತರು. ಇಬ್ಬರೂ ಇಂಗ್ಲಿಷರ ಚಿರ ಕೃತಜ್ಞತೆಗೆ ಪಾತ್ರರು.

ಔಸ್ಟರ್ಲಿಟ್ಸ್ ಕದನದ ತರುವಾಯ ನಪೋಲಿಯನ್ ಅತಿಪ್ರಚಂಡನಾಗಿ ಪ್ರಷ್ಯ ದೇಶವನ್ನು ಸ್ವಾಧೀನಪಡಿಸಿಕೊಂಡು ರಷ್ಯದ ಸೇನೆಗಳನ್ನು ಸೋಲಿಸಿಬಿಟ್ಟನು. ದಿನೇ ದಿನೇ ಆತನ ಪ್ರಾಬಲ್ಯವು ಭಯಂಕರವಾಗಿ ಹೆಚ್ಚಿತು. 1806ರ ವೇಳೆಗೆ ಯೂರೋಪಿನ ಅನೇಕ ಭಾಗಗಳು ಆತನ ವಶದಲ್ಲಿದ್ದವು. ಫ್ರಾನ್ಸ್ ದೇಶಕ್ಕೆ ಸಮ್ರಾಟನೆನಿಸಿ ರ್ಹೈನ್ ನದಿಯಿಂದ ಪಿರನೀಸ್‌ವರೆಗಿದ್ದ ಫ್ರಾನ್ಸನ್ನು ಕೈಲಿ ಹಿಡಿದಾತನು ಇಟಲಿ, ಹಾಲಂಡ್ ಮತ್ತು ಈಗಿನ ಜರ್ಮನಿಗಳಲ್ಲಿ ತನ್ನ ಸಹೋದರರನ್ನು ಸ್ಥಾಪಿಸಿದ್ದನು. ರಷ್ಯದ ಚಕ್ರವರ್ತಿ ಆತನ ತೇಜಸ್ಸಿಗೆ ಮರುಳಾಗಿ 1807ರಲ್ಲಿ ಸ್ನೇಹ ಕಟ್ಟಿದನು. ಯೂರೋಪಿನ ಪಶ್ಚಿಮದಲ್ಲಿ ನಪೋಲಿಯನ್, ಪೂರ್ವದಲ್ಲಿ ರಷ್ಯದ ಅಲೆಕ್ಸಾಂಡರ್ ಚಕ್ರವರ್ತಿಗಳಾದರು. 1807ರಲ್ಲಿ ಇಬ್ಬರೂ **ಟಿಲ್ಸಿಟ್** (Tilsit) ಎಂಬಲ್ಲಿ ಸ್ನೇಹವನ್ನು ವೃದ್ಧಿಮಾಡಿಕೊಂಡು ಪೃಥ್ವಿಯನ್ನು ತಮ್ಮಲ್ಲಿ ಭಾಗ ಮಾಡಿಕೊಂಡಂತೆ **ಒಪ್ಪಂದ** ಮಾಡಿಕೊಂಡರು.

**ನಪೋಲಿಯನ್ನನ ಅತ್ಯುನ್ನತಿ**

ಬ್ರಿಟನ್ನಿನೊಡನೆ ಜಗಳವಿದ್ದೇ ಇತ್ತು. ಮೂರನೆ ಮಿತ್ರವ್ಯೂಹ ಒಡೆದ ತರುವಾಯ ನಪೋಲಿಯನ್ "ವ್ಯಾಪಾರಜೀವಿಗಳಾದ ಇಂಗ್ಲಿಷರ ವ್ಯಾಪಾರವನ್ನು ಬಂಧಿಸಿಯೇ ಅವರನ್ನು ಕೆಡಹಬೇಕು" ಎಂದುಕೊಳ್ಳುತ್ತ 1806ರಲ್ಲಿ **ಬರ್ಲಿನ್** ನಗರದಲ್ಲಿದ್ದಾಗ ಇಂಗ್ಲಿಷರ ವ್ಯಾಪಾರಬಂಧನಕ್ಕಾಗಿ **ಆಜ್ಞೆ**ಗಳನ್ನು (Berlin Decrees) ಸಾರಿದನು. ಯೂರೋಪಿನಲ್ಲಿ ಯಾರೂ ಬ್ರಿಟಿಷರೊಡನೆ ವ್ಯಾಪಾರ ನಡೆಸಕೂಡ ದೆಂದು ಅವುಗಳ ಸಾರಾಂಶ. ಬ್ರಿಟಿಷರೂ ಕೂಡ ಎದೆಗೆಡದೆ ಅದಕ್ಕೆ ಪ್ರತ್ಯುತ್ತರ ವಾಗಿ ತಮ್ಮೊಡನೆ ವ್ಯಾಪಾರವನ್ನೊಲ್ಲದವರನ್ನು ಶತ್ರುಗಳಂತೆ ಕಾಣಲಾಗುವುದೆಂದು ಪ್ರಕಟಿಸಿದರು (Orders in Council). ಕಾಲವೇನೋ ಕಷ್ಟ ವಾಗಿತ್ತು. ಯೂರೋಪಿನಲ್ಲಿ ಪ್ರಬಲರಾಜ್ಯವೊಂದಾದರೂ ಇಂಗ್ಲಂಡಿನ ಸ್ನೇಹವನ್ನು ಕಟ್ಟಿಕೊಂಡಿರಲಿಲ್ಲ. ಸಮುದ್ರದ ಮೇಲೆ ಎದುರಿಲ್ಲದೆ ಹಡಗುಗಳನ್ನು ಓಡಾಡಿಸಬಹುದಾದರೂ ಯೂರೋಪಿನ ಬಂದರುಗಳಲ್ಲಿ ತಮ್ಮ ಹಡಗುಗಳಿಗೆ ಪ್ರವೇಶವೇ ಇಲ್ಲದಿದ್ದರೆ ಹೇಗೆ? ನಪೋಲಿಯನ್ನನೊಡನೆ ಸೇರಿಕೊಂಡ ರಾಜ್ಯಗಳಿಗೆ ಇಂಗ್ಲಿಷರು ಸಮುದ್ರದಮೇಲೆ ಆಸ್ಪದವಿಲ್ಲದಂತೆ ಮಾಡಿದರು. ಅವರ ಹಡಗುಗಳನ್ನು ಹಿಡಿದರು. ದೂರಕ್ಷೇತ್ರ

**ಇಂಗ್ಲಿಷ್ ವ್ಯಾಪಾರಕ್ಕೆ ನಿರೋಧಪ್ರಯತ್ನ**

ಗಳನ್ನು ಕಸುಕೊಂಡರು. ಫ್ರಾನ್ಸಿನೊಡನೆ ವ್ಯಾಪಾರಮಾಡತಕ್ಕವರನ್ನು ಶತ್ರುಗಳೆಂದು ಕಂಡು ಮಧ್ಯಸಮುದ್ರದಲ್ಲಿ ಅಂತಹವರನ್ನು ಅಡ್ಡಗಟ್ಟಿದರು. ಸಮುದ್ರದ ಮೇಲೆ ದರ್ಪತೋರಿ ಅಮೆರಿಕದವರೊಡನೆ ಜಗಳವನ್ನು ಕಟ್ಟಿಕೊಂಡು ಸ್ವಲ್ಪಕಾಲವಾದಮೇಲೆ ಸಮಾಧಾನಮಾಡಿಕೊಂಡರು. ಇಷ್ಟಾದರೂ ಯೂರೋಪಿನಲ್ಲಿ ಸೈನ್ಯಗಳನ್ನಿಳಿಸಿ ಯುದ್ಧ ನಡೆಸುವ ಅವಕಾಶವಿರಲಿಲ್ಲ. ಇತರ ಐರೋಪ್ಯದೇಶಗಳ ಜನರು ಬ್ರಿಟಿಷರೊಡನೆ ಯಾವ ವ್ಯಾಪಾರವನ್ನೂ ಮಾಡದಿದ್ದು ಬಿಟ್ಟಿದ್ದರೆ ಜೀವದುಸಿರು ಹೋಗುವಂತಹ ಸ್ಥಿತಿ ಒದಗಬಹುದಾಗಿತ್ತು. ಆದರೆ ವಾಸ್ತವವಾಗಿ ಇತರ ದೇಶಗಳಿಗೂ ಆ ವ್ಯಾಪಾರ ಬೇಕಾಗಿತ್ತು. ಪೋರ್ಚುಗಲ್, ನಾರ್ವೆ ಮುಂತಾದ ದೇಶಗಳಿಗೆ ಅತ್ಯವಶ್ಯಕವಾಗಿತ್ತು. ಇತರ ದೇಶಗಳಲ್ಲಿಯೂ ಬ್ರಿಟಿಷರು ಮಾರುತ್ತಿದ್ದ ವಸ್ತುಗಳು ಬೇಕಾಗಿದ್ದವು. ಫ್ರಾನ್ಸಿನಲ್ಲಿಯೇ ಕಳ್ಳತನದ ವ್ಯಾಪಾರ ನಡೆಯುತ್ತಿತ್ತು.

1807ರಲ್ಲಿ ನಪೋಲಿಯನ್ನನ ಅಧಿಕಾರಪ್ರಾಬಲ್ಯಗಳು ಅತ್ಯುನ್ನತಸ್ಥಿತಿಯಲ್ಲಿದ್ದುವು. ಆದರೂ ಇಂಗ್ಲಂಡಿನ ವ್ಯಾಪಾರಬಂಧನ ನಡೆಯದಾಯಿತು. ಸಣ್ಣ ದೇಶವಾದ **ಪೋರ್ಚುಗಲ್** ಆತನ ಆಜ್ಞೆಗಳನ್ನೊಪ್ಪಿರಲಿಲ್ಲ. ಆಗ ನಪೋಲಿಯನ್ ಆ ದೇಶವನ್ನು ಮುತ್ತಿ ವಶಪಡಿಸಿಕೊಂಡನು. ಅಲ್ಲಿ ಆಳುತ್ತಿದ್ದ ರಾಜನು ಬ್ರಸಿಲ್ಲಿಗೆ ಪರಾರಿಯಾದನು. ಇಂಗ್ಲಂಡಿಗೆ ಚಿರಕಾಲದ ಮಿತ್ರದೇಶವಾದ ಪೋರ್ಚುಗಲ್ ಪ್ರಬಲಶತ್ರುವಿಗೆ ಸ್ವಾಧೀನವಾಗಿಹೋಯಿತು. ತರುವಾಯ

**ಸ್ಪೈನಿನಲ್ಲಿ**

ನಪೋಲಿಯನ್ ಸ್ಪೈನಿನ ರಾಜಯುವರಾಜರನ್ನು ವ್ಯಾಜಾಂತರದಿಂದ ಬಂಧನದಲ್ಲಿಟ್ಟು ತನ್ನಣ್ಣ **ಜೋಸೆಫ್** (Joseph Buonaparte) ಎಂಬಾತನಿಗೆ ಮಡ್ರಿಡ್ಡಿ(Madrid)ನಲ್ಲಿ **ಸ್ಪೈನಿನ ಪಟ್ಟ**ಗಟ್ಟಿದನು. ಈ ಕೆಲಸದಿಂದ ಸ್ಪೈನ್ ಜನರಿಗೆ ಅಸಮಾಧಾನವಾಯಿತು. ಸಾಮಾನ್ಯಜನರೇ ವಿರೋಧ ತೋರುವ ಸ್ಥಿತಿಯೊದಗಿತು. ಪೋರ್ಚುಗಲ್ ದೇಶವನ್ನು ಫ್ರೆಂಚರ ವಶದಿಂದ ತಪ್ಪಿಸಲು ತವಕಗೊಳ್ಳುತ್ತಿದ್ದ ಬ್ರಿಟಿಷರಿಗೆ ಸ್ಪಾನಿಷರ ಅಸಮಾಧಾನ ಅನುಕೂಲವಾಯಿತು. ಸಮುದ್ರತೀರದಲ್ಲಿ ಹೊಂಚುತ್ತಿದ್ದು ಸೈನ್ಯಗಳನ್ನಿಳುಹಿಸಿ ಆ ಪರ್ಯಾಯದ್ವೀಪದ ಜನರಿಗೆ ಧೈರ್ಯೋತ್ಸಾಹಗಳನ್ನೂ ಸಹಾಯಸಾಮಗ್ರಿಯನ್ನೂ ಕೊಟ್ಟು ಹೋರಾಡುವ ಕ್ರಮವನ್ನು ಇಂಗ್ಲಂಡಿನವರು ಇಟ್ಟುಕೊಂಡರು. ಇದೇ **ಪರ್ಯಾಯದ್ವೀಪದ ಯುದ್ಧ** (Peninsular War) ಎಂಬುದು.

ಇಂಗ್ಲಂಡಿನಿಂದ ಒಂದು ದಂಡನ್ನು ತೆಗೆದುಕೊಂಡು ಹೊರಟ **ಸರ್ ಆರ್ಥರ್ ವೆಲ್ಲೆಸ್ಲಿ** (Sir Arthur Wellesley) 1808ರಲ್ಲಿ ಪೋರ್ಚುಗಲ್ಲಿನಲ್ಲಿ ಕಾಣಿಸಿಕೊಂಡು **ವಿಮಿಯೇರೊ** (Vimiero) ಎಂಬಲ್ಲಿ ಫ್ರೆಂಚರದಳವೊಂದನ್ನು ಸೋಲಿಸಿ ಆ ದೇಶವನ್ನು ಬಿಡಿಸಿಕೊಂಡನು. ಇದೇ ಮೊದಲನೆ ಜಯವಾಯಿತು. ಬ್ರಿಟಿಷರು ಸ್ಪೈನಿನಲ್ಲಿ

ಪ್ರವೇಶಿಸಿದರು. ಆ ಸಮಾಚಾರ ಕೇಳಿ ನಪೋಲಿಯನ್ ತಾನೇ ಬಂದನು. ಆತನೆದುರಿಗೆ ದಂಗೆಗಳೆಲ್ಲ ಅಡಗಿಹೋದವು. ಬ್ರಿಟಿಷ್‌ದಳಪತಿ **ಸರ್ ಜಾನ್‌ಮೂರ್** (Sir John Moore) ಆತನನ್ನು ಎದುರಿಸಲಾರದೆ ತೀರಕ್ಕೆ

**ಮೊದಲು ಸೋಲು**

ಹೊರಡಲು ಆತನನ್ನು ಅಟ್ಟಿಸಿಕೊಂಡು ನಪೋಲಿಯನ್ ಹೊರಟನು. ಆದರೆ ಮಾರ್ಗಮಧ್ಯದಲ್ಲಿ ಪ್ಯಾರಿಸ್ಸಿನಿಂದ ಬೇರೆ ಸುದ್ದಿ ಬರಲು ನಪೋಲಿಯನ್ ಯುದ್ಧವನ್ನು ಒಬ್ಬ ದಳಪತಿ (Marshal Soult) ಗೊಪ್ಪಿಸಿ ಪ್ಯಾರಿಸ್ಸಿಗೆ ಹೊರಟುಬಿಟ್ಟನು. ತೀರದಬಳಿ **ಕೊರನ್ನ** (Corunna) ಎಂಬಲ್ಲಿ ಫ್ರೆಂಚರು ಮೂರನ ಸೈನ್ಯವನ್ನು ಆಕ್ರಮಿಸಿದರು. ಹೊಡೆದಾಟದಲ್ಲಿ ಮೂರನ ಪ್ರಾಣಹೋಯಿತು. ಆದರೆ ಬ್ರಿಟಿಷ್ ಸೈನ್ಯದ ಬಹುಭಾಗ ನಾಶವನ್ನು ತಪ್ಪಿಸಿಕೊಂಡು ಹಡಗುಗಳನ್ನು ಸೇರಿಕೊಂಡಿತು.

ಅಲ್ಲಿಗೆ ಬ್ರಿಟಿಷರು ಸೋತರೆಂದೂ ಸ್ಪೈನಿನಲ್ಲಿ ಪ್ರಬಲವಾದ ತೊಂದರೆ ತೋರಲಾರದೆಂದೂ ನಪೋಲಿಯನ್ ಭಾವಿಸಿಕೊಂಡು ಅನ್ಯಕಾರ್ಯಗಳಲ್ಲಿ ಮಗ್ನನಾದನು. ಆಸ್ಟ್ರಿಯದೊಡನೆ ಮತ್ತೆ ಜಗಳ ಹುಟ್ಟಿ ಯುದ್ಧವಾಯಿತು. ಪುನಃ ಅಲ್ಲಿಯ ಪ್ರಭು ನಪೋಲಿಯನ್ನನಲ್ಲಿ ಶರಣಾಗತನಾದನು. ಆಗ ನಪೋಲಿಯನ್ ತನ್ನ ವಂಶವನ್ನು ಫ್ರಾನ್ಸಿನಲ್ಲಿ ಸ್ಥಾಪಿಸಬೇಕೆಂಬ ಆಸೆಯನ್ನು ಬೆಳೆಸಿ ತನ್ನ ಭಾಗ್ಯ

**ನಪೋಲಿಯನ್ನನ ಭಾಗ್ಯತಾರೆ**

ದೇವತೆಯಂತಿದ್ದ **ಜೋಸೆಫೀನ್** (Josephine) ಎಂಬ ತನ್ನ ರಾಣಿಯನ್ನು ತ್ಯಾಗಮಾಡಿ ಬೇರೆ ಮದುವೆಮಾಡಿಕೊಳ್ಳುವ ಯೋಚನೆಮಾಡಿದನು. 1809ರಲ್ಲಿ ಆಸ್ಟ್ರಿಯದ ಹಾಪ್ಸ್‌ಬುರ್ಗ್ ವಂಶದ ಕುಮಾರಿ **ಮೇರಿ ಲೂಯಿಸ** (Marie Louisa) ಎಂಬಾಕೆಯನ್ನು ಮದುವೆಯಾದನು. ಜೋಸೆಫೀನ್‌ತ್ಯಾಗ ಎಲ್ಲರಿಗೂ ಸಂಕಟಕಾರಕವಾಗಿತ್ತು; ಹೆಂಡತಿಯೊಬ್ಬಳೇ ಇರಬೇಕೆಂಬ ಕ್ರೈಸ್ತರ ಸಂಪ್ರದಾಯವನ್ನನುಸರಿಸುವುದರಲ್ಲಿ ನಪೋಲಿಯನ್ನನೂ ತನ್ನ ಸಂಕಟವನ್ನು ಅಡಗಿಸಿಕೊಂಡನು. ಆದರೆ ಆ ಹಿರಿಯ ರಾಣಿಯನ್ನು ತ್ಯಾಗಮಾಡಿದಕಾಲದಿಂದ ನಪೋಲಿಯನ್ನನ ದೌರ್ಭಾಗ್ಯ ಮೂಡಿತು.

ಸರ್ ಜಾನ್‌ಮೂರ್ ತೀರಿಕೊಂಡ ಮೇಲೆ ಸರ್ ಆರ್ಥರ್ ವೆಲ್ಲೆಸ್ಲಿ ಬ್ರಿಟಿಷರ ದಳಪತಿಯಾಗಿ ಪೋರ್ಚುಗಲ್ಲಿನಲ್ಲಿ ಸನ್ನಾಹನಡೆಸಿದನು. 1809 ರಲ್ಲಿ ಪೋರ್ಚುಗಲ್ಲಿನ ಮೇರೆದಾಟಿ ಸ್ಪೈನಿನಲ್ಲಿ ಒಂದು ಫ್ರೆಂಚ್‌ದಳವನ್ನು **ತಲವೇರ** (Talavera) ಎಂಬಲ್ಲಿ ಸೋಲಿಸಿದ ಬಳಿಕ ಮುಂದೆ ನುಗ್ಗುವುದು ವಿವೇಕವಲ್ಲವೆಂದುಕೊಂಡು ಪೋರ್ಚುಗಲ್ಲಿಗೆ ಹಿಮ್ಮೆಟ್ಟಿದನು. ಸಮಾಚಾರತಿಳಿದ ನಪೋಲಿಯನ್ ಸ್ಪೈನಿನಲ್ಲಿದ್ದ ದಂಗೆಕೋರರನ್ನೂ ಶತ್ರುಗಳನ್ನೂ ಧ್ವಂಸಮಾಡಲು ತನ್ನ ಮಹಾದಂಡನಾಯಕರಲ್ಲೊಬ್ಬನನ್ನು ಸೈನ್ಯದೊಡನೆ ಕಳುಹಿಸಿದನು. ಆ **ಮಾರ್ಷಲ್‌ಮಸ್ಸೇನಾ** (Marshal Massena)

ಎಂಬಾತನು ಸ್ಪೈನಿನಲ್ಲಿ 1810ರಲ್ಲಿ ನುಗ್ಗಿ ಎಲ್ಲೆಲ್ಲಿಯೂ ಸಂಚರಿಸಿ ಹೋದೆಡೆಯಲ್ಲೆಲ್ಲ ಪೊರಕೆಯಿಂದ ಗುಡಿಸಿದಂತೆ ವಿರೋಧಿಗಳನ್ನು ಗುಡಿಸಿದನು.

**ಸ್ಪೈನಿನ ಮುಕ್ತಿಗೆ** ಆಗ ಬ್ರಿಟಿಷ್ ದಳಪತಿಯು ಪೋರ್ಚುಗಲ್ಲನ್ನು ರಕ್ಷಿಸಿಕೊಳ್ಳಲು ಮಹೋದ್ಯಮವನ್ನೇ ನಡೆಸಿದನು. ಪರ್ವತಕಂದರಗಳನ್ನೂ ಕಾಡುಕೊರಕಲುಗಳನ್ನೂ ತಕ್ಕಂತೆ ಜತೆಗೂಡಿಸಿ ಫ್ರೆಂಚರಿಗೆ ಅಡ್ಡವಾಗಿ ಬೆಟ್ಟಕ್ಕೂ ಬೆಟ್ಟಕ್ಕೂ ನಡುವೆ ಹಳ್ಳಗಳಿಗೆ ಮರಗಳನ್ನು ಕತ್ತರಿಸಿ ತುಂಬಿ ಒಂದರ ತರುವಾಯ ಮತ್ತೊಂದು ಸಾಲನ್ನು ಕಟ್ಟಿಸಿ ಅಲ್ಲಲ್ಲಿ ಪಿರಂಗಿಗಳನ್ನು ನೆಡಿಸಿದನು. ಮಸ್ಸೇನಾ ದೇಶವನ್ನು ಸ್ವಾಧೀನಪಡಿಸಿಕೊಳ್ಳುವುದು ಕಷ್ಟವಾಯಿತು. ಸೈನ್ಯವನ್ನು ಸಾಗಿಸುವುದೇ ಪ್ರಯಾಸವಾಗಿದ್ದ ಆ ದೇಶದಲ್ಲಿ ಸ್ಪಾನಿಷ್ ಜನರು ತಿರುಗಿಬಿದ್ದು ಫ್ರೆಂಚರಿಗೆ ಅನ್ನ ನೀರು ಸಿಕ್ಕದಂತೆ ವರ್ತಿಸಿದರು. **ಟಾರೆಸ್ ವೆಡ್ರಾಸ್**(Lines of Torres Vedras) ಎಂಬ ಹೆಸರುಪಡೆದ ಆ ಬೆಟ್ಟ ಕೊರಕಲು ಕಣಿವೆಗಳ ಕೋಟೆಯ ಸಾಲನ್ನು ಮಸ್ಸೇನಾ ಸಾಧಿಸಲಾರದೆ ಹೋದನು. ಬ್ರಿಟಿಷ್ ದಳಪತಿಯು ಆ ಕೋಟೆಯೊಳಗೆ ಸೈನ್ಯಗಳನ್ನು ಭದ್ರಮಾಡಿಕೊಂಡು ಜಾಣತನದಿಂದ ಕಾಲನಿರೀಕ್ಷಣೆ ಮಾಡಿದನು. 1811ರಲ್ಲಿ ಮಸ್ಸೇನಾ ಹಿಂತಿರುಗಿದನು. ಸ್ಪೈನನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದು ಆತನಿಗೆ ಸಾಧ್ಯವಾಗಲಿಲ್ಲ. ಆತ ಹಿಮ್ಮೆಟ್ಟಿದಾಗ ವೆಲ್ಲೆಸ್ಲಿ ಮುಂದೆ ಬಂದು ಒಂದೆರಡು ಯುದ್ಧಗಳನ್ನು ಗೆದ್ದನು. ಗೆದ್ದರೂ ಮುಂದೆ ನುಗ್ಗುವ ಆತುರಕ್ಕೆ ಅವಕಾಶಕೊಡದೆ ತನ್ನ ಸ್ಥಾನವನ್ನು ಮತ್ತಷ್ಟು ಭದ್ರಪಡಿಸಿಕೊಂಡನು.

ಈ ಮಧ್ಯೆ 1812ರಲ್ಲಿ ನಪೋಲಿಯನ್ನನಿಗೂ ರಷ್ಯದ ಚಕ್ರವರ್ತಿಗೂ ಜಗಳರೇಗಿತು. ನಪೋಲಿಯನ್ನನ ಇಳಿಗಾಲ ಅಲ್ಲಿಂದ ಪ್ರಾರಂಭವಾಯಿತು. ಸ್ಪೈನಿನ ತೊಂದರೆಯನ್ನು ಅಲಕ್ಷ್ಯಮಾಡಿ ನಪೋಲಿಯನ್ ರಷ್ಯವನ್ನು ಮುತ್ತಲು ಐದು ಲಕ್ಷ ಸೈನ್ಯವನ್ನು ಕೂಡಿಸಿ ತಾನೇ ಹೊರಟನು. ರಷ್ಯವನ್ನು ಪ್ರವೇಶಿಸಿದ ತರುವಾಯ ಜಯಶಾಲಿಗಳಾಗಿ ಫ್ರೆಂಚರು ನುಗ್ಗಿ **ಮಾಸ್ಕೊ** (Moscow) ಪಟ್ಟಣವನ್ನು ಸೇರಿದರು. ರಷ್ಯದ ನಾಯಕರು ತಮ್ಮ ದೇಶವನ್ನು ನಪೋಲಿಯುನ್ನಿಗೆ ಬಿಟ್ಟುಕೊಟ್ಟಂತೆ ಕಂಡಿತು. ಆದರೆ ಅವರು ಅತಿಜಾಣತನದ ಆಲೋಚನೆಯನ್ನು ಮಾಡಿಕೊಂಡಿದ್ದರು. ನಪೋಲಿಯನ್ನನೆದುರಿಗೆ ತಮ್ಮ ಸೈನ್ಯಗಳು ಕಾಣಿಸದಂತೆ ನೆರವೇರಿಸಿ ಅತಿದೂರದಲ್ಲಿ ಆತನನ್ನೂ ಆತನ ಸೈನ್ಯವನ್ನೂ ಸಿಕ್ಕಿಸಿ ಅನ್ನಾಹಾರಗಳಿಲ್ಲದೆ ಸರ್ವನಾಶವಾಗುವ ಉಪಾಯವನ್ನು ಮಾಡಿದರು. ಮಾಸ್ಕೊ ಬಳಿ ನಪೋಲಿಯನ್ ಬಂದಾಗ ಪಟ್ಟಣವೆಲ್ಲ ಜನಶೂನ್ಯವಾಗಿತ್ತು. ಆ ಪಟ್ಟಣವನ್ನು ಆತನು ಆಕ್ರಮಿಸಿಕೊಂಡು ಬಿಡಾರಗಳನ್ನು ಗೊತ್ತುಮಾಡಿಕೊಂಡ ಬಳಿಕ ಒಂದು ದಿನ ಆಕಸ್ಮಿಕವಾಗಿ ನಡೆದಂತೆ ಪಟ್ಟಣ ಪಟ್ಟಣವೇ ಅಗ್ನಿಜ್ವಾಲೆಗೆ ಸಿಕ್ಕಿ ಉರಿಯಲಾರಂಭವಾಯಿತು. ಪ್ರಾಣವನ್ನುಳಿಸಿಕೊಂಡು ಹೊರಗೆ ಬರುವುದೇ ಅತಿಸಾಹಸವಾಯಿತು. ಆ ವೇಳೆಗೆ ಚಳಿಗಾಲ ತಲೆಹಾಕಿತು

ಪಡುವಣ ಐರೋಪ್ಯರು ರಷ್ಯದ ಚಳಿಯನ್ನರಿಯರು. ಆ ಚಳಿಯಲ್ಲಿಯೂ ಆಹಾರವನ್ನು ಕಾಣದಿದ್ದ ದುಸ್ಥಿತಿಯಲ್ಲಿಯೂ ಹಿಂತಿರುಗುವ ನಿಶ್ಚಯ ಮಾಡಬೇಕಾಯಿತು. ಮಾಸ್ಕೊ ಬಿಟ್ಟು ಹೊರಟ ಸೈನ್ಯ ಬಂದ ದಾರಿಯನ್ನು ಪುನಃ ನಡೆದು ರಷ್ಯದಿಂದ ಹೊರಬೀಳುವುದು ವಿಷಾದಪೂರಿತ ಪ್ರಕರಣವಾಯಿತು. ಹೊರಟ ಐದುಲಕ್ಷ ಸೈನ್ಯದಲ್ಲಿ ಅರವತ್ತುಸಾವಿರ ಸೈನ್ಯವನ್ನು ರಕ್ಷಿಸಿಕೊಂಡುಬಂದುದೇ ಪೌರುಷಸಾಹಸಗಳ ಪರಮಾವಧಿಯಾಯಿತು.

**ದುರಂತಸಾಹಸ**

ರಷ್ಯದಲ್ಲಿ ಈ ದುರಂತಪ್ರಕರಣ ನಡೆಯುತ್ತಿದ್ದಾಗ ಸ್ಪೈನಿನಲ್ಲಿ ಫ್ರೆಂಚರ ಬಲವು ಕುಗ್ಗುತ್ತ *ವೆಲ್ಲಿಂಗ್ಟನ್ನ (Wellington) ನ ಎದುರಿನಲ್ಲಿ ಪದೇ ಪದೇ ಕೃಶವಾಗಿ ಸ್ಪಾನಿಷ್ ಜನರ ತುಂಟತನಕ್ಕೂ ಹಿಂಸೆಗೂ ಸಿಕ್ಕಿ ನಾಶವನ್ನು ಹೊಂದುವ ಸ್ಥಿತಿಗೆ ಬಂದಿತ್ತು. ರಷ್ಯಕ್ಕೆ ಹೊರಟಾಗ ನಪೋಲಿಯನ್ ತನ್ನ ಸೈನ್ಯಗಳಲ್ಲಿ ಬಹುಭಾಗವನ್ನು ಸ್ಪೈನಿನಿಂದ ಕರೆಸಿಕೊಂಡಿದ್ದನು. ಆಗ ವೆಲ್ಲಿಂಗ್ಟನ್ ಸಮಯ ಸಾಧನೆಮಾಡಿ ಸ್ಪೈನಿನ ದಾರಿಗಳಿಗೆ ಮುಖ್ಯವಾಗಿದ್ದ **ರಾಡ್ರಿಗೊ** (Roderigo) ಮತ್ತು **ಬಡಜೋಸ್** (Badajoz) ಎಂಬ ಕೋಟೆಗಳನ್ನು ಮುತ್ತಿ ಹಿಡಿದನು. ತರುವಾಯ **ಸಾಲಮಾನ್ಕ** (Salamanca) ಎಂಬಲ್ಲಿ ಫ್ರೆಂಚರ ಸೈನ್ಯವನ್ನೆದುರಿಸಿ ಚೆನ್ನಾಗಿ ಸೋಲಿಸಿದನು. ಆ ದಿನದ ಪರಿಣಾಮವಾಗಿ ಜೋಸೆಫ್ ಬೋನಪಾರ್ಟ್ (Joseph Buonaparte) ಮದ್ರಿಡ್ ರಾಜಧಾನಿಯನ್ನು ಬಿಟ್ಟು ಪಲಾಯನನಾದನು. ಸ್ಪೈನಿನ ದಕ್ಷಿಣಾರ್ಧವನ್ನು ಫ್ರೆಂಚರು ತ್ಯಜಿಸಿದರು. ಬ್ರಿಟಿಷರು **ಮದ್ರಿಡ್ ನಗರವನ್ನು** ವಶಪಡಿಸಿಕೊಂಡರು. ಅಲ್ಲಿಂದ ಮುಂದಕ್ಕೆ ಸ್ಪೈನಿನ ಉತ್ತರಭಾಗವನ್ನು ಗೆಲ್ಲುವುದು ವೆಲ್ಲಿಂಗ್ಟನ್ನನ ಕೆಲಸವಾಯಿತು. 1812ರಲ್ಲಿ ಮದ್ರಿಡ್ಡಿನಿಂದ ಮುಂದಕ್ಕೆ ಹೊರಟು **ಬರ್ಗೋಸ್** (Burgos) ಎಂಬ ಕೋಟೆಯನ್ನು ಮುತ್ತಿದನು. ಆದರೆ ಫ್ರೆಂಚರನ್ನು ಸೋಲಿಸಲಾರದೆ ಹಿಮ್ಮೆಟ್ಟಬೇಕಾಯಿತು.

**ಸ್ಪೈನಿನಲ್ಲಿ ಬ್ರಿಟಿಷರ ಜಯ**

ಆ ವೇಳೆಗೆ ರಷ್ಯದಲ್ಲಿ ಸಂಭವಿಸಿದ ಸಂಗತಿಗಳು ತಿಳಿಯಬಂದವು. ದೈತ್ಯಸಮಾನನಂತೆ ಕಾಣುತ್ತಿದ್ದ ನಪೋಲಿಯನ್ನನ ಪರಾಭವವನ್ನು ಕೇಳಿದ ಐರೋಪ್ಯ ಸಂಸ್ಥಾನಿಕರು ಅಂತರಂಗದಲ್ಲಿ ಅಡಗಿಸಿದ್ದ ಆಸೆಗಳನ್ನು ಬೆಳೆಸಿದರು. ಇಂಗ್ಲಂಡಿನ ಮಂತ್ರಿ **ಲಾರ್ಡ್ ಕಾಸಲ್‌ರೇ** (Castlereagh) ನಡೆಸುತ್ತಿದ್ದ ಸಂಧಾನಗಳು ಫಲದಾಯಕವಾದವು. ರಷ್ಯದೊಡನೆ ಪ್ರಷ್ಯ ಮತ್ತು ಸ್ವೀಡೆನ್ ಪ್ರಭುಗಳು ಸೇರಿದರು. ಸ್ವಲ್ಪಕಾಲದಲ್ಲಿ ಆಸ್ಟ್ರಿಯದ ಪ್ರಭುವೂ ಸೇರಿಕೊಂಡನು. ಇದು **4ನೆ ಮಿತ್ರವ್ಯೂಹ** (Fourth Coalition) ವಾಯಿತು. ರಷ್ಯದಿಂದ ಹಿಂತಿರುಗಿ ಫ್ರಾನ್ಸನ್ನು ಸೇರಿದ

* ಸರ್ ಆರ್ಥರ್ ವೆಲ್ಲೆಸ್ಲಿ ಶ್ರೀಮಂತಪದವಿ ಪಡೆದು ಧರಿಸಿದ ಬಿರುದು-ಡ್ಯೂಕ್ ಆಫ್ ವೆಲ್ಲಿಂಗ್ಟನ್.

**ಮಿತ್ರಮಂಡಲಿಯ ಸನ್ನಾಹ**

ಕೂಡಲೆ ನಪೋಲಿಯನ್ನನಿಗೆ ಈ ಮಿತ್ರವ್ಯೂಹದ ಸನ್ನಾಹವು ತಿಳಿಯಿತು. ತಕ್ಷಣವೇ ಸೈನ್ಯವೆತ್ತಿ ಹೊರಡಬೇಕೆಂದು ನಿಶ್ಚಯಮಾಡಿ ಅದಕ್ಕಾಗಿ ಸ್ಪೈನಿನಲ್ಲಿ ಉಳಿದಿದ್ದ ದಳಗಳನ್ನು ಬರಮಾಡಿಕೊಂಡನು. 1813ರಲ್ಲಿ ಸ್ಪೈನಿನಲ್ಲಿ ವೆಲ್ಲಿಂಗ್ಟನ್ನನಿಗೆ ಇದರಿಂದ ಸುಲಭವಾಯಿತು. ಸಾಲಮಾನ್ಕ ಹಿಡಿದು ವಿಟ್ಟೋರಿಯ ಎಂಬೆಡೆವರೆಗೆ ಬ್ರಿಟಿಷ್ ಸೈನ್ಯ ಎದುರಿಲ್ಲದೆ ಹೊರಟಿತು. **ವಿಟ್ಟೋರಿಯ** (Vittoria) ಬಳಿ ಜೋಸೆಫ್ ಬೋನಪಾರ್ಟ್ ಕದನಕ್ಕೆ ನಿಂತನು. ವೆಲ್ಲಿಂಗ್ಟನ್ ಅವನೆದುರಿಗೆ ದೊಡ್ಡಸೈನ್ಯವನ್ನೊಡ್ಡಿ ಚನ್ನಾಗಿ ಸೋಲಿಸಿ 143 ಪಿರಂಗಿಗಳನ್ನೂ ಹತ್ತುಲಕ್ಷ ಪೌಂಡುಗಳನ್ನೂ ಕಿತ್ತುಕೊಂಡನು. ಜೋಸೆಫನು ಗತಿಗೆಟ್ಟವನಂತೆ ಸ್ಪೈನನ್ನು ಬಿಟ್ಟು ಓಡಿದನು. ವಿಟ್ಟೋರಿಯ ಜಯದ ಸುದ್ದಿ ತಿಳಿದಮೇಲೆ ಮಿತ್ರರಾಜರೆಲ್ಲರಿಗೂ ಧೈರ್ಯ ಬಂತು. ಮಿತ್ರವ್ಯೂಹದ ಸೈನ್ಯಗಳೆಲ್ಲ ಫ್ರಾನ್ಸಿನ ಈಶಾನ್ಯ ಮತ್ತು ಪೂರ್ವದಿಕ್ಕುಗಳಲ್ಲಿ ಗುಂಪುಕೂಡಲು ಅನುಕೂಲವಾಯಿತು. ತಾನೇ ಮೊದಲು ಆಕ್ರಮಣಮಾಡಿ ಶತ್ರುಗಳಿಗೆ ವಿಸ್ಮಯದೋರುವಂತೆ ಕದನಕಟ್ಟುವ ಉದ್ದೇಶದಿಂದ ನಪೋಲಿಯನ್ ತನ್ನ ಮುಖ್ಯಸೈನ್ಯವನ್ನೆತ್ತಿಕೊಂಡು ಜರ್ಮನಿಯಲ್ಲಿ ನುಗ್ಗಿದನು. ಸ್ಪೈನಿನಲ್ಲಿ ಯುದ್ಧ ನಡೆಸಲು ತನ್ನ ದಂಡನಾಯಕರಲ್ಲೊಬ್ಬನನ್ನು ನಿಯಮಿಸಿದನು. ಆತನಿಗೂ ವೆಲ್ಲಿಂಗ್ಟನ್ನನಿಗೂ ಸ್ಪೈನಿನ ಉತ್ತರದಲ್ಲಿ ಪಿರನೀಸ್ ಪರ್ವತದಬಳಿ ಕಾದಾಟವಾಯಿತು. ಚಾತುರ್ಯದಿಂದ ಸೈನ್ಯವನ್ನು ನಡೆಸುತ್ತ ವೆಲ್ಲಿಂಗ್ಟನ್ **ಸಾನ್ ಸೆಬಾಸ್ಟಿಯನ್** (San Sebastian) ಕೋಟೆಯನ್ನು ಹಿಡಿದು ಪಿರನೀಸ್ ಶ್ರೇಣಿಯನ್ನು ದಾಟಿ ಫ್ರಾನ್ಸ್ ದೇಶವನ್ನೇ ಮುತ್ತಲು ಶಕ್ತನಾದನು. ಆ ವೇಳೆಗೆ ಜರ್ಮನಿಯಲ್ಲಿ **ಲೈಪ್ಸಿಗ್** (Leipsic) ಎಂಬಲ್ಲಿ ಮಿತ್ರ

**ಪ್ರತ್ಯಕ್ಷ ಪರಾಭವ**

ವ್ಯೂಹದವರು ಭಾರಿ ಕದನದಲ್ಲಿ ನಪೋಲಿಯನ್ನನ ಎದುರು ನಿಂತು ದೃಢನಿಶ್ಚಯದಿಂದ ಆತನ ಆಕ್ರಮಣವನ್ನು ತಡೆದು ಜಯಶೀಲರಾದರು. ನಪೋಲಿಯನ್ ಸೋತು ಫ್ರಾನ್ಸಿಗೆ ಹಿಂತಿರುಗಿ ಶತ್ರುಸೈನ್ಯಗಳ ಮುತ್ತಿಗೆಯನ್ನು ನಿವಾರಿಸುವ ಪ್ರಯತ್ನದಲ್ಲಿ ಅಸಾಧಾರಣ ಸಾಹಸಸಾಮರ್ಥ್ಯಗಳನ್ನು ತೋರಿ ಕಡೆಗೆ ಸೋತುಹೋದನು. ಪ್ಯಾರಿಸ್ ನಗರವು

**ರಾಜ್ಯತ್ಯಾಗ**

ಮಿತ್ರವ್ಯೂಹದವರ ವಶವಾಯಿತು. ಅವರೊಡನೆ ಸಂಧಾನ ನಡೆಸುತ್ತ ಗತ್ಯಂತರವಿಲ್ಲದೆ ನಪೋಲಿಯನ್ 1814ರಲ್ಲಿ **ಸಾಮ್ರಾಜ್ಯ** ಸರ್ವಸ್ವವನ್ನೂ **ತ್ಯಾಗ** ಮಾಡಲೊಪ್ಪಿಕೊಂಡನು.

ಪಿರನೀಸ್ ದಾಟಿದ ಬಳಿಕ ವೆಲ್ಲಿಂಗ್ಟನ್ **ಆರ್ಥೆಸ್** (Orthez) ಎಂಬಲ್ಲಿಯೂ **ಟುಲೂಸ್**(Toulouse) ಎಂಬಲ್ಲಿಯೂ ಜಯಶೀಲನಾಗಿ ಆ ಸ್ಥಳಗಳನ್ನು ಹಿಡಿದನು. ಆ ವೇಳೆಗೆ ನಪೋಲಿಯನ್ ಫ್ರಾನ್ಸ್ ತ್ಯಾಗಮಾಡಿಕೊಟ್ಟು ಮಿತ್ರವ್ಯೂಹದವರು ಹೇಳಿದಂತೆ ಎಲ್ಬ (Elba) ದ್ವೀಪಕ್ಕೆ ಹೊರಡುವುದರಲ್ಲಿದ್ದನು. ಯುದ್ಧವು ನಿಂತಿತು.

# ಫರಾನ್ಸಿ ಮಹಾಪಲ್ಲಟ

| | ಫ್ರಾನ್ಸ್ | | | | ಗ್ರೇಟ್‌ಬ್ರಿಟನ್ |
|---|---|---|---|---|---|
| 1789 | ಮೇ - ಸ್ಟೇಟ್ಸ್‌ಜನರಲ್-ರಾಷ್ಟ್ರಸಭೆ | | | | ವ್ಹಿಗ್ಗರ ಉತ್ಸಾಹ |
| | ಜುಲೈ 14 - ಬಾಸ್ಟೀಲ್ ಪತನ. ನೂತನ ರಾಷ್ಟ್ರ ನಿರ್ಮಾಣಯತ್ನ, ರಾಜನ ಪಲಾಯನಪ್ರಯತ್ನ | | | | ಬರ್ಕನ ಪುಸ್ತಕದ ಪ್ರಭಾವ |
| 1792 | ರಾಜತ್ವದ ವಿನಾಶ. ಘೋರ ಕೊಲೆಗಳು, ರಿಪಬ್ಲಿಕ್ | 1792 | ಆಸ್ಟ್ರಿಯ + ಪ್ರಸ್ಯ ಯುದ್ಧ | | ಷೆಲ್ಟ್‌ನದಿ ಫ್ರೆಂಚರವಶ |
| 1793 | ರಾಜಾರಾಣಿಯರ ಹತ್ಯೆ | 1793 | **ಮೊದಲನೆ ಮಿತ್ರವ್ಯೂಹ** ಆಸ್ಟ್ರಿಯ, ಪ್ರಸ್ಯ, ಹಾಲಂಡ್, ಸ್ಪೈನ್ ಸಾರ್ಡಿನಿಯ, ಬ್ರಿಟನ್ | | ಹಾಲಂಡಿನ ವಿಪತ್ತು ಟುಲಾನ್, ಡಂಕರ್ಕ್, ಕಿಬೆರ್ರಾ ಗುಡ್‌ಹೋಪ್ (ಜ) |
| | | 1794 | ನೆದರ್ಲಾಂಡ್ಸಿನಲ್ಲಿ ಫ್ರೆಂಚ್ ಜಯ, ರ್ಹೈನ್ ಮೇರೆಯ ಸಾಧನೆ | | ಮಾರ್ಟಿನೀಕ್, ಸೆಂಟ್‌ಲೂಸಿಯ (ಜ) ಜೂನ್ ಮೊದಲನೆದಿನದ ಕದನ (ಜ) |
| 1795 | ಡೈರೆಕ್ಟರಿ | 1796 | ಇಟಲಿಯಲ್ಲಿ ನಪೋಲಿಯನ್ | | |
| | | 1797 | ಕ್ಯಾಂಪೊ ಫೋರ್ಮಿಯೊ ಕರಾರು | ನೌಕಾ { 1797 | ಕ್ಯಾಂಪರ್‌ಡೌನ್, ಸೆಂಟ್‌ವಿನ್ಸೆಂಟ್ |
| | 1798 ಈಜಿಪ್ಟಿನಲ್ಲಿ ನಪೋಲಿಯನ್ | | | 1798 | ನೈಲ್‌ಯುದ್ಧ |
| 1799 | ನಪೋಲಿಯನ್ ಪ್ರಧಾನ ಕಾನ್ಸಲ್ | 1799 | **ಎರಡನೆ ಮಿತ್ರವ್ಯೂಹ** | 1799 | ಆಕರ್ ಮುತ್ತಿಗೆ |
| | | 1800 | ಮರೆಂಗೊ, ಹೊಹೆನ್‌ಲಿಂಡೆನ್ ಲ್ಯೂನ್‌ವಿಲ್ ಕರಾರು | 1801 | ಆಲೆಕ್ಸಾಂಡ್ರಿಯ ಕೋಪನ್‌ಹಾಗೆನ್ |

## ಫ್ರಾನ್ಸ್

| | | | |
|---|---|---|---|
| | | 1802 | ಅಮಿಯರ್ನ್ ಕರಾರು |
| 1804 | ನಪೋಲಿಯನ್ ಚಕ್ರವರ್ತಿ | | ನಪೋಲಿಯನ್ ಬೋಲೋನ್‌ಬಳಿ |
| | | 1805 | **ಮೂರನೆ ಮಿತ್ರವ್ಯೂಹ** |
| | | | ಉಲ್ಮ್, ಔಸ್ಟರ್ಲಿಟ್ಸ್ |
| | | | ಇಯಿನ, ಔಸ್ಟರ್ಡಾರ್ಟ್ |
| | | 1806 | ಬರ್ಲಿನ್ ಆಜ್ಞೆಗಳು |
| | | 1807 | ಟಿಲ್ಸಿಟ್‌ಕರಾರು; ಪೋರ್ಚುಗಲ್ ಮುತ್ತಿಗೆ |
| | | 1808 | ಸ್ಪೈನಿನಲ್ಲಿ ಜೋಸೆಫ್ ಬೋನಪಾರ್ಟ್ |
| 1809 | ಜೋಸೆಫೀನ್ ತ್ಯಾಗ | | |
| | | 1812 | ರಷ್ಯಾ ಮುತ್ತಿಗೆ |
| | | 1813 | **ನಾಲ್ಕನೆ ಮಿತ್ರವ್ಯೂಹ** |
| | | | ಲೈಪ್ಸಿಗ್ ಕದನ |
| 1814 | ರಾಜ್ಯತ್ಯಾಗ ... | | ವಿಯೆನ್ನ ಸಮ್ಮೇಳನ |
| | ಎಲ್ಬ ... | | ಪುನರಾಗಮನ, ಲಿಗ್ನಿ, ವಾಟರ್ಲೂ, ಸೆಂಟ್ ಹೆಲೆನ |
| | | 1815 | ಪ್ಯಾರಿಸ್ ಒಪ್ಪಂದ |

## ಗ್ರೇಟ್‌ಬ್ರಿಟನ್

| | | | |
|---|---|---|---|
| 1803 | ಯುದ್ಧಪ್ರಾರಂಭ | | |
| 1805 | ಟ್ರಫಾಲ್ಗರ್ (ಜ) | | |
| 1806 | ಪಿಟ್ಟನ ಸಾವು | | |
| 1807 | ಕೌನ್ಸಿಲ್ ಆಜ್ಞೆಗಳು, ಪೋರ್ಟ್ಲೆಂಡ್ ಮಂತ್ರಿ | | |
| 1809 | ಪರ್ಸೆವಲ್‌ಮಂತ್ರಿ | | **ಪರ್ಯಾಯದ್ವೀಪದಯುದ್ಧ** |
| | | 1808 | ವಿಮಿಯೇರೊ |
| | | 1809 | ಕೊರನ್ನ, ತಲವೇರ |
| | | 1810 | ಬುಸಕೊ, ಟಾರೆಸ್ ವೆಡ್ರಾಸ್ |
| | | 1811 | ಆಲ್‌ಬ್ಯುಯೆರ |
| 1812 | ಲಿವರ್ಪೂಲ್‌ಮಂತ್ರಿ | 1812 | ಬಡಜೋಸ್, ಸಾಲಮಾಂಕ |
| | | 1813 | ವಿಟ್ಟೋರಿಯ |
| | | 1814 | ಆರ್ಥೆಸ್, ಟುಲೂಸ್ |

(ಟೋರಿ: 1807–1812)

1808 ರಿಂದ 1814 ರವರೆಗೆ ಸ್ಪೈನಿನಲ್ಲಿ ನಡೆದ ಪರ್ಯಾಯದ್ವೀಪದ ಯುದ್ಧ (Peninsular War) ಬ್ರಿಟಿಷರಿಗೆ ಕೀರ್ತಿಯನ್ನು ತಂದಿಟ್ಟಿತು. ನೆಲದ ಮೇಲಿನ ಯುದ್ಧಗಳಲ್ಲಿಯೂ ಬ್ರಿಟಿಷರು ಸಮರ್ಥರೆನಿಸಿ ಅದುವರೆಗೂ ಅಜೇಯವೆನಿಸಿದ್ದ ಫ್ರೆಂಚರ ದಳಗಳನ್ನು ಸೋಲಿಸಿದ ಕಾರಣ ಐರೋಪ್ಯರಿಗೆ ಹಿಡಿದಿದ್ದ ಭ್ರಾಂತಿಮಾಯೆಗಳು ತೊಲಗಿ ಹೋದವು. ಸ್ಪೈನ್ ಮತ್ತು ಪೋರ್ಚುಗಲ್ ಜನರು ಪರಕೀಯ ಪ್ರಭುವಿನ ಆಡಳಿತವನ್ನೊಲ್ಲದೆ ನಡೆಸಿದ ತುಂಟಿಯುದ್ಧವನ್ನು ಇತರ ದೇಶಗಳ ಜನರೂ ಕಲಿಯುವಂತಾಯಿತು. ನಾಲ್ಕನೆ ಮಿತ್ರವ್ಯೂಹದ ಸನ್ನಾಹ ನಡೆದ ವೇಳೆಗೆ ನಪೋಲಿಯನ್ನನ ಯುದ್ಧಚಮತ್ಕಾರದ ರೀತಿಯು ಅನುಭವಕ್ಕೆ ಬಂದಿದ್ದಿತು. ಅತಿವೇಗವಾಗಿ ಸೈನ್ಯವನ್ನು ಸಾಗಿಸಿಕೊಂಡು ಅನಿರೀಕ್ಷ್ಯವಾದ ರೀತಿಯಲ್ಲಿ ಕಾಣಿಸಿಕೊಂಡು ಮಹಾರಭಸದಿಂದ ಪಿರಂಗಿಗಳನ್ನು ಪ್ರಯೋಗಿಸುತ್ತಿದ್ದ ಆತನ ಯುದ್ಧಕೌಶಲವನ್ನು ಫ್ರೆಂಚರ ಶತ್ರುಗಳೂ ತಿಳಿದಿದ್ದರು. ಲೈಪ್ಸಿಗ್ ಕದನದಲ್ಲಿ ಸ್ವತಃ ನಪೋಲಿಯನ್ನನೇ ಯುದ್ಧವನ್ನು ನಡೆಸುತ್ತಿದ್ದಾಗ್ಗೂ ಮಿತ್ರವ್ಯೂಹದವರು ಜಯ ಪಡೆದುದು ಈ ಕಾರಣದಿಂದ.

**ಪರ್ಯಾಯ ದ್ವೀಪ ಯುದ್ಧದ ಪ್ರಭಾವ**

ಮಿತ್ರವ್ಯೂಹದವರು ಫ್ರಾನ್ಸನ್ನು ಮುತ್ತಿ ಪ್ಯಾರಿಸ್ ನಗರವನ್ನು ಆಕ್ರಮಿಸಿ ನಪೋಲಿಯನ್ನನ್ನು ಎಲ್ಬ ದ್ವೀಪಕ್ಕೆ ಹೊರಡಿಸಿ ಆ ದ್ವೀಪವನ್ನು ಬಿಟ್ಟು ಹೊರಗೆ ಬರಕೂಡದೆಂದು ಗೊತ್ತುಮಾಡಿದರು. ನಪೋಲಿಯನ್ ಎಲ್ಬ ದ್ವೀಪವನ್ನು ಸೇರಿಕೊಂಡನು. ಮಿತ್ರವ್ಯೂಹದವರು ಇಪ್ಪತ್ತು ವರ್ಷಕಾಲದ ಭಯಂಕರಸ್ಥಿತಿಯು ಮುಗಿಯಿತೆಂದುಕೊಂಡರು. ಎಲ್ಲ ರಾಜ್ಯಗಳ ಪ್ರತಿನಿಧಿಗಳೂ **ವಿಯೆನ್ನ** (Vienna) ನಗರದಲ್ಲಿ **ಸಭೆ** ಸೇರಿ ಯೂರೋಪಿನ ರಾಜ್ಯಗಳನ್ನು ಹಿಂದಿದ್ದಂತೆ ಉದ್ಧಾರಮಾಡಲು ತಕ್ಕ ಕರಾರುಗಳನ್ನೂ ಒಪ್ಪಂದಗಳನ್ನೂ ವಿವರವಾಗಿ ಗೊತ್ತುಮಾಡಿಕೊಳ್ಳಬೇಕೆಂದು ತೊಡಗಿದರು. ಫ್ರಾನ್ಸಿನಲ್ಲಿ ಹಳೇ ಬೋರ್ಬನ್ ವಂಶದವನಾದ **18ನೆ ಲೂಯಿ**( Louis XVIII)ಯೆಂಬಾತನಿಗೆ ಪಟ್ಟವಾಯಿತು. ವಿಯೆನ್ನದಲ್ಲಿ ಸಭೆ ಸೇರಿತು. ನಷ್ಟವಾಗಿದ್ದ ಗೌರವ ಬಿರುದಾವಳಿಗಳನ್ನು ಪುನಃ ಅನುಭವಿಸುತ್ತ ಯಥಾಸಂಪ್ರದಾಯವಾಗಿ ರಾಜ್ಯಗಳ ಮಂತ್ರಿಗಳೂ ಸಂಧಿವಿಗ್ರಹಕರೂ ಸಮ್ಮೇಳನದಲ್ಲಿ ವಾದಿಸುತ್ತಿದ್ದಾಗಲೆ ಎಲ್ಬ ದ್ವೀಪದಿಂದ ನಪೋಲಿಯನ್ ಬ್ರಿಟಿಷರ ಪಹರೆ ಹಡಗನ್ನು ವಂಚಿಸಿ ಫ್ರಾನ್ಸಿಗೆ ಹಿಂತಿರುಗಿದನೆಂಬ ಸಮಾಚಾರ ಬಂತು. ತಕ್ಷಣವೇ ತಮ್ಮ ದೇಶಗಳಿಗೆ ಆ ಮಂತ್ರಿನಿಯೋಗಿಗಳೋಡಿದರು. ಮಿತ್ರವ್ಯೂಹದ ಸೈನ್ಯಗಳು ಸಿದ್ಧವಾದವು. ಇಂಗ್ಲಂಡಿನ ವೆಲ್ಲಿಂಗ್ಟನ್ ಡ್ಯೂಕನೇ ಸಮಸ್ತ ಸೈನ್ಯಾಧಿಪತಿಯಾಗಬೇಕೆಂದು ಗೊತ್ತಾಯಿತು.

**ವಿಯೆನ್ನ ಕಾಂಗ್ರೆಸ್**

ಫ್ರೆಂಚರು ಹದಿನೆಂಟನೆ ಲೂಯಿಯನ್ನು ಕಂಡು ಉತ್ಸಾಹಗೊಳ್ಳಲಿಲ್ಲ. ನಪೋಲಿಯನ್ನನ ಭಕ್ತರನೇಕರು ಆತನ ಆಗಮನವನ್ನು ಬಯಸುತ್ತಿದ್ದರು. ಸಮಯ ಹೊಂಚಿಕೊಂಡಿದ್ದು ನಪೋಲಿಯನ್ ಬಂದಕೂಡಲೇ ಆತನ ಸುತ್ತಲೂ ಜನರು ಆನಂದದಿಂದ ಗುಂಪುಕೂಡಿದರು. ಆತನಿಗಾಗಿ ಪ್ರಾಣಕೊಡಲು ತಾವಾಗಿ ಜನರು ಸಿದ್ಧರಾದರು. ಯಾವ ಸೈನ್ಯವೂ ಇಲ್ಲದೆ ಬಂದವನ ಸುತ್ತ ಬೇಗನೆ ಸೈನ್ಯ ಸಿದ್ಧವಾಯಿತು. ಬೋರ್ಬನ್ ಸೈನ್ಯಗಳಲ್ಲಿದ್ದವರೇ ನಪೋಲಿಯನ್ನಿಗೆ ಜಯವಾಗಲೆಂದು ಕೂಗುತ್ತ ಬಂದರು. ಆ ನಿರ್ಭಾಗ್ಯ ದೊರೆ 18ನೆ ಲೂಯಿ ತನ್ನ ಬಲ ಮಾಯವಾದುದನ್ನು ಕಂಡು ಇಂಗ್ಲಂಡಿಗೆ ಪರಾರಿಯಾದನು. ಪ್ಯಾರಿಸ್ ನಗರದಲ್ಲಿ ನಪೋಲಿಯನ್ ಕಾಣಿಸಿಕೊಂಡು ತನ್ನ ಸಾಮ್ರಾಜ್ಯವನ್ನು ಪುನಃ ನೆಲೆಗೊಳಿಸುವಷ್ಟರಲ್ಲಿಯೇ ಉತ್ತರದಲ್ಲಿ ಶತ್ರುಸೈನ್ಯಗಳು ಸೇರುತ್ತಿದ್ದ ಸುದ್ದಿ ತಿಳಿಯಿತು. ಕೂಡಲೇ ಸೈನ್ಯವನ್ನಣಿ ಮಾಡಿಕೊಂಡು ನಪೋಲಿಯನ್ ಉತ್ತರಕ್ಕೆ ಹೊರಟನು. ಅತಿ ಪ್ರಸಿದ್ಧವಾದ *ವಾಟರ್ಲೂ (Waterloo) ಕದನ ನಡೆಯಿತು. ಬ್ರಿಟಿಷರೂ ಪ್ರಷ್ಯದವರೂ ಸೇರಿ ನಪೋಲಿಯನ್ನನನ್ನು ಸೋಲಿಸಿದರು. ನಪೋಲಿಯನ್ ಹಿಮ್ಮೆಟ್ಟಬೇಕಾಯಿತು. ಶತ್ರುಸೈನ್ಯಗಳು ತರುಬಿಕೊಂಡುಬಂದವು. ಫ್ರಾನ್ಸನ್ನು ಸೇರಿಕೊಂಡಾಗ ನಪೋಲಿಯನ್ನನಿಗೆ ಸಹಾಯವೆಲ್ಲಿಯೂ ಕಾಣಲಿಲ್ಲ. ಪುನಃ ಪುನಃ ಯುದ್ಧವಾಡಿ ಬೇಸತ್ತ ಫ್ರೆಂಚರು ದುರ್ಬಲರಾಗಿದ್ದರು. ಪ್ಯಾರಿಸ್ ನಗರವು ಸುಲಭವಾಗಿ ಶತ್ರು ಸ್ವಾಧೀನವಾಗಿಹೋಯಿತು. ಫ್ರಾನ್ಸಿನಲ್ಲಿ ತಾನಿರುವಹಾಗಿಲ್ಲವೆಂದು ತಿಳಿದು ನಪೋಲಿಯನ್ ಸಮುದ್ರತೀರಕ್ಕೆ ಬಂದು ಅಮೆರಿಕಕ್ಕೆ ಹೊರಡುವ ಆಸೆಯನ್ನು ಸ್ವಲ್ಪಕಾಲ ಇಟ್ಟುಕೊಂಡಿದ್ದು ಕಡೆಗೆ ತಾನಾಗಿ ಬ್ರಿಟಿಷರ ಸೆರೆಯಾದನು.

100 ದಿನ

ಮಿತ್ರವ್ಯೂಹದ ಜಯ

ಮಿತ್ರವ್ಯೂಹದವರು ನಪೋಲಿಯನ್ನನನ್ನು ಬ್ರಿಟಿಷರ ಸುಭರ್ದಿಗೆ ಬಿಟ್ಟುಕೊಟ್ಟರು. ಬ್ರಿಟಿಷರು ಆತನನ್ನು **ಸೆಂಟ್ ಹೆಲೆನ** (St. Helena) ಎಂಬ ದೂರ ದ್ವೀಪಕ್ಕೆ ಸಾಗಿಸಿ ಅಲ್ಲಿಯೇ ಕಾವಲಿಟ್ಟು ಆತ ತೀರಿಕೊಂಡಮೇಲೆ ಆತನ ಶವವನ್ನು ಅಲ್ಲಿಯೇ ಹೂಳಿಸಿದರು. ಆತನು ಸತ್ತ ತರುವಾಯವೂ ಕೆಲಕಾಲ ಆತನ ಭಯ ಐರೋಪ್ಯರ ಮನಸ್ಸಿನಲ್ಲಿ ಹೋಗಲಿಲ್ಲ. ಮಾನವನಾಗಿ ಹುಟ್ಟಿದವನ ಬುದ್ಧಿಸಾಹಸಗಳು ಎಷ್ಟು ಉನ್ನತಿಯನ್ನು ಪಡೆಯಬಹುದೆಂಬುದಕ್ಕೆ ನಪೋಲಿಯನ್ನನ ಸಾಧನೆಯೊಂದು

**ನಪೋಲಿಯನ್ನನ ಕೀರ್ತಿ**

---

*ಟ್ರಫಾಲ್ಗರ್ ಕದನವನ್ನು ಪ್ರಾಣರಕ್ಷಣೆಗೂ ವಾಟರ್ಲೂ ಕದನವನ್ನು ಜಯಪ್ರಾಪ್ತಿಗೂ ಬ್ರಿಟಿಷರು ನಡೆಸಿದರೆನ್ನುವುದು ರೂಢಿ.

ನಿದರ್ಶನ. ಆತನ ಜೀವನದಲ್ಲಿ ಘನವಾದುದೂ ಇತ್ತು; ಘೋರವಾದುದೂ ಇತ್ತು. ಅಪರಿಮಿತತೇಜಸ್ಸಂಪನ್ನನಾದವನೂ ಅಸಮಾನಸಾಮರ್ಥ್ಯಚಮತ್ಕಾರಗಳನ್ನು ಹೊಂದಿದವನೂ ತನ್ನ ಹೆಸರಿನ ಸಾಮ್ರಾಜ್ಯವನ್ನು ಕಟ್ಟಬೇಕೆಂದು ಲಕ್ಷಗಟ್ಟಲೆ ಪ್ರಾಣಗಳನ್ನು ಬಲಿಯಿಟ್ಟನು. ಔದಾರ್ಯಕನಿಕರಗಳೊಂದಿಗೆ ಸಹಜವಾದ ಗಾಂಭೀರ್ಯವೂ ಆತನಲ್ಲಿತ್ತು. ಆತನಿಂದ ಮೇಲ್ಮೆಪಡೆದ ದಳಪತಿಗಳೂ ಬಂಧುಗಳೂ ಕಡೆಕಡೆಗೆ ದ್ರೋಹವನ್ನು ಬಗೆದರು. ಅನೇಕ ರೀತಿಗಳಲ್ಲಿ ಸೋಜಿಗದ ಪುರುಷನಾತನು. ಆದರೆ ಸ್ವಾರ್ಥದಗುರಿಯನ್ನು ಸಾಧನೆಮಾಡುತ್ತ ಹಿರಣ್ಯಕಶಿಪುವೋ ರಾವಣಾಸುರನೋ ಇದ್ದಂತೆ ದೈತ್ಯನಾದನು.

ಫ್ರಾನ್ಸಿನ ಮಹಾಪಲ್ಲಟ ಮೊದಲಾದುದು ಸರ್ವಸಮತ್ವಸ್ವಾತಂತ್ರ್ಯಗಳ ಆಸೆಯಿಂದ. ಏಕನಾಯಕಪ್ರಭುತ್ವದ ಸಂಪ್ರದಾಯವನ್ನು ಮುರಿದು ಸರ್ವಜನರ ಸ್ವಾಮ್ಯವನ್ನು ಸ್ಥಾಪಿಸುವ ಉದ್ದೇಶದಿಂದ. ಯೂರೋಪಿನ ನಾನಾ ದೇಶಗಳನ್ನು ಮುತ್ತಿ ಗೆಲ್ಲುವಾಗ ಜನರ ಸ್ವಾತಂತ್ರ್ಯಸ್ವಾಮ್ಯಗಳ ಮಂತ್ರವನ್ನು ಪ್ರಕಟಿಸುತ್ತಿದ್ದ ಫ್ರೆಂಚರು ಕಡೆಕಡೆಗೆ ಅತಿಬಲಾಢ್ಯನೆನಿಸಿದವನ ಏಕಮಾತ್ರಪ್ರಭುತ್ವವನ್ನು ಪ್ರತಿಷ್ಠೆ ಮಾಡಲೆಳಸಿದರು. ಪ್ರಚಂಡವಾಗಿ ರೇಗಿದ ಕಲ್ಲೋಲದಲ್ಲಿ ಇತರ ದೇಶಗಳ ಜನರು ಸ್ವಾತಂತ್ರ್ಯದ ಕನಸನ್ನು ಕಂಡು ತಮ್ಮ ದೇಶಭಕ್ತಿಯನ್ನು ಬೆಳೆಸಿದರು. ಎಂತಹ ದರ್ಪಿಷ್ಠ ಶತ್ರುವಿನ ಸೈನ್ಯವನ್ನಾದರೂ ಯುದ್ಧಭೂಮಿಯಲ್ಲಿ ಎದುರುಗೊಂಡು ಧ್ವಂಸ ಮಾಡಬಲ್ಲವನಾಗಿದ್ದ ನಪೋಲಿಯನ್ ದೇಶಭಕ್ತಿಯಿಂದ ಪ್ರೇರಿತರಾದ ಜನರನ್ನು ಗೆಲ್ಲಲಾರದೆಹೋದನು. ದೃಢವಾಗಿ ದೇಶಭಕ್ತಿಯನ್ನು ಬೆಳಸಿಕೊಂಡಿದ್ದ ಬ್ರಿಟಿಷರು ಆತನೊಡನೆ ಹೆಣಗಾಡುತ್ತ ಒಂದೆರಡುವೇಳೆ ತಲ್ಲಣಿಸಿದಾಗ್ಗೂ ಎದೆಗೆಡದಿದ್ದು ಕಡೆಗೆ ಜಯಶಾಲಿಗಳಾದರು. ಇತರ ದೇಶಗಳು ಆತನ ಪಾದಾಕ್ರಾಂತವಾದಾಗಲೂ ಒಂಟಿಯಾಗಿಯೇ ಬ್ರಿಟಿಷರು ಯುದ್ಧವನ್ನು ಮುಂದರಿಸಿದರು. ಸ್ಪಾನಿಷ್ ಆರ್ಮೇಡವನ್ನೆತ್ತಿಕಳುಹಿದ ಫಿಲಿಪ್ಪನಿಗಿಂತ ನಪೋಲಿಯನ್ ಅತಿ ಬಲಿಷ್ಠನಾದವನು. ಇಂಗ್ಲಂಡಿಗೆ ನಪೋಲಿಯನ್ ಒಡ್ಡಿದ ವಿಪತ್ತು ಸಾಮಾನ್ಯವಾದುದಲ್ಲ. ಅಂತಹ ವಿಪತ್ತನ್ನು ಬ್ರಿಟಿಷರು ಐಕಮತ್ಯ ದೇಶಭಕ್ತಿಗಳಿಂದಲೂ ಸಮುದ್ರಪ್ರಾಬಲ್ಯದಿಂದಲೂ ದಾಟಿದರು. ಅವಿಶ್ರಾಂತ ಪ್ರಯತ್ನದಿಂದ ಸಂಧಾನ ನಡೆಸುತ್ತ ಇತರ ಐರೋಪ್ಯರನ್ನು ಪದೇಪದೇ ಎತ್ತಿಕಟ್ಟಿದರು. ನಪೋಲಿಯನ್ನನ ಬಲವನ್ನು ಮುರಿದ ಕೀರ್ತಿಯು ಇಂಗ್ಲಂಡಿಗೇ ಸೇರತಕ್ಕದ್ದಾಯಿತು. ಕಿರೇಪಿಟ್ ಮಂತ್ರಿ ಉಚ್ಚರಿಸಿದ ಮಾತು ಯಥಾರ್ಥವಾಯಿತು.

**ಬ್ರಿಟಿಷರ ಕೀರ್ತಿ**

ವಾಟರ್ಲೂ ಯುದ್ಧ ನಡೆದಮೇಲೆ **ಪ್ಯಾರಿಸ್** ನಗರದಲ್ಲಿ **ಕರಾರುಗಳೂ ಒಪ್ಪಂದ**

**ಷರತ್ತುಗಳು**

ಗಳೂ ನಡೆದವು. ಅವುಗಳ ಮುಖ್ಯಾಂಶಗಳನ್ನು ನೆನಪಿನಲ್ಲಿಡಬೇಕು.

1 ಮಾಲ್ಟ, ಮಾರಿಷಿಯಸ್ ಮತ್ತು ಗುಡ್‌ಹೋಪ್ ಭೂಶಿರಪ್ರಾಂತಗಳು ಗ್ರೇಟ್ ಬ್ರಿಟನ್ನಿಗೆ ಸೇರಿದವು.

2 ಆಸ್ಟ್ರಿಯಕ್ಕೆ ಸೇರಿದ್ದೆಂದು ಹಿಂದೆ ಗೊತ್ತಾಗಿದ್ದ ನೆದರ್ಲಂಡ್ಸ್ ಪ್ರದೇಶವು ಹಾಲಂಡಿಗೆ ದತ್ತವಾಯಿತು. ಹಾಲಂಡ್ ಸ್ವತಂತ್ರವಾಯಿತು.

3 ಪ್ರಷ್ಯರಾಜನಿಗೆ ಸ್ಯಾಕ್ಸನಿ ಸಂಸ್ಥಾನದ ಭಾಗವಲ್ಲದೆ ರ್ಹೈನ್‌ನದಿ ಪಕ್ಕದಲ್ಲಿ ಕೆಲವು ಕ್ಷೇತ್ರಗಳು ಸಂದವು.

4 ಆಸ್ಟ್ರಿಯದ ಹ್ಯಾಪ್ಸ್‌ಬರ್ಗ್ ರಾಜನಿಗೆ ಇಟಲಿಯ ಉತ್ತರಭಾಗವು ಸೇರಿತು.

5 ರಷ್ಯದ ಚಕ್ರವರ್ತಿಗೆ ಪೋಲಂಡಿನ ಭಾಗವು ದೊರಕಿತು.

6 ಜರ್ಮನಿಯಲ್ಲಿದ್ದ 38 ಪ್ರತ್ಯೇಕ ಸಂಸ್ಥಾನಗಳೆಲ್ಲ ಒಂದು ಮಂಡಲಿಯ ರೂಪವನ್ನು ಪಡೆದು ಆಸ್ಟ್ರಿಯದ ಪ್ರಭುವಿನ ಅಧ್ಯಕ್ಷತೆಯಲ್ಲಿ ಸೇರಿದವು.

ಸ್ಪೈನ್ ಮುಂತಾದ ರಾಜ್ಯಗಳಲ್ಲಿ ಯಥಾಪೂರ್ವದ ರಾಜವಂಶಗಳು ಸ್ಥಾಪಿತವಾದವು. 1789ರಲ್ಲಿದ್ದ ಮೇರೆಗಳಿಂದ ಕೂಡಿ ಫ್ರಾನ್ಸ್‌ರಾಜ್ಯವು ಪುನಃ ಬೋರ್ಬನ್ ವಂಶಸ್ಥ ದೊರೆಯ ಆಡಳಿತದಲ್ಲಿ ಸಿಕ್ಕಿತು.

## 5. ದೊರೆಯ ಮಂತ್ರಿಗಳು (1783–1820)

1782ರಲ್ಲಿ ಯಾರ್ಕ್‌ಟೌನ್ ನಷ್ಟವಾದಾಗ ನಾರ್ತ್ ಶ್ರೀಮಂತನು ರಾಜೀನಾಮೆ ಕೊಡುವ ಮುಷ್ಕರತೊಟ್ಟನು. ಹನ್ನೆರಡು ವರ್ಷಕಾಲ ರಾಜನ ಇಷ್ಟದಂತೆ ನಡೆಸು

**ನಾರ್ತನ ರಾಜಿನಾಮೆ**

ತ್ತಿದ್ದು ಎಲ್ಲೆಲ್ಲಿಯೂ ಕೆಟ್ಟ ಹೆಸರನ್ನು ಗಳಿಸಿ ಆತನಿಗೆ ಸಾಕಾಗಿತ್ತು. "ನಾನಲ್ಲ ನಿನ್ನ ಕೈಬಿಡುತ್ತಿರುವುದು. ನೀನೇ ನನ್ನ ಕೈಬಿಡುತ್ತಲಿದ್ದೀಯೆ" ಎನ್ನುತ್ತ 3ನೆ ಜಾರ್ಜ್ ಆತನ ರಾಜೀನಾಮೆಯನ್ನೊಪ್ಪಿಕೊಂಡನು. ಟೋರಿಪಕ್ಷದವರ ಪ್ರಾಬಲ್ಯ ಅದರಿಂದ ಮಾಯವಾಯಿತು.

ಆಗಿನ ಪಾರ್ಲಿಮೆಂಟ್ ಸಭೆಯಲ್ಲಿ ಅಸಾಧಾರಣವಾಗ್ಮಿಗಳಿದ್ದರು. ನ್ಯೂಕ್ಯಾಸಲ್, ಗ್ರೆನ್ವಿಲ್, ಚಾಥಂ ಮುಂತಾದ ಹಳಬರು ತೀರಿಹೋಗಿದ್ದರು. ಆದರೆ

ವ್ಹಿಗ್ ಪಕ್ಷದಲ್ಲಿ **ಲಾರ್ಡ್ ರಾಕಿಂಘಂ, ಲಾರ್ಡ್ ಷೆಲ್ಬರ್ನ್, ಫಾಕ್ಸ್** ಮತ್ತು **ಎಡ್ಮಂಡ್ ಬರ್ಕ್** ಎಂಬುವರು ಪ್ರಸಿದ್ಧರಾಗಿದ್ದರು. ರಾಕಿಂಘಂ

**ರಾಕಿಂಘಂ, ಷೆಲ್ಬರ್ನ್**

ಶ್ರೀಮಂತನು 1782ರಲ್ಲಿ ಮಂತ್ರಿಯಾಗಿ ಒಂದೇವರ್ಷಕಾಲ ಅಧಿಕಾರಮಾಡಿ ತೀರಿಕೊಂಡನು. ಆತರುವಾಯ ಷೆಲ್ಬರ್ನ್ (Shelburne) ಶ್ರೀಮಂತನು ಮಂತ್ರಿಯೆನಿಸಿದಾಗ ಫಾಕ್ಸ್ ಎಂಬ ವ್ಹಿಗ್ ಪಕ್ಷದವನೂ ನಾರ್ತ್ ಶ್ರೀಮಂತನೂ ಇಬ್ಬರೂ ಕರಟಕದಮನಕರಂತೆ ಜತೆಗೂಡಿ ಷೆಲ್ಬರ್ನನನ್ನು ವಿರೋಧಿಸಿ ಪದಚ್ಯುತಿಗೊಳಿಸಿ ತಾವಿಬ್ಬರೂ ಅಧಿಕಾರದಲ್ಲಿರಲು ಸಿದ್ಧರಾದರು.

**ನಾರ್ತ್ + ಫಾಕ್ಸ್**

ನಾರ್ತ್ ಮತ್ತು ಫಾಕ್ಸ್ (Fox) ಇಬ್ಬರಲ್ಲಿ ಅಧಿಕಾರಮೋಹ ಬಿಟ್ಟು ಬೇರಾವ ಅಂಶದಲ್ಲಿಯೂ ಹೊಂದಿಕೆಯಿರಲಿಲ್ಲ. ಎಂಟು ತಿಂಗಳೊಳಗಾಗಿ ಇಬ್ಬರೂ ಪಲ್ಟಿ ಹೊಡೆದರು. 1783ರಲ್ಲಿ **ಕಿರಿಯಪಿಟ್** (Pitt the younger) ಎಂದು ವಿಖ್ಯಾತನಾದಾತನು ಮಂತ್ರಿಯಾಗಿ 1801ರವರೆಗೆ ಅಧಿಕಾರ ನಡೆಸಿ ಮೂರುವರ್ಷ ಮಾತ್ರ ನಿವೃತ್ತನಾಗಿದ್ದು ಪುನಃ 1804ರಲ್ಲಿ ಅಧಿಕಾರ ವಹಿಸಿ 1806ರವರೆಗೆ ಸರ್ವಾಧಿಕಾರಿಯಂತೆ ಆಡಳಿತವನ್ನು ನಡೆಸಿದನು.

ಹಿರೇ ಪಿಟ್ ಲಾರ್ಡ್ ಚಾಥಂ ಎನಿಸಿ 1778ರಲ್ಲಿ ಮೃತನಾದಾಗ ಆತನ ಹಿರೇ ಮಗ ಲಾರ್ಡ್ ಚಾಥಂ ಎನಿಸಿಕೊಂಡನು. ಎರಡನೆ ಮಗ ವಿಲಿಯಂ ಪಿಟ್ ಎಂಬಾತನನ್ನು ತಂದೆ ಒಳ್ಳೆಯ ರೀತಿಯಲ್ಲಿ ಶಿಕ್ಷಿಸಿ ಕೇಂಬ್ರಿಡ್ಜ್ ವಿದ್ಯಾ

**ಕಿರಿಯಪಿಟ್**

ನಿಲಯದಲ್ಲಿ ಸೇರಿಸಿದನು. ಅಲ್ಲಿ ತೇರ್ಗಡೆಯಾದಮೇಲೆ ಈ ಕಿರೇಪಿಟ್ 1780ರಲ್ಲಿ ಕಾಮನ್ಸ್ ಸಭೆಗೆ ಸದಸ್ಯನಾದನು. ಸದಸ್ಯನಾದ ಅತಿಸ್ವಲ್ಪಕಾಲದಲ್ಲಿಯೇ 1782ರಲ್ಲಿ ಷೆಲ್ಬರ್ನ್ ನಾಯಕತ್ವದಲ್ಲಿ ಕೋಶಾಧ್ಯಕ್ಷನಾಗಿ ನಿಯುಕ್ತನಾದನು.

ವ್ಹಿಗ್ ಪಕ್ಷದವರಲ್ಲಿ ಐಕಮತ್ಯವೇ ಇರಲಿಲ್ಲ. ಮುಖಂಡರಾದವರು ತಮ್ಮೊಳಗೇ ಅಸೂಯೆಪಡುತ್ತಿದ್ದರು. ರಾಜಾಧಿಕಾರ ಹೆಚ್ಚಿತೆಂಬುದನ್ನು ಎಲ್ಲರೂ ಗುರುತಿಸಿಯೇನೋ ಇದ್ದರು. 1780ರಲ್ಲಿ ರಾಜಾಧಿಕಾರ ಮಿತಿಮೀರಿತೆಂದೂ ಅದನ್ನು ತಗ್ಗಿಸಬೇಕೆಂದೂ ಕಾಮನ್ಸ್ ಸಭೆಯವರೇ ನಿಶ್ಚಯಮಾಡಿದ್ದರು. ತಾವು ಮೊದಲಿಟ್ಟಿದ್ದ ಲಂಚ ಪಿಂಚನ್ನುಗಳ ಉಪಾಯವನ್ನೇ ದೊರೆಸಾಧಿಸಿ ತಮ್ಮ ಪ್ರಾಬಲ್ಯವನ್ನು ಮುರಿದಾಗ ವ್ಹಿಗ್ಗರು ಗೋಣಗುಟ್ಟಿದರು. ಬರ್ಕ್ ಸೂಚನೆ ಕೊಟ್ಟುದನ್ನು

**ರಾಜಾಧಿಕಾರ ಪ್ರಾಬಲ್ಯ**

ಒಪ್ಪಿಕೊಂಡು ಸಭೆಯವರು ಕೆಲವು ಅಲಂಕಾರದ ಹುದ್ದೆಗಳನ್ನು ನಾಶಮಾಡಿ, ಸಭೆಯ ಸದಸ್ಯರು ಕಂಟ್ರಾಕ್ಟುಗಳನ್ನು ಸ್ವೀಕರಿಸಬಾರದೆಂಬ ನಿಬಂಧನೆಯನ್ನು ಜಾರಿಗೆ ತಂದು, ಸರ್ಕಾರೀ ಉದ್ಯೋಗಸ್ಥರಿಗೆ

ವೋಟಿನ ಅಧಿಕಾರ ಕೂಡದೆಂದು ತೀರ್ಮಾನ ಮಾಡಿದರು. ಈ ಏರ್ಪಾಟುಗಳಿಂದ 1782—1783 ವರ್ಷಗಳಲ್ಲಿ ವ್ಹಿಗ್ಗರಿಗೆ ಸಭೆಯಲ್ಲಿ ಪ್ರಾಬಲ್ಯ ಪುನಃ ಪ್ರಾಪ್ತಿಯಾದಂತೆ ತೋರಿತು. ಆದರೆ ನಾಯಕರೇ ಜಗಳವಾಡುತ್ತಿದ್ದುದರಿಂದ ಮಂತ್ರಿಯಾದವನಿಗೆ ಬಹುಪಕ್ಷದ ಬೆಂಬಲವಿಲ್ಲದೆ ಹೋಗುತ್ತಿತ್ತು. 1783ರಲ್ಲಿ **ಫಾಕ್ಸ್** ಎಂಬಾತನು ಮಂತ್ರಿಯೆನಿಸಿದ್ದನು. ಆತನು ಹೊಸದಾಗಿ **ಇಂಡಿಯ ಬಿಲ್** (India Bill) ಎಂಬ ಮಸೂದೆಯನ್ನು ತಂದನು. ಆ ಮಸೂದೆಯನ್ನು ಹಾಳುಮಾಡಲು ದೊರೆ ಸರ್ವ ಪ್ರಯತ್ನವನ್ನೂ ಮಾಡಿದನು. ರಾಜಮಿತ್ರರೂ ಶ್ರೀಮಂತರೂ ಆ ಮಸೂದೆಯನ್ನು ಹಾಳುಮಾಡಿದರು. ಆಗ ಫಾಕ್ಸ್ ಮಂತ್ರಿತನದಿಂದ ನಿವೃತ್ತನಾಗಬೇಕಾಯಿತು. ದೊರೆ ಕಿರೇಪಿಟ್ಟನನ್ನು ಮುಖ್ಯಮಂತ್ರಿಯಾಗಿ ನಿಯಮಿಸಿದನು.

**ಪಿಟ್ಟನ ಸಾಮರ್ಥ್ಯ**

ವಯಸ್ಸಿನಲ್ಲಿ ಚಿಕ್ಕವನಾದರೂ ಕಿರೇಪಿಟ್ ಅತಿ ಬುದ್ಧಿಶಾಲಿಯಾಗಿದ್ದನು. ಯೋಚನಾಪರನಾಗಿದ್ದುದರಿಂದ ವಾಚಾಳಿಯಾಗಿರಲಿಲ್ಲ. ಎಷ್ಟೋ ಅಷ್ಟನ್ನೇ ಸ್ಪಷ್ಟವಾಗಿ ಮಾತನಾಡುತ್ತಿದ್ದನು. ತಂದೆಯಂತೆ ಗಂಭೀರ ಭಾಷಣಗಳನ್ನು ಮಾಡತಕ್ಕವನಲ್ಲ. ಚಾಥಮನಿಗೆ ವಿಶಾಲದೃಷ್ಟಿಯೊಂದಿಗೆ ಅಸಹನವೂ ಇತ್ತು. ಕಿರೇಪಿಟ್ಟನಿಗೆ ಆ ವಿಶಾಲದೃಷ್ಟಿಯಿರಲಿಲ್ಲ, ಆ ಅಸಹನವೂ ಇರಲಿಲ್ಲ. ಸಮರ್ಥನಾಗಿ ನಿದಾನಸ್ಥನಂತೆ ಕಾಣಿಸಿಕೊಂಡು ಕ್ರಮತಪ್ಪದೆ ಕೆಲಸವನ್ನು ನೆರವೇರಿಸಿಕೊಳ್ಳುತ್ತಿದ್ದನು. ಲೆಕ್ಕಾಚಾರದಲ್ಲಿ ಒಳ್ಳೆ ಪ್ರವೀಣ. ಎಲ್ಲಕ್ಕಿಂತಲೂ ಆತನಲ್ಲಿ ಸ್ಥೈರ್ಯಗುಣವು ದೊಡ್ಡದಾಗಿತ್ತು. ಮಂತ್ರಿಯಾದಾಗ ಆತನಿಗೆ ಸಭೆಯ ಬೆಂಬಲವಿರಲಿಲ್ಲ; ರಾಜನ ವಿಶ್ವಾಸವೊಂದನ್ನೇ ನಂಬಿ ಅಧಿಕಾರವನ್ನು ಕೈಕೊಂಡನು. ಮೂರುತಿಂಗಳ ಕಾಲ ಕಳೆದಮೇಲೆ ಸಭೆಯನ್ನು ಮುಕ್ತಾಯಮಾಡಿ ಹೊಸ ಚುನಾವಣೆಗಳನ್ನು ನಡೆಸಿದನು. ಆಗ ಸಭೆಯ ಬೆಂಬಲವೂ ದೊರಕಿತು. ತರುವಾಯ 18ವರ್ಷಕಾಲ ಯಾವ ಚ್ಯುತಿಯೂ ಇಲ್ಲದೆ ಮಂತ್ರಿಯಾಗಿದ್ದನು.

**ಟೋರಿ ಪಕ್ಷ**

ರಾಜಮಿತ್ರರ ಗುಂಪನ್ನೂ ಹಳೆಯ ಟೋರಿಗಳನ್ನೂ ಕೆಲವರು ವ್ಹಿಗ್ಗರನ್ನೂ ಕಿರೇಪಿಟ್ ಒಟ್ಟುಗೂಡಿಸಿ ಟೋರಿಪಕ್ಷವನ್ನು ಕಟ್ಟಿದನು. ಬರಬರುತ್ತ ಟೋರಿ ಪಕ್ಷವು ಪ್ರಬಲವಾಯಿತು. ಲಂಚ ಪಿಂಚನ್ನುಗಳ ಸಾಧನೆಯಿಂದಲೇ ಆ ಪ್ರಾಬಲ್ಯ ಪ್ರಾಪ್ತಿ. ಪಿಟ್ಟನಿಗೆ ಪಾರ್ಲಿಮೆಂಟ್ ಚುನಾವಣೆಯ ಕ್ಷೇತ್ರಗಳನ್ನೂ ಪದ್ಧತಿಗಳನ್ನೂ ಪರಿಷ್ಕಾರಗೊಳಿಸುವ ಉದ್ದೇಶವಿತ್ತು. ಅದಕ್ಕೆ ತನ್ನ ಅನುಯಾಯಿಗಳು ಒಪ್ಪದಿರಲು ಆ ಉದ್ದೇಶವನ್ನು ಬಿಟ್ಟುಬಿಟ್ಟನು.

ರಾಜನ ವಿಶ್ವಾಸವು ಪಿಟ್ಟನಲ್ಲಿ ಪೂರ್ಣವಾಗಿತ್ತು. ಪಿಟ್ ಮಂತ್ರಿಯಾದಮೇಲೆ ರಾಜನು ಸ್ವತಃ ಆಡಳಿತದಲ್ಲಿ ಪ್ರವೇಶಮಾಡಿ ಸ್ವೇಚ್ಛೆಯಾಗಿ ಆಜ್ಞೆ ಸಾರುವುದು ನಿಂತಿತು.

ಪಿಟ್ಟನನ್ನು ರಾಜನು ನಂಬಿದ್ದುದುಮಾತ್ರವಲ್ಲ; ಆತನನ್ನುಹೊರತು ಬೇರಾರೂ ರಾಜನಿಗೆ ವಿಶ್ವಾಸಪಾತ್ರರಾಗಿ ಕಾಣಲಿಲ್ಲ. ಪಿಟ್ಟನನ್ನು ಕೆಲಸದಿಂದ ತಪ್ಪಿಸಿದರೆ ಪುನಃ ವ್ಹಿಗ್ಗರನ್ನೇ ಕರೆಯಬೇಕಾಗಿತ್ತು. ಇದಲ್ಲದೆ ಬರಬರುತ್ತ ಜಾರ್ಜ್ ಆರೋಗ್ಯವನ್ನು ಕಳಕೊಂಡನು. 1788ರಲ್ಲಿ ಚಿತ್ತವೈಕಲ್ಯ ತೋರಿತು. ಆಗ ಚೇತರಿಸಿಕೊಂಡರೂ ಅಂಧತ್ವವು ಪ್ರಾಪ್ತಿಯಾಗಿ ಕಾಲಕ್ರಮವಾಗಿ ಹೆಚ್ಚಿತು. 1811ರ ತರುವಾಯ ದೊರೆಗೆ ಅಪಸ್ಮಾರರೋಗವು ಪ್ರಬಲವಾಗಿ ಅಂಟಿಕೊಂಡಿತು. ಆಗ ಯುವರಾಜನನ್ನು ರಾಜ ಪ್ರತಿನಿಧಿಯಾಗಿ ಪಾರ್ಲಿಮೆಂಟಿನವರು ಗೊತ್ತುಮಾಡಿ ಅಧಿಕಾರವನ್ನು ಮಂತ್ರಿಗಳಿಗೇ ಉಳಿಸಿಕೊಟ್ಟರು.

ಪಿಟ್ಟನ ಪರಿಷ್ಕರಣ

ಯುಕ್ತಿಯಿಂದ ವರ್ತಿಸಿ ಒಂದುಕಡೆ ರಾಜನ ವಿಶ್ವಾಸವನ್ನು ಕಾಪಾಡಿಕೊಳ್ಳುತ್ತ ಮತ್ತೊಂದುಕಡೆ ಸಭೆಯ ಬಹುಪಕ್ಷದ ಬೆಂಬಲವನ್ನು ರಕ್ಷಿಸಿಕೊಳ್ಳುತ್ತ ಪಿಟ್ಟನು 1783 ರಿಂದ 1793 ರವರೆಗೆ ಅನೇಕಾನೇಕ ಏರ್ಪಾಟುಗಳನ್ನು ನಡೆಸಿದನು. 1783ರಲ್ಲಿ **ಹಿಂದುಸ್ತಾನದ** ಆಡಳಿತಕ್ಕಾಗಿ ಒಂದು ಕಾನೂನನ್ನು ನಡೆಸಿ ಕಾರ್ನ್‌ವಾಲಿಸ್ ಶ್ರೀಮಂತನನ್ನು ಗವರ್ನರ್‌ಜನರಲ್ ಪದವಿಗೆ ಗೊತ್ತುಮಾಡಿದನು. 1791ರಲ್ಲಿ **ಕನಡ** ಪ್ರಾಂತದ ಆಡಳಿತಕ್ಕೂ ತಕ್ಕ ಕಾನೂನನ್ನು ರೂಪಗೊಳಿಸಿದನು. ಲೆಕ್ಕಾಚಾರದಲ್ಲಿ ಪ್ರವೀಣನಾದುದರಿಂದ ಇಂಗ್ಲಂಡಿನ **ಆಯವ್ಯಯ** ಪದ್ಧತಿಯನ್ನು ಸಂಸ್ಕಾರಗೊಳಿಸಿದನು. ಅದುವರೆಗೂ ಒಂದೊಂದು ತೆರಿಗೆಯ ಹಣವನ್ನು ಒಂದೊಂದು ವೆಚ್ಚದ ಬಾಬಿಗೆಂದು ಇಟ್ಟುಕೊಂಡು ಅವ್ಯವಸ್ಥೆಯನ್ನೇ ಅನುಭವಿಸುತ್ತಿದ್ದರು. ಪಿಟ್ಟನು ಎಲ್ಲ ತೆರಿಗೆಗಳ ಹಣವೂ ಒಟ್ಟುಗೂಡತಕ್ಕದ್ದೆಂದೂ ಒಟ್ಟುರಾಶಿಯಿಂದ ಬಾಬಿಗೆ ಗೊತ್ತಾದಂತೆ ವೆಚ್ಚಕ್ಕಾಗಿ ಹಣವನ್ನೆಳೆಯಬೇಕೆಂದೂ ಏರ್ಪಾಟು ನಡೆಸಿದನು. ದೇಶದ ವ್ಯಾಪಾರೋದ್ಯೋಗಗಳ ಅಭಿವೃದ್ಧಿಗಾಗಿ ಸುಂಕಗಳನ್ನು ತೆಗೆದುಬಿಡುವ ಇಷ್ಟವುಳ್ಳವನಾಗಿದ್ದನು. ಆಮದಿನ ಸುಂಕಗಳು ಆತನ ಏರ್ಪಾಟಿನಿಂದ ಕಡಿಮೆಯಾದವು. ಕಳ್ಳ ವ್ಯಾಪಾರಕ್ಕೆ ಲಾಭವು ಕಿರಿದಾಯಿತು. ಕಾಲಕ್ರಮದಲ್ಲಿ ವ್ಯಾಪಾರವು ಹೆಚ್ಚಿ ಸರ್ಕಾರಕ್ಕೆ **ಸುಂಕದ ಆದಾಯ** ಹೆಚ್ಚಿತು.

ನಿರಾತಂಕವ್ಯಾಪಾರತತ್ತ್ವ(Free Trade)ವನ್ನು ಪಿಟ್ ಮೆಚ್ಚಿದ್ದನು. 1786ರಲ್ಲಿ ಫ್ರಾನ್ಸಿನೊಡನೆ ಸಂಧಾನ ನಡೆಸಿ ಆ ದೇಶದಲ್ಲಿ ಇಂಗ್ಲಿಷ್ ಸಾಮಾನಿನಮೇಲಿನ ಸುಂಕವನ್ನು ತಗ್ಗಿಸಿ ಅದಕ್ಕೆ ಸಮನಾಗಿ ಇಂಗ್ಲಂಡಿನಲ್ಲಿ ಫ್ರೆಂಚ್ ಮದ್ಯಗಳಮೇಲೂ ರೇಷ್ಮೆಗಳ ಮೇಲೂ ಇದ್ದ ಸುಂಕಗಳನ್ನು ಕಡಿಮೆ ಮಾಡಿದನು. 1788ರಲ್ಲಿ ಜಾರ್ಜ್‌ದೊರೆಗೆ ಸ್ಮೃತಿಭ್ರಂಶವು ಬಲವಾಗಿ ಹಿಡಿಯಿತು. ಆತನ ಪ್ರತಿನಿಧಿಯನ್ನು ಪಾರ್ಲಿಮೆಂಟಿನವರೇ ಗೊತ್ತುಮಾಡತಕ್ಕುದೆಂದು ಪಿಟ್ ಅಭಿಪ್ರಾಯಪಟ್ಟನು. ಪಾರ್ಲಿಮೆಂಟಿನವರ ಅಧಿಕಾರಸ್ಥಾಪನೆಗೆ ಅದರಿಂದ ಸಹಾಯವಾಯಿತು.

1793 ರವರೆಗೆ ಸಮಾಧಾನಸ್ಥಿತಿಯೇ ಇತ್ತು. ಆ ವರ್ಷ ಯುದ್ಧ ಮೊದಲಾಯಿತು. ಒಳನಾಡಿನ ಆಡಳಿತದಲ್ಲಿ ಪಿಟ್ ನಡೆಸಬಹುದಾಗಿದ್ದ ಸುಧಾರಣೆಗಳೆಲ್ಲ ನಿಂತುಹೋದವು. ತಂದೆಯಂತೆ ಕಿರೇಪಿಟ್ ಯುದ್ಧವನ್ನು ಮಹೋತ್ಸಾಹದಿಂದ ನಡೆಸತಕ್ಕ ಮಂತ್ರಿಯಲ್ಲ. ಆದರೆ ಅತಿಶಯ ಧೈರ್ಯವುಳ್ಳವನು. ಫ್ರಾನ್ಸಿನೊಡನೆ ಯುದ್ಧ ನಡೆಸುವುದರಲ್ಲಿ ತಂದೆ ಹಿಡಿದಿದ್ದ ಉಪಾಯಗಳನ್ನೇ ಹಿಡಿದನು. ಯೂರೋಪಿನಲ್ಲಿ ಫ್ರೆಂಚರ ಶತ್ರುಗಳಿಗೆ ಆದಷ್ಟು ಸಹಾಯ ನೀಡುವುದು, ಸಮುದ್ರದಮೇಲೆ ಇಂಗ್ಲಿಷ್ ಪ್ರಾಬಲ್ಯವನ್ನು ಸ್ಥಾಪಿಸುವುದು, ದೂರಕ್ಷೇತ್ರಗಳನ್ನು ಆಕ್ರಮಿಸುವುದು ಮುಖ್ಯ. ಆದರೆ ಮಹಾಪಲ್ಲಟ ಸಂಬಂಧವಾಗಿ ಕೆರಳಿದ ಯುದ್ಧವೇಳೆಯಲ್ಲಿ ಇಂಗ್ಲಂಡಿನಲ್ಲಿಯೂ ಘನವಾದ ಆ ತತ್ತ್ವಗಳನ್ನು ಮೆಚ್ಚಿದವರನೇಕರಿದ್ದರು. ಫ್ರಾನ್ಸಿನಲ್ಲಿ ರಾಜವಧೆಯಾದಮೇಲೆ ಇಂಗ್ಲಂಡಿನ ಬಹುಭಾಗದವರು ಹಾಹಾಕಾರಪಟ್ಟರು. ಇಂಗ್ಲಂಡಿನಲ್ಲಿ ಯಾವ ಗಲಾಟೆಗಳಿಗೂ ಅವಕಾಶವಾಗದಂತೆ ಪಿಟ್ ಅಸಾಧಾರಣವಾದ ಅಧಿಕಾರವನ್ನು ಕಾರ್ಯಾಂಗದವರಿಗೆ ಕೊಡಿಸಬೇಕಾಯಿತು. ಹೆಬಿಯಸ್‌ಕೋರ್ಪಸ್ ಕಾನೂನನ್ನು ವರ್ಷೇವರ್ಷೇ ಮೂಲೆಗಿಡುವುದಕ್ಕೂ ರಾಜಕೀಯ ಸಭೆಗಳನ್ನು ಬಲಪ್ರಯೋಗದಿಂದ ನಿಲ್ಲಿಸುವುದಕ್ಕೂ ರಾಜಕೀಯ ಸಮಾಜಗಳನ್ನು ಅಡಗಿಸುವುದಕ್ಕೂ ತಕ್ಕ ನಿಬಂಧನೆಗಳನ್ನು ಪಾರ್ಲಿಮೆಂಟಿನಲ್ಲಿ ಪಿಟ್ ಮಾಡಿಸಿಕೊಂಡನು. ಇಂಗ್ಲಂಡಿನಲ್ಲಿ ಘೋರ ಕೃತ್ಯಗಳು ನಡೆಯದಂತೆ ಬಂದೋಬಸ್ತಿಗಾಗಿ ನಡೆಸಿದ ಈ ನಿಬಂಧನೆಗಳ ಏರ್ಪಾಟಿನಲ್ಲಿ ಪಿಟ್ಟನಿಗೆ ಎಲ್ಲರೂ ಬೆಂಬಲ ಕೊಟ್ಟರು. ವಿರೋಧಿಗಳಾಗಿದ್ದ ವ್ಹಿಗ್ ಪಕ್ಷದ ಬರ್ಕ್ ಮುಂತಾದವರು ಪಿಟ್ಟನ ಮಾರ್ಗವನ್ನೊಪ್ಪಿದರು. ವ್ಹಿಗ್ಗರಲ್ಲಿ ವೀರಪಕ್ಷದವನಾದ ಫಾಕ್ಸ್ ಮಾತ್ರ ಒಪ್ಪಲಿಲ್ಲ. ಆದರೆ ಆತನ ಗುಂಪು ಸಣ್ಣದಾಗಿಯೇ ಇತ್ತು.

**ಯುದ್ಧನೀತಿ**

**ಅತ್ಯಧಿಕಾರ ವಹನ**

1793 ರಿಂದ 1801 ರವರೆಗೆ ಯುದ್ಧ ರೇಗಿತು. ಆ ಕಾಲದಲ್ಲಿ ಇಂಗ್ಲಂಡಿನ ನಾಯಕನಾಗಿ ಆಡಳಿತವನ್ನು ನಡೆಸಿದ ಪಿಟ್ ಹಣವನ್ನು ಹೊಂದಿಸಲು ಅನೇಕ ಉಪಾಯಗಳನ್ನು ಅವಲಂಬಿಸಬೇಕಾಯಿತು. ತೆರಿಗೆಗಳು ಹೆಚ್ಚುಹೆಚ್ಚಾಗುತ್ತಲೇ ಇರಬೇಕಾಯಿತು. ರಾಷ್ಟ್ರೀಯ ಋಣವೆಂಬುದು ಬೆಟ್ಟದಷ್ಟು ಏರಿಹೋಯಿತು. ಆದರೂ ಪಿಟ್ ಭಾರಿ ಹೊರೆಯನ್ನು ಹೊತ್ತನು. ವಿಪತ್ಕಾಲದಲ್ಲಿ ಇಂಗ್ಲಂಡಿನ ಪ್ರಾಣವನ್ನೂ ಮೇಲ್ಮೆಯನ್ನೂ ಕಾಪಾಡಿದನು. ಯುದ್ಧದ ಏರ್ಪಾಟುಗಳಲ್ಲಿಯೂ ಐರ್ಲಂಡಿನ ಆಡಳಿತದಲ್ಲಿಯೂ ಆತನು ನಡೆಸಿದುದೆಲ್ಲವೂ ತೃಪ್ತಿಕಾರಕವಾಗಿರಲಿಲ್ಲ. ಐರ್ಲಂಡಿನ ಸಂಬಂಧವಾಗಿ ತನ್ನ ವಚನವನ್ನು ಳಿಸಿಕೊಳ್ಳಲಾರದಂತೆ ನೆರವೇರಲು ಪಿಟ್ 1801ರಲ್ಲಿ ರಾಜೀನಾಮೆ ಕೊಟ್ಟನು. 1783 ರಿಂದ 1801 ರವರೆಗೆ ಅವಿರತನಾಗಿ ಮಂತ್ರಿಕೆಲಸ

**ರಾಜೀನಾಮೆ (1801)**

ಮಾಡಿ ನಿವೃತ್ತನಾದಾಗ ಆತನ ಅನುಯಾಯಿ **ಆಡಿಂಗ್ಟನ್**(Addington)ಎಂಬಾತನು ಮಂತ್ರಿಯಾದನು.

ಸಮಯಕ್ಕೆ ತಕ್ಕ ಸಾಮರ್ಥ್ಯವಿಲ್ಲದಿದ್ದ ಆಡಿಂಗ್ಟನ್ ಸ್ಥಿರವಾಗಿ ಪದವಿಯನ್ನನುಭವಿಸಲಾರದೆ ಹೋದನು. 1802ರಲ್ಲಿ ಅಮಿಯನ್ಸ್ ಕರಾರನ್ನು ಆತನೇ ನಡೆಸಿದನು. 1803ರಲ್ಲಿ ಪುನಃ ನಪೋಲಿಯನ್ನೊಂದಿಗೆ ಜಗಳ ರೇಗಿದಾಗ ಎಲ್ಲರೂ ಪಿಟ್ಟನನ್ನೇ ಬಯಸಿದರು. ಅಧಿಕಾರ ವಹಿಸಿದಕೂಡಲೆ ಪಿಟ್ಟನು ಇಂಗ್ಲಂಡಿನ ರಕ್ಷಣೆಗೆ ಬೇಕಾದುದೆಲ್ಲವನ್ನೂ ಏರ್ಪಡಿಸಿ ಮೂರನೆ ಮಿತ್ರಮಂಡಲಿಯನ್ನು ಕಟ್ಟಿದನು. ಟ್ರಫಾಲ್ಗರ್ ಕದನದ ಜಯ ಪಿಟ್ಟನ ಅಧಿಕಾರಕಾಲದಲ್ಲಿಯೇ ಒದಗಿತು. ಆದರೆ ಸ್ವಲ್ಪಕಾಲದಲ್ಲಿಯೇ ಔಸ್ಟರ್ಲಿಟ್ಸ್ ಸೋಲಿನ ಸುದ್ದಿ ಬಂತು. ಅದೇವೇಳೆಗೆ ಆತನ ಸ್ನೇಹಿತನಾದ **ಡಂಡಾಸ್** (Dundas) ಎಂಬಾತನು ಪಾರ್ಲಿಮೆಂಟಿನವರ ಆಗ್ರಹಕ್ಕೆ ಸಿಕ್ಕಿ ಇಂಪೀಚ್ಮೆಂಟಿಗೆ ಗುರಿಯಾದನು. ಈ ಎರಡು ಸಂಗತಿಗಳು ಪಿಟ್ಟನಿಗೆ ಸಂಕಟವನ್ನು ಕೊಟ್ಟವು. 1806ರಲ್ಲಿ ಅಸ್ವಸ್ಥತೆಯಿಂದಲೂ ಸಂಕಟದಿಂದಲೂ ನರಳಿ ಪಿಟ್ಟನು ಪ್ರಾಣಬಿಟ್ಟನು.

**ಮರಣ**

ಇಂಗ್ಲಂಡಿನ ಮಂತ್ರಿಶ್ರೇಷ್ಠರಲ್ಲಿ ಪಿಟ್ಟನಿಗೆ ಅತ್ಯುತ್ತಮವಾದ ಪದವಿ ಸಲ್ಲುವುದು. ಆತನ ಕೆಲಸದ ಪ್ರಭಾವವು ಒಳಾಡಳಿತದಲ್ಲಿಮಾತ್ರವಲ್ಲದೆ ಇಂಡಿಯ, ಐರ್ಲಂಡ್, ಕನಡ ಪ್ರಾಂತಗಳ ಆಡಳಿತದಲ್ಲಿ ಕಾಣಿಸಿಕೊಂಡಿತು. ದೇಶಕ್ಕೆ ಘೋರ ವಿಪತ್ತೊದಗಿದ ಕಾಲದಲ್ಲಿ ಅತಿ ಧೈರ್ಯಶಾಲಿ ಫ್ರಾನ್ಸಿನೊಡನೆ ಯುದ್ಧ ನಡೆಸುತ್ತ ಪದೇಪದೇ ಸೋತವರನ್ನು ಪುನಃಪುನಃ ಎತ್ತಿಹಿಡಿದು ಒಂದನೆ ಎರಡನೆ ಮೂರನೆ ಮಿತ್ರಮಂಡಲಿಗಳನ್ನು ರಚಿಸಿದನು. ಸಮಸ್ತ ಯೂರೋಪನ್ನು ನಡುಗಿಸಿದಂತಹ ಫ್ರೆಂಚರು ಪಿಟ್ಟನನ್ನು ಅಡಗಿಸಲಾರದೆ ಆತನನ್ನು ತಮ್ಮ ಪರಮ ಶತ್ರುವೆಂದೆಣಿಸಿದುದೇ ಆತನ ಸಾಮರ್ಥ್ಯಕ್ಕೆ ಕಾಣಿಕೆ. "ಸ್ವಂತ ಪ್ರಯತ್ನದಿಂದ ಇಂಗ್ಲಂಡ್ ಆತ್ಮರಕ್ಷಣೆಯನ್ನು ಮಾಡಿಕೊಂಡು ಯೂರೋಪಿಗೆ ಮಾರ್ಗದರ್ಶಕವಾಗಿದೆ" ಎಂದು ಆತನು ಹೇಳಿದ್ದು ಯಥಾರ್ಥವಾಯಿತು. ಸ್ಪಾನಿಷ್ ಆರ್ಮೇಡ ಕಾಲದಲ್ಲಿ ಒದಗಿದ್ದ ವಿಪತ್ತಿಗಿಂತಹ ಹತ್ತರಷ್ಟು ಘೋರವಾದ ವಿಪತ್ತನ್ನು ನಪೋಲಿಯನ್ ಒಡ್ಡಿದಾಗ ನೆಲ್ಸನ್ ವೆಲ್ಲಿಂಗ್ಟನ್ನರು ಇಂಗ್ಲಂಡಿಗೆ ವೀರಪುರುಷರೆನಿಸಿದ ರೀತಿಯಲ್ಲಿಯೇ ಪಿಟ್ಟನೂ ವೀರಪುರುಷನೆನಿಸಿ ಕೀರ್ತಿಯಲ್ಲಿ ಅವರಿಗೆ ಸಮಾನನಾದನು.

**ಪಿಟ್ಟನ ಕೀರ್ತಿ**

ಪಿಟ್ ತೀರಿಕೊಂಡ ತರುವಾಯ **ಎಲ್ಲ ಪಕ್ಷಗಳ ಜಾಣರೂ** (All Talents) ಸೇರಿ ಮಂತ್ರಿಮಂಡಲಿಯನ್ನು ಕಟ್ಟಿದರು. **ಫಾಕ್ಸ್** ಎಂಬ ವ್ಹಿಗ್ ನಾಯಕನು ಮಾತ್ರ ನಪೋಲಿಯನ್ನೊಡನೆ ಸಂಧಿಪ್ರಯತ್ನ ಮಾಡಿ ವಿಫಲನಾಗಿ ಸ್ವಲ್ಪಕಾಲದಲ್ಲಿಯೇ

ತೀರಿಕೊಂಡನು. ತೀರಿಕೊಳ್ಳುವುದರೊಳಗಾಗಿ ಗುಲಾಮರನ್ನು ಮಾರುವ ವ್ಯಾಪಾರವನ್ನು ನಿಲ್ಲಿಸಿದ ಕಾನೂನನ್ನು ಮಾಡಿಸಿದನು (1806). ತರುವಾಯ ಮಂತ್ರಿಗಳೆನಿಸಿದವರು ಕ್ಯಾಥಲಿಕ್ಕರಿಗೆ ಮತಸ್ವಾತಂತ್ರ್ಯ ಕೊಡಿಸುವ ಯತ್ನದಲ್ಲಿ ದೊರೆಯ ವಿರೋಧವನ್ನು ಕಂಡು ನಿವೃತ್ತರಾದರು. ಆಗ ಟೋರಿ ಪಕ್ಷದ ಶ್ರೀಮಂತರುಗಳಲ್ಲಿ ಮುಖಂಡರಾದವರು ಮಂತ್ರಿಪದವಿಯನ್ನು ವಹಿಸಿದರು. 1807ರಲ್ಲಿ **ಪೋರ್ಟ್ಲೆಂಡಿನ ಡ್ಯೂಕನೂ** (Duke of Portland) 1809ರಲ್ಲಿ **ಪರ್ಸೆವಲ್** (Perceval) ಎಂಬಾತನೂ ಮುಖ್ಯ ಮಂತ್ರಿಗಳಾಗಿ ಸ್ವಲ್ಪಕಾಲ ಆಡಳಿತ ನಡೆಸಿದರು. 1812ರಲ್ಲಿ **ಲಿವರ್ಪೂಲ್ ಶ್ರೀಮಂತ** (Lord Liverpool)ನೆಂಬಾತನು ಮುಖ್ಯಮಂತ್ರಿಯಾಗಿ ಹದಿನೈದುವರ್ಷಕಾಲ ಅಂದರೆ ಮೂರನೆ ಜಾರ್ಜ್‌ದೊರೆ ತೀರಿಹೋದತರುವಾಯುವೂ ಅಧಿಕಾರ ನಡೆಸಿದನು.

**ಟೋರಿ ಪ್ರಾಬಲ್ಯ**

ಮೂರನೆ ಜಾರ್ಜ್‌ದೊರೆಯಕಾಲ ಅರುವತ್ತು ವರ್ಷ. ಈ ದೀರ್ಘಕಾಲದಲ್ಲಿ ಮಂತ್ರಿಗಳೆಷ್ಟು ಮಂದಿಯೋ ಆದರು. ದೊರೆಯಾದರೋ ವ್ಹಿಗ್ಗರ ಬಲವನ್ನು ಮುರಿದು ರಾಜಾಧಿಕಾರವನ್ನು ಹೆಚ್ಚಿಸಿಕೊಂಡು ಮಂತ್ರಿಗಳನ್ನು ಬೊಂಬೆಗಳಂತೆ ಕುಣಿಸಿದನು. ಅಸ್ವಸ್ಥತೆ, ಅಪಸ್ಮಾರ, ಅಂಧತೆಗಳು ದೊರೆಗೆ ತಗಲಿದಾಗ ಮಂತ್ರಿಗಳಿಗೆ ತಕ್ಕಮಟ್ಟಿನ ಅಧಿಕಾರಬಂತು. ಟೋರಿಪಕ್ಷವು ಪ್ರಬಲವಾಯಿತು. ಫ್ರಾನ್ಸಿನ ಮಹಾಪಲ್ಲಟವೂ ನಪೋಲಿಯನ್ನನ ಸಾಹಸವೂ ಟೋರಿಪಕ್ಷಕ್ಕೆ ಜನರ ವಿಶ್ವಾಸಬಲವನ್ನು ಸಂಪಾದಿಸಿಕೊಟ್ಟವು.

## 6. ಐರ್ಲೆಂಡ್ (1691—1800)

ಮೂರನೆ ಜಾರ್ಜ್‌ದೊರೆಯ ಕಾಲದಲ್ಲಿ ಐರ್ಲೆಂಡಿನಲ್ಲಿ ಮುಖ್ಯವಾದ ಘಟನೆಗಳು ನಡೆದವು. ಅವುಗಳನ್ನು ಚನ್ನಾಗಿ ತಿಳಿಯಲು ಆ ದ್ವೀಪದ ಹಿಂದಿನ ವೃತ್ತಾಂತದ ಜ್ಞಾಪಕಬೇಕು.

2ನೆ ಹೆನ್ರಿ ದೊರೆಯಕಾಲದಿಂದ ಇಂಗ್ಲಿಷ್ ಪ್ರಭುಗಳು ತಾವು ಐರ್ಲೆಂಡಿಗೂ ಒಡೆಯ (Lord of Ireland) ರೆಂದು ಬಿರುದನ್ನಿಟ್ಟುಕೊಂಡಿದ್ದಾಗ್ಗೂ ಎಲಿಸಬೆತ್ ರಾಣಿಯ ಕಾಲದವರೆಗೂ ಇಂಗ್ಲಿಷರಿಗೆ ಐರಿಷರು ಅಧೀನರಾಗಿರಲಿಲ್ಲ. ಐರಿಷರ ಜಾತಿ, ಭಾಷೆ, ಆಚಾರಸಂಪ್ರದಾಯಗಳು ಬೇರೆ; ಇಂಗ್ಲಿಷರದೇ ಬೇರೆ. ಪ್ರಾಟೆಸ್ಟೆಂಟ್‌ಮತ ತಲೆಯೆತ್ತಿ ಅಲ್ಲಲ್ಲಿ ವ್ಯಾಪ್ತಿಪಡೆದಾಗ ಐರಿಷರು ರೋಮನ್ ಕ್ಯಾಥಲಿಕ್ಕರಾಗಿಯೇ ಇದ್ದರು. ಎಲಿಸಬೆತ್‌ಕಾಲದ ಮೂರು ದಂಗೆಗಳ ಪರಿಣಾಮವಾಗಿ ಅನೇಕಾನೇಕ ರಾಕ್ಷಸಕೃತ್ಯಗಳು ನಡೆದವಷ್ಟೆ. ಆ ತರುವಾಯ ಸ್ಟೂಯರ್ಟ್ ರಾಜರ ಕಾಲದಲ್ಲಿ ಇಂಗ್ಲಿಷರು ಐರಿಷರನ್ನು ಹಗೆಗಳಂತೆ ಕಾಣುತ್ತ ಪುನಃ ಪುನಃ

ಅವರನ್ನಡಗಿಸಿದರು. ಹಿರೇಜೇಮ್ಸ್ ಕಾಲದಲ್ಲಿ ಐರಿಷರ ಭೂಮಿಗಳನ್ನು ಕಿತ್ತು ಕೊಳ್ಳಲಾರಂಭವಾಯಿತು. 1607ರಲ್ಲಿ ಅಲ್‌ಸ್ಟರ್(Ulster)

**ಹಿಂದಿನ ವೃತ್ತಾಂತ**

ಎಂಬ ಉತ್ತರಭಾಗದ ಜಮೀನುಗಳಲ್ಲಿ ಇಂಗ್ಲಿಷ್ ಯಜಮಾನರು ಸಿದ್ಧರಾದರು. ಹಿರೇಚಾರ್ಲ್ಸ್‌ನ ಕಾಲದಲ್ಲಿ ಕನ್ನಾಟ್ (Connaught) ಎಂಬ ಪಶ್ಚಿಮಭಾಗದ ಭೂಸ್ಥಿತಿಗಳಿಗೂ ಅದೇ ಗತಿಯಾಯಿತು. ಐರಿಷರಿಗೆ ಭೂಮಿಗಳು ನಷ್ಟವಾದುದಲ್ಲದೆ ಹಿಂದಿನಿಂದ ಬಂದಿದ್ದ ಕೈಗಾರಿಕೆಗಳೂ ನಷ್ಟವಾದುವು. ಹಿರಿಯರ ಕಾಲದಿಂದ ತಮ್ಮ ಸ್ವಂತವೆನಿಸಿದ್ದ ಹೊಲಗಳಲ್ಲಿ ದಾಸ್ಯವನ್ನು ಸ್ವೀಕರಿಸಬೇಕಾಗಿ ಬಂತು. ಮತಭೇದದಿಂದ ಹುಟ್ಟಿದ ಘೋರ ಹಿಂಸೆ ಬೇರೆ. ಹೀಗಿದ್ದುದರಿಂದ 1641 ರಲ್ಲಿ ಐರಿಷರೆಲ್ಲರೂ ದಂಗೆಯೆದ್ದರು. ಆಗ ಲಾಂಗ್ ಪಾರ್ಲಿಮೆಂಟ್ ಸಭೆಯುವರು ದಂಗೆಯನ್ನಡಗಿಸುವ ಪ್ರಯತ್ನದಲ್ಲಿ ಕ್ರೂರವಾದ ಶಾಸನಗಳನ್ನು ರಚಿಸಿದರು. ಆ ಶಾಸನಗಳಿಗನುಸಾರವಾಗಿ ಕ್ಯಾಥಲಿಕ್ ಮತಸ್ಥರ ದಂಡನೆಯೂ ಐರಿಷರ ಭೂಮಿಗಳ ಅಪಹಾರವೂ ಹೆಚ್ಚಿತು. ಅಂತರ್ಯುದ್ಧ ರೇಗಿದಾಗ ಐರಿಷರು ರಾಜಪಕ್ಷವನ್ನು ಸೇರಿಕೊಂಡರು; ಅದರ ಪರಿಣಾಮವಾಗಿ ಕ್ರಾಮ್ವೆಲ್ ಐರ್ಲಂಡಿನಲ್ಲಿ ಸೇನಾಸಮೇತನಾಗಿ ಬಂದು ಐರಿಷರನ್ನು ಬಲಿಯಿಟ್ಟನು. 1652 ರ ವೇಳೆಗೆ ಐರಿಷರ ಶಕ್ತಿಯೆಲ್ಲ ಅಡಗಿಹೋಯಿತು. ಹತ್ತು ವರ್ಷಗಳ ಹೋರಾಟದಲ್ಲಿ ಐರಿಷ್‌ಜನರು ಮೂರರಲ್ಲೊಂದು ಪಾಲಿನಷ್ಟು ಪ್ರಾಣಗಳನ್ನು ತೆತ್ತಿದ್ದರು. ವ್ಯವಸಾಯ ನಿಂತುಹೋಗಿ ಭೂಮಿಗಳೆಲ್ಲ ಪಾಳುಬಿದ್ದಿದ್ದವು. ಐರಿಷ್ ಜನರು ಪಟ್ಟ ಸಂಕಟಗಳಿಗೆ ಮಿತಿಯೇ ಇಲ್ಲವೆನ್ನುವಂತಾಯಿತು. ಅನೇಕರು ಗತಿಗೆಟ್ಟು ದೇಶಾಂತರ ಹೊರಟರು. ಆಗ ಐರಿಷ್‌ಭೂಮಿಗಳು ಕ್ರಾಮ್ವೆಲ್ಲನ ಸೈನಿಕರಿಗೆ ದೊರೆತವು.

ರಾಜತ್ವ ಪುನಃ ಸ್ಥಾಪನೆಯಾದಾಗ ಕಿರೇಚಾರ್ಲ್ಸ್‌ನ ದೊರೆಯು ಐರ್ಲಂಡಿನ ಭೂಮಿಗಳ ಯಜಮಾನ್ಯದ ವಿಚಾರದಲ್ಲಿ ನ್ಯಾಯಮಾಡುವುದಾಗಿ ವಾಗ್ದಾನಮಾಡಿದನು. ನ್ಯಾಯ ನೆಲೆಗೊಳಿಸಲಾಗಲೇ ಇಲ್ಲ. ಹಾಗೂ ಹೀಗೂ ವಿಚಾರಣೆಗಳಾದ ತರುವಾಯ ಐರ್ಲಂಡಿನ ಭೂಮಿಗಳಲ್ಲಿ ಮೂರನೆಯೊಂದು ಪಾಲು ಮಾತ್ರ ಐರಿಷರಿಗೆ ಉಳಿಯಿತು. ಉಳಿದ ಎರಡು ಪಾಲು ಪ್ರಾಟೆಸ್ಟೆಂಟ್ ಮತಸ್ಥ ಇಂಗ್ಲಿಷರದೆಂದು ಸ್ಥಿರವಾಯಿತು. 2ನೆ ಜೇಮ್ಸ್ ದೊರೆತನಕ್ಕೆ ಬಂದಾಗ ಐರಿಷರು ಆ ಕ್ಯಾಥಲಿಕ್ ದೊರೆಯಲ್ಲಿ ಆಸೆಬೆಳೆಸಿಕೊಂಡಿದ್ದರು. ಆದರೆ ಆ ಹತಭಾಗ್ಯದೊರೆ ಒಂದು ಕದನದ ಸೋಲಿಗೇ ಎದೆಗೆಟ್ಟು ಐರಿಷರನ್ನು ತೊರೆದು ಫ್ರಾನ್ಸಿಗೋಡಿದನು. ತಮ್ಮ ಚೈತನ್ಯಮೀರಿ ಆತನ ಪರವಾಗಿ ಯುದ್ಧಮಾಡುತ್ತಿದ್ದ ಐರಿಷರು **ಲಿಮೆರಿಕ್** (Limerick) ಪಟ್ಟಣದಲ್ಲಿ ಮುತ್ತಿಗೆಗೆ ಸಿಕ್ಕಿ ಸಹಾಯವನ್ನೆದುರುನೋಡುತ್ತಿದ್ದು ಕಡೆಗೆ ಗತ್ಯಂತರವಿಲ್ಲದೆ

**ಲಿಮೆರಿಕ್ ಷರತ್ತುಗಳು**

1691ರಲ್ಲಿ ಎರಡು ಷರತ್ತುಗಳ ಮೇಲೆ ಶರಣಾಗತರಾದರು. ಅವುಗಳಲ್ಲೊಂದರ ಪ್ರಕಾರ ಫ್ರಾನ್ಸಿಗೆ ಅನೇಕ ಐರಿಷರು ಹೊರಟರು. ಎರಡನೆ ಷರತ್ತಿನಂತೆ ಐರಿಷ್ ಕ್ಯಾಥಲಿಕ್ಕರಿಗೆ ಕಿರೇಚಾಲ್ಸ್ರ್ ದೊರೆಯಕಾಲದಲ್ಲಿದ್ದಷ್ಟು ಮಾತ್ರವಾದರೂ ಅವಕಾಶ ವನ್ನು ಕಲ್ಪಿಸಿಕೊಡಬೇಕಾಗಿತ್ತು. ಹದಿನಾಲ್ಕನೆ ಲೂಯಿಯೊಡನೆ ದೊಡ್ಡ ಹೋರಾಟ ವನ್ನು ಎದುರುನೋಡುತ್ತಿದ್ದ 3ನೆ ವಿಲಿಯಂ ದೊರೆ ಧಾರಾಳತನವನ್ನು ವಹಿಸಿ ಆ **ಎರಡು ಷರತ್ತು**ಗಳನ್ನೂ ಒಪ್ಪಿಕೊಂಡನು. ರೋಮನ್‌ಕ್ಯಾಥಲಿಕ್ ಮತದ ಐರಿ ಷರು ಆ ಷರತ್ತುಗಳಿಗೆ ಲೋಪವಿಲ್ಲದೆ ಮುಂದೆ ನಡೆಯುವುದೆಂದು ನಂಬಿದರು. ಆ ನಂಬಿಕೆಯು ಸ್ವಲ್ಪಕಾಲದಲ್ಲಿಯೇ ಶೂನ್ಯವಾಯಿತು.

ಆರ್ಥಿಕಸ್ಥಿತಿಯಲ್ಲಿ ಗತಿಗೆಟ್ಟ ಐರಿಷರಿಗೆ ಆಡಳಿತದಲ್ಲಿಯಾದರೂ ಸಮಾಧಾನ ವಿದ್ದಿತೇ ಎಂದರೆ ಅದೂ ಇಲ್ಲ. ಐರ್ಲೆಂಡ್ ಇಂಗ್ಲಂಡಿಗೆ ಹಿತ್ತಿಲಂತಿತ್ತು. ಅಲ್ಲಿಗೆ ಅಧಿಕಾರಿಗಳಾದವರೆಲ್ಲರೂ ಇಂಗ್ಲಿಷ್ ಜಾತಿಯವರು ಮತ್ತು ಪ್ರಾಟೆಸ್ಟೆಂಟರು. ಇಂಗ್ಲಿಷ್ ದೊರೆಯೋ ಮಂತ್ರಿಗಳೋ ಇಷ್ಟಪಟ್ಟಂತೆ ಕಾರ್ಯಭಾರನಿರ್ವಾಹ. ಡಬ್ಲಿನ್ ರಾಜಧಾನಿಯಲ್ಲಿ ಇಂಗ್ಲಿಷ್ ರಾಜಪ್ರತಿನಿಧಿಯೂ ಸಹಾಯ ಕರೂ ಸೇರಿ ಆಳುತ್ತಿದ್ದರು. ಪಾರ್ಲಿಮೆಂಟೆಂಬುದೊಂದಿತ್ತು. ಆ ಸಭೆಯಲ್ಲಿ ರೋಮನ್‌ಕ್ಯಾಥಲಿಕ್ಕರಿಗೆ ಪ್ರವೇಶವೇ ಇರಲಿಲ್ಲ. ಸಭಿಕರೆಲ್ಲರೂ ಪ್ರಾಟೆಸ್ಟೆಂಟರು. ಐರ್ಲೆಂಡಿನಲ್ಲಿ ನೆಲೆಸಿದ್ದ ಇಂಗ್ಲಿಷ್ ಪ್ರಾಟೆಸ್ಟೆಂಟರ ಕೂಟ ಅದು. ತಮಗೆ ತೋರಿದಂತೆ ಶಾಸನಗಳನ್ನು ರಚಿಸುವುದಕ್ಕೆ ಅವರಿಗೂ ಅವಕಾಶವಿರಲಿಲ್ಲ. ಏಕಂದರೆ ಡಬ್ಲಿನ್ ಪಾರ್ಲಿಮೆಂಟಿನಲ್ಲಿ ಪಾಯ್ನಿಂಗ್ಸ್ ನಿಬಂಧನೆ ಗಳ ಪ್ರಕಾರ ಯಾವ ಕಾನೂನಾಗಬೇಕಾದರೂ ಇಂಗ್ಲಿಷ್ ಮಂತ್ರಿಗಳ ಒಪ್ಪಿಗೆ ಯನ್ನು ಮೊದಲೇ ಪಡೆಯಬೇಕಾಗಿತ್ತು. ಅಲ್ಲದೆ ಲಂಡನ್ ಪಾರ್ಲಿಮೆಂಟಿನವರು ಡಬ್ಲಿನ್ ಪಾರ್ಲಿಮೆಂಟಿನವರನ್ನು ಕೇಳದೆ ಹೇಳದೆ ತಮಗೆ ತೋರಿದಂತೆ ಐರ್ಲೆಂಡಿನ ಆಡಳಿತಕ್ಕಾಗಿ ಕಾನೂನುಗಳನ್ನು ರೂಪಗೊಳಿಸಬಹುದಾಗಿಯೂ ಇತ್ತು. ಹೀಗಿ ದ್ದುದರಿಂದ ಡಬ್ಲಿನ್ ಪಾರ್ಲಿಮೆಂಟೆಂಬುದು ಅಧಿಕಾರ ಲೇಶವೂ ಇಲ್ಲದೆ ಅಪಹಾಸ್ಯ ಯೋಗ್ಯವಾದ ಸಭೆಯಾಗಿತ್ತು. ಅಂತಹ ಸಭೆಯಲ್ಲಿಯೂ ಐರಿಷ್‌ಜಾತಿಯವರಿಗೆ ಆಸ್ಪದವಿರಲಿಲ್ಲ.

**ಆಡಳಿತದ ರೀತಿ**

ಈ ಡಬ್ಲಿನ್ ಪಾರ್ಲಿಮೆಂಟೆಂಬುದು ಶುಷ್ಕೋಪಚಾರಕ್ಕಾಗಿ ನಡೆದಂತೆ ನಡೆಯು ತ್ತಿರಲು ನಿರಂಕುಶಾಧಿಕಾರಪಡೆದಿದ್ದ ಇಂಗ್ಲಿಷ್ ಅಧಿಕಾರಿಗಳು ತಮ್ಮ ದಬ್ಬಾಳಿಕೆ ಯನ್ನೂ ಸ್ವಾರ್ಥತೆಯನ್ನೂ ಬರಬರುತ್ತ ಹೆಚ್ಚಿಸಿಕೊಂಡರು. ಐರ್ಲೆಂಡಿನಲ್ಲಿ ಅಭಿ ವೃದ್ಧಿಗೊಳ್ಳಬಹುದಾಗಿದ್ದ ಉದ್ಯೋಗ ಕೈಗಾರಿಕೆಗಳು ತಲೆಯೆತ್ತದಾದವು. ಪಶು ಪಾಲನೆಗೆ ಅನುಕೂಲವಾದ ಐರ್ಲೆಂಡಿನಿಂದ ದನ ಕುರಿ ಮುಂತಾದ ಪಶುಗಳು

ಇಂಗ್ಲಂಡಿಗೆ ಆಮದಾಗಬಹುದಾಗಿತ್ತು; ಕೂಡದೆಂದು ಲಂಡನ್ ಸಭೆಯವರು ಕಾನೂನು ಮಾಡಿದ್ದರು. ಉತ್ಕೃಷ್ಟವಾದ ರೀತಿಯಲ್ಲಿ ಉಣ್ಣೆಯನ್ನು ತೆಗೆದು ಐರಿಷರು ಮಾರಿ ಜೀವಿಸಬಹುದಾಗಿತ್ತು. ಆದರೆ ಇಂಗ್ಲಿಷ್ ಸರಕಾರದವರು ನಿರಾತಂಕವಾದ ವ್ಯಾಪಾರಕ್ಕೆ ಅವಕಾಶಕೊಡದೆ ಆ ಉಣ್ಣೆಯೆಲ್ಲವೂ ಇಂಗ್ಲಂಡಿಗೆ ಮಾತ್ರವೇ ಸಾಗತಕ್ಕದ್ದೆಂದು ಶಾಸನಮಾಡಿ ಇಂಗ್ಲಂಡಿನಲ್ಲಿ ಅದಕ್ಕೆ ಭಾರಿ ಸುಂಕವನ್ನು ಹೇರಿದರು. ಐರಿಷರ ಜೀವನೋಪಾಯಗಳು ನಾಶವಾಗದೆ ಮತ್ತೇನಾದೀತು? ಎರಡನೆ ಜೇಮ್ಸ್ ರಾಜ್ಯಭ್ರಷ್ಟನಾದಮೇಲೆ ಆತನಲ್ಲಿ ಭಕ್ತಿಯಿಂದ ವರ್ತಿಸಿದ್ದ ಐರಿಷರು ದ್ರೋಹಿಗಳೆನಿಸಿದರು. ಅದೇ ಸಮಯವೆಂದು ಇಂಗ್ಲಿಷರು ಅವರ ಭೂಮಿಗಳನ್ನು ಕಿತ್ತುಕೊಂಡರು. ಒಟ್ಟಿನಲ್ಲಿ ಮುಕ್ಕಾಲುಭಾಗ ಇಂಗ್ಲಿಷ್‌ಯಜಮಾನರದಾಯಿತು. ಆ ಯಜಮಾನರು ಇಂಗ್ಲಂಡಿನಲ್ಲಿಯೇ ಸುಖದಿಂದಿರುತ್ತ ತಮ್ಮ ಜಮೀನುಗಳನ್ನು ಪಾರುಪತ್ಯಗಾರರ ವಶದಲ್ಲಿಟ್ಟರು. ಆ ಪಾರುಪತ್ಯಗಾರರು ಹೊಲಗಳನ್ನು ಐರಿಷ್ ರೈತರಿಗೆ ಸಾಗುವಳಿಗೆಂದು ಕೊಟ್ಟು ಅವರ ಜೀವವನ್ನು ನಾನಾರೀತಿಗಳಲ್ಲಿ ಹಿಂಡುತ್ತಿದ್ದರು. ತನ್ನ ಪೂರ್ವಿಕರು ಒಡೆಯರಾಗಿ ಅನುಭವಿಸುತ್ತಿದ್ದ ಜಮೀನಿನ ಯಾವುದೋ ಒಂದು ಮುರುಕಿನ ರೈತನಾಗಿ ಬದುಕನ್ನು ನೂಕುತ್ತ ಐರಿಷರವನು ಹೊಲಕ್ಕಾಗಿ ಕಂದಾಯವನ್ನು ಪಾರುಪತ್ಯಗಾರನಿಗೆ ತೆರುತ್ತ, ತನಗೆ ವಿರೋಧವಾದ ಪ್ರಾಟೆಸ್ಟೆಂಟ್ ಚರ್ಚಿನ ವೆಚ್ಚಕ್ಕಾಗಿ ತೆರಿಗೆ ಸಲ್ಲಿಸುತ್ತ, ತನ್ನ ಸ್ವಂತ ಪುರೋಹಿತ ರೋಮನ್‌ಕ್ಯಾಥಲಿಕ್ ಪಾದ್ರಿಗೆ ಕಾಣಿಕೆ ದಕ್ಷಿಣೆಗಳನ್ನು ಅರ್ಪಿಸುತ್ತ ಹೊತ್ತ ಬಾಳು ಬಾಳಲ್ಲ. ಹೊಲದಲ್ಲಿ ಕಷ್ಟಪಟ್ಟು ಬೆಳೆಸಿದ ಆಲೂಗಡ್ಡೆಯೇ ಗತಿಯೆಂದು ನಂಬಿದ್ದವನಿಗೆ ಆ ಗಡ್ಡೆಯ ಸಿಪ್ಪೆಯುಳಿಯುವುದೇ ಕಷ್ಟವಾಯಿತು.

**ಆರ್ಥಿಕಸ್ಥಿತಿ**

ಈ ದುಸ್ಥಿತಿಯಲ್ಲಿ ಅನೇಕ ಐರಿಷರು ದೇಶಾಂತರ ಹೊರಟರು. ಅನೇಕರು ಇಂಗ್ಲಿಷರನ್ನು ದ್ವೇಷಿಸುತ್ತ ಸ್ಪೈನ್ ಮತ್ತು ಫ್ರಾನ್ಸ್ ರಾಜ್ಯಗಳ ಸೈನ್ಯಗಳಲ್ಲಿ ಸೇರಿಕೊಂಡು ಅಲ್ಮಾನ್ಸಾ, ಫಾಂತನಾಯ್ ಕದನಗಳಲ್ಲಿ ಇಂಗ್ಲಿಷರೆದುರಿನಲ್ಲಿ ಯುದ್ಧ ಮಾಡಿದರು. ಅಮೆರಿಕಕ್ಕೂ ಕೆಲವರು ಹೊರಟರು.

ಐರ್ಲಂಡಿನಲ್ಲಿ ಸರ್ಕಾರದಿಂದ ಪೋಷಿತವಾಗಿದ್ದುದು ಪ್ರಾಟೆಸ್ಟೆಂಟ್ ಚರ್ಚು. ಅದರ ವೆಚ್ಚಕ್ಕಾಗಿ ಹಣವನ್ನು ಕ್ಯಾಥಲಿಕ್ಕರಾದ ಐರಿಷರಿಂದ ಬಲವಂತವಾಗಿ ಎತ್ತುತ್ತಿದ್ದುದಲ್ಲದೆ 18ನೆ ಶತಮಾನದ ಪೂರ್ವಾರ್ಧದಲ್ಲಿ ಕ್ಯಾಥಲಿಕ್ಕರನ್ನು ಇಂಗ್ಲಿಷ್ ಸರ್ಕಾರದವರು ಚಿತ್ರವಿಚಿತ್ರವಾದ ರೀತಿಗಳಲ್ಲಿ ಹಿಂಸೆಗೆ ಗುರಿಪಡಿಸಿದರು. ರಿಸ್ವಿಕ್ ಕರಾರಾದ ತರುವಾಯ ಡಬ್ಲಿನ್ ಪಾರ್ಲಿಮೆಂಟಿನವರು ಲಿಮೆರಿಕ್ ಷರತ್ತನ್ನು ಅಲಕ್ಷ್ಯಮಾಡಿ ಹೊಸದಾಗಿ ದಂಡವಿಧಿಗಳನ್ನು ರೂಪಗೊಳಿಸಿದರು. ಸೇಕಡ 80ರಷ್ಟಿದ್ದ

ಕ್ಯಾಥಲಿಕ್ ಐರಿಷರಲ್ಲಿ ಯಾರೂ ಪಾರ್ಲಿಮೆಂಟ್ ಸದಸ್ಯರಾಗುವಂತಿರಲಿಲ್ಲ; ಚುನಾವಣೆ
ನಡೆದಾಗ ವೋಟುಕೊಡುವ ಅಧಿಕಾರವೂ ಇರಲಿಲ್ಲ. ಸರ್ಕಾರದ ಹುದ್ದೆಗೆ ಕ್ಯಾಥ
ಲಿಕ್ಕಾದವನು ಅಯೋಗ್ಯ. ಕ್ಯಾಥಲಿಕ್ ಮತಸ್ಥನು ಭೂಮಿ

**ಕ್ಯಾಥಲಿಕ್ಕರಿಗೆ ಹಿಂಸೆ**

ಯನ್ನು ಕೊಳ್ಳಬಾರದು, ದೊಡ್ಡ ಕುದುರೆಯನ್ನಿಡಬಾರದು,
ಶಾಲೆಯನ್ನು ನಡೆಸಬಾರದು. ಕ್ಯಾಥಲಿಕ್ ಬಿಷಪರು
ದೇಶಾಂತರ ಹೊರಡತಕ್ಕದ್ದು. ಕ್ಯಾಥಲಿಕ್ ಪುರೋಹಿತರು ಗೊತ್ತಾದ ಸಂಖ್ಯೆಗಿಂತ
ಹೆಚ್ಚಾಗಿರಬಾರದು. ಕ್ಯಾಥಲಿಕ್ ತಂದೆಯ ಮಕ್ಕಳಲ್ಲೊಬ್ಬನು ಪ್ರಾಟೆಸ್ಟೆಂಟ್
ಮತಕ್ಕೆ ಸೇರಿದರೆ ಆಸ್ತಿಯೆಲ್ಲವನ್ನೂ ಆ ಮಗನಿಗೆ ಬಿಟ್ಟುಕೊಡತಕ್ಕದ್ದು. ಇತ್ಯಾದಿಯಾಗಿ
ಕ್ಯಾಥಲಿಕ್ಕರನ್ನು ನಿರ್ಗತಿಕರನ್ನಾಗಿಮಾಡಿ ಹುಟ್ಟನ್ನಡಗಿಸುವ ಅನೇಕ ಕಾನೂನುಗಳನ್ನು
ಡಬ್ಲಿನ್ನಿನ ಪಾರ್ಲಿಮೆಂಟಿನವರು 1697 ರಿಂದ 1727 ರವರೆಗೆ ಜಾರಿಪಡಿಸಿದರು.
ಚಿತ್ರವಿಚಿತ್ರವಾದ ಈ ಕಾನೂನುಗಳನ್ನು ಆಚರಣೆಯಲ್ಲಿ ತರುವುದು ಕಷ್ಟವಾಯಿತು.
ಆದರೂ ಮೂರನೆ ಜಾರ್ಜ್‌ದೊರೆಯ ಕಾಲದಲ್ಲಿ ಅಮೆರಿಕದ ಜಗಳ ರೇಗುವವರೆಗೆ
ಐರ್ಲೆಂಡಿನ ರೋಮನ್‌ಕ್ಯಾಥಲಿಕ್ಕರ ಪಾಡನ್ನು ಕುರಿತು ಯಾರೂ ಸಹಾನುಭೂತಿ
ಯನ್ನು ತೋರಲಿಲ್ಲ.

ಅಮೆರಿಕದ ಜಗಳ ರೇಗುತ್ತಿದ್ದಾಗ ಇಂಗ್ಲಂಡಿನ ಮಂತ್ರಿಗಳಿಗೆ ಐರಿಷರ ವಿಚಾರ
ದಲ್ಲಿ ಆಸಕ್ತಿಯೂ ಶಂಕೆಯೂ ಹುಟ್ಟಿದವು. ಅಮೆರಿಕದಲ್ಲಿ ನೆಲೆಸಿದ್ದ ಇಂಗ್ಲಿಷ್
ಜಾತಿಯ ಪ್ರಾಟೆಸ್ಟೆಂಟರೇ 'ಪ್ರಾತಿನಿಧ್ಯವಿಲ್ಲದಿರುವಾಗ ತೆರಿಗೆಯೆತ್ತುವ ಅಧಿಕಾರವಿಲ್ಲ'
ಎಂಬ ಪಲ್ಲವಿಯನ್ನುಚ್ಚರಿಸಿದಾಗ ಐರಿಷರೂ ಹಾಗೆಯೇ ಮುಷ್ಕರಮಾಡಬಹುದಾದ
ಸಂಭವ ತೋರಿತು. ಈ ಶಂಕೆಯಿಂದ ಪ್ರೇರಿತರಾಗಿ ಇಂಗ್ಲಿಷ್ ಮಂತ್ರಿಗಳು
ಡಬ್ಲಿನ್ ಪಾರ್ಲಿಮೆಂಟಿನಲ್ಲಿ ರೋಮನ್ ಕ್ಯಾಥಲಿಕ್ಕರನ್ನಡಗಿಸಲು ಏರ್ಪಟ್ಟಿದ್ದ
ಕಾನೂನುಗಳಲ್ಲಿ ಕೆಲವನ್ನು ರದ್ದುಗೊಳಿಸಿದರು. 1778 ರಲ್ಲಿ ಕ್ಯಾಥಲಿಕ್ಕರಾದವರು
ಭೂಮಿಯನ್ನು ಕೊಳ್ಳಬಹುದಾಯಿತು. ಆದರೆ ಘೋರ ದಾರಿದ್ರ್ಯದಲ್ಲಿ ನರಳುತ್ತಿದ್ದ
ಕ್ಯಾಥಲಿಕ್ಕರಿಗೆ ಯಾವ ಚೈತನ್ಯವೂ ಇರಲಿಲ್ಲ. ಚೈತನ್ಯಕೂಡಿ ಇಂಗ್ಲಿಷ್ ಸರಕಾರಕ್ಕೆ
ವಿರೋಧವನ್ನು ಬೆಳೆಸಿದವರು ಐರ್ಲೆಂಡಿನ ಪ್ರಾಟೆಸ್ಟೆಂಟರು.

**ಐರಿಷ್ ಪ್ರಾಟೆಸ್ಟೆಂಟರ ಗುಂಪು**

ದೊಡ್ಡ ಹುದ್ದೆಗಳೆಲ್ಲ ಇಂಗ್ಲಿಷ್ ಜಾತಿಯವರಿಗೆ ಮೀಸಲಾಗಿ
ದ್ದುದನ್ನೂ ಆಡಳಿತವೆಲ್ಲವೂ ಇಂಗ್ಲಂಡಿನ ಮೇಲ್ಮೆಗಾಗಿಯೇ
ನಡೆಯುತ್ತಿದ್ದುದನ್ನೂ ಐರ್ಲೆಂಡಿನ ಕೈಗಾರಿಕೆಗಳು ಇಂಗ್ಲಿಷ್
ಕೈಗಾರಿಕೆಗಳೊಂದಿಗೆ ಪೋಟಾಪೋಟಿಮಾಡದಂತೆ ನಾಶವಾದುದನ್ನೂ ಡಬ್ಲಿನ್‌ಪಾರ್ಲಿ
ಮೆಂಟ್ ಎಲ್ಲ ವಿಷಯಗಳಲ್ಲಿಯೂ ಅಧೀನವಾಗಿದ್ದುದನ್ನೂ ಐರಿಷ ಪ್ರಾಟೆಸ್ಟೆಂಟರು
ಸಹಿಸದಾದರು. ಅಮೆರಿಕದ ನೆಲಸುಗಾರರು ಸಾಧಿಸಿದಂತೆ ತಾವೂ ಸಾಧಿಸಲು
ತವಕಪಟ್ಟು ತಮ್ಮ ಕರ್ತವ್ಯಕ್ರಮವನ್ನು ಗೊತ್ತುಮಾಡಿಕೊಂಡರು. ಆ ವೇಳೆಗೆ

ಅಮೆರಿಕದ ಸ್ವಾತಂತ್ರ್ಯಕ್ಕಾಗಿ ಹೋರಾಟವಾಗುತ್ತಿತ್ತು. ಇಂಗ್ಲಿಷ್ ಸರ್ಕಾರದವರು ಐರ್ಲಂಡಿನಲ್ಲಿದ್ದ ಸೈನ್ಯವನ್ನು ಬೇರೆಡೆಗೆ ಸಾಗಿಸಿದ್ದರು. ಆಗ ತಮ್ಮ ಸ್ವದೇಶ ರಕ್ಷಣೆಗೆಂದು ಐರಿಷ್ ಪ್ರಾಟೆಸ್ಟೆಂಟರು ತಮ್ಮದೇ ದಳವನ್ನು ತಾವೇ ಮುಂದೆ ಬಂದು ಕಟ್ಟಿದರು. ಈ ರೀತಿ ಸೈನ್ಯವನ್ನು ಸಿದ್ಧಮಾಡಿಕೊಂಡಮೇಲೆ ಐರಿಷ್ ಪ್ರಾಟೆಸ್ಟೆಂಟ್ ಗುಂಪಿನವರು **ಡಂಗಾನನ್** (Dungannon) ಎಂಬಲ್ಲಿ ದೊಡ್ಡ ಸಭೆಸೇರಿಸಿ ಫಿಲಡೆಲ್ಫಿಯ ಕಾಂಗ್ರೆಸ್ಸನ್ನು ಅನುಕರಿಸಲು ತೊಡಗಿ 1782 ರಲ್ಲಿ **ಡಬ್ಲಿನ್ ಪಾರ್ಲಿಮೆಂಟ್** ಸಭೆಯ **ಶಾಸಕ ಸ್ವಾತಂತ್ರ್ಯ**ವನ್ನು ಸ್ಥಾಪನೆಮಾಡಿದರು. ಈ ಆಂದೋಲನವನ್ನು ಕಂಡು ಲಂಡನ್ ಪಾರ್ಲಿಮೆಂಟಿನವರು ಮೊದಲು ಐರಿಷರ ವ್ಯಾಪಾರೋದ್ಯೋಗಗಳಿಗೆ ಕಂಟಕಪ್ರಾಯವಾಗಿದ್ದ ಕಾನೂನುಗಳನ್ನು ರದ್ದುಮಾಡಿದ್ದರು. ತರುವಾಯ ಪ್ರಬಲಯುದ್ಧದಲ್ಲಿ ಸಿಕ್ಕಿಕೊಂಡಿದ್ದುದರಿಂದ ಇಂಗ್ಲಿಷರು ಡಬ್ಲಿನ್‌ಸಭೆಯ ಸ್ವಾತಂತ್ರ್ಯವನ್ನೊಪ್ಪಿಕೊಂಡು ಪಾಯ್ನಿಂಗ್ಸ್ ನಿಬಂಧನೆಗಳನ್ನು ರದ್ದುಗೊಳಿಸಿದರು.

**ಶಾಸಕ ಸ್ವಾತಂತ್ರ್ಯ**

ಈ ರೀತಿಯಲ್ಲಿ 1778–1782 ರಲ್ಲಿ ಐರಿಷ್ ಪ್ರಾಟೆಸ್ಟೆಂಟರು ಗುಂಪುಕೂಡಿ ವರ್ತಿಸಿ ಶಾಸಕಸ್ವಾತಂತ್ರ್ಯವನ್ನು ಪಡೆದರು. ಆ ಗುಂಪಿಗೆ **ಹೆನ್ರಿಗ್ರಟಾನ್** (Henry Grattan) ಎಂಬಾತನು ನಾಯಕನಾಗಿದ್ದನು. ಡಬ್ಲಿನ್ ಸಭೆಯಲ್ಲಿ 1775 ರಲ್ಲಿ ಸದಸ್ಯನಾದ ಆತನು ಅತಿಪ್ರಭಾವಶಾಲಿಯಾದ ವಕ್ತೃ. ಮೊದಲು ತಮ್ಮ ಸಭೆಯ ಸ್ವಾತಂತ್ರ್ಯವನ್ನು ಪಡೆಯತಕ್ಕದ್ದೆಂದೂ ಆ ತರುವಾಯ ಕ್ಯಾಥಲಿಕ್ಕರಿಗೆ ಮತಸ್ವಾತಂತ್ರ್ಯವನ್ನು ಒದಗಿಸಿ ಐರ್ಲಂಡಿನ ದುಃಸ್ಥಿತಿಯನ್ನು ಹೋಗಲಾಡಿಸಬೇಕೆಂದೂ ಆತನ ಉದ್ದೇಶ. ಆದರೆ ಸಭೆಗೆ ಸ್ವಾತಂತ್ರ್ಯ ದೊರೆತಮೇಲೆ ಆ ಸಭಿಕರಲ್ಲಿಯೇ ಒಡಕುಹುಟ್ಟಿತು. ಗ್ರಟಾನ್ ಮುಂತಾದವರಿಗೆ ಕ್ಯಾಥಲಿಕ್ಕರ ಮೇಲ್ಮೆಯ ಚಿಂತೆ ಹಿಡಿದಿತ್ತು; ಕೆಲವರಿಗೆ ಆ ವಿಚಾರವು ಅನವಶ್ಯವೆನಿಸಿತ್ತು. ಹೀಗಾದುದರಿಂದ ಸ್ವತಂತ್ರವಾದಾಗಲೂ ಡಬ್ಲಿನ್ ಸಭೆಯವರು ಐರಿಷ್‌ಕ್ಯಾಥಲಿಕ್ಕರಿಗೆ ಮೇಲನ್ನು ಮಾಡದಾದರು. 1782 ರಿಂದ **ಗ್ರಟಾನನ ಪಾರ್ಲಿಮೆಂಟ್** ಎಂಬ ಹೆಸರು ಪಡೆದ ಆ ಸಭೆಯವರು ಕೇವಲ ಪ್ರಾಟೆಸ್ಟೆಂಟರ ಹಿತಚಿಂತನೆಯನ್ನು ಕಟ್ಟಿಕೊಂಡು ಕ್ಯಾಥಲಿಕ್ಕರ ವಿಚಾರದಲ್ಲಿ ಅಭಿಪ್ರಾಯಭೇದಗಳನ್ನು ಬೆಳೆಸುತ್ತ ಶುಷ್ಕವಾದ ವಿವಾದಗಳಲ್ಲಿ ತೊಡಗಿದರು. ರೋಮನ್‌ಕ್ಯಾಥಲಿಕ್ಕರಿಗೂ ಅಲ್‌ಸ್ಟರಿನಲ್ಲಿದ್ದ ಪ್ರೆಸ್ಬಿಟೇರಿಯನ್ನರಿಗೂ ನಿರಾಶೆ ತೋರುತ್ತಬಂತು.

**ಪ್ರಾಟೆಸ್ಟೆಂಟರ ಗುರಿ**

1789 ರಲ್ಲಿ ಬಾಸ್ಟೀಲ್ ಕೂಲಿತು. ಫ್ರೆಂಚರು ಉತ್ಸಾಹದಾಯಕವಾದ ತತ್ತ್ವಗಳನ್ನು ಸಾರಿ ವಿಜೃಂಭಿಸಿದರು. ಮಹಾಪಲ್ಲಟದ ವಿವರವನ್ನು ಕೇಳಿದ ಐರಿಷ್ ಕ್ಯಾಥಲಿಕ್ಕರಿಗೂ ಪ್ರೆಸ್ಬಿಟೇರಿಯನ್ನರಿಗೂ ಧೈರ್ಯೋತ್ಸಾಹಗಳು ತೋರಿದವು.

1791 ರಲ್ಲಿ ಬಾಸ್ಟೀಲ್ ಪತನದ ದಿನವನ್ನು ಐರಿಷರು ಹಬ್ಬವಾಗಿ ಆಚರಿಸಿದರು. 1792 ರಲ್ಲಿ **ವುಲ್ಫ್‌ಟೋನ್** (Theobald Wolfetone) ಎಂಬಾತನು **ಯುನೈಟೆಡ್ ಐರಿಷ್ಮೆನ್** (United Irishmen) ಎಂಬ ಸಂಘವನ್ನು ಕಟ್ಟಿದನು. ಅದನ್ನು ಕ್ಯಾಥಲಿಕ್ಕರೂ ಪ್ರೆಸ್ಬಿಟೇರಿಯನ್ನರೂ ಸೇರಿಕೊಂಡು ಮತಸ್ವಾತಂತ್ರ್ಯಕ್ಕೂ ಆಡಳಿತದ ಸಂಸ್ಕಾರಕ್ಕೂ ಉದ್ಯಮಿಸಲು ಸಿದ್ಧರಾದರು. ಆ ಸಂಘದ ನಾಯಕರಲ್ಲಿ ಕೆಲವರು ಐರ್ಲಂಡಿನ ಸ್ವಾತಂತ್ರ್ಯವನ್ನೇ ಗುರಿಯೆಂದು ಭಾವಿಸಿ ಫ್ರೆಂಚರಂತೆ ತಾವೂ ಪಲ್ಲಟವನ್ನು ನಡೆಸಿ ಇಂಗ್ಲಿಷರನ್ನು ದೂರವಾಗಿಡಬೇಕೆಂದುಕೊಂಡಿದ್ದರು. ಅವರನ್ನು ಕ್ರಾಂತಿಕಾರರೆನ್ನುತ್ತ ಪ್ರಾಟೆಸ್ಟೆಂಟರು **ಆರೆಂಜ್ ಲಾಡ್ಜು**ಗಳೆಂಬ (Orange Lodges) ಕೂಟಗಳನ್ನು ಕಟ್ಟಿಕೊಂಡು ವಿರೋಧಿಸಲು ಮೊದಲಿಟ್ಟರು. ಕ್ರಾಂತಿಕಾರಪಕ್ಷದವರದೊಂದು ವಿಪರೀತವಾದರೆ ಆರೆಂಜ್ಮೆನ್ ಪಕ್ಷದವರದು ಮತ್ತೊಂದು ವಿಪರೀತ. ಎರಡು ಪಕ್ಷಗಳ ಮಧ್ಯೆ ಅಜ್ಞಾನದಲ್ಲಿಯೂ ದಾರಿದ್ರ್ಯದಲ್ಲಿಯೂ ಸಿಕ್ಕಿ ನರಳುತ್ತಿದ್ದುದು ಐರಿಷ್ ಕ್ಯಾಥಲಿಕ್ಕರ ಗುಂಪು.

**ಪಕ್ಷವಿಪಕ್ಷಗಳು**

ಇಂಗ್ಲಂಡಿನಲ್ಲಿ ಕಿರೇಪಿಟ್ ಆಗ ಮುಖ್ಯಮಂತ್ರಿ. ದೂರಾಲೋಚನಾಪರನಾದ ಆತನು ವಿಲಂಬದಿಂದ ಅನಾಹುತವಾದೀತೆಂದು ತಿಳಿದು 1793ರಲ್ಲಿ ತನ್ನ ಪ್ರಭಾವವನ್ನು ಬೀರಿ ಐರಿಷ್ ಪಾರ್ಲಿಮೆಂಟಿನಲ್ಲಿ **ಕ್ಯಾಥಲಿಕ್ ರಿಲೀಫ್ ಆಕ್ಟ್**(Catholic Relief Act)ಎಂಬ ಕಾನೂನನ್ನು ಮಾಡಿಸಿ ಕ್ಯಾಥಲಿಕ್ಕರನ್ನು ಸಮಾಧಾನಗೊಳಿಸಲು ಸಿದ್ಧನಾದನು. ಆ ಕಾನೂನಿನಿಂದ ಅಲ್ಪಸ್ವಲ್ಪತೃಪ್ತಿಮಾತ್ರ ಆಯಿತು. ಕ್ಯಾಥಲಿಕ್ಕರಿಗೆ ವೋಟುಕೊಡುವ ಅಧಿಕಾರ ಪ್ರಾಪ್ತಿಯಾಯಿತು; ಆದರೆ ಸಭಿಕರಾಗುವ ಅಧಿಕಾರವಿಲ್ಲವಾಯಿತು. ಐರಿಷರನ್ನು ಸಮಾಧಾನಗೊಳಿಸಬೇಕೆಂಬ ಉದ್ದೇಶದಿಂದ ಪಿಟ್ಟನು ವ್ಹಿಗ್ ಪಕ್ಷದವನಾಗಿದ್ದ **ಲಾರ್ಡ್ ಫಿಟ್ಸ್‌ವಿಲಿಯಂ** (Lord Fitzwilliam) ಎಂಬಾತನನ್ನು ಐರ್ಲಂಡಿಗೆ ವೈಸರಾಯಿಯಾಗಿ ಗೊತ್ತುಮಾಡಿಸಿದನು. ಆ ಶ್ರೀಮಂತನು ಐರ್ಲಂಡಿನಲ್ಲಿಳಿದ ಮೇಲೆ ಗ್ರಟಾನ್‌ಪಕ್ಷದವರ ಸೂಚನೆಗಳಿಗೊಪ್ಪಿಕೊಂಡು ಕ್ಯಾಥಲಿಕ್ಕರಿಗೆ ಮತಸ್ವಾತಂತ್ರ್ಯವನ್ನೂ ಪ್ರಾತಿನಿಧ್ಯವನ್ನೂ ಕೊಡಿಸುವ ಕಾನೂನುಗಳನ್ನು ರೂಪಗೊಳಿಸುವುದಾಗಿ ಪ್ರಕಟಿಸಿದನು. ಈ ಪ್ರಕಟನೆ ಅವಿವೇಕವಾಯಿತೆಂದು ಮಂತ್ರಿಗಳೊಪ್ಪಲಿಲ್ಲ. ಆರೆಂಜ್ಮೆನ್ ಪಕ್ಷದವರಂತೂ ಆ ಯೋಚನೆಗಳಿಗೆ ಪರಮ ವಿರೋಧಿಗಳಾಗಿದ್ದರು. ಮೂರನೆ ಜಾರ್ಜ್ ದೊರೆಯೂ ಹೆಡ್ಡತನವನ್ನು ವಹಿಸಿ ಕ್ಯಾಥಲಿಕ್ಕರು ಪಾರ್ಲಿಮೆಂಟ್ ಸಭಿಕರಾಗುವುದನ್ನೊಪ್ಪದಾದನು. ಪರಿಣಾಮವಾಗಿ ಗ್ರಟಾನ್ ಸಿದ್ಧಗೊಳಿಸಿದ್ದ ಮಸೂದೆ ಹುಟ್ಟಿನಲ್ಲಿಯೇ ಮೃತಪ್ರಾಯವಾದುದಲ್ಲದೆ ಫಿಟ್ಸ್‌ವಿಲಿಯಂ

**ಪಿಟ್ಟನ ಜಾಣ್ಮೆ**

**ವೈಸರಾಯಿಗೆ ಅವಮಾನ**

ಶ್ರೀಮಂತನು ವೈಸರಾಯಿ ಕೆಲಸವನ್ನು ಬಿಡಬೇಕಾಯಿತು. ಇಂಗ್ಲಂಡಿನ ಮಂತ್ರಿಗಳು ಆತನಲ್ಲಿ ದೋಷಾರೋಪಣೆಮಾಡಿ ಕೆಲಸದಿಂದ ತಪ್ಪಿಸಿದರು.

ವೈಸ್‌ರಾಯಿಯ ಅವಮಾನದಿಂದ ಯುನೈಟೆಡ್ ಐರಿಷ್ಮೆನ್ ಸಂಗಡದವರಿಗೆ ಕ್ರಾಂತಿಯೇ ಕರ್ತವ್ಯವೆನಿಸಿತು. ಆ ಸಂಗಡದಲ್ಲಿ ಕ್ಯಾಥಲಿಕ್ಕರೇ ಬಲಿಷ್ಠರು. ಫ್ರೆಂಚರ ಸಹಾಯವನ್ನು ಪಡೆದು ಗೋಪ್ಯಸನ್ನಾಹನಡೆಸಿ ಐರ್ಲಂಡಿನ ಸ್ವಾತಂತ್ರ್ಯವನ್ನು ಸಾಧಿಸಬೇಕೆಂದು ಅವರು ಹವಣಿಸಿದರು. 1796ರಲ್ಲಿ ಅವರ ಸಹಾಯಕ್ಕೆಂದು ಫ್ರೆಂಚರ ಪಡೆಯೊಂದು ಹೊರಟು **ಬಾಂಟ್ರಿ ಬೇ** (Bantry Bay) ಎಂಬ ಕೊಲ್ಲಿಯಲ್ಲಿ ಕಾಣಿಸಿಕೊಂಡಿತು. ಆದರೆ ಬಿರುಗಾಳಿಯೆದ್ದುದರಿಂದ ಹಡಗುಗಳಿಗೆ ಕಷ್ಟವಾಗಿ ಆ ಸೈನ್ಯವನ್ನು ಐರ್ಲಂಡಿನಲ್ಲಿಳಿಸುವುದೇ ಆಗಲಿಲ್ಲ. ಯುನೈಟೆಡ್ ಐರಿಷ್ಮೆನ್ ಗುಂಪಿನವರಿಗೆ ಆ ಸಹಾಯ ದೊರಕದೆಹೋಯಿತು. ಆದರೆ ಆರೆಂಜ್ಮೆನ್ ಗುಂಪಿನವರು ಉದ್ರಿಕ್ತರಾದರು. ಪರಸ್ಪರ ದ್ವೇಷಿಗಳಾಗಿದ್ದ ಎರಡು ಗುಂಪುಗಳವರಿಗೂ ಅಲ್ಲಲ್ಲಿ ಕಚ್ಚಾಟ ಕಡಿದಾಟಗಳಾದವು. ಆರೆಂಜ್ಮೆನ್ ಗುಂಪಿನವರು ಕ್ಯಾಥಲಿಕ್ಕರನ್ನು ಅತಿ ಕ್ರೌರ್ಯದಿಂದ ಹಿಂಸಿಸಿದರು. ಗಲಾಟೆಗಳು ಅಲ್‌ಸ್ಟರ್ ಪ್ರಾಂತದಲ್ಲಿ ಹೆಚ್ಚಾಗಿ ರೇಗುತ್ತಿರಲು ಸರ್ಕಾರದವರು ಅಲ್ಲಿಯ ನಿವಾಸಿಗಳ ಶಸ್ತ್ರಾಸ್ತ್ರಗಳನ್ನು ಬಲವಂತದಿಂದ ಕಿತ್ತುಕೊಂಡರು. ಆಯುಧಗಳನ್ನು ಹುಡುಕಲು ಸೈನಿಕರು ಮನೆಗಳಿಗೆ ನುಗ್ಗಿ ಮಾಡಬಾರದ ಕೆಲಸಗಳನ್ನು ಮಾಡಿ ನಿರಪರಾಧಿಗಳನ್ನು ಚಿತ್ರವಿಚಿತ್ರ ಹಿಂಸೆಗೆ ಗುರಿಮಾಡಿದರು.

**ಹೊಡೆದಾಟ**

ಸರ್ಕಾರದವರೂ ಪ್ರಾಟೆಸ್ಟೆಂಟ್ ಪಕ್ಷದವರೂ ಒಂದುಗೂಡಿ ಕ್ರೂರವಾಗಿ ವರ್ತಿಸಿದುದನ್ನು ಕಂಡ ಐರಿಷ್ ಕ್ಯಾಥಲಿಕ್ಕರು 1798ರಲ್ಲಿ ಭಾರಿ ದಂಗೆಯೇಳಲು ಸಿದ್ಧರಾದರು. ಮತಸ್ವಾತಂತ್ರ್ಯಪ್ರಾತಿನಿಧ್ಯಗಳೇ ಬಹುಜನರಿಗೆ ಬೇಕಾಗಿದ್ದುದು. ಕೆಲವರಿಗೆ ರಾಜಕೀಯಸ್ವಾತಂತ್ರ್ಯವೇ ಗುರಿಯಾಗಿತ್ತು. ಅಂತಹವರಲ್ಲಿ ಮುಖ್ಯರಾಗಿದ್ದ **ಫಿಟ್ಜ್‌ಗೆರಾಲ್ಡ್** ಶ್ರೀಮಂತ (Fitzgerald) ಮುಂತಾದವರನ್ನು ಇಂಗ್ಲಿಷ್ ಸರ್ಕಾರದವರು ಮೊದಲೇ ಹಿಡಿದು ಸೆರೆಯಲ್ಲಿಟ್ಟರು. ನಾಯಕರಿಲ್ಲದೆ ದಂಗೆಯೆದ್ದವರು ಫ್ರೆಂಚರ ಸಹಾಯವನ್ನು ನಂಬಿದ್ದರು. ಕಾಲಮಿಂಚಿದಮೇಲೆ ಮಾತ್ರ ಸಣ್ಣ ಫ್ರೆಂಚ್ ದಳ ಬಂತು. ಹೀಗಾಗಿ ದಂಗೆ ಸುಲಭವಾಗಿ ಅಡಗಿತು. **ನ್ಯೂರಾಸ್** (New Ross) ಮತ್ತು **ವಿನಿಗರ್ ಹಿಲ್** (Vinegar Hill) ಎಂಬೆಡೆಗಳಲ್ಲಿ ದಂಗೆಕೋರರ ಶಿಬಿರಗಳು ಇಂಗ್ಲಿಷರ ವಶವಾದವು. ಒಂದು ತಿಂಗಳಕಾಲದಲ್ಲಿಯೇ ದಂಗೆಯಡಗಿತು. ಎಷ್ಟೋ ಸಾಹಸಪಟ್ಟಿದ್ದ ವುಲ್ಫ್‌ಟೋನ್ ಶತ್ರುಗಳಿಗೆ ಸಿಕ್ಕಿ ಆತ್ಮಹತ್ಯ ಮಾಡಿಕೊಂಡು ಪ್ರಾಣಬಿಟ್ಟನು.

**ಐರಿಷರ ದಂಗೆ**

ದಂಗೆಯಡಗಿದಬಳಿಕ ಪಿಟ್ಟನು ಐರ್ಲಂಡಿಗೆ **ಲಾರ್ಡ್ ಕಾರ್ನ್‌ವಾಲೀಸನನ್ನು** ಅಧಿಕಾರಿಯಾಗಿ ಗೊತ್ತುಮಾಡಿ ಸಮಾಧಾನೋಪಾಯಗಳನ್ನು ಚಿಂತಿಸಿದನು. ಐರ್ಲಂಡಿನಲ್ಲಿ ಎರಡುಪಕ್ಷಗಳು ಪರಸ್ಪರ ದ್ವೇಷದಿಂದ ಯಾದವೀಕಲಹಗಳಲ್ಲಿ ತೊಡಗಿದಂತಿತ್ತು. ಅಲ್ಪಸಂಖ್ಯಾಕರಾದ ಪ್ರಾಟೆಸ್ಟೆಂಟರ ಆಡಳಿತ ಅನರ್ಥದಲ್ಲಿ ಪರಿಣಮಿಸಿತ್ತು. ಇವುಗಳನ್ನು ಪರ್ಯಾಲೋಚಿಸಿ ಕಾರ್ನ್‌ವಾಲೀಸ್ ಶ್ರೀಮಂತನು ಇಂಗ್ಲಂಡ್ ಐರ್ಲಂಡ್‌ಗಳನ್ನು ಒಟ್ಟುಗೂಡಿಸಬೇಕೆಂದು ಅಭಿಪ್ರಾಯಪಟ್ಟನು. ಪಿಟ್ಟನೂ ಆ ಯೋಚನೆಗೊಪ್ಪಿ ಡಬ್ಲಿನ್ ಪಾರ್ಲಿಮೆಂಟನ್ನು ಕೊನೆಗಾಣಿಸಲು ಸಂಧಾನನಡೆಸಿದನು. ಆ ಸಭಿಕರು ತಾವಾಗಿಯೇ ಇಂಗ್ಲಿಷ್ ಪಾರ್ಲಿಮೆಂಟಿನಲ್ಲಿ ಒಂದುಗೂಡಲು ಒಪ್ಪಬೇಕಾಗಿತ್ತು. ಅವರನ್ನೊಪ್ಪಿಸಲು ಪಿಟ್ಟನು ಹೇರಳವಾಗಿ ಹಣವನ್ನು (£ 1160000) ವೆಚ್ಚಮಾಡಬೇಕಾಯಿತು. 1800ರಲ್ಲಿ **ಆಕ್ಟ್ ಆಫ್ ಯೂನಿಯನ್** (Act of Union) ರೂಪಗೊಂಡಿತು. ಲಂಡನ್ ಪಾರ್ಲಿಮೆಂಟಿನಲ್ಲಿ 32 ಮಂದಿ ಐರಿಷ್ ಶ್ರೀಮಂತರೂ 100 ಮಂದಿ ಸಾಮಾನ್ಯ ಸಭಿಕರೂ ಐರ್ಲಂಡಿನ ಪ್ರತಿನಿಧಿಗಳಾಗಿರಬೇಕಾಯಿತು. ಐರ್ಲಂಡಿನ ಸರ್ಕಾರವೂ ನ್ಯಾಯಸ್ಥಾನಗಳೂ ಪ್ರತ್ಯೇಕವಾಗಿಯೇ ಇರತಕ್ಕುದೆಂದೂ ಇಂಗ್ಲಂಡ್ ಐರ್ಲಂಡುಗಳ ವ್ಯಾಪಾರವು ನಿರಾತಂಕವಾಗಿರತಕ್ಕುದೆಂದೂ ಐರ್ಲಂಡಿನ ಬೊಕ್ಕಸದಿಂದ ಇಂಗ್ಲಂಡಿಗೆ ಗೊತ್ತಾದ ಅಂಶದಷ್ಟು ಹಣ ವರ್ಷೇ ವರ್ಷೇ ಸಂದಾಯವಾಗಬೇಕೆಂದೂ ಆ ಕಾನೂನಿನ ಇತರ ಅಂಶಗಳು. ಈ ಕಾನೂನಿನಿಂದ ಡಬ್ಲಿನ್ ಪಾರ್ಲಿಮೆಂಟೆಂಬುದರ ಅವತಾರಪೂರ್ತಿಯಾಯಿತು.

**ಐಕ್ಯತೆಯ ಉಪಾಯ**

ಇಂಗ್ಲಂಡ್ ಐರ್ಲಂಡ್‌ಗಳ ಶಾಸಕ ಐಕ್ಯತೆಯನ್ನು ಸಾಧಿಸಿದತರುವಾಯ ಐರಿಷ್ ಕ್ಯಾಥಲಿಕ್ಕರಿಗೆ ಮತಸ್ವಾತಂತ್ರ್ಯವನ್ನು ಕೊಡಿಸುವ ಉಪಾಯಗಳನ್ನು ಪಿಟ್ ಯೋಚಿಸಿದನು. ಹೇಗೋ ಅದು ಜಾರ್ಜ್ ದೊರೆಯ ಕಿವಿಗೆ ಬಿತ್ತು. ಪ್ರಾಟೆಸ್ಟೆಂಟ್ ಮತವನ್ನುದ್ಧರಿಸುತ್ತೇನೆಂದು ತಾನು ಕಿರೀಟಧಾರಣೆವೇಳೆಯಲ್ಲಿ ಮಾಡಿದ ಪ್ರಮಾಣಕ್ಕೆ ಲೋಪವಾಗುವುದೆಂದು ದೊರೆಗೆ ತೋರಿತು. ಪಿಟ್ ಎಷ್ಟುಹೇಳಿದಾಗ್ಯೂ ದೊರೆ ಒಪ್ಪಲಿಲ್ಲ. ಆಗ ಬೇರೆ ಉಪಾಯವನ್ನು ಕಾಣದೆ ಪಿಟ್ ಮಂತ್ರಿತನಕ್ಕೆ ರಾಜಿನಾಮೆಕೊಟ್ಟನು. ತಾನು ಕೊಟ್ಟ ವಚನವನ್ನು ಪಾಲಿಸಲಾರದೆ ಮಂತ್ರಿ ತನ್ನ ಅಧಿಕಾರವನ್ನು ಬಿಟ್ಟುಕೊಟ್ಟಾಗ ಐರಿಷರಿಗೆ ವಿಸ್ಮಯತೋರಿತು. ಹಿಂದಿನಂತೆಯೇ ಪ್ರಾಟೆಸ್ಟೆಂಟರ ಆಡಳಿತ ಭದ್ರಗೊಂಡುದನ್ನು ಕಂಡ ಐರಿಷ್ ಕ್ಯಾಥಲಿಕ್ಕರು ಮೋಸವಾಯಿತೆಂದುಕೊಂಡರು. ಆದರೆ ಬಲಹೀನರಾಗಿದ್ದುದರಿಂದ ಏನನ್ನೂ ಮಾಡಲಾರದೆ ತಮ್ಮ ಸಂಕಟವನ್ನು ನುಂಗಿಕೊಂಡರು. 1803ರಲ್ಲಿ **ಎಮ್ಮೆಟ್** (Emmet) ಎಂಬ ಐರಿಷ ದೇಶಭಕ್ತನು ನಪೋಲಿಯನ್ನನ

**ದೊರೆಯ ಹಟ**

**ಅಸಮಾಧಾನ**

ಸಹಾಯವನ್ನು ನಿರೀಕ್ಷಿಸಿ ದಂಗೆಯೆಬ್ಬಿಸಿದನು. ಆ ದಂಗೆ ಸುಲಭವಾಗಿ ಅಡಗಿ ಹೋಯಿತು. ಆ ತರುವಾಯ ಪರಿತಪ್ತರಾಗಿದ್ದ ಐರಿಷ್ ಕ್ಯಾಥಲಿಕ್ಕರು ಘೋರ ಯುದ್ಧದವೇಳೆಯಲ್ಲಿ ಏನನ್ನೂ ಪ್ರಯತ್ನಿಸಲಾರದೆ ಅಸಹಾಯರಾಗಿ ಕಾಲವನ್ನು ತಳ್ಳಿಕೊಂಡಿದ್ದರು.

## 7. ವ್ಯಾಪಾರ ಸಾಮ್ರಾಜ್ಯ, ಹಿಂದುಸ್ಥಾನ (1760-1820)

ಸಾಮ್ರಾಜ್ಯಕಟ್ಟುವವರೆಲ್ಲರೂ ಹೆಬ್ಬಾಸೆಯಿಂದ ಪ್ರೇರಿತರಾಗಿ ಅಕ್ಕಪಕ್ಕ ದೇಶಗಳನ್ನು ಬಲದಿಂದ ಆಕ್ರಮಿಸಿ ಕೇವಲ ಪರಾಕ್ರಮದಿಂದ ಸಾಮ್ರಾಜ್ಯವನ್ನು ಕಟ್ಟುವರೆಂದು ಸಾಧಾರಣವಾದ ನಂಬಿಕೆ. ಕೀರ್ತಿಮೋಹವೋ ಐಶ್ವರ್ಯದ ಆಸೆಯೋ ಅಂಟಿಕೊಂಡಾಗ ಪ್ರತಾಪಶಾಲಿಗಳಾದವರು ನೆರೆಯ ಕ್ಷೇತ್ರಗಳನ್ನು ಆಕ್ರಮಿಸುವ ಚರ್ಯೆಯು ಏಷ್ಯದಲ್ಲಿಯೂ ಯೂರೋಪಿನಲ್ಲಿಯೂ ಉಂಟು. ಇಂಗ್ಲಿಷರು ಕೂಡ ಬಹುಕಾಲ ನೆರೆಯ ಫ್ರಾನ್ಸ್ ದೇಶವನ್ನು ಗೆಲ್ಲಲು ಯತ್ನಿಸುತ್ತಲೇಇದ್ದರು. ಪೃಥ್ವೀ ಪರಿಚಯವಾದ ತರುವಾಯ ಆಸೆಗಳೇ ಬದಲಾದವು. ಆ ಪೃಥ್ವೀಪರಿಚಯಕ್ಕೂ ಪ್ರೇರಕವಾದುದು ಐಶ್ವರ್ಯದ ಆಸೆ, ಮೂಡಲ ವ್ಯಾಪಾರದ ಲಾಭದಮೇಲಿನ ಪ್ರೇಮ.

ಸ್ಪೈನ್ ಪೋರ್ಚುಗಲ್ ದೇಶಗಳು ಮುಂದಾದ ಮೇಲೆ ಪ್ರಾಟೆಸ್ಟೆಂಟ್ ಮತವು ಹುಟ್ಟಿ ಆ ಮೂಲಕ ಡಚ್ಚರೂ ಇಂಗ್ಲಿಷರೂ ಆ ರಾಜ್ಯಗಳಿಗೆ ಹಗೆಗಳಾಗಿ ಹದಿನೇಳನೆ ಶತಮಾನದಲ್ಲಿ ತಾವೂ ಸಾಮ್ರಾಜ್ಯಕಟ್ಟಲು ತೊಡಗಿದರಷ್ಟೆ. ಪಶ್ಚಿಮದಲ್ಲಿಯೂ ಪೂರ್ವದಲ್ಲಿಯೂ ಇಬ್ಬರೂ ಸಾಹಸಮಾಡಿದರು. ಇಬ್ಬರಿಗೂ ಆ ಶತಮಾನದ ಮಧ್ಯದಲ್ಲಿ ಹೋರಾಟವಾಗಿ ಡಚ್ಚರು ಹಿಂದೆಬಿದ್ದ ವೃತ್ತಾಂತವನ್ನು ಆಗಲೇ ಕಂಡುದಾಯಿತು. ವ್ಯಾಪಾರ ಸಾಧನೆಯಿಂದ ಸಾಮ್ರಾಜ್ಯಲಾಭವಾದುದು ವಿಶೇಷ. ಇಂಗ್ಲಿಷ್ ಜನರು ನಡೆಸಿದ ವ್ಯಾಪಾರವೆಂತಹುದು, ಅದರಿಂದ ಸಾಮ್ರಾಜ್ಯಲಾಭವಾದುದು ಹೇಗೆ ಎಂಬ ಪ್ರಶ್ನೆಗಳಿಗೆ ಸ್ಥೂಲರೀತಿಯಲ್ಲಿ ಸಮಾಧಾನವನ್ನು ಮಾತ್ರ ಈಗ ಕಾಣಬಹುದು.

ವ್ಯಾಪಾರಮೂಲ

ಎಲಿಸಬೆತ್ ರಾಣಿಯಕಾಲದಲ್ಲಿ ಪ್ರಾಟೆಸ್ಟೆಂಟರೂ ಜಲಜೀವಿಗಳೂ ಆದ ಇಂಗ್ಲಿಷರು ಸ್ಪೈನಿನವರನ್ನು ಅಟ್ಲಾಂಟಿಕ್ ಸಾಗರದ ಮಧ್ಯೆ ಆಕ್ರಮಿಸಿ ಲೂಟಿ ಹೊಡೆಯುವುದರಲ್ಲಿ ನಿಪುಣರಾಗಿ ಹೇರಳವಾದ ಧನವನ್ನು ಸಂಪಾದಿಸಿದರು. ಆದರೆ ಆ ಕೊಳ್ಳೆ ಎಷ್ಟುಕಾಲನಡೆದೀತು ? ಸ್ಪೈನಿನವರು ಯುದ್ಧಕ್ಕೆ ನಿಂತು ವಿಪತ್ತನ್ನೇ ಒಡ್ಡಿದರು. ಹಿರೇ ಜೇಮ್ಸ್ ಪಟ್ಟಕ್ಕೆ ಬಂದ ತರುವಾಯ ಈ ಕಡಲ್ಗಳ್ಳತನ ನಿಂತಹಾಗೆಯೇ ಆಯಿತು. ಆದರೆ ಕೊಳ್ಳೆಯಷ್ಟೇ ಲಾಭಕರವಾಗಿದ್ದ ವ್ಯಾಪಾರ ನಿಲ್ಲಲಿಲ್ಲ. ಆಫ್ರಿಕದ ನೀಗ್ರೋಜನರನ್ನು ಹಿಡಿದು ಅಮೆರಿಕದಲ್ಲಿ ಗುಲಾಮರಂತೆ ಮಾರುವುದನ್ನು ಸ್ಪೈನ್

ಪೋರ್ಚುಗಲ್‌ದೇಶಗಳವರೇ ಮೊದಲಿಟ್ಟರು. ಎಲಿಸಬೆತ್‌ಕಾಲದಲ್ಲಿ ಇಂಗ್ಲಿಷರೂ ಆ ವ್ಯಾಪಾರದಲ್ಲಿ ಪ್ರವೇಶಿಸಿದರು. ಆಫ್ರಿಕದಲ್ಲಿ ಮನುಷ್ಯರ ಬೇಟೆಯಾಡಿ ಹಿಂಡು ಹಿಂಡಾಗಿ ನೀಗ್ರೋಜನರನ್ನು ಸರಪಣಿಗಳಿಂದ ಕಟ್ಟಿ ಅಮೆರಿಕಕ್ಕೆ ಸಾಗಿಸುತ್ತಿದ್ದಾಗ ಪ್ರಯಾಣದಲ್ಲಿಯೇ ಸರಿಯಾದ ಅನ್ನಾಹಾರಗಳಿಲ್ಲದೆ ರೋಗ

**ಗುಲಾಂ ವ್ಯಾಪಾರ**

ರುಜನಗಳಿಗೆ ತುತ್ತಾದ ನೀಗ್ರೋಜನರೆಷ್ಟೋ ಲೆಕ್ಕವಿಲ್ಲ. ದಯಾದಾಕ್ಷಿಣ್ಯಗಳಿಲ್ಲದೆ ಐರೋಪ್ಯರು ಕಪ್ಪುಜನರನ್ನು ಹಿಡಿದು ಸಾಗಿಸಿ ವೆಸ್ಟಿಂಡೀಸ್‌ದ್ವೀಪಗಳಲ್ಲಿಯೂ ಆ ದ್ವೀಪಗಳ ಪಕ್ಕದಲ್ಲಿದ್ದ ಕ್ಷೇತ್ರಗಳಲ್ಲಿಯೂ ಮಾರಿ ಅಧಿಕವಾದ ಲಾಭವನ್ನು ಸಂಪಾದಿಸಿದರು. ಇಂಗ್ಲಂಡಿನಲ್ಲಿ ಈ ವ್ಯಾಪಾರಕ್ಕಾಗಿ ಜಾಯಿಂಟ್‌ಸ್ಟಾಕ್ ಕಂಪೆನಿಗಳಿದ್ದವು. ತಮ್ಮ ಸಮುದ್ರಪ್ರಾಬಲ್ಯ ಹೆಚ್ಚಿದಂತೆ ಇಂಗ್ಲಿಷರು ಈ ವ್ಯಾಪಾರವನ್ನೂ ಹೆಚ್ಚಿಸಿದರು. ಸ್ಪೈನ್ ಪಟ್ಟದ ಜಗಳ ಮುಗಿದು ಕರಾರು ನಡೆದಾಗ ಈ ವ್ಯಾಪಾರ ತಮಗೆ ಸರ್ವಮಾನ್ಯವಾಗಿರಬೇಕೆಂದು ಷರತ್ತು ಬರೆಸಿಕೊಂಡರು. ಆ ತರುವಾಯ ಅಮೆರಿಕದೊಂದಿಗೆ ವ್ಯಾಪಾರ ನಡೆಸುತ್ತಿದ್ದ ಇಂಗ್ಲಿಷರಿಗೆ ಮೂರು ವಿಧವಾಗಿ ಲಾಭವಾಯಿತು. ಆಟದ ನೋಟದ ಸಾಮಾನನ್ನು ಹೊತ್ತು ಆಫ್ರಿಕದಲ್ಲಿ ಲಾಭಕ್ಕೆ ಮಾರುವುದು, ಅಲ್ಲಿಂದ ನೀಗ್ರೋಜನರ ಹಿಂಡನ್ನು ಹಡಗಿನಲ್ಲಿ ಸಾಗಿಸಿ ಅಮೆರಿಕದಲ್ಲಿ ತಾವಿಟ್ಟ ಬೆಲೆಗೆ ಮಾರಿ ಲಾಭವನ್ನು ಸಂಪಾದಿಸಿಕೊಳ್ಳುವುದು, ಈರೀತಿ ಬಂದ ಹಣವನ್ನಿಟ್ಟು ಅಲ್ಲಿ ಸಕ್ಕರೆ

**ಅಮೆರಿಕದಲ್ಲಿ ಲಾಭ**

ಯನ್ನೋ ಹೊಗೆಸೊಪ್ಪನ್ನೋ ಕೊಂಡುಕೊಂಡುಬಂದು ಇಂಗ್ಲಂಡಿನಲ್ಲಿ ಲಾಭಕ್ಕೆ ಮಾರುವುದು. ಈರೀತಿಯ ವ್ಯಾಪಾರದಲ್ಲಿ ಲಂಡನ್ ಬ್ರಿಸ್ಟಲ್ ಲಿವರ್ಪೂಲ್ ನಗರಗಳ ವರ್ತಕರು ಪುಷ್ಟರಾದರು. ವ್ಯಾಪಾರದ ಕಂಪೆನಿಗಳು ರೂಪಗೊಂಡು ಲಾಭ ಪಡೆಯುತ್ತಿದ್ದುದಕ್ಕೂ ನೆಮ್ಮದಿವಂತರು ತಮ್ಮ ಹಣವನ್ನು ಅಂತಹ ಕಂಪೆನಿಗಳಲ್ಲಿಡುತ್ತಿದ್ದುದಕ್ಕೂ ಸೌತ್ ಸೀ ಕಂಪೆನಿಯು ವೃತ್ತಾಂತ ನಿದರ್ಶನ.

ವ್ಯಾಪಾರದ ಆಸೆಯಿಂದ ವೆಸ್ಟಿಂಡೀಸ್ ದ್ವೀಪಗಳಲ್ಲಿ ಓಡಾಡುತ್ತಲಿದ್ದು ಮೆಕ್ಸಿಕೊ ಉತ್ತರದಲ್ಲಿ ಇಂಗ್ಲಿಷರೂ ಫ್ರೆಂಚರೂ ಕಾಲೊನಿಗಳನ್ನು ಕಟ್ಟಿದ ವಿವರ ಹಿಂದೆಯೇ ಆಯಿತು. ಕಾಲೊನಿಗಳನ್ನು ಹಿತ್ತಿಲುಗಳಂತೆ ಕಂಡು ಅವುಗಳೊಡನೆ ನಡೆಸಿದ ವ್ಯಾಪಾರ ವ್ಯವಹಾರಗಳಲ್ಲಿ ತಾಯ್ನಾಡೆನಿಸಿದ ಇಂಗ್ಲಂಡಿಗೆ ಸರ್ವವಿಧದಲ್ಲಿಯೂ ಲಾಭವಾಗುವಂತೆ ಅನೇಕಕಾಲ ನಡೆದುದನ್ನೂ ಕಂಡೆವು. ಮೂರನೆ ಜಾರ್ಜ್ ದೊರೆಯ ಹೆಡ್ಡತನದಿಂದ ಸಂಯುಕ್ತಸಂಸ್ಥಾನಗಳೆಂಬವು ಜಾರಿ

**ಕ್ಷೇತ್ರ ಲಾಭ**

ಕೊಂಡಾಗ್ಗೂ **ನ್ಯೂಫೌಂಡ್ಲಂಡ್, ನೋವಸ್ಕೋಷಿಯ, ಕನಡ**ವೆಂಬ ವಿಶಾಲವಾದ ಕ್ಷೇತ್ರ ಇಂಗ್ಲಿಷರ ಪಾಲಾಗಿತ್ತು. ವೆಸ್ಟಿಂಡೀಸೆಂಬ ದ್ವೀಪರಾಶಿಯಲ್ಲಿ ಅನೇಕ ದ್ವೀಪಗಳು ವಶವಾಗಿದ್ದವು. ಫ್ರಾನ್ಸಿನೊಡನೆ

ನಡೆದ ಯುದ್ಧವೇಳೆಯಲ್ಲಿ ಸ್ಪೈನ್ ಹಾಲಂಡುಗಳು ಕೂಡ ವೈರಿಗಳೆಂದು ಗಣ್ಯವಾದುದರಿಂದ ಇಂಗ್ಲಿಷರು **ಟ್ರಿನಿಡಾಡ್** ದ್ವೀಪವನ್ನಲ್ಲದೆ ದಕ್ಷಿಣ ಅಮೆರಿಕದಲ್ಲಿ **ಗ್ವಿಯೂನ** ಎಂಬ ಕ್ಷೇತ್ರವನ್ನೂ ಗೆದ್ದು ವಶದಲ್ಲಿಟ್ಟುಕೊಂಡರು.

**ಆಸ್ಟ್ರೇಲಿಯ**

ಸಂಯುಕ್ತ ಸಂಸ್ಥಾನಗಳು ಜಾರಿಕೊಂಡಬಳಿಕ ಬೇರೆ ಕ್ಷೇತ್ರಗಳನ್ನು ಸಂಪಾದಿಸಿಕೊಳ್ಳುವ ಆಸೆಯು ಹಲಕೆಲವರಿಂಗ್ಲಿಷರಲ್ಲಿ ಹುಟ್ಟಿತ್ತು. **ಕ್ಯಾಪ್ಟನ್ ಕುಕ್** (Captain Cook) ಎಂಬ ಸಾಹಸಿಯು ಹಿಂದೂಸಾಗರದಲ್ಲಿ ಯಾನಮಾಡಿ ಆಸ್ಟ್ರೇಲಿಯದ ಪರಿಚಯವನ್ನು ಚನ್ನಾಗಿ ಮಾಡಿಕೊಂಡನು. 1788ರಲ್ಲಿಯೇ **ನ್ಯೂ ಸೌತ್ ವೇಲ್ಸ್** (New South Wales) ಎಂಬ ಕ್ಷೇತ್ರದ ಆಕ್ರಮಣ ನಡೆಯಿತು. ಪಿಟ್ ಮಂತ್ರಿಯ ಪ್ರೋತ್ಸಾಹವಿದ್ದೇ ಇತ್ತು. ನಪೋಲಿಯನ್ನೊಡನೆ ಯುದ್ಧ ನಡೆಸುತ್ತಿದ್ದಾಗ **ಕೇಪ್ ಕಾಲೊನಿ** ಮತ್ತು **ಸಿಂಹಳ** ದ್ವೀಪಗಳನ್ನು ಇಂಗ್ಲಿಷರು ಡಚ್ಚರಿಂದ ಕಿತ್ತುಕೊಂಡರು. **ಮಾಲ್ಟ** ದ್ವೀಪವನ್ನು ಆಕ್ರಮಿಸಿ ತಮ್ಮ ವಶದಲ್ಲಿಯೇ ಇಟ್ಟುಕೊಂಡರು. ಭೂಮಧ್ಯಸಮುದ್ರವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಲು ಅನುಕೂಲವಾಯಿತು.

**ಬ್ರಿಟಿಷ್ ಕಂಪೆನಿಯ ಲಾಭ**

ಆದರೆ ಇಂಗ್ಲಂಡಿಗೆ ದೊರೆತ ಸಾಮ್ರಾಜ್ಯದಲ್ಲೆಲ್ಲ ಅದ್ಭುತವೆನಿಸಿದುದು **ಹಿಂದುಸ್ತಾನ್**. 1600ರಲ್ಲಿ ಎಂಭತ್ತುಮಂದಿ ವರ್ತಕರು ಸೇರಿ ಈಸ್ಟಿಂಡಿಯ ಕಂಪನಿಯನ್ನು ಕಟ್ಟಿ ಸರ್ವಮಾನ್ಯಸನ್ನದನ್ನು ಪಡೆದು ವ್ಯಾಪಾರಕ್ಕೆ ತೊಡಗಿ 17 ನೆ ಶತಮಾನದಲ್ಲೆಲ್ಲ ಪೋರ್ಚುಗೀಸರೊಡನೆಯೂ ಡಚ್ಚರೊಡನೆಯೂ ಹೆಣಗಾಡುತ್ತ ಲಾಭವನ್ನು ಸಂಪಾದಿಸಿದರು. ವಾಸನಾದ್ರವ್ಯಗಳು, ರೇಷ್ಮೆ, ನೀಲಿ, ಕರ್ಪೂರ, ಹತ್ತಿಬಟ್ಟೆಗಳನ್ನು ಸಾಗಿಸಿ ಇಂಗ್ಲಂಡಿನಲ್ಲಿ ಮಾರಿ ಸಂಪಾದಿಸಿದ ಲಾಭದ ಹಣದಲ್ಲಿ ಹಿರೇಜೇಮ್ಸ್ ಹಿರೇಚಾರ್ಲ್ಸ್ ದೊರೆಗಳೂ ಆಸ್ಥಾನಿಕರೂ ಆಗಾಗ್ಗೆ ಭಾಗವನ್ನು ಪಡೆಯುತ್ತಲಿದ್ದರು. ಡಚ್ಚರ ಪ್ರಾಬಲ್ಯವಡಗಿದಮೇಲೆ ಕಂಪೆನಿಯವರಿಗೆ ನಿರುಪಾಧಿಕವಾಯಿತು. ಆದರೆ ಫ್ರೆಂಚರ ಪ್ರವೇಶ ಅದೇವೇಳೆಗಾಯಿತು. ಮುಘಲ್‌ಸಾಮ್ರಾಜ್ಯ ಭದ್ರವಾಗಿದ್ದಷ್ಟು ಕಾಲ ಪರಂಗಿಯವರಿಗೆ ಕ್ಷೇತ್ರಸಂಪಾದನೆಯಾಗಲಿಲ್ಲ. ಆ ಉದ್ದೇಶವೂ ಇರಲಿಲ್ಲ. ವ್ಯಾಪಾರದ ಲಾಭವೊಂದೇ ಬೇಕಾಗಿತ್ತು. ಈಜಿಪ್ಟಿನಿಂದ ಜಪಾನ್‌ವರೆಗಿದ್ದ ಏಷ್ಯದ ತೀರಗಳಲ್ಲಿ ಸಾಧ್ಯವಾದಷ್ಟು ವ್ಯಾಪಾರ ನಡೆಸುತ್ತಿದ್ದ ಕಂಪನಿಯವರು ಲಾಭದರೂಪವಾಗಿಯೇ ಹೇರಳವಾದ ಸಂಪಾದನೆ ಮಾಡಿದರು. ಒಟ್ಟು ಲೆಕ್ಕದಲ್ಲಿ ವರ್ಷಕ್ಕೆ ಸರಾಸರಿ ಸೇಕಡ 235ರಷ್ಟು ಲಾಭವಾಗುತ್ತಿತ್ತು. 1750ವೇಳೆಗೆ ಈಸ್ಟಿಂಡಿಯ ಕಂಪನಿಯವರು ಇಂಗ್ಲಂಡಿನ ಸರ್ಕಾರಕ್ಕೆ £ 4,200,000ನ್ನು ಸಾಲವಾಗಿ ಕೊಟ್ಟಿದ್ದರು. ಲಂಚಗಳ ರೂಪದಲ್ಲಿ ಕೊಟ್ಟದ್ದು ಲೆಕ್ಕವಿಲ್ಲ. ತಮ್ಮ ಸನ್ನದನ್ನು ಹೊಸದಾಗಿ

ಪಡೆಯಬೇಕಾದಾಗಲೂ ಅನುಕೂಲಗಳು ಬೇಕಾದಾಗಲೂ ಕಂಪನಿಯವರು ಮಂತ್ರಿಗಳಿಗೂ ಪಾರ್ಲಿಮೆಂಟಿನ ಸಭಿಕರಿಗೂ ಲಂಚವನ್ನು ಕೊಡುವುದು ವಾಡಿಕೆಯಾಗಿಯೇ ಆಗಿತ್ತು. 18ನೆ ಶತಮಾನದ ಪೂರ್ವಾರ್ಧವೆಲ್ಲ ವಿಗ್ಗರ ಲಂಚಪ್ರಪಂಚವಾಗಿದ್ದಿತಷ್ಟೆ.

18ನೆ ಶತಮಾನದ ಮಧ್ಯಭಾಗದಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಜಗಳಗಳು ಮೊದಲಾದವು. ಅವುಗಳಲ್ಲಿ ಡೂಪ್ಲೆ ಕಂಡ ಉಪಾಯ ದೊಡ್ಡದಾಗಿತ್ತು. ಮಾತೃದೇಶಕ್ಕೆ ವೆಚ್ಚವಿಲ್ಲದೆ ಹಿಂದುಸ್ತಾನದಲ್ಲಿ ಸಾಮ್ರಾಜ್ಯಸಂಪಾದನೆಯ ಮಾರ್ಗವನ್ನು ಆತನು ಕಂಡುಕೊಂಡನು. ಫ್ರೆಂಚರು ಸೋತಬಳಿಕ ಇಂಗ್ಲಿಷರಿಗೆ ಆ ಉಪಾಯವು ಸರ್ವಸ್ವವಾಯಿತು. ಮೂರನೆ ಜಾರ್ಜ್ ದೊರೆಯಾದ ವೇಳೆಯಲ್ಲಿ ಪ್ರಬಲರಾಗಿದ್ದ ಮರಾಟೆಯವರು ದಿಲ್ಲಿ ಪಂಜಾಬುಗಳಲ್ಲಿ ತೊಡಗಿ ಪೂರಾ ಸೋತು ಅನ್ಯಮನಸ್ಕರಾಗಿದ್ದಾಗ ಬಂಗಾಳ ಇಂಗ್ಲಿಷರವಶವಾಯಿತು. ಲಾಭಮಾತ್ರವನ್ನೆಣಿಸುತ್ತಿದ್ದ ಕಂಪನಿಯವರು ಆಡಳಿತವನ್ನು ಲಾಭಕ್ಕಾಗಿ ನಡೆಸಿದರು. ಕಂಪನಿಯ ನೌಕರರು ಸ್ವಂತವ್ಯಾಪಾರದಲ್ಲಿ ತೊಡಗುತ್ತಿದ್ದುದಲ್ಲದೆ ಸಾಧ್ಯವಾದಷ್ಟು ಬೇಗನೆ ಧನಿಕರಾಗಲು ಸರ್ವಪ್ರಯತ್ನಗಳನ್ನೂ ಮಾಡಿದರು. ಇಂಗ್ಲಿಷರಿಗೆ ಕೆಟ್ಟಹೆಸರನ್ನು ತಂದಿಟ್ಟ ಹದಿನೈದು ವರ್ಷದ (1757-1772) ನೀಚದೌಲತ್ತಿನಲ್ಲಿ ಬಂಗಾಳವು ದರಿದ್ರಕ್ಷೇತ್ರವಾಗಿ ಇಂಗ್ಲಂಡಿಗೆ ಕೋಟ್ಯಂತರ ಧನವು ಸಾಗಿತು.

**ಸಾಮ್ರಾಜ್ಯ ಸಂಪಾದನೆ**

ಆಗ ನಾರ್ತ್ ಶ್ರೀಮಂತನ ಮಂತ್ರಿತನ. ಪಾರ್ಲಿಮೆಂಟ್ ಸಭಿಕರಲ್ಲಿ ಕೆಲವರು ಕಂಪನಿನಡೆಸಿದ ಅನ್ಯಾಯಗಳನ್ನು ಕೇಳಿ ಕೋಪಗೊಂಡರು. ಅನೇಕ ಸಭಿಕರು ಹಿಂದುಸ್ತಾನದಿಂದ ಹಿಂತಿರುಗಿಬಂದು ಧನಿಕರಾಗಿ ಮೆರೆಯುತ್ತಿದ್ದ ನೀಚರನ್ನು ಕಂಡು ಅಸೂಯೆಗೊಂಡರು. ಎಲ್ಲರೂ ಸೇರಿ ಕಂಪನಿಯನ್ನು ಸರ್ಕಾರಕ್ಕೆ ಅಧೀನವಾಗಿಡಲು ತವಕಪಟ್ಟರು. ಪರಿಣಾಮವಾಗಿ 1773ರಲ್ಲಿ **ರೆಗ್ಯುಲೇಟಿಂಗ್ ಆಕ್ಟ್** (Regulating Act) ಎಂಬ ಕಾನೂನು ನಡೆಯಿತು. ಆ ಕಾನೂನಿನಿಂದ ಕಲ್ಕತ್ತೆಯಲ್ಲಿ ಗವರ್ನರ್ ಜನರಲ್, ಆತನಿಗೊಂದುಸಭೆ, ಮದರಾಸು ಮುಂಬಯಿಗಳಲ್ಲಿ ಅಧೀನ ಗವರ್ನರುಗಳು, ಕಲ್ಕತ್ತೆಯಲ್ಲಿ ಶ್ರೇಷ್ಠನ್ಯಾಯಸ್ಥಾನ ಸ್ಥಾಪಿತವಾದ ಅಂಶಗಳು ತಿಳಿದಿರತಕ್ಕವೇ.

**ಪಾರ್ಲಿಮೆಂಟಿನ ಪಾರುಪತ್ಯ**

ನಾರ್ತ್ ಶ್ರೀಮಂತನು ದೊರೆಗೆ ಅಡಿಯಾಳಾಗಿ ಅತ್ತ ಅಮೆರಿಕವನ್ನು ನೀಗುತ್ತಿದ್ದ ಕಾಲದಲ್ಲಿಯೇ ಇಂಡಿಯದಲ್ಲಿ ಬ್ರಿಟಿಷ್ **ಗವರ್ನರ್ ಜನರಲ್ ವಾರೆನಹೇಸ್ಟಿಂಗ್ಸ**ನಿದ್ದು ಬ್ರಿಟಿಷರ ಸಾಮ್ರಾಜ್ಯವನ್ನು ಭದ್ರಪಡಿಸಿದನು. ಹೈದರಾಲಿಯೊಂದಿಗೊಂದು ಭಾರಿ ಯುದ್ಧವಾದಾಗಲೇ ಪ್ರಬಲ ಮರಾಟೆಯವರೊಡನೆಯೂ ಯುದ್ಧಕ್ಕಿಟ್ಟುಕೊಂಡಿತು.

1776ರಿಂದ 1782ರವರೆಗೆ ನಡೆದಕಾಲ ಇಂಗ್ಲಿಷರಿಗೆ ಪರೀಕ್ಷೆಯಕಾಲ. ಆಗ ಫ್ರೆಂಚರು ಸಮುದ್ರಪ್ರಾಬಲ್ಯವನ್ನು ಸಾಧಿಸಿಕೊಳ್ಳಲು ಒಳ್ಳೆ ಪ್ರಯತ್ನಮಾಡುತ್ತಿದ್ದರು. ಆ ಸಮಯದಲ್ಲಿ ಹೈದರಾಲಿಯೂ ನಾನಾಫಡನವೀಸನೂ ಒಟ್ಟುಸೇರಿಯೋ ಅಥವಾ ಮಹ ದೇವಸಿಂಧೆ ನಾನಾಫಡನವೀಸನಲ್ಲಿ ಅಸೂಯೆ ಪಡದೆಯೋ ಇದ್ದಿದ್ದರೆ ಪರಿಣಾಮ ಬೇರೆ ಯಾಗಬಹುದಾಗಿತ್ತು. ಆದರೆ ಹಿಂದುಸ್ತಾನದಲ್ಲಿ ಆಳುತ್ತಿದ್ದ ಪ್ರಭುಗಳಲ್ಲೊಬ್ಬರಿ ಗಾದರೂ ಯೂರೋಪಿನ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವ ಆಲೋಚನೆಯಿರಲಿಲ್ಲ. ಕೂಪಮಂಡೂಕಗಳಂತಿದ್ದುಕೊಂಡು ತಮ್ಮ ಸಣ್ಣರಾಜ್ಯಗಳು ತಮಗಿದ್ದರೆ ಸಾಕೆಂದು ಕೊಂಡಿದ್ದರು. ಸ್ವಂತ ಕ್ಷೇಮಕ್ಕಾಗಿ ಅನೇಕರು ಇಂಗ್ಲಿಷರಿಗೆ ಸಹಾಯಮಾಡಿದರು.

**ಬ್ರಿಟಿಷರ ಅಭಿಮಾನ**

ಇಂಗ್ಲಿಷರಾದರೋ ಒಗ್ಗಟ್ಟುಳ್ಳವರು. ವೇತನದಾಸೆಯಿಂದ ಸರದಾರರಾಗಿ ಭಾರತೀಯ ಪ್ರಭುಗಳನ್ನು ಆಶ್ರಯಿಸಿದವರುಕೂಡ ಇಂಗ್ಲಿಷರಿಗೆ ವಿರೋಧವಾಗಿ ತಾವು ಯುದ್ಧಮಾಡುವುದಿಲ್ಲವೆಂದು ಮೊದಲೇ ಷರತ್ತನ್ನು ಮಾಡಿಕೊಳ್ಳುತ್ತಿದ್ದರು. ಸೆರೆಸಿಕ್ಕಿದ ಇಂಗ್ಲಿಷರನ್ನು ತನ್ನ ಸೈನ್ಯ ದಲ್ಲಿ ಸೇರಿಸಿಕೊಳ್ಳಲು ಹೈದರಾಲಿ ಎಷ್ಟು ಪ್ರಯತ್ನ ಮಾಡಿದರೂ ವ್ಯರ್ಥವೇ ಆಯಿತು. ಇಂಗ್ಲಿಷರಿಗೆ ಒಗ್ಗಟ್ಟು ಮಾತ್ರವಲ್ಲದೆ ಸಾಹಸವಿತ್ತು, ಜಾತ್ಯಭಿ ಮಾನವೂ ದೇಶಭಕ್ತಿಯೂ ಉಜ್ಜ್ವಲವಾಗಿತ್ತು. ವಾರ್ರ‍ಹೇಸ್ಟಿಂಗ್ಸ್ ಇಷ್ಟಪಟ್ಟಿದ್ದರೆ ತಾನೇ ಬಂಗಾಳ ಬಿಹಾರಗಳಿಗೆ ನವಾಬನಾಗಿ ದೊಡ್ಡಸೈನ್ಯ ಕೂಡಿಹಾಕಿ ತನ್ನ ವಂಶ ವನ್ನು ಸ್ಥಾಪಿಸಿಕೊಳ್ಳಬಹುದಾಗಿತ್ತು. ಇಂಗ್ಲಂಡಿಗೆ ಹಿಂತಿರುಗುವ ಸಮಯದಲ್ಲಿ ಅಲ್ಲಿ ತನ್ನ ವಿಚಾರಣೆಯಾಗುವ ಅಂಶ ಆತನಿಗೆ ಸ್ಪಷ್ಟವಾಗಿತ್ತು. ಆದಾಗ್ಗೂ ಧೈರ್ಯವಹಿಸಿ ಇಂಗ್ಲಂಡಿನಲ್ಲಿ ಪಾರ್ಲಿಮೆಂಟಿನ ಇಂಪೀಚ್ಮೆಂಟಿಗೆ ಸಿಕ್ಕಿ ಏಳುವರ್ಷದ ಹಿಂಸೆಯನ್ನು ಅನುಭವಿಸಿದನು.

ಆ ಸಮಯದಲ್ಲಿ ರೆಗ್ಯುಲೇಟಿಂಗ್ ಆಕ್ಟ್ ಸರಿಯಾಗಿಲ್ಲವೆಂದು ಇಂಗ್ಲಂಡಿನಲ್ಲಿ ಎಲ್ಲರೂ ಭಾವಿಸಿದರು. 1783ರಲ್ಲಿ ಮಂತ್ರಿಯಾಗಿದ್ದ **ಫಾಕ್ಸ್** ಎಂಬ ಪ್ರಮುಖನು ಕಂಪನಿಯ ಆಡಳಿತವನ್ನೆಲ್ಲ ಪಾರ್ಲಿಮೆಂಟಿನ ಏಳುಸಭಿಕರ ಮೇಲ್ವಿಚಾರಣೆಗೆ ಗುರಿ ಮಾಡಬೇಕೆಂಬ ಮುಸೂದೆಯನ್ನು ಪ್ರಾರಂಭಿಸಿದನು. ಕಂಪನಿಯವರು ಸಂಪಾದಿಸಿದ ರಾಜ್ಯ ತಮಗೆ ಸೇರಬೇಕೆಂಬ ಆಸೆ ದೊರೆಗೂ ಮಂತ್ರಿಗಳಿಗೂ ಸಭಿಕರಿಗೂ ಇತ್ತು. ಫಾಕ್ಸ್ ಕೊಟ್ಟ ಮುಸೂದೆಯಲ್ಲಿ ದೊರೆಗೆ ಅಧಿಕಾರವಿರಲಿಲ್ಲ. ಆಗ ದೊರೆ ಪರಮ ವಿರೋಧವನ್ನು ತೋರಿ ಮುಸೂದೆಯನ್ನು ಹಾಳುಮಾಡಿ ಅದೇ ಸಂದರ್ಭದಲ್ಲಿ ಆತನನ್ನು ಮಂತ್ರಿತನದಿಂದ ತಪ್ಪಿಸಿದನು. ಹೊಸಮಂತ್ರಿಯಾದ ಕಿರೇಪಿಟ್ಟನು ತನ್ನ ಸ್ನೇಹಿತ **ಕಾರ್ನ್‌ವಾಲೀಸ್ ಶ್ರೀಮಂತ**ನನ್ನು ಗವರ್ನರ್ ಜನರಲ್ಲಾಗಿ ಏರ್ಪಡಿಸಿ 1784ರಲ್ಲಿ **ಪಿಟ್ಸ್ ಇಂಡಿಯ ಆಕ್ಟ್** ಎಂಬ ಕಾನೂನನ್ನು ಜಾರಿಗೆತಂದನು. ಅದರಿಂದ

**ಮಂತ್ರಿಗಳ ಯಾಜಮಾನ್ಯ**

ಗವರ್ನರ್ ಜನರಲ್ಲಿನ ಅಧಿಕಾರ ಹೆಚ್ಚಿತು. ಆದರೆ ಮುಖ್ಯವಾದ ಅಂಶ ಕಂಪನಿಯ ಆಡಳಿತ ನಾಶವಾದಂತೆಯೆ ಆದದ್ದು. ಆ ಕಾನೂನಿನ ಪ್ರಕಾರ ಪಾರ್ಲಿಮೆಂಟ್ ಸಭಿಕರಿಂದ ಕೂಡಿದ ಒಂದು ಸಣ್ಣ ಸಭೆಯೂ ಅದಕ್ಕೆ ಅಧ್ಯಕ್ಷನಾಗಿ ಒಬ್ಬ ಮಂತ್ರಿಯೂ ಇದ್ದು **ಬೋರ್ಡ್ ಆಫ್ ಕಂಟ್ರೋಲ್** (Board of Control) ಸಿದ್ಧವಾಯಿತು. ಹಿಂದುಸ್ತಾನದಲ್ಲಿ ಬ್ರಿಟಿಷರ ಆಡಳಿತವೆಲ್ಲವನ್ನೂ ತಮ್ಮ ಸುಭರ್ದಿನಲ್ಲಿ ನಡೆಸಲು ಆರಂಭವಾಯಿತು. ದೊರೆಗೆ ಯಾವಬಿರುದಿಲ್ಲದಿದ್ದರೂ ಮಂತ್ರಿಮಂಡಲಿಗೆ ಹಿಂದುಸ್ತಾನ ಅಧೀನವಾಯಿತು. ಆ ಬೋರ್ಡಿನ ಅಧ್ಯಕ್ಷನೆನಿಸಿದ ಮಂತ್ರಿಯು ವಾಸ್ತವವಾಗಿ ಭಾರತ ಸಚಿವನಾದನು.

ಲಾರ್ಡ್ ಕಾರ್ನ್‌ವಾಲೀಸ್ ಅಧಿಕಾರದಲ್ಲಿದ್ದಾಗ ಬಂಗಾಳದಲ್ಲಿಯೂ ಮದರಾಸಿನಲ್ಲಿಯೂ ಆಡಳಿತದ ಏರ್ಪಾಟುಗಳಲ್ಲದೆ ಟಿಪ್ಪುಸುಲ್ತಾನನೊಡನೆ ಯುದ್ಧವಾಯಿತು. ಟಿಪ್ಪುಸುಲ್ತಾನನು 16ನೆ ಲೂಯಿಬಳಿಗೆ ರಾಯಭಾರಿಗಳನ್ನು ಕಳುಹಿಸಿ ಫ್ರೆಂಚರ ಬೆಂಬಲವನ್ನು ಪಡೆಯಬೇಕೆಂದಿದ್ದವನು. ಬ್ರಿಟಿಷರು ಯುದ್ಧಮಾಡಿ ಬಾರಾಮಹಲ್ ಪ್ರಾಂತಗಳನ್ನು ಸಂಪಾದಿಸಿಕೊಂಡರು. ಆ ತರುವಾಯ **ಲಾರ್ಡ್ ಮಾರ್ನಿಂಗ್ಟನ್** ಅಥವಾ **ವೆಲ್ಲೆಸ್ಲಿ** 1798ರಲ್ಲಿ ಗವರ್ನರ್‌ಜನರಲ್ಲಾಗುವವರೆಗೆ ಬ್ರಿಟಿಷರು ಯುದ್ಧದಲ್ಲಿ ತೊಡಗಲಿಲ್ಲ. ಆ ವರ್ಷವೇ ನಪೋಲಿಯನ್ ಪಿರಮಿಡ್ಡುಗಳ ಯುದ್ಧವನ್ನು ಗೆದ್ದಿದ್ದನು. ವೆಲ್ಲೆಸ್ಲಿ ಹಿಂದುಸ್ತಾನ ತಲಪುವಮೊದಲೇ ಫ್ರೆಂಚರಿಗೆ ಎಲ್ಲೆಲ್ಲಿಯೂ ಆಸ್ಪದವಿಲ್ಲದಂತೆ ನೆರವೇರಿಸಲು ಸಂಕಲ್ಪಿಸಿದ್ದನು. ಅಧಿಕಾರವಹಿಸಿದಕೂಡಲೆ ಒಂದು ಕಡೆ ಸಹಾಯಕ ಸೈನ್ಯಗಳ ಕ್ರಮವೂ ಮತ್ತೊಂದುಕಡೆ ಮೈಸೂರು ಮರಾಟೆಯುದ್ಧಗಳೂ ನಡೆದವು. ಯುದ್ಧಗಳ ವಿವರವೂ ಪರಿಣಾಮವೂ ತಿಳಿದೇಇರುತ್ತದೆ. ಆದರೆ ಇಲ್ಲಿ ಮುಖ್ಯಾಂಶವೆಂದು ನೆನಪಿಡಬೇಕಾದುದು **ಸಹಾಯಕ ಸೈನ್ಯಗಳ ಕರಾರು**ಗಳಲ್ಲಿ ಫ್ರೆಂಚರಿಗೆ ತೋರಿದ ವಿರೋಧ. ಹಿಂದುಸ್ತಾನದ ಪ್ರಭುಗಳಲ್ಲಿ ಫ್ರೆಂಚರು ಸೇರಿಕೊಳ್ಳದಂತೆ ವೆಲ್ಲೆಸ್ಲಿ ನೆರವೇರಿಸಿದನು. ಮುಖ್ಯ ರಾಜಧಾನಿಗಳಲ್ಲಿ ಬ್ರಿಟಿಷರ ಸೈನ್ಯಗಳನ್ನಿಟ್ಟು ಅವುಗಳ ವೆಚ್ಚವನ್ನು ಆ ರಾಜರಿಂದಲೇ ಎತ್ತುವ ಏರ್ಪಾಟುಮಾಡಿದನು. ಆ ರಾಜರು ಒಟ್ಟುಗೂಡದಂತೆ ನೆರವೇರಿಸಿದನು. ದಿಲ್ಲಿಯಿಂದ ಕಲ್ಕತ್ತೆವರೆಗೆ ಮತ್ತು ಕಲ್ಕತ್ತೆಯಿಂದ ಕನ್ಯಾಕುಮಾರಿಯವರೆಗೆ ಕ್ಷೇತ್ರವಶವಾಯಿತು. ವೆಲ್ಲೆಸ್ಲಿಯ ಕಾರ್ಯನಿರ್ವಾಹಚಾತುರ್ಯದಿಂದ ಬ್ರಿಟಿಷರು ಹಿಂದುಸ್ತಾನದಲ್ಲಿ ಸರ್ವಶಕ್ತರೆನಿಸಿದರು.

**ಸಹಾಯಕ ಸೈನ್ಯಗಳು**

ವೆಲ್ಲೆಸ್ಲಿತರುವಾಯ ಗವರ್ನರ್‌ಜನರಲ್ಲಾಗಿ ಸ್ವಲ್ಪ ಹೆಸರಾದವನು **ಲಾರ್ಡ್ ಮಿಂಟೊ**. ಆಗ ನಪೋಲಿಯನ್ನನ ಉನ್ನತಿಯಕಾಲ. ಪೂರ್ವದಿಕ್ಕಿನಲ್ಲಿ ಎಲ್ಲಿಯೂ

**ಹಿಂದೂಸಾಗರ ಸ್ವಾಧೀನತೆ**

ಫ್ರೆಂಚರಿಗಾಸ್ಪದವಿಲ್ಲದಂತೆ ನೆರವೇರಿಸಲು ಲಾರ್ಡ್ ಮಿಂಟೊ ಪಾರ್ಸೀಸ್ಥಾನ, ಅಫ್ಘಾನಸ್ಥಾನ, ಸಿಂಧು, ಪಂಜಾಬುಗಳ ಪ್ರಭುಗಳೊಂದಿಗೆ ಸ್ನೇಹಕಟ್ಟಿ **ಮಾರಿಷಸ್** ಮತ್ತು **ಜವ** ದ್ವೀಪಗಳನ್ನು ಹಿಡಿಸಿದನು. ಹಿಂದುಸ್ತಾನದ ಭದ್ರತೆಗಾಗಿ ಹಿಂದೂಸಾಗರದ ತೀರಗಳನ್ನೇ ಎಲ್ಲೆಗಳನ್ನಾಗಿಕಾಣಲು ಆ ಕಾಲದಿಂದ ಮೊದಲಾಯಿತು.

**ಹಿಂದುಸ್ತಾನದ ವಶ್ಯತೆ**

ಮೂರನೆ ಜಾರ್ಜ್ ದೊರೆಯೆನಿಸಿದ್ದಾಗಲೆ **ಲಾರ್ಡ್ ಹೇಸ್ಟಿಂಗ್ಸನ** ಅಧಿಕಾರವೂ ಹಿಂದುಸ್ತಾನದಲ್ಲಿ ನಡೆಯಿತು. ಫ್ರೆಂಚರಿಗೆ ಯಾವ ಆಸ್ಪದವೂ ಇರಲಿಲ್ಲ. ಆದರೆ ಹಿಂದುಸ್ತಾನವೆಲ್ಲವನ್ನೂ ಬ್ರಿಟಿಷರವಶದಲ್ಲಿಟ್ಟುಕೊಳ್ಳುವ ಆಸೆಯೂ ಅವಕಾಶವೂ ಇತ್ತು. ಲಾರ್ಡ್ ಹೇಸ್ಟಿಂಗ್ಸ್ ನೇಪಾಲದೊಂದಿಗೆ ಯುದ್ಧವನ್ನಲ್ಲದೆ ಪಿಂಡಾರೆ ಯುದ್ಧವನ್ನೂ ಮರಾಟೆಯುದ್ಧವನ್ನೂ ನಡೆಸಿ ಮರಾಟೆಯವರ ಪೇಶ್ವೆಯನ್ನು ಬ್ರಿಟಿಷರ ಪಿಂಚನ್ದಾರನನ್ನಾಗಿ ಮಾಡಿದನು. ಸಿಂಧು ಪಂಜಾಬುಗಳನ್ನು ಬಿಟ್ಟು ಸಮಸ್ತಹಿಂದುಸ್ತಾನವೂ ಮೂರನೆ ಜಾರ್ಜ್ ದೊರೆಯಕಾಲದಲ್ಲಿ ಬ್ರಿಟಿಷರ ವಶವಾಯಿತೆಂದು ಹೇಳಬಹುದು.

**ವ್ಯಾಪಾರದ ಪಲ್ಲಟ**

ಹದಿನೆಂಟನೆ ಶತಮಾನದ ಉತ್ತರಾರ್ಧದಲ್ಲಿ ಇಂಗ್ಲಂಡಿನ ಆರ್ಥಿಕ ಜೀವನದರೀತಿ ಪಲ್ಲಟವಾಯಿತು. ವ್ಯವಸಾಯವು ಹಿಂದಿದ್ದುದಕ್ಕಿಂತ ಹೆಚ್ಚುಫಲಕಾರಿಯಾದರೂ ಕೈಗಾರಿಕೆಗಳ ಹಿಂದೆಬಿತ್ತು. ಕೈಗಾರಿಕೆಗಳು ಅತಿಯಾಗಿ ಹುಟ್ಟಿ ವೃದ್ಧಿಯಾದವು. ಈ ಬದಲಾವಣೆಯಿಂದ ಹಿಂದುಸ್ತಾನದೊಡನೆ ಬ್ರಿಟಿಷರು ನಡೆಸುತ್ತಿದ್ದ ವ್ಯಾಪಾರವೂ ಬದಲಾವಣೆಯಾಯಿತು. ಈಸ್ಟಿಂಡಿಯ ಕಂಪೆನಿಯವರು ತಂದುಮಾರುತ್ತಿದ್ದ ಹತ್ತಿಬಟ್ಟೆಗಳಿಂದ ತಮ್ಮ ಅನ್ನ ನಾಶವಾಯಿತೆಂದು ಬ್ರಿಟಿಷನೆಯ್ಗೆಯವರು ಹದಿನೇಳನೆ ಶತಮಾನದ ಕೊನೆಕೊನೆಯಲ್ಲಿ ಗಲಭೆಮಾಡಿದ್ದರು. ಹದಿನೆಂಟನೆ ಶತಮಾನದಲ್ಲಿ ಬ್ರಿಟಿಷರು ಕಾರ್ಖಾನೆಗಿರಣಿಗಳನ್ನು ಸ್ಥಾಪಿಸಿಕೊಂಡಮೇಲೆ ಭಾರತವರ್ಷವೆಂಬುದು ಬ್ರಿಟಿಷರಿಗೆ ಸಾಮಗ್ರಿಯ ಉಗ್ರಾಣವಾಗಿಯೂ ತಮ್ಮ ಕೈಗಾರಿಕೆ ಸರಕಿನ ಮಾರಾಟದ ಕ್ಷೇತ್ರವಾಗಿಯೂ ಪರಿಣಮಿಸಬೇಕಾಯಿತು. ಬರಬರುತ್ತ ಆ ಲಕ್ಷ್ಯವೇ ಭಾರತ ಸಚಿವನಿಗೂ ಗವರ್ನರ್ ಜನರಲ್ಲಿಗೂ ಮುಖ್ಯವಾಯಿತು.

## 8. ವ್ಯವಸಾಯ ಕೈಗಾರಿಕೆಗಳ ಪರಿವರ್ತನ (1700-1800)

### ವ್ಯವಸಾಯ ಪಶುಪಾಲನೆಗಳು

ಹದಿನೇಳನೆ ಶತಮಾನದಲ್ಲಿ ರಾಜಾಧಿಕಾರ ತಗ್ಗಿ ಪಾರ್ಲಿಮೆಂಟಿನ ಅಧಿಕಾರ ಹೆಚ್ಚಿದುದು ಒಂದು ಲಕ್ಷಣವಾದರೆ ಸಮುದ್ರಯಾನ ವ್ಯಾಪಾರಸಾಹಸಗಳು ಹೆಚ್ಚಿ ಜನರ ಐಶ್ವರ್ಯವೂ ಹೆಚ್ಚಿದುದು ಮತ್ತೊಂದು ಪ್ರಧಾನ ಲಕ್ಷಣ. ಐಶ್ವರ್ಯ ನೆಮ್ಮದಿಗಳು ಹೆಚ್ಚುತ್ತಬಂದಂತೆ ಇಂಗ್ಲಂಡಿನ ಜನಜೀವನದ ರೀತಿನೀತಿಗಳಲ್ಲಿ ವಿಶೇಷವಾದ ಪರಿಣಾಮಗಳು ತೋರಿದವು. ವ್ಯವಸಾಯದಲ್ಲಿ, ಕೈಗಾರಿಕೆಗಳಲ್ಲಿ, ವ್ಯಾಪಾರದಲ್ಲಿ ಇಂಗ್ಲಿಷ್ ಜನರ ವಿಧಾನಗಳು ತಲೆಕೆಳಗಾಯಿತೆನ್ನುವಷ್ಟು ಬದಲಾಯಿಸಿದವು.

ಹಿರೇ ಜಾರ್ಜ್ ಪಟ್ಟಕ್ಕೆ ಬಂದಾಗ ದೇಶದಲ್ಲಿ ಹಳ್ಳಿಗಳೂ ಸಣ್ಣಪಟ್ಟಣಗಳೂ ಎಲ್ಲೆಲ್ಲಿಯೂ ಇದ್ದವು. ವ್ಯವಸಾಯದಿಂದಲೇ ಬಹುಭಾಗದ ಜನರು ಬದುಕನ್ನು ನಡೆಸುತ್ತಿದ್ದರು. ಎರಡುಕಡೆಗಳಲ್ಲಿಯೂ ಕೆಲವು ಗುಡಿಸಲುಗಳಿದ್ದ ಒಂದೇ ಬೀದಿ, ಒಂದು ಚರ್ಚು, ಪಾದರಿಯ ಮನೆ ಮತ್ತು ಜಮೀನ್ದಾರನ ದೊಡ್ಡಮನೆಯೆಷ್ಟೋ ಅಷ್ಟೆ ಸಾಧಾರಣವಾಗಿ ಹಳ್ಳಿಯರೀತಿ. ಆ ಹಳ್ಳಿಯ ಸುತ್ತ ಹೊಲಗಳು ; ಹೊಲಗಳ ಮಧ್ಯೆ ಓಡಾಡುವುದಕ್ಕೆ ಮಾತ್ರವಲ್ಲದೆ ಗುರುತಿಗಾಗಿ ವಿಶಾಲವಾದ ಬದಿಗಳು. ನಾನ್ನೂರೈನೂರು ವರ್ಷಗಳಿಂದ ಗ್ರಾಮವಿದ್ದದ್ದು ಈರೀತಿ. ಆಗಾಗ ಹಲಕೆಲವರು ಸಾಹಸಿಗಳಾಗಿ ಪಕ್ಕದಲ್ಲಿದ್ದ ಬಂಜರುಭೂಮಿಯನ್ನೋ ಕಾವಲನ್ನೋ ಆಕ್ರಮಿಸಿಕೊಂಡು ಎಲ್ಲಕ್ಕೂ ಬೇಲಿಯಿಟ್ಟು ಅಷ್ಟು ಕ್ಷೇತ್ರದಲ್ಲಿ ಕುರಿಗಳನ್ನು ಸಾಕಿಯೋ ಧಾನ್ಯವನ್ನು ಬೆಳೆದೋ ಧನಿಕರಾಗುತ್ತಿದ್ದರು. ಟ್ಯೂಡರ್ ದೊರೆಗಳ ಕಾಲದಲ್ಲಿ ಮಠಗಳ ಭೂಮಿಗಳನ್ನು ಕೊಂಡವರು ಕುರಿಮಂದೆಗಳನ್ನು ಸಾಕಿ ಧನಿಕರಾದುದು ನೆನಪಿನಲ್ಲಿರಬೇಕು. ದೊಡ್ಡದೊಡ್ಡ ಹೊಲಗಳನ್ನು ಕಟ್ಟಿ ಬೇಲಿಯಿಟ್ಟು ಪ್ರತ್ಯೇಕರಾಗುವರೀತಿ ಹರಡಿಕೊಳ್ಳುತ್ತಿದ್ದಾಗ್ಗೂ ಇಂಗ್ಲಂಡಿನ ಮೂಡಲಲ್ಲಿಯೂ ಮಧ್ಯದಲ್ಲಿಯೂ ಬೇಲಿಗಳಿಲ್ಲದ ಸಣ್ಣ ಹೊಲಗಳನ್ನು ಕೃಷಿಮಾಡಿಯೇ ಜನರು ಬದುಕುತ್ತಿದ್ದರು.

**ಹೊಲಗಳ ಸ್ಥಿತಿ**

ಜಾರ್ಜ್ ದೊರೆಗಳ ಕಾಲದಲ್ಲಿ ಈ ಸ್ಥಿತಿ ಕ್ರಮವಾಗಿ ಬದಲಾಯಿತು. ಉಳುವುದರಲ್ಲಿಯೂ ಬಿತ್ತುವುದರಲ್ಲಿಯೂ ಹೊಸವಿಧಾನಗಳನ್ನು ಕೆಲವರು ಆಚರಣೆಗೆ ತಂದರು. ವಾಲ್ಪೋಲಿನೊಡನೆ ಸೇರಿರಲಾರದೆ ನಿವೃತ್ತನಾದ ಟೌನ್ಷೆಂಡ್ ವ್ಯವಸಾಯದಲ್ಲಿ ತೊಡಗಿ ಟರ್ನಿಪ್ಪುಗಳೆಂಬ ಗಡ್ಡೆಗಳನ್ನು ಉತ್ಕೃಷ್ಟರೀತಿಯಲ್ಲಿ ಬೆಳೆಸಿ ದನಕ್ಕೆ ಹೊಸಮೇವನ್ನು ಚಳಿಗಾಲದಲ್ಲಿ ಒದಗಿಸಿಕೊಟ್ಟನು. ಮೇವಿಲ್ಲದೆ ಹೋಗುವ ಕಾರಣದಿಂದ ಚಳಿಗಾಲ

**ಪಶುಪಾಲನೆ**

**ಸರದಿಬೆಳೆ**

ಬಂದೊಡನೆ ದನಗಳನ್ನು ಕೊಂದುಬಿಡುವುದು ಹಿಂದಿನ ಪದ್ಧತಿಯಾಗಿತ್ತು. ಟರ್ನಿಪ್ಪುಗಳ ಬೆಳೆ ಹೆಚ್ಚಿದುದರಿಂದ ವರ್ಷವೆಲ್ಲ ದನಗಳಿಗೆ ಮೇವೊದಗಿ ವರ್ಷವೆಲ್ಲ ದನದಮಾಂಸ ದೊರಕುವಂತಾಯಿತು. ದನಗಳ ಆರೈಕೆಯಲ್ಲಿಯೂ ಹೊಸರೀತಿಗಳು ಬಳಕೆಯಾಗಿ ಒಳ್ಳೆ ಜಾತಿಯ ದನಗಳನ್ನು ಸಾಕಿಕೊಳ್ಳುವುದು ರೂಢಿಗೆ ಬಂತು. ಆರಂಬದಲ್ಲಿಯೂ ಹೊಸ ವಿಧಾನಗಳು ತೋರಿಕೊಂಡವು. ಮೂರನೆವರ್ಷ ಹೊಲಗಳನ್ನು ಬೀಳು ಬಿಡುವ ಪದ್ಧತಿ ತೊಲಗಿತು. ಬೆಳೆ ಬದಲಾಯಿಸುತ್ತ ನಾಲ್ಕುವರ್ಷಗಳಿಗೊಂದು ಸರದಿಯ ಕ್ರಮವನ್ನನುಸರಿಸಿ ಪ್ರತಿವರ್ಷವೂ ಬೆಳೆತೆಗೆಯುವ ಪದ್ಧತಿ ಎಲ್ಲಕಡೆಯೂ ಬಳಕೆಯಾಯಿತು.

**ದೊಡ್ಡ ಹೊಲಗಳು**

ವ್ಯವಸಾಯ ಪಶುಪಾಲನೆಗಳಲ್ಲಿ ಹೆಚ್ಚುಹೆಚ್ಚು ಲಾಭದೊರೆಯುವುದನ್ನು ಕಂಡು ಧನಿಕರಾದವರು ಭೂಮಿಗಳನ್ನು ಸಂಪಾದಿಸಿ ವಿಶಾಲವಾದ ಕ್ಷೇತ್ರಗಳನ್ನು ತಮ್ಮ ಹೊಲಗಳಾಗಿ ಮಾಡಿಕೊಂಡು ಅವುಗಳಿಗೆ ಬೇಲಿಗಳನ್ನು ಕಟ್ಟಲಾರಂಭಿಸಿದರು. ಜಮೀನ್ದಾರರೇ ಪಾರ್ಲಿಮೆಂಟಿನಲ್ಲಿ ಸಭಿಕರಾಗಿರುತ್ತಿದ್ದುದರಿಂದ ದೊಡ್ಡಹೊಲಗಳನ್ನು ನಿರ್ಮಿಸಿಕೊಳ್ಳುವುದಕ್ಕೂ ಅವುಗಳನ್ನು ಪ್ರತ್ಯೇಕಿಸಲು ಬೇಲಿಗಳನ್ನು ಹಾಕಿಕೊಳ್ಳುವುದಕ್ಕೂ ಅನುಕೂಲವಾದ ಕಾನೂನುಗಳು ಸುಲಭವಾಗಿ ರಚಿತವಾದವು. ಬೀಳುಬಿಟ್ಟಿದ್ದ ಭೂಮಿಗಳೂ ಹುಲ್ಲುಗಾವಲುಗಳೂ ಬರಬರುತ್ತ ಮಾಯವಾದವು. ಅವುಗಳಲ್ಲಿ ಸಾಮಾನ್ಯ ರೈತರಿಗಿದ್ದ ಹಕ್ಕುಗಳನ್ನು ಧನಿಕರು ಕೊಂಡುಕೊಂಡು ವಿಶಾಲವಾದ ಹೊಲಗಳನ್ನು ಬಿಡಿಸಿಕೊಂಡು ಬೇಸಾಯದಲ್ಲಿ ನವವಿಧಾನಗಳನ್ನು ಪ್ರಯೋಗಿಸಲು ತೊಡಗಿದರು. 1760ರಿಂದ ಮೊದಲ್ಗೊಂಡು ಜಿಲ್ಲೆಗಳೆಲ್ಲವೂ ಒಂದೊಂದಾಗಿ ದೊಡ್ಡದೊಡ್ಡ ಹೊಲಗಳ ಕ್ಷೇತ್ರಗಳಾಗಿಹೋದವು. ಇದರಿಂದ ಬೆಳೆಯೇನೋ ಹೆಚ್ಚಿತು. ಧಾನ್ಯದ ಬೆಳೆ ಹಿಂದಿದ್ದುದಕ್ಕಿಂತ ಹೆಚ್ಚೇನೋ ಆಯಿತು. ಆದರೆ ಜನಸಂಖ್ಯೆಯೂ ಹೆಚ್ಚಿತ್ತು. ಹದಿನೆಂಟನೆ ಶತಮಾನದ ಕಡೆಯಲ್ಲಿ ಧಾನ್ಯದಬೆಳೆ ಹೆಚ್ಚಿದಕಾರಣದಿಂದ ದೇಶದ ಜನಕ್ಕೆ ಸಾಕಾದಷ್ಟು ಧಾನ್ಯ ದೇಶದಲ್ಲಿಯೇ ಉತ್ಪತ್ತಿಯಾಗುತ್ತಿತ್ತು. ಆದರೆ ಧಾನ್ಯದ ಧಾರಣೆಮಾತ್ರ ಹೆಚ್ಚಾಗಿಯೇ ಇತ್ತು.

**ಧಾನ್ಯದ ಧಾರಣೆ**

ಸಣ್ಣ ಹೊಲಗಳನ್ನು ಸಾಗುವಳಿಮಾಡಿಕೊಂಡು ಬದುಕುತ್ತಿದ್ದ ರೈತರಿಗೆ ಇದರಿಂದ ಕಷ್ಟಬಂತು. ಸಣ್ಣಹೊಲಗಳಲ್ಲಿ ಹೊಸವಿಧಾನಗಳ ಉಪಯೋಗ ಅಸಾಧ್ಯವಾಗಿತ್ತು. ಆದುದರಿಂದ ಸಣ್ಣಪುಟ್ಟರೈತರುಗಳು ತಮ್ಮ ಹೊಲಗಳನ್ನು ಮಾರಿಕೊಳ್ಳಬೇಕಾಯಿತು. ಕೆಲಕಾಲ ಕಳೆದಮೇಲೆ ಕೂಲಿಯವರ ಗುಂಪಿಗೆ ಸೇರಬೇಕಾಯಿತು.

ಜಮೀನ್ದಾರರೊಡನೆ ಪೋಟಾಪೋಟಿ ನಡೆಸಲಾರದ ಬಡರೈತರು ಕೂಲಿಗೆಲಸಕ್ಕಿಳಿದಾಗ ಸಾಕಾದಷ್ಟು ಕೂಲಿ ದೊರಕಲಿಲ್ಲ. ಅಧಿಕಾರಿಗಳು ಕೂಲಿಯು

**ಕೂಲಿಯವರ ಪಾಡು**

ಕನಿಷ್ಠ ಪ್ರಮಾಣವನ್ನು ಗೊತ್ತುಮಾಡಿದ್ದರೆ ಮೇಲಾಗುತ್ತಿತ್ತು. ಹಾಗೆಮಾಡದೆ ಕೂಲಿಯಿಂದ ಬದುಕುವ ಜನರಿಗೆ ಪರಿಹಾರವಾಗಿ ಬಡವರಸಿಧಿಗೆಂದಿಟ್ಟಿದ್ದ ಹಣದಿಂದ ಸ್ವಲ್ಪಕೊಸರನ್ನು ಕೊಡಿಸಬೇಕೆಂದು ನಿಶ್ಚಯಿಸಿದರು. ಹೀಗೆ ಮಾಡಿದುದರಿಂದ ಕೂಲಿ ಕಡಿಮೆಯಾಗಿಯೇ ಉಳಿದು ಜಮೀನ್ದಾರರಿಗೆ ಅನುಕೂಲವಾಯಿತು. ದೇಹಶ್ರಮಪಟ್ಟು ಬಾಳುತ್ತಿದ್ದ ಜನರಿಗೆ ದುರ್ಗತಿಬಂತು. ಸ್ವತಂತ್ರರಾಗಿದ್ದಾಗ ಬೇಸಾಯಗಾರರು ಹಳ್ಳಿಗಳಲ್ಲಿ ನಡೆಸುತ್ತಿದ್ದ ಸಂತೋಷದ ಜೀವನ ಮಾಯವಾಯಿತು. ದೊಡ್ಡದೊಡ್ಡ ಭೂಮಿಗಳನ್ನು ಕಟ್ಟಿಕೊಂಡ ಜಮೀನ್ದಾರರಿಗೆ ಹೆಚ್ಚುಹೆಚ್ಚು ಲಾಭ ಬರುವಂತಾಗಿ ಕಂದಾಯವೇರಿತು. ರೈತರು ಕೂಲಿಯವರಾಗಿ ತಮ್ಮ ಶ್ರಮಕ್ಕೆ ತಕ್ಕ ಫಲವನ್ನು ಕಾಣದೆ ಅರೆಮನಸ್ಸಿನಿಂದ ಕೆಲಸಮಾಡಬೇಕಾಗಿಬಂತು. ಹಣವುಳಿಸಿಕೊಂಡು ಮುಂದಕ್ಕಾದರೂ ಸ್ವತಂತ್ರನಾದೇನೆಂದು ಆಸೆಪಡುವುದಕ್ಕೂ ಸಾಧ್ಯವಿಲ್ಲದೆ ಹೋಯಿತು. ಸಂಪಾದನೆ ಅತಿ ಸ್ವಲ್ಪವಾಗಿದ್ದುದಲ್ಲದೆ ಬಂದ ಅನ್ನದಲ್ಲಿ ಕೆಲವು ಕವಳಗಳು ದಾನವಾಗಿಬಂದುದು. ಆದುದರಿಂದ ಬಡರೈತರಿಗೂ ಶ್ರಮಜೀವಿಗಳಿಗೂ ಆತ್ಮಗೌರವವೆಂಬುದು ಲೋಪವಾಯಿತು. ಇತರರೆಲ್ಲರೂ ಸೇರಿ ತಮ್ಮನ್ನು ಅನ್ಯಾಯಕ್ಕೆ ಸಿಕ್ಕಿಸಿದರೆಂಬ ನಂಬಿಕೆ ಬೆಳೆದು ಧರ್ಮದಲ್ಲಿ ವಿಶ್ವಾಸಹೋಯಿತು. ಜಮೀನ್ದಾರರಲ್ಲಿ ದ್ವೇಷಬೆಳೆಯಿತು. ಹದಿನೆಂಟನೆಶತಮಾನದ ಕೊನೆಕೊನೆಯಲ್ಲಿ ರೈತರು ಹೊಲಗಳಲ್ಲಿ ಕದಿಯುವುದೂ ನಾಶಮಾಡುವುದೂ ಸಾಮಾನ್ಯವಾಗುತ್ತ ಬಂತು. ಧನವಂತರ ಐಶ್ವರ್ಯಹೆಚ್ಚಿದಂತೆ ಬಡವರ ಪಾಡು ಕಷ್ಟವಾಗುತ್ತಲಿರುವುದಲ್ಲದೆ ಕೆಲವರಿಗೆ ಮಾತ್ರ ಐಶ್ವರ್ಯ ಅನೇಕರಿಗೆ ದಾರಿದ್ರ್ಯದಂತೆ ನಡೆಯುವ ವ್ಯವಸ್ಥೆ ಮೊದಲಾಯಿತು.

**ಉದ್ಯೋಗ ಕೈಗಾರಿಕೆಗಳು** (ಯಂತ್ರಯುಗದ ಆರಂಭ)

ಹದಿನೆಂಟನೆ ಶತಮಾನದಲ್ಲಿ ಬ್ರಿಟನ್ನಿನ ಔದ್ಯೋಗಿಕಜೀವನದರೀತಿಯು ಪೂರ್ಣವಾಗಿ ಬದಲಾಯಿತು. ಸಾಮಾನ್ಯವಾಗಿ ಅದನ್ನು **ಇಂಡಸ್ಟ್ರಿಯಲ್ ರೆವೊಲ್ಯೂಷನ್** (Industrial Revolution) ಎಂದು ಕರೆಯುವುದುಂಟು. ಉದ್ಯೋಗ ಕೈಗಾರಿಕೆಗಳಲ್ಲಿ ಪ್ರಳಯದಂತಹ ವ್ಯತ್ಯಾಸಗಳು ನಡೆದುವೆಂದು ಅಭಿಪ್ರಾಯ. ಈ ಬದಲಾವಣೆ ಇಂಗ್ಲಂಡಿನಲ್ಲಿ ಮೊದಲಾಗಿ ಕಾಲಕ್ರಮದಲ್ಲಿ ಇತರದೇಶಗಳಲ್ಲಿಯೂ ತೋರಿಕೊಂಡ ಕಾರಣದಿಂದ ಮುಖ್ಯವಾದುದು.

ಆನ್‌ರಾಣಿಯ ಕಾಲದಲ್ಲಿ ಕೈಗಾರಿಕೆಯೆಂಬುದು ಮನೆಯಲ್ಲಿ ನಡೆಯುತಕ್ಕುದಾಗಿತ್ತು. ಎಂತಹ ಕೈಗಾರಿಕೆಯಾದರೂ ಕೆಲಸಗಾರನು ತನ್ನ ಮನೆಯಲ್ಲಿಯೋ ಸಣ್ಣ

ಅಂಗಡಿಯಲ್ಲಿಯೋ ತನ್ನ ಸಂಸಾರದವರ ಸಹಾಯದಿಂದಲೂ ಹಲಕೆಲವು ಚಾಕರರ ಸಹಾಯದಿಂದಲೂ ಸರಕನ್ನು ಸಿದ್ಧಗೊಳಿಸಿ ಮಾರುತ್ತಿದ್ದನು.

**ಮನೆ ಕೈಗಾರಿಕೆ**

ಆಯುಧಸಾಯುಧಗಳು ಪುರಾತನ. ವಿಧಾನಗಳೂ ಪುರಾತನ. ಹದಿನೆಂಟನೆ ಶತಮಾನದಲ್ಲಿ ಮೆಲ್ಲಮೆಲ್ಲನೆ ಮೊದಲಾಗಿ ತರುವಾಯ ಬೇಗಬೇಗ ಯಂತ್ರಗಳ ಉಪಯೋಗವು ವ್ಯಾಪಿಸಿತು. ಯಂತ್ರನಿರ್ಮಾಣಕ್ಕೆ ಅತ್ಯವಶ್ಯವಾದ ಕಬ್ಬಿಣದಗಣಿಗಳು ಇಂಗ್ಲಂಡಿನಲ್ಲಿ ಹೇರಳವಾಗಿದ್ದುದು ಇಂಗ್ಲಿಷರ ಭಾಗ್ಯ. ಆ ಗಣಿಗಳ ಪಕ್ಕದಲ್ಲಿಯೇ ಕಲ್ಲಿದ್ದಲ ಗಣಿಗಳಿರುವುದು ಇನ್ನೂ ಹೆಚ್ಚಿನ ಭಾಗ್ಯ. ಆ ಗಣಿಗಳನ್ನು ಅಗೆಸಿ ಕೆಲಸನಡೆಸುವುದಕ್ಕೂ ಹೊಸ ಹೊಸ ಯಂತ್ರಯೋಜನೆಯ ಉತ್ತೇಜನಕ್ಕೂ ಅವಶ್ಯಕವಾದ ಬಂಡವಾಳವು ದೂರವ್ಯಾಪಾರದಿಂದ ಸಿದ್ಧವಾಗಿಯೂ ಇತ್ತು. ಹೆಚ್ಚುಹೆಚ್ಚು ಲಾಭಸಂಪಾದಿಸಿಕೊಳ್ಳುವ ಆಸೆಯಿಂದ ಧನವಂತರು ದೊಡ್ಡ ಹೊಲಗಳನ್ನು ಕಟ್ಟಿದಂತೆ ಕಾರ್ಖಾನೆಗಳನ್ನೂ ಸ್ಥಾಪಿಸಿ ಯಂತ್ರಗಳಿಗೆ ಪ್ರೋತ್ಸಾಹ ಕೊಟ್ಟರು.

**ಬಂಡವಾಳ**

ಅದುರನ್ನು ಕರಗಿಸಿ ಕಬ್ಬಿಣ ತೆಗೆಯುವುದಕ್ಕೆ ಹಿಂದಿನಕಾಲದಲ್ಲಿ ಇದ್ದಲನ್ನು ಸುಡುತ್ತಿದ್ದರು. ಆದ್ದರಿಂದ ಕಾಡುಗಳ ಸಮೀಪದಲ್ಲಿ ಕಬ್ಬಿಣದ ಕೆಲಸವಿರುತ್ತಿತ್ತು. ಬರಬರುತ್ತ ಕಾಡುಗಳು ನೆಲಸಮವಾದಾಗ ಕಬ್ಬಿಣದ ಕೆಲಸ ನಿಂತುಹೋಗುವಂತೆಯೇ ಇತ್ತು. ಹದಿನೆಂಟನೆ ಶತಮಾನದ ಮೊದಲಲ್ಲಿ ಇದ್ದಲಿಗೆ ಕಷ್ಟ ತೋರಲಾರಂಭವಾಯಿತು. ಆಗ ಇದ್ದಲಿಗೆ ಬದಲಾಗಿ ಕಲ್ಲಿದ್ದಲನ್ನುಪಯೋಗಿಸಬಹುದೆಂಬುವನ್ನು ಜಾಣರು ಕೆಲವರು ಕಂಡರು. ಸ್ವಲ್ಪ ಕಾಲದಲ್ಲಿ ಕಬ್ಬಿಣವನ್ನು ಶುದ್ಧಿಗೊಳಿಸುವುದಕ್ಕೆ ಮಾತ್ರವಲ್ಲದೆ ಕಬ್ಬಿಣದ ಸಾಮಾನನ್ನು ಮಾಡುವುದಕ್ಕೂ ಕಲ್ಲಿದ್ದಲು ಉಪಯುಕ್ತವಾಯಿತು.

**ಕಬ್ಬಿಣ-ಕಲ್ಲಿದ್ದಲು**

ಕಲ್ಲಿದ್ದಲಗಣಿಗಳ ಪಕ್ಕದಲ್ಲಿ ಕಬ್ಬಿಣದಕಾರ್ಖಾನೆಗಳು ಹೆಚ್ಚಿದವು. ಕಲ್ಲಿದ್ದಲ ಗಣಿಗಳೂ ಸಮೃದ್ಧಿಯಾಗಿ ಕಾಣಿಸಿದಬಳಿಕ ಕಲ್ಲಿದ್ದಲನ್ನುಸಾಗಿಸಲು ಮಾರ್ಗಗಳೂ ವಾಹನಗಳೂ ಅವಶ್ಯಕವಾಗಿ ಸಂಚಾರ ಸೌಕರ್ಯಗಳು ಅಭಿವೃದ್ಧಿಪಡೆದವು. ರಸ್ತೆಗಳಲ್ಲದೆ ಕಾಲುವೆಗಳೂ ಉಪಯುಕ್ತವಾದವು. ಜಲಮಾರ್ಗದಿಂದ ಕಲ್ಲಿದ್ದಲನ್ನು ಸಾಗಿಸುವುದು ಸುಲಭವಾಗಿದ್ದುದರಿಂದ ದೇಶದಲ್ಲೆಲ್ಲ ಜಲಮಾರ್ಗಗಳು ರೂಢಿಗೊಂಡವು.

**ಸಂಚಾರ ಸೌಕರ್ಯ**

ಟ್ಯೂಡರ್ ಕಾಲದಲ್ಲಿ ಇಂಗ್ಲಂಡಿನ ಕೈಗಾರಿಕೆಯೆಂಬುದೊಂದಾದರೂ ಪ್ರಸಿದ್ಧವಾಗಿರಲಿಲ್ಲ. ಎಲಿಸಬೆತ್ ಕಾಲದಲ್ಲಿ ಡಚ್ಚರೂ ಆ ತರುವಾಯ ಹ್ಯೂಗಿನೊಜನರೂ ಇಂಗ್ಲಂಡಿಗೋಡಿಬಂದು ನೆಲೆಸಿದತರುವಾಯ ನೆಯ್ಗೆಯ ಕೈಗಾರಿಕೆ ವೃದ್ಧಿಯಾಯಿತು. ಕುರಿಗಳನ್ನು ಸಾಕುತ್ತಿದ್ದರೂ ಅವುಗಳ ಉಣ್ಣೆಯನ್ನು ಇಂಗ್ಲಿಷರು ಮಾರಿಕೊಳ್ಳುತ್ತಿದ್ದರು. ಹದಿನೇಳನೆ ಶತಮಾನದಲ್ಲಿ ಉಣ್ಣೆಯನ್ನು ತಾವೇ ನೆಯ್ಯಲು ಮೊದಲಿಟ್ಟರು.

ಆದರೆ ಈಸ್ಟಿಂಡಿಯಕಂಪನಿಯವರು ತಂದು ತುಂಬಿದ ಹತ್ತಿಬಟ್ಟೆಗಳ ವ್ಯಾಪಾರ ಹೆಚ್ಚಿದಂತೆಲ್ಲ ಇಂಗ್ಲಿಷ್ ನೆಯ್ಗೆಯವರಿಗೆ ಕಷ್ಟವಾಯಿತು.

**ವುಲನ್**

ಹಿಂದುಸ್ತಾನದ ಹತ್ತಿಬಟ್ಟೆಗಳನ್ನು ಕೊಳ್ಳುವುದೇ ನೆಮ್ಮದಿವಂತರ ಚರ್ಯೆಯಾಗಿ ಇಂಗ್ಲಿಷ್ ವುಲನ್ ಬಟ್ಟೆಗಳ ಮಾರಾಟವೇ ಕಷ್ಟವಾಯಿತು. ನೆಯ್ಗೆಯವರು ಪಾರ್ಲಿಮೆಂಟ್ ಸಭಿಕರಮುಂದೆ ಗಲಾಟೆಯನ್ನು ನಡೆಸಿದ್ದರು. ಆಗ ಪಾರ್ಲಿಮೆಂಟಿನವರು ವುಲನ್ ನೆಯ್ಗೆಯವರನ್ನು ಪ್ರೋತ್ಸಾಹಿಸಲು ಈಸ್ಟಿಂಡಿಯ ಕಂಪನಿಯವರು ನಡೆಸುತ್ತಿದ್ದ ಹತ್ತಿಬಟ್ಟೆಗಳ ಮಾರಾಟವನ್ನು ತಗ್ಗಿಸುವ ಉದ್ದೇಶದಿಂದ ಆಮದುಸುಂಕಗಳನ್ನೇರಿಸಿದರು. ಹತ್ತಿಬಟ್ಟೆಗಳಿಗಿದ್ದ ಗಿರಾಕಿ ತಗ್ಗಲಿಲ್ಲ. ಆದ್ದರಿಂದ ಕಾಲಕ್ರಮದಲ್ಲಿ ಅರಳೆ ತರಿಸಿಕೊಂಡು ನೂಲುವುದನ್ನೂ ಇಂಗ್ಲಿಷರು ಮೊದಲಿಟ್ಟರು. 1738ರಲ್ಲಿ ಹೊಸರೀತಿಯ ಮಗ್ಗವೊಂದನ್ನು ಒಬ್ಬನು ಹೊಂದಿಸಿದನು. ಆದರೆ ನೂತನೂಲು ಸಾಕಾದಷ್ಟಿರಲಿಲ್ಲ. 1770ರಲ್ಲಿ ನೂಲುವ

**ನೂಲುವ ಯಂತ್ರ**

ಯಂತ್ರವನ್ನು **ಹಾಗ್ರೀವ್ಸ್** (Hargreaves) ಎಂಬ ಜಾಣನು ಹೊಂದಿಸಿ ಅದಕ್ಕೆ ತನ್ನ ಹೆಂಡತಿಯ ಹೆಸರಿಟ್ಟನು (Spinning jenny). ಅದರಿಂದ ಹೆಚ್ಚು ಹೆಚ್ಚು ನೂಲು ಸಿದ್ಧವಾಯಿತು. ಹಳೇಕಾಲದ ರಾಟೆ ಮೂಲೆಗೆ ಬಿದ್ದಹಾಗಾಯಿತು. ನೂತ ದಾರ ಬಹಳ ಹೆಚ್ಚಾಯಿತು. ನೆಯ್ಗೆಯವರು ನೆಯ್ಯಲಾರದಷ್ಟು ದಾರ ಸಿದ್ಧವಾಗುತ್ತಿತ್ತು. ಆಗ

**ನೆಯ್ಗೆ ಯಂತ್ರ**

**ಕಾರ್ಟ್‌ರೈಟ್** (Cartwright) ಎಂಬವನು ಯಂತ್ರದ ಮಗ್ಗವನ್ನು ಜೋಡಿಸಿದನು. ಅದಕ್ಕಿಂತ ಉತ್ತಮವಾದುದನ್ನು 1803ರಲ್ಲಿ **ಹಾರಕ್ಸ್** (Horrocks) ಎಂಬಾತನು ಹೊಂದಿಸಿದನು. ಆಗಿನಿಂದ ನೆಯ್ಗೆ ಯಂತ್ರದ ಕೆಲಸವಾಯಿತು. ಮನೆಯಲ್ಲಿ ಕೆಲಸ ನಡೆಯುತ್ತಿದ್ದುದು ನಿಂತು ಕಾರ್ಖಾನೆಗಳಲ್ಲಿ ನಡೆಯಬೇಕಾಯಿತು. ಯಂತ್ರ ನಡೆಸಲು ಜಲಶಕ್ತಿಯನ್ನು ಉಪಯೋಗಿಸುವುದೂ ಹೆಚ್ಚಿತು. ಗಿರಣಿಗಳೂ ಕಾರ್ಖಾನೆಗಳೂ ಹೆಚ್ಚಿದವು.

ವುಲನ್ ಕೈಗಾರಿಕೆಗಳಲ್ಲಿಯೂ ಇದೇರೀತಿಯಾಗಿ ನಡೆಯಿತು. ಕಲ್ಲಿದ್ದಲು ಕಬ್ಬಿಣಗಳ ಗಣಿಗಳೂ ನೂತುನೆಯ್ಯುವ ಗಿರಣಿಗಳೂ ಯಂತ್ರಯೋಜಕಕಾರ್ಖಾನೆಗಳೂ ಅಭಿವೃದ್ಧಿಯಾದಂತೆ ಜಲಮಾರ್ಗಗಳೂ ಸ್ಥಲಮಾರ್ಗಗಳೂ ಉತ್ತಮ

**ವಾಹನ**

ಗೊಂಡವು. ಕಾಲಕ್ರಮದಲ್ಲಿ ರೈಲುಗಳೂ ಜಹಜುಗಳೂ ತೋರಿಕೊಂಡವು. ಕಾರ್ಖಾನೆಗಳಿದ್ದ ಸ್ಥಳಗಳು ಬೇಗಬೇಗ ಪಟ್ಟಣಗಳಾಗಿ ಬೆಳೆದವು. ಜನರು ಕೂಲಿಗಾಗಿ ಹಳ್ಳಿಗಳನ್ನು ಬಿಟ್ಟು ಕಾರ್ಖಾನೆಪಟ್ಟಣಗಳಲ್ಲಿ ಸೇರಿಕೊಂಡು ಬದುಕನ್ನು ನಡೆಸಲಾರಂಭವಾಯಿತು. ಹೊಸದಾಗಿ ಹುಟ್ಟಿದ ಪಟ್ಟಣಗಳು ಮಿತಿಮೀರಿಬೆಳೆದಂತೆ ಹಳ್ಳಿಗಳೂ ಹಳೇ ಪಟ್ಟಣಗಳೂ ಕ್ಷೀಣವಾದವು. ಹೊಸಪಟ್ಟಣಗಳಲ್ಲಿ ಜನರ ಗುಂಪು ಹೆಚ್ಚಿತು. ಗ್ರಾಮವಾಸಿ

ಗಳಾಗಿದ್ದವರು ಪಟ್ಟಣಿಗರಾದರು. ಗ್ರಾಮಜೀವನವೆನ್ನುವುದು ಮಾಯವಾಯಿತು.

**ಕಾರ್ಖಾನೆ ಪಟ್ಟಣಗಳು**

ಯಂತ್ರದ ಕೈಗಾರಿಕೆಯಲ್ಲಿ ಲಾಭವನ್ನು ಕಂಡು ಧನವಂತರು ಜಾಯಿಂಟ್ ಸ್ಟಾಕ್ ಕಂಪನಿಗಳನ್ನು ಕಟ್ಟಿ ಭಾರಿಕಾರ್ಖಾನೆಗಳನ್ನೂ ಗಿರಣಿಗಳನ್ನೂ ಸ್ಥಾಪಿಸಿ ತಮ್ಮೊಳಗೇ ಪೋಟಾಪೋಟಿಗೆ ತೊಡಗಿದರು. ಕಾರ್ಖಾನೆಯೆಷ್ಟು ದೊಡ್ಡದಾದರೆ ಅಷ್ಟು ಲಾಭ ತೋರಿದುದರಿಂದ ಸಣ್ಣ ಪುಟ್ಟ ಪ್ರಮಾಣದ ಕೈಗಾರಿಕೆಗಳು ಮೂಲೆಗೆ ಬಿದ್ದವು. ಹಿಂದೆ ಕುಶಲಕರ್ಮಿಯೆನಿಸಿ ಸ್ವತಂತ್ರನಾಗಿ ಬದುಕಿದವನು ಈಗ ಕಾರ್ಖಾನೆಯ ಚಾಕರನಾಗಿ ಬದುಕಬೇಕಾಯಿತು. ಕಾರ್ಖಾನೆಗಳು ದೇಶದಲ್ಲಿ ಹೊಸದಾಗಿದ್ದುದರಿಂದ ಅನುಭವವಿರಲಿಲ್ಲ. ಎಷ್ಟು ಹೊತ್ತು ಕೆಲಸ ನಡೆಯುಬೇಕೆಂದಾಗಲಿ ಹೆಂಗಸುಮಕ್ಕಳನ್ನು ಕೆಲಸಕ್ಕಿಡಬಾರದೆಂದಾಗಲಿ ಯಾವ ನಿಯಮವೂ ಇರಲಿಲ್ಲ. ಧನವಂತರಿಗೂ ಪಾರುಪತ್ಯಗಾರರಿಗೂ ಲಾಭವೇ ಮುಖ್ಯ. ಆದ್ದರಿಂದ ಕಾರ್ಖಾನೆಗಳಲ್ಲಿ ಕೂಲಿಗಾಗಿ ದುಡಿಯುತ್ತಿದ್ದ ಜನರ ಪಾಡು ನರಕದಂತೆ ನಡೆಯಿತು.

ಗಣಿಗಳು, ಯಂತ್ರಗಳು, ಕಾರ್ಖಾನೆಗಳು, ದೊಡ್ಡ ಪಟ್ಟಣಗಳು, ವೇಗದಿಂದ ಸಂಚರಿಸುವ ವಾಹನಗಳು, ಮೊದಲು ಜಲಶಕ್ತಿ ತರುವಾಯ ಹಬೆಶಕ್ತಿಯ ಯೋಜನೆ —ಇವಿಷ್ಟು ಸೇರಿ ಇಂಗ್ಲಂಡಿನ ರೂಪವನ್ನು ಬದಲಾಯಿಸಿದವು. ಗ್ರಾಮಜೀವನ ಲಯವಾಗಿ ಪಟ್ಟಣದ ಜೀವನ; ರಾಶಿಯಲ್ಲಿ ಕೈಗಾರಿಕೆ, ವ್ಯಾಪಾರ; ಕೈಗಾರಿಕೆ ವ್ಯಾಪಾರಗಳಲ್ಲಿ ಪೋಟಾಪೋಟಿ; ಹಲವರಲ್ಲಿ ಬಹುಧನ, ಬಹುಜನರಲ್ಲಿ ಬಡತನ. ಕೈಗಾರಿಕೆಗಳಿಗೆ ಬೇಕಾದ ಸಾಮಗ್ರಿ (Raw material) ತರಿಸಿಕೊಳ್ಳುವುದಕ್ಕೂ ತಯಾರಾದ ಸರಕನ್ನು (Finished Products) ಬೇಗಬೇಗ ಮಾರಾಟ ಮಾಡುವುದಕ್ಕೂ ಅನೇಕಾನೇಕ ಮಾರ್ಗಗಳನ್ನು ಆಡಳಿತದಲ್ಲಿ ಅವಲಂಬಿಸಬೇಕಾಯಿತು.

**ಜಗತ್ತಿನ ಕಾರ್ಖಾನೆ**

ಕಬ್ಬಿಣ ಕಲ್ಲಿದ್ದಲುಗಳ ಗಣಿಗಳನ್ನು ಯಥೇಷ್ಟವಾಗಿ ಪಡೆದ ಇಂಗ್ಲಂಡಿನಲ್ಲಿ ಯಂತ್ರನಿರ್ಮಾಣವು ಸಹಜವಾಗಿ ಹೆಚ್ಚಿ ಕೈಗಾರಿಕೆ ವ್ಯಾಪಾರಗಳೇ ಜನರ ಜೀವನೋಪಾಯವಾಗಿ ಪರಿಣಮಿಸಿತು. ಜಮೀನ್ದಾರನ ಸಂಪತ್ತಿಗಿಂತ ವರ್ತಕನ ಮತ್ತು ಕಾರ್ಖಾನೆಯ ಮಾಲೀಕನ ಸಂಪತ್ತು ದೊಡ್ಡದಾಯಿತು. ದೂರದಿಂದ ಸಾಮಗ್ರಿ ಹೊತ್ತು ತಂದು ಕಾರ್ಖಾನೆಗಳಲ್ಲಿ ತಯಾರಿಸಿ ಸಿದ್ಧಸರಕನ್ನು ದೂರಕ್ಕಾದರೂ ಒಯ್ದು ಮಾರಾಟ ನಡೆಸುವುದು ಇಂಗ್ಲಂಡಿನ ಗತಿಯಾಯಿತು. ಒಟ್ಟು ಜಗತ್ತಿಗೆ ಇಂಗ್ಲಂಡು ಕಾರ್ಖಾನೆಯಾದಂತೆ ಪರಿಣಮಿಸಿತು.

ಇವಿಷ್ಟೂ ನಡೆಯಲು ಅನೇಕಾನೇಕ ವರ್ಷಗಳು ಹಿಡಿಯಿತು. ಆದರೆ ಗುರುತಿಗಾಗಿ ಒಂದೆರಡು ವರ್ಷಗಳನ್ನು ಗೊತ್ತುಮಾಡಿಕೊಳ್ಳುವುದು ಮೇಲು. ಮೂರನೆ ಜಾರ್ಜ್ ದೊರೆಯ ಕಾಲದಲ್ಲಿ (1760) ಈ ಪರಿವರ್ತನೆ ನಡೆಯಿತು. ಅದನ್ನು **ಯಂತ್ರಯುಗದ** ಆರಂಭವೆಂದೂ ಕರೆಯಬಹುದು.

## 9. ಮತಶಾಖೆಗಳು, ಧಾರ್ಮಿಕವಿಚಾರಗಳು

1689ರಲ್ಲಿ ಟಾಲರೇಷನ್ ಆಕ್ಟ್ ಎಂಬ ಕಾನೂನು ಜಾರಿಗೆ ಬಂದಿತಷ್ಟೆ. ಅದರಿಂದ ಡಿಸ್ಸೆಂಟರುಗಳಿಗೆ ಸಮಾಧಾನವಾಗಲಿಲ್ಲ. ಆದರೆ ಆನ್ ರಾಣಿಯ ತರುವಾಯ ಅಧಿಕಾರದಲ್ಲಿದ್ದ ವ್ಹಿಗ್ ಪಾರ್ಟಿಯವರಿಗೆ ಮತ

**ಡಿಸ್ಸೆಂಟರುಗಳಿಗೆ ಕ್ಷಮೆ**

ಭೇದಕ್ಕಾಗಿ ಡಿಸ್ಸೆಂಟರುಗಳನ್ನು ದಂಡಿಸುವುದು ಇಷ್ಟವಾಗಲಿಲ್ಲ. ವಾಲ್ಪೋಲ್ ಮುಂತಾದ ವ್ಹಿಗ್ ಮಂತ್ರಿಗಳು ಉಪಾಯವಾಗಿ ಡಿಸ್ಸೆಂಟರುಗಳಿಗೆ ಹುದ್ದೆಗಳು ದೊರಕುವಂತೆ ಏರ್ಪಡಿಸುತ್ತಿದ್ದರು. ಡಿಸ್ಸೆಂಟರುಗಳಿಗೆ ಹುದ್ದೆಗಳನ್ನು ಕೊಟ್ಟು ಮತಭೇದಕ್ಕಾಗಿ ಕ್ಷಮಾಪಣೆಯನ್ನು ವರ್ಷೇ ವರ್ಷೇ ಪಾರ್ಲಿಮೆಂಟಿನಲ್ಲಿ ಕೊಡಿಸುತ್ತಿದ್ದರು.

ಹದಿನೇಳನೆಯ ಶತಮಾನದಲ್ಲಿ ಮತನಿಷ್ಠೆಯೇ ಮುಖ್ಯವೆನಿಸಿತ್ತು. ಕಿರಿಯ ಚಾರ್ಲ್ಸ್ ಮತ್ತು ಕಿರಿಯ ಜೇಮ್ಸ್ ತರುವಾಯ ಅತಿನಿಷ್ಠೆಯು ಕುಗ್ಗುತ್ತ ಬಂತು. ಹೈಚರ್ಚ್ ಶಾಖೆಗೆ ಸೇರಿದ್ದ ಟೋರಿ ಪಕ್ಷದವರು ಇನ್ನೂ ನಿಷ್ಠೆಯನ್ನು ಮೆಚ್ಚುತ್ತಿದ್ದಾಗ್ಗೂ ಹ್ಯಾನೊವರ್ ದೊರೆಗಳ ಕಾಲದಲ್ಲಿ ಜಾಕೊಬೈಟ್ ಗುಂಪಿಗೆ ಸೇರಿದವರೆಂಬ ಅನುಮಾನಕ್ಕೆ ಪಾತ್ರರಾಗುತ್ತಿದ್ದರು. ಅಲ್ಲದೆ ಅವರಿಗೆ

**ಅನ್ಯಮತ ದೂಷಣೆಯ ಕ್ಷಯ**

ಪ್ರಾಬಲ್ಯವೂ ಇರಲಿಲ್ಲ. ಅತಿನಿಷ್ಠೆ ಕುಗ್ಗಿದಾಗ್ಗೂ ಯಾವ ಶಾಖೆಯವರಿಗಾಗಲಿ ಅನ್ಯಮತಗಳನ್ನು ಸಹಿಸುವುದು ಧರ್ಮವೆನಿಸಲಿಲ್ಲ. ನಿಷ್ಠಾವೈಪರೀತ್ಯಮಾತ್ರ ಕೆಟ್ಟದೆನ್ನಿಸುತ್ತ ಬಂತು. ಹದಿನೆಂಟನೆ ಶತಮಾನದಲ್ಲಿ ಇಂಗ್ಲಂಡಿನಲ್ಲಿ ಎಲ್ಲೆಡೆಗಳಲ್ಲಿಯೂ ಆಂಗ್ಲಿಕನ್ ಚರ್ಚುಗಳೇ ಇದ್ದರೂ ಅಲ್ಲಿಯ ಪಾದ್ರಿಗಳು ಇತರ ಶಾಖೆಗಳನ್ನು ದೂಷಿಸದೆ ವರ್ತಿಸುತ್ತಿದ್ದರು.

ಕ್ಯಾಥಲಿಕ್ಕರು ನಿರ್ಭಾಗ್ಯರಾಗಿಯೇ ಉಳಿದುಕೊಂಡರು. ಅವರಿಗೆ ಮತಸ್ವಾತಂತ್ರ್ಯವಿರಲಿಲ್ಲ. ಶಾಲೆಗಳಲ್ಲಿ ಸೇರಿಕೊಂಡು ಉಪಾಧ್ಯಾಯವೃತ್ತಿಯನ್ನವಲಂಬಿಸುವುದಕ್ಕೂ ಭೂಮಿಯನ್ನು ಕೊಳ್ಳುವುದಕ್ಕೂ ಕಾನೂನಿನ ನಿರ್ಬಂಧವಿತ್ತು. ಸಾಮಾನ್ಯ ಜನರಲ್ಲಿ ಕ್ಯಾಥಲಿಕ್ಕರೆಂದರೆ ಇನ್ನೂ ಅವಿಶ್ವಾಸವಿತ್ತು. 1751ರಲ್ಲಿ ಇಂಗ್ಲಿಷ್ ಮಂತ್ರಿಗಳು ಪಂಚಾಂಗವನ್ನು ಶುದ್ಧಿಗೊಳಿಸಿದರು. ಆ ಶುದ್ಧಿ ಹಿಂದೆ

**ಕ್ಯಾಥಲಿಕ್ಕರಲ್ಲಿ ಅಸಹನ**

ಪೋಪನಿಂದ ನಡೆದಿತ್ತಾದುದರಿಂದ ಇಂಗ್ಲಂಡಿನಲ್ಲಿ ಜನರು ಅದನ್ನೊಲ್ಲದೆ ಆಕ್ಷೇಪತೋರಿದರು. ಕೆಲವರು ಸಣ್ಣ ದಂಗೆಯನ್ನೂ ಎಬ್ಬಿಸಿದರು. 1778ರಲ್ಲಿ ನಾರ್ತ್ ಶ್ರೀಮಂತನು ಮಂತ್ರಿಯಾಗಿದ್ದಾಗ ಕ್ಯಾಥಲಿಕ್ಕರು ಭೂಮಿಯನ್ನು ಕೊಂಡುಕೊಳ್ಳಬಹುದೆಂತಲೂ ಸ್ವಂತಶಾಲೆಗಳನ್ನು ಸ್ಥಾಪಿಸಿಕೊಳ್ಳಬಹುದೆಂತಲೂ ರಾಜಭಕ್ತಿಪ್ರಮಾಣವನ್ನು ಸ್ವಲ್ಪ ಬದಲಾಯಿಸಿದರೀತಿಯಲ್ಲಿ ಮಾಡಬಹುದೆಂತಲೂ ಅಲ್ಪಸ್ವಲ್ಪ ಅನುಕೂಲವಾಯಿತು. ಆಗ 1780ರಲ್ಲಿ

**ಗೋರ್ಡನ್** (Gordon) ಶ್ರೀಮಂತನೆಂಬ ಉನ್ಮತ್ತನು ಲಂಡನ್ ನಗರದಲ್ಲೆಲ್ಲ ದಂಗೆ ನಡೆಸಿದನು. ಕ್ಯಾಥಲಿಕ್ಕರಲ್ಲಿ ಇಂಗ್ಲಿಷ್ ಜನರಿಗಿನ್ನೂ ಸಹನತೋರಲಿಲ್ಲ.

ಹ್ಯಾನೊವರ್ ದೊರೆಗಳು ಪಟ್ಟಕ್ಕೆ ಬಂದ ತರುವಾಯ ಮತನಿಷ್ಠೆ ಕುಗ್ಗಿದಂತೆ ಉತ್ಸಾಹವೂ ಕುಗ್ಗಿತು. ಆಂಗ್ಲಿಕನ್ನರಿಗಾಗಲಿ ಇತರರಿಗಾಗಲಿ ಹಿಂದಿನ ಉತ್ಸಾಹ ವಿರಲಿಲ್ಲ. ಅಲ್ಲದೆ ರಾಜಾಸ್ಥಾನದಲ್ಲಿಯೂ ಅಧಿಕಾರವರ್ಗದಲ್ಲಿಯೂ ಪಾರ್ಲಿಮೆಂಟ್ ಸಭೆಯವ್ಯವಹಾರದಲ್ಲಿಯೂ ಅನೀತಿಯೇ ಸರ್ವತ್ರವ್ಯಾಪಿಸಿತ್ತು. ಹಿರೇಪಿಟ್ಟನ ಕಾಲ ದಿಂದ ಆ ಅನೀತಿಯನ್ನು ತಡೆಯುವ ಯೋಚನೆ ಕೆಲವರಲ್ಲಿ

**ವೆಸ್ಲಿಯ ಶುದ್ಧೀಕರಣ**

ಬಲಗೊಂಡಿತು. ಆ ಕಾಲದಲ್ಲಿ **ಜಾರ್ಜ್ ವೆಸ್ಲಿ** (John Wesley) ಎಂಬಾತನು ಆಕ್ಸ್‌ಫರ್ಡ್ ಪಟ್ಟಣದಲ್ಲಿ ಮತಾಚಾರವಿಚಾರ ಗಳನ್ನು ಶುದ್ಧಿಗೊಳಿಸಲು ಪರಮೋತ್ಸಾಹದಿಂದ ಮೊದಲಿಟ್ಟು ತನ್ನಂತಹವರನ್ನೇ ಗುಂಪು ಸೇರಿಸಿದನು. ಬಹಳ ಕ್ರಮವಾಗಿ ಅವರು ವಿಚಾರಗಳನ್ನೂ ಆಚರಣೆಗಳನ್ನೂ ನಡೆಸುತ್ತಿದ್ದುದರಿಂದ ಅವರಿಗೆ **ಮೆಥಡಿಸ್ಟ್** (Methodists) ಎಂಬ ಅಡ್ಡಹೆಸರು ಬಂತು. ಜಾರ್ಜ್‌ವೆಸ್ಲಿ, ಚಾರ್ಲ್ಸ್‌ವೆಸ್ಲಿ ಮತ್ತು ವ್ಹಿಟ್‌ಫೀಲ್ಡ್ ಎಂಬುವವರು ಈ ಹೊಸ ಪ್ರಯತ್ನದಲ್ಲಿ ಮುಂದಾದರು. ಆಂಗ್ಲಿಕನ್ ಪಾದ್ರಿಗಳು ಇವರ ಉಪನ್ಯಾಸಗಳಿಗೆ ತಮ್ಮ ಚರ್ಚ್‌ಮಂದಿರಗಳನ್ನು ಕೊಡದಾದರು. ಆದ್ದರಿಂದ ಜಾರ್ಜ್ ವೆಸ್ಲಿಯು ಮೈದಾನದಲ್ಲಿಯೇ ಪ್ರಾರ್ಥನೆಗಳನ್ನೂ ಉಪನ್ಯಾಸಗಳನ್ನೂ ನಡೆಸುತ್ತ ಊರೂರು ಸುತ್ತುತ್ತಿದ್ದು ಒಟ್ಟಿನಲ್ಲಿ 2½ಲಕ್ಷ ಮೈಲಿಗಳ ಸಂಚಾರವನ್ನೂ 40,000 ಉಪನ್ಯಾಸ ಗಳನ್ನೂ ನಡೆಸಿದನಂತೆ. ವೆಸ್ಲಿಯ ಅನುಯಾಯಿಗಳು ಪ್ರತ್ಯೇಕ ಶಾಖೆಯವರಾಗಿ ಬೇರೆಬೇರೆ ಮಂದಿರಗಳನ್ನು ಕಟ್ಟಿಕೊಂಡರು.

ವೆಸ್ಲಿಯ ಉತ್ಸಾಹದಿಂದ ಇತರ ಶಾಖೆಗಳಲ್ಲಿಯೂ ಜನರು ಎಚ್ಚರಗೊಳ್ಳುವಂತಾ ಯಿತು. ಶಾಖೆಗಳಲ್ಲಿ ಅನ್ಯೋನ್ಯತೆಗೆ ಅಡ್ಡಿಯಾದ ಭೇದಗಳು ಇದ್ದಾಗ್ಯೂ ಹದಿನೆಂಟನೆ ಶತಮಾನದಲ್ಲಿ ಪ್ರತಿಶಾಖೆಯವರಿಗೂ ಅನ್ಯಾಯವಿದ್ದೆಡೆಯಲ್ಲಿ

**ದೃಷ್ಟಿವೈಶಾಲ್ಯ**

ಅನುಕಂಪವಿರಬೇಕೆಂಬ ಉದಾರಬುದ್ಧಿ ತೋರಿತು. ಗುಲಾಮ ತನವೋ ಸೆರೆಮನೆಗಳ ಘೋರಸ್ಥಿತಿಯೋ ದಂಡವಿಧಿಯ ಕ್ರೌರ್ಯವೋ ಎಲ್ಲ ಶಾಖೆಗಳ ಜನರಮನಸ್ಸನ್ನು ಕಲಕಿ ಅನ್ಯಾಯವನ್ನು ನಿವಾರಿಸ ಬೇಕೆಂಬ ಇಷ್ಟವನ್ನು ಹುಟ್ಟಿಸಿತು. ಆದರೆ ಮತನಿಷ್ಠೆಯುಳ್ಳವರಿಗೆ ಅನ್ಯಮತಸ್ಥರನ್ನು ಸಹಿಸಿ ಗೌರವಿಸುವುದು ಅಸಾಧ್ಯವೇ ಆಗಿತ್ತು.

19ನೆ ಶತಮಾನದ ಆರಂಭದಲ್ಲಿ ಗುಲಾಮರ ವ್ಯಾಪಾರವನ್ನು ನಿಲ್ಲಿಸಲು ನಡೆದ ಚಳುವಳಿ ಜ್ಞಾಪಕಾರ್ಹವಾದುದು. ಐರೋಪ್ಯದೇಶಗಳಲ್ಲೆಲ್ಲ ಇಂಗ್ಲಂಡಿಗೇ ಹೆಚ್ಚು ದೂರಕ್ಷೇತ್ರಗಳಿದ್ದ ಕಾರಣದಿಂದ ಬ್ರಿಟಿಷರಿಗೆ ಆ ವ್ಯಾಪಾರವು ದುಷ್ಟವೆಂದು

ಸಾಧಿಸುವ ಅನುಕೂಲವಿತ್ತು. ಹಲ್‌ಪಟ್ಟಣದ ನಿವಾಸಿಯಾಗಿದ್ದ **ವಿಲಿಯಂ ವಿಲ್ಬರ್‌ಫೋರ್ಸ್** (William Wilberforce) ಎಂಬಾತನು ಗುಲಾಮರ್ ವ್ಯಾಪಾರನಿರೋಧದ ಚಳುವಳಿಯಲ್ಲಿ ಮುಂದಾಳಾದನು. ಆತನಿಗೆ ಅನೇಕರು ಬೆಂಬಲವನ್ನು ಕೊಟ್ಟರು. ಆದರೂ ಕಿರೇಪಿಟ್ ಮಂತ್ರಿಯಾಗಿರುವತನಕ ಕೆಲಸ ಕೈಗೂಡಲಿಲ್ಲ. ಆ ವ್ಯಾಪಾರದಿಂದ ಲಾಭಪಡೆಯುತ್ತಿದ್ದ ಧನಿಕರನ್ನು ಅಸಂತುಷ್ಟಿಗೊಳಿಸಲು ಪಿಟ್ಟನಿಗೆ ಇಷ್ಟವಿರಲಿಲ್ಲ. ಪಿಟ್ಟನ ವಿರೋಧಿ **ಫಾಕ್ಸ್** ಮಂತ್ರಿಯಾಗಿದ್ದಾಗ **ಗುಲಾಮರ್ ವ್ಯಾಪಾರ ನಿರೋಧದ ಕಾನೂನು** 1806ರಲ್ಲಿ ರೂಪಗೊಂಡಿತು.

**ಗುಲಾಮರ್ ವ್ಯಾಪಾರದ ನಿರೋಧ**

ಹದಿನೆಂಟನೆ ಶತಮಾನದಲ್ಲಿ ಮತಾಂತರಸಹನವೆಂಬುದು ರೂಢಿಯಾಗಲಿಲ್ಲ. ಅತಿನಿಷ್ಠೆಯೆಂಬುದು ತಗ್ಗಿತ್ತು. ಕ್ಯಾಥಲಿಕ್ಕರಿಗೆ ಹತ್ತೊಂಬತ್ತನೆಯ ಶತಮಾನದಲ್ಲಿ ಒಂದು ತಲೆಮಾರುಕಳೆಯುವವರೆಗೂ ಮತಸ್ವಾತಂತ್ರ್ಯ ಲಭಿಸಲಿಲ್ಲ. ಆದರೆ ಆರ್ಥಿಕ ಜೀವನದಲ್ಲಿ ನಡೆದ ವ್ಯತ್ಯಾಸಗಳ ಪರಿಣಾಮವಾಗಿ ಆಚಾರಸಂಪ್ರದಾಯಗಳಲ್ಲಿ ವಿಚಾರಪರತೆಯೂ ಶಾಸ್ತ್ರದೃಷ್ಟಿಯೂ ಬಲಗೊಳ್ಳುತ್ತಿದ್ದವು.

## ಜನಜೀವನ, ಸಾಹಿತ್ಯ

ನಾಲ್ವರು ಜಾರ್ಜುಗಳ ಕಾಲದಲ್ಲಿ ಬ್ರಿಟಿಷರ ಜೀವನದರೀತಿಯು ಇನ್ನೂ ಒರಟಾಗಿಯೇ ಇತ್ತು. ವಿನೋದಗಳಲ್ಲಿ ಕ್ರೌರ್ಯವೂ ಅಶ್ಲೀಲತೆಯೂ ಬಿಟ್ಟು ಹೋಗಿರಲಿಲ್ಲ. ಕುಡಿತದ್ಯೂತಗಳು ಅತಿಸಾಮಾನ್ಯವಾಗಿಯೇ ಇದ್ದವು. ಮೂರನೆ ಜಾರ್ಜ್‌ದೊರೆ ಸದ್ಗೃಹಸ್ಥನಾಗಿ ಆಸ್ಥಾನವನ್ನು ಶುದ್ಧಿಗೊಳಿಸಿದತರುವಾಯ ಸೌಶೀಲ್ಯ ವಿನಯಗಳು ನೆಲೆಸಿ ರೂಢಿಯಾಯಿತು. ಆರ್ಥಿಕ ಕಾರಣಗಳಿಂದ ಸಂಚಾರ ಸೌಕರ್ಯಗಳು ದೇಶದಲ್ಲಿ ಹೆಚ್ಚಿದಂತೆ ಜನರಲ್ಲಿ ನಾನಾವರ್ಗಗಳು, ನಾನಾರೀತಿಯ ಉಡಿಗೆ ತೊಡಿಗೆಗಳು, ನಾನಾರೀತಿಯ ಒಯ್ಯಾರಗಳು ಮಾಯವಾದವು. ಹಳ್ಳಿಗರಿಗೂ ಪಟ್ಟಣಿಗರಿಗೂ ಮತ್ತು ಶ್ರೀಮಂತರಿಗೂ ಸಾಮಾನ್ಯಜನರಿಗೂ ಅದುವರೆಗೂ ಇದ್ದ ಭೇದಗಳು ಅದೃಶ್ಯವಾದವು. ಕೈಗಾರಿಕೆ ವ್ಯಾಪಾರಗಳಲ್ಲಿ ಯಾವವರ್ಗದವರಾದರೂ ತೊಡಗಿ ಧನಾಢ್ಯರಾಗಬಹುದಾಗಿತ್ತು; ವರ್ತಕಜನರು ಶ್ರೀಮಂತರಂತೆ ಬಿಂಕ ಹೆಮ್ಮೆಗಳನ್ನು ತಮ್ಮ ನಡತೆಯಲ್ಲಿ ತಂದಿಟ್ಟುಕೊಂಡರು. ಉಡಿಗೆ ತೊಡಿಗೆಗಳು ಏಕರೀತಿಯಾಗಿ ರೂಢಿಗೊಳ್ಳಲು ಈ ಕಾರಣವಲ್ಲದೆ **ರೂಸೊ**(Rousseau) ಎಂಬ ಫ್ರೆಂಚ್ ತತ್ತ್ವಜ್ಞನ ಪ್ರಚಾರವೂ ಕಾರಣವಾಯಿತು. ಟೋಪನ್ನು ಕಟ್ಟಿಕೊಂಡು ಆಭರಣಗಳನ್ನು ಸೆಕ್ಕಿದ ಉಡುಪನ್ನು ತೊಟ್ಟು ಕತ್ತಿಗಳನ್ನು ಸೊಂಟಕ್ಕೆ ತಗುಲಿಸಿಕೊಂಡು ಓಡಾಡುವುದು ನಿಂತುಹೋಯಿತು. ಎಲ್ಲ ವರ್ಗದವರೂ ಒಂದೇರೀತಿಯ ವಸ್ತ್ರಾಲಂಕಾರಪದ್ಧತಿಯನ್ನು ಬೆಳೆಸಿದರು.

ವಸ್ತ್ರಾಲಂಕಾರ

ವಾಸ್ತುಕಲೆಯೆಂಬುದು ಈ ಶತಮಾನದಲ್ಲಿ ಹಿಂದೆಬಿತ್ತು. ಜಾರ್ಜ್ ದೊರೆಗಳ ಕಾಲದಲ್ಲಿ ನಿರ್ಮಿತವಾಗಿ ಹೆಸರನ್ನು ತಂದ ಕಟ್ಟಡವಿಲ್ಲ. ನಡೆದ ಪ್ರಯತ್ನ ವಕ್ರ ಗತಿಯನ್ನು ಹಿಡಿಯಿತು. ಆದರೆ ಚಿತ್ರಕಲೆಯಲ್ಲಿಯೂ ಗಾನದಲ್ಲಿಯೂ ಅಭಿವೃದ್ಧಿ ತೋರಿತು. **ಹೋಗಾರ್ತ್** (Hogarth) ಮತ್ತು **ಸರ್ ಜೊಷುವ ರೈನಾಲ್ಡ್ಸ್** (Sir Joshua Reynolds) ಎಂಬಿಬ್ಬರು ಚಿತ್ರಕಲೆಯಲ್ಲಿ ನಿಪುಣರೆನಿಸಿದರು. ಜರ್ಮನಿಯಿಂದ **ಹ್ಯಾಂಡೆಲ್** (Handel) ಎಂಬ ಗಾಯಕ ಶ್ರೇಷ್ಠನನ್ನು ಇಂಗ್ಲಂಡಿಗೆ ಕರೆಸಿಕೊಂಡಮೇಲೆ ಆತನ ಉದ್ಯಮದಿಂದ ಇಂಗ್ಲಿಷ್ ಜನರಿಗೆ ಗಾನಕಲೆಯ ಗಾಂಭೀರ್ಯವೂ ಶಾಸ್ತ್ರವೂ ಗೋಚರವಾಯಿತು. ಅದುವರೆಗೂ ಇಂಗ್ಲಂಡಿನಲ್ಲಿ ಸಂಗೀತಕಲೆಯು ಸಾಮಾನ್ಯ ಮಟ್ಟದಲ್ಲಿಯೇ ಇತ್ತು.

**ಲಲಿತಕಲೆ**

ಆನ್ ರಾಣಿಯ ಕಾಲದಲ್ಲಿ ಪ್ರಸಿದ್ಧಿ ಪಡೆದಿದ್ದ **ಪೋಪ್** (Pope) ಕವಿಯು ಎರಡನೆ ಜಾರ್ಜ್ ದೊರೆ ಕಾಲದಲ್ಲಿ ತೀರಿಕೊಂಡನು. ಹಳೆಯ ರೀತಿಯನ್ನೇ ಅನುಸರಿಸಿ ಪದ್ಯ ಕಟ್ಟುವುದರಲ್ಲಿ ಆತನು ಚತುರ; ಅತನ ಅನುಯಾಯಿಗಳು ಪಟುತ್ವವಿಲ್ಲದವರು. ಆದುದರಿಂದ ಉತ್ತಮವಾದ ಪದ್ಯಕಾವ್ಯಗಳು ಹದಿನೆಂಟನೆ ಶತಮಾನದಲ್ಲಿಲ್ಲ. **ಗೋಲ್ಡ್‌ಸ್ಮಿತ್** (Goldsmith) ಮತ್ತು **ಷೆರಿಡನ್** (Sheridan) ಎಂಬವರು ನಾಟಕಗಳನ್ನು ಬರೆದರು. ವಿನೋದ ಹಾಸ್ಯಗಳಿಂದ ಕೂಡಿದ್ದಾಗ್ಯೂ ಆ ನಾಟಕಗಳಲ್ಲಿ ಮಹತ್ವ ಕಾಣಲಿಲ್ಲ. ಆದರೆ ಷೇಕ್ಸ್‌ಪಿಯರ್ ಆದಿಯಾಗಿ ಹಿಂದಿನ ಉದ್ದಾಮ ಕವಿಗಳು ರಚಿಸಿದ್ದ ನಾಟಕಗಳನ್ನು ಪರಿಷ್ಕರಿಸಿ ಮುದ್ರಿಸುವುದರಲ್ಲಿ ಉತ್ತಮವೆನ್ನಬಹುದಾದ ಕರ್ತವ್ಯ ನೆರವೇರಿತು. ನಾಟಕವನ್ನಾಡುವ ಕಲೆಯು ಉತ್ತಮಗೊಂಡಿತು.

**ನಾಟಕ**

ಗದ್ಯಕಾವ್ಯ ಆನ್‌ರಾಣಿಯ ಕಾಲದಲ್ಲಿ ಶ್ರೇಷ್ಠತೆಯನ್ನು ಪಡೆದಿತ್ತು. **ಸ್ಟೀಲ್** (Steele) **ಅಡಿಸನ್** (Addison) **ಸ್ವಿಫ್ಟ್** (Swift) ಇಂಗ್ಲಿಷ್ ಗದ್ಯಕ್ಕೆ ಮೇಲ್ಪಙ್ತಿಯಿಟ್ಟವರು. ಜಾನಥನ್ ಸ್ವಿಫ್ಟ್ ಎರಡನೆ ಜಾರ್ಜ್ ಕಾಲದಲ್ಲಿ ತೀರಿಕೊಂಡನು. ಟೋರಿ ಪಕ್ಷದವನಾಗಿ ಪ್ರಬಂಧಗಳನ್ನು ಬರೆಯುತ್ತ 1726 ರಲ್ಲಿ 'ಗಲಿವರನ ದೇಶಸಂಚಾರ'ವೆಂಬ ಅತಿ ಪ್ರಸಿದ್ಧ ವಿಡಂಬನೆಯನ್ನು ರಚಿಸಿದನು. ಆ ತರುವಾಯ ಆತನಿಗೆ ಬುದ್ಧಿಗೆಟ್ಟು ವಿಷಾದದ ಬದುಕಿಗಿಟ್ಟುಕೊಂಡಿತು. ಆ ಕಾಲದ ಸಾಹಿತಿಗಳಲ್ಲಿ ಹೆಸರು ಪಡೆದು ತನ್ನ ಗುಣದಿಂದ ಮೆಚ್ಚುಗೆ ಪಡೆದ **ಜಾನ್ಸನ್** (Johnson) ಎಂಬಾತನು ಪ್ರಸಿದ್ಧ. **ಗೋಲ್ಡ್‌ಸ್ಮಿತ್, ಡಿಫೊ** (Defoe) **ಸ್ಟೆರ್ನ್** (Sterne) ಮುಂತಾದವರು ಆತನ ಆಸ್ಥಾನದಲ್ಲಿ ಸಭಿಕರಂತಿದ್ದರು. ಕಥೆಗಳನ್ನು ಬರೆಯುವ ಕಲೆಯು ಇವರ ಕಾಲದಲ್ಲಿ ಮೊದಲಾಗಿ ಬೇಗನೆ ಉತ್ತಮಗೊಂಡು ನಾವೆಲ್ಲುಗಳು ವೃದ್ಧಿಗೊಳ್ಳಲು ಮಾರ್ಗವಾಯಿತು.

**ಗದ್ಯ**

ಹದಿನೆಂಟನೆ ಶತಮಾನದ ಮಧ್ಯಕಾಲದಿಂದ ಮುಂದಕ್ಕೆ ಇಂಗ್ಲಂಡಿನಲ್ಲಿ ಅನೇಕ ಸಹಜಕವಿಗಳು ತೋರಿಕೊಂಡರು. ಪದ್ಯರಚನೆಯಲ್ಲಿ ಕೃತಕರೀತಿಯು ಮಾಯವಾಯಿತು. ಪ್ರಕೃತಿಯ ಸೌಂದರ್ಯವನ್ನು ಗುರುತಿಸಿ ಮೆಚ್ಚಿ ನಲಿದಾಡುವ ಮತ್ತು ಸ್ವಭಾವವಾಗಿ ಮಾನವನು ನಡೆಸಬಹುದಾದ ಜೀವನವನ್ನು ಊಹಿಸಿ ಸಂತೋಷಿಸುವ ಚರ್ಯೆ ಮೊದಲಾಯಿತು. ಋತುಗಳನ್ನು ವರ್ಣನೆಮಾಡಿದ **ಥಾಮ್ಸನ್** (Thomson) ಮೊದಲಾಗಿ **ಬರ್ನ್ಸ್** (Burns) **ಕೂಪರ್** (Cowper) **ಬ್ಲೇಕ್** (Blake) ಕವಿಗಳು ಶೃಂಖಲೆಗಳಿಲ್ಲದೆ ಸಹಜವಾಗಿಯೂ ಸರಳವಾಗಿಯೂ ಬರೆದರು. ಎಡಿನ್ಬರೊ ಪಟ್ಟಣದಲ್ಲಿ ವಕೀಲಿ ವೃತ್ತಿಯಲ್ಲಿದ್ದ **ಸ್ಕಾಟ್** (Scott) ಎಂಬಾತನು ಇತಿಹಾಸದಿಂದ ಕಥೆಗಳನ್ನಾರಿಸಿಕೊಂಡು ಪುರಾಣಬರೆದಂತೆ ಕಾವ್ಯಗಳನ್ನೂ ನಾವೆಲ್ಲುಗಳನ್ನೂ ಬರೆದಿಟ್ಟನು. ಸಹಜಸೌಂದರ್ಯೋಪಾಸನೆಯ ಗತಿಯಲ್ಲಿ ಕವಿಗಳೆನಿಸಿದ **ವರ್ಡ್ಸ್‌ವರ್ತ್** (Wordsworth) **ಕೋಲ್ರಿಡ್ಜ್** (Coleridge) ಎಂಬವರು ಹದಿನೆಂಟನೆ ಶತಮಾನದ ಉತ್ತರಾರ್ಧದಲ್ಲಿ ಮೊದಲಿಟ್ಟವರು. ಅವರಿಗೆ ಸಮಕಾಲಿಕನೆನ್ನಬಹುದಾದ **ಬೈರನ್** (Byron) ಸ್ವಾತಂತ್ರ್ಯ ಮಹಿಮೆಯನ್ನು ಕೊಂಡಾಡಿ ಅಧೀನತೆಯನ್ನು ಹೊರೆಸುವ ಆಚರಣೆಗಳನ್ನು ಶಪಿಸಿದನು. ಸ್ವಾತಂತ್ರ್ಯ ಘೋಷಣವನ್ನೇ ಮಾಡಿದ **ಷೆಲ್ಲಿ** (Shelley) ಮತ್ತು **ಕೀಟ್ಸ್** (Keats) ಕವಿಗಳು ಹತ್ತೊಂಭತ್ತನೆ ಶತಮಾನದ ಆದಿಯಲ್ಲಿ ರಂಜಿಸಿದರು. ಈ ಕವಿಗಳ ಕೃತಿಗಳಲ್ಲಿ ಜನಸ್ವಾಮ್ಯ ಸ್ವಾತಂತ್ರ್ಯಗಳ ಮಂತ್ರ ತುಂಬಿತ್ತು. ಪರಿಣಾಮವಾಗಿ ಶ್ರೇಷ್ಠ ಕುಲಜಾತರು ಜನ್ಮಮಾತ್ರದಿಂದ ತಲೆಬೀಗಿ ವರ್ತಿಸುವುದು ದುಶ್ಚೇಷ್ಟೆಯೆನ್ನಿಸಿತು. ಜನಜೀವನದಲ್ಲಿ ಸರಳತೆಯೂ ಸಹಜವರ್ತನೆಯೂ ಸಹಾನುಭೂತಿಯೂ ನಿರ್ವಂಚನೆಯಿಂದ ತೋರುವ ರೀತಿಯನ್ನು ಶ್ಲಾಘಿಸಿದಂತಾಯಿತು. ಸ್ವಾತಂತ್ರ್ಯದ ಸಂತೋಷವನ್ನು ಬೀರಿದ ಈ ಕವಿಗಳ ಪದ್ಯಗಳು ಇಂಗ್ಲಿಷ್ ಜನರಿಗೆ ಶಾಶ್ವತವಾಗಿ ನಿಲ್ಲುವ ನಿಧಿಯಾಗಿದೆ.

ಪದ್ಯ

## ನಾಲ್ಕ್ನೆಡಿ ಜಾರ್ಜ್, ನಾಲ್ಕ್ನೆಡಿ ವಿಲಿಯಂ ದೊರೆಗಳು

### ಸಮಕಾಲಿಕರು

| ಫ್ರಾನ್ಸ್ | ಆಸ್ಟ್ರಿಯ | ಪ್ರಷ್ಯ | ರಷ್ಯ |
|---|---|---|---|
| 18ನೆ ಲೂಯಿ<br>1814—1824 | 1ನೆ ಫ್ರಾನ್ಸಿಸ್<br>1806—1835 | 3ನೆ ಫ್ರೆಡರಿಕ್ ವಿಲಿಯಂ<br>1797—1840 | 1ನೆ ಅಲೆಕ್ಸಾಂಡರ್<br>1801—1825 |
| 10ನೆ ಚಾರ್ಲ್ಸ್<br>1824—1830 | 1ನೆ ಫರ್ಡಿನೆಂಡ್<br>1835—1848 | | 1ನೆ ನಿಕೋಲಾಸ್<br>1825—1855 |
| ಲೂಯಿ ಫಿಲೀಪ್<br>1830—1848 | | | |

ಮೂರನೆ ಜಾರ್ಜ್ ದೊರೆಗೆ ಚಿತ್ತವೈಕಲ್ಯ ತೋರಿದಾಗ **ಯುವರಾಜ**ನಾಗಿದ್ದ **ಜಾರ್ಜ್ ರೀಜೆಂಟ್** ಪದವಿಯನ್ನು ಪಡೆದಿದ್ದನು: 1820ರಲ್ಲಿ ಮೂರನೆ ಜಾರ್ಜ್ ಪ್ರಾಣಬಿಟ್ಟಾಗ **ನಾಲ್ಕನೆ ಜಾರ್ಜ್** ಎನಿಸಿದನು. ಪಟ್ಟವೇರಿದ ಕೂಡಲೆ ಜನರ ಪ್ರೀತಿಯನ್ನು ಸಂಪಾದಿಸಿಕೊಳ್ಳುವ ಆಸೆಯಿಂದ ಸ್ಕಾಟ್ಲೆಂಡ್ ಐರ್ಲಂಡ್ ಮತ್ತು ಹ್ಯಾನೊವರ್‌ಗಳಲ್ಲಿ ಸಂಚಾರ ನಡೆಸಿದನು. ಆದರೆ ಒಣಹೆಮ್ಮೆ, ಸ್ವಾರ್ಥ, ಸೋಮಾರಿತನಗಳ ಮೂರ್ತಿಯಾಗಿ ಸದಾ ವಿಲಾಸಿಯಾಗಿಯೇ ಜೀವನವನ್ನು ಕಳೆದಿದ್ದವನಿಗೆ ಗೌರವ ಬರಲಿಲ್ಲ. ಸ್ವಲ್ಪಕಾಲದಲ್ಲಿ ಆರೋಗ್ಯವೂ ಕೆಟ್ಟಿತು. ಆಗ ತನ್ನ ಅರಮನೆಯಲ್ಲಿದ್ದುಕೊಂಡು ಹಾಗೂ ಹೀಗೂ ಆಯುಷ್ಯವನ್ನು ಮುಗಿಸಿದನು. ಯಾವ ಅಧಿಕಾರವೂ ಆತನಿಗೆ ಸಿಕ್ಕಲಿಲ್ಲ.

ಈ ದೊರೆಗೂ ಈತನ ರಾಣಿಗೂ ಬೆಳೆದಿದ್ದ ಜಗಳ ವಿಚಿತ್ರರೀತಿಯಲ್ಲಿ ಪ್ರಸಿದ್ಧಿಗೇರಿತು. ಬ್ರನ್ಸ್‌ವಿಕ್ಕಿನ **ಕ್ಯಾರೊಲೀನ್** (Caroline of Brunswick) ಎಂಬಾಕೆಯು ಜಾರ್ಜನ್ನು 1795ರಲ್ಲಿ ಮದುವೆಯಾಗಿದ್ದಳು. ಸ್ವಲ್ಪಕಾಲದಲ್ಲಿಯೇ ದಂಪತಿಗಳು ಜಗಳವಾಡಿ ಒಬ್ಬರನ್ನೊಬ್ಬರು ಅಗಲಿದರು. ಜಾರ್ಜಿಗೆ ಪಟ್ಟ ನಡೆದ ಬಳಿಕ ಕ್ಯಾರೊಲೀನ್ ದೇಶಾಂತರದಲ್ಲಿದ್ದವಳು ಇಂಗ್ಲಂಡಿಗೆ ಬಂದು ರಾಣಿಯಾಗಲು ಯತ್ನಿಸಿದಳು. ಆಕೆಯಲ್ಲಿ ಪರಮದ್ವೇಷವನ್ನು ಸಾಧಿಸುತ್ತಿದ್ದ ಜಾರ್ಜ್ ತನ್ನ ವಿವಾಹ ವಿಯೋಗ ನಿಶ್ಚಯಕ್ಕೆ ಒಂದು ಕಾನೂನು ಮಾಡುವಂತೆ ಮಂತ್ರಿಗಳನ್ನು ಪ್ರೇರಿಸಿದನು. ಶ್ರೀಮಂತ ಸಭೆಯಲ್ಲಿ ಅದಕ್ಕಾಗಿ ಮಸೂದೆಯೊಂದನ್ನು ಮಂತ್ರಿಗಳು ಒಡ್ಡಿದರು. ಆಗ ಗದ್ದಲವೆದ್ದಿತು. ಕ್ಯಾರೊಲೀನ್‌ಗಿಂತ ಸಾವಿರಪಾಲು ದುಷ್ಟನಾಗಿದ್ದ ಜಾರ್ಜ್ ದೊರೆಯಲ್ಲಿ ಜನರು ಎಲ್ಲ ಗೌರವವನ್ನೂ ನೀಗಿದರು. ಕ್ಯಾರೊಲೀನ್ ಪಕ್ಷವಾಗಿ

**ವಿಯೋಗ ವಿಚಾರ**

ವಾದಿಸುತ್ತ ಮಸೂದೆಯನ್ನು ವಿರೋಧಿಸುವವರೇ ಎಲ್ಲೆಲ್ಲಿಯೂ ತೋರಿಕೊಂಡರು. ಶ್ರೀಮಂತಸಭೆಯಲ್ಲಿ ಆ ಮಸೂದೆ ಒಪ್ಪಿಗೆಯಾಗಿದ್ದಾಗ್ಯೂ ಕಾಮನ್ಸ್ ಸಭೆಯ ಮುಂದೆ ಅದನ್ನಿಡಲು ಮಂತ್ರಿಗಳು ಅಂಜಿ ತಟಸ್ಥರಾದರು. ಮುಂದಿನ ವರ್ಷ ಕ್ಯಾರೊಲೀನ್ ತೀರಿಕೊಂಡಳು. ಪರಿಣಾಮವಾದುದೇನೆಂದರೆ ದೊರೆಗಿದ್ದ ಅಲ್ಪ ಸ್ವಲ್ಪ ಗೌರವವೂ ಈ ಪ್ರಸಂಗದಲ್ಲಿ ನಾಶವಾಯಿತು.

ನಾಲ್ಕನೆ ಜಾರ್ಜಿಗೆ ಗಂಡುಮಕ್ಕಳಿರಲಿಲ್ಲ; ಒಂದು ಹೆಣ್ಣು ಹುಟ್ಟಿ 1817ರಲ್ಲಿ ತೀರಿಕೊಂಡಿತ್ತು. ಆದ್ದರಿಂದ 1830ರಲ್ಲಿ ಜಾರ್ಜ್ ಸತ್ತಾಗ ಆತನ ತಮ್ಮ **ವಿಲಿಯಂ** ಎಂಬಾತನಿಗೆ ಪಟ್ಟವಾಯಿತು. ನಾಲ್ಕನೆ ವಿಲಿಯಂ ಎನಿಸಿದ ಹೊಸ ದೊರೆ ಒಳ್ಳೆಯವನಾಗಿಯೇನೋ ಇದ್ದನು. ವಿಶೇಷವೆನ್ನಬಹುದಾದ ಪ್ರಜ್ಞೆಯಾಗಲಿ ವಿವೇಕವಾಗಲಿ ಇರಲಿಲ್ಲ. ಸರಳ ರೀತಿಯಲ್ಲಿ ಆಗಾಗ್ಗೆ ಹಸುಳೆಯಂತೆ ವರ್ತಿಸುತ್ತಿದ್ದನು. ಸ್ವಲ್ಪ ಬೆಪ್ಪನೆಂದು ಕರೆದರೂ ಕರೆಯಬಹುದು. ರಾಜನಾದಮೇಲೆ ವಿಲಿಯಂ ನಡೆಸಿದ ಕೆಲಸಗಳಲ್ಲಿ ಜ್ಞಾಪಕಾರ್ಹವಾದುದೊಂದೇ. 1830ರಲ್ಲಿ ವ್ಹಿಗ್ ಪಕ್ಷದವರಿಗೆ ಮಂತ್ರಿಪದವಿಗಳನ್ನು ಗೊತ್ತುಮಾಡಿದನು. ಆಡಳಿತವೆಲ್ಲ ಮಂತ್ರಿಗಳದೇ ಆಯಿತು. 1834ರಲ್ಲಿ ವ್ಹಿಗ್ಗರಲ್ಲಿ ಬೇಸತ್ತು ಪ್ರತಿಪಕ್ಷದವರಿಗೆ ಅಧಿಕಾರವನ್ನು ಈ ರಾಜನು ಗೊತ್ತುಮಾಡಿದನು. ಆದರೆ ಆಗ ವ್ಹಿಗ್ಗರದೇ ಬಲವಾಗಿತ್ತು. ಪುನಃ ವ್ಹಿಗ್ಗರನ್ನೇ ಕರೆಸಿಟ್ಟುಕೊಂಡು ವಿಲಿಯಂ 1837ರಲ್ಲಿ ಕಾಲವಶನಾದನು. ಆತನಿಗೆ ಮಕ್ಕಳಿಲ್ಲದಿದ್ದುದರಿಂದ ಆತನ ತಮ್ಮನ ಮಗಳಾದ **ವಿಕ್ಟೋರಿಯ** ಎಂಬಾಕೆಗೆ ಪಟ್ಟವಾಯಿತು.

ಇಬ್ಬರು ರಾಜರೂ ಅಸಮರ್ಥರಾಗಿಯೇ ಇದ್ದವರು. ಆಡಳಿತದಲ್ಲಿ ಮಂತ್ರಿಗಳಾಗಿದ್ದವರದೇ ಕಾರ್ಭಾರೆಲ್ಲ. ಆದುದರಿಂದ ನಾವು ಮಂತ್ರಿಗಳ ವೃತ್ತಾಂತವನ್ನೇ ಕಾಣಬೇಕು.

### ಒಳಾಡಳಿತ (1820—1841)

**ಟೋರಿ ಗೊಡ್ಡುಗಳು** (1820—1830)

ಕಿರೇಪಿಟ್ಟನ ತರುವಾಯ ಟೋರಿಪಕ್ಷದವರು ಅತಿಪ್ರಬಲರಾದರಷ್ಟೆ. ಆತನ ಅನುಯಾಯಿಗಳೆನಿಸಿದ **ಕ್ಯಾನಿಂಗ್** (Canning) ಮತ್ತು **ಕ್ಯಾಸಲ್‌ರೇ** (Castlereagh) ಮುಖ್ಯೋದ್ಯೋಗಿಗಳಾಗಿದ್ದಾಗ್ಯೂ ಮಂತ್ರಿತನಕ್ಕೇರಿದವರು ಟೋರಿನಾಯಕರು. 1812ರಲ್ಲಿ ಮುಖ್ಯ ಮಂತ್ರಿಯಾದ **ಲಾರ್ಡ್ ಲಿವರ್‌ಪೂಲ್** (Lord Liverpool) 1827ರವರೆಗೆ ಅಡ್ಡಿಯನ್ನು ಕಾಣದೆ ಅಧಿಕಾರ ನಡೆಸಿದನು. ನಪೋಲಿಯನ್ನನೊಡನೆ ನಡೆಸಿದ ಮಹಾಯುದ್ಧ 1815ರಲ್ಲಿ ಕೊನೆಗಂಡಿತ್ತು. ಆದರೆ ಯುದ್ಧಕಾಲದ ಬಿಕ್ಕಟ್ಟು ಇಕ್ಕಟ್ಟುಗಳು ಟೋರಿಗಳ ಕಾರ್ಭಾರಿನಲ್ಲಿ ಆ ತರುವಾಯವೂ ತೋರಿಕೊಂಡೇ ಇದ್ದವು.

ಯುದ್ಧದಲ್ಲಿ ಜಯಪ್ರಾಪ್ತಿಯಾದಾಗ ಜನರೆಲ್ಲರೂ ಸುಭಿಕ್ಷಕಾಲವನ್ನೆದುರು ನೋಡಿದರು. ಹಾಗೆ ಬೆಳೆಸಿದ ಆಸೆಯೆಲ್ಲ ಭಂಗವಾಯಿತು. ಯುದ್ಧಕ್ಕಾಗಿ ತಯಾರಿ ಯಾಗುತ್ತಿದ್ದ ಯುದ್ಧಸಾಮುಗ್ರಿಯ ವ್ಯಾಪಾರ ನಿಂತುಹೋಯಿತು. ಅಲ್ಲದೆ ಇಂಗ್ಲಿಷ್ ಕೈಗಾರಿಕೆ ಸರಕನ್ನು ಹಿಂದಿನಂತೆ ಕೊಂಡುಕೊಳ್ಳಲು ಇತರ ಐರೋಪ್ಯ ದೇಶಗಳು ಕಷ್ಟಕ್ಕೂ ನಷ್ಟಕ್ಕೂ ಸಿಕ್ಕಿ ಚೈತನ್ಯವಿಲ್ಲದಿದ್ದಕಾರಣದಿಂದ ಸಾಮಾನ್ಯ ಕೈಗಾರಿಕೆ ವಸ್ತುಗಳೂ ಮಾರಾಟವಾಗಲಿಲ್ಲ. ಯುದ್ಧ ಕಾಲದಲ್ಲಿ ಯುರೋಪಿನಿಂದ ಧಾನ್ಯ ಬರಲಾಗದಿದ್ದುದರಿಂದ ಇಂಗ್ಲಂಡಿನಲ್ಲಿ ಧಾನ್ಯದ ಬೆಲೆಯೇರಿತ್ತು. ಆಗ ಅನೇಕ ರೈತರು ಹೆಚ್ಚುಹೆಚ್ಚಾಗಿ ಹೊಲಗಳನ್ನು ಧಾನ್ಯದ ಬೆಳೆಗಿಟ್ಟರು. ಯುದ್ಧ ಮುಗಿದ ಕೂಡಲೆ ಧಾನ್ಯದ ವ್ಯಾಪಾರವೂ ಅಸ್ತವ್ಯಸ್ತವಾಯಿತು. ಜಮೀನ್ದಾರರ ಗುಂಪಿನವರೇ

**ದುಃಸ್ಥಿತಿ**

ಪ್ರಬಲರಾಗಿದ್ದ ಪಾರ್ಲಿಮೆಂಟಿನಲ್ಲಿ 1815ರಲ್ಲಿ ಇಂಗ್ಲಿಷ್ ಧಾನ್ಯ ಕ್ವಾರ್ಟರೊಂದಕ್ಕೆ 80 ಷಿಲ್ಲಿಂಗುಗಳಷ್ಟು ಧಾರಣೆಯೇರಿದಾಗ ಮಾತ್ರವೇ ಪರದೇಶೀ ಧಾನ್ಯವನ್ನು ಆಮದುಮಾಡತಕ್ಕು ದೆಂದೂ ಅದುವರೆಗೂ ಪರದೇಶೀ ಧಾನ್ಯಕ್ಕೆ ಬಹಿಷ್ಕಾರವಿರತಕ್ಕುದೆಂದೂ ಕಾನೂನು ಮಾಡಿದರು. 1816ರಲ್ಲಿ ಇಂಗ್ಲಂಡಿನಲ್ಲಿ ಧಾನ್ಯದ ಬೆಳೆ ಬೇರೆ ಕೆಟ್ಟಿತು. ಧಾನ್ಯದ ಬೆಲೆ ಅತಿಯಾಗಿ ಏರಿತು. ಬಡಬಗ್ಗರಿಗೂ ಕೂಲಿನಾಲಿಯಿಂದ ಜೀವಿಸುತ್ತಿದ್ದವರಿಗೂ ಅತಿಕಷ್ಟಕಾಲ ತೋರಿತು. ಪದಾರ್ಥದ ಬೆಲೆ ಹೆಚ್ಚಿದಂತೆ ಕೂಲಿ ಹೆಚ್ಚಲಿಲ್ಲ. ಹೀಗಾಗಿ ಭೂಸ್ಥಿತಿವಂತರು ಹೊರತು ಉಳಿದ ಎಲ್ಲ ವರ್ಗಗಳವರಿಗೂ ಕಷ್ಟ ವಾಯಿತು.

ಕಡುಬಡವರಾಗಿ ಕೂಲಿನಾಲಿ ಮಾಡಿ ಬದುಕು ನಡೆಸುತ್ತಿದ್ದವರಿಗೆ ಸಂಪಾದನೆ ಅತ್ಯಲ್ಪ, ಆಹಾರ ಪದಾರ್ಥಗಳು ಅತಿಪ್ರಿಯ, ನಿರುದ್ಯೋಗ; ಅಷ್ಟು ಸಾಲದೆ ಕಾರ್ಖಾನೆಗಳಲ್ಲಿ ಹೊತ್ತುಗೊತ್ತಿಲ್ಲದ ಚಾಕರಿ. ಇಷ್ಟು ಕಷ್ಟವನ್ನು ಸಹಿಸಲಾರದೆ ಕೆಲವೆಡೆಗಳಲ್ಲಿ ಕೂಲಿಯವರು ಯಂತ್ರಗಳಿಂದಲೇ ತಮ್ಮ ದುರವಸ್ಥೆಯೆಂದು ಭಾವಿಸಿ ಯಂತ್ರಗಳನ್ನು ನಾಶಗೊಳಿಸುವ ಸಾಹಸಕ್ಕೆ ತೊಡಗಿದರು. ಅನೇಕರಿಗೆ ನಿತ್ಯೋಪ ವಾಸಸ್ಥಿತಿಯೊದಗಿದಾಗ ಗಲಾಟೆಗಳೂ ದಂಗೆಗಳೂ ಸಹಜವಾಗಿ ರೇಗುವಂತಿತ್ತು.

**ಕಂಬಳಿಯಾತ್ರೆ**

1817ರಲ್ಲಿ **ಮಾಂಚೆಸ್ಟರ್** ಪಟ್ಟಣದ ಅರಳೆ ಕೆಲಸಗಾರರು ಗುಂಪುಕೂಡಿ ತಮ್ಮ ಕಂಬಳಿಗಳನ್ನು ಮೂಟೆಕಟ್ಟಿಕೊಂಡು ಲಂಡನ್ನಿಗೆ ಹೊರಟು ತಮ್ಮ ಕಷ್ಟಗಳನ್ನು ಹೇಳಿಕೊಂಡು ಪರಿಹಾರಪಡೆಯಲು ಯೋಚನೆಮಾಡಿದರು. ಕಂಬಳಿಹೊತ್ತವರ ಯಾತ್ರೆ ಶಾಂತತೆಯ ಸಂಗತಿಯಾಯಿತು. ಆದರೆ ಸ್ವಲ್ಪಕಾಲದಲ್ಲಿಯೇ ಬಡಜನರು ಉದ್ರಿಕ್ತರಾಗಿ ದಂಗೆ ಯೆದ್ದು ಫ್ರಾನ್ಸಿನ ಮಹಾಪಲ್ಲಟದಂತಹ ಪ್ರಲಯವನ್ನು ನಡೆಸಬಹುದಾಗಿದ್ದಿತು ಪರಿಸ್ಥಿತಿ.

ಲಿವರ್ಪೂಲ್ ಶ್ರೀಮಂತ ಮುಖಂಡನಾಗಿದ್ದ ಟೋರಿಪಕ್ಷದವರಿಗೆ ಪರಿಸ್ಥಿತಿಯಲ್ಲಿ ವಿಪತ್ತು ತೋರಿತು. ಆದರೆ ಅದಕ್ಕೆ ನಿಜವಾದ ಕಾರಣಗಳೇನೆಂದು ತಿಳಿದುಕೊಳ್ಳುವ ಸೈರಣೆಯಿರಲಿಲ್ಲ. ಸರ್ವಸಮತ್ವ ಭ್ರಾತೃತ್ವ ಸ್ವಾತಂತ್ರ್ಯಗಳು ಜನ್ಮಸಿದ್ಧ ಅಧಿಕಾರಗಳೆಂಬ ಫ್ರಾನ್ಸ್ ಮಹಾಪಲ್ಲಟದ ಪಲ್ಲವಿಯ ಪ್ರಚಾರದಿಂದ ಜನಸಾಮಾನ್ಯರು ತಳಮಳಗೊಳ್ಳುತ್ತಿರುವರೆಂದು ಭಾವಿಸಿ ಮಂತ್ರಿಗಳು ದಬ್ಬಾಳಿಕೆಯ ಆಡಳಿತಕ್ಕೆ ಮೊದಲಿಟ್ಟರು.

**ದಬ್ಬಾಳಿಕೆ**

ಯುದ್ಧಕಾಲದಲ್ಲಿ ಹಿರೇಪಿಟ್ ಹೆಬಿಯಸ್ ಕೋರ್ಪಸ್ ಕಾನೂನನ್ನು ಮಾಯಮಾಡಿಸಿಕೊಂಡಂತೆ ತಾವೂ 1817ರಲ್ಲಿ ಆ ಕಾನೂನನ್ನು ತಳ್ಳಿಟ್ಟು ಕಾರಣತೋರದೆ ಪ್ರಜೆಯನ್ನು ದಸ್ತಗಿರಿಮಾಡಿಸಲು ಸಿದ್ಧರಾದರು. ಅತ್ತ ಅಸಮಾಧಾನದಿಂದ ಕುದಿಯುತ್ತಿದ್ದ ಪ್ರಜೆಗಳಿಗೆ ನಾಯಕರಾಗಿದ್ದವರು ದುಃಸ್ಥಿತಿಯೆಲ್ಲಕ್ಕೂ ಪಾರ್ಲಿಮೆಂಟಿನ ರಚನೆಯರೀತಿಯೇ ಕಾರಣವೆಂದೂ ಪಾರ್ಲಿಮೆಂಟ್ ಸಭೆಗೆ ಸಂಸ್ಕಾರವಾದಲ್ಲಿ ಸುಸ್ಥಿತಿಗೆ ದಾರಿಯಾಗುವುದೆಂದೂ ಬೋಧಿಸುತ್ತಿದ್ದರು. **ಕಾಬೆಟ್**(Cobbett) ಎಂಬಾತನು ಮೊದಲು ರೈತನೂ ಆ ಬಳಿಕ ಸಿಪಾಹಿಯೂ ಆಗಿದ್ದು ಬಡಜನರ ಸ್ಥಿತಿಗತಿಗಳನ್ನು ಅರಿತಿದ್ದವನು. ಆತನು ಒಂದು ವಾರಪತ್ರಿಕೆಯನ್ನು ಹೊರಡಿಸಿ ಅದರಲ್ಲಿ ಪಾರ್ಲಿಮೆಂಟ್ ಚುನಾವಣೆ ಪದ್ಧತಿಗಳನ್ನು ಖಂಡಿಸುತ್ತ ಲೇಖನಗಳನ್ನು ಪ್ರಕಟಿಸಿದನು. ಒಂದುಕಡೆ ಜಮೀನ್ದಾರರನ್ನೂ ಮತ್ತೊಂದುಕಡೆ ಧನವಂತವರ್ತಕರನ್ನೂ ಮೆಚ್ಚಿಸುವುದಕ್ಕಾಗಿ

**ಪರಿಹಾರ ಮಾರ್ಗ**

ಅವರ ಆಶ್ರಿತರಾದ ಕಾಮನ್ಸ್ ಸಭಿಕರು ಧಾನ್ಯದ ಕಾನೂನುಗಳನ್ನೂ ವ್ಯಾಪಾರದ ಆತಂಕಗಳನ್ನೂ ಪ್ರಚುರಪಡಿಸಿದ ಸಂಗತಿಯನ್ನು ಬಿಚ್ಚಿ ಹೇಳಿದನು. 1816ರಲ್ಲಿ ಈತನು ತನ್ನ ಪತ್ರಿಕೆಯನ್ನು ಎರಡು ಪೆನ್ನಿಗಳಿಗೆ ಅಗ್ಗವಾಗಿ ಒದಗಿಸಲು ಮೊದಲಿಟ್ಟನು. **'ಪೊಲಿಟಿಕಲ್ ರೆಜಿಸ್ಟರ್'** (Political Register) ಎಂಬ ಆ ಪತ್ರಿಕೆಯನ್ನು ಬಡಬಗ್ಗರೂ ಓದಿ ನಿಜಾಂಶಗಳನ್ನು ತಿಳಿದರು. ಪಾರ್ಲಿಮೆಂಟ್‌ಸಭೆಯ ಸಂಸ್ಕಾರವಾಗಬೇಕೆಂಬ ಕೂಗು ಬಲವಾಯಿತು.

ಕಾಬೆಟ್ಟನಂತಹ ನಾಯಕರಿಲ್ಲದಿದ್ದರೆ ಪ್ರಾಯಶಃ ಇಂಗ್ಲಂಡಿನ ಜನಸಾಮಾನ್ಯರು ಉದ್ರೇಕದಿಂದ ದಂಗೆಯೆದ್ದು ವಿಚಾರಶೂನ್ಯರಾಗಿ ಅನಾಹುತಗಳನ್ನು ನಡೆಸುತ್ತಿದ್ದರು. ವ್ಹಿಗ್ಗರ ಪ್ರವರದವರಾದ ಆ ನಾಯಕರು ಪಾರ್ಲಿಮೆಂಟ್‌ಸಂಸ್ಕಾರವೇ ಎಲ್ಲಕ್ಕೂ ಮೂಲವೆಂದು ಸಾರಿ **ರ್ಯಾಡಿಕಲ್** (Radical) ಎಂಬ ಹೊಸಹೆಸರನ್ನು ತಮ್ಮ ಗುಂಪಿಗೆ ಇಟ್ಟುಕೊಂಡರು. ಪೂರ್ವಕಾಲದಿಂದ ನಡೆದುಬಂದ ಪದ್ಧತಿಗಳು ನಿರ್ದುಷ್ಟವೆಂದೂ ಆದರ್ಶಭೂತವಾದುದೆಂದೂ ಟೋರಿಗಳಿಗೆ ಹೆಮ್ಮೆ. ಹೀಗಿರಲು ಅಲ್ಲಲ್ಲಿ ಜನರು ದೊಡ್ಡ ದೊಡ್ಡ ಸಭೆಗಳಲ್ಲಿ ಸೇರಿ ಪಾರ್ಲಿಮೆಂಟ್ ಸಂಸ್ಕಾರ ಅತ್ಯವಶ್ಯಕವೆಂದು ಭಾಷಣಗಳನ್ನೂ ನಿಶ್ಚಯಗಳನ್ನೂ ಮಾಡತೊಡಗಿದರು. 1819ರಲ್ಲಿ ಮಾಂಚೆಸ್ಟರ್ ಪಟ್ಟಣದ ಒಂದು ಮೈದಾನದಲ್ಲಿ ಅರವತ್ತುಸಾವಿರಮಂದಿ ಸಭೆಸೇರಿದರು; **ಹಂಟ್** (Hunt) ಎಂಬ

ರ್‍ಯಾಡಿಕಲ್ ಪಕ್ಷದವನು ಭಾಷಣಮಾಡತಕ್ಕವನು. ಸಭೆಯಲ್ಲಿ ಅಕ್ರಮವೇನೂ ನಡೆಯದಿದ್ದಾಗ್ಗೂ ಅಲ್ಲಿಯ ಅಧಿಕಾರಿಗಳು ಗಾಬರಿಗೊಂಡು ಜನನಾಯಕರನ್ನು ದಸ್ತಗಿರಿಮಾಡಿಸಿದರು; ಗುಂಪುಕೂಡಿದ್ದ ಜನರನ್ನು ಬಲವಂತದಿಂದ ಚದರಿಸಿದರು. ಪರಿಣಾಮವಾಗಿ 11 ಜನರ ಪ್ರಾಣಗಳು ಹೋದವು; ಒಂದುನೂರು ಮಂದಿಗೆ ಕತ್ತಿಗಾಯಗಳಾದವು.

**ಪೀಟರ್‌ಲೂ**

ಮಂತ್ರಿಗಳು ಅಧಿಕಾರಿಗಳನ್ನು ಶಹಬಾಸೆಂದರು. ಜನನಾಯಕರೂ ರ್‍ಯಾಡಿಕಲ್ ಪಕ್ಷದವರೂ ಆ ಘಟನೆಯನ್ನು "ಮಾಂಚೆಸ್ಟರ್ ಹತ್ಯೆ" "ಪೀಟರ್‌ಲೂ ಕದನ"ವೆನ್ನುತ್ತ ಜನಶಿಕ್ಷಣವನ್ನು ಪಟುತರವಾಗಿ ನಡೆಸಲು ತೊಡಗಿದರು. ಆಗ ಟೋರಿಗುಂಪಿನವರು ಜಾತ್ಯಂಧರಂತೆ ವರ್ತಿಸುತ್ತ 1819ರಲ್ಲಿ ಒಟ್ಟಿಗೆ ಆರು ಕಾನೂನುಗಳನ್ನು ಪಾರ್ಲಿಮೆಂಟಿನಲ್ಲಿ ರೂಪಗೊಳಿಸಿ ಜಾರಿಯಲ್ಲಿ ತಂದರು. ಜನರು ಸಭೆಸೇರುವುದು ತಪ್ಪು, ಸರ್ಕಾರವನ್ನು ಖಂಡಿಸುತ್ತ ಪತ್ರಿಕೆಯಲ್ಲಿ ಬರೆಯುವುದು ತಪ್ಪು, ಅಪ್ಪಣೆಪಡೆಯದೆ ಸೈನಿಕ ಶಿಕ್ಷಣವನ್ನು ಸಂಪಾದಿಸುವುದು ತಪ್ಪು ಎಂದಾಯಿತು. ಪ್ರತಿ ವೃತ್ತಪತ್ರಿಕೆಯೂ 4ಪೆನ್ನಿ ಸುಂಕ ತೆರಬೇಕಾಯಿತು. ಮ್ಯಾಜಿಸ್ಟ್ರೇಟರುಗಳು ಗುಮಾನಿಮೇಲೆ ಮನೆಗಳನ್ನು ತನಿಖೆ ಮಾಡಿಸುವುದಕ್ಕೂ ಬೇಗಬೇಗ ವಿಚಾರಣೆಗಳನ್ನು ಮುಗಿಸಿಕೊಳ್ಳುವುದಕ್ಕೂ ಸಾಕಾದಷ್ಟು ಹೆಚ್ಚಿನ ಅಧಿಕಾರ ಪಡೆದರು. ಇದರಿಂದ ಆ ಆರು ಕಾನೂನುಗಳಿಗೂ (Six gag Acts) **ಬಾಯಿಗೆ ಆರುಬಿರಡೆ**ಯೆಂಬ ಹೆಸರು ಬಂತು. ವಾಗ್ಬಂಧನ, ಲೇಖನಬಂಧನ, ಸಭಾಬಂಧನಗಳೆಲ್ಲ ಸೇರಿ ಜನರು ಬೋನಿನಲ್ಲಿ ಸಿಕ್ಕಿದ ಇಲಿಗಳಂತಿರಬೇಕಾಯಿತು.

**ಪ್ರಜಾಬಂಧನ**

ಲಿವರ್‌ಪೂಲ್ ಶ್ರೀಮಂತ ಮುಂತಾದ ಹಳೆಯ ಟೋರಿಗಳಿಗೆ ದೇಶಭಕ್ತಿಯಿಲ್ಲವೆ ಹೀಗಾಗಲಿಲ್ಲ. ಇಂಗ್ಲಂಡಿನಲ್ಲಿ ಲಾಗಾಯತಿನಿಂದ ನಡೆದುಬಂದ ಪಾರ್ಲಿಮೆಂಟ್ ಪದ್ಧತಿಗಳೇ ಸರ್ವೋತ್ಕೃಷ್ಟವೆಂಬುದು ಆ ಟೋರಿಗೊಡ್ಡುಗಳ ಮನಸ್ಸಿನಲ್ಲಿ. ಆದುದರಿಂದ ಅವುಗಳನ್ನು ಬದಲಾಯಿಸುವುದೆಂದರೆ ಸಹಿಸದೆ ಗುರುಗುಟ್ಟಿದರು. ವಿರೋಧಿಗಳು ಪ್ರಕಟವಾಗಿ ಪ್ರಯತ್ನಿಸಲಾಗದಿದ್ದ ಕಾಲದಲ್ಲಿ ಪಿತೂರಿಗಳುತಾನೆ ನಡೆಯತಕ್ಕದ್ದು! 1820ರಲ್ಲಿ ಪಿತೂರಿಯೂ ನಡೆಯಿತು. **ಕೇಟೊ ಸ್ಟ್ರೀಟ್** (Cato Street) ಎಂಬ ಬೀದಿಯ ಮನೆಯೊಂದರಲ್ಲಿ ಟೋರಿಮಂತ್ರಿಮಂಡಲದವರೆಲ್ಲರೂ ಯಾವುದೋ ಉದ್ದೇಶದಿಂದ ಸೇರಿರುವಾಗ ಅವರೆಲ್ಲರನ್ನೂ ಕೊಂದು ನಿರುಪಾಧಿಕವಾಗಿ ನೆರವೇರಿಸಿಕೊಳ್ಳುವ ಆಸೆಯಿಂದ **ಥಿಸ್ಲ್‌ವುಡ್** (Thistlewood) ಎಂಬಾತನು ಪಿತೂರಿ ಕಟ್ಟಿದನು. ಪಿತೂರಿಗಾರರೊಳಗೇ ದ್ರೋಹ ನಡೆದು ಎಲ್ಲವೂ ಪತ್ತೆಯಾಗಿ ಐದುಮಂದಿ ಗಲ್ಲಿಗೇರಬೇಕಾಯಿತು. ಅದೇ ವರ್ಷದಲ್ಲಿ ಪಟ್ಟವನ್ನೇರಿದ್ದ ಹೊಸದೊರೆ ತನ್ನ ರಾಣಿಯನ್ನು ತ್ಯಾಗಮಾಡಬೇಕೆಂಬ ಉದ್ದೇಶವನ್ನು ಸೂಚಿಸಿದ್ದನು. ಜನರ ಬಾಯಿಗಳಲ್ಲಿ ಆ

**ಪಿತೂರಿ**

ವಿಚಾರವೇ ತುಂಬಿತು. ಕೇಟೊಸ್ಟ್ರೀಟ್ ಪಿತೂರಿಯೆಂಬುದು ಬೇಗನೆ ಮರೆತು ಹೋಯಿತು. ಟೋರಿಗಳ ಅಧಿಕಾರಕ್ಕೆ ಆಪತ್ತು ತೋರದಾಯಿತು.

**ತರುಣಟೋರಿಗಳು**

ಆದರೆ ಸ್ವಲ್ಪಕಾಲದಲ್ಲಿ ಟೋರಿಪಂಗಡದಲ್ಲಿ ಒಡಕು ತೋರಿಕೊಂಡಿತು. ಲಿವರ್ಪೂಲ್ ಶ್ರೀಮಂತನ ಸಹಾಯಕರಾಗಿದ್ದವರಲ್ಲಿ **ಕ್ಯಾಸಲ್‌ರೇ** (Castlereagh) **ಸಿಡ್ಮತ್** (Sidmouth) ಮುಂತಾದವರು ಗೊಡ್ಡುಗಳೆನಿಸಿ ಸಂಸ್ಕರಣದ ಮಾತೆತ್ತಿದ್ದವ ರನ್ನು ಅಡಗಿಸಿಬಿಡಬೇಕೆಂದು ಹೇಳುತ್ತಿದ್ದವರು; **ಹಸ್ಕಿಸನ್** (Huskisson) **ಪೀಲ್** (Peel), **ಕ್ಯಾನಿಂಗ್** (Canning) ಮುಂತಾದ ಬೇರೆಕೆಲವರು ಟೋರಿ ಪಂಗಡದಲ್ಲಿ ತರುಣಪಕ್ಷದವರೆನಿಸಿ ರಾಜ್ಯದ ದುಃಸ್ಥಿತಿಗೆ ಕಾರಣವನ್ನು ಕಂಡುಕೊಂಡು ಅದಕ್ಕೆ ತಕ್ಕ ಪರಿಹಾರೋಪಾಯಗಳನ್ನು ಅವಲಂಬಿಸಬೇಕೆಂದಿದ್ದವರು. 1821ರಲ್ಲಿ ಪೀಲ್ ಹೋಮ್ ಸೆಕ್ರೆಟರಿ (Home Secretary)ಯಾದನು. 1822ರಲ್ಲಿ ಕ್ಯಾಸಲ್‌ರೇ ಕ್ಷೌರದ ಕತ್ತಿಯಿಂದ ತನ್ನ ಕುತ್ತಿಗೆ ಕತ್ತರಿಸಿಕೊಂಡು ಪ್ರಾಣತೊರೆಯಲು ಸಂಧಿವಿಗ್ರಹಿ ಸ್ಥಾನಕ್ಕೆ ಕ್ಯಾನಿಂಗ್ ಏರಿಕೊಂಡನು. ಈ ಮೂವರೂ ತಮ್ಮ ಇಲಾಖೆಗಳಲ್ಲಿ ಅನೇಕ ಸುಧಾರಣೆಗಳನ್ನು ನಡೆಸಿ ಜನರಿಗೆ ಅನುಕೂಲಮಾಡಿಕೊಡಲು ಯತ್ನಿಸಿದರು.

ಒಳನಾಡಿನ ಸಚಿವ ಅಥವಾ ಹೋಮ್ ಸೆಕ್ರೆಟರಿಯಾದ ಪೀಲನ ಮನಸ್ಸಿಗೆ ದಬ್ಬಾಳಿಕೆಯು ನಿಷ್ಪ್ರಯೋಜಕವೆಂದು ತಿಳಿದಿತ್ತು. ಸಚಿವನಾದ ಬಳಿಕ ರಾಜಕೀಯ ಅಪರಾಧಗಳಿಗಾಗಿ ಜನರನ್ನು ವಿಚಾರಣೆಮಾಡಿಸದೆ ತಟಸ್ಥನಾಗಿರುತ್ತ ಉಪಾಯವಾಗಿ ಸರ್ಕಾರೀ ಗೂಢಚಾರರ ದಳವನ್ನು ವಿಸರ್ಜಿಸಿದನು. ಆ ತರುವಾಯ ದಂಡವಿಧಿಯ ಸುಧಾರಣೆಗೆ ಮೊದಲಿಟ್ಟನು. ಆ ಕಾಲದಲ್ಲಿ ಇಂಗ್ಲಿಷ್ ದಂಡವಿಧಿಕೋಶವು ಅತಿ ಕ್ರೂರವಾಗಿದ್ದಿತು. ದೊಡ್ಡ ತಪ್ಪಿಗೂ ಚಿಕ್ಕತಪ್ಪಿಗೂ ಫಾಸಿ ಶಿಕ್ಷೆಯೇ ವಿಧಿ; ತಾರ ತಮ್ಯವೇ ಇರಲಿಲ್ಲ. ಆದ್ದರಿಂದ ತಪ್ಪುಮಾಡಿದವನು ಭಾರಿತಪ್ಪನ್ನೇ ಮಾಡುತ್ತಿದ್ದನು.

**ದಂಡವಿಧಿಯ ಪರಿಷ್ಕರಣ**

ನ್ಯಾಯಾಸ್ಥಾನಗಳಲ್ಲಿ ಸಣ್ಣಪುಟ್ಟ ಅಪರಾಧಗಳ ವಿಚಾರಣೆ ನಡೆದಾಗ ಪಂಚಾಯತರು ತಪ್ಪಿತಸ್ಥರನ್ನು ಕ್ರೂರಶಿಕ್ಷೆಗೆ ದೂಡ ಲಾರದೆ ಬಿಟ್ಟೀಬಿಡುತ್ತಿದ್ದರು. ಅನ್ಯಾಯ ಮಾಡಲಾರದೆ ಪಂಚಾಯತರು ಹೀಗೆವರ್ತಿಸುತ್ತಿದ್ದುದರಿಂದ ಸಣ್ಣ ಅಪರಾಧ ಗಳಿಗೆ ಪ್ರೋತ್ಸಾಹಕೊಟ್ಟಂತಾಯಿತು. ಘೋರವಾದ ಬಡತನ ನಿರುದ್ಯೋಗಗಳೊಂದಿಗೆ ಧಾರಣೆವಾಸಿಗಳು ವಿಪರೀತವಾಗಿ ಏರಿದ್ದ ಕಾಲದಲ್ಲಿ ಕಳ್ಳತನವೆನ್ನುವುದು ಎಲ್ಲೆಲ್ಲಿಯೂ ಸಾಮಾನ್ಯವಾಗಿತ್ತು. ಮೊದಲು ಪೀಲ್ ದಂಡವಿಧಿಯನ್ನು ತಿದ್ದಿಸಿದನು. ರಾಷ್ಟ್ರ ದ್ರೋಹ ಮತ್ತು ಪ್ರಾಣಹರಣಗಳಿಗೆಮಾತ್ರ ಮರಣಶಿಕ್ಷೆಯನ್ನೂ ಇತರ ಅಪರಾಧಿಗಳಿಗೆ ತಾರತಮ್ಯವನ್ನನುಸರಿಸಿದ ಶಿಕ್ಷೆಗಳನ್ನೂ ಗೊತ್ತುಪಡಿಸಿದನು. ಇದರಿಂದ ಎಷ್ಟೋ

ಸಭೆಯ ಸದಸ್ಯತ್ವವಾಗಲಿ ಅಲಭ್ಯವಾಗಿತ್ತು. ಹೈಚರ್ಚ್ ಭಕ್ತರಿಗೆ ಆ ಪಂಗಡದವರನ್ನು ಕಂಡರೆ ಆಗುತ್ತಿರಲಿಲ್ಲ. ವ್ಹಿಗ್ ಪಕ್ಷದವರುಮಾತ್ರ ಡಿಸ್ಸೆಂಟರ್ ಪಂಗಡದವರ ಬೆಂಬಲ ವನ್ನು ಸಂಪಾದಿಸಿಕೊಂಡಿದ್ದ ಕಾರಣದಿಂದ 1727 ರಲ್ಲಿ ಒಂದು ಪದ್ಧತಿಯನ್ನು ಪ್ರಾರಂಭಿಸಿದ್ದರು. ಆ ಕಾನೂನುಗಳ ಪ್ರಕಾರ ಆಂಗ್ಲಿಕನ್ ಪ್ರಮಾಣಗಳನ್ನು ಮಾಡದೆಯೇ ಹುದ್ದೆಗಳನ್ನು ಡಿಸ್ಸೆಂಟರುಗಳು ದಕ್ಕಿಸಿಕೊಂಡು ಅನುಭವಿಸಲು ವ್ಹಿಗ್ಗರ ಕಾರ್ಭಾರಿನಕಾಲದಲ್ಲಿ ಮೊದಲಾಗಿ ಅಡ್ಡಿಯಿಲ್ಲದೆ ನಡೆ

**ಡಿಸ್ಸೆಂಟರ್ ಪಂಗಡ**

ಯುತ್ತಲೇ ಇತ್ತು. ಹೀಗಾಗಿ ಆ ಕಾನೂನುಗಳು ದಫ್ತರ ದಲ್ಲಿದ್ದರೂ ಆಚರಣೆಯಲ್ಲಿರಲಿಲ್ಲ. 1828 ರಲ್ಲಿ **ಲಾರ್ಡ್ ಜಾನ್ ರಸ್ಸೆಲ್** (Lord John Russell) ಎಂಬ ಶ್ರೀಮಂತನು ಆ ಕಾನೂನುಗಳನ್ನು ವಜಾ ಮಾಡಬೇಕೆಂದು ಮಸೂದೆ ಹುಟ್ಟಿಸಿದನು. ಪಾರ್ಲಿಮೆಂಟ್ ಸಭೆಯಲ್ಲಿ ಬಹುಮಂದಿ ಆ ಮಸೂದೆಗೆ ತಥಾಸ್ತು ಎಂದುಬಿಟ್ಟರು. ಹಳೆ ಟೋರಿಗಳೊಪ್ಪಲಿಲ್ಲ. ಆದರೆ ವಿರೋಧಿಸಿ ಫಲವಿರಲಿಲ್ಲ. ಆದ್ದರಿಂದ ವೆಲ್ಲಿಂಗ್ಟನ್ ಮತ್ತು ಪೀಲ್ ತೆಪ್ಪಗಿದ್ದು ಬಿಟ್ಟರು. ಮಸೂದೆ ಕಾನೂನಿನ ಕಡತಕ್ಕೇರಿತು. ಆಂಗ್ಲಿಕನ್ನರೂ ಡಿಸ್ಸೆಂಟರ್ ಪಂಗಡದವರೂ ಸಮಾನಾಧಿಕಾರಿಗಳಾದರು. ನೂರಾರು ವರ್ಷಗಳಿಂದ ನಡೆದು ಬಂದಿದ್ದ ಮತದ್ವೇಷದ ಗುರುತು ಮಾಯವಾದಂತಾಯಿತು.

ಆದರೆ ರೋಮನ್ ಕ್ಯಾಥಲಿಕ್ಕರಿಗೆ ಯಾವ ಅನುಕೂಲವೂ ಆಗಲಿಲ್ಲ. ಅವ ರಿಗೂ ಸಮಾನಾಧಿಕಾರಬರಬೇಕೆಂದು ವ್ಹಿಗ್ ಪಂಗಡದವರು ವಾದವನ್ನು ಮೊದ ಲಿಟ್ಟರು. ಆದರೆ ಟೋರಿಗಳೊಪ್ಪಲಿಲ್ಲ. ಟೋರಿಪಂಗಡಕ್ಕೆ ಸೇರುವಮೊದಲು ಪ್ರತಿ ಯೊಬ್ಬನೂ ರೋಮನ್ ಕ್ಯಾಥಲಿಕ್ ಮತವನ್ನು ದ್ವೇಷಿಸುವುದಾಗಿ ಪ್ರತಿಜ್ಞೆಮಾಡ ಬೇಕಾಗಿತ್ತು. ವೆಲ್ಲಿಂಗ್ಟನ್ ಮುಂತಾದವರು ವ್ಹಿಗ್ಗರ ವಾದವನ್ನು ಹಟದಿಂದ ವಿರೋ ಧಿಸತಕ್ಕವರು. ಪರಂತು ಐರ್ಲಂಡಿನಲ್ಲಿ **ಓಕಾನೆಲ್** (O'Connell) ಎಂಬಾತನು ಐರಿಷರನ್ನು ಹುರಿಗೊಳಿಸಿ ಹೊಸರೀತಿಯಲ್ಲಿ ಒಂದು ವಿಚಿತ್ರ ಮುಷ್ಕರವನ್ನು ನಡೆಸು ತ್ತಿದ್ದನು. ಕ್ಲೇರ್ ಜಿಲ್ಲೆ (County Clare) ಯವರು ಪುನಃ ಪುನಃ ಕ್ಯಾಥಲಿಕ್ ಮತದ ಓಕಾನೆಲ್ಲನನ್ನೇ ತಮ್ಮ ಪ್ರತಿನಿಧಿಯಾಗಿ ಚುನಾಯಿಸಿದರು. ಕ್ಯಾಥಲಿಕ್ಕರಿಗೆ ಸಭಿಕರಾಗುವ ಅಧಿಕಾರಬೇಕೆಂಬ ಕೂಗು ದಿನೇದಿನೇ ಬಲ

**ಕ್ಯಾಥಲಿಕ್ಕರಿಗೆ ಸಮಾನಾಧಿಕಾರ**

ವಾಗುತ್ತಿತ್ತು. ಐರ್ಲಂಡಿನಲ್ಲಿ ಅಂತರ್ಯುದ್ಧ ರೇಗುವಂತೆ ಇತ್ತು. ಆಗ ವೆಲ್ಲಿಂಗ್ಟನ್ ಸೋಲುವುದೇ ಮೇಲೆಂದು ನಿಶ್ಚ ಯಿಸಿ ರೋಮನ್ ಕ್ಯಾಥಲಿಕ್ಕರಿಗೆ ಸಮಾನಾಧಿಕಾರವನ್ನು ಕೊಡಿಸಿದ ಮಸೂದೆಯನ್ನು ಟೋರಿಗಳು ಒಪ್ಪಿಕೊಳ್ಳುವಂತೆ 1829 ರಲ್ಲಿ ನೆರವೇರಿಸಿ ದನು. ಈ ರೀತಿ ಇಷ್ಟವಿಲ್ಲದ ಕೆಲಸಮಾಡುತ್ತ ಪ್ರಧಾನನಾಗಿದ್ದ ವೆಲ್ಲಿಂಗ್ಟನ್ನನಿಗೆ ಮುಂದಿನವರ್ಷ ಇನ್ನೂ ಇಕ್ಕಟ್ಟಿನ ಸಂದರ್ಭವೊದಗಿತು. ಪಾರ್ಲಿಮೆಂಟ್ ಸಭೆಯ

ಸುಧಾರಣೆ ಅವಶ್ಯವಾಗಿಯೂ ಅವಿಲಂಬ್ಯವಾಗಿಯೂ ನಡೆಯತಕ್ಕದ್ದೆಂಬ ಕೂಗು ಜನರಲ್ಲಿ ಜೋರಾಗಿ ಪಾರ್ಲಿಮೆಂಟಿನಲ್ಲಿ ವ್ಹಿಗ್ಗರವಾದವು ಪ್ರಬಲವಾಯಿತು. ಅದನ್ನೆ ದುರಿಸಲು ಟೋರಿಗಳಿಗೆ ಸಾಕಾದಷ್ಟು ಪ್ರಾಬಲ್ಯವಿರಲಿಲ್ಲ. ಆದ್ದರಿಂದ 1830ರಲ್ಲಿ ವೆಲ್ಲಿಂಗ್ಟನ್ ನಿವೃತ್ತನಾದನು.

## ವ್ಹಿಗ್ಗರ ಅಧಿಕಾರ (1830-1841)

1830 ರಲ್ಲಿ ಪಟ್ಟವೇರಿದ ನಾಲ್ಕನೆ ವಿಲಿಯಂ ದೊರೆ ಟೋರಿಗಳನ್ನು ಮಂತ್ರಿಸ್ಥಾನದಿಂದ ಬಿಡಿಸಿ ವ್ಹಿಗ್ ಪಕ್ಷದವರನ್ನು ಕರೆಸಿ ಮಂತ್ರಿಪದವಿಗಳಿಗೆ ಗೊತ್ತುಮಾಡಿದನು. ವ್ಹಿಗ್‌ಪಕ್ಷದ ನಾಯಕರಾದ **ಗ್ರೇ** (Grey) **ಮೆಲ್ಬೂರ್ನ್** (Melbourne) ಶ್ರೀಮಂತರೊಡನೆ ಟೋರಿಪಕ್ಷದಲ್ಲಿ ಧಾರಾಳಮನಸ್ಕರಾಗಿದ್ದವರೂ ಸೇರಿಕೊಂಡರು. ಹೀಗೆ ಮಂತ್ರಿಮಂಡಲಿಯಲ್ಲಿ ಸೇರಿದ ಗ್ರೇ, ಮೆಲ್ಬೂರ್ನ್, ಲಾರ್ಡ್ ಜಾನ್ ರಸ್ಸೆಲ್, ಪಾಮರ್ಸ್ಟನ್ (Palmerston), ಬ್ರೂಹಂ (Brougham), ಗ್ರಾಹಂ (Graham) ಎಲ್ಲರೂ ಅಧಿಕಾರವಹಿಸಿದಕೂಡಲೆ ಪಾರ್ಲಿಮೆಂಟ್ ಸುಧಾರಣೆಗೆ ತೊಡಗಿದರು. ತಡವಾಗಿದ್ದ ಪಕ್ಷದಲ್ಲಿ ರಾಜ್ಯದಲ್ಲಿ ಅನರ್ಥಸಂಭವಿಸುವಂತಿತ್ತು.

## ಪಾರ್ಲಿಮೆಂಟ್ ಸುಧಾರಣೆ

ಪಾರ್ಲಿಮೆಂಟ್ ಸಭೆಗಳ ರಚನೆ ಪೂರ್ವಕಾಲದಲ್ಲಿ ನಡೆದಂತೆಯೇ ಹದಿನೇಳನೆ ಹದಿನೆಂಟನೆ ಶತಮಾನಗಳಲ್ಲಿ ನಡೆಯುತ್ತಿತ್ತು. ವರಣಕ್ಷೇತ್ರಗಳ ಏರ್ಪಾಟಲ್ಲದೆ ಚುನಾವಣೆ ಪದ್ಧತಿಗಳೂ ಓಬಿರಾಯನಕಾಲದವು. ಉದ್ಯೋಗ ಕೈಗಾರಿಕೆಗಳು ಬಲಗೊಂಡು ದೇಶದ ಮುಖವೇ ಬದಲಾಯಿಸಿ ಕಾಡೆಲ್ಲ ಊರಾಗಿ ಜನಬಾಹುಳ್ಯದಲ್ಲಿ ವೈಪರೀತ್ಯಗಳು ತೋರಿಕೊಂಡ ತರುವಾಯವೂ ಆ ಹಳೆ ಪದ್ಧತಿಗಳೇ ಆಚರಣೆಯಲ್ಲಿದ್ದುದು ಅನ್ಯಾಯವಾಗಿತ್ತು. ಶ್ರೀಮಂತ ಸಭೆಯಲ್ಲಾದರೆ ಸ್ಕಾಟ್ಲೆಂಡ್ ಐರ್ಲೆಂಡುಗಳ ಶ್ರೀಮಂತ ಸಮೂಹಗಳಿಂದ ವೃತರಾದವರನ್ನೂ ಮತಾಚಾರ್ಯರೆನಿಸಿದ ಹಲಕೆಲವರನ್ನೂ ಬಿಟ್ಟರೆ ಉಳಿದವರೆಲ್ಲರೂ ವಂಶಪರಂಪರೆಯ ಹಕ್ಕಿನಿಂದ ಸಭಿಕರಾದವರು. ಕಾಮನ್ಸ್ ಸಭೆಯಲ್ಲಿ ವಂಶಪರಂಪರೆಯ ಹಕ್ಕಿಗೆ ಅವಕಾಶವೇ ಇರಲಿಲ್ಲ. ಅಧಿಕಾರ ವಿಚಾರ ಕಂಡಾಗ ಜನರ ಪ್ರತಿನಿಧಿಗಳು ತುಂಬಿದ ಕಾಮನ್ಸ್‌ಸಭೆಗೇ ಹೆಚ್ಚು ಅಧಿಕಾರ ಪ್ರಾಬಲ್ಯಗಳೆಂಬ ಅಂಶ ಸ್ಪಷ್ಟ.

ಜಿಲ್ಲೆಗೂ ಪಟ್ಟಣಕ್ಕೂ ಪ್ರತಿನಿಧಿಗಳಿರತಕ್ಕದ್ದೆಂದು ಹದಿಮೂರು ಹದಿನಾಲ್ಕನೆ ಶತಮಾನಗಳಲ್ಲಿ ನಿರ್ಧರವಾಗಿತ್ತು. ಜಿಲ್ಲೆಗಳು ಸರಿಸಮಾನ ವಿಭಾಗಗಳಲ್ಲ. ಕೆಲವು ಜಿಲ್ಲೆಗಳು ಜನಭರಿತ, ಕೆಲವು ಜಿಲ್ಲೆಗಳು ಅಲ್ಲ. ಹಾಗೆಯೆ ಕೆಲವು ಪಟ್ಟಣಗಳು ಇತರ ಪಟ್ಟಣಗಳಿಗಿಂತ ಎಷ್ಟೋ ದೊಡ್ಡವು. ಜನಸಂಖ್ಯೆಯ ಪ್ರಮಾಣದಂತೆ ಪ್ರತಿನಿಧಿ

ಸಂಖ್ಯೆ ನಿಶ್ಚಿತವಾಗಿದ್ದಿದ್ದರೆ ಸಮಾಧಾನವಾಗಿರುತ್ತಿತ್ತು. ಹಾಗಾಗದೆ ಸ್ಥಲಕ್ಕೆ ಮಾತ್ರಗೊತ್ತಾಗಿದ್ದುದರಿಂದ ಹದಿನೆಂಟನೆ ಶತಮಾನದಲ್ಲೆಲ್ಲ

**ಪ್ರಾತಿನಿಧ್ಯ-ವಿಭಾಗ**

ಜನಬಾಹುಳ್ಯವಿದ್ದ ಜಿಲ್ಲೆಗೂ ಜನಶೂನ್ಯವೆನ್ನಬಹುದಾಗಿದ್ದ ಜಿಲ್ಲೆಗೂ ಒಂದೇ ಗೌರವ. ಹಿಂದಿನಕಾಲದಲ್ಲಿ ಪಟ್ಟಣವೆನಿಸಿಕೊಂಡಿದ್ದ ಸ್ಥಳಗಳಿಗೆಲ್ಲ ಪ್ರಾತಿನಿಧ್ಯದ ಅಧಿಕಾರ; ಹೊಸದಾಗಿ ಹುಟ್ಟಿ ದಿನೇ ದಿನೇ ಬಡಾಯಿಸುತ್ತಿದ್ದ ಬರ್ಮಿಂಘಂ ಮಾಂಚೆಸ್ಟರ್ ಮುಂತಾದ ಕಾರ್ಖಾನೆ ಪಟ್ಟಣಗಳಿಗೆ ಪ್ರತಿನಿಧಿಗಳೇ ಇರಲಿಲ್ಲ.

ಸಭಿಕರ ಸ್ಥಾನನಿಶ್ಚಯ ಅನ್ಯಾಯವಾಗಿತ್ತು. ಚುನಾವಣೆಯ ರೀತಿಯೂ ಹೊಲಸೆನ್ನಿಸಿತ್ತು. ಒಂದೊಂದು ಜಿಲ್ಲೆಗೂ ಒಂದೊಂದು ಪದ್ಧತಿ ಬೆಳೆದುಕೊಂಡಿತ್ತು. ವಾರ್ಷಿಕ ವರಮಾನ £ 2 ಗಳಷ್ಟಿದ್ದ ಭೂಸ್ಥಿತಿವಂತರೆಲ್ಲರೂ ಚುನಾವಣೆಯಲ್ಲಿ ವೋಟುದಾರರೆನಿಸಿದ್ದಾಗ್ಯೂ ವಾಸ್ತವವಾಗಿ ದೊಡ್ಡ ಜಮೀನ್ದಾರರ ಮಾತಿನಂತೆ ಚುನಾವಣೆ ನಡೆಯುತ್ತಿತ್ತು. ಶ್ರೀಮಂತವರ್ಗದವರನೇಕರು ಚುನಾವಣೆ

**ವರಣಪದ್ಧತಿ**

ಗಳಲ್ಲಿ ಪಾಳೆಯಗಾರರ ಹಾಗೆ ತಮ್ಮ ಇಷ್ಟಮಿತ್ರರಿಗೆ ವೋಟುಗಳು ಲಭಿಸುವಂತೆ ನಡೆಸುತ್ತಿದ್ದರು. ಈ ಬಗೆಯ ಯಾಜಮಾನ್ಯವು ಪಟ್ಟಣಪ್ರತಿನಿಧಿಗಳ ಚುನಾವಣೆಗಳಲ್ಲಿ ಅನರ್ಥಕಾರಕವಾಗಿ ನಡೆಯುತ್ತಿತ್ತು. ಪಟ್ಟಣ ಪ್ರತಿನಿಧಿಗಳ ವರಣಪದ್ಧತಿಗಳೂ ಏಕರೀತಿಯಾಗಿರಲಿಲ್ಲ. ಕೆಲವು ಪಟ್ಟಣಗಳಲ್ಲಿ ಅಲ್ಲಿಯ ಪೌರಸಭೆಗಳವರು ಪ್ರತಿನಿಧಿಗಳನ್ನು ಚುನಾಯಿಸುತ್ತಿದ್ದರು. ಪಟ್ಟಣಗಳೆನಿಸಿದ್ದ ಅನೇಕೆಡೆಗಳಲ್ಲಿ ಜನಕ್ಷೀಣತೆಯಿಂದ ವೋಟುದಾರರು ಹಲಕೆಲವರು ಮಾತ್ರರಾಗಿ ಅಲ್ಲಿಯ ಜಮೀನ್ದಾರನ ಅಡಿಯಾಳುಗಳಾಗಿದ್ದರು. ಅನೇಕ ಸ್ಥಳಗಳು ಕ್ಷಯಕ್ಕೆ ಸಿಕ್ಕಿದ ಊರುಗಳಾಗಿ ಕೊಳೆತೂರು ಅಥವಾ ಹಾಳೂರುಗಳೆಂದೂ(Rotten boroughs) ಜಮೀನ್ದಾರರ ವಶದಲ್ಲಿದ್ದುದರಿಂದ ಜೇಬೂರು (Pocket boroughs) ಗಳೆಂದೂ ಹೆಸರುಪಡೆದಿದ್ದವು.

ವಾಲ್ಪೋಲ್ ಪೆಲ್ಹಂ ಮುಂತಾದ ವ್ಹಿಗ್ ಪ್ರಮುಖರು ನೀತಿಭ್ರಷ್ಟ ಚುನಾವಣೆಗಳನ್ನು ನಡೆಸುತ್ತಲಿದ್ದೇ ತಮ್ಮ ದೀರ್ಘಕಾಲದ ಅಧಿಕಾರ ನಡೆಸಿದ್ದರು. ಹಾಗೆ ಪ್ರಬಲಗೊಂಡಿದ್ದ ವ್ಹಿಗ್ಗರನ್ನು ಮೂರನೆ ಜಾರ್ಜ್‌ದೊರೆ ಅವರ ಉಪಾಯಗಳಿಂದಲೇ ಹಾಳುಮಾಡಿದಾಗ ವ್ಹಿಗ್ಗರು ಚುನಾವಣೆಗಳ ನೀತಿ ಸಂಸ್ಕಾರವಾಗಬೇಕೆಂಬ ಕೂಗನ್ನು ಮೊದಲಿಟ್ಟರು. ಕಿರೇಪಿಟ್ಟನು ಬಗೆದಿದ್ದ ತಿದ್ದುಪಡಿಯನ್ನು ಟೋರಿಗಳು ಧ್ವಂಸಗೊಳಿಸಿದರು. ಆ ತರುವಾಯ ಫ್ರಾನ್ಸಿನ ಮಹಾಪಲ್ಲಟ ಘಟಿಸಿ ಅಸಂಬಂಧವಾದ ತತ್ತ್ವಗಳೂ ಆಸೆಗಳೂ ಜನರಲ್ಲಿ ವ್ಯಾಪಿಸಿದವು. ಆದರೆ ಯುದ್ಧ ಮೊದಲಾಗಿ ಬಲಗೊಂಡಾಗ ಟೋರಿಗಳು ಮಾತ್ರರಲ್ಲದೆ ವ್ಹಿಗ್ಗರೂ ಪಾರ್ಲಿಮೆಂಟ್ ಸಂಸ್ಕಾರವೆಂದರೆ

ಕಿವಿಮುಚ್ಚಿಕೊಂಡು ಜನಸಾಮಾನ್ಯರು ಕೂಗಿಡದಂತೆ ದಬ್ಬಾಳಿಕೆಯನ್ನು ವಹಿಸಿ ಕಾಲ ತಳ್ಳಿದರು. ಯುದ್ಧ ಮುಗಿದು ಶಾಂತಿ ನೆಲೆಸಿದ ತರುವಾಯ ಜಮೀನ್ದಾರರೆಲ್ಲರೂ ಈ ವಿಷಯದಲ್ಲಿ ಸ್ವಾರ್ಥಪರರಾಗಿದ್ದರು. ಕಾಯಕಮಾಡಿ ಜೀವಿಸುತ್ತಿದ್ದ ಜನರ ಮುಖಂಡರು ಸುಧಾರಣೆಗಳಾಗಬೇಕೆಂದು ಮೊದಲಿಟ್ಟವರು. ಕಾಬೆಟ್ ಮತ್ತು ಹಂಟ್ ನಡೆಸಿದ ಪ್ರಯತ್ನಗಳನ್ನಾಗಲೆ ಕಂಡೆವು.

1830 ರ ವೇಳೆಗೆ ಮತಭೇದಗಳಿಂದ ಅಧಿಕಾರಪ್ರಾಪ್ತಿಯ ಅನ್ಯಾಯ ನಿಂತಿತು. ಎಲ್ಲ ಮತಸ್ಥರೂ ಸರಿಸಮಾನರಾದರು. ಶ್ರಮಜೀವಿಗಳ ಕೂಗಿನಲ್ಲಿ ನೆಮ್ಮದಿವಂತರು ತಮ್ಮ ಧ್ವನಿಯನ್ನೂ ಸೇರಿಸಿದರು. ಲಂಡನ್ ಬರ್ಮಿಂಘಂ ಮುಂತಾದ ಪಟ್ಟಣಗಳಲ್ಲಿ ಸುಧಾರಕರು ಸಂಘಗಳನ್ನು ಕಟ್ಟಿದರು. ಸಂಘಗಳು ಅಕ್ರಮಕ್ಕೆಡೆಗೊಡದೆ ವರ್ತಿಸಿ ಸುಧಾರಕರನ್ನೊಟ್ಟುಗೂಡಿಸಿದವು. ಹೀಗಿರಲು ಅದೇ ವರ್ಷ ಜುಲೈ ತಿಂಗಳಲ್ಲಿ ಫ್ರಾನ್ಸಿನಲ್ಲಿ ಎರಡನೆಬಾರಿ ಪಲ್ಲಟ ಸಂಭವಿಸಿತು. ಅದರ ಪ್ರಭಾವ ಇಂಗ್ಲಂಡಿನಲ್ಲಿ ಅತಿ ಶೀಘ್ರವಾಗಿ ಕಾಣಿಸಿಕೊಂಡಿತು. ಹೊಸದೊರೆ ಬಂದು ಹೊಸ ಚುನಾವಣೆಗಳನ್ನು ನಡೆಸಿದಾಗ ಟೋರಿಗಳ ಪ್ರಾಬಲ್ಯ ತಗ್ಗಿತು. ಹೊಸ ಪ್ರಧಾನ

**ಗ್ರೇ ಮಸೂದೆ**

**ಗ್ರೇ ಶ್ರೀಮಂತನು** 1831 ರಲ್ಲಿ ಸುಧಾರಣೆ ಮಸೂದೆಯನ್ನು ಕಾಮನ್ಸ್ ಸಭೆಯ ಮುಂದಿಟ್ಟನು. ಎರಡನೆಹಂತವೇರುವುದರಲ್ಲಿ ಆ ಮಸೂದೆ ಹಾಳಾಯಿತು. ಆಗ ಮಂತ್ರಿ ದೊರೆಗೆ ಹೇಳಿ ಹೊಸ ಚುನಾವಣೆ ನಡೆಸಿದನು. ಆ ಹೊಸ ಸಭೆಯಲ್ಲಿ ಮಂತ್ರಿಯಿಟ್ಟ ಸುಧಾರಣೆ ಮಸೂದೆ ಒಪ್ಪಿಗೆಯೇನೋ ಆಯಿತು. ಆದರೆ ಅಲ್ಲಿಂದ ದಾಟಿ ಶ್ರೀಮಂತ ಸಭೆಗೆ ಹೊರಟಾಗ ಶ್ರೀಮಂತರೆಲ್ಲರೂ ವಿರೋಧಿಗಳಾಗಿ ಮಸೂದೆಯನ್ನು ಒಲ್ಲೆವೆಂದು ಹಟಹಿಡಿದರು. ಇದರಿಂದ ಜನರಿಗೆ ಉದ್ರೇಕವಾಗಿ ದಂಗೆಗಳಾಗುವಂತಿತ್ತು; ಬ್ರಿಸ್ಟಲ್ ಪಟ್ಟಣದ ಬಹುಭಾಗಕ್ಕೆ ಜನರು ಬೆಂಕಿಯಿಟ್ಟು ಭಸ್ಮಮಾಡಿಬಿಟ್ಟರು. ಜನರ ಆಕ್ರೋಶವನ್ನು ಕಂಡು ದೊರೆ ಶ್ರೀಮಂತರನ್ನು ಬೆದರಿಸುವುದಕ್ಕೂ ಸಿದ್ಧನಾದನು. 1832ರಲ್ಲಿ

**ಮೊದಲನೆ ಸುಧಾರಣೆ 1832**

ಮಂತ್ರಿಗಳು ಮೂರನೆಸಲ ಸುಧಾರಣೆ ಮಸೂದೆಯನ್ನು ರೂಪಗೊಳಿಸಿ ಕಾಮನ್ಸ್ ಸಭೆಯಿಂದೊಪ್ಪಿಗೆ ಪಡೆದು ಶ್ರೀಮಂತ ಸಭೆಯಲ್ಲಿ ಒಡ್ಡಿದರು. ಅಲ್ಲಿ ಮಸೂದೆ ಗೆಲ್ಲುವುದಕ್ಕೆ ಬೇಕಾದಷ್ಟು ವೋಟುಗಳನ್ನು ಸಿದ್ಧಗೊಳಿಸಲು ಅಷ್ಟುಮಂದಿ ಹೊಸ ಶ್ರೀಮಂತರನ್ನು ಹುಟ್ಟಿಸಿಕೊಳ್ಳುವುದಾಗಿ ದೊರೆ ಹೇಳಿದಾಗ ಶ್ರೀಮಂತರಲ್ಲಿ ಹಳೆಗೂಬೆಗಳಂತಿದ್ದವರೂ ಬೆದರಿ ತಟಸ್ಥರಾಗಿ ಮಸೂದೆಗೆ ವಿಘ್ನವನ್ನೊಡ್ಡದೆ ಇದ್ದುಬಿಟ್ಟರು. ಮೂರನೆ ಮಸೂದೆ ಈ ರೀತಿ ಕಾನೂನಾಯಿತು.

ಈ ಮೊದಲನೆ ಸುಧಾರಣೆಯ ಕಾನೂನಿನ ಅಂಶಗಳನ್ನು ಈ ರೀತಿಯಾಗಿ ವಿಂಗಡಿಸಿಕೊಳ್ಳಬಹುದು.

1. 56 ಹಾಳೂರುಗಳ ಪ್ರಾತಿನಿಧ್ಯ ವಜಾ ಆಯಿತು; ಬೇರೆ 32 ಊರುಗಳಿಗೊಬ್ಬೊಬ್ಬ ಪ್ರತಿನಿಧಿ ಮಾತ್ರ ಇರತಕ್ಕದೆಂದು ಗೊತ್ತಾಯಿತು. ಈ ರೀತಿ ದೊರೆತ ಸಭಿಕರ ಸ್ಥಾನಗಳನ್ನು ಅದುವರೆಗೂ ಪ್ರಾತಿನಿಧ್ಯವಿಲ್ಲದಿದ್ದ ಜನಭರಿತ ಪಟ್ಟಣಗಳಿಗೂ ಜಿಲ್ಲೆಗಳಿಗೂ ಹಂಚಲಾಯಿತು.
2. ಪಟ್ಟಣಿಗರಲ್ಲಿ £10 ನಷ್ಟು ವಾರ್ಷಿಕ ತೆರಿಗೆಯಿರತಕ್ಕ ಮನೆಯವರಿಗೆಲ್ಲರಿಗೂ ವೋಟಿನ ಅಧಿಕಾರ ಪ್ರಾಪ್ತಿಯಾಯಿತು; ಜಿಲ್ಲೆಗಳಲ್ಲಿ ಹಿಂದಿನಿಂದಲೂ ಇದ್ದ £2 ವಾರ್ಷಿಕ ವರಮಾನದ ಭೂಸ್ಥಿತಿವಂತರಲ್ಲದೆ ಗುತ್ತಿಗೆಗೆ ಹೊಲಗಳನ್ನು ಗೊತ್ತು ಮಾಡಿಕೊಂಡಿದ್ದವರಿಗೂ ವೋಟಿನ ಅಧಿಕಾರ ಲಭಿಸಿತು.

ಒಟ್ಟಿನಲ್ಲಿ ವೋಟುದಾರರ ಸಂಖ್ಯೆ ಹಿಂದಿದ್ದುದರ ಮೂರರಷ್ಟಾಯಿತು. ಜಿಲ್ಲೆಗಳಲ್ಲಿಯೂ ಪಟ್ಟಣಗಳಲ್ಲಿಯೂ ವೋಟುದಾರರ ಯೋಗ್ಯತೆ ಸುಮಾರಾಗಿ ಸರಿಸಮಾನವಾಯಿತು. ಕೈಗಾರಿಕೆ ವ್ಯಾಪಾರಗಳಲ್ಲಿ ತೊಡಗಿ ನೆಮ್ಮದಿವಂತರಾಗಿದ್ದ ವರ್ಗದವರಿಗೆ ರಾಜಕೀಯ ಅಧಿಕಾರ ಬಂದಂತೆ ಆಯಿತು; ಆದರೆ ನೆಮ್ಮದಿವಂತರಿಗೆ ಮಾತ್ರ. ಕಷ್ಟಪಟ್ಟು ಜೀವಿಸುತ್ತಿದ್ದ ವರ್ಗದವರಿಗೆ ಯಾವ ಅಧಿಕಾರವೂ ಬರಲಿಲ್ಲ. ಶ್ರೀಮಂತ ಸಭೆಯವರಂತೂ ಭೂಸ್ಥಿತಿವಂತರೇ; ಕಾಮನ್ಸ್ ಸಭೆಯಲ್ಲಿ ಕೈಗಾರಿಕೆ ವ್ಯಾಪಾರಗಳ ಪ್ರವೇಶ ದೊರೆತಾಗ್ಯೂ ಜಮೀನ್ದಾರರ ಪ್ರಾಬಲ್ಯ ತಪ್ಪಲಿಲ್ಲ. ಈ ಕಾನೂನಿನಿಂದ ಜಮೀನ್ದಾರರ ಸರ್ವಾಧಿಕಾರತಪ್ಪಲು ಮೊದಲಾಯಿತು; ಸರ್ವಜನಸ್ವಾಮ್ಯ ನೆಲೆಸಲಿಲ್ಲ.

ಬ್ರಿಟನ್ನಿನ ಚರಿತ್ರೆಯಲ್ಲಿ ಈ ಕಾನೂನಿಗೆ ಮುಖ್ಯಸ್ಥಾನ ಸಲ್ಲುವುದು. 1688 ರ ಪಲ್ಲಟ ವೇಳೆಯಲ್ಲಿ ರಾಜಾಧಿಕಾರ ತಗ್ಗಿದಂತೆ 1832 ರಲ್ಲಿ ಜಮೀನ್ದಾರ ವರ್ಗದ ಅಧಿಕಾರ ತಗ್ಗಿತೆಂದು ಹೇಳಬಹುದು. ಬ್ರಿಟಿಷ್ ಜನರ ಜೀವನದಲ್ಲಿ ಮಹತ್ಪರಿಣಾಮ ತೋರಿಕೊಳ್ಳಲು ಅಥವಾ ರಾಜಕೀಯಾಧಿಕಾರ ಜನಸಾಮಾನ್ಯರಿಗೆ ದೊರಕಲು ಇದೇ ಮೊದಲು. ಆದರೆ ವೋಟಿನ ಅಧಿಕಾರ ದೊರೆತಮಾತ್ರದಿಂದ ದುಃಸ್ಥಿತಿ ತೊಲಗಲಿಲ್ಲ. ದುಃಸ್ಥಿತಿಯನ್ನು ಕೊನೆಗಾಣಿಸುವುದರಲ್ಲಿ ಜನರ ಇಷ್ಟವನ್ನನುಸರಿಸುವ ಮಾರ್ಗಮಾತ್ರ ಸಿದ್ಧವಾಯಿತು. ಜನಸಮುದಾಯದಲ್ಲಿ ಒಂದೆರಡು ವರ್ಗಗಳವರ ಸ್ವಾರ್ಥಕ್ಕೆ ಹಿಂದಿದ್ದ ಅವಕಾಶ ತಪ್ಪಿದ್ದೆಷ್ಟೋ ಅಷ್ಟೆ. ಸಾಮಾನ್ಯ ಜನರ ಸಂಕಟಕ್ಕೆ ನಿವಾರಣೆಯೇನೆಂದು ಯೋಚಿಸಲು ಮೊದಲೆಷ್ಟೋ ಅಷ್ಟೆ.

**ಇತರ ಸುಧಾರಣೆಗಳು**

1832 ರ ನಡೆದ ಪಾರ್ಲಿಮೆಂಟ್ ಸುಧಾರಣೆಯ ಕಾನೂನಿನಿಂದ ಟೋರಿಗೊಡ್ಡುಗಳು ಭೂತ್ಯಾಗಮಾಡಿದಂತೆಯೇ ಆಯಿತು. ತರುಣ ಟೋರಿಗಳಿಗೂ ಸ್ವಲ್ಪಕಾಲ

ಗ್ರಹಣಹಿಡಿದಂತೆಯೆ ಆಯಿತು. ವ್ಹಿಗ್ ಅಥವಾ ರ್‍ಯಾಡಿಕಲ್ ಪಕ್ಷದವರಿಗೆ ಪ್ರಸಿದ್ಧಿಯೂ ಪ್ರಾಬಲ್ಯವೂ ಒದಗಿತು. ಗ್ರೇ ಶ್ರೀಮಂತನು ಪ್ರಧಾನಪದವಿಯಲ್ಲಿ ಭದ್ರಗೊಂಡನು. 1833ರಲ್ಲಿ ಹೊಸಕಾನೂನಿನಂತೆ ರಚಿತವಾದ ಪಾರ್ಲಿಮೆಂಟ್ ಸಭೆಯಲ್ಲಿ ಅನೇಕ ಸುಧಾರಣೆಗಳನ್ನು ನಡೆಸುವ ಸಿದ್ಧತೆಯಿತ್ತು. ನಾಲ್ಕನೆ ಜಾರ್ಜ್ ದೊರೆಯಕಾಲದಲ್ಲಿ ತರುಣ ಟೋರಿಗಳು ಮೊದಲಿಟ್ಟ ಸುಧಾರಣೆಗಳನ್ನೇ ಈಗ ವ್ಹಿಗ್ಗರು ಮುಂದುವರಿಸಿದರು. ಸುಧಾರಣೆಗಳನ್ನು ಬಯಸಿದ ಜನರೂ ಹೆಚ್ಚುತ್ತಿದ್ದರು. ಆರ್ಥಿಕ ವಿಚಾರಗಳಲ್ಲಿಯೂ ರಾಜಕೀಯ ವಿಚಾರಗಳಲ್ಲಿಯೂ ಜನರು ಅಭಿಪ್ರಾಯಗಳನ್ನು ಬೆಳೆಸಿಕೊಂಡಿದ್ದರು. ಅರ್ಥಶಾಸ್ತ್ರಸ್ಥಾಪಕನೆನಿಸಿದ **ಆಡಂಸ್ಮಿತ್** (Adam Smith) ಎಂಬಾತನ ಬೋಧೆಯೂ **ಮಿಲ್** (Mill) ಮತ್ತು **ಬೆಂಥಮ್** (Bentham) ಎಂಬ ತತ್ತ್ವಜ್ಞರ ಅಭಿಪ್ರಾಯಗಳೂ ಪ್ರಚುರವಾಗಿದ್ದವು. ಪ್ರಯೋಜನವೇ ಪ್ರಮಾಣವೆಂದು ಬೆಂಥಮಿನ ಶಿಷ್ಯರು ಹಿಂದಿನ ಆಚಾರಗಳನ್ನೂ ವ್ಯವಸ್ಥೆಗಳನ್ನೂ ಪರೀಕ್ಷಿಸಲು ಮೊದಲಿಟ್ಟಿದ್ದರು. ಪ್ರಧಾನಮಂತ್ರಿ ಗ್ರೇ ಶ್ರೀಮಂತನು 1832ರ ತರುವಾಯ ಬೇಗಬೇಗ ಸುಧಾರಣೆಗಳನ್ನು ವಿಚಾರಪೂರಿತವಾದರೀತಿಯಲ್ಲಿ ನಡೆಸುವ ಉದ್ದೇಶದಿಂದ ಪ್ರತಿವಿಷಯಕ್ಕೂ ವಿಚಾರಕ ಮಂಡಲಿಯನ್ನು ಗೊತ್ತುಮಾಡಿ ಆ ಮಂಡಲಿಯವರದಿಯನ್ನು ಪರಾಮರ್ಶಿಸುವ ವಿಧಾನವನ್ನು ಹೆಚ್ಚುಹೆಚ್ಚಾಗಿ ಅವಲಂಬಿಸಿದನು. ಈರೀತಿಯಾಗಿ ಕಾರ್ಖಾನೆಗಳಲ್ಲಿ ಶ್ರಮಜೀವಿಗಳ ವಿಷಯವಾಗಿಯೂ ಜನಶಿಕ್ಷಣವಿಷಯವಾಗಿಯೂ ಗುಲಾಮತನದ ತ್ಯಾಗವಿಷಯವಾಗಿಯೂ ಸಿರ್ಗತಿಕರ ವಿಷಯವಾಗಿಯೂ ಪೌರಸಭೆಗಳ ವಿಷಯವಾಗಿಯೂ ಕೆಲವು ಸುಧಾರಣೆಗಳು ನಡೆದವು. ಅವುಗಳನ್ನು ಸಂಕ್ಷೇಪವಾಗಿ ಕಾಣಬಹುದು.

ಕಾರ್ಖಾನೆಗಳಲ್ಲಿಯೂ ಗಿರಣಿಗಳಲ್ಲಿಯೂ ಕೂಲಿಗಾರರ ಕಷ್ಟಸಂಕಟಗಳಿಗೆ ಪಾರವೇ ಇಲ್ಲದಿತ್ತು. ಮೂರನೆ ಜಾರ್ಜ್ ದೊರೆಯ ಕಾಲದಲ್ಲಿಯೇ ಕಾರ್ಖಾನೆಗಳು ಬಡಾಯಿಸಿ ವೇಗವೇಗವಾಗಿ ಲಾಭಪಡೆಯುವ ಪೈಪೋಟಿಯಲ್ಲಿ ತೊಡಗಿದ್ದವು. ಆದಷ್ಟು ಕೆಲಸವನ್ನು ಕೂಲಿಗಾರರಿಂದ ತೆಗೆಯುವುದೇ ಉದ್ದೇಶವಾಯಿತು. ಹೆಂಗಸರುಮಕ್ಕಳುಕೂಡ ಬಡತನದ ಬಲವಂತದಿಂದ ಕೆಲಸಕ್ಕೆ ಸೇರಿ ಕಷ್ಟಪಡುತ್ತಿದ್ದರು. ದಿನಕ್ಕೆ 14 ಗಂಟೆ ಕೆಲಸ, ಅಪಾಯಕರವಾದ ಯಂತ್ರಗಳ ಬಳಿ ಅಥವಾ ಗಣಿಗಳಲ್ಲಿ ಕೆಲಸಮಾಡುವುದು, ಅನಾರೋಗ್ಯಕರವಾದ ಸ್ಥಲಗಳಲ್ಲಿ ಹೊತ್ತುಕಳೆವುದು ಇತ್ಯಾದಿಯಾಗಿ ಕೂಲಿಜನರಪಾಡು ಬಹಳ ಕೆಟ್ಟಿತ್ತು. ಇವುಗಳನ್ನು ಸರಿಪಡಿಸುವ ಯೋಚನೆ ಮೊದಲುಮಾಡಿದವನು **ರಾಬರ್ಟ್ ಒವೆನ್** (Robert Owen) ಎಂಬ ಗಿರಣಿ ಮಾಲಿಕನೇ. ಕೂಲಿಯವರಿಗೆ ಸರಿಯಾಗಿ ಸಂಬಳ ಸಲ್ಲಿಸಿ ವಿರಾಮಕ್ಕೂ ಶಿಕ್ಷಣಕ್ಕೂ ಅನುಕೂಲಮಾಡಿಕೊಟ್ಟರೆ ಒಟ್ಟಿನಲ್ಲಿ ಲಾಭವೇ ಆಗುವುದೆಂದು ಆತನು ಪ್ರಯೋಗಮೂಲಕ ಕಾಣಿಸಿಕೊಟ್ಟನು. ಒವೆನ್ ತೋರಿದ ನಿದರ್ಶನವನ್ನು ಕೆಲವರು ಮಾಲಿಕರೇ ಮೆಚ್ಚಿದರು. 1819 ರಲ್ಲಿ ಒಂದು ಕಾನೂನು ಆಯಿತು; ಒಂಭತ್ತು

ವರ್ಷ ದಾಟದ ಮಕ್ಕಳನ್ನು ಹತ್ತಿಗಿರಣಿಗಳಲ್ಲಿ ಕೆಲಸಕ್ಕೆ ಸೇರಿಸಬಾರದೆಂದು ಮಾತ್ರ ನೆರವೇರಿತು. ಇತರ ಅಂಶಗಳಲ್ಲಿ ದುಃಸ್ಥಿತಿಯೇ ಇತ್ತು. 1833 ರಲ್ಲಿ ಹೊಸ ಪಾರ್ಲಿಮೆಂಟ್ ಸಭೆ ಸೇರಿದಬಳಿಕ ಕಾರ್ಖಾನೆಗಳ ಸಂಬಂಧವಾದ ಒಂದು ಶಾಸನವಾಯಿತು. ಒಂಭತ್ತು ವರ್ಷ ಕೂಡ ಇಲ್ಲದ ಮಕ್ಕಳನ್ನು ಕೆಲಸಕ್ಕೆ ಸೇರಿಸಿಕೊಳ್ಳಕೂಡದು, ಒಂಭತ್ತರಿಂದ ಹದಿಮೂರು ವರ್ಷಗಳವರೆಗಿದ್ದ ಮಕ್ಕಳಿಗೆ ದಿನಕ್ಕೆಂಟು ಗಂಟೆಗಿಂತ ಹೆಚ್ಚಾಗಿ ಕೆಲಸವಿಡಕೂಡದು, ಹೆಂಗಸರಿಗೂ ತರುಣರಿಗೂ ಹತ್ತು ಗಂಟೆ ಕಾಲ ಕೆಲಸವೇ ಪರಮಾವಧಿಯಾಗಿರತಕ್ಕುದು ಎಂಬುದು ಆ ಶಾಸನದ ಮುಖ್ಯಾಂಶಗಳು. ಶಾಸನದಂತೆ ಕಾರ್ಖಾನೆಗಳು ನಡೆಯುತ್ತವೋ ಇಲ್ಲವೋ ಎಂದು ಆಗಾಗ್ಗೆ ತನಿಖೆ ನಡೆಸಲು ಸರ್ಕಾರೀ ಹುದ್ದೆದಾರರು ನಿಯಮಿತರಾದುದು ವಿಶೇಷಾಂಶ. ಈ ರೀತಿ ಪ್ರಾರಂಭವಾಗಿ ಕಾರ್ಖಾನೆಶಾಸನಗಳು ಹತ್ತೊಂಭತ್ತನೆಯ ಶತಮಾನದಲ್ಲೆಲ್ಲ ಪದೇ ಪದೇ ರೂಪಗೊಂಡವು.

**ಕಾರ್ಖಾನೆಗಳ ಕಾನೂನು 1833**

ಜನಸಾಮಾನ್ಯರ ಶಿಕ್ಷಣಕ್ಕಾಗಿ ಬ್ರಿಟನ್ನಿನಲ್ಲಿ ಮತಬೋಧಕರಿಂದ ನಡೆಯುತ್ತಿದ್ದ ವ್ಯವಸ್ಥೆಯೇ ಹಿಂದಿನಕಾಲದಲ್ಲಿದ್ದುದು. ಹತ್ತೊಂಭತ್ತನೆ ಶತಮಾನದಲ್ಲಿ ಕೂಲಿನಾಲಿ ಮಾಡಿಕೊಂಡು ಜೀವನವನ್ನು ಸಾಗಿಸುತ್ತಿದ್ದ ಜನರ ದುರವಸ್ಥೆಯನ್ನು ಕಂಡು **ಲಾಂಕಾಸ್ಟರ್** (Lancaster) ಎಂಬ ಕ್ವೇಕರ್ ಪಂಥಿಯೊಬ್ಬಾತನು ಅವರ ಶಿಕ್ಷಣಕ್ಕೆ ಶ್ರಮಪಟ್ಟನು. ಹಿಂದುಸ್ತಾನದಲ್ಲಿ ಹಿಂದಿನಿಂದಲೂ ನಡೆಯುತ್ತಿದ್ದ ಒಂದಾನೊಂದು ಪದ್ಧತಿಯನ್ನು ಆತನು ಅವಲಂಬಿಸಿದನು. ಒಬ್ಬನೇ ಉಪಾಧ್ಯಾಯನು ಅನೇಕ ಬಾಲಕರಿಗೆ ಒಟ್ಟಿಗೆ ಪಾಠಹೇಳಿಸುವ ಪದ್ಧತಿಯನ್ನು ಹಿಂದುಸ್ತಾನದಲ್ಲಿ ಇಂಗ್ಲಿಷರು ಕೆಲವರು ಕಂಡಿದ್ದರು. ಆ ಪದ್ಧತಿಯ ಅನುಸರಣೆಯಿಂದ ಬಡವರ ಮಕ್ಕಳಿಗೆ ಹೆಚ್ಚು ವೆಚ್ಚವಿಲ್ಲದೆ ಅಕ್ಷರಾಭ್ಯಾಸ ನಡೆಸುವುದಾಯಿತು. 1808 ರಲ್ಲಿ ಡಿಸ್ಸೆಂಟರ್ ಪಂಗಡದವರು ಒಂದು ಸಂಘವನ್ನು ಕಟ್ಟಿ ಅಲ್ಲಲ್ಲಿ ಶಾಲೆಗಳನ್ನು ಸ್ಥಾಪಿಸಲು ತೊಡಗಿದರು; 1811 ರಲ್ಲಿ ಆಂಗ್ಲಿಕನ್ ಚರ್ಚಿನ ಭಕ್ತರು ಮತ್ತೊಂದು ಸಂಘವನ್ನು ಸ್ಥಾಪಿಸಿಕೊಂಡರು. ಎರಡು ಸಂಘಗಳ ಪ್ರಯತ್ನದಿಂದ ನಡೆಯುತ್ತಿದ್ದ ಶಾಲೆಗಳಿಗೆ ಸಹಾಯದ್ರವ್ಯವನ್ನು ಸರ್ಕಾರದವರು ಕೊಡತಕ್ಕುದು ಉಚಿತವೆನ್ನಿಸಿತು. 1853 ರಲ್ಲಿ ಪಾರ್ಲಿಮೆಂಟಿನವರು ವರ್ಷಕ್ಕೆ £20,000ಗಳನ್ನು ಸಹಾಯರೂಪವಾಗಿ ಕೊಡತಕ್ಕುದೆಂದು ನಿಷ್ಕರ್ಷೆ ಮಾಡಿದರು. ಸಾಮಾನ್ಯ ಜನಶಿಕ್ಷಣಕ್ಕೆ ಇದು ಮೊದಲನೆ ಹೆಜ್ಜೆಯಾಯಿತು.

**ಜನ ಶಿಕ್ಷಣ**

ಮೂರನೆ ಜಾರ್ಜ್ ದೊರೆಯ ಕಾಲದಲ್ಲಿ ವ್ಹಿಗ್ ನಾಯಕನಾದ ಫಾಕ್ಸ್ ಮತ್ತು ವಿಲ್ಬರ್‌ಫೋರ್ಸ್ ಇಬ್ಬರೂ ಸೇರಿ ಮನುಷ್ಯರನ್ನು ಕೊಂಡುಮಾರುವ ಆಚರಣೆ

ಯನ್ನು ನಿಷೇಧಗೊಳಿಸುವ ಕಾನೂನನ್ನು ಮಾಡಿಸಿದ್ದರು. ಆದರೆ ವೆಸ್ಟಿಂಡೀಸ್ ದ್ವೀಪಗಳಲ್ಲಿ ನೆಲೆಸಿದ್ದವರು ಹೊಸದಾಗಿ ಗುಲಾಮರನ್ನುಕೊಳ್ಳದೆ ಇದ್ದವರನ್ನೇ ಕಾಪಾಡಿಕೊಂಡು ದಾಸ್ಯವನ್ನು ನಡೆಸುತ್ತಲೇ ಇದ್ದರು. 1823ರಲ್ಲಿ ಗುಲಾಮತನವನ್ನು ವಿನಾಶಗೊಳಿಸುವ ಉದ್ದೇಶದಿಂದ ಒಂದು ಸಂಘವು ಹುಟ್ಟಿತ್ತು. ಆ ಸಂಘದ ಪ್ರಚಾರವೂ ತಕ್ಕಮಟ್ಟಿಗೆ ನಡೆದಿತ್ತು. 1833ರಲ್ಲಿ ಪಾರ್ಲಿಮೆಂಟಿನವರು ಬ್ರಿಟಿಷ್ ಸಾಮ್ರಾಜ್ಯದಲ್ಲೆಲ್ಲಿಯೂ ಗುಲಾಮ ವ್ಯಾಪಾರ ನಡೆಯಕೂಡದೆಂದೂ ಗುಲಾಮರೆನಿಸಿದ್ದವರೆಲ್ಲರೂ ಬಿಡುಗಡೆಯಾಗತಕ್ಕದೆಂದೂ ಶಾಸನ ಮಾಡಿದರು. ಗುಲಾಮರನ್ನು ಕಟ್ಟಿಕೊಂಡಿದ್ದವರಿಗೆ ಪರಿಹಾರದ್ರವ್ಯವನ್ನು ಕೊಡಿಸಲಾಯಿತು. ಈ ರೀತಿಯ ಬಲಾತ್ಕಾರದಿಂದ ಗುಲಾಮರು ಬಿಡುಗಡೆ ಹೊಂದಿದರು. ವೆಸ್ಟಿಂಡೀಸ್ ದ್ವೀಪಗಳಲ್ಲಿಯೂ ದಕ್ಷಿಣ ಆಫ್ರಿಕದಲ್ಲಿಯೂ ಈ ತೆರದ ಬಿಡುಗಡೆಯಿಂದ ಮುಂದೆ ಕೆಲವು ತೊಂದರೆಗಳು ತೋರಿಕೊಂಡವು.

**ಗುಲಾಮತನದ ತ್ಯಾಗ 1833**

ಎಲಿಸಬೆತ್ ಕಾಲದಿಂದ ಇಂಗ್ಲಂಡಿನಲ್ಲಿ ಬಡಬಗ್ಗರ ಸಂಬಂಧವಾದ ಏರ್ಪಾಟೊಂದಿತ್ತು. ಪ್ರತಿ ಗ್ರಾಮದಲ್ಲಿಯೂ ಆ ಗ್ರಾಮದ ನಿರ್ಗತಿಕರ ಪೋಷಣೆಗಾಗಿ ನಿವಾಸಿಗಳಿಂದ ಬಡಭಿಕ್ಷೆ (Poor rate) ಎಂಬ ತೆರಿಗೆಯನ್ನೆತ್ತಿ ಅದರಿಂದ ನಿರ್ವಹಿಸುತ್ತಿದ್ದರು. ಯಂತ್ರಯುಗ ತೋರಿಕೊಂಡ ತರುವಾಯ ಕೂಲಿ ಜನರಿಗೆ ಸಂಪಾದನೆ ಸಾಲದಿರಲು ಬಡಭಿಕ್ಷೆಯ ಮೊತ್ತದಿಂದ ಕೊಸರನ್ನು ಕೊಡಿಸುವ ವಿಚಿತ್ರ ಪರಿಹಾರವನ್ನು ನಿಷ್ಕರ್ಷಿಸಿ ಬಡವರ ಆತ್ಮಗೌರವಕ್ಕೆ ಕುಂದಿಟ್ಟರಷ್ಟೆ. ಆ ಬಗೆಯ ಆಚರಣೆಯಲ್ಲಿ ದೃಢಕಾಯರಾದವರು ಎಲ್ಲಿಯಾದರೂ ಕೆಲಸಕ್ಕೆ ಸೇರಲೇಬೇಕಾಗಿತ್ತು; ಅಂಗವಿಕಲರಿಗೆ ಮಾತ್ರ ಅನಾಥಮಂದಿರಗಳಲ್ಲಿ ಸಹಾಯ ದೊರಕುತ್ತಿತ್ತು.

1834ರಲ್ಲಿ ಈ ಶಾಸನ ತಿದ್ದುಪಡಿಯಾಯಿತು. ಗ್ರಾಮ ಅಥವಾ ಪ್ಯಾರಿಷ್ (Parish)ಗಳನ್ನು ಯೂನಿಯನ್ನು(Unions)ಗಳನ್ನಾಗಿ ಗುಂಪುಗೂಡಿಸಿ ಒಂದೊಂದು ಗುಂಪಿಗೂ ಒಂದೊಂದು ವಿಚಾರಕಮಂಡಲಿಯನ್ನೇರ್ಪಡಿಸಿತು. ಈ ವಿಚಾರಕ ಮಂಡಲಿಗಳ ಮೇಲ್ವಿಚಾರಣೆಗಾಗಿ ಕೇಂದ್ರದಲ್ಲಿ ಒಂದು ಸಣ್ಣ ಸಭೆ ರೂಪಗೊಂಡಿತು. ಕೂಲಿಧರಗಳನ್ನು ಹೆಚ್ಚಿಸುವ ತಂಟೆಗೆ ಹೋಗಲಿಲ್ಲ. ಜನರ ಆತ್ಮಗೌರವವನ್ನುಳಿಸಬೇಕೆಂಬ ಉದ್ದೇಶವೇನೋ ಇತ್ತು. ಆದ್ದರಿಂದ ಕೂಲಿ ಸಾಲದ ಅಥವಾ ಸರಿಯಾದ ಕೆಲಸ ದೊರೆಯದ ಜನರನ್ನು ಕಷ್ಟಕೊಟ್ಟೇ ಪೋಷಿಸಬೇಕೆಂಬ ವಕ್ರವಾದವನ್ನನುಸರಿಸಿ ತಿದ್ದುಪಡಿ ಶಾಸನದಲ್ಲಿ (Poor Law Amendment Act 1834) ದೃಢಕಾಯರಾಗಿದ್ದು ಸರ್ಕಾರೀ ಪೋಷಣಾಲಯಗಳಲ್ಲಿ ಸೇರಿಕೊಂಡವರಿಗೆ ಆದಷ್ಟು ಕಷ್ಟ ಕೊಡುವುದನ್ನು ನ್ಯಾಯವೆಂದೆನಿಸಿದರು. ಆ ಪೋಷಣಾಲಯಗಳು (workhouses)

**ನಿರ್ಗತಿಕರ ಕಾನೂನು 1834**

ಸೆರೆಮನೆಗಳಿಗಿಂತ ಕಠೋರವೆನಿಸುವಂತಾಯಿತು. ಪರಿಣಾಮವಾಗಿ ಶ್ರಮಜೀವಿಗಳು ಇತರ ವರ್ಗಗಳವರನ್ನು ದ್ವೇಷಿಸುತ್ತ ತಮ್ಮ ಸಂಗಡಕ್ಕೂ ರಾಜಕೀಯಾಧಿಕಾರ ಪ್ರಾಪ್ತಿಯಾಗುವಂತೆ ಹೆಣಗಾಡಲು ಉದ್ಯಮಿಸಬೇಕಾಯಿತು.

1832ರಲ್ಲಿ ಪ್ರಾತಿನಿಧ್ಯ ಸಂಬಂಧವಾಗಿ ದೊಡ್ಡ ತಿದ್ದುಪಡಿಯಾದಾಗ ಪೌರಸಭೆಗಳ ವ್ಯವಸ್ಥೆಯೂ ತಿದ್ದುಪಡಿಯಾಗಬೇಕಾಯಿತು. ಅದುವರೆಗೂ ಪೌರಸಭೆಗಳ ಸಭಿಕರನ್ನು ಪೌರರಲ್ಲಿ ಹಲಕೆಲವರು ಮಾತ್ರ ಚುನಾಯಿಸುತ್ತಿದ್ದರು; ಪ್ರತಿ ಪುರದಲ್ಲಿಯೂ ಲಂಚಕೋರತನವಿತ್ತು, ಅನೇಕ ನಗರನಿವಾಸಿಗಳಿಗೆ ವೋಟಿನ ಅಧಿಕಾರವಿರಲಿಲ್ಲ. ಇದನ್ನು ಸರಿಪಡಿಸಲು 1835ರಲ್ಲಿ ಲಾರ್ಡ್ ಜಾನ್ ರಸ್ಸೆಲ್ (Lord John Russell) ಎಂಬ ವ್ಹಿಗ್ ಪ್ರಮುಖನು ಒಂದು ಮಸೂದೆಯನ್ನು ಹೊರಡಿಸಿದನು. ಮುನಿಸಿಪಲ್ ಕಾರ್ಪೊರೇಷನ್ಸ್ ಆಕ್ಟ್ (Municipal Corporations Act) ಎಂಬ ಶಾಸನ ಜಾರಿಗೆ ಬಂತು. ಆ ಶಾಸನಕ್ಕನುಸಾರವಾಗಿ ನಗರನಿವಾಸಿಗಳಲ್ಲಿ ತೆರಿಗೆ ಕೊಟ್ಟವರೆಲ್ಲರೂ ವೋಟಿನ ಅಧಿಕಾರ ಪಡೆದು ಪೌರಸಭಿಕರನ್ನು ಮೂರು ವರ್ಷಗಳಿಗೊಮ್ಮೆ ಚುನಾಯಿಸುವಂತಾಯಿತು. ಸಭಿಕರು ಸಿದ್ಧರಾದ ಮೇಲೆ ತಮ್ಮಲ್ಲಿಯೇ ಅಧಿಕಾರಿಗಳನ್ನು ಗೊತ್ತುಮಾಡಿಕೊಳ್ಳಬೇಕಾಯಿತು. ಲೆಕ್ಕಪತ್ರಗಳು ತನಿಖೆಗೊಳಗಾದವು. ಈ ರೀತಿ ಪೌರಸಭೆಗಳೂ ಸುವ್ಯವಸ್ಥೆಯನ್ನು ಪಡೆಯಲು ಮಾರ್ಗವಾಯಿತು. ಪಾರ್ಲಿಮೆಂಟ್ ಸುಧಾರಣೆಯನ್ನು ವ್ಹಿಗ್ಗರು ನಡೆಸಿದರು; ಇತರ ಸುಧಾರಣೆಗಳನ್ನು ವ್ಹಿಗ್ ಮತ್ತು ಟೋರಿ ಎರಡು ಪಕ್ಷಗಳವರೂ ನಡೆಸಿದರು. ಟೋರಿಗೊಡ್ಡುಗಳು ಪ್ರಾಬಲ್ಯ ಕಳೆದುಕೊಂಡರೂ ತರುಣ ಟೋರಿಗಳು ತೇಜಸ್ವಿಗಳಾಗಿಯೇ ಇದ್ದರು. ಆ ತರುಣ ಸಂಗಡಕ್ಕೆ ಮುಖಂಡನಾಗಿದ್ದ **ಸರ್ ರಾಬರ್ಟ್ ಪೀಲ್** 1832 ತರುವಾಯ ಹಳೆ ಟೋರಿಗಳನ್ನು ಬಿಟ್ಟು ತರುಣ ಟೋರಿಗಳನ್ನು ಒಟ್ಟುಗೂಡಿಸಿ ನಿದಾನವಾಗಿ **ಕನ್ಸರ್ವೆಟಿವ್** (Conservative) ಎಂಬ ಹೆಸರನ್ನಿಟ್ಟು **ಪಾರ್ಟಿ** ಕಟ್ಟುತ್ತಿದ್ದನು. 1834ರವೇಳೆಗೆ ಈ ಹೊಸಪಾರ್ಟಿಗೆ ಸ್ವಲ್ಪಬಲಬಂದಿತ್ತು.

**ಪೌರಸಭೆಗಳ ಕಾನೂನು 1835**

1834ರಲ್ಲಿ ಗ್ರೇ ಶ್ರೀಮಂತನು ಮಂತ್ರಿತನದಿಂದ ನಿವೃತ್ತನಾಗಲು **ಮೆಲ್ಬರ್ನ್** ಶ್ರೀಮಂತನು ವ್ಹಿಗ್ಗರ ನಾಯಕನಾಗಿ ಅಧಿಕಾರತೊಡಗಿದನು. ಆ ವರ್ಷ ನಾಲ್ಕನೆ ವಿಲಿಯಂದೊರೆ ವ್ಹಿಗ್ಗರಲ್ಲಿ ಬೇಸರಗೊಂಡು ಆಕಸ್ಮಿಕರೀತಿಯಲ್ಲಿ ಮೆಲ್ಬರ್ನ್ ಶ್ರೀಮಂತನನ್ನು ನಿವೃತ್ತಿಗೊಳಿಸಿ ಪೀಲನಿಗೆ ಅಧಿಕಾರಕೊಟ್ಟನು. ಆ ವೇಳೆಗೆ ಕನ್ಸರ್ವೆಟಿವ್ ಪಾರ್ಟಿಯೆಂಬುದು ವ್ಯವಸ್ಥೆಗೊಂಡಿದ್ದರೂ ಕಾಮನ್ಸ್ ಸಭೆಯಲ್ಲಿ ಸಾಕಾದಷ್ಟು ಪ್ರಾಬಲ್ಯವನ್ನು ಪಡೆದಿರಲಿಲ್ಲ. ಆದ್ದರಿಂದ ಮೆಲ್ಬರ್ನ್ ಶ್ರೀಮಂತನೇ ಅಧಿಕಾರವನ್ನು ವಹಿಸಬೇಕಾಯಿತು.

**ಕನ್ಸರ್ವೆಟಿವ್ ಪಕ್ಷ**

1837ರಲ್ಲಿ ನಾಲ್ಕನೆ ವಿಲಿಯಂ ಸತ್ತಾಗ ಆತನ ತಮ್ಮನ ಮಗಳು **ವಿಕ್ಟೋರಿಯ** ಎಂಬಾಕೆಗೆ ಪಟ್ಟವಾಯಿತು. ರಾಣಿಯಾಗಿ ಹೇಗೆ ವರ್ತಿಸಬೇಕೆಂಬುದನ್ನು ಆಕೆಗೆ

**ಮೆಲ್ಬರ್ನ್**

ಮೆಲ್ಬರ್ನ್ ಶ್ರೀಮಂತನೇ ಹೇಳಿಕೊಟ್ಟವನು. 1839ರವರೆಗೆ ಹಾಗೂ ಹೀಗೂ ಪ್ರಧಾನನಾಗಿದ್ದು ತನ್ನ ಪಕ್ಷಕ್ಕೆ ಬೆಂಬಲತಗ್ಗಿದಾಗ ನಿವೃತ್ತನಾಗಲು ಸಿದ್ಧನಾದನು. ಪ್ರತಿಪಕ್ಷನಾಯಕನಾಗಿದ್ದ ಪೀಲ್ ರಾಣಿಗೊಪ್ಪಲಿಲ್ಲವಾದ್ದರಿಂದ 1841ರವರೆಗೆ ಮೆಲ್ಬರ್ನನೇ ಮಂತ್ರಿಯಾಗಿದ್ದನು. 1841ರಲ್ಲಿ ಕನ್ಸರ್ವೆಟಿವ್ ಪಕ್ಷವೇ ಬಹುಪಕ್ಷವಾಯಿತು. ಆಗ ಪೀಲ್ ಮಂತ್ರಿತನವನ್ನು ವಹಿಸಿದನು.

# ಸಂಧಿ ವಿಗ್ರಹ 1815-1851

## ವಿಯೆನ್ನ ಕಾಂಗ್ರೆಸ್ ವ್ಯವಸ್ಥೆ

ನಪೋಲಿಯನ್ ಸೋತು ಸೆಂಟ್ ಹೆಲೆನದ್ವೀಪದಲ್ಲಿ ಬಂದಿಯಾದಬಳಿಕ ಐರೋಪ್ಯ ಪ್ರಭುಗಳು ವಿಯೆನ್ನ ನಗರದಲ್ಲಿ ಸಂಧಿ ವಿಗ್ರಹ ಸಮ್ಮೇಳನ ಸೇರಿಸಿದರಷ್ಟೆ. ಗ್ರೇಟ್‌ಬ್ರಿಟನ್, ರಷ್ಯ, ಪ್ರಷ್ಯ ಮುತ್ತು ಆಸ್ಟ್ರಿಯ ಪ್ರಭುಗಳೇ ಪ್ರಬಲರಾಗಿದ್ದವರು. ಆ ಸಮ್ಮೇಳನದ ಪರಿಣಾಮವಾಗಿ ನಡೆಸಿದ ಏರ್ಪಾಟುಗಳನ್ನು ಭದ್ರವಾಗಿ ರಕ್ಷಿಸಿಕೊಳ್ಳಲು ಆ ನಾಲ್ಕುರಾಷ್ಟ್ರಗಳವರೂ ಸಿದ್ಧರಾಗಿ 1815ರಲ್ಲಿ **ಕ್ವಾಡ್ರೂಪ್ಲ್ ಅಲಯನ್ಸ್** (Quadruple Alliance) ಎಂಬ ಬಂಧವನ್ನು ಪರಸ್ಪರವಾಗಿ ಕಟ್ಟಿದರು. ವಿಯೆನ್ನ ಕಾಂಗ್ರೆಸ್ಸಿನಲ್ಲಿ ಗೊತ್ತಾದಂತೆ ರಾಜವಂಶಗಳನ್ನೂ ರಾಜ್ಯಗಳ ಎಲ್ಲೆಗಳನ್ನೂ ಇನ್ನು ಇಪ್ಪತ್ತು ವರ್ಷವಾದರೂ ಭದ್ರವಾಗಿರುವಂತೆ ರಕ್ಷಿಸಿಕೊಳ್ಳಬೇಕೆಂಬುದು ಆ ನಾಲ್ವರದೂ ಅಭಿಪ್ರಾಯ. ಯಾವೆಡೆಯಲ್ಲಾದರೂ ತೊಂದರೆತೋರಿಕೊಂಡಾಗ ಪುನಃ ನಾಲ್ವರೂ ಸಭೆಸೇರಿ ಇತ್ಯರ್ಥಮಾಡಿಕೊಳ್ಳಬೇಕೆಂದು ಆಗಲೇ ನಿಶ್ಚಯಿಸಿಕೊಂಡರು. ಯೂರೋಪೆಲ್ಲವನ್ನೂ ಒಂದು ಜಗತ್ತಾಗಿ ಭಾವಿಸಿ ಆ ಜಗತ್ತಿನಲ್ಲಿ ಉಲ್ಬಣಗಳೂ ಪ್ರಲಯಕಾರಕಸಂಭವಗಳೂ ನಡೆಯದಂತೆ ಐರೋಪ್ಯ ಪ್ರಭುಗಳು ಆಗಾಗ್ಗೆ ಸಭೆಸೇರಲು ಇಲ್ಲಿಂದ ಮೊದಲಾಯಿತೆಂದು ಭಾವಿಸಬಹುದು.

ನಾಲ್ವರಲ್ಲಿ ಎಲ್ಲವಿಚಾರಗಳಲ್ಲಿಯೂ ಅನ್ಯೋನ್ಯತೆಯಿದ್ದಿತೆಂದು ಭಾವಿಸಬಾರದು. ಫ್ರಾನ್ಸಿನ ಮಹಾಪಲ್ಲಟದಿಂದ ಜನಿಸಿದ ಕೋಲಾಹಲವನ್ನೆದುರಿಸಿ ನಪೋಲಿಯನ್ನನ ಸರ್ವನಾಶಮಾಡುವುದರಲ್ಲಿ ನಾಲ್ಕನೆ ಮಿತ್ರಮಂಡಲಿಯವರು ಜತೆಗೂಡಿ ಜಯಶಾಲಿಗಳಾದಬಳಿಕ ವಿಯೆನ್ನ ಕಾಂಗ್ರೆಸ್ಸಿನಲ್ಲಿ ತಮಗೆ ತೋರಿದಂತೆ ಪುನರ್ವ್ಯವಸ್ಥೆಗೊಳಿಸಿದರು. ಫ್ರಾನ್ಸ್ ರಾಜ್ಯವನ್ನು ದುರ್ಬಲಗೊಳಿಸಿ ಬೆಲ್ಜಿಯಮ್ಮನ್ನು ಹಾಲಂಡಿಗೆ ಸೇರಿಸಿ, ನಾರ್ವೆಯನ್ನು ಸ್ವೀಡೆನ್ನಿಗೆ ಕೊಟ್ಟು, ಉತ್ತರ ಇಟಲಿಯಲ್ಲಿಯೂ ಮೂವತ್ತೊಂಭತ್ತು

ಜರ್ಮನ್ ಸಂಸ್ಥಾನಗಳ ಕೂಟದಲ್ಲಿಯೂ ಆಸ್ಟ್ರಿಯದ ಪ್ರಭುವಿನ ಯಾಜಮಾನ್ಯವನ್ನು
ಸ್ಥಾಪಿಸಿದ ಏರ್ಪಾಟುಗಳಲ್ಲಿಯೇ ವಿಷವಿಟ್ಟಂತಿತ್ತು. ನೆರೆಹೊರೆರಾಜ್ಯಗಳ ಅಸೂಯೆ
ನಿಲ್ಲಲಾದೀತೆ? ಆ ಅಸೂಯೆಗಿಂತಲೂ ಪ್ರಬಲಪರಿಣಾಮಕಾರಿಯಾದ ಜನಾಭೀಷ್ಟಗಳು
ಹಳೆಕಾಲದ ಕೆಲವರು ಪ್ರಭುಗಳು ಹುಕುಂಕೊಟ್ಟಂತೆ ಇದ್ದಾವೆ? ಫ್ರಾನ್ಸ್ ಮಹಾ
ಪಲ್ಲಟದ ಪ್ರಭಾವ ದೊಡ್ಡದಾಗಿ ನೆಲೆಸಿದುದು ಜನರ ಮನಸ್ಸುಗಳಲ್ಲಿ. ಜನಸಾಮಾನ್ಯ
ರಿಗೆ ತಮ್ಮದೇ ಸರ್ವಬಲವೆಂಬ ಪ್ರಜ್ಞೆ ಆ ಪಲ್ಲಟದ ಪರಿಣಾಮವಾಗಿಯೇ ಉಂಟಾ
ದುದು. ಎಲ್ಲೆಲ್ಲಿಯೂ ಜನರು ತಮ್ಮ ಜನ್ಮಸಿದ್ಧ ಅಧಿಕಾರಗಳಿಗಾಗಿಯೂ ತಮ್ಮ
ರಾಷ್ಟ್ರದ ಆಡಳಿತದಲ್ಲಿ ತಮ್ಮ ಇಷ್ಟಾರ್ಥಪೂರ್ತಿಗಾಗಿಯೂ ಅಂತರಂಗದ ಆಸೆಗಳನ್ನು
ಬಲಪಡಿಸಿಕೊಳ್ಳುತ್ತಿದ್ದರು. ಕ್ರಮಬದ್ಧವಾಗಿ ನಡೆಯುವ ಆಡಳಿತಕ್ಕಾಗಿ ಜನಸಮೂಹ
ಗಳು ತಪಿಸುತ್ತಿದ್ದಾಗ ಹಿಂದಿನಂತೆ ರಾಜಪುರುಷರ ಸ್ವಚ್ಛಂದಪ್ರವೃತ್ತಿಯು ಎಷ್ಟು ಕಾಲ
ನಿರ್ವಿರೋಧವಾಗಿ ನಡೆಯಬಲ್ಲುದು? ಜನಸ್ವಾಮ್ಯಸ್ಥಾಪನೆಯ ಆಸೆಗಳೂ ಸಂಕಲ್ಪ
ಗಳೂ ಬೇರೆಬೇರೆ ರಾಜ್ಯಗಳಲ್ಲಿ ಬೇರೂರುತ್ತಿದ್ದುದಲ್ಲದೆ ವಿಯೆನ್ನ ಕಾಂಗ್ರೆಸ್ಸಿನ
ವ್ಯವಸ್ಥೆಗೆ ಪರಮಕಂಟಕವಾದ ಮತ್ತೊಂದಂಶವೂ ಇತ್ತು.

**ಪರಿಸ್ಥಿತಿ**

ನಪೋಲಿಯನ್ ನಡೆಸಿದ ಯುದ್ಧಕಲ್ಲೋಲದಲ್ಲಿ ಐರೋಪ್ಯ
ಜನಸಮೂಹಗಳು ತಮ್ಮ ಬಾಂಧವ್ಯಗಳೆಲ್ಲೆಂದು ಕಂಡುಕೊಂಡಿ
ದ್ದವು. ರಾಷ್ಟ್ರಬಂಧುತ್ವವೆಂಬುದು ಹೊಸದಾಗಿ ತೋರಿತು. ನಾನಾಕುಲಗಳಿಗೆ
ಸೇರಿದ ಜನಸಮೂಹವು ಜ್ಞಾನಹೀನ ಪಶುಗಳಂತೆ ಯಾವನೋ ಒಬ್ಬ ರಾಜನ ಆಜ್ಞಾ
ಧಾರಕರಾಗಿರುವ ಕಾಲಕಳೆಯುತ್ತಿತ್ತು. ಸಮೂಹಕಟ್ಟಲು ಕುಲವೋ ಭಾಷೆಯೋ
ಆಧಾರವಾದ ಬಂಧುತ್ವ ಬೇಕೆನ್ನಿಸಿತು. ಒಂದೇ ಭಾಷೆಯನ್ನಾಡುವ ಜನರು ಒಂದು
ಸಮೂಹವೆನಿಸಿ ಒಂದು ರಾಷ್ಟ್ರವಾಗಿ ಬಾಳಬೇಕೆಂಬ ಸಂಕಲ್ಪ ತೋರುತ್ತಿತ್ತು.
ನಪೋಲಿಯನ್ನನ ಅಪ್ರತಿಹತರಣಸಾಮರ್ಥ್ಯವನ್ನು ವಾಸ್ತವವಾಗಿ ಭಂಗಗೊಳಿಸಿದ್ದುದು
ಸ್ಪೈನ್ ಜನರ ಮತ್ತು ಜರ್ಮನ್ ಜನರ ದ್ವೇಷರೋಷಗಳು.

ಫ್ರಾನ್ಸ್ ಮಹಾಪಲ್ಲಟದ ಪರಿಣಾಮವಾಗಿಯೂ ನಪೋಲಿಯನ್ನನ ಅದ್ಭುತ
ಲೀಲೆಯ ಪರಿಣಾಮವಾಗಿಯೂ ಯೂರೋಪ್ ಕ್ಷುಬ್ಧವಾಗಿ ಎಲ್ಲ ಜನಸಮೂಹ
ಗಳಲ್ಲಿಯೂ ಅಂತರಂಗದ ಆಸೆಗಳು ಹೊಸದಾಗಿ ರೂಪಗೊಳ್ಳುತ್ತಿದ್ದವು. **ಜನ
ಸ್ವಾಮ್ಯಪ್ರತಿಷ್ಠೆಗೂ**(Democracy) **ಜಾತಿಬದ್ಧರಾಷ್ಟ್ರಸ್ಥಾಪನೆಗೂ** (Nationalism)
ಸಮಯವಾಗಿದ್ದ ಕಾಲದಲ್ಲಿ ರಷ್ಯ ಪ್ರಷ್ಯ ಆಸ್ಟ್ರಿಯಗಳ ನಿರಂಕುಶಪ್ರಭುಗಳು ಹಳೆಯ
ನೀತಿ ರೀತಿಗಳನ್ನೇ ಶಾಶ್ವತಗೊಳಿಸಲು ಸಂಕಲ್ಪತೊಟ್ಟರು. ಈ ಪ್ರಭುಗಳಲ್ಲಿ ಪರಸ್ಪರ
ಅಸೂಯೆಗಳು ಬೇಕಾದಷ್ಟಿದ್ದವು. ವಿಯೆನ್ನ ಕಾಂಗ್ರೆಸ್ ನಡೆಸಿದ ಪ್ರತಿ ಕರಾರಿ
ನಲ್ಲಿಯೂ ಮುಂದೆ ಜಗಳಕ್ಕೆ ಕಾರಣವಾಗತಕ್ಕ ಅಂಶವಿದ್ದೇ ಇತ್ತು. ಸಮುದ್ರ
ಗಳಿಗಾಚೆಯ ಸಾಮ್ರಾಜ್ಯವನ್ನು ಭದ್ರಪಡಿಸಿಕೊಂಡು ಸ್ವಂತರಾಜ್ಯದಲ್ಲಿ ಸಾಂಕುಶ

ಪ್ರಭುತ್ವವನ್ನು ಅನುಭವಿಸುತ್ತಲಿದ್ದ ಬ್ರಿಟಿಷರಿಗೆ ಮುಂದೆ ತೊಂದರೆ ಬೇಡವಾಗಿದ್ದರೂ ಐರೋಪ್ಯಪ್ರಭುಗಳ ನಿರಂಕುಶಾಧಿಕಾರವನ್ನು ಸ್ಥಿರಗೊಳಿಸಿಕೊಡುವ ಸಿದ್ಧತೆಯಿರಲಿಲ್ಲ. ಆದ್ದರಿಂದ ಬ್ರಿಟಿಷರು ಹಿಡಿದ ದಾರಿಯೇ ಬೇರೆ, ರಷ್ಯ, ಆಸ್ಟ್ರಿಯ, ಪ್ರಷ್ಯಗಳ ಪ್ರಭುಗಳು ಅನುಸರಿಸಿದ ಗತಿಯೇ ಬೇರೆ.

ರಷ್ಯದ ಚಕ್ರವರ್ತಿ **ಅಲೆಕ್ಸಾಂಡರ್** ಮನಸ್ಸಿಗೆ ಕ್ವಾಡ್ರೂಪ್ಲ್ ಅಲಯನ್ಸ್ ಮಾತ್ರದಿಂದ ತೃಪ್ತಿಯಾಗಲಿಲ್ಲ. ಕ್ರೈಸ್ತಮತದಲ್ಲಿ ಅತಿಶಯಭಕ್ತಿಯನ್ನಿಟ್ಟುಕೊಂಡಿದ್ದು ದೊರೆಗಳ ಪವಿತ್ರತೆಯನ್ನು ನಂಬಿದ್ದನಾದುದರಿಂದ ರಾಜರೆಲ್ಲರೂ ಅನ್ಯೋನ್ಯ ಪ್ರೀತಿ ವಿಶ್ವಾಸಗಳಿಂದ ವರ್ತಿಸಿ ಪ್ರಜೆಗಳನ್ನು ಮಕ್ಕಳಂತೆ ಕಾಣುತ್ತಿರಬೇಕೆಂಬ ಪೌರಾಣಿಕ ನೀತಿಯನ್ನು ಅನುಸರಿಸಲು ಆತನ ಇಷ್ಟ. ಆಸ್ಟ್ರಿಯದ ಚಕ್ರವರ್ತಿಯನ್ನು ತನ್ನೊಡನೆ ಸೇರಿಸಿಕೊಂಡು **ಪವಿತ್ರಮೈತ್ರಿ** (Holy Alliance) ಎಂಬುದನ್ನು ಕಟ್ಟಿದನು. ಅಲೆಕ್ಸಾಂಡರನು ಸಿರ್ವಂಚನೆಯ ರೀತಿಯಲ್ಲಿ ಕಟ್ಟಿದ ಈ ಮೈತ್ರಿಯನ್ನು ಕಂಡು ಆಸ್ಟ್ರಿಯದ ಪ್ರಸಿದ್ಧ ಸಂಧಿವಿಗ್ರಹಿ **ಮೆಟರ್ನಿಕ್** (Metternich) ಬ್ರಿಟಿಷ್ ಮಂತ್ರಿ **ಕ್ಯಾಸಲ್‌ರೇ** ಇಬ್ಬರೂ ಒಳಗೊಳಗೆ ನಗುತ್ತಿದ್ದರು. ವಾಸ್ತವವಾಗಿ ರಷ್ಯಚಕ್ರವರ್ತಿಯ ಉದ್ದೇಶಗಳೇನೋ ರಹಸ್ಯವಾಗಿರಬೇಕೆಂದು ಇತರರೆಲ್ಲರಿಗೂ ಸಂದೇಹ. ಕ್ವಾಡ್ರೂಪ್ಲ್ ಅಲಯನ್ಸ್ ಎಂಬುದೇ ಯೂರೋಪಿನ ಶಾಂತಿಸಾಧನೆ ಮಾಡುತ್ತಿತ್ತು. ಯುದ್ಧ ಕಳೆದ ಮೂರು ವರ್ಷಗಳ ತರುವಾಯ 1818 ರಲ್ಲಿ ನಾಲ್ವರು ಪ್ರಬಲರೂ ಸೇರಿ ಫ್ರಾನ್ಸನ್ನು ತಮ್ಮ ಕೂಟದಲ್ಲಿ ಸೇರಿಸಿದರು. ಬ್ರಿಟನ್, ಫ್ರಾನ್ಸ್, ಆಸ್ಟ್ರಿಯ, ಪ್ರಷ್ಯ, ರಷ್ಯ—ಐದೂ ಸೇರಿ ಯೂರೋಪಿನ ಯಾಜಮಾನ್ಯ ವಹಿಸಿದಂತಾಯಿತು. ಆದರೆ ಆ ಯಾಜಮಾನ್ಯ ಭದ್ರವಾಗಿ ನಡೆಯುವ ಹಾಗಿರಲಿಲ್ಲ. ಸಣ್ಣ ರಾಷ್ಟ್ರಗಳಿಗೆ ಯಾವ ಅವಕಾಶವೂ ಇಲ್ಲದಿದ್ದುದಲ್ಲದೆ ಐವರಲ್ಲಿಯೇ ಅಸೂಯೆಗಳು. ತಥಾಪಿ ರಷ್ಯ, ಆಸ್ಟ್ರಿಯಾ, ಪ್ರಷ್ಯಗಳ ನಿರಂಕುಶ ಪ್ರಭುಗಳು ಜನರ ಆಸೆಗಳನ್ನೂ ಪ್ರಯತ್ನಗಳನ್ನೂ ಬಲಪ್ರಯೋಗದಿಂದ ದಮನಮಾಡತಕ್ಕುದು ಮಿತ್ರಮಂಡಲಿಯ ಅವಶ್ಯ ಕರ್ತವ್ಯವೆಂದು ಭಾವಿಸಿದ್ದರು.

**ನಿರಂಕುಶ ಪ್ರಭುಗಳ ಕುಂಟುತನ**

ಮಂತ್ರಿ ಕ್ಯಾಸಲ್‌ರೇ 1814 ರಲ್ಲಿ ವಿಯೆನ್ನ ಸಮ್ಮೇಳನದಲ್ಲಿ ಭಾಗಿಯಾಗಿದ್ದನು. ಟೋರಿ ಪಕ್ಷದವನಾಗಿ ಗೊಡ್ಡುಗಳ ಗುಂಪಿನಲ್ಲಿ ಗಣ್ಯನಾಗಿದ್ದಾಗ್ಗೂ ಸಂಧಿವಿಗ್ರಹದಲ್ಲಿ ವಿಪರೀತಗಳಾಗದಂತೆ ವರ್ತಿಸಿ ನಿದಾನಸ್ಥನೆನಿಸಿದನು. ಬೋರ್ಬನ ಪಾರ್ಟ್ ವಂಶಸ್ಥರಿಗೆ ಅವಕಾಶ ಲೇಶವೂ ಇಲ್ಲದಂತೆ ನೆರವೇರಿಸುವುದಕ್ಕೂ ಗೊತ್ತಾದ ಮೇರೆಗಳನ್ನು ರಕ್ಷಿಸಿಕೊಡುವುದಕ್ಕೂ ಕಾಂಗ್ರೆಸ್ ಸಭೆಗಳನ್ನು ಆತನು ಉಪಯೋಗಿಸಿದನು. ಇತರ ವ್ಯಾಜ್ಯಗಳಲ್ಲಾಗಲಿ

**ಕ್ಯಾಸಲ್‌ರೇ ನೀತಿ**

ಜನಸಮೂಹಗಳ ಉದ್ಯಮನಾಶದಲ್ಲಾಗಲಿ ನಿರಂಕುಶಪ್ರಭುಗಳೊಡನೆ ಸಹಕರಿಸಲು ಆತನಿಗಿಷ್ಟವಿರಲಿಲ್ಲ. ಬ್ರಿಟಿಷ್ ಸಹಾಯದಿಂದ ನಿರಂಕುಶಪ್ರಭುಗಳು ತಮ್ಮ ದುರಾಸೆಗಳನ್ನು ಸಾಧಿಸಿಕೊಳ್ಳಲು ಆತನು ಅವಕಾಶ ಕೊಡಲಿಲ್ಲ. 1820ರಲ್ಲಿ ಪಿಯ್ಡ್ಮಂಟ್, ನೇಪಲ್ಸ್, ಸ್ಪೈನ್, ಪೋರ್ಚುಗಲ್ ಕ್ಷೇತ್ರಗಳಲ್ಲಿ ಕ್ರಮಬದ್ಧ ಆಡಳಿತಗಳನ್ನು ನೆಲೆಗೊಳಿಸಲು ಅಲ್ಲಿಯ ಜನರು ಉದ್ಯಮಿಸಿದಾಗ ಕ್ಯಾಸಲ್‌ರೇ ನಿರಂಕುಶ ಪ್ರಭುಗಳೊಂದಿಗೆ ಸೇರಿಕೊಳ್ಳದಾದನು. ಇತರ ದೇಶಗಳ ಒಳಾಡಳಿತದಲ್ಲಿ ಪ್ರವೇಶಿಸುವುದು ತರವಲ್ಲವೆಂದು ಅಭಿಪ್ರಾಯಪಟ್ಟನು. ಹೀಗೆ 1815ರಲ್ಲಿ ನಡೆದ ವ್ಯವಸ್ಥೆಗೆ ಭಂಗಬಾರದಂತೆ ಮಾತ್ರ ಎಚ್ಚರ ವಹಿಸಿ ಇತರ ವಿದ್ಯಮಾನಗಳಲ್ಲಿ ಕ್ಯಾಸಲ್‌ರೇ ತಟಸ್ಥನಾದನು.

1822ರಲ್ಲಿ ಕ್ಯಾಸಲ್‌ರೇ ಆತ್ಮಹತ್ಯಮಾಡಿಕೊಂಡಾಗ **ಕ್ಯಾನಿಂಗ್** ಸಂಧಿವಿಗ್ರಹಕನಾದನು. ಕ್ಯಾನಿಂಗ್ ಟೋರಿಗಳಲ್ಲಿ ತರುಣರ ಗುಂಪಿನವನು. ಕಾಂಗ್ರೆಸ್ಸುಗಳನ್ನು ಸೇರಿಸುತ್ತ ಯೂರೋಪಿನ ಪ್ರಬಲರಾಷ್ಟ್ರಗಳ ಪ್ರಮುಖರು ಸಮಸ್ತ ಯೂರೋಪನ್ನೂ ಶಾಂತಿಯಲ್ಲಿಡುವ ಮಾರ್ಗವನ್ನು ಕ್ಯಾನಿಂಗ್ ಒಪ್ಪಲಿಲ್ಲ. ಸಣ್ಣ ರಾಷ್ಟ್ರಗಳಿಗೆ ಅವಕಾಶವೆಲ್ಲಿಯದು ಎಂದು ಆಕ್ಷೇಪವನ್ನೆತ್ತಿದನು; ಎಂದಾದರೂ ಪ್ರಬಲರಾಷ್ಟ್ರಗಳವರು ಪುಟ್ಟ ರಾಷ್ಟ್ರಗಳ ಒಳಾಡಳಿತದಲ್ಲಿ ಕೈಹಾಕಬೇಕಾಗುವುದೆಂದೂ ಅದು ನ್ಯಾಯವಲ್ಲವೆಂದೂ ಹೇಳಿಬಿಟ್ಟನು. ಬ್ರಿಟಿಷರ ನೀತಿಯನ್ನು ಈ ಬಗೆಯಲ್ಲಿ ಖಂಡಿತವಾಗಿ ಕ್ಯಾನಿಂಗ್ ಹೇಳಲು ಕಾರಣವೊದಗಿತ್ತು.

**ತರುಣ ಟೋರಿ ನಾಯಕ**

ಸ್ಪೈನ್‌ರಾಜ್ಯಕ್ಕೆ ಹಿಂದಿನಿಂದಲೂ ದಕ್ಷಿಣ ಅಮೆರಿಕದಲ್ಲಿ ವಿಸ್ತಾರವಾದ ಭೂಭಾಗಗಳು ಕಾಲೊನಿಗಳೆನಿಸಿದ್ದವಷ್ಟೆ. ಸ್ಪೈನಿನಲ್ಲಿ ನಪೋಲಿಯನ್ನನ ಆಟ ಕಟ್ಟಿಹೋದಾಗ 1812 ರಲ್ಲಿ ಸ್ಪೈನಿನ ಜನರು ಕ್ರಮಬದ್ಧವಾಗಿ ನಡೆಯುವ ಒಂದು ರಾಷ್ಟ್ರಬಂಧವನ್ನು ತಮ್ಮ ದೇಶದ ಆಡಳಿತಕ್ಕಾಗಿ ರಚಿಸಿಕೊಂಡರು. ಅದೇ ವೇಳೆಯಲ್ಲಿ ದಕ್ಷಿಣ ಅಮೆರಿಕದ ಕಾಲೊನಿಗಳವರು ಸ್ವತಂತ್ರರಾಗಲು ಉಜ್ಜುಗಿಸಿದರು. ಯುದ್ಧವೆಲ್ಲ ನಿಂತ ಬಳಿಕ ಸ್ಪೈನಿನಲ್ಲಿ ಹಳೇ ಬೋರ್ಬನ್ ರಾಜರು ಪ್ರತಿಷ್ಠಿತರಾಗಿ ಆ ಕಾಲೊನಿಗಳನ್ನು ವಶಪಡಿಸಿಕೊಳ್ಳುವುದಕ್ಕೆ ಸಿದ್ಧರಾದುದು ಮಾತ್ರವಲ್ಲದೆ ಜನರು ಕಟ್ಟಿದ ಆಡಳಿತದ ಕ್ರಮವನ್ನು ಅಲಕ್ಷ್ಯದಿಂದ ಕಿತ್ತೊಗೆದು ಯಥಾಪೂರ್ವವಾಗಿ ನಿರಂಕುಶ ಪ್ರಭುಗಳಾಗಿರಲು ಯತ್ನಿಸಿದರು.

**ದಕ್ಷಿಣ ಅಮೆರಿಕದ ಕಾಲೊನಿಗಳು**

ದಕ್ಷಿಣ ಅಮೆರಿಕದ ಕಾಲೊನಿಗಳು ಸ್ವತಂತ್ರತೆ ಪಡೆದಾಗ ಬ್ರಿಟಿಷರು ಅವುಗಳೊಡನೆ ವರ್ತಿಸಿ ವ್ಯಾಪಾರದ ಅನುಕೂಲಗಳನ್ನು ದಕ್ಕಿಸಿಕೊಂಡಿದ್ದರು. ಒಂದು

ವೇಳೆ ಕಾಲೊನಿಗಳು ಸ್ಪೈನಿಗೆ ಪುನಃ ಅಧೀನವಾದಲ್ಲಿ ಆ ಅನುಕೂಲಗಳು ಮಾಯ ವಾಗುತ್ತಿದ್ದವು. ಆದ್ದರಿಂದ 1822ರಲ್ಲಿ ಸೇರಿದ **ವೆರೋನ** (Verona) **ಕಾಂಗ್ರೆಸ್ಸಿನಲ್ಲಿ** ಬ್ರಿಟಿಷರ ಪ್ರತಿನಿಧಿಯಾಗಿದ್ದ ವೆಲ್ಲಿಂಗ್ಟನ್ನನು ಸ್ಪೈನಿನ ಒಳಾಡಳಿತದಲ್ಲಿ ಬ್ರಿಟಿಷರು ಪ್ರವೇಶಮಾಡತಕ್ಕವರಲ್ಲವೆಂದು ಹೇಳಿಬಿಟ್ಟನು. ಬ್ರಿಟಿಷರು ಕಾಂಗ್ರೆಸ್ಸನ್ನು ಬಿಟ್ಟು ಹೊರಟಂತೆಯೆ ಆಯಿತು. ಉಳಿದವರು ಸ್ಪೈನಿನಲ್ಲಿ ಜನರ ದಂಗೆಯನ್ನು ಅಡಗಿಸಿ ರಾಜಾಧಿಕಾರವನ್ನು ಸ್ಥಾಪಿಸತಕ್ಕುದೆಂದು ನಿಷ್ಕರ್ಷೆಮಾಡಿ ಫ್ರಾನ್ಸಿನವರಿಗೆ ಸ್ಪೈನನ್ನು ಮುತ್ತುವಂತೆ ಹೇಳಿದರು. ಆಗ ಕ್ಯಾನಿಂಗನು ದಕ್ಷಿಣ ಅಮೆರಿಕದ ಕಾಲೊನಿಗಳ ಸ್ವಾತಂತ್ರ್ಯವನ್ನು ಪ್ರಕಟವಾಗಿ ಗೌರವಿಸಿ "ಫ್ರಾನ್ಸಿಗೆ ಸ್ಪೈನ್ ಅಧೀನವಾಗುವುದೇ ಘಟಿಸಿದರೆ ಕಾಲೊನಿಗಳಿಲ್ಲದ ಸ್ಪೈನ್ ಆಗಲಿ. ಹಳೇ ಜಗತ್ ಯೂರೋಪಿನ ವ್ಯವಸ್ಥೆಗಾಗಿ ಹೊಸ ಜಗತ್ ಅಮೆರಿಕವನ್ನು ತಕ್ಕಡಿಯಲ್ಲೆಸೆದೆ" ಎಂದು ಪಾರ್ಲಿಮೆಂಟಿನಲ್ಲಿ ಹೇಳಿದನು.

ಕ್ಯಾನಿಂಗನ ಸಂಧಾನ

ಅದೇ ವೇಳೆಯಲ್ಲಿ (1823) ಸಂಯುಕ್ತಸಂಸ್ಥಾನಗಳ **ಅಧ್ಯಕ್ಷ ಮನ್ರೋ** (Monroe) "ಉತ್ತರ ಅಮೆರಿಕವಾಗಲಿ ದಕ್ಷಿಣ ಅಮೆರಿಕವಾಗಲಿ ಎಲ್ಲಿಯಾದರೂ ಐರೋಪ್ಯ ರಾಜ್ಯಗಳವರು ಕ್ಷೇತ್ರಸಂಪಾದನೆಗೆ ಯತ್ನಿಸಿದರೆ ಆ ಯತ್ನವನ್ನು ನಾವು ಯುದ್ಧ ಮಾಡಿಯಾದರೂ ಪ್ರತಿಭಟಿಸುತ್ತೇವೆ" ಎಂದು ಪ್ರಕಟನೆಗೊಟ್ಟನು. ಪರಿಣಾಮ ವಾಗಿ ಅಮೆರಿಕಗಳಲ್ಲಿ ಸ್ವತಂತ್ರವಾದ ಕಾಲೊನಿಗಳೆಲ್ಲಕ್ಕೂ ಸಂಯುಕ್ತಸಂಸ್ಥಾನಗಳ ಅಧ್ಯಕ್ಷನು ಸಂರಕ್ಷಕನಾದನು. ಅಮೆರಿಕಗಳಲ್ಲಿ ಹೊಸದಾಗಿ ಕ್ಷೇತ್ರಸಂಪಾದನೆ ಮಾಡಿಕೊಳ್ಳುವ ಆಸೆಯನ್ನು ಐರೋಪ್ಯರೆಲ್ಲರೂ ತ್ಯಜಿಸಬೇಕಾಯಿತು. ಸರ್ವಾಧ್ಯಕ್ಷ ಮನ್ರೋ ಕೊಟ್ಟ ಪ್ರಕಟನೆಯನ್ನು ಕ್ಯಾನಿಂಗ್ ಒಪ್ಪಿಕೊಂಡುದಲ್ಲದೆ ಯೂರೋಪಿನಲ್ಲಿ ಫ್ರಾನ್ಸಿಗಾಗಲಿ ಸ್ಪೈನಿಗಾಗಲಿ ಪ್ರಾಬಲ್ಯಬಾರದಂತೆ ನೆರವೇರಿಸಿ ಕಾಂಗ್ರೆಸ್‌ಮೂಲಕ ನಡೆಯುತ್ತಿದ್ದ ಪಾರುಪತ್ಯವನ್ನು ಕೊನೆಗಾಣಿಸಿದನು. "ಎಲ್ಲರೂ ತಮ್ಮಿಷ್ಟಕ್ಕೆ ತಾವು, ದೇವರು ಎಲ್ಲರಪಾಲಿಗೂ ಉಂಟು" ಎಂದು ಹೇಳಿಬಿಟ್ಟು ನಿರಂಕುಶಪ್ರಭುಗಳ ದಬ್ಬಾಳಿಕೆಯತ್ನಗಳಿಗೆ ದೂರವಾದನು.

ಮನ್ರೋ ಪ್ರಕಟನೆ 1823

## ಮೂಡಣ ಸಮಸ್ಯೆ (Eastern Question)

ಐರೋಪ್ಯದೇಶಗಳಲ್ಲಿ ನಿರಂಕುಶಪ್ರಭುಗಳಿಗೂ ಜನಾಧಿಕಾರಸ್ಥಾಪಕರಿಗೂ ವಿರೋಧ ಬಲಗೊಳ್ಳುತ್ತಿದ್ದಕಾಲದಲ್ಲಿ ಬ್ರಿಟಿಷರ ದೃಷ್ಟಿಯು ಇನ್ನೂ ಪೂರ್ವಕ್ಕೆ ರಷ್ಯ ತುರ್ಕಿಗಳ ಸ್ಥಿತಿಗತಿಗಳಲ್ಲಿ ನೆಲೆಸಿ ಬರಬರುತ್ತ ಯೋಚನೆಗೂ ಸಂಧಾನಪರಂಪರೆಗಳಿಗೂ ಇಟ್ಟುಕೊಂಡಿತು. ಐರೋಪ್ಯರಾಷ್ಟ್ರಗಳಿಗೂ ತುರ್ಕಿಗೂ ಎಂತಹ ಸಂಧಿಸಂಬಂಧ ಗಳಿರಬೇಕೆಂಬುದು ಹತ್ತೊಂಭತ್ತನೆ ಶತಮಾನದಲ್ಲೆಲ್ಲ Eastern Question ಅಥವಾ **ಮೂಡಣ ಸಮಸ್ಯೆ**ಯೆಂಬ ದೊಡ್ಡವಿಚಾರವಾಗಿತ್ತು.

ಹದಿನೆಂಟನೆ ಶತಮಾನದಲ್ಲಿ ತುರ್ಕಿ ಸುಲ್ತಾನನಿಗೆ ಆಫ್ರಿಕಯೂರೋಪ್ ಖಂಡಗಳಲ್ಲಿ ವಿಸ್ತಾರವಾದ ಕ್ಷೇತ್ರಗಳು ಸೇರಿದ್ದವು. ಕಾನ್‌ಸ್ಟಾಂಟಿನೋಪಲ್ ಅಥವಾ ಇಸ್ತಾಂಬೂಲ್ ರಾಜಧಾನಿಯಿಂದ ಸುಲ್ತಾನನು ಬಾಲ್ಕನ್ ಪರ್ಯಾಯದ್ವೀಪದ ಭಾಗಗಳಲ್ಲಿ ತನ್ನ ಅಧಿಕಾರಿಗಳನ್ನಿಟ್ಟು ಆಳುತ್ತಿದ್ದನು. ಆ ಪರ್ಯಾಯದ್ವೀಪದಲ್ಲಿ ಕ್ರೈಸ್ತಮತಸ್ಥರೇ ಬಹುಸಂಖ್ಯಾಕರಾದ ನಿವಾಸಿಗಳಾಗಿದ್ದರು.

**ಬಾಲ್ಕನ್ ಭೂಭಾಗ**

ಅವರಲ್ಲಿ ನಾನಾ ಜಾತಿಗಳೂ ಗುಂಪುಗಳೂ ಇದ್ದಾಗ್ಗೂ ಎಲ್ಲರೂ ಗ್ರೀಕ್‌ಕ್ರೈಸ್ತಮತವನ್ನವಲಂಬಿಸಿದ್ದವರಾದುದರಿಂದ ಆ ಕ್ರೈಸ್ತಶಾಖೆಗೆ ರಕ್ಷಕನಾಗಿದ್ದ ರಷ್ಯ ಚಕ್ರವರ್ತಿಯು ತಾನೇ ಆ ಜನಸಮೂಹಗಳಿಗೆಲ್ಲ ಸಂರಕ್ಷಕನೆಂದೂ ಆಪದ್ಬಾಂಧವನೆಂದೂ ಭಾವಿಸಿ ಪ್ರಚಾರಪಡಿಸಿದ್ದನು. ರಷ್ಯನ್ನರದೂ ಬಾಲ್ಕನ್ನರದೂ ಒಂದೇ ಮತವಾದುದರಿಂದ ಅವರಲ್ಲಿ ಪರಸ್ಪರ ವಿಶ್ವಾಸ ಬೆಳೆದುದು ಸಹಜವಾಗಿತ್ತು. ಏತನ್ಮಧ್ಯೆ ರಷ್ಯ ಚಕ್ರವರ್ತಿಗಳಿಗೆ ಇಸ್ತಾಂಬೂಲ್ ಮೇಲಿನ ಆಸೆಯೂ ಇತ್ತು. ಬಾಲ್ಕನ್ ಜನರ ಸಂರಕ್ಷಣೆಯ ವ್ಯಾಜದಿಂದ ತುರ್ಕಿಯನ್ನು ಸೋಲಿಸಿ ಕಪ್ಪುಸಮುದ್ರದ ಬಾಗಿಲನ್ನು ಸ್ವಾಧೀನಪಡಿಸಿಕೊಳ್ಳುವುದು ಆ ಚಕ್ರವರ್ತಿಗಳ ಉದ್ದೇಶ. ಅದಕ್ಕೆ ಅನುಕೂಲವಾಗಿ ಹತ್ತೊಂಭತ್ತನೆ ಶತಮಾನದಲ್ಲಿ ತುರ್ಕಿ ಸುಲ್ತಾನನು ದುರ್ಬಲನಾಗುತ್ತಿದ್ದನು. ಆತನ ಆಡಳಿತವು ಹದಗೆಟ್ಟಿತ್ತು.

ಬ್ರಿಟಿಷರು ಕಿರೇಪಿಟ್ ಕಾಲದಲ್ಲಿಯೇ ಸುಲ್ತಾನನ ಸ್ನೇಹವನ್ನು ಕಟ್ಟಿದ್ದರು. ಸಿರಿಯ ಕ್ಷೇತ್ರದಲ್ಲಿ ಬ್ರಿಟಿಷರೂ ತುರುಕರೂ ಒಟ್ಟುಗೂಡಿ ನಪೋಲಿಯನ್ನನ್ನು ಎದುರಿಸಿದ್ದರು. ಆ ತರುವಾಯ ತುರ್ಕಿಯ ದೌರ್ಬಲ್ಯವೂ ರಷ್ಯದ ಪ್ರಾಬಲ್ಯವೂ ಹೆಚ್ಚಿದಂತೆಲ್ಲ ಬ್ರಿಟಿಷರಿಗೆ ಬೇರೆ ಯೋಚನೆಯುಂಟಾಗಿತು. 1820ರ ವೇಳೆಗೆ ಹಿಂದುಸ್ಥಾನವೆಲ್ಲವನ್ನೂ ಸಂಪಾದಿಸಿಕೊಂಡು ಬೇರಾವ ಐರೋಪ್ಯರಿಗೂ ಅಲ್ಲಿ ಆಸ್ಪದವಿಲ್ಲದಂತೆ ನೆರವೇರಿಸಿಕೊಂಡಿದ್ದರಷ್ಟೆ. ರಷ್ಯದ ಚಕ್ರವರ್ತಿಗಳು ಇಸ್ತಾಂಬೂಲನ್ನು ಪಡೆದುಬಿಟ್ಟರೆ ಮುಂದಕ್ಕೆ ಹಿಂದುಸ್ತಾನದ ಕಡೆ ಹೊರಟು ತಮ್ಮ ಸಾಮ್ರಾಜ್ಯಕ್ಕೆಲ್ಲಿ ಆಪತ್ತನ್ನೊಡ್ಡಿಯಾರೋ ಎಂಬ ಚಿಂತೆ ಬಲವಾಯಿತು. ಆದ್ದರಿಂದ ತುರ್ಕಿಗೆ ನಷ್ಟವಾದರೆ ತಮಗೆ ನಷ್ಟವಾದಂತೆಯೇ ಭಾವಿಸಬೇಕಾಯಿತು. ಹಿಂದೆ 'ಹಾಲಂಡಿಲ್ಲದೆ ಇಂಗ್ಲಂಡಿಲ್ಲ'ವೆಂಬ ಪಲ್ಲವಿ ಹಿಡಿದಂತೆ ಹತ್ತೊಂಭತ್ತನೆ ಶತಮಾನದಲ್ಲಿ ತುರ್ಕಿಯಿಲ್ಲದೆ ಹಿಂದುಸ್ತಾನ ಸಾಮ್ರಾಜ್ಯವಿಲ್ಲವೆಂಬ ಪಲ್ಲವಿಯನ್ನು ಜಪಿಸಬೇಕಾಯಿತು.

**ತುರ್ಕಿಯ ಮೈತ್ರಿ**

ಅಂತರಂಗದ ಆಸೆಗಳು ಈಬಗೆಯಾಗಿದ್ದಾಗ 1820ರಲ್ಲಿ ಯುನಾನ್ ಅಥವಾ ಗ್ರೀಸ್ ದೇಶದ ಕ್ರೈಸ್ತ ನಿವಾಸಿಗಳು ದಂಗೆಯೆದ್ದರು. ಅವರಿಗೆ ರಷ್ಯದವರ ಪ್ರೋತ್ಸಾಹ

ವಿದ್ದೇ ಇತ್ತು. ಐರೋಪ್ಯದೇಶಗಳ ಜನರಲ್ಲಿ ಗ್ರೀಕರೆಂದರೆ ಕ್ರೈಸ್ತ ಬಂಧುಗಳೆಂಬ ಅನುಕಂಪ ಮಾತ್ರವಲ್ಲದೆ ಪುರಾತನಕಾಲದಲ್ಲಿ ಯೂರೋಪಿಗೆಲ್ಲ ಅಗ್ರೇಸರರಾಗಿ ಅದ್ಭುತವಾದ ನಾಗರಿಕತೆಯನ್ನು ಸ್ಥಾಪಿಸಿಕೊಟ್ಟು ತಮ್ಮೆಲ್ಲರಿಗೂ ಹಿರಿಯರೆನಿಸಿದವರ ಸಂತತಿಯವರೆಂಬ ಮೋಹ ಬೇರೆ. ಗ್ರೀಕರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಸಮಯದಲ್ಲಿ ತಾವೂ ನೆರವಾಗತಕ್ಕದು ಧರ್ಮವೆಂದು ಭಕ್ತಿಯಿಂದ ನಂಬಿದರು.

**ಗ್ರೀಕರ ದಂಗೆ**

ಪೆರಿಕ್ಲೀಸ್ ಸಿಕಂದರ್ ಕಾಲದ ಗ್ರೀಕರಿಗೂ ಹತ್ತೊಂಭತ್ತನೆ ಶತಮಾನದಲ್ಲಿ ಯುನಾನಿಗಳಾಗಿದ್ದವರಿಗೂ ಜಾತಿಯಲ್ಲಾಗಲಿ ಭಾಷೆಯಲ್ಲಾಗಲಿ ಮತದಲ್ಲಾಗಲಿ ಸಂಪ್ರದಾಯಗಳಲ್ಲಾಗಲಿ ಅಜಗಜಾಂತರವೆಂಬುದನ್ನು ತಿಳಿದಿದ್ದರೂ ಬಹು ಮಂದಿ ಐರೋಪ್ಯರು ಅದನ್ನು ಮರೆತವರೇ. ಬ್ರಿಟನ್ನಿನ ವಿದ್ಯಾಲಯಗಳಲ್ಲಿ ಗ್ರೀಕ್ ಸಾಹಿತ್ಯವನ್ನು ಓದುತ್ತಿದ್ದವರಿಗೆ ಗ್ರೀಕರಿಗೆ ಸಹಾಯಮಾಡತಕ್ಕದು ಪುಣ್ಯಕಾರ್ಯವೆಂದು ಕಂಡಿತು. 1824 ರಲ್ಲಿ ಗ್ರೀಕರಿಗೂ ಸುಲ್ತಾನನ ಸೇನೆಗಳಿಗೂ ಹೊಡೆದಾಟ ರೇಗಿದಾಗ ಕೆಲವರು ಇಂಗ್ಲಿಷರು ತಾವಾಗಿಯೇ ಗ್ರೀಕರಿಗೆ ನೆರವಾಗಿ ಯುದ್ಧಕ್ಕೆ ಹೊರಟರು. ಪ್ರಸಿದ್ಧ ಕವಿ **ಲಾರ್ಡ್ ಬೈರನ್** (Lord Byron) ಹಾಗೆ ಹೊರಟು ಗ್ರೀಸ್ ದೇಶದಲ್ಲಿ ಎಲ್ಲಿಯೋ ಮಿಸ್ಸೊಲಾಂಘಿ (Missolonghi) ಎಂಬೆಡೆಯಲ್ಲಿ ಪ್ರಾಣವನ್ನು ಬಿಟ್ಟನು.

ಗ್ರೀಕರು ಸ್ವತಂತ್ರರಾಗುವುದು ಇಷ್ಟವಾಗಿದ್ದರೂ ರಷ್ಯ ಪ್ರಬಲವಾಗುವುದಾಗಲಿ ತುರ್ಕಿ ದುರ್ಬಲವಾಗುವುದಾಗಲಿ ಇಷ್ಟವಿಲ್ಲದಿದ್ದ ಮಂತ್ರಿ ಕ್ಯಾನಿಂಗ್ ಯುದ್ಧದಲ್ಲಿ ಬ್ರಿಟನ್ನನ್ನು ಸೇರಿಸದೆಯೆ ಇದ್ದು ತುರ್ಕಿಗೂ ರಷ್ಯಕ್ಕೂ ಯುದ್ಧ ಕೆರಳದಂತೆ ಸಂಧಾನ ಶೀಲನಾದನು. ಆಸ್ಟ್ರಿಯದ ಪ್ರಭುವಿಗೂ ರಷ್ಯದ ಭಯವಿತ್ತು. ಆದ್ದರಿಂದ ಆ ಪ್ರಭುವಿನೊಡನೆ ಸೇರಿ ಕ್ಯಾನಿಂಗ್ ರಷ್ಯದೊಡನೆ ಸಂಧಾನಕ್ಕೆ ಮೊದಲಿಟ್ಟು ತುರುಕರಿಗೂ ಗ್ರೀಕರಿಗೂ ನಡೆದ ಹೋರಾಟಗಳಲ್ಲಿ ಇತರರು ತಟಸ್ಥರಾಗಿರತಕ್ಕದೆಂದು ಹೇಳಿಸಿದನು. 1825ರಲ್ಲಿ ಸುಲ್ತಾನನ ಸಾಮಂತರಲ್ಲಿ ಶೂರನೂ ಸಮರ್ಥನೂ ಆದ **ಈಜಿಪ್ಟಿನ ಮಹಮ್ಮದಾಲಿ ಪಾಷ** ತನ್ನ ಪ್ರಭುವಿನ ಸಹಾಯಕ್ಕೆಂದು ಒಂದು ಸೈನ್ಯವನ್ನು ತನ್ನ ಮಗ **ಇಬ್ರಾಹೀಮನ** ಕೈಕೆಳಗೆ ಕಳುಹಿಸಿಕೊಟ್ಟನು. ರಷ್ಯ ಚಕ್ರವರ್ತಿ **ಹಿರೇನಿಕೊಲಾಸ್** ಆಗ ಗ್ರೀಕರ ಪಕ್ಷ ಸೇರಿ ಯುದ್ಧಕ್ಕೆ ನಿಲ್ಲುವುದು ನಿಶ್ಚಯವಾಗಿ ಕಂಡಿತು. ಆಗ ಕ್ಯಾನಿಂಗ್ ಸಂಧಾನವನ್ನೇ ನಡೆಸುತ್ತ ಗ್ರೀಕರಿಗೆ ಅವರ ದೇಶದ ಆಡಳಿತವನ್ನು ಬಿಟ್ಟುಕೊಡುವಂತೆ ತುರ್ಕಿ ಸುಲ್ತಾನನನ್ನೊಪ್ಪಿಸೋಣವೆಂದು ರಷ್ಯಕ್ಕೆ ಸೂಚಿಸಿದನು.

ಕ್ಯಾನಿಂಗ್ ಈ ರೀತಿಯಲ್ಲಿ ನಡೆಸಿದ ಸಂಧಾನಗಳು ವ್ಯರ್ಥವಾದವು. ತುರ್ಕಿ ಸೈನ್ಯಗಳು ಯುದ್ಧದಲ್ಲಿ ಜಯ ಪಡೆಯುತ್ತಿದ್ದವು. ಆವೇಳೆಗೆ ಸರಿಯಾಗಿ 1827ರಲ್ಲಿ ಕ್ಯಾನಿಂಗ್ ತೀರಿಕೊಂಡನು. ಮಂತ್ರಿಪದವಿಗೆ ಟೋರಿಗೊಡ್ಡುಗಳ ಮುಖಂಡ

ವೆಲ್ಲಿಂಗ್ಟನ್ ಗೊತ್ತಾದನು. ಆಗ ತುರುಕರನ್ನು ತಡೆಯಲು ಇಂಗ್ಲಿಷ್ ಹಡಗುಪಡೆ ಯೊಂದು ಫ್ರೆಂಚ್ ಮತ್ತು ರಷ್ಯನ್ ಪಡೆಗಳೊಂದಿಗೆ ಸೇರಿ ಕೊಂಡು ಗ್ರೀಸ್‌ಕಡೆಗೆ **ಅಡ್ಮಿರಲ್ ಕೋಡ್ರಿಂಗ್ಟನ್** (Codrington) ಎಂಬ ಬ್ರಿಟಿಷ್ ನೌಕಾಪತಿಯ ನಾಯಕತ್ವದಲ್ಲಿ **ಹೊರಟಿತು.** ಅನಿರೀಕ್ಷಿತರೀತಿಯಲ್ಲಿ **ನಾವರೀನೊ** (Navarino) ಎಂಬೆಡೆಯಲ್ಲಿ **ಈಜಿಪ್ಟ್** ತುರ್ಕಿಗಳ ಸಂಯುಕ್ತ ಜಲಬಲವನ್ನು ಬ್ರಿಟಿಷ್ ಫ್ರೆಂಚ್ ಪಡೆಗಳು ನಾಶ ಮಾಡಿಬಿಟ್ಟವು. ರಷ್ಯದವರು ಕೂಡಲೆ ತುರ್ಕಿಮೇಲೆ ಯುದ್ಧಕ್ಕೆ ಹೊರಟರು. **ಎಡ್ರಿಯನೋಪಲ್** (Adrianople) ಬಳಿಗೆ ರಷ್ಯದ ಸೈನ್ಯಗಳು ನುಗ್ಗಿದಾಗ ತುರ್ಕಿ ಯವರು ಶಾಂತಿಯನ್ನು ಬೇಡಿ ಗ್ರೀಕರಿಗೆ ಸ್ವಾತಂತ್ರ್ಯಕೊಡುವು ದಾಗಿ ಒಪ್ಪಿದರು. ಮೇರೆಗಳನ್ನು ನಿಷ್ಕರ್ಷಿಸಿದ ತರುವಾಯ ಗ್ರೀಸ್ ದೇಶವು ಸ್ವತಂತ್ರ ರಾಜ್ಯವಾಯಿತು. **ಬವೇರಿಯ ರಾಜವಂಶದ ಆಟೊ** (Otto) ಎಂಬಾತನು ಅಲ್ಲಿಗೆ ಅರಸನಾದನು.

**ಯುದ್ಧ**

**ಸ್ವಾತಂತ್ರ್ಯ**

ಯುನಾನಿ ಸ್ವಾತಂತ್ರ್ಯ ಸಿದ್ಧಿಸಿತು. ಆದರೆ ಎಷ್ಟೋ ಸಮಸ್ಯೆಗಳು ಹಾಗೆಯೇ ಉಳಿದವು. ಮೊದಲು ಈಜಿಪ್ಟಿನ ಮಹಮ್ಮದಾಲಿ ಪಾಷ ಕೋಪಗೊಂಡನು. ತಾನು ಮಾಡಿದ ಸಹಾಯಕ್ಕೆ ಏನೂ ಪ್ರತಿಫಲವಿಲ್ಲದೆಹೋಯಿತೆಂದು ತುರ್ಕಿ ಸುಲ್ತಾನನ ಪ್ರಾಂತವಾಗಿದ್ದ ಸಿರಿಯವನ್ನು ಮುತ್ತಿದನು. ಆತನ ಮಗ ಇಬ್ರಾಹೀಂ ಕ್ರೈಸ್ತಪುಣ್ಯ ಭೂಮಿಯನ್ನೂ ಸಿರಿಯವನ್ನೂ ಗೆದ್ದು 1832ರಲ್ಲಿ ಇನ್ನೂ ಉತ್ತರಕ್ಕೆ ಹೊರಟು ತುರ್ಕಿ ಸೈನ್ಯವನ್ನು **ಕೋನಿಯ** (Konieh) ಎಂಬೆಡೆಯಲ್ಲಿ ಕತ್ತರಿಸಿಬಿಟ್ಟನು. ಆಗ **ಸುಲ್ತಾನ** ನಾಗಿದ್ದ **ಮಹಮೂದನು** ರಷ್ಯದ ಸಹಾಯ ಬೇಡಿದನು. 1833ರಲ್ಲಿ ಒಳ್ಳೆ ಸಮಯ ವೆಂದು ರಷ್ಯದವರು ತುರ್ಕಿಯೊಡನೆ **ಉಂಕಿಯೆರ್ ಸ್ಕೆಲೆಸ್ಸಿ** (Unkier Skelessi) ಕರಾರು ನಡೆಸಿ ತಾವು ಕೊಡುವ ಸಹಾಯಕ್ಕೆ ಬದಲಾಗಿ ಕಪ್ಪುಸಮುದ್ರದೊಳಕ್ಕೆ ರಷ್ಯಹೊರತು ಇತರ ರಾಷ್ಟ್ರಗಳ ಯುದ್ಧದಹಡಗುಗಳನ್ನು ಬಿಡಲಾಗದೆಂದು ತುರ್ಕಿಯವರಿಂದ ಬರೆಸಿಕೊಂಡರು. ರಷ್ಯ ಸಹಾಯದಿಂದ ಸುಲ್ತಾನನು ರಾಜಧಾನಿಯನ್ನು ಉಳಿಸಿ ಕೊಂಡು ಮಹಮ್ಮದಾಲಿ ಪಾಷನಿಗೆ ಸಿರಿಯವನ್ನು ಬಿಟ್ಟು ಕೊಟ್ಟು ಗಂಡಾಂತರದಿಂದ ಪಾರಾದನು. ಆದರೆ ತುರ್ಕಿಯ ಆಸ್ಥಾನದಲ್ಲಿ ರಷ್ಯನ್ನರು ಪ್ರಬಲರಾಗುವಂತಾಯಿತು. ತುರ್ಕಿ ಸುಲ್ತಾನನು ರಷ್ಯಚಕ್ರವರ್ತಿಯ ಅಧೀನನಾಗಿ ವರ್ತಿಸಬಹುದಾದುದು ಬ್ರಿಟನ್ನಿನ ಸಾಮ್ರಾಜ್ಯಕ್ಕೆ ಅಭಯದಾಯಕವಾಗಿರಲಿಲ್ಲ.

**ತುರ್ಕಿ, ಈಜಿಪ್ಟ್**

**ರಷ್ಯ ಮೇಲ್ಮೆ**

1830ರಲ್ಲಿ ಬ್ರಿಟನ್ನಿನಲ್ಲಿ ಹೊಸ ರಾಜನೂ ಆತನ ಹಿಂದೆಯೇ ಹೊಸ ಮಂತ್ರಿಗಳೂ ಅಧಿಕಾರಗೊಂಡರು. ಅದುವರೆಗೂ ಸಂಧಿವಿಗ್ರಹವನ್ನು ಹೊತ್ತು ಯುದ್ಧಸಂಭವಿಸ

ದಂತೆ ಪ್ರಯಾಸಪಡುತ್ತಿದ್ದ ವೆಲ್ಲಿಂಗ್ಟನ್ ಶ್ರೀಮಂತನಿಗೆ ಬದಲಾಗಿ ವ್ಹಿಗ್‌ಪಕ್ಷದ ಶ್ರೀಮಂತರಲ್ಲೊಬ್ಬನಾದ **ಪಾಮರ್ಸ್ಟನ್** (Palmerston) ಅನ್ಯರಾಷ್ಟ್ರಗಳೊಡನೆ ಸಂಧಿಸಂಧಾನಗಳನ್ನು ನಡೆಸಲು ಮೊದಲಿಟ್ಟನು. ಕ್ಯಾನಿಂಗ್ ಅನುಸರಿಸಿದ್ದ ತಟಸ್ಥ ನೀತಿಯು ನಿಂತುಹೋಯಿತು. ಪಾಮರ್ಸ್ಟನ್ ಶ್ರೀಮಂತನು ಬ್ರಿಟಿಷರ ಪ್ರಾಬಲ್ಯವನ್ನು ಸರ್ವವಿಧಗಳಲ್ಲಿ ಎತ್ತಿಹಿಡಿಯುವ ಆಸೆಯುಳ್ಳವನು. ಕ್ರಮಬದ್ಧವಾದ ಆಡಳಿತಕ್ಕೋ ಜನಸ್ವಾಮ್ಯಸ್ಥಾಪನೆಗೋ ಎಲ್ಲಿಯಾದರೂ ಉದ್ಯಮ ನಡೆದರೆ ಆ ಸಂದರ್ಭದಲ್ಲಿ ನಿರಂಕುಶಪ್ರವರ್ತಕರ ಶತ್ರುವಾಗಿ ನಡೆದುಕೊಂಡು ಬ್ರಿಟಿಷರಿಗೆ ಜನಾಧಿಪತ್ಯದ ಉದ್ಧಾರಕರೆಂಬ ಕೀರ್ತಿಯನ್ನು ಗಳಿಸತಕ್ಕವನು. ಯುದ್ಧಕ್ಕೆ ಆತುರನಲ್ಲದಿದ್ದರೂ ಯುದ್ಧಸಿದ್ಧತೆಯನ್ನು ಪ್ರದರ್ಶಿಸಿ ಇತರರನ್ನು ಬೆದರಿಸುತ್ತ ತಾನೇ ಮುಂದಾಗಿ ನುಗ್ಗಿ ಸಂಧಾನದಲ್ಲಿ ಸಾಹಸವನ್ನು ತೋರತಕ್ಕವನು. ತೊಂದರೆಯಲ್ಲಿ ಸಿಕ್ಕಿಕೊಳ್ಳುವ ಸನ್ನಿವೇಶವೊದಗಿದ್ದೇ ಆದರೆ ಅನಿರೀಕ್ಷಿತರೀತಿಯ ನೆಪವನ್ನೋ ಬೆದರಿಕೆಯನ್ನೋ ಬೀರಿ ತಪ್ಪಿಸಿಕೊಳ್ಳತಕ್ಕ ಜಾಣ್ಮೆಯುಳ್ಳವನು. 1830ರಿಂದ 1851ರ ವರೆಗೆ ಇಪ್ಪತ್ತು ವರ್ಷಕಾಲ ಬ್ರಿಟಿಷ್ ಸಂಧಿವಿಗ್ರಹನಿರ್ವಾಹದಲ್ಲಿ ಪ್ರಬಲನಾಗಿ ಐರೋಪ್ಯರಾಷ್ಟ್ರಗಳ ಮಧ್ಯೆ ಬ್ರಿಟನ್ನಿಗೆ ಅಗ್ರಮರ್ಯಾದೆಸಲ್ಲುವಂತೆ ನೆರವೇರಿಸಿದನು.

**ಪಾಮರ್ಸ್ಟನ್ನನ ನೀತಿ**

## ಪಾಮರ್ಸ್ಟನ್ನನ ಸಂಧಾನ ಸಾಹಸ

1830ರಲ್ಲಿ ಫ್ರಾನ್ಸಿನಲ್ಲಿ ಪಲ್ಲಟ ಮೊದಲಾಯಿತು. ಪ್ರಳಯಕಾರಕವಾದಂತಹ ಯುದ್ಧಪರಂಪರೆಗಳಲ್ಲಿ ಸಿಕ್ಕಿ ನಷ್ಟಪಟ್ಟಿದ್ದ ಫ್ರೆಂಚರು ವಿಯೆನ್ನ ಕಾಂಗ್ರೆಸ್ಸಿನ ಏರ್ಪಾಟಿಗೆ ತಲೆಬಾಗಿ ಕೆಲಕಾಲ ನಡೆದುಕೊಂಡು ಹಾಗೂಹೀಗೂ ಚೇತರಿಸಿಕೊಂಡರು. ಪರರಾಜರ ಸಹಾಯದಿಂದ ಅಲ್ಲಿಗೆ ದೊರೆಗಳಾದ ಬೋರ್ಬನ್ನರು ಹೆಡ್ಡತನವೊಂದನ್ನೇ ಬೀರಿದರು. ಹಳೆ ಹೆಮ್ಮೆಯನ್ನು ಅವರು ಮರೆಯಲಿಲ್ಲ; ಕಾಲ ಬದಲಾಯಿತೆಂಬುದನ್ನು ತಿಳಿಯಲಿಲ್ಲ, ಹೊಸ ಕಾಲಕ್ಕೆ ತಕ್ಕನೀತಿಯನ್ನು ಕಲಿಯಲಿಲ್ಲ. ಅರಸನೆನಿಸಿದ್ದ **10ನೆ ಚಾರ್ಲ್ಸ್** (Charles X) ರಿನೇಸಾನ್ಸಿಗೂ ಹಿಂದೆ ಇರಬೇಕಾಗಿದ್ದವನು. ಅವನ ರೀತಿ ಅಸಹ್ಯವಾಗಿತ್ತು. ಆದ್ದರಿಂದ 1830ರಲ್ಲಿ ಪ್ಯಾರಿಸ್ ನಗರದಲ್ಲಿ ಜನರು ಒಳಗೊಳಗೆ ಸನ್ನಾಹಮಾಡಿಕೊಂಡು ಜುಲೈ ತಿಂಗಳಲ್ಲಿ ಆ ಚಾರ್ಲ್ಸನನ್ನು ಓಡಿಸಿಬಿಟ್ಟು ಕ್ರಮಬದ್ಧವಾಗಿ ಆಳಲು ಸಿದ್ಧನಾಗಿದ್ದ **ಲೂಯಿ ಫಿಲೀಪ್** (Louis Philippe) ಎಂಬ ಬೋರ್ಬನ್ ಶಾಖೆಯ ರಾಜಪುತ್ರನನ್ನು ದೊರೆತನಕ್ಕೆ ಗೊತ್ತುಮಾಡಿಕೊಂಡರು. ಈ ಘಟನೆಯಲ್ಲಿ ಘೋರಹತ್ಯೆಗಳೂ ನಡೆಯಲಿಲ್ಲ, ಅನಾಯಕತೆಯೂ ರೇಗಲಿಲ್ಲ. ಆದ್ದರಿಂದ ಜುಲೈ ಪಲ್ಲಟವೆಂಬ ಈ ಸಂಗತಿಯು ನೆರೆಹೊರೆದೇಶಗಳ ಜನರಿಗೆ ಆದರ್ಶವಾಗಿ ಕಂಡಿತು.

**ಜುಲೈ ಪಲ್ಲಟ 1830**

ಕೂಡಲೇ ಫ್ರಾನ್ಸಿನ ಉತ್ತರದಲ್ಲಿ ಬೆಲ್ಜಿಯನ್ನರು ದಂಗೆಯೆದ್ದು ಡಚ್ಚರನ್ನೆ ದುರಿಸಿದರು. ವಿಯೆನ್ನ ವ್ಯವಸ್ಥೆಯಲ್ಲಿ ಅವರ ಪ್ರದೇಶ ಹಾಲಂಡಿಗೆ ದತ್ತವಾಗಿತ್ತು. ಬೆಲ್ಜಿಯನ್ನರು ಮತದಲ್ಲಿಯೂ ಭಾಷೆಯಲ್ಲಿಯೂ ಡಚ್ಚರಿಂದ ಭಿನ್ನರಾದವರು; ಫ್ರೆಂಚರಿಗೆ ಸಮೀಪಸ್ಥರು. ದಂಗೆಯೆದ್ದಾಗ ಡಚ್ಚರು ಕ್ವಾಡ್ರೂಪಲ್ ಅಲಯನ್ಸ್ ನೆಚ್ಚಿ ಆ ಮಿತ್ರಮಂಡಲಿಯ ಸಹಾಯವನ್ನು ಕೇಳಿದರು. ಆಗ ರಷ್ಯ ಪ್ರಷ್ಯ ಆಸ್ಟ್ರಿಯಗಳಿಗೆ ಪೋಲಂಡಿನಲ್ಲಿ ನಡೆದ ಪಲ್ಲಟಪ್ರಯತ್ನವನ್ನು ಅಡಗಿಸಿಕೊಳ್ಳುವುದೇ ಸಾಕಾಗಿತ್ತು. ಆದ್ದರಿಂದ ಬ್ರಿಟಿಷರೂ ಫ್ರೆಂಚರೂ ಇತ್ಯರ್ಥಮಾಡಬಹುದಾಗಿದ್ದ ಸಮಯ. ಹೊಸದೊರೆ ಲೂಯಿ ಫಿಲೀಪಿಗೆ ಬೆಲ್ಜಿಯನ್ ಪ್ರದೇಶವನ್ನು ಫ್ರಾನ್ಸಿಗೆ ಸೇರಿಸಿಕೊಳ್ಳುವ ಇಷ್ಟವೂ ಇತ್ತು. ಫ್ರೆಂಚ್ ಸೈನ್ಯಗಳು ಬೆಲ್ಜಿಯಂ ಕಡೆ ಹೊರಟವು. ಆಗ ಪಾಮರ್ಸ್ಟನ್ ಫ್ರೆಂಚರನ್ನು ಬೆದರಿಸಿ ಆ ಸೈನ್ಯಗಳು ಹಿಮ್ಮೆಟ್ಟಬೇಕೆಂದು ಹೇಳಿಸಿದನು. ಆ ಸಮುದ್ರತೀರವು ಫ್ರಾನ್ಸಿಗೆ ಸೇರಬಾರದೆಂದು ಹಳೆಸೂತ್ರ. ರಷ್ಯ ಪ್ರಷ್ಯ ಆಸ್ಟ್ರಿಯಗಳ ಬೆಂಬಲ ಈ ಅಂಶದಲ್ಲುಂಟೆಂದು ಪಾಮರ್ಸ್ಟನ್ನಿಗೆ ಧೈರ್ಯವಿತ್ತು. ಪರಿಣಾಮವಾಗಿ ಬೆಲ್ಜಿಯಂ ಪ್ರತ್ಯೇಕಗೊಂಡು ಸ್ವತಂತ್ರ ರಾಜ್ಯವಾಗಿರತಕ್ಕುದೆಂದು ಬ್ರಿಟನ್ ಫ್ರಾನ್ಸುಗಳೆರಡೂ ಇತ್ಯರ್ಥಮಾಡಿಕೊಂಡವು. ಬ್ರಿಟಿಷ್ ಮತ್ತು ಫ್ರೆಂಚ್ ಸೈನ್ಯಗಳು ಒಟ್ಟುಗೂಡಿ ಡಚ್ಚರನ್ನು ಪರಾಭವಿಸಿದವು. ಬೆಲ್ಜಿಯಂ* ರಾಜ್ಯಕ್ಕೆ **ಸ್ಯಾಕ್ಸ್ ಕೋಬುರ್ಗಿನ ಲಿಯೊಪೋಲ್ಡ್** (Leopold) ಎಂಬ ರಾಜಪುತ್ರನು ರಾಜನಾದನು. ಸ್ವಲ್ಪ ಸಾವಕಾಶವಾಗಿ ಇತರಯುರೋಪ್ಯ ರಾಷ್ಟ್ರಗಳವರು ಈ ಏರ್ಪಾಟನ್ನು ಒಪ್ಪಿಕೊಂಡು ಬೆಲ್ಜಿಯಂ ಸ್ವತಂತ್ರ ರಾಜ್ಯವೆನಿಸಿ ಇತರರ ಜಗಳಗಳಲ್ಲಿ ಸೇರದೆ ತಟಸ್ಥವಾಗಿರತಕ್ಕುದೆಂದೂ ಆ ತಾಟಸ್ಥ್ಯವನ್ನೆಲ್ಲರೂ ನಡೆಸಿಕೊಡತಕ್ಕುದೆಂದೂ ಕರಾರುಗಳನ್ನು ಬರೆಸಿಕೊಟ್ಟರು.

**ಬೆಲ್ಜಿಯನ್ನರ ದಂಗೆ**

**ಪುಟ್ಟರಾಜ್ಯಕ್ಕೆ ಸ್ವಾತಂತ್ರ್ಯ**

ಜುಲೈ ಪಲ್ಲಟದ ಮಹಿಮೆ ಬೆಲ್ಜಿಯನ್ನರಲ್ಲಿ ಕಾಣಿಸಿಕೊಂಡಂತೆ ಸ್ಪೈನ್, ಪೋರ್ಚುಗಲ್ ದೇಶಗಳಲ್ಲಿಯೂ ಕಾಣಿಸಿಕೊಂಡಿತು. ಆ ಎರಡು ರಾಜ್ಯಗಳಲ್ಲಿಯೂ ಒಂದೇ ಬಗೆಯ ಪಟ್ಟದ ಜಗಳ ಮೊದಲಾಯಿತು. ಸ್ಪೈನಿನಲ್ಲಿ **ಇಸಬೆಲ್** (Isabel) ಎಂಬ ರಾಣಿಗೂ ಆಕೆಯ ಕಾಕ **ಡಾನ್ ಕಾರ್ಲೋಸ್** (Don Carlos) ಎಂಬಾತನಿಗೂ ಜಗಳ; ಪೋರ್ಚುಗಲ್ಲಿನಲ್ಲಿ **ಮರಿಯ** (Maria) ಎಂಬ ರಾಣಿಗೂ ಆಕೆಯ ಕಾಕ **ಡಾಮ್ ಮಿಗುಯೆಲ್** (Dom Miguel) ಎಂಬಾತನಿಗೂ ಜಗಳ.

**ಸ್ಪೈನಿನಲ್ಲಿ ರಾಜಕನ್ಯೆ—ಕಾಕಾ**

---

* ಹಿಂದಿನ ನೆದರ್ಲ್ಯಾಂಡ್ಸ್, ಮೊದಲು ಸ್ಪೈನಿಗೆ, ಆ ಮೇಲೆ ಆಸ್ಟ್ರಿಯಕ್ಕೆ, ಆ ಮೇಲೆ ಫ್ರಾನ್ಸಿಗೆ ಸೇರಿದ್ದುದು.

ಕಾಕಂದಿರು ನಿರಂಕುಶ ಪಕ್ಷದವರು, ರಾಣಿಯರು ಕ್ರಮಬದ್ಧ ಸಾಂಕುಶ ಪ್ರಭುತ್ವಪಕ್ಷದವರು. ಇಂತಹ ಸಂದರ್ಭದಲ್ಲಿ ಯಾವುದಾದರೂ ಪಕ್ಷಕ್ಕೆ ಸಹಾಯಮಾಡಿ ಜಯವನ್ನು ಸಾಧಿಸಿಕೊಟ್ಟರೆ ಆ ಪಕ್ಷದವರಿಂದ ವ್ಯಾಪಾರದ ಹಕ್ಕುಗಳನ್ನು ಪಡೆಯಲಾದೀತೆಂಬ ಯೋಚನೆಯೂ ಬ್ರಿಟಿಷ್ ಮಂತ್ರಿಗಿತ್ತು. ಯುರೋಪಿನಲ್ಲಿ ರಷ್ಯ ಪ್ರಷ್ಯ ಆಸ್ಟ್ರಿಯ ಪ್ರಭುಗಳೆಷ್ಟಾದರೂ ನಿರಂಕುಶ ಪ್ರಭುತ್ವದವರು; ಅವರಿಗೆ ಪ್ರತಿಯಾಗಿ ಸಾಂಕುಶ ಪ್ರಭುತ್ವದ ವ್ಯೂಹವೊಂದನ್ನು ಬ್ರಿಟಿಷರ ನೇತೃತ್ವದಲ್ಲಿ ಕಟ್ಟಲೂ ಬಹುದೆಂದು ಪಾಮರ್ಸ್ಟನ್ ಯೋಚಿಸಿದನು. ಇಬ್ಬರು ರಾಣಿಯರಿಗೂ ಬ್ರಿಟಿಷ್ ಬೆಂಬಲವುಂಟೆಂದು ಹೇಳಿ ಆ ಎರಡು ರಾಜ್ಯಗಳಲ್ಲಿಯೂ ಕಾಕಂದಿರನ್ನು ಅಡಗಿಸುವುದಕ್ಕೆ ಸಹಾಯಕೊಡಲು ಸಿದ್ಧನಾದನು. ಇದಕ್ಕಾಗಿ ಪಾಮರ್ಸ್ಟನ್ 1834 ರಲ್ಲಿ ಬ್ರಿಟನ್ ಫ್ರಾನ್ಸ್ ಸ್ಪೈನ್ ಪೋರ್ಚುಗಲ್ ದೇಶಗಳನ್ನು ಸೇರಿಸಿ ಒಂದು ಮಿತ್ರವ್ಯೂಹವನ್ನು ಕಟ್ಟಿದನು (Quadruple Alliance, 1834). ಈ ಮಿತ್ರವ್ಯೂಹಕ್ಕೆ ಯುರೋಪಿನಲ್ಲಿ ಪ್ರಾಬಲ್ಯಬಾರದಿದ್ದರೂ ಪೋರ್ಚುಗಲ್ಲಿನಲ್ಲಿ ರಾಣಿಯ ಪಕ್ಷಕ್ಕೆ ಸುಲಭವಾಗಿಯೇ ಜಯಸಿದ್ಧಿಯಾಯಿತು. ಸ್ಪೈನಿನಲ್ಲಿ ನಿದಾನವಾಯಿತು; ಕಡೆಗೆ ಅಲ್ಲಿಯೂ ರಾಣಿಯ ಪಕ್ಷವೇ ಗೆದ್ದಿತು.

ರಷ್ಯದ ಚಕ್ರವರ್ತಿ ಹಿರೇ ನಿಕೋಲಾಸ್ ನಿರಂಕುಶ ಪ್ರಭುಗಳಲ್ಲಿ ಅಗ್ರೇಸರನಾಗಿದ್ದನು. 1833ರಲ್ಲಿ ತುರ್ಕಿ ಸುಲ್ತಾನನೊಡನೆ ಕರಾರು ನಡೆಸಿ ಕಪ್ಪು ಸಮುದ್ರದಲ್ಲಿ ರಷ್ಯದ ಯುದ್ಧದ ಹಡಗುಗಳು ಮಾತ್ರ ಓಡಾಡುವಂತೆ ನೆರವೇರಿಸಿಕೊಂಡವನು ತನ್ನ ಸ್ವಂತ ರಾಜ್ಯದಲ್ಲಿ ಜನಾಧಿಪತ್ಯಸ್ಥಾಪನೆಯ ಪ್ರಯತ್ನವನ್ನು ಮೊಳಕೆಯಲ್ಲಿಯೇ ಮುರಿಯುತ್ತ ಯೂರಲ್ ಪರ್ವತಶ್ರೇಣಿಗೆ ಮೂಡಲಲ್ಲಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದನು. ಸೈಬೀರಿಯ ಮತ್ತು ತುರುಷ್ಕಸ್ಥಾನ (ಮಧ್ಯ ಏಷ್ಯ) ಗಳು ಆತನ ಅಧಿಕಾರದಲ್ಲಿ ಸೇರಿದವು. ದಿನೇ ದಿನೇ ರಷ್ಯದ ಸಾಮ್ರಾಜ್ಯವೂ ಪ್ರಾಬಲ್ಯವೂ ಭೀಕರವಾಗಿ ಕಾಣುತ್ತಿದ್ದವು.

**ರಷ್ಯದ ಅಭಿವೃದ್ಧಿ**

ಹಿಂದುಸ್ತಾನದಲ್ಲಿ ಇದೇವೇಳೆಯಲ್ಲಿ ಮೊದಲನೆ ಆಫ್‌ಘಾನಯುದ್ಧವು ಕೆರಳಿತು. ತುರ್ಕಿಯಲ್ಲಿಯೂ ಕಪ್ಪುಸಮುದ್ರದಲ್ಲಿಯೂ ರಷ್ಯದವರು ಪ್ರಬಲರಾಗಿದ್ದುದು ಬ್ರಿಟಿಷರಿಗೆ ಪಥ್ಯವಾಗಿರಲಿಲ್ಲ.

ಯುರೋಪೆಲ್ಲವನ್ನೂ ತನ್ನ ದೃಷ್ಟಿಯಲ್ಲಿಟ್ಟುಕೊಂಡು ಬ್ರಿಟನ್ನಿನ ಮೇಲ್ಮೆಯನ್ನೂ ಖ್ಯಾತಿಯನ್ನೂ ಸ್ಥಾಪಿಸಲು ಹೊಂಚುತ್ತಿದ್ದ ಪಾಮರ್ಸ್ಟನ್ನನಿಗೆ 1839ರಲ್ಲಿ ತುರ್ಕಿಯಲ್ಲಿ ಕೈಯಾಡಿಸಲು ಸಮಯದೊರಿತು. ಆ ವರ್ಷ ಈಜಿಪ್ಟಿನ ಮುಹಮ್ಮದಾಲಿ ಪಾಷ ಮತ್ತೆ ಸುಲ್ತಾನನೊಡನೆ ವ್ಯಾಜ್ಯಕ್ಕಿಳಿದನು. ಫ್ರಾನ್ಸಿನ ದೊರೆ ಲೂಯಿಫಿಲೀಪ್ ಆ ಪಾಷನೊಡನೆ ಮೈತ್ರಿಕಟ್ಟಿದ್ದನು. ಆ ಕಾರಣದಿಂದ ಪಾಮರ್ಸ್ಟನ್ ಫ್ರಾನ್ಸನ್ನು ಅಲಕ್ಷ್ಯ

ಮಾಡಿ ಆಸ್ಟ್ರಿಯ ಪ್ರಷ್ಯ ರಷ್ಯಗಳೊಂದಿಗೆ ಒಪ್ಪಂದ ನಡೆಸಿ ಈಜಿಪ್ಟಿನ ಪಾಷನನ್ನು ಸೋಲಿಸಲು ಸನ್ನಾಹಮಾಡಿದನು. ಸಿರಿಯುವನ್ನು ಹಿಡಿದಿದ್ದ ಇಬ್ರಾಹೀಂ ತನಗೆ ವಿರೋಧವಾಗಿ ಬಂದು **ಬೈರೂತ್** (Beyrout) **ಆಕರ್** (Acre) ಪಟ್ಟಣಗಳನ್ನು ಮುತ್ತಿ ಹಿಡಿದ ಬ್ರಿಟಿಷರ ನೌಕಾ ಪಡೆಯ ಎದುರಿನಲ್ಲಿ ಹೆಣಗಾಡಲಾರದೆ ಸಿರಿಯುವನ್ನು ಬಿಟ್ಟು ಈಜಿಪ್ಟಿಗೆ ಹಿಮ್ಮೆಟ್ಟಿದನು. ಬ್ರಿಟಿಷರ ಹಡಗು ಪಡೆಯು **ಅಲೆಕ್ಸಾಂಡ್ರಿಯ** (Alexandria) ಬಳಿಗೆ ಹೊರಟು ಅಲ್ಲಿ ಕಾಣಿಸಿಕೊಂಡಿತು. ಆಗ ಮುಹಮ್ಮದಾಲಿ ಪಾಷ ಸೋಲನ್ನೊಪ್ಪಿಕೊಂಡನು. ಈಜಿಪ್ಟಿಗೆ ಮಾತ್ರ ಆತನು ಅಧಿಪತಿಯಾಗಿರತಕ್ಕುದೆಂದು ಕರಾರಿನಲ್ಲಿ ನಿಷ್ಕರ್ಷೆಯಾಯಿತು. ತುರ್ಕಿಯುಳಿಯಿತು. ಈ ಸಂಬಂಧವಾದ ಸಂಧಾನಗಳು ನಡೆಯುತ್ತಿದ್ದಾಗಲೆ 1841ರಲ್ಲಿ ಪಾಮರ್ಸ್ಟನ್ ಕಪ್ಪುಸಮುದ್ರದಲ್ಲಿ ಯಾವ ಪರದೇಶಿ ಯುದ್ಧದ ಹಡಗುಗಳೂ ಇರಬಾರದೆಂಬುದನ್ನು ಸಾಧಿಸಿ ಆ ಭಾಗದಲ್ಲಿ ರಷ್ಯದ ಪ್ರಾಬಲ್ಯವನ್ನು ಮುರಿದನು. ಡಾರ್ಡನೆಲ್ಸ್ ಮಾರ್ಗದಲ್ಲಿ ತುರ್ಕಿಯ ಯುದ್ಧದ ಹಡಗುಗಳು ಮಾತ್ರವೇ ಇರಬೇಕಾಯಿತು. ಇದರಿಂದ ರಷ್ಯ ಹೊರತು ಎಲ್ಲರಿಗೂ ಸಮಾಧಾನವಾಯಿತು. ರಷ್ಯದವರು ಅಸಮಾಧಾನಗೊಂಡರೂ ಮುಂದೆ ಸಮಯಬರಲೆಂದು ತಟಸ್ಥರಾದರು. 1844ರಲ್ಲಿ ಈಜಿಪ್ಟನ್ನು ಬ್ರಿಟಿಷರಿಗೆ ಬಿಟ್ಟುಕೊಟ್ಟು ಇಸ್ತಾಂಬೂಲನ್ನು ತಾವು ಸಾಧಿಸಿಕೊಳ್ಳುವ ಯೋಚನೆಯನ್ನು ರಷ್ಯದವರು ನಡೆಸಿದರು. ಬ್ರಿಟಿಷರು ಅದಕ್ಕೆ ಅವಕಾಶಕೊಡದಿದ್ದು ತುರ್ಕಿಯನ್ನು ಉಳಿಸಿದರು.

**ಈಜಿಪ್ಟ್ ಪಾಷನ ಜಗಳ**

ಈಜಿಪ್ಟಿನ ಪಾಷನನ್ನು ಅಡಗಿಸಿದ ಸಂದರ್ಭದಲ್ಲಿ ಫ್ರಾನ್ಸಿನ ಲೂಯಿ ಫಿಲೀಪನಿಗೆ ಅಸಮಾಧಾನ ಸಹಜವಾಗಿತೋರಿತು. ಫ್ರಾನ್ಸಿಗೆ ಪ್ರಾಬಲ್ಯವನ್ನು ಸಂಪಾದಿಸಿ ತನ್ನ ದೊರೆತನವನ್ನು ಭದ್ರಗೊಳಿಸಿಕೊಳ್ಳಲು ತವಕಪಡುತ್ತಿದ್ದ ಆ ದೊರೆ ಸ್ಪೈನ್‌ರಾಜ್ಯದಲ್ಲಿ ಸಂದರ್ಭವನ್ನು ಕಂಡುಕೊಂಡನು. ಅಲ್ಲಿ ರಾಣಿಯಾದ ಇಸಬೆಲ್ಲಳಿಗೆ ಮದುವೆಯಾಗಬೇಕಾಗಿತ್ತು. ರಹಸ್ಯ ಸಂಧಾನಗಳನ್ನು ನಡೆಸಿ ತನಗನುಕೂಲನಾದ ವರನನ್ನು ಗೊತ್ತುಮಾಡಿದ್ದಲ್ಲದೆ ಆ ರಾಣಿಯ ತಂಗಿಯನ್ನು ತನ್ನ ಸ್ವಂತ ಮಗನಿಗೆ ತಂದುಕೊಂಡನು (1846). ಇದರಿಂದ ಮುಂದಕ್ಕೆ ಸ್ಪೈನ್ ಫ್ರಾನ್ಸ್‌ರಾಜ್ಯಗಳು ಒಟ್ಟುಗೂಡಲು ದಾರಿಯಾಯಿತು. ಸಂಧಾನಗಳನ್ನು ಗೋಪ್ಯವಾಗಿ ನಡೆಸಿದ ಲೂಯಿ ಫಿಲೀಪನಲ್ಲಿ ಪಾಮರ್ಸ್ಟನ್ ಕುಪಿತನಾದನು. ಫ್ರಾನ್ಸಿಗೂ ಬ್ರಿಟನ್ನಿಗೂ ಮೈತ್ರಿಯು ಒಡೆಯಿತು. ಆದರೆ ರಾಣಿ ಇಸಬೆಲ್ಲಳಿಗೆ ಸಂತಾನವಾದ ಮೇಲೆ ಲೂಯಿ ಫಿಲೀಪನ ಕೊನೆಗಾಲ ಕಂಡಿತು.

**ಲೂಯಿ ಫಿಲೀಪನ ಯುಕ್ತಿ**

ಫ್ರಾನ್ಸಿನಲ್ಲಿ ಆತನ ಆಳಿಕೆಯು ಅಹಿತವಾಗಿಕಾಣುತ್ತ ಬಂತು. ಧನಿಕರಿಗೆ ಮಾತ್ರ ಆಡಳಿತದಲ್ಲಿ ಅಧಿಕಾರವಿತ್ತು; ಇತರರಿಗೆ ಅವಕಾಶವಿರಲಿಲ್ಲ. 1848ರಲ್ಲಿ ಮತ್ತೊಂದು

ಪಲ್ಲಟರೇಗಿತು. ಲೂಯಿಫಿಲೀಪ್ ರಾಜ್ಯಬಿಟ್ಟೋಡಿ ಇಂಗ್ಲಂಡಿನಲ್ಲಿ ಸೇರಿಕೊಂಡನು. ಸರ್ವಸಮತ್ವವಾದಿಗಳು ಸ್ವಲ್ಪಕಾಲಮಾತ್ರ ಪ್ರಬಲರಾಗಿ

**ಫರಾನ್ಸಿ 3ನೇ ಪಲ್ಲಟ**

ವಿನೂತನವಾದ ರಾಷ್ಟ್ರವನ್ನು ರಚಿಸಲುಪ್ರಯತ್ನಿಸಿದರು. ಆ ಪ್ರಯತ್ನ ನಡೆಯದಾಯಿತು. ಕಡೆಗೆ ರಿಪಬ್ಲಿಕ್ ರಾಷ್ಟ್ರ ಸ್ಥಾಪನೆಯಾಯಿತು. ಹಿರೇ ನಪೋಲಿಯನ್ನನ ತಮ್ಮನ ಮಗ **ಲೂಯಿ ನಪೋಲಿಯನ್** (Louis Napoleon) ಅದಕ್ಕೆ ಅಧ್ಯಕ್ಷನಾದನು. ಫ್ರಾನ್ಸ್ ಚರಿತ್ರೆಯಲ್ಲಿ ಇದು ಎರಡನೆ ರಿಪಬ್ಲಿಕ್.

"ಫ್ರಾನ್ಸಿಗೆ ನೆಗಡಿ ಹಿಡಿದರೆ ಯೂರೋಪೆಲ್ಲ ಸೀನುವುದು" ಎಂದು ಹೇಳುವುದುಂಟು. ಪಲ್ಲಟಗಳಿಗೆ ತವರ್ಮನೆ ಫ್ರಾನ್ಸ್. ಪಲ್ಲಟಕಾರಿ ಜನರಿಗೆ ಆದರ್ಶ ಧ್ಯೇಯಗಳನ್ನೂ ಉತ್ಸಾಹ ಪ್ರೋತ್ಸಾಹಗಳನ್ನೂ ದಾನಮಾಡತಕ್ಕದು ಫ್ರಾನ್ಸ್. 1848ರಲ್ಲಿ ಫ್ರಾನ್ಸಿನಲ್ಲಿ ಪಲ್ಲಟ ನಡೆಯಿತೆಂದಕೂಡಲೆ ಇಟಲಿ ಹಂಗರಿಗಳ ಜನರು ಆಸ್ಟ್ರಿಯದ ಪ್ರಭುವಿಗೆದುರಾಗಿ ದಂಗೆಯೆದ್ದರು. ಆಸ್ಟ್ರಿಯದ ಚಕ್ರವರ್ತಿ

**ಪಲ್ಲಟದ ಅಂಟು**

ರಾಜ್ಯತ್ಯಾಗ ಮಾಡಿದನು; ಪ್ರಧಾನಮಂತ್ರಿ ಮೆಟರ್ನಿಕ್ ಪಲಾಯನ ಮಾಡಿದನು. ಜರ್ಮನಿಯಲ್ಲಿಯೂ ಜನರು ದಂಗೆಯೆದ್ದರು. ಎಲ್ಲ ದಂಗೆಗಳೂ ಆಸ್ಟ್ರಿಯ ಪ್ರಭುವಿಗೆ ವಿರುದ್ಧವಾದವುಗಳೇ. ಬ್ರಿಟಿಷ್ ಮಂತ್ರಿ ಪಾಮರ್ಸ್ಟನ್ ಇಟಲಿಯ ಜನರಲ್ಲಿ ಮಾತ್ರ ಅನುಕಂಪ ತೋರಿದನು. ಪರಿಣಾಮದಲ್ಲಿ ಆಸ್ಟ್ರಿಯದ ಪ್ರಭುಗಳು ದಂಗೆಗಳನ್ನು ಅಡಗಿಸಿಕೊಂಡರು. ಇಟಲಿಯ ಜನರೂ ಜರ್ಮನ್ ಜಾತಿಯ ಜನರೂ ಪರತಂತ್ರದಲ್ಲಿಯೇ ಇರಬೇಕಾಯಿತು.

ಪಾಮರ್ಸ್ಟನ್ ಮಂತ್ರಿ 1850ರಲ್ಲಿ ಅಲ್ಪ ವಿಷಯವೊಂದನ್ನು ಕಟ್ಟಿಕೊಂಡು ಬಹಾದುರೀ ರೀತಿಯಲ್ಲಿ ವರ್ತಿಸಿಬಿಟ್ಟನು. **ಡಾನ್ ಪಸಿಫಿಕೋ** (Don Pacifico) ಎಂಬಾತನು ಅಥೆನ್ಸ್ ಪಟ್ಟಣದ ಒಂದು ದೊಂಬಿಯಲ್ಲಿ ನಷ್ಟಪಟ್ಟು ತಾನು ಬ್ರಿಟಿಷ್ ಪ್ರಜೆಯೆಂದೂ ತನಗೆ ತಕ್ಕಷ್ಟು ಪರಿಹಾರವನ್ನು ಗ್ರೀಕರಿಂದ ಕೊಡಿಸಬೇಕೆಂದೂ ಈ ಮಂತ್ರಿಯನ್ನು ಆಶ್ರಯಿಸಿದನು. ಆಗ ಪಾಮರ್ಸ್ಟನ್

**ಸ್ವೇಚ್ಛಾಪ್ರವೃತ್ತಿ**

ಗ್ರೀಕರನ್ನು ಗದರಿಸಿ ಬೆದರಿಸಿ ಅಥೆನ್ಸ್ ಬಳಿಗೆ ಯುದ್ಧದ ಹಡಗುಗಳನ್ನು ಅಟ್ಟಿದನು. ಈ ನಿರಂಕುಶ ಪ್ರವರ್ತನೆಯನ್ನು ಕುರಿತು ಪಾರ್ಲಿಮೆಂಟಿನಲ್ಲಿಯೇ ಗದ್ದಲವೆದ್ದಿತು. ಜಾಣತನದ ಬಿರುಸಿನಿಂದ ತಾನು ನಡೆಸಿದ್ದು ನ್ಯಾಯವೆಂದು ಪಾಮರ್ಸ್ಟನ್ ಸಾಧಿಸಿಕೊಂಡನು. ಆದರೆ ಯಾರಿಗೂ ಹೇಳದೆ ಕೇಳದೆ ಮನಬಂದಂತೆ ವರ್ತಿಸತಕ್ಕವನೆಂಬುದು ಎಲ್ಲರಿಗೂ ದೃಢವಾಯಿತು. ವಿಕ್ಟೋರಿಯರಾಣಿ ಅಸಮಾಧಾನ ತೋರಿ ಇನ್ನುಮುಂದೆ ಮಾಡುವ ಕೆಲಸಗಳನ್ನು ತನ್ನಲ್ಲಿ ಹೇಳಬೇಕೆಂದು ಗೊತ್ತುಮಾಡಿದಳು. ಆದರೇನು!

ಪಾಮರ್ಸ್ಟನ್ನನ ಬಹಾದುರಿ ಚಾಳಿ ಸಿಲ್ಲಲಿಲ್ಲ. 1851 ರಲ್ಲಿ ಲೂಯಿ ನಪೋಲಿಯನ್ ತನ್ನ ಸೋದರಮಾವನನ್ನು ಅನುಕರಿಸುತ್ತ ಜೀವಾವಧಿ ಅಧ್ಯಕ್ಷ ಪದವಿಯನ್ನು ಉಪಾಯದಿಂದ ಸಾಧಿಸಿಕೊಂಡಾಗ ಈ ಪಾಮರ್ಸ್ಟನ್ ಯಾರಿಗೂ ತಿಳಿಸದೆ ತಾನೇ ಮೆಚ್ಚುಗೆ ಸಂದೇಶವನ್ನು ಕೊಟ್ಟು ಕಳುಹಿಸಿದನು. ಆಗ ರಾಣಿ ಕೋಪ

**ಪಾಮರ್ಸ್ಟನ್ನನ ನಿವೃತ್ತಿ**

ಗೊಂಡು ಪಾಮರ್ಸ್ಟನ್ನನ್ನು ನಿವೃತ್ತಿ ಮಾಡಿಸಿದಳು. 1855 ರವರೆಗೆ ಅಧಿಕಾರವಿಲ್ಲದೆ ಕಾಲಕಳೆದು ಆ ವರ್ಷ ಪ್ರಧಾನಮಂತ್ರಿಯಾಗಿ ಹತ್ತು ವರ್ಷಕಾಲ ಅವಿಚ್ಛಿನ್ನವಾಗಿ ಆಡಳಿತವನ್ನು ನಡೆಸಿದನು. ಆಗ ನಡೆದ ಸಂಗತಿಗಳನ್ನು ಮುಂದೆ ಕಾಣಬಹುದು.

# ವಿಕ್ಟೋರಿಯ (1837—1901)

## ಮುಖ್ಯ ವಿಭಾಗಗಳು

| | | | |
|---|---|---|---|
| 1. | ಒಳಾಡಳಿತ 1837—1867 | 6 | ಅಮೆರಿಕ, ಕನಡ ಡುಮಿನಿಯನ್ |
| 2. | ಸಂಧಿವಿಗ್ರಹ 1851—1890 | 7. | ಆಸ್ಟ್ರೇಲಿಯ, ನ್ಯೂಜಿಲಂಡ್ |
| 3 | ಒಳಾಡಳಿತ 1868—1901 | 8. | ಆಫ್ರಿಕದಲ್ಲಿ |
| 4. | ಐರ್ಲಂಡ್ 1800—1922 | 9. | ಏಷ್ಯದಲ್ಲಿ |
| 5 | ಹಿಂದುಸ್ತಾನ್ | 10. | 19ನೆ ಶತಮಾನ— ಕಾಲಸ್ಥಿತಿ |

## ಸಮಕಾಲಿಕರು

| ಫ್ರಾನ್ಸ್ | ಪ್ರಷ್ಯ | ರಷ್ಯ | ಆಸ್ಟ್ರಿಯ ಹಂಗರಿ |
|---|---|---|---|
| ಲೂಯಿ ಫಿಲಿಪ್ 1830—1848 | 3ನೆ ಫ್ರೆಡರಿಕ್ ವಿಲಿಯಂ 1797—1840 | ಹಿರೇ ನಿಕೋಲಾಸ್ 1825—1855 | 1ನೆ ಫರ್ಡಿನೆಂಡ್ 1835—1848 |
| 2ನೆ ರಿಪಬ್ಲಿಕ್ 1848—1852 | 4ನೆ ಫ್ರೆಡರಿಕ್ ವಿಲಿಯಂ 1840—1861 | 2ನೆ ಅಲೆಕ್ಸಾಂಡರ್ 1855—1881 | 1ನೆ ಫ್ರಾನ್ಸಿಸ್ ಜೋಸೆಫ್ 1848—1917 |
| 3ನೆ ನಪೋಲಿಯನ್ 1852—1870 | 1ನೆ ವಿಲಿಯಂ ಚಕ್ರವರ್ತಿ 1861—1888 | 3ನೆ ಅಲೆಕ್ಸಾಂಡರ್ 1881—1894 | |
| ಮೂರನೆ ರಿಪಬ್ಲಿಕ್ | 3ನೆ ಫ್ರೆಡರಿಕ್ 1888 2ನೆ ವಿಲಿಯಂ 1888—1918 | 2ನೆ ನಿಕೋಲಾಸ್ 1894—1917 | |

ಕೆಂಟ್ ಶ್ರೀಮಂತನ ಏಕಮಾತ್ರ ಪುತ್ರಿಯಾಗಿ 1837 ರಲ್ಲಿ ಪಟ್ಟವನ್ನೇರಿದ ವಿಕ್ಟೋರಿಯ ಆ ವೇಳೆಯಲ್ಲಿ ಹದಿನೆಂಟು ವರ್ಷದವಳು ಮಾತ್ರ. ಸ್ವಸ್ಥವಾಗಿ ಬೆಳೆದು ಶಾಂತಸ್ವಭಾವವುಳ್ಳವಳು. ಸಮಯದಲ್ಲಿ ತಕ್ಕ ಧೈರ್ಯವನ್ನು ಅವಲಂಬಿಸಿ ವಿವೇಕದ ದಾರಿಯನ್ನು ನಿಷ್ಕರ್ಷೆಮಾಡಿಕೊಳ್ಳುವಷ್ಟು ಯೋಚನಾಶೀಲೆಯಾಗಿದ್ದವಳು.

---

ಒಳಾಡಳಿತದಲ್ಲಿ 1867 ರವರೆಗೆ ಮೊದಲನೆ ಭಾಗವೆಂದಿಟ್ಟುಕೊಳ್ಳಬಹುದು. ಆ ವರ್ಷ ಪಾರ್ಲಿಮೆಂಟಿಗೆ ಎರಡನೆ ಸಂಸ್ಕಾರವಾಯಿತು. ಹೊರಗಿನ ವಿಷಯಗಳಲ್ಲಿ ಒಂದೊಂದು ಖಂಡದ ವಿವರವನ್ನೂ ಕ್ರಮವಾಗಿ ನಾವು ಕಾಣತಕ್ಕವರಾದರೂ ನಡೆದ ಸಂಗತಿಗಳು ಪರಸ್ಪರ ಸಂಬಂಧವುಳ್ಳವುಗಳೆಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಬ್ರಿಟಿಷರ ಚರಿತ್ರೆ ಯೆಂಬುದು ಬರಬರುತ್ತ ಪ್ರಥ್ವಿಯ ಚರಿತ್ರೆಯಷ್ಟೇ ವಿಸ್ತಾರಗೊಳ್ಳುತ್ತದೆ. ವಿದ್ಯಾರ್ಥಿಗಳು ತಾವೇ ಕಾಲಸೂಚಿಗಳನ್ನು ಬರೆದುಕೊಳ್ಳುವುದು ಮೇಲು.

ಸಹಜವಾದ ಗಂಭೀರ ಗುಣವನ್ನು ಪಡೆದವಳು. ಸಣ್ಣ ವಯಸ್ಸಿನಲ್ಲಿ ರಾಣಿಯಾದಾಗ ಮೆಲ್ಬರ್ನ್ ಶ್ರೀಮಂತನ ಹಿತೋಪದೇಶವನ್ನು ಅನುಸರಿಸಿದಳು. ಮೆಲ್ಬರ್ನ್ ಆ ವಿಷಯದಲ್ಲಿ ಅತಿಶ್ರದ್ಧಾವಂತನಾಗಿದ್ದರೂ ಒಂದು ಪಕ್ಷದ ನಾಯಕನಾಗಿದ್ದುದರಿಂದ ರಾಣಿಯುನ್ನು ತನ್ನ ಪಕ್ಷಕ್ಕೆ ಸೆಳೆಯುವ ಸಂಭವವಿತ್ತು. 1840ರಲ್ಲಿ ವಿಕ್ಟೋರಿಯ ಜರ್ಮನಿಯಲ್ಲಿ ಸ್ಯಾಕ್ಸ್‌ಕೋಬುರ್ಗ್ ಗೋಥ ಶ್ರೀಮಂತನಾಗಿದ್ದ **ಆಲ್ಬರ್ಟ್** (Prince Albert) ಎಂಬಾತನನ್ನು ಮದುವೆಯಾದಳು. ಆತನು ಪ್ರಾಜ್ಞನಾಗಿಯೂ ವಿವೇಕಿಯಾಗಿಯೂ ಇದ್ದು ಯಾವ ದುರಾಶೆಯನ್ನೂ ಬೆಳೆಸದೆ ಬ್ರಿಟನ್ನಿನ ಸ್ಥಿತಿಗತಿಗಳನ್ನು ಶ್ರಮಪಟ್ಟು ತಿಳಿದುಕೊಂಡು ಸಮಯೋಚಿತವಾಗಿ ರಾಣಿಗೆ ಯುಕ್ತಾಯುಕ್ತವನ್ನು ತಿಳಿಸುತ್ತಿದ್ದನು. 1861ರ ವರೆಗೆ ಜೀವಂತನಾಗಿದ್ದು ರಾಜಪುತ್ರ ಆಲ್ಬರ್ಟ್ ಎಂಬ ಸಾಮಾನ್ಯ ಬಿರುದನ್ನೇ ವಹಿಸಿದ್ದನು.

ವಿಕ್ಟೋರಿಯ ಬ್ರಿಟಿಷರಿಗೆ ರಾಣಿಯಾದ ವೇಳೆಯಲ್ಲಿ **ಹ್ಯಾನೊವರ್** ಪ್ರತ್ಯೇಕವಾಯಿತು. ಸ್ತ್ರೀಯರಿಗೆ ಅಲ್ಲಿ ಪಟ್ಟದ ಅಧಿಕಾರವಿರಲಿಲ್ಲ. ಆದ್ದರಿಂದ ಅಲ್ಲಿಗೆ ಮೂರನೆ ಜಾರ್ಜನ ಕಿರಿಯ ಮಗನೊಬ್ಬನು ಅರಸನಾದನು. 1866ರ ವರೆಗೆ ಹ್ಯಾನೊವರ್ ಸ್ವತಂತ್ರ ಸಂಸ್ಥಾನವಾಗಿಯೇ ಇದ್ದು ಆ ವರ್ಷ ಪ್ರಷ್ಯದ ಭಾಗವಾಯಿತು.

ಈ ರಾಣಿಯ ಆಳಿಕೆ ಅತಿದೀರ್ಘವಾದುದು. 1837 ರಿಂದ 1901 ರವರೆಗೆ ಅರುವತ್ತನಾಲ್ಕು ವರ್ಷಗಳ ಆಳಿಕೆ. ಸಣ್ಣ ವಯಸ್ಸಿನಲ್ಲಿ ಪಟ್ಟವೇರಿದವಳು ಮುಕ್ತೆಯಾದಾಗ ಎಂಭತ್ತು ವರ್ಷ ದಾಟಿದ್ದಳು. ಅಷ್ಟು ಅವಧಿಯಲ್ಲಿ ಎಷ್ಟೋ ಮಂತ್ರಿಗಳು ಪ್ರವೃತ್ತರೂ ನಿವೃತ್ತರೂ ಆದರು. ಹತ್ತೊಂಬತ್ತನೆ ಶತಮಾನವೇ ಆಕೆಯ ಕಾಲವಾಯಿತು. ಆಕೆಯ ಆಳಿಕೆಯಲ್ಲಿಯೆ ಬ್ರಿಟಿಷ್ ರಾಷ್ಟ್ರಕ್ರಮ ರೂಢಿಗೊಂಡು ಆದರ್ಶವೆನ್ನಿಸಿತು. ಐರೋಪ್ಯ ರಾಷ್ಟ್ರಗಳ ಮಧ್ಯೆ ಗ್ರೇಟ್ ಬ್ರಿಟನ್ನಿಗೆ ಅಗ್ರಸ್ಥಾನ ದೊರೆಯಿತು. ಎಲ್ಲ ಖಂಡಗಳಲ್ಲಿಯೂ ಎಲ್ಲ ಸಾಗರಗಳಲ್ಲಿಯೂ ಬ್ರಿಟಿಷರ ಪ್ರಾಬಲ್ಯ ಸ್ಥಾಪಿತವಾಗಿ ಬ್ರಿಟಿಷ್ ಸಾಮ್ರಾಜ್ಯ ವಿಸ್ತಾರಗೊಂಡಿತು. ರಾಣಿ ಮಧ್ಯವಯಸ್ಸನ್ನು ದಾಟಿದ ತರುವಾಯ ವರ್ಷೇ ವರ್ಷೇ ಸಾಮ್ರಾಜ್ಯ ವಿಸ್ತಾರವಾದುದನ್ನು ಕಂಡಳು. ಐರೋಪ್ಯ ಪ್ರಭುಗಳೆಲ್ಲರಿಗೂ ಪೂಜ್ಯಳಾದಳು.

**ರಾಜ್ಯರೂಪ**

ಬ್ರಿಟನ್ನಿನ ಅಥವಾ **ಸಂಯುಕ್ತರಾಜ್ಯದ** (United Kingdom) ಆಡಳಿತದ ರೂಪವೇನೋ ರಾಜತ್ವ ; ವಂಶಪರಂಪರೆಯಾದ ರಾಜತ್ವ. ಆದರೆ ರಾಜಪುರುಷರು ಎಷ್ಟುಮಾತ್ರ ಅಧಿಕಾರಪಡೆದಿರಬಹುದು, ಆ ಅಧಿಕಾರವನ್ನು ಹೇಗೆ ನಿರ್ವಹಿಸ ಬಹುದು ಎಂಬ ಪ್ರಶ್ನೆಗಳಿಗೆ ಕಾನೂನುಗಳಲ್ಲಿ ಸಮರ್ಪಕವಾದ ಸಮಾಧಾನ ದೊರೆ ಯುವುದಿಲ್ಲ. ಮೂರನೆಜಾರ್ಜ್ ರಾಜಾಧಿಕಾರವನ್ನು ಹೆಚ್ಚಿಸಿ ಚಿತ್ತವೈಕಲ್ಯಕ್ಕೆ ಸಿಕ್ಕಿ ಕೊಂಡ ಮೇಲೆ ಮಂತ್ರಿಗಳಿಗೇ ಎಲ್ಲವನ್ನೂ ಬಿಟ್ಟುಕೊಟ್ಟನು. ರೀಜೆಂಟಾದಾತನು ಗೌರವವನ್ನಾಗಲಿ ವಿಶ್ವಾಸವನ್ನಾಗಲಿ ಸಂಪಾದಿಸಲಿಲ್ಲ. ನಾಲ್ಕನೆಜಾರ್ಜ್ ನಾಲ್ಕನೆ ವಿಲಿಯಂ ದೊರೆಗಳೂ ಬಲಿಷ್ಠರಲ್ಲಿ ಗಣ್ಯರಾಗತಕ್ಕವರೇ ಅಲ್ಲ. ಆದ್ದರಿಂದ ಮಂತ್ರಿ ಮಂಡಲಿಗೆ ಸರ್ವಾಧಿಕಾರ ನಡೆದಂತೆಯೇ ಇತ್ತು. ವಿಕ್ಟೋರಿಯ ಕಾಲದಲ್ಲಿ ರಾಜಪುರುಷರು ಎಂತಹಸ್ಥಾನದಲ್ಲಿರಬೇಕೆಂದು ಆಕೆಯ ನಡತೆಯಿಂದ ರೂಢಿ ಗೊಂಡಿತು. ರಾಜಪುರುಷರ ಯೋಗ್ಯತೆ ಹೇಗೋ ಹಾಗೆ ಅವರ ಪ್ರಭಾವ ತೋರಿ ಕೊಳ್ಳುತ್ತದೆಯೆಂಬುದು ವಾಸ್ತವವಾದರೂ ವಿಕ್ಟೋರಿಯ ರಾಣಿಯು ರಾಜಪುರುಷರಿಗೆ ಆದರ್ಶವನ್ನಿಟ್ಟಂತೆ ನೆರವೇರಿಸಿದಳು.

ರಾಜ ಅಥವಾ ರಾಣಿ ಯಾವ ಪಾರ್ಟಿಗೂ ಸೇರಿರತಕ್ಕವರಲ್ಲ. ರಾಜ್ಯಕ್ಕೆ ಅಲಂಕಾರಸ್ವರೂಪರಾಗಿ ಸಮಸ್ತರಿಗೂ ಗೌರವದ ಆದರ್ಶವನ್ನು ತೋರುತ್ತ ಇರುವು ದೊಂದು ಅಂಶ. ಅರಮನೆವೆಚ್ಚವನ್ನು ಪಾರ್ಲಿಮೆಂಟಿನವರು ನಿಷ್ಕರ್ಷೆಮಾಡಿ ಕ್ರಮವಾಗಿ ಸಲ್ಲಿಸುವ ಪದ್ಧತಿ ಬೆಳೆದಿತ್ತು. ಅದನ್ನನುಭವಿಸುತ್ತ ರಾಜನು ಸಮರ್ಥನೂ ವಿವೇಕಿಯೂ ಆದಾಗ ಒಳಾಡಳಿತ ವಲ್ಲಿಯೂ ಅನ್ಯದೇಶವ್ಯವಹಾರದಲ್ಲಿಯೂ ಮಂತ್ರಿಗಳಿಗೆ ಸಮಯೋಚಿತವಾಗಿ ತನ್ನ ಅಭಿಪ್ರಾಯವನ್ನು ತಿಳಿಸಿ ಅವರನ್ನೊಪ್ಪಿಸಿಕೊಂಡು ತನ್ನ ಇಷ್ಟದಂತೆ ನಡೆಸಬಹುದು. ಮಂತ್ರಿಗಳನ್ನೊಪ್ಪಿಸದೆ ತಾನಾಗಿ ಮಾಡುವಹಾಗಿಲ್ಲ. ವಿಕ್ಟೋರಿಯ ಈ ರೀತಿಯಲ್ಲಿ ತನ್ನ ಜಾಣ್ಮೆಯಿಂದ ಕೆಲವೇಳೆಗಳಲ್ಲಿ ಅನರ್ಥಗಳಾಗದಂತೆ ನೆರವೇರಿಸಿದಳು. ಮುಖ್ಯಮಂತ್ರಿಯ ನಿಯೋಗ ರಾಜನಿಂದಲೇ ನೆರವೇರತಕ್ಕುದಾ ದುದರಿಂದ ಮಂತ್ರಿಗಳನ್ನು ಗೊತ್ತುಮಾಡುವಾಗ ರಾಜನು ಜಾಣ್ಮೆಯಿಂದ ವರ್ತಿಸ ಬಹುದು. ನ್ಯಾಯಕ್ಕೆ ಮಾತ್ರ ಸ್ಥಾನವಾದುದರಿಂದ ರಾಜನು ಪಕ್ಷವಿಪಕ್ಷಗಳ ಪೋಟಾ ಪೋಟಿಯ ನಡುವೆ ನ್ಯಾಯವನ್ನು ಮಾಡುತ್ತ ವಿಪರೀತವಾಗದಂತೆ ಅಡ್ಡಿಪಡಿಸಬಹುದು. ಅನ್ಯ ದೇಶಗಳೊಡನೆ ಸಂಧಿಸಂಧಾನಗಳನ್ನು ನಡೆಸುವಾಗ ರಾಜನ ಕೈವಾಡಕ್ಕೆ ಆಸ್ಪದ ವುಂಟು. ಅನ್ಯದೇಶದ ಪ್ರಭುಗಳು ರಾಜಬಂಧುಗಳಾದುದರಿಂದ ರಾಜನಿಗೆಷ್ಟೋ ಅನುಕೂಲ. ವಿಕ್ಟೋರಿಯ ರಾಣಿಗೆ ಐರೋಪ್ಯ ಪ್ರಭುಗಳೆಲ್ಲರೂ ಬಂಧುಗಳಾಗಿಯೆ ಇದ್ದರು. ಆದ್ದರಿಂದ ಅನೇಕವೇಳೆ ಮಂತ್ರಿಗಳಿಂದಾಗದ ಕೆಲಸವನ್ನು ಆಕೆ ಒಂದೆರಡು

ರಾಜಪದವಿ

ಮಾತುಗಳಿಂದ ನೆರವೇರಿಸಿಕೊಳ್ಳುತ್ತಿದ್ದಳು. ಬ್ರಿಟಿಷ್ ರಾಜತ್ವವೆಂಬುದು ಬ್ರಿಟಿಷ್ ಸಾಮ್ರಾಜ್ಯಬಂಧದಲ್ಲಿ ಪ್ರಭಾವವುಳ್ಳದು. ಬ್ರಿಟಿಷ್ ಜಾತಿಯವರಿಗೆಲ್ಲ ಆ ರಾಜ ಪುರುಷನು ಪ್ರಭುವಾದುದರಿಂದ ಬ್ರಿಟಿಷರ ಐಕ್ಯತೆಯಸ್ವರೂಪನಾದಾತನು.

ಒಟ್ಟಿನಲ್ಲಿ ಕೆಡುಕನ್ನು ಮಾಡಲು ಸ್ವತಂತ್ರವಿಲ್ಲ, ಒಳ್ಳೆಯದನ್ನು ಮಾಡಲು ಸ್ವತಂತ್ರವುಂಟು. ವಿವೇಕಕ್ಕೆ ಆಸ್ಪದವುಂಟು, ಅವಿವೇಕಕ್ಕೆ ಆಸ್ಪದವಿಲ್ಲ. ಸಮರ್ಥ ನಾದರೆ ನ್ಯಾಯವನ್ನು ಭದ್ರಗೊಳಿಸುತ್ತಾನೆ, ಅಸಮರ್ಥನಾದರೆ ಅನ್ಯಾಯಮಾಡ ಲಾರನು. ಇದನ್ನು **ಸಾಂಕುಶಪ್ರಭುತ್ವ, ವಿಧಿಬದ್ಧ** ಅಥವಾ **ವಿಧೇಯ ರಾಜತ್ವ** (Constitutional Monarchy) ಎನ್ನಬಹುದು.

ಪಾರ್ಲಿಮೆಂಟೆಂಬುದರಲ್ಲಿ ಶ್ರೀಮಂತರಸಭೆ ಅಲಂಕಾರ ವೈಭವಗಳಿಂದ ಯುಕ್ತ ವಾದುದು. ಅಲ್ಲಿಯವರು ವಂಶಪರಂಪರೆಯ ಹಕ್ಕಿನವರು. ರಾಜ್ಯದಲ್ಲಿ ಶ್ರೇಷ್ಠ ತಮವಾದ ನ್ಯಾಯಸ್ಥಾನ ಆ ಸಭೆಯೇ. ಇಂಪೀಚ್ಮೆಂಟುಗಳು ನಡೆದುದು ಆ ಸಭಾ ಭವನದಲ್ಲಿಯೇ. ಶ್ರೀಮಂತರನ್ನು ಹುಟ್ಟಿಸಿಕೊಳ್ಳುವ ಅಧಿಕಾರ ರಾಜನದು.

**ಶ್ರೀಮಂತ ಸಭೆ**

ಆದ್ದರಿಂದ ಸಾಧಾರಣವಾಗಿ ಶ್ರೀಮಂತರು ರಾಜಾನುವರ್ತಿಗಳು. ಹತ್ತೊಂಭತ್ತನೆಯ ಶತಮಾನದಲ್ಲಿ ಶ್ರೀಮಂತರೆಲ್ಲರೂ ಜಹಗೀರ್ ಪಡೆದಿದ್ದವರೇ. ಕೆಲವರು ಶ್ರೀಮಂತರು ವ್ಹಿಗ್ ಅಥವಾ ಲಿಬರಲ್ ಪಕ್ಷದವರಾಗಿದ್ದಾಗ್ಗೂ ಬಹುಮಂದಿ ಟೋರಿಪಕ್ಷದವರು. ಆದ್ದ ರಿಂದ 1832ರಲ್ಲಿ ಸುಧಾರಣೆಗೊಪ್ಪದಾದರು. ಆತರುವಾಯವೂ ಸಾಧಾರಣವಾಗಿ ಸುಧಾರಣೆಗಳನ್ನು ಅಡ್ಡಿಪಡಿಸುವುದೇ ಶ್ರೀಮಂತರ ಚರ್ಯೆ. ಕಾಮನ್ಸ್ ಸಭೆಯವರ ಆತುರ ಉತ್ಸಾಹಗಳಿಗೆ ಒಂದು ವಿಘ್ನವಾಯಿತು ಶ್ರೀಮಂತರ ಸಭೆ. ಕಾಲವಿಳಂಬ ವನ್ನಲ್ಲದೆ ವಿಷಯುಗಳನ್ನು ಪುನರ್ವಿಮರ್ಶೆಗೊಳಿಸುವುದು ಆ ಸಭೆಯ ಪ್ರಭಾವ. ಆ ಕಾರಣದಿಂದ ಅದನ್ನು ಕೆಲವರು ಮುಗ್ಗರಿಸುವ ಸಭೆಯೆನ್ನಲು ಮೊದಲಿಟ್ಟರು. ಶತಮಾನದ ಅಂತ್ಯದಲ್ಲಿಯೂ ಇಪ್ಪತ್ತನೆ ಶತಮಾನದಲ್ಲಿಯೂ ಶ್ರೀಮಂತ ಸಭೆಯನ್ನು "ಗೊಡ್ಡುಗಳ ಕೂಟ" "ಅಡುಗೂಲಜ್ಜಿ" ಮುಂತಾಗಿ ಕರೆದು ಅವಹೇಳನಕ್ಕೆ ಗುರಿ ಮಾಡಿದರು. ಅಧಿಕಾರವಿಭಾಗದಲ್ಲಿ ಕಾಣುವುದಾದರೆ ಕಾಮನ್ಸ್ ಸಭಿಕರು ಆಯವ್ಯಯವನ್ನು ಸಂಪೂರ್ಣವಾಗಿ ತಮ್ಮ ಅಧಿಕಾರದಲ್ಲಿಟ್ಟುಕೊಂಡಬಳಿಕ ಉಭಯ ಸಭೆಗಳಿಗೂ ಸಮಾನಾಧಿಕಾರವೆಂಬುದು ಮಾಯವಾಯಿತು.

**ಕಾಮನ್ಸ್**

ಕಾಮನ್ಸ್‌ಸಭೆ 1832 ರ ತರುವಾಯ ಹತ್ತೊಂಭತ್ತನೆ ಶತಮಾನದಲ್ಲಿಯೇ ಎರಡುಬಾರಿ ಪುನರ್ವ್ಯವಸ್ಥೆಗೊಳಗಾಯಿತು; ಇಪ್ಪತ್ತನೆಯ ಶತಮಾನದಲ್ಲಿಯೂ ಪುನರ್ವ್ಯವಸ್ಥೆ ನಡೆಯಿತು. ರಾಷ್ಟ್ರದ ಜನರ ಪ್ರತಿಬಿಂಬದಂತಾಗಲು ಒಂದೊಂದಾಗಿ ಏರ್ಪಾಟು ನಡೆದುದಲ್ಲದೆ ಸಭೆಯ ಅಧಿಕಾರವೂ ಹೆಚ್ಚಿತು. ಬರಬರುತ್ತ ಪಾರ್ಲಿಮೆಂಟೆಂದರೆ

ಕಾಮನ್ಸ್ ಸಭೆಯೇ ಎನ್ನುವಂತಾಯಿತು. ಆ ಸಭೆಯಲ್ಲಿ ಹಿಂದಿನ ವ್ಹಿಗ್ ಟೋರಿಪಕ್ಷಗಳು ಬಣ್ಣ ಬದಲಾಯಿಸಿ ಕಾಲಕ್ಕೆ ಹೊಂದಿಕೊಂಡ ಲಕ್ಷಣಾಂತರಗಳನ್ನು ತಾಳಿ ಲಿಬರಲ್ ಕನ್ಸರ್ವೇಟಿವ್ ಪಕ್ಷಗಳೆನಿಸಿದವು. ಹತ್ತೊಂಭತ್ತನೆ ಶತಮಾನದ ಕೊನೆವರೆಗೆ ಈಯೆರಡುಪಕ್ಷಗಳೇ ಪ್ರಬಲವಾಗಿದ್ದವು. ಮಂತ್ರಿ ಪದವಿಗಳನ್ನು ದಕ್ಕಿಸಿಕೊಳ್ಳುವುದಕ್ಕಾಗಿ ಸದಾ ಪ್ರಯತ್ನಪಡುತ್ತ ಪ್ರತಿ ಪಾರ್ಟಿಯೂ ಒಂದು ಸೈನ್ಯದಂತೆ ಒಳವ್ಯವಸ್ಥೆಯನ್ನು ಪೂರ್ತಿಮಾಡಿಕೊಂಡಿತು. ಎರಡು ಪಾರ್ಟಿಗಳಲ್ಲಿಯೂ ದೇಶಭಕ್ತಿಯು ದೊಡ್ಡಗುಣ. ಆದ್ದರಿಂದ ವಿಕ್ಟೋರಿಯ ರಾಣಿಯುಕಾಲದಲ್ಲಿ ಒಂದು ಪಕ್ಷದವರು ನಡೆಸಬೇಕೆಂದಿದ್ದ ಕರ್ತವ್ಯವನ್ನು ತದ್ವಿರೋಧಪಕ್ಷದವರು ನಿರ್ವಹಿಸಿದ ಅಂಶ ಕಾಣುವುದು. ಲೇಬರ್ ಪಾರ್ಟಿಯೆಂಬುದು ಶತಮಾನದ ಕೊನೆಕೊನೆಗೆ ರೂಪಗೊಂಡಿತು.

ಸಂಯುಕ್ತ ರಾಜ್ಯದ ರೂಪದಲ್ಲಿ ಮುಖ್ಯವಾದ ಅಂಶ **ಕ್ಯಾಬಿನೆಟ್** ಎಂಬ ಪದ್ಧತಿ. ಪಾರ್ಲಿಮೆಂಟಿನಲ್ಲಿ ಬೆಂಬಲವುಳ್ಳವರನ್ನೇ ರಾಜನು ಮಂತ್ರಿಗಳಾಗಿ ನಿಯೋಗಿಸಬೇಕಾಗಿ ಬಂದ ವಿವರವನ್ನು ಆಗಲೆ ಕಂಡೆವು. ಬಹುಪಕ್ಷ ಕಟ್ಟುವುದು ಒಂದು ಶಾಸ್ತ್ರವಾಯಿತು. ಬಹುಪಕ್ಷದ ಬೆಂಬಲ ತಪ್ಪಿದ ಕೂಡಲೆ ಮಂತ್ರಿಗಳು ನಿವೃತ್ತರಾಗುವುದೂ ಪದ್ಧತಿಯಾಯಿತು. ಸಭೆಯ ಬೆಂಬಲವಿಲ್ಲದವರನ್ನು ರಾಜನು ನಿಯೋಗಿಸುವ ಹಾಗಿಲ್ಲ, ಬೆಂಬಲವಿಲ್ಲದ ಮಂತ್ರಿ ನಿರ್ವಹಿಸುವ ಹಾಗಿಲ್ಲ, ವಿಪತ್ಕಾಲ ವಿನಾ ಸಾಧಾರಣ ಕಾಲಗಳಲ್ಲಿ ಪಾರ್ಟಿಗಳೊಟ್ಟುಗೂಡುವ ಹಾಗಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಹ್ಯಾನೊವರ್ ವಂಶದ ದೊರೆಗಳು ಮಂತ್ರಿ ಸಭೆಗೆ ಸರ್ವಸ್ವವನ್ನೂ ಬಿಟ್ಟು ಕೊಟ್ಟ ಹಾಗೆಲ್ಲ ಕ್ಯಾಬಿನೆಟ್ ಅಥವಾ ಮಂತ್ರಿಮಂಡಲಿಯ ವಿಶಿಷ್ಟ ಲಕ್ಷಣಗಳು ಕಾಲಕ್ರಮದಲ್ಲಿ ರೂಢಿಗೊಂಡವು. ಮುಖ್ಯವಾದ ಅಂಶಗಳು—

**ಮಂತ್ರಿಮಂಡಲ**

1. ಮಂತ್ರಿಸಭೆಗೆ ರಾಜನು ಬಾರದೆ ಇದ್ದನು; ಕಾಲಕ್ರಮದಲ್ಲಿ ಬಾರದಿರುವುದೇ ರೂಢಿಯಾಯಿತು. ರಾಜನಿಲ್ಲದಿರುವುದು ಮಂತ್ರಿಮಂಡಲಿಯ ಲಕ್ಷಣವಾಯಿತು.

2. ಕಾಮನ್ಸ್ ಸಭೆಯಲ್ಲಿ ಪ್ರಾಬಲ್ಯ ದೌರ್ಬಲ್ಯಗಳು ಪಾರ್ಟಿಗಳಿಗೆ; ಆದ್ದರಿಂದ ಪ್ರಬಲ ಪಾರ್ಟಿ ನಾಯಕನು ಮಂತ್ರಿಗಳಿಗೂ ನಾಯಕನು. ಮಂತ್ರಿಗಳೆಲ್ಲರೂ ಒಂದೇ ಪಾರ್ಟಿಯವರು. ಅಭಿಪ್ರಾಯ ಬಾಂಧವ್ಯವಿದ್ದವರೇ ಮಂತ್ರಿಮಂಡಲಿಯಲ್ಲಿ ಸೇರಿ ಕಾರ್ಭಾರು ನಡೆಸತಕ್ಕವರು. ಒಟ್ಟಿಗೆ ಪ್ರವೇಶ, ಒಟ್ಟಿಗೆ ನಿರ್ಗಮನ ಅಥವಾ ನಿವೃತ್ತಿ; ಅಥವಾ ಸಮುದಾಯವಾಗಿಯೇ ವ್ಯವಹರಿಸುವುದು. ಒಬ್ಬರನ್ನೊಬ್ಬರು ಬಿಟ್ಟು ಕೊಡುವ ಅಥವಾ ಅಡ್ಡಿಪಡಿಸುವ ಚೇಷ್ಟೆಗೆ ಅವಕಾಶವಿಲ್ಲ. ಒಬ್ಬರನ್ನು

ಮಾತನಾಡಿಸಿ ಅಭಿಪ್ರಾಯವೇನೆಂದು ತಿಳಿದುಕೊಂಡರೆ ಇತರರನ್ನು ಕೇಳಬೇಕಾಗಿಯೇ ಇರುವುದಿಲ್ಲ. ಎಲ್ಲರದೂ ಒಂದೇ ರೀತಿ, ಒಟ್ಟು ಜವಾಬ್ದಾರಿ.

3. ಮಂತ್ರಿಮಂಡಲಿಯೆನಿಸಿದವರು ಕಾಮನ್ಸ್ ಸಭೆಯಲ್ಲಿ ಬಹುಪಕ್ಷದವರಾದುದರಿಂದ ಆ ಸಭೆಗೆ ಅಥವಾ ಪಾರ್ಲಿಮೆಂಟಿಗೆ ಅವರೇ ನಾಯಕರು, ಬೇಕಾದ ಶಾಸನವನ್ನು ಮಾಡಿಕೊಳ್ಳಬಲ್ಲವರು. ಮಂತ್ರಿಗಳಾದುದರಿಂದ ಸರ್ಕಾರದ ಹುದ್ದೆದಾರರಿಗೆ ಹುಕುಂ ಕೊಡತಕ್ಕವರು. ಒಂದು ಕಡೆ ಆಜ್ಞೆಗಳನ್ನು ಕೊಟ್ಟು ಕೆಲಸ ಮಾಡಿಸುತ್ತಲೂ ಮತ್ತೊಂದು ಕಡೆ ಶಾಸನವನ್ನು ರಚಿಸುತ್ತಲೂ ಇರುವುದರಿಂದ ಶಾಸನದಂತೆ ಆಜ್ಞೆ ಹೊರಡಲು ಅಥವಾ ಆಡಳಿತವೆಂಬುದು ವಿಧಿಗನುಸಾರವಾಗಿ ನಡೆಯಲು ಅನುಕೂಲ. ಶಾಸನವೊಂದು ಆಚರಣೆಯಿನ್ನೊಂದು ಆಗುವ ಸಂಭವವಿಲ್ಲ. ರಾಷ್ಟ್ರರೂಪದಲ್ಲಿ ಕ್ಯಾಬಿನೆಟ್ ಎಂಬುದು ಹೀಗೆ ಶಾಸನಾಂಗವನ್ನೂ ಕಾರ್ಯಾಂಗವನ್ನೂ ಒಂದೇ ನೊಗಕ್ಕೆ ಕಟ್ಟಿಹೊಡೆಯುವ ಏರ್ಪಾಟು.

4. ಮಂತ್ರಿಮಂಡಲಿಗೆ ಪ್ರಧಾನ(Premier)ನೆಂಬಾತನು ನಾಯಕ. ಆತನೇ ನಿಜವಾದ ದೊರೆ; ಆತನೇ ಜನರ ಪ್ರತಿನಿಧಿಗಳಲ್ಲಿ ಮುಖಂಡನಾಗಿ ಕಾಮನ್ಸ್ ಸಭೆಯಲ್ಲಿ ಅತಿವಿಶ್ವಾಸಪಾತ್ರನಾದಾತನು. ಕಾಮನ್ಸ್ ಸಭೆಯೆಂಬುದು ಜನರಾಶಿಯ ಪ್ರತಿಬಿಂಬ; ಆದ್ದರಿಂದ ಆತನೇ ಜನರಿಗೆ ಅತಿವಿಶ್ವಾಸಪಾತ್ರನಾದಾತನು; ಜನರ ಮೆಚ್ಚಿಗೆ ಪಡೆದವನೇ ರಾಜನಂತೆ ಪರಿಣಾಮ.

5. ಮಂತ್ರಿಮಂಡಲಿಯವರು ಸಭೆಸೇರಿ ಚರ್ಚೆಗಳನ್ನೂ ವಿಚಾರಗಳನ್ನೂ ನಡೆಸುವುದು ಗೋಪ್ಯವಾಗಿ. ಅಲ್ಲಿ ನಡೆಯುವ ವಾದವಿವಾದಗಳನ್ನು ಬರೆದಿಡುವುದಿಲ್ಲ. ಪ್ರಧಾನನು ಇತರ ಮಂತ್ರಿಗಳನ್ನು ಕರೆಸಿ ಆಲೋಚ್ಯ ವಿಷಯವನ್ನೊಡ್ಡಿ ಸಭೆಯನ್ನು ನಡೆಸತಕ್ಕವನು.

ವಿಕ್ಟೋರಿಯರಾಣಿ ಪಟ್ಟಕ್ಕೆ ಬಂದ ವೇಳೆಗೆ ಈ ಲಕ್ಷಣಗಳು ಬಹುಭಾಗವಾಗಿ ರೂಢಿಗೊಂಡಿದ್ದವು. ಕಾಮನ್ಸ್‌ಸಭೆ ಮಾತ್ರ ಜನಸ್ತೋಮದ ಪ್ರತಿಬಿಂಬವಾಗಿರಲಿಲ್ಲ. ಪ್ರಾತಿನಿಧ್ಯವಿಲ್ಲದ ಜನರ ವರ್ಗಗಳು ಬಹು ಸಂಖ್ಯಾಕವಾಗಿಯೇ ಇದ್ದವು. ನೆಮ್ಮದಿವಂತ ವರ್ಗದವರಿಗೆ ಕಾಮನ್ಸ್ ಸಭೆಯಲ್ಲಿ ಪ್ರವೇಶವಿತ್ತು; ಬಡವರಿಗಿರಲೇ ಇಲ್ಲ. ಆದ್ದರಿಂದ ವಿಕ್ಟೋರಿಯ ಆಳಿಕೆಯನ್ನು ಮೊದಲಿಟ್ಟಾಗ ಅಸಮಾಧಾನದಿಂದ ಕೂಡಿದ್ದ ಜನಭಾಗವು ಹೆಚ್ಚಾಗಿಯೇ ಇತ್ತು.

## ಒಳಾಡಳಿತ (1837—1867)

### ಸನ್ನದುವಾದ

ವಿಕ್ಟೋರಿಯ ರಾಣಿ ಅಧಿಕಾರವಹಿಸಿದಾಗ ವ್ಹಿಗ್ **ಶ್ರೀಮಂತ ಮೆಲ್ಬರ್ನ್** ಪ್ರಧಾನಮಂತ್ರಿಯಾಗಿ 1841 ರವರೆಗೆ ಕಾರ್ಯನಿರ್ವಾಹ ನಡೆಸಿದನಷ್ಟೆ. ಆತನ ಕಾಲದಲ್ಲಿ **ಸನ್ನದುವಾದಿ** (Chartists)ಗಳೆಂಬುವರು ದೊಡ್ಡ ಪ್ರಚಾರಮಾಡಿದರು.

1838ರಲ್ಲಿ **ವಿಲಿಯಂ ಲೋವಟ್** (William Lovatt) ಎಂಬಾತನು ಒಂದು ಪತ್ರವನ್ನು ಬರೆದು ಅದನ್ನು ಜನರಾಶಿಯ ಸನ್ನದೆಂದು ಕರೆದನು. ಆತನು ಲಂಡನ್ನಿನ ಕಾಯಕವರ್ಗದ ಸಂಘಕ್ಕೆ ನಾಯಕನಾಗಿದ್ದವನು. ಕಾಯಕವರ್ಗದವರು, ಅಥವಾ ಕಷ್ಟಗೈದು ಜೀವನನಡೆಸುತ್ತಿದ್ದವರು, 1832ರ ಸುಧಾರಣೆಯಿಂದ ತೃಪ್ತರಾಗುವಂತಿರಲಿಲ್ಲ. ಫ್ರಾನ್ಸ್ ಮಹಾಪಲ್ಲಟದಿಂದ ಕಲಿತಿದ್ದ ಮಂತ್ರಗಳನ್ನು ಹೇಳಿಕೊಳ್ಳುತ್ತಿದ್ದ ಸಾಧಾರಣ ಜನರಿಗೆ ವೋಟಿನ ಅಧಿಕಾರ ದೊರಕಲಿಲ್ಲ; ಪ್ರತಿನಿಧಿಗಳಾಗುವ ಅಧಿಕಾರ ಅದಕ್ಕೆ ಮೊದಲೇ ಇಲ್ಲ. ಲೋವಟ್ಟನು ಆ ಪತ್ರದಲ್ಲಿ ಆರಂಶಗಳನ್ನು ವಿವರಿಸಿ ಆ ಆರಂಶಗಳು ಆಚರಣೆಯಲ್ಲಿ ತೋರಿಕೊಳ್ಳುವವರೆಗೂ ಅವಿಶ್ರಾಂತರಾಗಿ ಸಭೆಗಳನ್ನು ಸೇರಿಸುತ್ತ ಪ್ರಚಾರಮಾಡುತ್ತ ಇರಬೇಕೆಂದು ಬೋಧಿಸಿದನು. ಸಮಸ್ತ ಪುರುಷರಿಗೂ ವೋಟಿನ ಅಧಿಕಾರ, ಬ್ಯಾಲಟ್ ರೀತಿಯ ವೋಟುದಾನ, ಸಮಾನವಾದ ವರಣ ಕ್ಷೇತ್ರಗಳ ನಿಷ್ಕರ್ಷೆ, ಪಾರ್ಲಿಮೆಂಟ್ ಸಭಿಕರಿಗೆ ಸಂಬಳ, ಅಲ್ಲಿಯ ಸಭಿಕರಾಗುವ ಅರ್ಹತೆಯ ವಿವರದಲ್ಲಿ ಆಸ್ತಿವಂತತನದ ವಿನಾಶ, ಮತ್ತು ವಾರ್ಷಿಕ ಚುನಾವಣೆಗಳು ನಡೆಯಬೇಕೆಂದು ಆ ಆರು ಅಂಶಗಳು.

ಆರಂಶ

ಲಂಡನ್ನಿನಲ್ಲಿ ಮೊದಲಾಯಿತು. ಇತರ ಊರುಗಳಲ್ಲಿಯೂ ಸನ್ನದುವಾದಿಗಳ ಸಂಘಗಳು ಹುಟ್ಟಿದವು. ಕೂಲಿ ಕಮ್ಮಿ, ಧಾರಣೆ ಹೆಚ್ಚು, ಕೆಲಸ ಕಷ್ಟ ಆಗಿದ್ದ ಕಾಲದಲ್ಲಿ ಜನರಿಗೆ ಈ ವಾದವೊಪ್ಪಿತು. ಸರ್ವಸಮತ್ವವಾದಿಗಳ ಚಳುವಳಿಯು ಇದಕ್ಕೆ ಪೋಷಕವಾಯಿತು. ಹೀಗೆ ಹುಟ್ಟಿಕೊಂಡ ಸಂಘಗಳೆಲ್ಲವೂ 1839ರಲ್ಲಿ ಬರ್ಮಿಂಘಂ ನಗರದಲ್ಲಿ ಮಹಾಸಮ್ಮೇಳನ ನಡೆಸಿ ಆ ಬಳಿಕ ಪಾರ್ಲಿಮೆಂಟಿಗೆ ಜನಬಾಹುಳ್ಯದ ಅರ್ಜಿಯನ್ನು ಅರ್ಪಿಸಬೇಕೆಂಬ ಕಾರ್ಯಕ್ರಮವನ್ನಿಟ್ಟುಕೊಂಡವು. ಈ ಚಳುವಳಿ ಸೌಮ್ಯವಾಗಿ ಮಾತ್ರ ನಡೆಯಲಿಲ್ಲ. ವಿಧೇಯರಾಗಿಯೇ ವರ್ತಿಸುತ್ತಲಿರಬೇಕೆಂದು ಲೋವಟ್ಟನು ಅಭಿಪ್ರಾಯಪಟ್ಟವನು. ಮತ್ತೊಬ್ಬ ನಾಯಕ **ಓಕಾನರ್** (O'Connor) ಎಂಬಾತನು ಬಲಪ್ರಯೋಗವು ನ್ಯಾಯವೆಂದು ಅಭಿಪ್ರಾಯಪಟ್ಟಿದ್ದನು. 1839ರಲ್ಲಿ ಸಿದ್ಧವಾದ ಅರ್ಜಿಯನ್ನು ತಿರಸ್ಕರಿಸಲಾಯಿತು. ಆಗ ಬರ್ಮಿಂಘಂ (Birmingham), ನ್ಯೂಪೋರ್ಟ್ (Newport) ಗಳಲ್ಲಿ ದಂಗೆಗಳೆದ್ದು ಹತ್ಯೆಗಳು ನಡೆದವು. ಅದರಿಂದ ಅದುವರೆಗೂ ಇದ್ದ ಒಳ್ಳೆಹೆಸರುಕೆಟ್ಟು ಸಂಘಗಳು ದುರ್ಬಲ

ಗೊಂಡವು. ಮೆಲ್ಬರ್ನ್ ಶ್ರೀಮಂತನ ಸರ್ಕಾರದವರು ಜನರನ್ನು ಹೆಚ್ಚಾಗಿ ರೇಗಿಸದಿದ್ದ ಉಪಾಯವಾಗಿ ದಂಗೆಯನ್ನಡಗಿಸಿದರು.

1848ರಲ್ಲಿ ಯೂರೋಪಿನಲ್ಲಿ ಪಲ್ಲಟಗಳು ಸಂಭವಿಸಿದವು. ಆಗ ಸನ್ನದುವಾದಿಗಳೂ ಚಟುವಟಿಕೆ ತೋರಿ ಪಾರ್ಲಿಮೆಂಟಿಗೆ ಜನಬಾಹುಳ್ಯದ ಅರ್ಜಿಯನ್ನು ಗುಂಪುಗೂಡಿ ಹೊತ್ತುಕೊಂಡುಬಂದು ಕೊಟ್ಟರು. ಆ ಅರ್ಜಿಯಲ್ಲಿ ಸುಳ್ಳು ಹೆಸರುಗಳಿದ್ದ ಅಂಶ ಬಯಲಾಯಿತು. ಹೀಗೆ ಕೆಟ್ಟ ಹೆಸರನ್ನು ಪಡೆದು ಸನ್ನದುವಾದಿಗಳು ಅಡಗಿದರು. ಪುನಃ ದಂಗೆಗಳಾಗಲಿ ದೊಂಬಿಗಳಾಗಲಿ ತೋರಲಿಲ್ಲ. ಕಾಲ ಕಾಲಕ್ಕೆ ಸುಧಾರಣೆಗಳು ರೂಪಗೊಂಡಂತೆ ಜನರ ಅತೃಪ್ತಿ ತಗ್ಗುತ್ತಿತ್ತು. 1848ರ ವೇಳೆಗೆ ಆರ್ಥಿಕವಾದ ದುಃಸ್ಥಿತಿಯೂ ತೊಲಗಿತ್ತು.

### ಧಾನ್ಯದ ಕಾನೂನುಗಳಿಗೆ ವಿರೋಧ

ಸನ್ನದುವಾದವೆಂಬುದು ಕೇವಲ ರಾಜಕೀಯಾಧಿಕಾರ ಪ್ರಾಪ್ತಿಯನ್ನೇ ಲಕ್ಷ್ಯವಾಗಿ ಪಡೆದಿತ್ತು. ಆ ಅಧಿಕಾರ ಪ್ರಾಪ್ತಿಯಿಂದ ಆರ್ಥಿಕದುರ್ದಶೆಯನ್ನು ನೀಗುವ ಆಸೆ ಅನೇಕರಿಗಿತ್ತು ; ಬೇರೆ ಕೆಲವರಿಗೆ ಫರಾನ್ಸೀ ಮಹಾಪಲ್ಲಟದ ಪ್ರಭಾವ ಮನಸ್ಸಿನಲ್ಲಿ ನೆಲೆಸಿತ್ತು. ಆರ್ಥಿಕ ದುರ್ದಶೆಗೆ ಕಾರಣಭೂತಗಳಾಗಿದ್ದ ಅಂಶಗಳನ್ನು ನಿವಾರಿಸಿಕೊಳ್ಳಲು ಪ್ರತ್ಯೇಕವಾದ ಪ್ರಯತ್ನಗಳೂ ನಡೆಯುತ್ತಿದ್ದವು. ಅಂತಹ ಅಂಶಗಳಲ್ಲಿ ಮುಖ್ಯವಾಗಿದ್ದುದು ವಿದೇಶೀ ಧಾನ್ಯದ ಆಮದನ್ನು ನಿರೋಧಿಸಲು ಏರ್ಪಾಟಾಗಿದ್ದ ಕಾನೂನುಗಳು.

ಮೂರನೆ ಜಾರ್ಜ್ ದೊರೆಯ ಕಾಲದಲ್ಲಿ ಪಾರ್ಲಿಮೆಂಟಿನವರು ಸ್ವದೇಶದಲ್ಲಿ ಬೆಳೆದ ಧಾನ್ಯ ಚೆನ್ನಾಗಿ ಮಾರಾಟವಾಗಿ ವ್ಯವಸಾಯಗಾರರಿಗೆ ಲಾಭವಾಗುವಂತೆ ಏರ್ಪಡಿಸಲು ಮನಮಾಡಿ ಗೋಧಿಯ ಬೆಲೆ ಬಹಳವಾಗಿ ಏರುವತನಕ ಪರದೇಶೀ ಗೋಧಿಯನ್ನು ದೇಶದೊಳಕ್ಕೆ ಬಿಡಕೂಡದೆಂದು ಕಾನೂನು ಮಾಡಿದ್ದರು. ನಪೋಲಿಯನ್ನೊಡನೆ ಯುದ್ಧ ನಡೆದ ಆಪತ್ಕಾಲ ಕಳೆದ ತರುವಾಯವೂ ಆ ಕಾನೂನುಗಳು ಆಚರಣೆಯಲ್ಲಿದ್ದುದರಿಂದ ಧಾನ್ಯದ ಬೆಲೆ ಅತಿಯಾಗಿಯೇ ಇತ್ತು; ಧಾನ್ಯ ಮಾರುವವರಿಗೆ ಒಳ್ಳೆಯದಾದರೂ ಕೊಳ್ಳುವವರಿಗೆ ಕಷ್ಟವಾಗಿತ್ತು. ತತ್ರಾಪಿ ಕೂಲಿನಾಲಿ ಮಾಡಿ ಜೀವಿಸುತ್ತಿದ್ದ ಜನರಿಗೆ ಅತಿ ಕಷ್ಟವಾಗಿತ್ತು. ಕೈಗಾರಿಕೆ

**ವಾದ ಪ್ರತಿವಾದ**

ಗಳಲ್ಲಿ ನಿರತರಾಗಿದ್ದವರು ಆ ಕಾನೂನುಗಳು ದುಷ್ಟವೆಂದೂ ಬಡವರ ಕಷ್ಟದಿಂದ ಜಮೀನ್ದಾರರೂ ರೈತರೂ ಪುಷ್ಟರಾಗತಕ್ಕ ಅನ್ಯಾಯಕ್ಕೆ ಕಾರಣವೆಂದೂ ಹೇಳತಕ್ಕವರಾದರು. ಜಮೀನ್ದಾರಪಕ್ಷದವರು ಕಾರ್ಖಾನೆಗಳ ಮಾಲೀಕರನ್ನು ನಿಂದಿಸುತ್ತ ಕೂಲಿದರಗಳನ್ನು ಹೆಚ್ಚಿಸಲಿಷ್ಟವಿಲ್ಲದೆ ಕೈಗಾರಿಕೆಗಳ ಪ್ರಮುಖರು ಆ ರೀತಿ ವಾದಿಸುತ್ತಿರುವರೆಂದೂ ವಿದೇಶೀಧಾನ್ಯ ದೇಶದಲ್ಲಿ

ತುಂಬಿದರೆ ಸ್ವದೇಶೀ ಧಾನ್ಯ ಹಿಂದೆಬಿದ್ದು ದೇಶಕ್ಕೆ ತಕ್ಕಷ್ಟು ಧಾನ್ಯೋತ್ಪತ್ತಿ ದೇಶದಲ್ಲಾಗದೆ ಅನ್ಯದೇಶಗಳಮೇಲೆಯೇ ಅವಲಂಬಿಸುವ ದುಃಸ್ಥಿತಿ ಬರುವುದೆಂದೂ ಪ್ರತಿವಾದವನ್ನು ಹೂಡಿದರು. ಪಾರ್ಲಿಮೆಂಟಿನಲ್ಲಿ 1832ರ ಮುಂಚೆಯಂತೂ ಎಲ್ಲರೂ ಜಮೀನ್ದಾರ ಪಕ್ಷದವರೇ; ಆ ತರುವಾಯವೇ ಕೈಗಾರಿಕೆ ವ್ಯಾಪಾರಗಳ ಪ್ರಮುಖರಿಗೆ ಸಭೆಯಲ್ಲಿ ಅವಕಾಶ ದೊರಕಿದ್ದು. ಆಗಲೇ ಈ ಬಗೆಯ ವಾದ ಪ್ರತಿವಾದಗಳೆದ್ದವು.

ವಾಸ್ತವವಾಗಿ ಈ ವಿವಾದದಲ್ಲಿ ದೊಡ್ಡ ವಿಚಾರ ಅಡಗಿತ್ತು. ಸ್ವದೇಶದ ಉದ್ಯೋಗ ಕೈಗಾರಿಕೆಗಳಿಗೆ ಸರ್ಕಾರವು ಪ್ರೋತ್ಸಾಹ ಕೊಡುತ್ತ **ರಕ್ಷಣೆಯ ನೀತಿ** (Protection)ಯನ್ನನುಸರಿಸಿ ಪರದೇಶಗಳೊಡನೆ ನಡೆಯುವ ವ್ಯಾಪಾರದಲ್ಲಿ ಸುಂಕಗಳನ್ನು ಗೊತ್ತುಮಾಡುತ್ತಿರಬೇಕೇ? ಇಲ್ಲದೆ ಜಗತ್ತೆಲ್ಲ ಒಂದೇ ಎಂದು ಭಾವಿಸಿ ಯಾವ ಸುಂಕವೂ ಇಲ್ಲದೆ **ನಿರಾತಂಕ**ವಾಗಿ **ವ್ಯಾಪಾರ** (Free Trade) ನಡೆಯಲು ದಾರಿಬಿಟ್ಟು ಪೋಟಾಪೋಟಿಯಿಂದ ಗೊತ್ತಾದ ಬೆಲೆಗೆ ಪದಾರ್ಥಗಳ ಮಾರಾಟ ನಡೆಯುವಂತೆ ವರ್ತಿಸಬೇಕೇ? ಅರ್ಥಶಾಸ್ತ್ರದಲ್ಲಿ ಇದೊಂದು ದೊಡ್ಡ ವಿಚಾರವೆನಿಸಿತು. ಜಗತ್ತಿನ ಕಾರ್ಖಾನೆಯಾಗಿ ಪರಿಣಮಿಸಿದ ಇಂಗ್ಲಂಡಿಗೆ ಆ ಕಾಲದಲ್ಲಿ ನಿರಾತಂಕ ವ್ಯಾಪಾರದ ವಾದವೇ ಒಪ್ಪುವಂತೆ ಅನೇಕರಿಗೆ ಕಂಡುಬಂತು.

1838ರಲ್ಲಿ ಧಾನ್ಯದ ಕಾನೂನುಗಳನ್ನು ವಿರೋಧಿಸಲು ಒಂದು **ಸಂಘ**ವೇರ್ಪಟ್ಟಿತು. **ರಿಚರ್ಡ್ ಕಾಬ್ಡೆನ್** (Richard Cobden) ಮತ್ತು **ಜಾನ್ ಬ್ರೈಟ್** (John Bright) ಎಂಬವರು ಆ ಸಂಘದ ನಾಯಕರಾಗಿ ಪ್ರಚಾರವನ್ನು ನಡೆಸಿದರು. ಮೆಲ್ಬರ್ನ್ ಶ್ರೀಮಂತನು ನಿವೃತ್ತನಾಗಿ ಕನ್ಸರ್ವೆಟಿವ್ ನಾಯಕ **ಸರ್ ರಾಬರ್ಟ್ ಪೀಲ್** (Sir Robert Peel) ಮುಖ್ಯಮಂತ್ರಿಯಾದವೇಳೆಗೆ ಈ ಸಂಘದ ಪ್ರಚಾರ ಪ್ರಬಲವಾಗಿ ನಡೆಯುತ್ತಿತ್ತು.

### ಸರ್ ರಾಬರ್ಟ್ ಪೀಲ್

ಲಾಂಕಾಷೈರ್ ಜಿಲ್ಲೆಯಲ್ಲಿ ಹತ್ತಿಯ ಗಿರಣಿ ಮಾಲೀಕರಲ್ಲೊಬ್ಬಾತನ ಮಗನಾಗಿ ಹುಟ್ಟಿದವನು ರಾಬರ್ಟ್ ಪೀಲ್. ಧನವಂತನಾದ ತಂದೆ ಮಗನಿಗೆ ಒಳ್ಳೆ ಶಿಕ್ಷಣವನ್ನು ಕೊಡಿಸಿ ವಿದ್ಯಾಭ್ಯಾಸ ಮುಗಿದ ಕೂಡಲೆ ಹಣವನ್ನು ಚಲ್ಲಿ ಕಾಮನ್ಸ್ ಸಭೆಯಲ್ಲಿ ಸದಸ್ಯನನ್ನಾಗಿ ಮಾಡಿದನು. ಸ್ವಲ್ಪಕಾಲದಲ್ಲಿಯೇ **ಐರ್ಲಂಡಿನ ಕಾರ್ಯದರ್ಶಿ** ಪದವಿಯನ್ನು ಪಡೆದು ಪೀಲ್ 1821ರಲ್ಲಿ **ಹೋಂ ಸೆಕ್ರೆಟರಿ** (ಒಳನಾಡಿನ ಕಾರ್ಯದರ್ಶಿ)ಯೆಂಬ ಸಹಾಯಮಂತ್ರಿಯ ಸ್ಥಾನವನ್ನು ಹೊಂದಿದನು. ಅತಿಕ್ರೂರವಾಗಿದ್ದ ದಂಡವಿಧಿಗಳನ್ನು ತಿದ್ದುಪಡಿ ಮಾಡಿಸಿ ಪೋಲೀಸ್‌ಪಡೆಗಳನ್ನು ಸುವ್ಯವಸ್ಥೆಗೊಳಿಸಿದ ಅಂಶವನ್ನು ಆಗಲೆ ಕಂಡೆವು. ಟೋರಿಪಕ್ಷದಲ್ಲಿದ್ದಾಗ್ಯೂ ಪೀಲ್ ಮೂರ್ಖನಾಗಿರದೆ ಸೌಮ್ಯನಾಗಿ ತರುಣ ಟೋರಿಗುಂಪಿಗೆ ನಾಯಕನಾಗಿದ್ದನು.

ಪಾರ್ಲಿಮೆಂಟ್‌ಸುಧಾರಣೆಕಾನೂನು ನಡೆದ ಸಂದರ್ಭದಲ್ಲಿ ಟೋರಿಗೊಡ್ಡು ಗಳ ಪಕ್ಷ ಧ್ವಂಸವಾಯಿತು. ಪೀಲ್ ಆ ಸಮಯದಲ್ಲಿ ಒಂದುಪಾರ್ಟಿಕಟ್ಟಿ ಅದಕ್ಕೆ **ಕನ್ಸರ್ವೇಟಿವ್** ಎಂಬ ಹೆಸರನ್ನಿಟ್ಟನು. ದೋಷಗಳನ್ನು ತಿದ್ದುಪಡಿಗೊಳಿಸಿದರೂ ಪೂರ್ವದಿಂದ ನಡೆದುಬಂದಿದ್ದ ಸಂಸ್ಥೆಗಳನ್ನೂ ಪದ್ಧತಿಗಳನ್ನೂ ಕಾಪಾಡಬೇಕೆಂಬುದು ಆ ಪಕ್ಷದ ಉದ್ದೇಶ. 1834ರಲ್ಲಿ ನಾಲ್ಕನೆ ವಿಲಿಯಂ ವ್ಹಿಗ್ಗರಲ್ಲಿ ಬೇಸರಗೊಂಡಾಗ ಪೀಲನನ್ನೇ ಮಂತ್ರಿಯಾಗಿಟ್ಟನು. ಆದರೆ ಪೀಲನ ಪಕ್ಷಕ್ಕೆ ಸಾಕಾದಷ್ಟು ಬೆಂಬಲ ವಿರಲಿಲ್ಲವಾದುದರಿಂದ ಆತನು ಅಧಿಕಾರದಲ್ಲಿ ಭದ್ರವಾಗಿರಲಾಗಲಿಲ್ಲ. 1839ರಲ್ಲಿ ಮೆಲ್ಬರ್ನ್ ಶ್ರೀಮಂತನಪಕ್ಷ ದುರ್ಬಲವಾಗಿಯೂ ಪೀಲನಪಕ್ಷ ಪ್ರಬಲವಾಗಿಯೂ ಕಂಡಿತು. ಆಗ ರಾಣಿಯು ಇಷ್ಟವಿಲ್ಲದಿದ್ದರೂ ಪೀಲನನ್ನು ಮಂತ್ರಿಯಾಗೆಂದು ಕರೆಯಲು ಪೀಲ್ ಒಂದು ವಿಷಯದಲ್ಲಿ ಹಟ ತೊಟ್ಟನು. ರಾಣಿಗೆ ಗೆಳತಿಯರಾಗಿದ್ದ ವ್ಹಿಗ್‌ಪಕ್ಷದ ಮಹಿಳೆಯರನ್ನು ಕಳುಹಿಸಿಬಿಟ್ಟು ತನ್ನ ಪಕ್ಷದ ಗೆಳತಿಯರನ್ನು ಗೊತ್ತು ಮಾಡಿಕೊಳ್ಳುವವರೆಗೂ ಅಧಿಕಾರ ಸ್ವೀಕಾರಮಾಡುವುದಿಲ್ಲವೆಂದನು. ಆದ್ದರಿಂದ ಮೆಲ್ಬರ್ನ್ ಶ್ರೀಮಂತನೇ 1841ರವರೆಗೆ ಮಂತ್ರಿಯಾಗಿರಬೇಕಾಗಿತ್ತು. ಆ ವೇಳೆಗೆ ರಾಣಿಗೆ ಮದುವೆಯಾಗಿತ್ತು; ಗೆಳತಿಯರ ಪ್ರಭಾವ ತಗ್ಗಿದಂತಿತ್ತು. ಅಲ್ಲದೆ ಕನ್ಸರ್ವೇಟಿವ್‌ಪಕ್ಷ ಪ್ರಬಲವಾಗಿತ್ತು. 1841ರಲ್ಲಿ ಪೀಲ್ ಪ್ರಧಾನಪದವಿಯನ್ನು ಸ್ವೀಕರಿಸಿದನು.

ಕನ್ಸರ್ವೇಟಿವ್‌ಪಕ್ಷದಲ್ಲಿ ಜಮೀನ್ದಾರರೂ ಇದ್ದರು, ಕೈಗಾರಿಕೆಯ ಧನವಂತರೂ ಇದ್ದರು. ಎರಡು ಗುಂಪುಗಳಿಗೂ ಪೀಲ್ ನಾಯಕನಾಗಿರಬೇಕಾಗಿತ್ತು. ಕನ್ಸರ್ವೇಟಿವ್ ಆದುದರಿಂದ ತಾನು ಸುಧಾರಕನಲ್ಲವೆಂದು ಹೇಳುತ್ತಿದ್ದರೂ ಅವಶ್ಯವೆಂದು ಕಂಡುಬಂದ ತಿದ್ದುಪಡಿಗಳನ್ನು ಸಮಯದಲ್ಲಿ ನಡೆಸುವ ವಿವೇಚನೆ ಆತನಲ್ಲಿತ್ತು. ಪ್ರಧಾನಮಂತ್ರಿಯೆನಿಸಿದಮೇಲೆ ಹಿಂದೆ ಹಸ್ಕಿಸನ್ ಮೊದಲಿಟ್ಟ ಕೆಲಸವನ್ನು ಮುಂದುವರಿಸಿ ನಿಂತುಹೋದ ಸುಂಕಗಳ ಆದಾಯಕ್ಕೆ ಬದಲಾಗಿ ವರಮಾನದ ತೆರಿಗೆ(Income-tax)ಯನ್ನು ಮೊದಲಿಟ್ಟನು. ಇಂಗ್ಲಂಡಿನ ಬ್ಯಾಂಕಿನವರು ನೋಟುಗಳನ್ನೆಷ್ಟು ಪ್ರಮಾಣದಲ್ಲಿ ಹೊರಡಿಸಬಹುದೆಂದು ನಿಷ್ಕರ್ಷೆಮಾಡಿದ ಕಾನೂನನ್ನು 1844ರಲ್ಲಿ ಮಾಡಿಸಿದನು. ಆ ಕಾನೂನಿನ ಪರಿಣಾಮವಾಗಿ ಬ್ಯಾಂಕುಗಳ ಮತ್ತು ಚಳುವಳಿ ಹಣದ ವ್ಯವಸ್ಥೆ ಉತ್ತಮಗೊಂಡಿತು. ಈತನೇ ಧಾನ್ಯಸಂಬಂಧವಾದ ಕಾನೂನನ್ನು ಸ್ವಲ್ಪಕಾಲದಲ್ಲಿ ರದ್ದುಗೊಳಿಸಬೇಕಾಗಿಬಂತು.

**ಸುಧಾರಣೆಗಳು**

1834ರಲ್ಲಿ ನಡೆದಿದ್ದ ನಿರ್ಗತಿಕರ ಶಾಸನದ ಆಚರಣೆಯಲ್ಲಿ ಕಷ್ಟಪರಿಹಾರದ ಆಸೆಯಿಂದ ಪೋಷಣಾಲಯಗಳಿಗೆ ಬಂದ ವೃಥಕಾಯರಿಗೆ ಮತ್ತಷ್ಟು ಕಷ್ಟವೇ ಆಗಿತ್ತು. ಸನ್ನದುವಾದಿಗಳ ಪ್ರಚಾರವೂ ಧಾನ್ಯದ ಕಾನೂನು ವಿರೋಧಿ ಸಂಘದವರ

ಪ್ರಚಾರವೂ ನಡೆದಂತೆ ಜನರಲ್ಲಿ ಅಸಮಾಧಾನವೂ ಹೆಚ್ಚುತ್ತಿತ್ತು. ಕೂಲಿಯಿಂದ ಜೀವಿಸುತ್ತಿದ್ದ ಜನರು ಪಡುತ್ತಿದ್ದ ಕಷ್ಟಗಳಿಗೆ ಕೊನೆಮೊದಲಿಲ್ಲದಂತಿತ್ತು. ಗೋಧಿಯ ಬೆಲೆ ಅತಿಯಾಗಿದ್ದುದು ದೊಡ್ಡ ಕಾರಣವಾಗಿತ್ತು. ಕೈಗಾರಿಕೆ ಕಾರ್ಖಾನೆಗಳವರು ಆ ಬೆಲೆ ತಗ್ಗುವಂತೆ ನೆರವೇರಿಸಲು ಹಿಂದಿನ ಕಾನೂನನ್ನು ರದ್ದುಮಾಡಬೇಕೆಂದು ಅಭಿಪ್ರಾಯಪಡುತ್ತಿದ್ದರು. ಪೀಲ್ ಆ ಸಂಗಡಕ್ಕೆ ಸೇರಿದವನಾಗಿದ್ದರೂ ಸಂಪ್ರದಾಯವಾಗಿ ಬಂದುದನ್ನು ಉಳಿಸಿಕೊಳ್ಳುವುದು ತನ್ನ ನೀತಿಯೆಂದು ಹೇಳುತ್ತ ರದ್ದುಮಾಡಿಸುವ ಪ್ರಯತ್ನಮಾಡದೆಯೆ ಇದ್ದನು. 1845ರಲ್ಲಿ ಇಂಗ್ಲಂಡಿನಲ್ಲಿ ಗೋಧಿಯ ಬೆಳೆ ಕೆಟ್ಟಿತು. ಐರ್ಲಂಡಿನಲ್ಲಿ ಬಡಜನರಿಗೆ ಏಕಮಾತ್ರಾಹಾರವಸ್ತುವಾಗಿದ್ದ ಆಲೂಗಡ್ಡೆಯ ಬೆಳೆ ನಾಶವಾಗಿ ಕ್ಷಾಮ ತಲೆ ಹಾಕಿತು. ಆಗ ಗತ್ಯಂತರವಿಲ್ಲದೆ ಪೀಲ್ ಹಿಂದಿನ ಕಾನೂನನ್ನು ರದ್ದುಗೊಳಿಸುವ ಯೋಚನೆ ಮಾಡಿದನು. ಕನ್ಸರ್ವೆಟಿವ್‌ಪಾರ್ಟಿಯ ನಾಯಕರನೇಕರು ಅದನ್ನೊಪ್ಪಲಿಲ್ಲ. ಪರಿಣಾಮವಾಗಿ ಪೀಲ್ ಮಂತ್ರಿಪದವಿಗೆ ರಾಜಿನಾಮೆ ಕೊಟ್ಟನು. ಆ ಸಮಯದಲ್ಲಿ ಅಧಿಕಾರ ಸ್ವೀಕಾರಮಾಡಲು ವ್ಹಿಗ್‌ಪಕ್ಷದವರಿಗೂ ಅನುಕೂಲವಿರಲಿಲ್ಲ. ಆದುದರಿಂದ 1846ರಲ್ಲಿ ಪೀಲ್ ಪುನಃ ಅಧಿಕಾರ ವಹಿಸಿಕೊಂಡು ವಿದೇಶೀ ಧಾನ್ಯನಿರೋಧದ ಕಾನೂನನ್ನು ರದ್ದುಮಾಡಿಸಿದನು. ಹಾಗೆ ನಡೆಸದಿದ್ದರೆ ದೇಶದಲ್ಲಿ ಜನರ ದಂಗೆಯೆದ್ದು ಅನರ್ಥಗಳಾಗಬಹುದಾಗಿದ್ದ ಅಂಶ ಎಲ್ಲರಿಗೂ ಮನವರಿಕೆಯಾಗಿದ್ದುದರಿಂದ ಪಾರ್ಲಿಮೆಂಟಿನಲ್ಲಿ ಕನ್ಸರ್ವೆಟಿವ್ ಜಮೀನ್ದಾರರ ಗುಂಪಿನವರು ಹೊರತು ಉಳಿದವರೆಲ್ಲರೂ ಅದನ್ನೊಪ್ಪಿದರು. ಆ ಗುಂಪಿನವರು ಮಾತ್ರ **ಲಾರ್ಡ್ ಜಾರ್ಜ್ ಬೆಂಟಿಂಕ್** (Lord George Bentinck) ಮತ್ತು **ಬೆಂಜಮಿನ್ ಡಿಸ್ರೇಲಿ** (Benjamin Disraeli) ಎಂಬವರನ್ನು ಮುಂದಿಟ್ಟುಕೊಂಡು ಪೀಲನಲ್ಲಿ ದ್ರೋಹವನ್ನಾರೋಪಿಸಿದರು.

**ಕಾನೂನಿನ ರದ್ದು**

ಅಂದಿನಿಂದ ಇಂಗ್ಲಂಡಿನಲ್ಲಿ ನಿರಾತಂಕವ್ಯಾಪಾರದ (Free Trade) ನೀತಿ ನೆಲೆಸಿತು. ಕೈಗಾರಿಕೆಯನ್ನೇ ಮುಖ್ಯೋದ್ಯೋಗವೆಂದು ಭಾವಿಸಬೇಕಾಯಿತು. ಅದರಿಂದ ಇಂಗ್ಲಂಡಿನ ವ್ಯಾಪಾರ ಹೆಚ್ಚಿ ಐಶ್ವರ್ಯ ವೃದ್ಧಿಯಾಯಿತು. ಹತ್ತಿಪ್ಪತ್ತು ವರ್ಷಗಳು ಕಳೆದಬಳಿಕ ಇಂಗ್ಲಿಷ್ ಗೋಧಿಗೂ ಇತರದೇಶಗಳ ಗೋಧಿಗೂ ವ್ಯಾಪಾರದಲ್ಲಿ ಪೈಪೋಟಿ ಮೊದಲಾಯಿತು.

ಐರ್ಲಂಡಿನಲ್ಲಿ ನಡೆದ ಘಟನೆಗಳನ್ನು ಬೇರೆಡೆಯಲ್ಲಿ ಕಾಣುವೆವು. ಅಲ್ಲಿಯ ಆಡಳಿತದಲ್ಲಿಯೂ ಪೀಲ್ ಕೆಲವು ಮುಖ್ಯವಾದ ಏರ್ಪಾಟುಗಳನ್ನು ನಡೆಸಿದನು. 1846ರಲ್ಲಿ ಆತನ ಯೋಚನೆಯನ್ನೆಲ್ಲರೂ ಒಪ್ಪದಿರಲು ಪೀಲ್ ರಾಜಿನಾಮೆಕೊಟ್ಟನು. ಆತರುವಾಯ 1850ರ ವರೆಗೂ ಜೀವಂತನಾಗಿದ್ದು ತನ್ನದೇ ಒಂದು ಪಕ್ಷವನ್ನು ನಡೆಸುತ್ತಿದ್ದನು.

ಕನ್ಸರ್ವೆಟಿವ್ ಪಕ್ಷವನ್ನು ಉದ್ಧರಿಸಿದವನಾದರೂ ಪೀಲ್ ಯಾವ ಸುಧಾರಣೆಗಳನ್ನೂ ನಡೆಸಲಾಗದೆಂಬ ಮೂರ್ಖತೆಯನ್ನು ತೋರಲಿಲ್ಲ. ವಿಕ್ಟೋರಿಯ ಆಳಿಕೆಯಲ್ಲಿ ಆತನೇ ಮೊದಲು ಪ್ರಸಿದ್ಧಿಗೇರಿದ ಪ್ರಧಾನ. ಕನ್ಸರ್ವೆಟಿವ್ ಪಾರ್ಟಿಯನ್ನು ಉದ್ಧರಿಸಿ ಸಮಯಕ್ಕೆ ತಕ್ಕ ಧಾರಾಳತೆಯನ್ನೂ ವಹಿಸಿದ್ದ ಆತನ ಅನುಯಾಯಿಗಳು ಆ ಪಾರ್ಟಿಯಲ್ಲಿ ಪೀಲೈಟ (Peelites)ರೆಂಬ ಗುಂಪಿನವರಾದರು. ಆ ಗುಂಪಿನಲ್ಲಿ **ಅಬರ್ಡೀನ್** ಶ್ರೀಮಂತನೂ (Lord Aberdeen) **ಗ್ಲಾಡ್‌ಸ್ಟನ್** (Gladstone) ಎಂಬಾತನೂ ಮುಖ್ಯರು. ಅವರ ವಿರೋಧಿಗಳಾಗಿ ನಿರಾತಂಕವ್ಯಾಪಾರವನ್ನೊಲ್ಲದೆ ಸುಂಕಗಳಿರತಕ್ಕವೆಂದು ರಕ್ಷಣೆಯನೀತಿಯನ್ನು ನಂಬಿದ್ದ ಕನ್ಸರ್ವೆಟಿವ್ ಗುಂಪಿನಲ್ಲಿ **ಬೆಂಟಿಂಕ್** (Bentinck) ಮತ್ತು **ಡಿಸ್ರೇಲಿ** (Disraeli) ಎಂಬವರು ಪ್ರಸಿದ್ಧರು. ಈಯೆರಡು ಗುಂಪುಗಳ ಕಿತ್ತಾಟದ ಮಧ್ಯೆ ಲಿಬರಲ್ ಪಕ್ಷದವರಿಗೆ ಅವಕಾಶವಾಯಿತು. ಆ ಪಕ್ಷದಲ್ಲಿ **ಲಾರ್ಡ್ ಜಾರ್ಜ ರಸ್ಸೆಲ್** (Lord John Russell) ಮತ್ತು **ಲಾರ್ಡ್ ಪಾಮರ್ಸ್ಟನ್** (Lord Palmerston) ನಾಯಕರೆನಿಸಿದರು. ಲಿಬರಲ್ ಪಕ್ಷದವರಿಗೆ 1846ರಲ್ಲಿ ಅಧಿಕಾರಬಂತು. 1846ರಿಂದ 1852ರ ವರೆಗೆ ರಸ್ಸೆಲ್ ಪಾಮರ್ಸ್ಟನ್ ಶ್ರೀಮಂತರುಗಳು ಮಂತ್ರಿಮಂಡಲಿಯನ್ನು ನಡೆಸಿದರು. ಅವರಿಬ್ಬರಿಗೂ ಮೈತ್ರಿಯಿಲ್ಲದುದರಿಂದ ಲಿಬರಲ್ ಪಾರ್ಟಿ ಬಲಗೊಳ್ಳದೆ 1852ರಲ್ಲಿ ಅಧಿಕಾರವನ್ನು ನೀಗಬೇಕಾಯಿತು.

**ಮೂರುಗುಂಪು**

ರಕ್ಷಣಾವಾದಿಗಳಿಗೆ ಆಗ ಅವಕಾಶ ದೊರಕಿತು. **ಡಾರ್ಬಿ** (Derby) **ಶ್ರೀಮಂತನೂ** ಡಿಸ್ರೇಲಿಯೂ ಆ ಗುಂಪಿನ ಪರವಾಗಿ ಅಧಿಕಾರವಹಿಸಿ ಪೀಲೈಟರನ್ನೂ ವಿಗ್ಗರನ್ನೂ ಎದುರಿಸಲಾರದೆ ಒಂದು ವರ್ಷದೊಳಗಾಗಿ ನಿವೃತ್ತರಾದರು. ಪೀಲೈಟರೂ ವಿಗ್ಗರೂ ಜೊತೆಗೂಡಿ **ಅಬರ್ಡೀನ್ ಶ್ರೀಮಂತನನ್ನು** ಪ್ರಧಾನನನ್ನಾಗಿ ಮಾಡಿಕೊಂಡು 1852ರಿಂದ 1855ರ ವರೆಗೆ ಅಧಿಕಾರವನ್ನನುಭವಿಸಿದರು. ಆ ಕಾಲದಲ್ಲಿಯೇ ಕ್ರಿಮಿಯ ಯುದ್ಧನಡೆಯಿತು. ಯುದ್ಧವನ್ನು ಕೀರ್ತಿದಾಯಕವಾಗಿ ನಡೆಸಲಿಲ್ಲವೆಂದು ಈ ಮಂತ್ರಿಕೂಟದಲ್ಲಿ ಜನರ ಅಸಮಾಧಾನ ಹೆಚ್ಚಿತು. 1855ರಲ್ಲಿ ವಿಗ್ಗರ ಪಾಲಿಗೆ ಅಧಿಕಾರಬರುವಂತಾಯಿತು. **ಪಾಮರ್ಸ್ಟನ್ ಶ್ರೀಮಂತನು** ಪ್ರಧಾನನಾಗಿ ಯುದ್ಧವನ್ನು ವಿತರಣೆಯಿಂದ ನಡೆಸಿದನು. ಆದರೆ ತನ್ನ ದರ್ಪದಿಂದ ಜೊತೆಮಂತ್ರಿ ರಸ್ಸೆಲ್ಲನೊಡನೆ ಜಗಳಕಿತ್ತು ಯಾವುದೋ ನೆಪದಿಂದ 1857ರಲ್ಲಿ ಚೀಣಾಯುದ್ಧವನ್ನು ಕೆರಳಿಸಿದನು. ಫ್ರಾನ್ಸಿನ ಮೂರನೆ ನಪೋಲಿಯನ್ನನ್ನು ಸಂತೋಷಗೊಳಿಸಲು ಯಾವುದೋ ಒಂದು ಶಾಸನರಚನೆಗೆ ಯತ್ನಿಸಿ ವಿಗ್ಗರ ಒಂದು ಗುಂಪನ್ನೂ ಪೀಲೈಟರನ್ನೂ ರಕ್ಷಣಾವಾದಿಗಳನ್ನೂ ರೇಗಿಸಿದನು. ಆಗ ಡಾರ್ಬಿ ಡಿಸ್ರೇಲಿಗಳಿಬ್ಬರೂ ಪುನಃ ಮಂತ್ರಿಗಳಾಗಿ ಒಂದು ವರ್ಷಕೂಡ ಅಧಿಕಾರದಲ್ಲಿರಲಾರದೆ

ಹೋದರು. 1859ರಲ್ಲಿ ಪುನಃ ಪಾಮರ್ಸ್ಟನ್ನನೇ ಪ್ರಧಾನಮಂತ್ರಿಯಾಗಿ ಸಾಯುವ ತನಕ 1865 ರವರೆಗೆ ಅಧಿಕಾರವನ್ನು ಚಲಾಯಿಸಿದನು.

ವಿಕ್ಟೋರಿಯರಾಣಿಯ ಆಳಿಕೆಯಲ್ಲಿ 1837ರಿಂದ 1867 ರವರೆಗೆ ಮೊದಲನೆ ಭಾಗವೆಂದಿಟ್ಟುಕೊಳ್ಳಬಹುದು. ಆ ಕಾಲದಲ್ಲಿ ಕನ್ಸರ್ವೆಟಿವ್ ಪಂಗಡದ ಸರ್ ರಾಬರ್ಟ್‌ಪೀಲ್ ವ್ಹಿಗ್‌ಪಂಗಡದ ಪಾಮರ್ಸ್ಟನ್ ಶ್ರೀಮಂತ ಪ್ರಮುಖರೆನಿಸಿದವರು. ಒಳನಾಡಿನ ಆಡಳಿತದಲ್ಲಿ ಅತ್ಯವಶ್ಯವೂ ಅವಿಲಂಬ್ಯವೂ ಆದ ಸುಧಾರಣೆಗಳನ್ನು ಮಾತ್ರ ನಡೆಸುತ್ತ ಪಲ್ಲಟಗಳಿಗೆ ಅವಕಾಶ ಕೊಡದೆ ಇಂಗ್ಲಂಡಿನ ರೂಪವನ್ನು ಪೀಲ್ ಉಳಿಸಿದನು. ನಪೋಲಿಯನ್ನನ್ನು ಸೋಲಿಸಿದ ಕೀರ್ತಿಯನ್ನು ಗಂಟಾಗಿ ಕಟ್ಟಿಕೊಂಡು ಯೂರೋಪಿನ ರಾಷ್ಟ್ರಗಳ ಮಧ್ಯ ಬ್ರಿಟನ್ನಿಗೆ ಅಗ್ರಮರ್ಯಾದೆಯನ್ನು ಪಾಮರ್ಸ್ಟನ್ ಸಂಪಾದಿಸಿದನು. ಆ ಶ್ರೀಮಂತನು ಕಾಲವಾದ ತರುವಾಯ ಮಂತ್ರಿಮಂಡಲಿಯಲ್ಲಿಯೂ ಪಾರ್ಟಿಗಳಲ್ಲಿಯೂ ಸ್ಥಿರವಾಗಿ ನಾಯಕರೂ ಪ್ರತಿ ನಾಯಕರೂ ತೋರಿಕೊಳ್ಳಲು ಕೆಲವರ್ಷಗಳು ಹಿಡಿದವು. ಆ ಸಮಯದಲ್ಲಿಯೇ 1867ರಲ್ಲಿ ಎರಡನೆ ಸುಧಾರಣೆ ಶಾಸನ ನಡೆದು ಪಾರ್ಲಿಮೆಂಟಿನ ರೂಪ ಮತ್ತೊಮ್ಮೆ ಸಂಸ್ಕಾರಗೊಂಡಿತು.

### ಪಾರ್ಲಿಮೆಂಟಿನ 2ನೆ ಸುಧಾರಣೆ

1832ರಲ್ಲಿ ನಡೆದ ಸುಧಾರಣೆಯಿಂದ ಜಿಲ್ಲೆಗಳಲ್ಲಿಯೂ ಪಟ್ಟಣಗಳಲ್ಲಿಯೂ ಆಸ್ತಿವಂತರಾಗಿದ್ದವರಿಗೆ ವೋಟಿನ ಅಧಿಕಾರ ದೊರಕಿತ್ತು. ಸುಧಾರಣೆಗಳು ಬೇಕೆಂದು ಚಳುವಳಿನಡೆಸಿದ್ದ ಕಾಯಕವರ್ಗದವರಿಗೆ ಆಶಾಭಂಗವಾಗಿತ್ತು. ಆದುದರಿಂದಲೆ ಆ ವರ್ಗದವರು ಸನ್ನದುವಾದಿಗಳ ಗುಂಪಿನಲ್ಲಿ ಸೇರಿ ಹೊಸ ಚಳುವಳಿ ನಡೆಸಿದ್ದರು. ಆ ಚಳುವಳಿಯು ದುರ್ಬಲಗೊಂಡಿದ್ದರೂ ಜನರ ಅಸಮಾಧಾನವಿದ್ದೇ ಇದ್ದಿತು. ಧಾನ್ಯದ ಕಾನೂನುಗಳು ರದ್ದಾದ ತರುವಾಯ ಆ ಸಂದರ್ಭದಲ್ಲಿ ಪ್ರಸಿದ್ಧಿ ಪಡೆದಿದ್ದ **ಜಾನ್ ಬ್ರೈಟ್** (John Bright) ಕಾಯಕವರ್ಗದವರ ಪರವಾಗಿ ಸುಧಾರಣೆಯಾಗಬೇಕೆಂದು ಪ್ರಚಾರಕ್ಕೆ ತೊಡಗಿದನು. ರ್‍ಯಾಡಿಕಲ್ ಪಕ್ಷದವರು ಹೊಸ ಸುಧಾರಣೆಗಳಾಗಲು ಅನುಕೂಲರಾಗಿದ್ದರು; ಆದರೆ ಆ ಪಕ್ಷದವರಿಗೆ ಸಾಕಾದಷ್ಟು ಸಂಖ್ಯಾಬಲವಿರಲಿಲ್ಲ. ವ್ಹಿಗ್ ನಾಯಕನಾದ ಪಾಮರ್ಸ್ಟನ್ ರಾಜಕೀಯ ಸುಧಾರಣೆಗಳಿಗೆ ಅವಕಾಶವನ್ನು ಕೊಡಲಿಲ್ಲ. 1865 ರವರೆಗೆ ಜನರ ವಿಶ್ವಾಸಬಲದಿಂದ ಸರ್ವಾಧಿಕಾರಿಯಂತೆ ಆಡಳಿತ ನಡೆಸಿದ ಆ ಶ್ರೀಮಂತ ಐರೋಪ್ಯರೆದುರಿನಲ್ಲಿ ಪಲ್ಲಟಕಾರಿಗಳ ಮಿತ್ರನಂತಿದ್ದಾಗ್ಗೂ ಒಳಾಡಳಿತದಲ್ಲಿ ಗೊಡ್ಡುಗಳ ಗುಂಪಿಗೇ ಸೇರಿದ್ದನು. 1832ರಲ್ಲಿ ನಡೆದಸುಧಾರಣೆ ಸಮೃದ್ಧಿಯೆಂದು ಶ್ರೀಮಂತವರ್ಗದ ವ್ಹಿಗ್ಗರ ಅಭಿಪ್ರಾಯವಾಗಿತ್ತು. ಆ ವ್ಹಿಗ್ಗರಿಗೆ ನಾಯಕನಾಗಿದ್ದ ಪಾಮರ್ಸ್ಟನ್ 1865ರಲ್ಲಿ ತೀರಿಕೊಂಡಾಗ **ಲಿಬರಲ್ ಗುಂಪಿನ ನಾಯಕ ರಸ್ಸೆಲ್ ಶ್ರೀಮಂತನು** (Earl Russell) **ಪ್ರಧಾನನಾಗಿ**

ಗ್ಲಾಡ್‌ಸ್ಟನ್ನನನ್ನು ಸಹಾಯಕ್ಕೆ ಇಟ್ಟುಕೊಂಡನು. ಪೀಲ್ ಶಿಷ್ಯನಾಗಿ ಪ್ರಾರಂಭಿಸಿ ನಿರಾತಂಕ ವ್ಯಾಪಾರವಾದಿಗಳಲ್ಲಿ ಸೇರಿಕೊಂಡು ಗ್ಲಾಡ್‌ಸ್ಟನ್ ಕಡೆಗೆ ಲಿಬರಲ್ ಪಕ್ಷವನ್ನು ಸೇರಿದ್ದನು.

ರಸ್ಸೆಲ್‌ಗ್ಲಾಡ್‌ಸ್ಟನ್ನರಿಬ್ಬರು ಸೇರಿ ರಾಜಕೀಯಸುಧಾರಣೆಗಾಗಿ ಒಂದು ಮಸೂದೆ ಯನ್ನೊಡ್ಡಿದರು. ಅದನ್ನು ಕನ್ಸರ್ವೆಟಿವ್ ಪಕ್ಷದವರು ಮಾತ್ರವಲ್ಲದೆ ಪಾಮರ್ಸ್ಟನ್ ಅನುಯಾಯಿಗಳಾಗಿದ್ದ ವ್ಹಿಗ್ಗರೂ ವಿರೋಧಿಸಿದರು. ಎರಡು ಗುಂಪುಗಳ ವಿರೋಧದ ಎದುರಿನಲ್ಲಿ ಮಸೂದೆ ಬಿದ್ದುಹೋಯಿತು. ಒಂದು ವರ್ಷ ಅಧಿಕಾರ ನಡೆಸುವಷ್ಟ ರಲ್ಲಿ ರಸ್ಸೆಲ್‌ಗ್ಲಾಡ್‌ಸ್ಟನ್ನರು ರಾಜಿನಾಮೆಕೊಡಬೇಕಾಯಿತು. ಆದ್ದರಿಂದ 1866ರಲ್ಲಿ ಕನ್ಸರ್ವೆಟಿವ್ ಸಂಗಡದವರಿಗೆ ಅಧಿಕಾರ ಪ್ರಾಪ್ತಿಯಾಯಿತು. ಡಾರ್ಬಿ ಶ್ರೀಮಂತನು ಡಿಸ್ರೇಲಿಯನ್ನು ಸಹಾಯಕ್ಕಿಟ್ಟುಕೊಂಡು ಪ್ರಧಾನನಾದನು. ಜಾಣನಾದ **ಡಿಸ್ರೇಲಿ ಮಂತ್ರಿ**ಯಾದ ಬಳಿಕ ರಾಜ್ಯದಲ್ಲಿ ಕಾಯಕ ವರ್ಗದವರ ಅತೃಪ್ತಿಯನ್ನು ತಿಳಿದು 1867ರಲ್ಲಿ ತಾನೇ ಸುಧಾರಣೆ ಮಸೂದೆಯನ್ನು ತಯಾರಿಸಿದನು. ಲಿಬರಲ್ ಪಕ್ಷದ ವರು ಮಾಡಬೇಕಾಗಿದ್ದ ಮತ್ತು ಮಾಡಲಾರದೆ ಹೋದ ಕೆಲಸವನ್ನು ಪ್ರತಿಪಕ್ಷದವರು ನಡೆಸಿದಂತೆ ನೆರವೇರಿತು.

ಇದೇ **ಎರಡನೆಯ ಸುಧಾರಣೆ ಕಾನೂನೆಂ**ಬುದು. ಅದರ ಪರಿಣಾಮವಾಗಿ ಇಂಗ್ಲಂಡ್ ಸ್ಕಾಟ್ಲೆಂಡ್‌ಗಳಲ್ಲಿ ಬಡಭಿಕ್ಷೆಯ ತೆರಿಗೆಗಳನ್ನು ಸಲ್ಲಿಸಿದವರಿಗೆಲ್ಲರಿಗಲ್ಲದೆ ವಾರ್ಷಿಕ ಬಾಡಿಗೆ £ 10ರಷ್ಟನ್ನು ಕೊಡುತ್ತಿದ್ದ ಪಟ್ಟಣನಿವಾಸಿಗಳೆಲ್ಲರಿಗೂ ವೋಟಿನ ಅಧಿಕಾರ ದೊರಕಿತು. ಆಸ್ತಿವಂತರಿಗೆ ಮಾತ್ರ ಇದ್ದ ರಾಜಕೀಯ ಅಧಿಕಾರವು ಆಸ್ತಿಯಿಲ್ಲದಿದ್ದರೂ ತಮ್ಮ ಕಸಬಿನ ಸಂಪಾದನೆಯಿಂದ ತಕ್ಕ ಮಟ್ಟಿಗೆ ನೆಮ್ಮದಿ ಪಡೆದಿದ್ದ ಕಾಯಕವರ್ಗದವರಿಗೆ ಲಭಿಸಿತು. ಕಡಿಮೆ ಜನಸಂಖ್ಯೆಯಿದ್ದ ಪಟ್ಟಣಗಳಿಗೆ ಪ್ರಾತಿನಿಧ್ಯ ತಪ್ಪಿ ದೊಡ್ಡ ಪಟ್ಟಣಗಳಿಗೆ ಅನುಕೂಲವಾಯಿತು. ಆದರೆ ಕೂಲಿಮಾಡಿ ಜೀವಿಸುತ್ತಿದ್ದ ವರ್ಗದವರಿಗೆ ಯಾವ ಅಧಿಕಾರವೂ ಸಿಕ್ಕಲಿಲ್ಲ. ಆದಾಗ್ಗೂ ಕಾಮನ್ಸ್ ಸಭೆಯ ಬಣ್ಣ ಈ ಕಾನೂನಿನಿಂದ ಬದಲಾಯಿತು.

**ಮುಖ್ಯಾಂಶಗಳು**

1867ರಲ್ಲಿ ಈ ಕಾನೂನು ಜಾರಿಗೆ ಬಂದ ತರುವಾಯ ಕನ್ಸರ್ವೆಟಿವ್ ಪ್ರಮುಖ ಡಾರ್ಬಿ ಶ್ರೀಮಂತನು ನಿವೃತ್ತನಾದನು. 1866ರಲ್ಲಿ ವ್ಹಿಗ್ ಶ್ರೀಮಂತ ರಸ್ಸೆಲ್ ನಿವೃತ್ತನಾಗಿದ್ದನು. ಅವರಂತೆ ವೃದ್ಧರೂ ಹಳಬರೂ ಆಗಿದ್ದ ಲಾರ್ಡ್ ಜಾರ್ಜ್ ಬೆಂಟಿಂಕ್ 1848ರಲ್ಲಿ, ಸರ್ ರಾಬರ್ಟ್ ಪೀಲ್ 1850ರಲ್ಲಿ, ವೆಲ್ಲಿಂಗ್ಟನ್ ಶ್ರೀಮಂತನು 1852ರಲ್ಲಿ, ಆಬರ್ಡೀನ್ ಶ್ರೀಮಂತನು 1860ರಲ್ಲಿ ತೀರಿಕೊಂಡಿದ್ದರು. 1867ರ ತರುವಾಯ ಲಿಬರಲ್ ಕನ್ಸರ್ವೆಟಿವ್ ಪಕ್ಷಗಳ ನಾಯಕರಾಗಿ ಗ್ಲಾಡ್‌ಸ್ಟನ್ ಮತ್ತು ಡಿಸ್ರೇಲಿಗಳೀರ್ವರೂ ಸ್ಪರ್ಧೆಗೆ ತೊಡಗಿದರು.

# ಸಂಧಿವಿಗ್ರಹ (1837—1890)

## ಕ್ರಿಮಿಯ ಯುದ್ಧ

1825ರಲ್ಲಿ ರಷ್ಯ ಚಕ್ರವರ್ತಿ ಅಲೆಕ್ಸಾಂಡರ್ ತೀರಿಕೊಂಡಬಳಿಕ **ಹಿರೇ ನಿಕೊಲಾಸ್** ಪಟ್ಟವೇರಿದನು. ತನ್ನ ಸ್ವಂತಸಾಮ್ರಾಜ್ಯದಲ್ಲಿ ಜನರ ಅಧಿಕಾರ ಪ್ರಾಪ್ತಿಗಾಗಿ ಯಾವ ಚಳುವಳಿಯೂ ಇಲ್ಲದಂತೆ ನಿಕೊಲಾಸ್ ನೆರವೇರಿಸಿಕೊಂಡು ಮೂಡಲಲ್ಲಿಯೂ ತೆಂಕಲಲ್ಲಿಯೂ ಸಾಮ್ರಾಜ್ಯವನ್ನು ವಿಸ್ತರಿಸಲು ಸಿಕ್ಕಿದ ಸಮಯವನ್ನು ಸಾಧಿಸುತ್ತ ಹೊಸ ಸಮಯ ಸನ್ನಿವೇಶಗಳನ್ನು ಹುಡುಕುತ್ತ ಇದ್ದನು. ಅಫ್ಘಾನಸ್ಥಾನದ ಮೇರೆಯನ್ನು ಸಾಮ್ರಾಜ್ಯ ಸಮೀಪಿಸಿದಾಗ ಬ್ರಿಟಿಷರು ಹಿಂದುಸ್ತಾನಕ್ಕಾಗಿ ಅಫ್ಘಾನರ ಪಟ್ಟದ ಜಗಳದಲ್ಲಿ ಪ್ರವೇಶಿಸಿ ಯುದ್ಧ ಮಾಡಿದರು. ಕಪ್ಪುಸಮುದ್ರವನ್ನು ರಷ್ಯ ಚಕ್ರವರ್ತಿ ಯಾವಾಗ ಸ್ವಾಧೀನ ಪಡಿಸಿಕೊಳ್ಳುವನೋ ಎಂದು ಹೊಂಚುತ್ತ ಬ್ರಿಟಿಷರು ತುರ್ಕಿಯ ಪಕ್ಷವನ್ನವಲಂಬಿಸಿ ರಷ್ಯದ ಪ್ರಾಬಲ್ಯಕ್ಕೆದುರಾಗಿ ವ್ಯವಹರಿಸಿದರು. ಗ್ರೀಸ್‌ದೇಶವು ಸುಲ್ತಾನನ ಹಿಡಿತದಿಂದ ತಪ್ಪಿಸಿಕೊಂಡ ತರುವಾಯ ಈಜಿಪ್ಟ್ ಕೂಡ ಸ್ವತಂತ್ರವಾಯಿತು. ತುರ್ಕಿಯ ಕ್ಷೇಮವೇ ತಮ್ಮ ಕ್ಷೇಮವೆಂದು ಬ್ರಿಟಿಷರು ತಿಳಿದು ಸಂಧಾನಪರರಾದುದನ್ನು ಹತ್ತೊಂಭತ್ತನೆ ಶತಮಾನದ ಪೂರ್ವಾರ್ಧದ ವೃತ್ತಾಂತದಲ್ಲಿ ಕಂಡೆವು.

**ರಷ್ಯಪ್ರಾಬಲ್ಯ**

ತುರ್ಕಿ ಸುಲ್ತಾನನ ಆಡಳಿತವು ವಾಸ್ತವವಾಗಿ ಕೆಟ್ಟಿತ್ತು. ಬಾಲ್ಕನ್ ಪರ್ಯಾಯ ದ್ವೀಪದಲ್ಲಿ ಆತನಿಗೆ ಅಧೀನರಾಗಿದ್ದ ಕ್ರೈಸ್ತಜನರು ಜಾತಿಯಲ್ಲಿ ರಷ್ಯನ್ನರಂತೆ ಸ್ಲಾವರು; ಮತದಲ್ಲಿಯೂ ರಷ್ಯನ್ನರಂತೆ ಗ್ರೀಕ್ ಕ್ರೈಸ್ತಶಾಖೆಯವರು. ಆ ಶಾಖೆಗೆ ಸಂರಕ್ಷಕನೆನಿಸಿದ ರಷ್ಯಚಕ್ರವರ್ತಿ ಆ ಜನಸಮೂಹಗಳ ಯೋಗಕ್ಷೇಮ ತನಗೆ ಸೇರಿದುದೆಂದು ಹೇಳಿಕೊಂಡುದು ಸಹಜವಾಗಿತ್ತು. ಗ್ರೀಕರು ಸ್ವತಂತ್ರರಾದ ಕಾಲದಲ್ಲಿಯೇ ಬಾಲ್ಕನ್ ಸಮೂಹಗಳಲ್ಲಿ **ಸೆರ್ಬರು** (Serbs) **ಮಾಂಟಿನೀಗ್ರಿ** (Montenegrins) ಮತ್ತು **ರುಮೇನಿಯನ್** (Roumanians) ಪಂಗಡಗಳಿಗೆ ಅಲ್ಪಸ್ವಲ್ಪ ಸ್ವಾತಂತ್ರ್ಯವನ್ನು ಸುಲ್ತಾನನು ಬಿಟ್ಟುಕೊಟ್ಟಿದ್ದನು. ಬಾಲ್ಕನ್ ಪಂಗಡಗಳೆಲ್ಲಕ್ಕೂ ಸ್ವಾತಂತ್ರ್ಯವೊದಗಬೇಕೆಂದು ರಷ್ಯ ಚಕ್ರವರ್ತಿ ಆಸೆಯನ್ನು ಬೆಳೆಸಿ ಸಮಯತೋರಿದಾಗಲೆಲ್ಲ ಅವರನ್ನು ಪ್ರೋತ್ಸಾಹಿಸುತ್ತಲೂ ಎತ್ತಿಕಟ್ಟುತ್ತಲೂ ಇರತಕ್ಕವನಾದನು. ಕ್ರೈಸ್ತಮತಸ್ಥರಾದ ಜನರು ಮುಸಲ್ಮಾನ್ ಪ್ರಭುವಿನ ಶಾಶ್ವತಪ್ರಜೆಗಳಾಗಿರುವ ಅಂಶ ಐರೋಪ್ಯರಲ್ಲಿ ಯಾರಿಗೂ ಹಿತವಾಗಿರಲಿಲ್ಲ. ಆದರೆ ರಷ್ಯವನ್ನು ಕಂಡು ಭಯಪಡುತ್ತಿದ್ದುದರಿಂದ ಇತರ ಐರೋಪ್ಯರು ತುರ್ಕಿಸುಲ್ತಾನನ ಮಿತ್ರರಾಗಿ ಪರಿಣಮಿಸಿದರು. ಆಸ್ಟ್ರಿಯದ ಚಕ್ರವರ್ತಿಯ ಮನಸ್ಸಿನಲ್ಲಿ ಬಾಲ್ಕನ್ ಕ್ಷೇತ್ರಗಳು ತನ್ನ ಸಾಮ್ರಾಜ್ಯದಲ್ಲಿ ಸೇರಬೇಕೆಂದಿದ್ದುದರಿಂದ ಆತನು ರಷ್ಯದ ಹಗೆಯಾದನು; ಆದರೆ ಇಟಲಿಯಲ್ಲಿಯೂ

ಜರ್ಮನಿಯಲ್ಲಿಯೂ ನಾನಾ ಬಾಧೆಗಳನ್ನು ಪಡುತ್ತಿದ್ದುದರಿಂದ ಬಲಸಾಲದೆ ಅಂತ ರಂಗದಲ್ಲಿ ಕೊರಗುತ್ತ ಇದ್ದನು. ಬಾಲ್ಕನ್ ಭೂಭಾಗದಲ್ಲಿ

**ರಷ್ಯದ ಭಯ**

ರಷ್ಯ ಪ್ರಬಲಗೊಂಡು ಕಪ್ಪುಸಮುದ್ರವನ್ನು ಸ್ವಾಧೀನಪಡಿಸಿ ಕೊಂಡಪಕ್ಷದಲ್ಲಿ ಭೂಮಧ್ಯಸಮುದ್ರದ ಮೂಡಲಲ್ಲಿ ತಮ್ಮ ವ್ಯಾಪಾರಕ್ಕೆ ತೊಂದರೆ ತೋರುವುದೆಂದು ಬ್ರಿಟಿಷರಿಗೂ ಫ್ರೆಂಚರಿಗೂ ಶಂಕೆ. ರಷ್ಯನ್ನರು ಯುದ್ಧದ ಹಡಗುಗಳನ್ನು ಕಟ್ಟಿ ತುರ್ಕಿಯಭಾಗಗಳನ್ನು ಗೆದ್ದುಕೊಂಡರೆ ತಾವು ಕಷ್ಟಪಟ್ಟು ಸಂಪಾದಿಸಿಕೊಂಡಿದ್ದ ಹಿಂದುಸ್ತಾನಸಾಮ್ರಾಜ್ಯಕ್ಕೆ ಮಾರ್ಗಗಳು ಕೈತಪ್ಪಿಯಾವೆಂದು ಬ್ರಿಟಿಷರಿಗೆ ದೊಡ್ಡಚಿಂತೆ. ಆದ್ದರಿಂದ ರಷ್ಯಚಕ್ರವರ್ತಿಯನ್ನು ಅಡ್ಡಿಪಡಿಸುವುದರಲ್ಲಿ ಬ್ರಿಟಿಷರೇ ಮುಂದಾಳುಗಳಾಗಿದ್ದರು.

ಶತಮಾನದ ಮೊದಲಲ್ಲಿ ಗ್ರೀಕರು ಸ್ವಾತಂತ್ರ್ಯಪಡೆದಾಗ ಬ್ರಿಟಿಷ್ ಸಂಧಿವಿಗ್ರಹಿ **ಕ್ಯಾನಿಂಗ್** ರಷ್ಯದ ಸ್ನೇಹವನ್ನೇ ನಡೆಸುತ್ತ ಗ್ರೀಸಿನಲ್ಲಿ ರಷ್ಯನ್ನರಿಗೆ ಯಾವ ಅಧಿಕಾರವೂ ದೊರೆಯದಂತೆ ನೆರವೇರಿಸಿದನು. **ಪಾಮರ್ಸ್ಟನ್** ಶ್ರೀಮಂತನು ತುರ್ಕಿಯೊಡನೆ ಮೈತ್ರಿಕಟ್ಟಿ ಸುಲ್ತಾನನ ಅಧಿಕಾರವನ್ನುಳಿಸಿ ರಕ್ಷಿಸುವುದೇ ಬ್ರಿಟಿಷರ ಸಂಧಾನದಲ್ಲಿ ಗುರಿಯಾಗಿರಬೇಕೆಂದು ಗೊತ್ತುಮಾಡಿದನು. ತಾನಾಗಿ ತಾನು ಮುಂದೆಬಿದ್ದು 1841ರಲ್ಲಿ ಡಾರ್ಡನೆಲ್ಸ್ಮಾರ್ಗವಾಗಿ ರಷ್ಯದ ಯುದ್ಧದಹಡಗುಗಳು ಭೂಮಧ್ಯ ಸಮುದ್ರದಲ್ಲಿ ಪ್ರವೇಶಿಸದಂತೆ ಸಾಧಿಸಿದನು.

ರಷ್ಯಚಕ್ರವರ್ತಿಗೆ ಬ್ರಿಟಿಷರ ಮೈತ್ರಿಯೇ ಬೇಕಾಗಿತ್ತು. ವಾಸ್ತವವಾಗಿ ಇಳಿಮುಖ ವಾಗಿದ್ದ ತುರ್ಕಿಸಾಮ್ರಾಜ್ಯವನ್ನು ಬಲವಂತದಿಂದ ಇತರರು ಎತ್ತಿ ನಿಲ್ಲಿಸುತ್ತ ಬಾಲ್ಕನ್ನರ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವುದೇಕೆಂದು ಆತನು ಕೇಳುತ್ತಲಿದ್ದನು. 1844ರಲ್ಲಿಯೂ 1853 ರಲ್ಲಿಯೂ ಆತನು ಬ್ರಿಟಿಷರನ್ನು ತನ್ನೊಡನೆ ಸೇರಿಸಿಕೊಳ್ಳಲು ಯತ್ನಿಸಿದನು. ಒಡೆದು ಛಿದ್ರಛಿದ್ರವಾಗುವಂತಿದ್ದ ತುರ್ಕಿಸಾಮ್ರಾಜ್ಯವನ್ನು ಗೆದ್ದು ಭಾಗಮಾಡಿ ಕೊಳ್ಳೋಣವೆಂದು ಬ್ರಿಟಿಷರಿಗೆ ಸೂಚನೆಕೊಟ್ಟನು. ತನ್ನ

**ಚಕ್ರವರ್ತಿಯ ಯೋಚನೆ**

ಆಸ್ಥಾನದಲ್ಲಿದ್ದ ಬ್ರಿಟಿಷ್ ರಾಯಭಾರಿಯೊಡನೆ "ಪ್ರಬಲವ್ಯಾಧಿ ಯಿಂದ ನರಳುತ್ತಿರುವ ತುರ್ಕಿಯ ಉತ್ತರಕ್ರಿಯೆಗಳಿಗಾಗಿ ನಾವಿಬ್ಬರೂ ಏರ್ಪಡಿಸುವುದು ನ್ಯಾಯವಲ್ಲವೆ?" ಎಂದು ಬ್ರಿಟಿಷರಿಗೆ ಕ್ರೀಟ್ ಈಜಿಪ್ಟ್‌ಗಳನ್ನು ಸಂತೋಷದಿಂದ ಬಿಟ್ಟುಕೊಡುವುದಾಗಿ ಹೇಳಿ ದನು. ಅದಕ್ಕೆ ಬ್ರಿಟಿಷರು ಒಪ್ಪಲಿಲ್ಲ. ಆಗ ನಿಕೊಲಾಸ್ ಚಕ್ರವರ್ತಿಯು ಬ್ರಿಟಿಷರ ಸಹಕಾರದ ಆಸೆಯನ್ನು ಬಿಟ್ಟು ತುರ್ಕಿಸುಲ್ತಾನನಬಳಿಗೆ ಬಿರುಸಾದ ಸಂದೇಶವನ್ನು ಕಳುಹಿಸಿದನು. ತುರ್ಕಿಯ ಆಡಳಿತದಲ್ಲಿ ಸೇರಿದ್ದ ಕ್ರೈಸ್ತಮತಸ್ಥರ ಯೋಗಕ್ಷೇಮದ ವಿಚಾರದಲ್ಲಿ ತನ್ನ ಸರ್ವಾಧಿಕಾರವನ್ನು ಸುಲ್ತಾನನೊಪ್ಪಿಕೊಳ್ಳಬೇಕೆಂದೂ ಕ್ರೈಸ್ತ ಪುಣ್ಯಭೂಮಿಯ ದೇವಮಂದಿರಗಳನ್ನು ತನ್ನ ಸುಭದ್ರಿಗೆ ಬಿಟ್ಟುಕೊಡಬೇಕೆಂದೂ

1853ರಲ್ಲಿ ಬಯಸಿದನು. ಬ್ರಿಟಿಷರ ಬೆಂಬಲವನ್ನು ಪಡೆದಿದ್ದ ಸುಲ್ತಾನನು ಅದನ್ನು ತಿರಸ್ಕರಿಸಿದನು. ಆಗ ನಿಕೊಲಾಸ್ ತಡಮಾಡದೆ ಡಾನ್ಯೂಬ್ ನದಿಯ ಪಾರ್ಶ್ವದಲ್ಲಿ ತುರ್ಕಿಯ ಆಡಳಿತಕ್ಕೆ ಸೇರಿದ್ದ **ವಲ್ಲೇಖಿಯ** ಮತ್ತು **ಮೋಲ್ಡೇವಿಯ** ಎಂಬ ಪ್ರಾಂತಗಳಲ್ಲಿ ತನ್ನ ಸೈನ್ಯಗಳನ್ನು ಹೊರಡಿಸಿ ಆಕ್ರಮಿಸಿದನು.

**ಫ್ರೆಂಚರ ಚಿಂತೆ**

ಏತನ್ಮಧ್ಯೆ ಅಲ್ಪ ವಿಷಯಕ್ಕಾಗಿ ಫ್ರಾನ್ಸಿನ ನಾಯಕನು ಜಗಳದಲ್ಲಿ ಪ್ರವೇಶಿಸಿದನು. ಎರಡನೆ ರಿಪಬ್ಲಿಕ್ಕಿಗೆ ಅಧ್ಯಕ್ಷನಾಗಿ ಮೊದಲಿಟ್ಟಿದ್ದ **ಲೂಯಿ ನಪೋಲಿಯನ್** 1852ರಲ್ಲಿ **ಚಕ್ರವರ್ತಿ** ಪದವಿಯನ್ನು ಸಾಧಿಸಿಕೊಂಡಿದ್ದನು. ಹಿರೇ ನಪೋಲಿಯನ್ನನಂತೆ ಯುದ್ಧಗಳಲ್ಲಿ ವಿಜೃಂಭಿಸಿ ಫ್ರೆಂಚ್‌ಜನರನ್ನು ಮೆಚ್ಚಿಸುವ ಆಸೆ ಆತನಿಗೆ. ರೋಮನ್ ಕ್ಯಾಥಲಿಕ್ ಚರ್ಚಿನವರಿಗೆ ಪುಣ್ಯಭೂಮಿಯ ದೇವಮಂದಿರಗಳು ತಮ್ಮ ವಶದಲ್ಲಿಯೇ ಇರತಕ್ಕುದೆಂಬ ಆಸೆಯಿರುವಲ್ಲಿ ಆ ಚರ್ಚಿಗೆ ಜ್ಯೇಷ್ಠಕುವರಿಯಾದ ಫ್ರಾನ್ಸ್ ಸುಮ್ಮನಿರುವುದೆಂತು? **ಬೆತ್ಲೆಹೆಂ** (Bethlehem) ದೇವಮಂದಿರದಲ್ಲಿದ್ದ ಒಂದು ನಕ್ಷತ್ರ, ಒಂದು ಶಿಲುಬೆ ಎಲ್ಲ ಕ್ರೈಸ್ತರಿಗೂ ಪರಮಪವಿತ್ರವೆನಿಸಿದ್ದ ವಸ್ತುಗಳು. ಅವುಗಳು ರಷ್ಯನ್ನರ ವಶವಾಗುವ ಅಂಶದಲ್ಲಿ ಪೋಪಿಗೂ ಆತನ ಶಿಷ್ಯರಿಗೂ ಅಸಮಾಧಾನ. ಲೂಯಿ ನಪೋಲಿಯನ್ ಈ ಅಂಶವನ್ನೆತ್ತಿ ಹಿಡಿದನು. ರಷ್ಯವನ್ನು ವಿರೋಧಿಸಲು ಆತುರಪಟ್ಟನು. ಭೂಮಧ್ಯಸಮುದ್ರದ ಮೂಡಲಲ್ಲಿ ಫ್ರೆಂಚ್ ವ್ಯಾಪಾರವನ್ನು ರಕ್ಷಿಸಿಕೊಳ್ಳುವ ಯೋಚನೆಯೂ ಕೂಡಿತು. ಲೂಯಿ ನಪೋಲಿಯನ್ ಬ್ರಿಟಿಷರೊಡನೆ ಸೇರಿಕೊಂಡು ರಷ್ಯವನ್ನು ಪ್ರತಿಭಟಿಸಲು ಸನ್ನದ್ಧನಾದನು. 1841ರಲ್ಲಿ ನಡೆದಿದ್ದ ಷರತ್ತನ್ನು ತಾವೇ ಮುರಿದು ಬ್ರಿಟಿಷರೂ ಫ್ರೆಂಚರೂ ತಮ್ಮ ಯುದ್ಧದ ಹಡಗುಗಳನ್ನು ಡಾರ್ಡನೆಲ್ಸ್ ಮಾರ್ಗದಲ್ಲಿ ಹೊರಡಿಸಿದರು. ತುರ್ಕಿಸುಲ್ತಾನನು ಧೈರ್ಯವಹಿಸಿ ರಷ್ಯದವರನ್ನು ಎದುರಿಸಿದನು.

ಬ್ರಿಟಿಷ್ ಮತ್ತು ಫ್ರೆಂಚ್ ಜಲಸೈನ್ಯಗಳು ಕಪ್ಪುಸಮುದ್ರದ ಬಳಿ ಬಂದ ಕೂಡಲೆ ರಷ್ಯದವರು **ಸಿನೋಪ್** (Sinope) ಬಳಿ ಇದ್ದ ತುರ್ಕಿ ಹಡಗುಪಡೆಯನ್ನು ಧ್ವಂಸ ಮಾಡಿದರು. ರಷ್ಯದೊಂದಿಗೆ ಯುದ್ಧವೆಂದು ಬ್ರಿಟಿಷರೂ ಫ್ರೆಂಚರೂ ಪ್ರಕಟಿಸಿ ತುರ್ಕಿಯ ಜೊತೆಗೂಡಿದರು.

ಹೊಡೆದಾಟ ಮೊದಲಾದುದು ಡಾನ್ಯೂಬ್ ಪ್ರಾಂತಗಳಲ್ಲಿ. ಅಲ್ಲಿ ರಷ್ಯದ ಸೈನ್ಯಗಳು ನುಗ್ಗಿದ್ದವು. ಅವುಗಳನ್ನು ಅಲ್ಲಿಂದ ಓಡಿಸುವುದು ತುರ್ಕಿಯವರ ಕೆಲಸವಾಯಿತು. ಬ್ರಿಟಿಷರಾಗಲಿ ಫ್ರೆಂಚರಾಗಲಿ ಅಲ್ಲಿ ಹೊಡೆದಾಡುವುದು ಅಸಾಧ್ಯವಾಗಿತ್ತು. ಆದರೆ ಆಸ್ಟ್ರಿಯದವರ ಭಯದಿಂದ ಹೆಚ್ಚು ಹೊಡೆದಾಟವಿಲ್ಲದೆಯೇ

1854ರಲ್ಲಿ ರಷ್ಯದ ಸೈನ್ಯಗಳು ಹಿಮ್ಮೆಟ್ಟಿದವು. ಆಗ ಸಂಧಿಪ್ರಯತ್ನ ನಡೆಯಬಹುದಾಗಿತ್ತು. ಆದರೆ ಬ್ರಿಟಿಷರೂ ಫ್ರೆಂಚರೂ ರಷ್ಯದವರನ್ನು ಎಲ್ಲಿಯಾದರೂ ಆಕ್ರಮಿಸುವ ಆತುರದಿಂದಿದ್ದರು. ರಷ್ಯವನ್ನು ಎಲ್ಲಿ ಮುತ್ತಬೇಕು? ಕಪ್ಪುಸಮುದ್ರದ ಉತ್ತರದಲ್ಲಿರುವ **ಕ್ರಿಮಿಯ** ಪರ್ಯಾಯದ್ವೀಪ ಅನುಕೂಲವಾಗಿ ಕಂಡಿತು. ಆ ಕ್ಷೇತ್ರವನ್ನು ಆಕ್ರಮಿಸಲು ಬ್ರಿಟಿಷ್ ಫ್ರೆಂಚ್‌ಸೈನ್ಯಗಳು ಹಡಗುಗಳಲ್ಲಿ ಭೂಮಧ್ಯಸಮುದ್ರವನ್ನು ಹಾಯ್ದು ಡಾರ್ಡನೆಲ್ಸ್ ಮಾರ್ಗವಾಗಿ ಹೊರಟವು. ಕ್ರಿಮಿಯ ಯುದ್ಧ ಮೊದಲಾಯಿತು.

**ಯುದ್ಧ**

ಕ್ರೈಸ್ತ ರಾಷ್ಟ್ರಗಳು ಮುಸಲ್ಮಾನ್ ಪ್ರಭುವನ್ನು ಳಿಸುವ ಕತದಿಂದ ಮತ್ತೊಂದು ಕ್ರೈಸ್ತರಾಷ್ಟ್ರದೊಂದಿಗೆ ಜಗಳಮಾಡಿದ ವಿಚಿತ್ರಸನ್ನಿವೇಶ ತೋರಿತು. ಬ್ರಿಟಿಷರೂ ಫ್ರೆಂಚರೂ ತಾವು ಕಾಣದ, ತಿಳಿಯದ ಭೂಭಾಗದಲ್ಲಿ ಯುದ್ಧಕ್ಕೆ ಹೊರಟರು. ಆ ಸಾರ್ಡಿನಿಯ ಪ್ರಭುವೂ ಅವರನ್ನು ಸೇರಿಕೊಂಡನು. ಕ್ರಿಮಿಯದಲ್ಲಿ ತಮ್ಮ ಯುದ್ಧದ ಹಡಗುಗಳ ಉಗ್ರಾಣಕ್ಕಾಗಿ ರಷ್ಯದವರು ಕಟ್ಟಿಕೊಂಡಿದ್ದ **ಸೆಬಾಸ್ಟೊಪೋಲ್** (Sebastopol) ದುರ್ಗವನ್ನು ನಾಶಮಾಡುವುದು ಗುರಿ. ಆ ದುರ್ಗ ಹಾಳಾದರೆ ಕಪ್ಪುಸಮುದ್ರದಲ್ಲಿ ರಷ್ಯದ ನೌಕಾಬಲಕ್ಕೆ ಆಸ್ಪದ ತಪ್ಪೀತೆಂದು ಆಸೆ.

ಮೂರು ರಾಷ್ಟ್ರಗಳ ಸೈನ್ಯಗಳೂ ಒಟ್ಟುಗೂಡಿ 1854ರಲ್ಲಿ ಸೆಬಾಸ್ಟೊಪೋಲಿನ ಉತ್ತರಕ್ಕೆ ಹೊರಟು ಅಲ್ಲಿಳಿದು **ಆಲ್ಮಾ** (Alma) ನದಿಯ ಬಳಿ ರಷ್ಯದವರೊಡನೆ ಕದನವಾಡಿ ಗೆದ್ದವು. ತಕ್ಷಣ ಮುಂದೆ ಹೊರಟು ಆ ದುರ್ಗವನ್ನು ಮುತ್ತಬಹುದಾಗಿತ್ತು. ಆದರೆ ಹಾಗೆಮಾಡದೆ ಮಿತ್ರವ್ಯೂಹದವರು ನಿದಾನಿಸಿ ದಕ್ಷಿಣದ ಕಡೆಯಿಂದ ಆಕ್ರಮಿಸುವ ಪ್ರಯತ್ನ ಮಾಡಿದರು. **ಬಾಲಕ್ಲೇವ** (Balaclava) ಎಂಬೆಡೆಯಲ್ಲಿ ಬ್ರಿಟಿಷರು ತಮ್ಮ ಉಗ್ರಾಣವನ್ನು ಕಟ್ಟಿದರು. ರಷ್ಯದವರು ಆ ಸ್ಥಲವನ್ನು ಆಕ್ರಮಿಸಲು ಉಜ್ಜುಗಿಸಿದರು. ಕದನ ನಡೆಯಿತು. ರಷ್ಯದವರು ಗೆಲ್ಲಲಿಲ್ಲ. ರಷ್ಯದ ದಂಡನಾಯಕ **ಮೆನ್ಷಿಕೋಫ್** ಮತ್ತೊಮ್ಮೆ **ಇಂಕರ್ಮನ್** (Inkermann) ದುರ್ಗದ ಬಳಿ ಮಿತ್ರಮಂಡಲಿಯವರನ್ನು ಆಕ್ರಮಿಸಿ ಸೋತನು.

**ಕದನಗಳು**

ಮೂರು ಹೊಡೆದಾಟಗಳಲ್ಲಿ ಮಿತ್ರಮಂಡಲಿಯುವರು ಹೆಸರಿಗೆಮಾತ್ರ ಜಯಶಾಲಿಗಳು. ವಾಸ್ತವವಾಗಿ ರಷ್ಯದವರಿಗಿಂತ ಇವರಿಗೇ ಹೆಚ್ಚು ನಷ್ಟವಾಗಿತ್ತು. ಕ್ರಿಮಿಯದಲ್ಲಿ ಚಳಿಗಾಲವನ್ನು ಕಳೆಯುವುದು ಬ್ರಿಟಿಷರಿಗೂ ಫ್ರೆಂಚರಿಗೂ ಅತಿ ಪ್ರಯಾಸವಾಯಿತು. ಬ್ರಿಟಿಷ್ ದಳಪತಿಗಳು ಸಾಹಸವನ್ನು ತೋರಲಿಲ್ಲ; ಬ್ರಿಟಿಷ್ ಮಂತ್ರಿಮಂಡಲಿಯವರು ಸಮಯಕ್ಕೆ ತಕ್ಕ ಸಹಾಯವನ್ನಾಗಲಿ ಸನ್ನಾಹವನ್ನಾಗಲಿ

ನಡೆಸಿರಲಿಲ್ಲ. ಚಳಿಗೂ ರೋಗಕ್ಕೂ ಸಿಕ್ಕಿ ಸಾವಿರಾರು ಸೈನಿಕರು ಒರಗಿದರು. ಸಾಕಾದಷ್ಟು ಸಾಮಗ್ರಿಯಿಲ್ಲದೆ, ತಕ್ಕ ಬಟ್ಟೆಬರೆಯಿಲ್ಲದೆ ಸೈನ್ಯಗಳು ಕಷ್ಟದಲ್ಲಿ ಸಿಕ್ಕಿಕೊಂಡಿದ್ದ ವೃತ್ತಾಂತ ಇಂಗ್ಲಂಡಿನಲ್ಲಿ ತಿಳಿದಾಗ **ಫ್ಲಾರೆನ್ಸ್ ನೈಟಿಂಗೇಲ್** (Florence Nightingale) ಎಂಬ ಮಹಿಳೆ ತಾನಾಗಿಯೇ ಹೊರಟು ಸೈನಿಕರಿಗೆ ತಕ್ಕ ಉಪಚಾರ ವ್ಯವಸ್ಥೆಯನ್ನು ನಡೆಸಿದ್ದಳು. ಆಕೆಯ ಕಾರ್ಯವಿವರದಿಂದ ಇಂಗ್ಲಿಷ್ ಜನರಲ್ಲಿ ಹಾಹಾಕಾರವೆದ್ದಿತು. ಆಬರ್ಡೀನ್ ಶ್ರೀಮಂತನಿಗೆ ಪಲ್ಟಿ, ಪಾಮರ್ಸ್ಟನ್ನನಿಗೆ ಅಧಿಕಾರ ಪದವಿಗಳಾದವು. ಆ ಶ್ರೀಮಂತನು ಮಂತ್ರಿಯಾದಕೂಡಲೆ ಎಲ್ಲೆಲ್ಲಿಯೂ ಚುರುಕು ತೋರಿ ಸಾಕಾದಷ್ಟು ಸರಕುಸರಂಜಾಮುಗಳು ಕ್ರಿಮಿಯದಲ್ಲಿ ಸಿದ್ಧವಾದವು. ಆದರೂ **ಸೆಬಾಸ್ಟೊಪೋಲ್ ಆಕ್ರಮಣ** ಸುಲಭವಾಗಿ ನೆರವೇರಲಿಲ್ಲ. 1855ರ ಕೊನೆಕೊನೆಗೆ ಜಯಲಾಭವಾಯಿತು. ರಷ್ಯದವರು ಆ ದುರ್ಗವನ್ನು ಆಗ ಬಿಟ್ಟುಕೊಟ್ಟರು.

ಇಷ್ಟರಿಂದ ಯುದ್ಧ ನಿಲ್ಲುವಂತಿರಲಿಲ್ಲ. ಕ್ರಿಮಿಯದಲ್ಲಿ ಒಂದು ದುರ್ಗ ನಷ್ಟವಾದರೆ ರಷ್ಯದವರ ಬಲ ನಾಶವಾದಂತಾಗಲಿಲ್ಲ. ಏಷ್ಯಮೈನರ್ ಪ್ರಾಂತದಲ್ಲಿ ರಷ್ಯದವರು ತುರ್ಕಿಯವರನ್ನು **ಕಾರ್ಸ್** (Kars) ದುರ್ಗದಿಂದೋಡಿಸಿ ಜಯಭೇರಿ ಹೊಡೆಸುತ್ತಿದ್ದರು. ಆದರೆ 1855ರಲ್ಲಿ ನಿಕೊಲಾಸ್ ಚಕ್ರವರ್ತಿ ತೀರಿಕೊಂಡನು. ಹೊಸ ಚಕ್ರವರ್ತಿಯಾದ **2ನೆ ಅಲೆಕ್ಸಾಂಡರ್** ಶಾಂತಿಯನ್ನು ಬಯಸಿದನು.

1856ರಲ್ಲಿ **ಪ್ಯಾರಿಸ್** ನಗರದಲ್ಲಿ ಯುದ್ಧವನ್ನು ಮುಗಿಸಿದ **ಒಪ್ಪಂದ**ಗಳಾದವು. ಮುಖ್ಯಷರತ್ತುಗಳು ಇಷ್ಟುಮಾತ್ರ—

1 ತುರ್ಕಿಯ ಪ್ರಜೆಗಳೆನಿಸಿದ್ದ ಕ್ರೈಸ್ತಗುಂಪುಗಳ ಯೋಗಕ್ಷೇಮ ಚಿಂತನೆಯನ್ನು ರಷ್ಯ ಚಕ್ರವರ್ತಿ ತ್ಯಜಿಸಲೊಪ್ಪತಕ್ಕದ್ದು. ತುರ್ಕಿ ಸ್ವತಂತ್ರ ರಾಷ್ಟ್ರವಾಗಿರತಕ್ಕದೆಂದು ಎಲ್ಲರೂ ಗೌರವಿಸತಕ್ಕದ್ದು.

2. ಮೊಲ್ಡೇವಿಯ ವಲ್ಲೇಖಿಯ ಪ್ರಾಂತಗಳು ತುರ್ಕಿಗೇ ಸೇರಿರತಕ್ಕದ್ದು; ಆದರೆ ಅಲ್ಲಿಯ ಆಡಳಿತದಲ್ಲಿ ಜನರಿಗೆ ಅಧಿಕಾರವನ್ನು ಸುಲ್ತಾನನು ಬಿಟ್ಟುಕೊಡತಕ್ಕದ್ದು.

3. ಕಪ್ಪುಸಮುದ್ರ ಯಾರೊಬ್ಬರಿಗೂ ಸೇರದಂತಿರಬೇಕು. ಆ ತೀರಗಳಲ್ಲಿ ಯಾರೂ ಯುದ್ಧದ ಉಗ್ರಾಣವನ್ನಿಡಬಾರದು. ಡಾರ್ಡನೆಲ್ಸ್ ಮಾರ್ಗದಲ್ಲಿ ತುರ್ಕಿಯ ಯುದ್ಧದ ಹಡಗುಗಳುಮಾತ್ರವೇ ಓಡಾಡಬೇಕು.

ಈ ಮೂರಂಶಗಳು ತಾತ್ಕಾಲಿಕವಾಗಿ ಮಾತ್ರ ಸ್ಥಿರಪಟ್ಟವು. ಬಾಲ್ಕನ್ ಜನಸಮೂಹಗಳು ದಂಗೆಯೇಳದಂತೆ ಯಾವ ಏರ್ಪಾಡೂ ಇಲ್ಲವಾಯಿತು. ಮುಂದಿನಕಾಲದಲ್ಲಿ

ಅದರಿಂದ ನಾನಾ ತೊಂದರೆಗಳು ತೋರಿದವು. ರಷ್ಯವೆಂದರೆ ಭಾರಿ ಭಲ್ಲೂಕವೆಂದು ಭಯಪಡುತ್ತಿದ್ದ ಐರೋಪ್ಯರಿಗೆ ರಷ್ಯದಭಯ ತಪ್ಪಲಿಲ್ಲ.

**ಪರಿಣಾಮಗಳು** ಆದರೆ ರಷ್ಯದ ಜನರಲ್ಲಿ ಅಸಮಾಧಾನ ಹೆಚ್ಚಿತು. ರಷ್ಯದಲ್ಲಿ ಅಚಲವಾಗಿ ಕಂಡಿದ್ದ ನಿರಂಕುಶಪ್ರಭುತ್ವಕ್ಕೂ ಆಪತ್ತು ತೋರಿಕೊಂಡಿತು. ಯುದ್ಧವಿದ್ಯೆಯಲ್ಲಿ ಅಸಮಾನರೆನಿಸಿದ್ದ ಫ್ರೆಂಚರ ಮತ್ತು ಬ್ರಿಟಿಷರ ಕೀರ್ತಿಗೆ ಕಳಂಕವೂ ತೋರಿತು. ಇವರೇನೂ ಅಜೇಯರಲ್ಲವೆಂದು ಸ್ಪಷ್ಟವಾಗಿ ಜರ್ಮನಿಯಲ್ಲಿ ಹೊಂಚುತ್ತಲಿದ್ದ ಪ್ರಷ್ಯ ಪ್ರಭುವಿಗೆ ಧೈರ್ಯವಾಯಿತು. ಗದರಿಸಿ ಬೆದರಿಸಿ ಸಾಧಿಸಿಕೊಳ್ಳುತ್ತಿದ್ದ ಪಾಮರ್ಸ್ಟನ್ ಶ್ರೀಮಂತನ ಉಪಾಯಕ್ಕೆ ಪೂರ್ಣ ವಿರಾಮ ಪ್ರಾಪ್ತಿಯಾಯಿತು.

ಬ್ರಿಟಿಷರೂ ಫ್ರೆಂಚರೂ ರಷ್ಯದೊಡನೆ ಕಟ್ಟಿಕೊಂಡ ಜಗಳದಲ್ಲಿ ಸಾರ್ಡಿನಿಯ ದೊರೆ ಸೇರಿದ್ದೇಕೆ? ಆತನಿಗೇನು ಲಾಭ ಅದರಲ್ಲಿ? ಅದನ್ನು ತಿಳಿಯಲು ಇಟಲಿಯ ವೃತ್ತಾಂತವನ್ನು ಸ್ಥೂಲವಾಗಿ ತಿಳಿಯಬೇಕು.

## ಇಟಲಿಯ ಐಕ್ಯತೆ

ಯೂರೋಪೆಲ್ಲ ನಪೋಲಿಯನ್ನನ ಕಯ್ಯಲ್ಲಿ ಸಿಕ್ಕಿ ಮಹಾಮಥನಕ್ಕೊಳಗಾದ ತರುವಾಯ ವಿಯೆನ್ನದಲ್ಲಿ ಯಥಾಪೂರ್ವಸ್ಥಿತಿಯ ಉದ್ಧಾರವಾಯಿತಷ್ಟೆ. ಆಗ ಇಟಲಿಯಲ್ಲಿಯೂ ಜನರು ತಮ್ಮ ಅಧಿಕಾರಸ್ಥಾಪನೆಯಾಗಲೆಂಬ ಹಂಬಲದಿಂದಿದ್ದರು. ಆದರೆ ಒಪ್ಪಂದಗಳನ್ನು ನಡೆಸಿದ ಮೆಟರ್ನಿಕ್, ಕ್ಯಾನಿಂಗ್ ಮುಂತಾದವರು ಇಟಲಿಯ ಉತ್ತರಭಾಗವನ್ನು ಆಸ್ಟ್ರಿಯ ಪ್ರಭುವಿಗೂ ದಕ್ಷಿಣಭಾಗವನ್ನು (ನೇಪಲ್ಸ್ ಸಿಸಲಿ) ಬೋರ್ಬನ್‌ವಂಶದ ಫರ್ಡಿನೆಂಡಿಗೂ ಹಂಚಿಬಿಟ್ಟು ಮಧ್ಯಭಾಗದಲ್ಲಿ ಪೋಪನ ಆಧಿಪತ್ಯವನ್ನಲ್ಲದೆ ಟಸ್ಕನಿಯ ಶ್ರೀಮಂತನೊಬ್ಬನ ಅಧಿಕಾರವನ್ನೂ ಸಾರ್ಡಿನಿಯದ್ವೀಪದ ದೊರೆಯೆನಿಸಿದಾತನ ಆಧಿಪತ್ಯವನ್ನೂ ಅಲ್ಲಲ್ಲಿ ಗೊತ್ತುಮಾಡಿದರು. ಒಂದೇ ಭಾಷೆಯನ್ನಾಡುತ್ತ ಒಂದು ಬಳಗವಾಗಿದ್ದ ಇಟಲಿಜನರು ಏಳೆಂಟು ಪ್ರಭುಗಳಿಗೆ ಪ್ರಜೆಗಳಾಗಿ ಹೋದರು. ಎಲ್ಲಿಯಾದರೂ ಗುಂಪುಕೂಡಿ ಅಧಿಕಾರಪ್ರಯತ್ನ ನಡೆಸಿದರೆ ಆಸ್ಟ್ರಿಯದ ಮೆಟರ್ನಿಕ್ ಅದನ್ನಡಗಿಸಲು ಸಿದ್ಧನಾದನು. ನಿರಂಕುಶಪ್ರಭುಗಳ ಆಳಿಕೆಯು ಭದ್ರವಾಗಿ ನೆಲೆಸಿದಂತಾಯಿತು.

1848 ರಲ್ಲಿ ಹಲ್ಲಟಗಳು ಅಂಟುರೋಗದಂತೆ ಹರಡಿದವು. ಆ ವೇಳೆಗೆ ಜನನಾಯಕರು ಗೋಪ್ಯವಾಗಿ ಅಡಗಿದ್ದು ಪ್ರಯತ್ನಶೀಲರಾಗಿದ್ದರು. **ಮಡ್ಸಿನಿ** (Mazzini) ಎಂಬಾತನು ಇರುವ ಏಳೆಂಟು ಆಡಳಿತಗಳನ್ನೂ ಲಾಗ ಹಾಕಿಸಿ ಜನರು ತಮ್ಮ ಆಧಿಪತ್ಯವನ್ನು ಕಟ್ಟಿ ಸ್ವತಂತ್ರರಾಗಬೇಕೆಂದು ಬೋಧಿಸುತ್ತಿದ್ದನು. 1848ರಲ್ಲಿ

ಜನರು ದಂಗೆಯೆದ್ದಾರೆಂದು ಕಂಡು ನೇಪಲ್ಸ್ ಟಸ್ಕನಿ ಪಿಯ್ಡ್‌ಮಂಟಿನ ಪ್ರಭುಗಳು ಆಡಳಿತದಲ್ಲಿ ಜನರ ಪ್ರತಿನಿಧಿಗಳಿಗೆ ಅಧಿಕಾರ ಬರುವಂತೆ ಸುಧಾರಣೆಗಳನ್ನು ನಡೆಸಿದರು. ಮಡ್ಸಿನಿ ಪುರಾಣಪ್ರಸಿದ್ಧ ರೋಮುಕ ಪಟ್ಟಣವನ್ನು ವಶಮಾಡಿಕೊಂಡು ಅಲ್ಲಿ ಒಂದು ರಿಪಬ್ಲಿಕ್ ಕಟ್ಟಲು ಯತ್ನಿಸಿದನು. ಸಾರ್ಡಿನಿಯ ಪಿಯ್ಡ್‌ಮಂಟುಗಳಿಗೆ ದೊರೆಯೆನಿಸಿದ್ದ **ಚಾರ್ಲ್ಸ್ ಆಲ್ಬರ್ಟ್** ಎಂಬಾತನು ಆಸ್ಟ್ರಿಯದವರೊಂದಿಗೆ ಯುದ್ಧ ಮಾಡಿ ಇಟಲಿಯ ಉತ್ತರಭಾಗವನ್ನು ಬಿಡಿಸಿಕೊಳ್ಳುವಂತೆ ಪ್ರೇರಣೆ ನಡೆಯಿತು. ಯುದ್ಧ ನಡೆಯಿತು. ಆದರೆ ಸಾರ್ಡಿನಿಯದೊರೆ ಸೋತು ರಾಜ್ಯತ್ಯಾಗ ಮಾಡಿದನು. ಆಸ್ಟ್ರಿಯದವರು ಜಯಶಾಲಿಗಳಾಗಿ ನಿರಂಕುಶಪ್ರಭುಗಳು ಹಿಂದಿನಂತೆ ನಿರಾತಂಕರಾದರು.

ಹೊಸ ದೊರೆ **ವಿಕ್ಟರ್ ಇಮಾನ್ಯುಯಲ್** (Victor Emmanuel) ಮಾತ್ರ ತಾನು ಕೊಟ್ಟ ಸುಧಾರಣೆಗಳನ್ನು ನಡೆಸುತ್ತ ಪ್ರಸಿದ್ಧನಾದ **ಕವೂರ್ ಶ್ರೀಮಂತ** (Count Cavour)ನನ್ನು ಮಂತ್ರಿಯಾಗಿಟ್ಟುಕೊಂಡನು. ಈ ಶ್ರೀಮಂತನು ದೂರಾಲೋಚನೆಯಿಂದ ಫ್ರಾನ್ಸಿನ ಚಕ್ರವರ್ತಿಯ ಬಲವನ್ನು ಆಸ್ಟ್ರಿಯದೆದುರಿಗೊಡ್ಡುವ ಆಸೆ ಬೆಳೆಸಿಕೊಂಡನು. ಕ್ರಿಮಿಯ ಯುದ್ಧಸಮಯದಲ್ಲಿ ಫ್ರಾನ್ಸ್ ಪಕ್ಷವನ್ನು ಸೇರಿಕೊಂಡಿದ್ದು ಇಟಲಿಗೆ ಏಕರಾಷ್ಟ್ರವನ್ನು ರಚಿಸುವ ಯೋಚನೆಯನ್ನು ಬಲಿಷ್ಠರಾದ ಬ್ರಿಟಿಷರ ಮುಂದೆಯೂ ಫ್ರೆಂಚರ ಮುಂದೆಯೂ ಇಟ್ಟನು. ಇಟಲಿಯವರ ಆಸೆಗಳು ನ್ಯಾಯವೆನಿಸಿದವು. ಕ್ರಿಮಿಯ ಯುದ್ಧ ಮುಗಿದ ತರುವಾಯ ಕವೂರ್ ಶ್ರೀಮಂತನು ಮೂರನೆ ನಪೋಲಿಯನ್ನನಿಂದ ಸಹಾಯದ ವಾಗ್ದಾನವನ್ನು ಪಡೆದು ಉಪಾಯವಾಗಿ ವರ್ತಿಸಿ ಆಸ್ಟ್ರಿಯದವರೇ ಮೊದಲು ಜಗಳಕ್ಕೆ ಬರುವಂತೆ ನೆರವೇರಿಸಿದನು.

1859ರಲ್ಲಿ ಆಸ್ಟ್ರಿಯದವರು ಸಾರ್ಡಿನಿಯ ದೊರೆಯ ಮೇಲೆ ಯುದ್ಧಕ್ಕೆ ಹೊರಟರು. ಆ ದೊರೆಗೆ ಸಹಾಯವಾಗಿ ಲೂಯಿ ನಪೋಲಿಯನ್ ಹೊರಟು ಆಸ್ಟ್ರಿಯದವರನ್ನು ಎರಡು ಕದನಗಳಲ್ಲಿ ಸೋಲಿಸಿದನು. ಪರಿಣಾಮವಾಗಿ 1860ರಲ್ಲಿ ಇಟಲಿಯ ಮಧ್ಯಭಾಗವೆಲ್ಲ ಒಂದು ರಾಜ್ಯವಾಯಿತು. ಅದೇವೇಳೆಯಲ್ಲಿ **ಗ್ಯಾರಿಬಾಲ್ಡಿ** (Garibaldi) ಎಂಬ ಸಾಹಸಿಯು ರಾಜ್ಯವಿಲ್ಲದೆ ಕೋಶವಿಲ್ಲದೆ ಕೇವಲ ದೇಶಭಕ್ತಿ ಸಾಹಸಗಳಿಂದ ಕೂಡಿ ಒಂದು ದಳವನ್ನು ಕಟ್ಟಿಕೊಂಡು ಸಿಸಿಲಿ ನೇಪಲ್ಸ್ ಭಾಗಗಳಲ್ಲಿ ಜನರನ್ನು ಕೂಡಿಸಿ ಅಲ್ಲಿಯ ಬೋರ್ಬನ್ ಪ್ರಭುವನ್ನು ಓಡಿಸಿದ್ದನು. ಆ ದಕ್ಷಿಣ ಪ್ರಾಂತಗಳೂ ಸಾರ್ಡಿನಿಯ ದೊರೆ ಕಟ್ಟಿದ ಇಟಲಿಯ ರಾಜ್ಯವನ್ನು ಸೇರಿಕೊಂಡವು. ಮಧ್ಯಭಾಗದಲ್ಲಿ ಹಾಗೆಯೇ ಉಳಿದುಕೊಂಡ ಪೋಪನ ಆಧಿಪತ್ಯವನ್ನೂ ಉತ್ತರದಲ್ಲಿ ಆಸ್ಟ್ರಿಯ ಕೈಬಿಟ್ಟು ಫ್ರಾನ್ಸಿಗೆ ಸೇರಿದ್ದ ಭಾಗವನ್ನೂ ಕಾಲಕ್ರಮದಲ್ಲಿ ಇಟಲಿ ರಾಜ್ಯಕ್ಕೆ ಸೇರಿಸಲಾಯಿತು. 1860—70 ರಲ್ಲಿ ಇಟಲಿಯ ಐಕ್ಯತೆಯೆಂಬುದು ಈರೀತಿಯಲ್ಲಿ ಕೈಗೂಡಿತು.

**ಜರ್ಮನಿಯ ಐಕ್ಯತೆ**

ಬಾಲ್ಕನ್ ಪರ್ಯಾಯದ್ವೀಪದ ಕ್ರೈಸ್ತ ಜನರ ಬಿಡುಗಡೆಯನ್ನು ಸಾಧಿಸುವುದರಲ್ಲಿ ರಷ್ಯ ಚಕ್ರವರ್ತಿಗೆ ಪ್ರಬಲಪ್ರತಿಕಕ್ಷಿಯಾದ ಆಸ್ಟ್ರಿಯದ ಚಕ್ರವರ್ತಿಗೆ ಇಟಲಿಯಲ್ಲಿ ತೊಂದರೆಗಳಿದ್ದ ಕಾರಣದಿಂದ ಕ್ರಿಮಿಯ ಯುದ್ಧದಲ್ಲಿ ಆತನು ತಟಸ್ಥನಾಗಿರಬೇಕಾಯಿತು. ಇಟಲಿಯಲ್ಲಿ ಮಾತ್ರವೇ ತೊಂದರೆಯಲ್ಲ; ಜರ್ಮನಿಯಲ್ಲಿಯೂ ಇದ್ದಿತು. ನಪೋಲಿಯನ್ ಜರ್ಮನಿಯನ್ನೂ ಮಥಿಸಿದ್ದನು. ವಿಯೆನ್ನ ಕಾಂಗ್ರೆಸ್ಸಿನ ಏರ್ಪಾಟು ನಡೆದಾಗ ಜರ್ಮನಿಯಲ್ಲಿ ಮೂವತ್ತೆಂಟು ಸಂಸ್ಥಾನಗಳು ಗೊತ್ತಾದವು. ಅವುಗಳಲ್ಲಿ ಪ್ರಷ್ಯ ಮತ್ತು ಆಸ್ಟ್ರಿಯ ಪ್ರಬಲ. ಇತರ ಸಂಸ್ಥಾನಗಳು ಪುಟ್ಟವಾಗಿದ್ದುದರಿಂದ ಎಂದಾದರೂ ಪ್ರಷ್ಯಕ್ಕೋ ಆಸ್ಟ್ರಿಯಕ್ಕೋ ಸೇರಿಕೊಳ್ಳತಕ್ಕವಾಗಿದ್ದವು.

ಆಸ್ಟ್ರಿಯದ ಚಕ್ರಾಧಿಪತ್ಯವೆನ್ನುವುದು ನಾನಾಬಣ್ಣಗಳಿಂದ ಕೂಡಿದ ಬುಡುಬುಡಿಕೆಯವನ ಅಂಗಿಯಂತೆ ನಾನಾಜಾತಿ ಜನರ ಸಮೂಹ. ಐಕ್ಯತೆಯೆಂಬುದು ಅಸಾಧ್ಯವಾಗಿತ್ತು. ಆ ಚಕ್ರವರ್ತಿಯೋ ನಿರಂಕುಶಪ್ರಭುತ್ವದ ಮಂತ್ರವನ್ನೇ ಜಪಿಸುತ್ತಿದ್ದು ಜನರ ಗುಂಪನ್ನು ಎದುರುಹಾಕಿಕೊಳ್ಳತಕ್ಕಂತೆ ವರ್ತಿಸತಕ್ಕವನು. ಪ್ರಷ್ಯ ರಾಜ್ಯವೆಂಬುದು ದರೋಡೆ ದೊರೆ ಫ್ರೆಡರಿಕ್ಕನ ಕಾಲದಿಂದ ಬಲಿಷ್ಠವಾಗುತ್ತಿತ್ತು. ಯುದ್ಧಸಿದ್ಧತೆ ಅಲ್ಲಿಯ ಆಡಳಿತದಲ್ಲಿ ಮುಖ್ಯ ಗುರಿಯಾಗಿತ್ತು. ಅಲ್ಲಿಯ ದೊರೆ ನಿರಂಕುಶನಾದಾಗ್ಗೂ ಪ್ರಜೆಗಳ ಇಷ್ಟವನ್ನು ಅನುಸರಿಸುತ್ತ ಅವರ ವಿಶ್ವಾಸವನ್ನು ಸಂಪಾದಿಸಿದ್ದನು. 1848ರ ವೇಳೆಗೆ ಚಿಕ್ಕಪುಟ್ಟ ಜರ್ಮನ್ ಸಂಸ್ಥಾನಗಳು ಪ್ರಷ್ಯದ ನೇತೃತ್ವದಲ್ಲಿ ಅನ್ಯೋನ್ಯವಾಗಿ ಸೇರಿ ಒಂದು **ಶುಲ್ಕಬಂಧವನ್ನು** (Zollverein) ಕಟ್ಟಿಕೊಂಡಿದ್ದವು. 1848ರಲ್ಲಿ ಪಲ್ಲಟಗಳು ರೇಗಿದಾಗ **ಫ್ರಾಂಕ್‌ಫರ್ಟ್**(Frankfort) ಪಟ್ಟಣದಲ್ಲಿ ಸಮಸ್ತ ಜರ್ಮನಿಗೂ ಒಂದು ಪಾರ್ಲಿಮೆಂಟ್ ಸೇರಿ ಪ್ರಷ್ಯದ ದೊರೆಯನ್ನು ಜರ್ಮನ್ ಚಕ್ರವರ್ತಿಯನ್ನಾಗಿ ಸ್ಥಾಪಿಸುವ ಯೋಚನೆ ನಡೆಯಿತು. ಆ ದೊರೆ ಅದಕ್ಕೊಪ್ಪಲಿಲ್ಲ. ಆಸ್ಟ್ರಿಯದ ಪ್ರಭು ತನ್ನ ಆಳಿಕೆಗೆ ವಿರುದ್ಧವಾಗಿ ನಡೆದಿದ್ದ ಈ ಚಳುವಳಿಯನ್ನು ಬಲದಿಂದ ಅಡಗಿಸಿಬಿಟ್ಟು ಹಿಂದಿನಂತೆ ಪ್ರಬಲನಾಗಿಯೇ ಇದ್ದನು.

1861ರಲ್ಲಿ ಪ್ರಷ್ಯ ರಾಜ್ಯದಲ್ಲಿ ಲಿಬರಲ್ ಪಾರ್ಟಿಯವರು ಚೈತನ್ಯತೋರಿ ರಾಜ್ಯದಲ್ಲಿ ರಾಜಕೀಯ ಸುಧಾರಣೆಗಳಾಗಬೇಕೆಂದು ಯತ್ನಿಸಿದರು. ಅಲ್ಲಿಯ ದೊರೆ ಆ ಯತ್ನಕ್ಕೆ ಅವಕಾಶ ಕೊಡದೆ **ಬಿಸ್ಮಾರ್ಕ್** (Bismarck) **ಶ್ರೀಮಂತನನ್ನು** ತನ್ನ ಮಂತ್ರಿಯಾಗಿ ಗೊತ್ತುಮಾಡಿಕೊಂಡನು. ಅಂದಿನಿಂದ ಯೂರೋಪಿನ ಸಂಧಿವಿಗ್ರಹದ ಚರಿತ್ರೆಯಲ್ಲಿ ಬಿಸ್ಮಾರ್ಕನ ಪ್ರಭಾವ ಮೊದಲಾಯಿತು. ಪ್ರಷ್ಯದ ನೇತೃತ್ವದಲ್ಲಿ ಜರ್ಮನಿಯೆಲ್ಲವನ್ನೂ ಒಟ್ಟುಗೂಡಿಸುವ ಕೆಲಸವನ್ನು ಸಾಧಿಸಬೇಕೆಂಬ ಸಂಕಲ್ಪ

ಆತನದು. ಪ್ರಷ್ಯದ ಒಳಾಡಳಿತದಲ್ಲಿ ರಾಜಾಧಿಕಾರವನ್ನು ಭದ್ರಗೊಳಿಸಿ ಪ್ರಬಲವಾದ ಸೈನ್ಯವನ್ನು ಸನ್ನದ್ಧಗೊಳಿಸಿ ಬಿಸ್ಮಾರ್ಕ್ ಆಸ್ಟ್ರಿಯವನ್ನು ದುರ್ಬಲಗೊಳಿಸುವ ಉಪಾಯವನ್ನು ಹುಡುಕಿದನು.

ಆಗ ಬ್ರಿಟನ್ನಿನಲ್ಲಿ ವೃದ್ಧನಾದ ಪಾಮರ್ಸ್ಟನ್ ಶ್ರೀಮಂತನೇ ಮುಖ್ಯಮಂತ್ರಿಯಾಗಿದ್ದನು. ಇಟಲಿಯ ಸಂಸ್ಥಾನಗಳು ಒಟ್ಟುಗೂಡಿ ಏಕರಾಷ್ಟ್ರವನ್ನು ಕಟ್ಟಿಕೊಳ್ಳುವ ಕಾಲದಲ್ಲಿ ಆತನು ಜನರ ಪಕ್ಷಪಾತಿಯಂತೆ ವರ್ತಿಸಿ ಗ್ಯಾರಿಬಾಲ್ಡಿಯ ಪ್ರಯತ್ನಕ್ಕೆ ಪ್ರೋತ್ಸಾಹ ಕೊಟ್ಟಿದ್ದನು. ಆದರೆ ಕ್ರಿಮಿಯ ಯುದ್ಧವಾದ ತರುವಾಯ ಆತನು ಬೆದರಿಸಿದರೆ ಇತರರು ಹಿಂದಿನಂತೆ ಬೆದರುತ್ತಿರಲಿಲ್ಲ. 1863ರಲ್ಲಿ ಪೋಲಂಡಿನಲ್ಲಿ ಜನರು ರಷ್ಯನ್ನರಿಗೆದುರಾಗಿ ದಂಗೆಯೆದ್ದರು. ರಷ್ಯ ಚಕ್ರವರ್ತಿಯು ದಂಗೆಕೋರರನ್ನು ಕ್ರೂರರೀತಿಯಲ್ಲಿ ಅಡಗಿಸಿದನು. ಆಗ ಪಾಮರ್ಸ್ಟನ್ ಜನರ ಪಕ್ಷಪಾತಿಯಾಗಿ ವರ್ತಿಸಿ ಸಹಾಯಮಾಡುವ ಸೂಚನೆಯನ್ನು ಕೊಟ್ಟಿದ್ದು ಸಮಯದಲ್ಲಿ ಏನೂ ಮಾಡಲಾರದೆ ತಟಸ್ಥನಾದನು. ಬಿಸ್ಮಾರ್ಕನಾದರೆ ಅದೇ ದಂಗೆಯು ಪ್ರಷ್ಯದಲ್ಲಿಯೂ ಹರಡಿಕೊಳ್ಳದಂತೆ ಸೈನ್ಯಗಳನ್ನು ಎಲ್ಲೆಯಬಳಿ ನಿಲ್ಲಿಸಿ ರಷ್ಯ ಚಕ್ರವರ್ತಿಯ ಸ್ನೇಹಿತನಾಗಿ ವರ್ತಿಸಿದನು. ಪೋಲಂಡ್ ಜನರು ಸಹಾಯಹೀನರಾಗಿ ಸ್ವಾತಂತ್ರ್ಯವನ್ನು ಸಾಧಿಸಿಕೊಳ್ಳಲಾರದೆಹೋದರು.

1864ರಲ್ಲಿ ಬಿಸ್ಮಾರ್ಕ್ ಹೊಂಚಿದ್ದ ಸಮಯ ಪ್ರಾಪ್ತವಾಯಿತು. ಪ್ರಷ್ಯಕ್ಕುತ್ತರದಲ್ಲಿ ಎರಡು ಸಣ್ಣ ಸಂಸ್ಥಾನಗಳಿದ್ದವು. **ಶ್ಲೆಸ್ವಿಗ್** (Schleswig) ಮತ್ತು **ಹೋಲ್‌ಸ್ಟೈನ್** (Holstein) ಎಂಬ ಆ ಸಂಸ್ಥಾನಗಳಿಗೆ ಡೆನ್ಮಾರ್ಕಿನ ದೊರೆಯೇ ಪ್ರಭುವಾಗಿದ್ದನು. ಡೆನ್ಮಾರ್ಕಿನ ದೊರೆ ಸತ್ತು ಹೊಸ ದೊರೆ ಪಟ್ಟವೇರಿದ ಸಂದರ್ಭದಲ್ಲಿ ಆ ಸಂಸ್ಥಾನಗಳು ಜರ್ಮನ್ ಜಾತಿಯ ರಾಜಪುತ್ರನಿಗೆ ಸೇರತಕ್ಕುದೆಂದು ಬಿಸ್ಮಾರ್ಕ್ ವ್ಯಾಜ್ಯ ಮೊದಲಿಟ್ಟನು. ಆಸ್ಟ್ರಿಯದ ಚಕ್ರವರ್ತಿಯೂ ಕೂಡ ಬಿಸ್ಮಾರ್ಕಿನೊಡನೆ ಸೇರಿ ಡೆನ್ಮಾರ್ಕ್ ದೊರೆಯನ್ನು ಬೆದರಿಸಿದನು. ಆಗ ಪಾಮರ್ಸ್ಟನ್ ಡೆನ್ಮಾರ್ಕಿನ ಪಕ್ಷಹಿಡಿದು ವಾದಿಸಿದ್ದನು. ಆದರೆ ಪರಿಣಾಮದಲ್ಲಿ ಆ ಸಂಸ್ಥಾನಗಳು ಡೆನ್ಮಾರ್ಕಿನಿಂದ ಬೇರೆಯಾಗಿ ಜರ್ಮನಿಯಲ್ಲಿ ಸೇರಿಕೊಂಡವು. ಪಾಮರ್ಸ್ಟನ್ ಏನೂ ಮಾಡದೆ ಕೈಲಾಗದವನಂತೆ ಕಾಣಿಸಿಕೊಂಡನು.

**ಆಸ್ಟ್ರಿಯದೊಂದಿಗೆ ಯುದ್ಧ**

ಡೆನ್ಮಾರ್ಕ್‌ದೊರೆ ಸುಮ್ಮನಾದಮೇಲೆ ಬಿಸ್ಮಾರ್ಕ್ ಆ ಸಂಸ್ಥಾನಗಳ ವ್ಯವಸ್ಥೆಯ ವಿಚಾರದಲ್ಲಿ ಆಸ್ಟ್ರಿಯದೊಡನೆ ಜಗಳಕಿತ್ತನು. ಆಸ್ಟ್ರಿಯ ಪ್ರಷ್ಯಗಳಿಗೆ ಯುದ್ಧವಾಯಿತು. ಎರಡು ತಿಂಗಳೊಳಗೆ ಆಸ್ಟ್ರಿಯ ಪೂರ್ತಿಯಾಗಿ ಸೋತುಹೋಯಿತು. 1866ರಲ್ಲಿ **ಸಡೋವ** (Sadowa) ಬಳಿ ನಡೆದ ಕದನದಲ್ಲಿ ಪ್ರಷ್ಯದವರು ತಮ್ಮ ಯುದ್ಧಸಾಮರ್ಥ್ಯ ಬೀರಿ ಆಸ್ಟ್ರಿಯದ ಹೆಮ್ಮೆಯನ್ನು ಮುರಿದರು.

ಆಸ್ಟ್ರಿಯದ ಸೋಲಿನಿಂದ ಜರ್ಮನಿಯಲ್ಲಿ ಪ್ರಷ್ಯದ ಪ್ರಾಬಲ್ಯಕ್ಕೆ ಅಡ್ಡಿಯಿಲ್ಲದಾಯಿತು. ಪ್ರಷ್ಯದ ನೇತೃತ್ವವನ್ನು ಒಪ್ಪಿಕೊಂಡು ಉತ್ತರದ ಸಂಸ್ಥಾನಗಳೆಲ್ಲವೂ ಒಟ್ಟುಗೂಡಿ ದೊಡ್ಡರಾಷ್ಟ್ರವನ್ನು ಕಟ್ಟಿಕೊಂಡವು. ಆಸ್ಟ್ರಿಯ ಸೋತುಹೋದ ಕಾರಣ ಅತ್ತ ಇಟಲಿಯವರು ವೆನಿಸ್ ಪ್ರಾಂತವನ್ನು ಆಕ್ರಮಿಸಿಕೊಂಡರು.

ಜರ್ಮನಿಯ ಉತ್ತರಭಾಗವೆಲ್ಲ ಪ್ರಷ್ಯದೊರೆಯ ವಶವಾಯಿತು. ದಕ್ಷಿಣಭಾಗದಲ್ಲಿ ಸ್ವತಂತ್ರವಾಗಿದ್ದ ಸಂಸ್ಥಾನಗಳಿನ್ನೂ ಇದ್ದವು. ಬಿಸ್ಮಾರ್ಕನು ಅವುಗಳನ್ನೂ ಒಂದೊಂದನ್ನಾಗಿ ಜರ್ಮನಿಯ ಏಕರಾಷ್ಟ್ರಸಾಧನೆಯಲ್ಲಿ ಕೂಡಿಸುತ್ತ ಪ್ರಷ್ಯವನ್ನು ಪ್ರಬಲಗೊಳಿಸುತ್ತಿದ್ದನು. ಅದನ್ನು ಕಂಡು ಫ್ರಾನ್ಸಿನ ಮೂರನೆ ನಪೋಲಿಯನ್ನನಿಗೆ ಚಿಂತೆಹುಟ್ಟಿತು. ಆಸ್ಟ್ರಿಯಕ್ಕೆ ಸಹಾಯಮಾಡಿ ಪ್ರಷ್ಯದ ಪ್ರಾಬಲ್ಯವನ್ನು ಅಡ್ಡಿಪಡಿಸಬಹುದಾಗಿತ್ತು. ಆದರೆ ಆ ನಪೋಲಿಯನ್ ಬಿಸ್ಮಾರ್ಕನೊಂದಿಗೆ ಸಂಧಾನನಡೆಸುತ್ತ

**ಫ್ರೆಂಚರೊಂದಿಗೆ ಯುದ್ಧ**

ಫ್ರಾನ್ಸಿಗೆ ರ್‍ಹೈನ್ ಮೇರೆಯನ್ನು ಬಿಟ್ಟುಕೊಡುವುದಾದರೆ ದಕ್ಷಿಣ ಜರ್ಮನಿ ಪ್ರಷ್ಯಕ್ಕೆ ವಶವಾಗುವ ಅಂಶವನ್ನು ತಾನೊಪ್ಪಿಕೊಳ್ಳುವುದಾಗಿ ತಿಳಿಸಿದನು. ಬಿಸ್ಮಾರ್ಕನು ಆ ಸಂದೇಶವನ್ನು ಪ್ರಕಟಿಸಿ ನಪೋಲಿಯನ್ನನಲ್ಲಿ ಇತರರಿಗೆ ಅಪನಂಬಿಕೆಯುಂಟಾಗುವಂತೆ ನೆರವೇರಿಸಿದನು. 1870ರಲ್ಲಿ ಸ್ಪೈನಿನ ಪಟ್ಟದ ಜಗಳವೊಂದು ಹುಟ್ಟಿಕೊಂಡಿತು. ಆ ಸಂದರ್ಭವನ್ನು ಉಪಯೋಗಿಸಿಕೊಂಡು ಬಿಸ್ಮಾರ್ಕ್ ಫ್ರಾನ್ಸಿಗೆ ಅವಮಾನವಾಗುವಂತೆ ಸಂಧಾನನಡೆಸಿದನು. ನಪೋಲಿಯನ್ ಯುದ್ಧಕ್ಕೆ ಹೊರಡಬೇಕಾಯಿತು. ಅದನ್ನೇ ಬಿಸ್ಮಾರ್ಕ್ ಕಾದುಕೊಂಡಿದ್ದನು. 1870-1871 ರಲ್ಲಿ ಪ್ರಷ್ಯಕ್ಕೂ ಫ್ರಾನ್ಸಿಗೂ ಯುದ್ಧ ನಡೆಯಿತು. 1870 ರಲ್ಲಿ **ಸೆಡಾನ್** (Sedan) ಬಳಿ ನಪೋಲಿಯನ್ ಸರ್ವಸ್ವವನ್ನೂ ಕಳೆದುಕೊಂಡು ಸೆರೆಯಾಳಾದನು. ಹಿರೇ ನಪೋಲಿಯನ್ನನನ್ನು ಅನುಕರಿಸುತ್ತ ಫ್ರಾನ್ಸಿಗೆ ಚಕ್ರವರ್ತಿಯೆನಿಸಿದವನು ಭಾರಿ ಅವಮಾನವನ್ನು ಕಟ್ಟಿಕೊಳ್ಳಬೇಕಾಯಿತು.

ಈ ಯುದ್ಧದ ಪರಿಣಾಮವಾಗಿ ದಕ್ಷಿಣ ಜರ್ಮನ್ ಸಂಸ್ಥಾನಗಳು ಪ್ರಷ್ಯವನ್ನು ಸೇರಿಕೊಂಡವು. 1871 ರಲ್ಲಿ ಪ್ರಷ್ಯದ ದೊರೆ ಜರ್ಮನಿಗೆ ಚಕ್ರವರ್ತಿಯಾದನು. ಫ್ರಾನ್ಸಿಗೆ ಅವಮಾನದೊಂದಿಗೆ ನಷ್ಟವೂ ಆಯಿತು. **ಆಲ್ಸಾಸ್ ಲೊರೇನ್** (Alsace Lorraine) ಪ್ರಾಂತವನ್ನು ಜರ್ಮನಿಗೊಪ್ಪಿಸಬೇಕಾಯಿತು. ಮೂರನೆ ನಪೋಲಿಯನ್ನನ ಅವತಾರ ಪೂರ್ತಿಯಾಯಿತು. ಫ್ರಾನ್ಸಿನಲ್ಲಿ ಮತ್ತೊಮ್ಮೆ ರಾಷ್ಟ್ರಪಲ್ಲಟವಾಯಿತು. ಮೂರನೆ ರಿಪಬ್ಲಿಕ್ ಎಂಬುದು ಸ್ಥಾಪನೆಯಾಯಿತು.

ಜರ್ಮನರ ಐಕ್ಯತೆಯನ್ನು ಸಾಧಿಸಿ ಚಕ್ರಾಧಿಪತ್ಯವನ್ನು ಕಟ್ಟಿದ ತರುವಾಯ ಬಿಸ್ಮಾರ್ಕ್ ಶಾಂತಿಸ್ಥಿತಿಗಾಸೆಪಟ್ಟನು. ಹೊಸದಾಗಿ ಕಟ್ಟಿದ ಜರ್ಮನ್ ರಾಷ್ಟ್ರ

ಬಂಧವು ರೂಢಿಗೊಳ್ಳಬೇಕಾಗಿತ್ತು. ಆದ್ದರಿಂದ ಆತನು ರಷ್ಯ ಚಕ್ರವರ್ತಿಯೊಡನೆಯೂ ಆಸ್ಟ್ರಿಯ ಚಕ್ರವರ್ತಿಯೊಡನೆಯೂ ಸ್ನೇಹ ಕಟ್ಟಿದನು. ಫ್ರಾನ್ಸಿನವರು ತೊಂದರೆ ಕೊಡದಿರುವಂತೆ **'ಮೂವರು ಚಕ್ರವರ್ತಿಗಳ ಸ್ನೇಹ'** ವೆಂಬುದನ್ನು ಈ ರೀತಿ ಕಟ್ಟಿ ಜರ್ಮನಿಗೆ ಯುದ್ಧದ ತೊಂದರೆಯಿಲ್ಲದಂತೆ ನಡೆಸಿದನು.

ಮೊದಲು ಇಟಲಿ ತರುವಾಯ ಜರ್ಮನಿಗಳು ಈರೀತಿ ಐಕ್ಯತೆಯನ್ನು ಸಾಧಿಸಿಕೊಂಡವು. ಆದರೆ ಯೂರೋಪಿನಲ್ಲಿ ಜಗಳಗಳು ನಿಂತಹಾಗಾಗಲಿಲ್ಲ. ಪುನಃ ಜಗಳಗಳು ರೇಗಲು ಕಾರಣಗಳಿದ್ದೇ ಇದ್ದವು. ಪಾಮರ್ಸ್ಟನ್ ಶ್ರೀಮಂತನ ತರುವಾಯ ಬ್ರಿಟನ್ನಿನ ಮಂತ್ರಿಗಳು ಐರೋಪ್ಯರ ಜಗಳಗಳಲ್ಲಿ ಪ್ರವೇಶಿಸದೆ ತಟಸ್ಥರಾಗಿಯೇ ಇದ್ದರು. ಲೂಯಿ ನಪೋಲಿಯನ್ನಿಗೂ ಬಿಸ್ಮಾರ್ಕಿಗೂ ಮನಸ್ತಾಪಗಳೂ ಪೈಪೋಟಿಗಳೂ ನಡೆದಾಗ ಬ್ರಿಟಿಷರು ಯಾವ ಪಕ್ಷವನ್ನೂ ವಹಿಸಲಿಲ್ಲ. ಆದರೆ 1871ರಲ್ಲಿ ರಷ್ಯದ ಚಕ್ರವರ್ತಿಯು ಪುನಃ ತುರ್ಕಿಯ ಬಲವನ್ನು ಮುರಿಯಲು ಹವಣಿಸಿದನು. ಆಗ ಬ್ರಿಟಿಷರು ಐರೋಪ್ಯರ ಕಲಹಗಳಲ್ಲಿ ಪ್ರವೇಶಿಸಬೇಕಾಯಿತು.

### ಬಾಲ್ಕನ್ ತೊಂದರೆ

ಕ್ರಿಮಿಯ ಯುದ್ಧ ಮುಗಿದಾಗ ರಷ್ಯ ಚಕ್ರವರ್ತಿಯು ಬಾಲ್ಕನ್ ಜನರನ್ನು ಸಂರಕ್ಷಿಸಿಕೊಂಡುಬರುವ ಚಿಂತೆಯನ್ನು ತ್ಯಜಿಸುವುದಾಗಿ ವಾಗ್ದಾನಮಾಡಿ ಕಪ್ಪು ಸಮುದ್ರವು ಯಾರಿಗೂ ಸೇರದಂತಿರಬೇಕೆಂಬ ನಿಯಮವನ್ನು ಒಪ್ಪಿಕೊಂಡಿದ್ದನು. ಆದರೆ 1871ರಲ್ಲಿ ಆ ನಿಯಮವನ್ನು ಅತಿಕ್ರಮಿಸಿ ತನ್ನ ಯುದ್ಧದ ಹಡಗುಗಳನ್ನು ಅಲ್ಲಿಗೆ ಅಟ್ಟಿದನು. ಸ್ಲಾವ್ ಜಾತಿಯ ಜನಸಮೂಹಗಳೆಲ್ಲ ಒಟ್ಟಾಗಿ ಸೇರಿ ಪರಸ್ಪರ ಬಾಂಧವ್ಯವನ್ನು ಬೆಳೆಸಿಕೊಳ್ಳಬೇಕೆಂಬ ಚಳುವಳಿ (Pan-Slav Movement)ಯನ್ನು ಪೋಷಿಸಿ ಬಾಲ್ಕನ್ ಜನರು ದಂಗೆಯೇಳಲು ಪ್ರೋತ್ಸಾಹ ಕೊಟ್ಟನು. ದುರ್ಬಲನಾಗಿದ್ದ ತುರ್ಕಿ ಸುಲ್ತಾನನ ವಿರೋಧವಾಗಿ **ಬಾಸ್ನಿಯ** (Boznia), **ಹರ್ಸ್‌ಗೊವೀನ** (Herzgovina) ಎಂಬ ಬಾಲ್ಕನ್ ಪ್ರಾಂತಗಳಲ್ಲಿ ದಂಗೆಗಳೆದ್ದವು. ಬಲ್ಗಾರ್ ಗುಂಪಿನ ಬಾಲ್ಕನ್ ಜನರೂ ದಂಗೆಯೆದ್ದರು. ಸುಲ್ತಾನನ ಕಡೆಯವರು ಬಲ್ಗಾರ್ ಗುಂಪಿನ ದಂಗೆಯನ್ನು ಅಡಗಿಸಿ ಕೆಲವು ಹತ್ಯಗಳನ್ನು ನಡೆಸಿಬಿಟ್ಟರು. ಆಗ ಸೆರ್ಬರೂ ಮಾಂಟೆನೀಗ್ರಿಗಳೂ ತುರ್ಕಿಗೆ ವಿರೋಧವಾಗಿ ಯುದ್ಧಕ್ಕೆದ್ದರು.

ಹೊಸ ದಂಗೆಗಳು

1875—76ರಲ್ಲಿ ಬಾಲ್ಕನ್ ಸಮೂಹಗಳು ಈರೀತಿ ತುರ್ಕಿಗೆ ವಿರೋಧವಾಗಿ ಜಗಳಕ್ಕೆ ನಿಂತಿದ್ದವು. ಆ ವೇಳೆಯಲ್ಲಿ ಬ್ರಿಟಿಷರ ಪ್ರಧಾನಮಂತ್ರಿಯಾಗಿದ್ದ **ಬೀಕನ್ಸ್‌ಫೀಲ್ಡ್** (Beaconsfield) **ಶ್ರೀಮಂತನು** ಸುಯೆಸ್ ಕಾಲುವೆಯ ಷೇರುಗಳನ್ನು

ಸಂಪಾದಿಸಿದ್ದನು. ರಷ್ಯ ಚಕ್ರವರ್ತಿಗೆ ಇಸ್ತಾಂಬೂಲ್ ಸ್ವಾಧೀನವಾಗದಿರುವಂತೆ ನೆರವೇರಿಸಲು ತುರ್ಕಿಯನ್ನು ಬಲಪಡಿಸುವ ದಾರಿಯೇ ಆತನಿಗೊಪ್ಪಿತು. ಬಾಲ್ಕನ್ ಕುಲಗಳು ಸ್ವತಂತ್ರ ರಾಷ್ಟ್ರಗಳನ್ನು ಕಟ್ಟಿಕೊಂಡರೆ ರಷ್ಯದ ಬಲ ಹೆಚ್ಚುವುದೆಂದು ಆತನ ಮನಸ್ಸಿನಲ್ಲಿ. ಅಂತಹ ಸ್ವತಂತ್ರರಾಷ್ಟ್ರಗಳಿದ್ದಲ್ಲಿ ಆ ರಾಷ್ಟ್ರಗಳವರು ಸ್ವಾತಂತ್ರ್ಯ ಪ್ರೀತಿಯಿಂದ ರಷ್ಯದ ಪ್ರಾಬಲ್ಯವನ್ನು ತಡೆದಾರೆಂಬುದು ಪ್ರತಿಪಕ್ಷನಾಯಕನಾಗಿದ್ದ ಗ್ಲಾಡ್‌ಸ್ಟನ್ನನ ಅಭಿಪ್ರಾಯ. ತುರ್ಕಿಯ ಸ್ನೇಹವನ್ನು ಕಾಪಾಡುವುದೇ ಪರ ಮೋಪಾಯವೆಂಬ ಅಭಿಪ್ರಾಯವನ್ನು ಪಟ್ಟಿದ್ದ ಬೇಕನ್ಸ್‌ಫೀಲ್ಡ್ ಶ್ರೀಮಂತನು ರಷ್ಯ ಚಕ್ರವರ್ತಿಗೆ ಎಚ್ಚರಿಕೆ ಕೊಟ್ಟನು. 1877ರಲ್ಲಿ ಒಂದು ಸಮ್ಮೇಳನ ನಡೆಯಿತು. ಅದರಲ್ಲಿ ಯಾವುದೂ ನಿರ್ಧರವಾಗಲಿಲ್ಲ. ಅತ್ತ ಸೆರ್ಬಕುಲಸ್ಥರು ಪೂರಾ ಸೋಲು ವಂತಿತ್ತು. ಆಗ ರಷ್ಯ ಚಕ್ರವರ್ತಿ ಸೆರ್ಬರ ಸಹಾಯಕ್ಕೆ ತನ್ನ ಸೈನ್ಯಗಳನ್ನು ಕಳು ಹಿಸಿಕೊಟ್ಟನು. ಆ ಸೈನ್ಯವು ಬೇಗನೆ ಜಯಪಡೆದು **ಎಡ್ರಿಯ ನೋಪಲ್** (Adrianople) ನಗರವನ್ನು ಆಕ್ರಮಿಸಿ ಇಸ್ತಾಂಬೂಲನ್ನು ಆಕ್ರಮಿಸುವಂತಿತ್ತು. ಆಗ ಬೇಕನ್ಸ್‌ಫೀಲ್ಡ್ ಬ್ರಿಟಿಷ್ ಯುದ್ಧದ ಹಡಗುಗಳನ್ನು ತುರ್ಕಿಯ ಸಹಾಯಕ್ಕೆ ಕಳುಹಿಸಿದನು. ಬ್ರಿಟಿಷರೊಡನೆ ಯುದ್ಧವನ್ನೊಲ್ಲದೆ ರಷ್ಯದವರು ಯುದ್ಧವನ್ನು ನಿಲ್ಲಿಸಿ 1878 ರಲ್ಲಿ **ಸಾನ್ ಸ್ಟೆಫಾನೊ** (San Stefano) ಎಂಬಲ್ಲಿ ತುರ್ಕಿಯೊಡನೆ ಒಪ್ಪಂದ ನಡೆಸಿದರು. ಬಾಲ್ಕನ್ ಕ್ಷೇತ್ರದಲ್ಲಿ ಬಲ್ಗಾರ್ ಗುಂಪಿನ ಜನರಿಗೆ ಒಂದು ಸ್ವತಂತ್ರರಾಷ್ಟ್ರ ಸ್ಥಾಪನೆಯಾಗುವಂತೆ ಆ ಒಪ್ಪಂದದಲ್ಲಿತ್ತು. ರಷ್ಯದವರು ಬಾಲ್ಕನ್ ಸಮೂಹಗಳ ರಕ್ಷಣೆವಹಿಸಿಕೊಂಡಂ ತಾಯಿತು. ಆದುದರಿಂದ ಬೇಕನ್ಸ್‌ಫೀಲ್ಡ್ ಆ ಒಪ್ಪಂದಕ್ಕೊಪ್ಪದೆ ಎಲ್ಲವೂ ಪುನರ್ವಿಮರ್ಶೆಯಾಗಬೇಕೆಂದನು.

**ರಷ್ಯದ ಜಯ**

ಬಿಸ್ಮಾರ್ಕ್ ಮಂತ್ರಿಗೆ ಜರ್ಮನಿಗೂ ಜರ್ಮನ್ ರಾಜಧಾನಿ ಬರ್ಲಿನ್ನಿಗೂ ಹೆಸರು ಕಟ್ಟಲು ಇದು ಒಳ್ಳೆ ಸನ್ನಿವೇಶವಾಗಿ ತೋರಿತು. ರಷ್ಯ ತುರ್ಕಿ ಬ್ರಿಟನ್ನುಗಳ ಸಮಸ್ಯೆಗೆ ದೂರವಾಗಿ ತಟಸ್ಥನಾಗಿದ್ದುದರಿಂದ ತನ್ನ ಮಾಧ್ಯಸ್ಥವೆಲ್ಲರಿಗೂ ಒಪ್ಪೀತೆಂದು ಹೇಳುತ್ತ ಬಿಸ್ಮಾರ್ಕ್ ಬರ್ಲಿನ್ ನಗರದಲ್ಲಿ ದೊಡ್ಡ ಸಮ್ಮೇಳನವನ್ನು ನಡೆಸಿದನು. ಅದೇ **ಬರ್ಲಿನ್ ಕಾಂಗ್ರೆಸ್** (1878). ಅಲ್ಲಿ ಗೊತ್ತಾದ ಮುಖ್ಯಾಂಶಗಳು:

(1) ಬಲ್ಗಾರ್ ರಾಷ್ಟ್ರವೆಂದು ಗೊತ್ತಾಗಿದ್ದುದು ಮೂರು ಭಾಗವಾಗಿ, ಒಂದು ಭಾಗ ತುರ್ಕಿ ಪ್ರಾಂತವಾಗಿಯೂ ಒಂದು ಭಾಗ ಬಲ್ಗೇರಿಯ ರಾಷ್ಟ್ರವಾಗಿಯೂ ಮತ್ತೊಂದು ಭಾಗ ಈಸ್ಟರ್ನ್ ರುಮೇಲಿಯ (Eastern Roumelia) ಎಂಬ ರಾಷ್ಟ್ರವಾಗಿಯೂ ಇರತಕ್ಕದ್ದು.

(2) ಬಾಸ್ನಿಯ ಹರ್ಸ್‌ಗೊವೀನಗಳೆಂಬ ಬಾಲ್ಕನ್ ರಾಷ್ಟ್ರಗಳು ಆಸ್ಟ್ರಿಯ ಹಂಗರಿಯ ಪ್ರಭುವಿನ ಆಡಳಿತದಲ್ಲಿರತಕ್ಕದ್ದು.

(3) ಸರ್ಬಿಯ ಮಾಂಟಿನೀಗ್ರೊ ರುಮೇನಿಯಗಳು ಸ್ವತಂತ್ರ ರಾಷ್ಟ್ರಗಳಾಗಿರ ತಕ್ಕದ್ದು.

(4) ತುರ್ಕಿಯವರು ಬ್ರಿಟಿಷರಿಗೆ ಸೈಪ್ರಸ್ ದ್ವೀಪವನ್ನು ಕೊಟ್ಟುಬಿಡತಕ್ಕದ್ದು ಮತ್ತು ತಮ್ಮ ಆಡಳಿತವನ್ನು ಸುಧಾರಿಸಿಕೊಳ್ಳತಕ್ಕದ್ದು.

ಯುದ್ಧವಿಲ್ಲದೆ ಬೇಕನ್ಸ್‌ಫೀಲ್ಡ್ ಮಂತ್ರಿಯ ಉದ್ದೇಶಗಳು ಸಫಲವಾದವು. ಆದರೆ ಬಾಲ್ಕನ್ ಸಮೂಹಗಳಲ್ಲಿ ಈ ಏರ್ಪಾಟು ನಡೆಯಲಿಲ್ಲ. ಹಿಂದಿನಿಂದಲೂ ಆ ಕ್ಷೇತ್ರದಲ್ಲಿ ರಷ್ಯ ಚಕ್ರವರ್ತಿಗೆ ವಿರೋಧಿಯಾಗಿದ್ದ ಆಸ್ಟ್ರಿಯಪ್ರಭುವಿಗೆ ಕ್ಷೇತ್ರ ಲಭಿಸಿದ್ದರಿಂದ ಮುಂದಕ್ಕೆ ಮೇಲೂ ಆಗಲಿಲ್ಲ.

ಬರ್ಲಿನ್ ಕಾಂಗ್ರೆಸ್ ತರುವಾಯ ರಷ್ಯದವರು ಅಸಮಾಧಾನಪಟ್ಟುಕೊಂಡರು. ಬಾಲ್ಕನ್ ಕ್ಷೇತ್ರದಲ್ಲಿ ಆಸ್ಟ್ರಿಯಪ್ರಭುವಿಗಾಸ್ಪದವಾಗಲು ಬಿಸ್ಮಾರ್ಕನೇ ಕಾರಣನೆಂದು ಕೊಂಡು ಜರ್ಮನಿಯಿಂದ ದೂರವಾದರು. ಬಿಸ್ಮಾರ್ಕಿಗೆ ಮನಸ್ಸಿನಲ್ಲಿದ್ದುದು ಫ್ರಾನ್ಸಿಗೆ ಸ್ನೇಹಿತರೊದಗದಂತೆ ಮಾಡಬೇಕೆಂಬುದು. 1871ರಲ್ಲಿ ಆದ ಅವಮಾನವನ್ನೂ ಅಲ್ಸಾಸ್‌ಲೊರೇನ್‌ಪ್ರಾಂತದ ನಷ್ಟವನ್ನೂ ಫ್ರೆಂಚರು ತಾತ್ಕಾಲಿಕವಾಗಿ ಸಹಿಸಿದ್ದರೂ ಪುನಃ ಸಮಯ ದೊರೆತಾಗ ವಿರೋಧತೋರತಕ್ಕವರೆಂದು ಬಿಸ್ಮಾರ್ಕಿಗೆ ತಿಳಿದಿದ್ದಿತು. ಆದ್ದರಿಂದ ಆಸ್ಟ್ರಿಯ ಮತ್ತು ರಷ್ಯ ಚಕ್ರವರ್ತಿಗಳ ಸ್ನೇಹವನ್ನು ಸಂಪಾದಿಸಿಕೊಂಡಿದ್ದನು. ಬರ್ಲಿನ್ ಕಾಂಗ್ರೆಸ್ ತರುವಾಯ ರಷ್ಯ ಅಸಮಾಧಾನಪಟ್ಟು ದೂರವಾಗಲು ಬಿಸ್ಮಾರ್ಕನು 1879ರಲ್ಲಿ ಆಸ್ಟ್ರಿಯದೊಡನೆ ಹೊಸದಾಗಿ ಮೈತ್ರಿ ಕಟ್ಟಿದನು. ರಷ್ಯದೊಂದಿಗೆ ಮೈತ್ರಿಯನ್ನು ಬಿಡದೆ ಇದ್ದನು. 1882ರಲ್ಲಿ ಇಟಲಿಯವರು ಫ್ರಾನ್ಸಿನೊಡನೆ ಟ್ರಿಪೋಲಿ ವಿಚಾರವಾಗಿ ವ್ಯಾಜ್ಯವಾಡಿ ಜರ್ಮನಿ ಆಸ್ಟ್ರಿಯಗಳ ಕೂಟವನ್ನು ಸೇರಿಕೊಂಡರು. ಈರೀತಿಯಲ್ಲಿ **ಟ್ರಿಪ್ಲ್ ಅಲಯನ್ಸ್** (Triple Alliance) ಎಂಬುದನ್ನು ಕಟ್ಟಿ ರಷ್ಯ ಬ್ರಿಟನ್ನುಗಳೊಂದಿಗೆ ಮೈತ್ರಿಯಿಂದಿರುತ್ತ ಬಿಸ್ಮಾರ್ಕ್ ಫ್ರಾನ್ಸ್ ದೇಶದವರಿಗೆ ಅನ್ಯಸಹಾಯವಿಲ್ಲದಂತೆ ನೆರವೇರಿಸಿದನು.

**ಮಿತ್ರವ್ಯೂಹಗಳು**

1888ರಲ್ಲಿ **2ನೆ ವಿಲಿಯಂ** ಎಂಬ ಹೊಸ ಪ್ರಭು ಜರ್ಮನಿಯ ಪಟ್ಟವನ್ನೇರಿದನು. ಬಿಸ್ಮಾರ್ಕ್ ಶ್ರೀಮಂತನಲ್ಲಿ ಆತನಿಗೆ ವಿಶ್ವಾಸ ಹೆಚ್ಚಾಗಿರಲಿಲ್ಲ. ಆದುದರಿಂದ 1890ರಲ್ಲಿ ಆ ಶ್ರೀಮಂತನಿಗೆ ಅಧಿಕಾರದಿಂದ ನಿವೃತ್ತಿಯಾಯಿತು. ರಷ್ಯದವರು ಜರ್ಮನಿಯೊಡನೆ ಮೈತ್ರಿಯಿಂದಿರುವುದು ಕಷ್ಟವಾಗಿಯೇ ಇತ್ತು. 1896ರಲ್ಲಿ

ರಷ್ಯ ಮತ್ತು ಫ್ರಾನ್ಸ್ ಒಟ್ಟುಗೂಡಿ ಮೈತ್ರಿ ಕಟ್ಟಿದವು. ಜರ್ಮನಿ ಆಸ್ಟ್ರಿಯಗಳ ಜೋಡಿಯೊಂದು, ರಷ್ಯ ಫ್ರಾನ್ಸ್‌ಗಳ ಜೋಡಿಯೊಂದು ಎದುರುಬದುರಾದವು.

ಗ್ರೇಟ್‌ಬ್ರಿಟನ್ನಿನವರು ಯಾವ ಪಕ್ಷಕ್ಕೂ ಸೇರದೆ ತಟಸ್ಥರಾಗಿದ್ದು ಎಲ್ಲರೊಡನೆ ಮೈತ್ರಿಯಿಂದಿರುವ ಉಪಾಯವನ್ನವಲಂಬಿಸಿದರು. ಹತ್ತೊಂಭತ್ತನೆ ಶತಮಾನ ದಂತ್ಯದಲ್ಲಿ ಮೊದಲು ಫ್ರಾನ್ಸಿಗೂ ಬ್ರಿಟನ್ನಿಗೂ ಸಾಮ್ರಾಜ್ಯಸಂಪಾದನೆಯ ಪೈಪೋಟಿ ಏಷ್ಯದ ಆಗ್ನೇಯಭಾಗಗಳಲ್ಲಿ ನಡೆಯಿತು. ಜರ್ಮನಿಗೂ ಬ್ರಿಟನ್ನಿಗೂ ಸ್ನೇಹವೇ ಇದ್ದಾಗ್ಗೂ ಸಾಮ್ರಾಜ್ಯದ ಆಸೆಯಿಂದ ಜರ್ಮನಿಯವರೂ ಪೈಪೋಟಿ ಬೆಳೆಸುವಂತಿತ್ತು. ಜರ್ಮನ್ ಚಕ್ರವರ್ತಿ ವಿಲಿಯಂ ಕೆಲವೇಳೆಗಳಲ್ಲಿ ಬ್ರಿಟಿಷರಿಗೆ ಅಸಮಾಧಾನವುಂಟಾಗು ವಂತೆ ವರ್ತಿಸಿದನು. ಜರ್ಮನಿಯವರು ಪ್ರಬಲರಾದಂತೆಲ್ಲ ಬ್ರಿಟಿಷರೊಡನೆ ಪೈಪೋಟಿ ತೋರಿತು. ಜರ್ಮನಿಯ ಮೈತ್ರಿ ಸಡಲಿದಂತೆಲ್ಲ ಫ್ರಾನ್ಸ್ ಬ್ರಿಟನ್ನುಗಳ ಮೈತ್ರಿ ಹೆಚ್ಚಿತು. 1904ರಲ್ಲಿ ಬ್ರಿಟಿಷರೂ ಫ್ರೆಂಚರೂ **ಆಂತಾಂತ್**(Entente) ಎಂಬ ಹೆಸರಿನಿಂದ ಸ್ನೇಹ ಕಟ್ಟಿದರು. 1907ರಲ್ಲಿ ಬ್ರಿಟಿಷರು ರಷ್ಯದೊಂದಿಗೂ ಒಪ್ಪಂದ ನಡೆಸಿಕೊಂಡರು. ಬ್ರಿಟನ್ ಫ್ರಾನ್ಸ್ ರಷ್ಯಗಳು ಮೂರೂ ಸೇರಿ ಟ್ರಿಪ್ಲ್ ಅಲಯನ್ಸ್ ಮಂಡಲಿಗೆದುರಾಗಿ ವ್ಯೂಹಕಟ್ಟಿದಂತೆ ಆಯಿತು.

## ಒಳಾಡಳಿತ (1868—1901)

ಸರ್ ರಾಬರ್ಟ್ ಪೀಲ್ ಪ್ರಧಾನನಾಗಿದ್ದ ಕಾಲದಲ್ಲಿ ಆತನ ಅನುಯಾಯಿಗಳಲ್ಲಿ ಸೇರಿದ್ದ ಇಬ್ಬರು ಕಾಲಕ್ರಮದಲ್ಲಿ ಅಗ್ರಗಣ್ಯರಾಗಿ ಪ್ರಬಲವಾದ ಲಿಬರಲ್ ಕನ್ಸರ್ವೆಟಿವ್ ಪಕ್ಷಗಳ ನಾಯಕರೆನಿಸಿದರು. ಇಬ್ಬರಲ್ಲಿ **ಡಿಸ್ರೇಲಿ** ಧಾನ್ಯದ ಕಾನೂನ್ ರದ್ದಾಗುವವೇಳೆಯಲ್ಲಿ ಪೀಲನಿಗೆ ವಿರೋಧಿಯಾದವನು; **ಗ್ಲಾಡ್‌ಸ್ಟನ್** ಅನುಕೂಲ ನಾಗಿದ್ದು ಲೆಕ್ಕಾಚಾರದಲ್ಲಿ ಅನುಭವಪ್ರಾವೀಣ್ಯಗಳನ್ನು ಪಡೆದು

**ಪ್ರಸಿದ್ಧ ಸ್ಪರ್ಧಿಗಳು**

ನಿರಾತಂಕ ವ್ಯಾಪಾರವಾದಿಗಳಲ್ಲಿ ಸೇರಿಕೊಂಡವನು. ಡಿಸ್ರೇಲಿ ಕನ್ಸರ್ವೆಟಿವ್ ನಾಯಕನಾದನು. ಗ್ಲಾಡ್‌ಸ್ಟನ್ ಲಿಬರಲ್ ನಾಯಕನಾದನು. ಇಬ್ಬರೂ ಇಂಗ್ಲಂಡಿನ ಚರಿತ್ರೆಯಲ್ಲಿ ಪ್ರಸಿದ್ಧಿಗೇರಿದವರು. ಇಬ್ಬರೂ ಪ್ರಧಾನಮಂತ್ರಿಗಳಾಗಿ ರಂಜಿಸಿದವರು. ಎರಡನೆ ಸುಧಾರಣೆ ಶಾಸನ ದಿಂದ ಹಿಡಿದು ಶತಮಾನದ ಕಡೆಯವರಿಗೆ ದೇಶದ ಚರಿತ್ರೆಯೆಂಬುದು ಇಬ್ಬರ ಚರಿತ್ರೆಯೆಂದೇ ಭಾವಿಸಬಹುದು.

ಬೆಂಜಮಿನ್ ಡಿಸ್ರೇಲಿ (1804—1881) ಜಾತಿಯಲ್ಲಿ ಯೆಹೂದ್ಯ. ಶ್ರೀಮಂತರೆನಿಸ ದಿದ್ದರೂ ನೆಮ್ಮದಿಯಿಂದಿದ್ದ ಮನೆತನದಲ್ಲಿ ಹುಟ್ಟಿದವನು. ತಂದೆ ವಿದ್ವಾಂಸರಲ್ಲಿ ಗಣ್ಯನಾದವನು. ವಿದ್ಯಾಭ್ಯಾಸ ತೀರಿದಮೇಲೆ ಬೆಂಜಮಿನ್ ತುರ್ಕಿ ಮುಂತಾದ

ಮೂಡಣ ದೇಶಗಳಲ್ಲಿ ಪ್ರಯಾಣಮಾಡಿದ್ದನು. ಪ್ರಾಯಶಃ ಆ ಸಂಚಾರದ ಪ್ರಭಾವ ದಿಂದ ಬ್ರಿಟಿಷರ ಸಾಮ್ರಾಜ್ಯವಿಸ್ತಾರವನ್ನೂ ಗೌರವವನ್ನೂ ಕಟ್ಟಿಡುವ ಆಸೆ ಆತನ ಮನಸ್ಸಿನಲ್ಲಿ ನಾಟಿತ್ತು. ನಡತೆಯಲ್ಲಿ ಆತನು ಎಲ್ಲರಂತೆ

**ಡಿಸ್ರೇಲಿ**

ಇರಲಿಲ್ಲ. ಮುಂಗುರುಳನ್ನು ಗುಂಗುರುಗುಂಗುರಾಗಿ ತಿದ್ದುವುದರಲ್ಲಿಯೂ ರಂಗುರಂಗಿನ ಬಟ್ಟೆಗಳನ್ನು ತೊಡುವುದ ರಲ್ಲಿಯೂ ವ್ಯಂಗ್ಯವಾಗಿ ಮಾತನಾಡುವುದರಲ್ಲಿಯೂ ಆತನದೇ ಒಂದುರೀತಿ. ಕೆಲ ಕಾಲ ಆತನು ನಾವೆಲ್ಲುಗಳನ್ನು ಬರೆದು ಜಾಣನೆನಿಸಿದ್ದನು. ಶ್ರೀಮಂತವರ್ಗಕ್ಕೆ ಸಹಜವಾದ ಗಂಭೀರವನ್ನು ನಟಿಸುತ್ತಿದ್ದರೂ ಆತನಿಗೆ ಕಾಯಕವರ್ಗದವರ ಸ್ಥಿತಿಗತಿ ಗಳಲ್ಲಿ ಅನುಕಂಪವಿತ್ತು. ಆ ಅನುಕಂಪವಿದ್ದುದರಿಂದಲೇ ಟೋರಿಪಾರ್ಟಿಗೆ ಮುಖಂಡ ನಾಗಿದ್ದರೂ ಅನೇಕ ಸುಧಾರಣೆಗಳನ್ನು ನಡೆಸಿದನು. ಧಾನ್ಯದ ಕಾನೂನಿನ ರದ್ದನ್ನು ವಿರೋಧಿಸಿದಾಗ ಟೋರಿ ಅಥವಾ ಕನ್ಸರ್ವೇಟಿವ್ ಪಕ್ಷದಲ್ಲಿ ಒಡಕು ತೋರಿತಷ್ಟೆ. ಆಗ ರಕ್ಷಣಾವಾದಿಗಳ ಪಂಗಡಕ್ಕೆ ಡಿಸ್ರೇಲಿ ಮುಖಂಡ. ಆದರೆ ಕಾಲಕಳೆಯುತ್ತ ರಕ್ಷಣಾ ವಾದವು ಆಚರಣೆಯಲ್ಲಿ ತೋರುವುದು ಅಸಾಧ್ಯವೆಂದು ಕಂಡಾಗ ಡಿಸ್ರೇಲಿಯು ನಿದಾನವಾಗಿ ತನ್ನ ಪಕ್ಷದವರು ನಿರಾತಂಕವ್ಯಾಪಾರವಾದವನ್ನೊಪ್ಪಿಕೊಳ್ಳುವಂತೆ ನೆರ ವೇರಿಸಿದನು. ಡಾರ್ಬಿ ಶ್ರೀಮಂತನಿಗೆ ಸಹಾಯಕನಾಗಿ ಎರಡುಬಾರಿ 1852ರಲ್ಲಿಯೂ 1858 ರಲ್ಲಿಯೂ ಬೊಕ್ಕಸದ ಮಂತ್ರಿಯಾಗಿದ್ದನು. ಆದರೆ 1867ರಲ್ಲಿಯೇ ಡಿಸ್ರೇಲಿ ಕನ್ಸರ್ವೇಟಿವ್ ಪಕ್ಷದ ಮುಖ್ಯ ನಾಯಕನಾದುದು.

ವಿಲಿಯಂ ಇವರ್ಟ್ ಗ್ಲಾಡ್‌ಸ್ಟನ್ (1809-1898) ಲಿವರ್ಪೂಲಿನಲ್ಲಿ ಧನಿಕ ನಾಗಿದ್ದ ವರ್ತಕನೊಬ್ಬನ ಮಗ. ವಿದ್ಯಾಭ್ಯಾಸ ಮುಗಿದ ತರುವಾಯ ಆತನು ಟೋರಿ ಪಕ್ಷದವನಾಗಿ ಕಾಮನ್ಸ್ ಸಭಿಕನಾದನು. ಆಂಗ್ಲಿಕನ್ ಮತದಲ್ಲಿ ಅತಿನಿಷ್ಠ ನಾಗಿದ್ದವನು. ಪೀಲನ ಅನುಯಾಯಿಯಾಗಿ ಧಾನ್ಯದ ಕಾನೂನ್ ರದ್ದಾದವೇಳೆ ಯಲ್ಲಿ ಡಿಸ್ರೇಲಿಗೆ ವಿರೋಧಿಯಾದನು. ನಿರಾತಂಕ ವ್ಯಾಪಾರವಾದಿಗಳಿಗೆ ಅನುಕೂಲ ನಾಗಿ ಅಬರ್ಡೀನ್ ಶ್ರೀಮಂತನು ಕಟ್ಟಿದ ಮಂತ್ರಿಮಂಡಲಿ

**ಗ್ಲಾಡ್‌ಸ್ಟನ್**

ಯಲ್ಲಿ ಬೊಕ್ಕಸದ ಮಂತ್ರಿಯ ಕೆಲಸವನ್ನು ದಕ್ಷತೆಯಿಂದ ನಿರ್ವಹಿಸಿದನು. ಕಾಲಕಳೆಯುತ್ತ ಲಿಬರಲ್ ಗುಂಪನ್ನೇ ಸೇರಿದನು. ಆದರೆ ಪಾಮರ್ಸ್ಟನ್ ಶ್ರೀಮಂತನೊಂದಿಗೆ ಹೊಂದಿಕೊಂಡಿರುವುದು ಕಷ್ಟವಾಯಿತು. ಒಳಾಡಳಿತದಲ್ಲಿ ಯಾವ ಸುಧಾರಣೆಯನ್ನೂ ಒಲ್ಲದಿದ್ದ ಆ ಶ್ರೀಮಂತನ ಅಭಿಮತವನ್ನೊಪ್ಪದಿದ್ದ ವ್ಹಿಗ್ಗರಿಗೆ ಗ್ಲಾಡ್‌ಸ್ಟನ್ ನಾಯಕನಾದನು. 1868ರಲ್ಲಿ ಹೊಸಸುಧಾರಣೆಕಾನೂನಿನ ಪ್ರಕಾರ ಸಾರ್ವತ್ರಿಕ ಚುನಾವಣೆಗಳು ನಡೆದವು. ಲಿಬರಲ್ ಪಕ್ಷದವರಿಗೆ ಬಹುಸಂಖ್ಯೆಯ ಪ್ರಾಬಲ್ಯ ಕೈಗೂಡಿತು. ಆಗ ಗ್ಲಾಡ್‌ಸ್ಟನ್ನನು ಪ್ರಧಾನನಾಗಿ 1874ರ ವರೆಗೆ ಮಂತ್ರಿಮಂಡಲಿಯನ್ನು ನಡೆಸಿದನು. ಭಾಷಣ

ಗಳನ್ನು ಕೊಡುವುದರಲ್ಲಿ ಗ್ಲಾಡ್‌ಸ್ಟನ್ ಮಹತ್ವವುಳ್ಳವನು. ನಿಷ್ಠಾವಂತನೂ ಧೈರ್ಯಶಾಲಿಯೂ ಆಗಿದ್ದುದರಿಂದ ತನ್ನ ಗುಣದಿಂದಲೇ ಜನರನ್ನು ಮೆಚ್ಚಿಸುತ್ತಿದ್ದನು. ಕಾರ್ಯನಿರ್ವಾಹದಲ್ಲಿ ಅವಿಶ್ರಾಂತನಾಗಿ ದುಡಿಯುವ ಶಕ್ತಿ ಆತನಲ್ಲಿತ್ತು. ಪ್ರಧಾನನಾಗಿದ್ದ ಐದು ವರುಷಗಳಲ್ಲಿ ಒಳಾಡಳಿತದಲ್ಲಿಯೂ ಐರ್ಲಂಡಿನಆಡಳಿತದಲ್ಲಿಯೂ ಪರಿಣಾಮಕಾರಕವಾದ ಕಾನೂನುಗಳನ್ನೂ ಏರ್ಪಾಟುಗಳನ್ನೂ ಆತನು ನಡೆಸಿದನು.

**1868-1874**
**1ನೆ ಸಲ ಗ್ಲಾಡ್‌ಸ್ಟನ್**

1869ರಲ್ಲಿ **ಐರ್ಲಂಡಿನಲ್ಲಿ** ಸ್ಥಾಪಿತವಾಗಿದ್ದ **ಪ್ರಾಟೆಸ್ಟೆಂಟ್ ಚರ್ಚಿ**ಗಾಗಿ ಸರ್ಕಾರದಲ್ಲಿ ಹೊತ್ತಿದ್ದ ಜವಾಬ್ದಾರಿಯನ್ನು ನಿಲ್ಲಿಸುವ (Disestablishment) ಶಾಸನವಾಯಿತು. ರೋಮನ್ ಕ್ಯಾಥಲಿಕ್ ಮತದ ಐರಿಷರು ಆ ಚರ್ಚಿಗಾಗಿ ತೆರುತ್ತಿದ್ದ ದಂಡ ನಿಂತಹಾಗಾಯಿತು. 1870ರಲ್ಲಿ ಐರ್ಲಂಡಿನ **ಭೂಮಿಗಳ ಸಂಬಂಧ**ವಾಗಿ ಮೊದಲನೆ ಕಾನೂನು ನಡೆಯಿತು. ಐರ್ಲಂಡಿನ ಆಡಳಿತದಲ್ಲಿ ಗ್ಲಾಡ್‌ಸ್ಟನ್ ಗಮನವಿಟ್ಟು ಕಾಲಕ್ರಮದಲ್ಲಿ ತನ್ನ ಪಾರ್ಟಿಯವರಿಗಿಂತಲೂ ಆ ವಿಷಯದಲ್ಲಿ ಮುಂದೋಡತಕ್ಕವನಾದನು.

**ಐರ್ಲಂಡ್**

1870ರಲ್ಲಿ ಮುಖ್ಯವಾದ **ಪ್ರಾಥಮಿಕ ಶಿಕ್ಷಣದ ಕಾನೂನು** ರೂಪಗೊಂಡಿತು. ಧಾರ್ಮಿಕ ಸಂಘಗಳು ಜನಶಿಕ್ಷಣಕ್ಕಾಗಿ ಶಾಲೆಗಳನ್ನು ಸ್ಥಾಪಿಸಿ 1833ರಲ್ಲಿ ಸರ್ಕಾರದಿಂದ ಸಹಾಯದ್ರವ್ಯವನ್ನು ಪಡೆಯಲಾರಂಭಿಸಿದವು. ಆದರೆ ಜನಕ್ಕೆ ತಕ್ಕಷ್ಟು ಶಾಲೆಗಳಿರಲಿಲ್ಲ. ಪ್ರಜಾರಾಶಿಯಲ್ಲಿ ಅರ್ಧಕ್ಕಿಂತ ಹೆಚ್ಚು ಮಂದಿಗೆ ಓದುಬರಹಗಳು ಬರುತ್ತಿರಲಿಲ್ಲ. **ಫಾರ್ಸ್ಟರ್** (Forster) ಎಂಬ ಸಭಿಕನು ಪ್ರಜೆಗಳಿಗೆ ಶಿಕ್ಷಣಕೊಡಿಸುವುದು ಸರ್ಕಾರದ ಕರ್ತವ್ಯವೆಂದು ಕಾನೂನನ್ನು ಮುಂದಿಟ್ಟನು. ಆ ಕಾನೂನಿನ ಬಲದಿಂದ ಸ್ಥಳೀಯ ಶಿಕ್ಷಣ ಮಂಡಲಿಗಳು ರೂಪಗೊಂಡು ಹಿಂದಿನಿಂದ ನಡೆದುಬಂದಿದ್ದ ಶಾಲೆಗಳ ಜೊತೆಗೆ ಇನ್ನೂ ಹೆಚ್ಚು ಶಾಲೆಗಳು ಸ್ಥಾಪಿತವಾದವು. ಶಾಲೆಗಳ ವೆಚ್ಚದಲ್ಲಿ ಮೂರನೆಯೊಂದು ಪಾಲನ್ನು ಸರ್ಕಾರದವರು ಭರಿಸುವಂತೆಯೂ ಇನ್ನುಳಿದ ವೆಚ್ಚವನ್ನು ಸ್ಥಳೀಯ ತೆರಿಗೆ ಮತ್ತು ವಿದ್ಯಾರ್ಥಿಗಳ ರುಸುಮುಗಳಿಂದ ನಡೆಸುವಂತೆಯೂ ಏರ್ಪಾಟಾಯಿತು. ಎಲ್ಲರಿಗೂ ಶಿಕ್ಷಣವನ್ನು ನಿರ್ಬಂಧಗೊಳಿಸುವುದು 1880ರ ವೇಳೆಗೆ ಸಾಧ್ಯವಾಯಿತು. 1891ರಲ್ಲಿ ಶಿಕ್ಷಣ ಉಚಿತವೆನ್ನಿಸಿತು.

**ಶಿಕ್ಷಣ**

ಶಿಕ್ಷಣ ಸಂಬಂಧವಾದ ಶಾಸನವಲ್ಲದೆ ಇನ್ನೂ ಇತರ ಏರ್ಪಾಟುಗಳು ಗ್ಲಾಡ್‌ಸ್ಟನ್ನನ ಮಂತ್ರಿತನದಲ್ಲಿ ನಡೆದವು. ಆಡಳಿತದಲ್ಲಿ ಕಾರ್ಯಾಂಗದ ಅಧಿಕಾರಿಗಳನ್ನೂ

ಹುದ್ದೆದಾರರನ್ನೂ ಗೊತ್ತುಮಾಡಲು ಅದುವರೆಗೂ ಯೋಗ್ಯತಾಪರೀಕ್ಷೆಯೆಂಬುದಿರ ಲಿಲ್ಲ. ಆ ಪರೀಕ್ಷೆಯ ಏರ್ಪಾಟು ನಡೆಯಿತು. ಅಂದಿನಿಂದ ಅಯೋಗ್ಯರು ಹುದ್ದೆ ಗಳನ್ನು ಮಾವನಿಂದಲೋ ಭಾವನಿಂದಲೋ ಸಂಪಾದಿಸಿಕೊಂಡು ಕಾಲಹರಣ ಮಾಡುವುದು ನಿಂತಿತು. ಗ್ಲಾಡ್‌ಸ್ಟನ್ನನ ಸಹಾಯಕ ಮಂತ್ರಿ

**ಇತರ ಅಂಶಗಳು**

ಯಾಗಿದ್ದ **ಕಾರ್ಡ್‌ವೆಲ್** (Cardwell) ಸೈನ್ಯದ ಆಡಳಿತದಲ್ಲಿ ಒಳ್ಳೆ ಏರ್ಪಾಟುಗಳನ್ನು ನಡೆಸಿದನು. ಸೈನ್ಯದ ಅಧಿಕಾರಿ ಗಳು ತಮ್ಮ ಹುದ್ದೆಗಳನ್ನು ಮಾರಿಕೊಳ್ಳುತ್ತಿದ್ದುದು ನಿಂತಿತು. 1871ರಲ್ಲಿ ಗ್ಲಾಡ್ ಸ್ಟನ್ನನ ಪ್ರಯತ್ನದಿಂದ ಸ್ಥಳೀಯ ಕಾರ್ಯನಿರ್ವಾಹ ಸಂಬಂಧವಾದ ಶಾಸನ ಮೊದ ಲಾಯಿತು. ಸ್ಥಳೀಯ ಸಭೆಗಳ ಮೇಲ್ವಿಚಾರಣೆಗಾಗಿ ರಾಜಧಾನಿಯಲ್ಲಿ ಒಂದು ಸಭೆ ನಿರ್ಮಾಣವಾಯಿತು. 1872ರಲ್ಲಿ **ಬ್ಯಾಲಟ್ ಆಕ್ಟ್** (Ballot Act) ನಡೆಯಿತು. ವೋಟು ಕೊಡುವ ವೇಳೆಯಲ್ಲಿ ವೋಟುದಾರನು ತಾನೊಬ್ಬನೇ ಇದ್ದು ಗೂಢವಾದ ರೀತಿಯಲ್ಲಿ ತನ್ನ ವೋಟನ್ನು ಕೊಡುವ ಆಚರಣೆ ಆ ಶಾಸನದಿಂದ ಸ್ಥಾಪಿತವಾಯಿತು.

ಇಷ್ಟು ಹೊಸ ಶಾಸನಗಳೂ ಏರ್ಪಾಟುಗಳೂ ನಡೆದುದು ಹಳೇ ವ್ಹಿಗ್ಗರಿಗೆ ಸರಿಬೀಳಲಿಲ್ಲ. ತರುಣ ವ್ಹಿಗ್ಗರಿಗೆ ಅವೆಲ್ಲ ಸಾಲದೆನಿಸಿತು. ಟೋರಿಗಳಂತೂ ವಿರೋಧಪಕ್ಷದವರು. ಹೀಗಿರುವಲ್ಲಿ ಗ್ಲಾಡ್‌ಸ್ಟನ್ನನು ಅನ್ಯದೇಶಗಳೊಡನೆ ನಡೆಸಿದ ನೀತಿಯನ್ನು ಜನರು ಮೆಚ್ಚದಾದರು. ಸಂಧಿವಿಗ್ರಹದಲ್ಲಿ ಗ್ಲಾಡ್‌ಸ್ಟನ್ ಶಾಂತರೀತಿ ಯವನಾಗಿದ್ದನು. ಮುಂದೆ ಬಿದ್ದು ತಾನೇ ಸಮಯಗಳನ್ನು ಕಲ್ಪಿಸಿಕೊಂಡು ಬ್ರಿಟಿಷರ ಮೇಲ್ಮೆಯನ್ನು ಬೀರುತ್ತಿರಲಿಲ್ಲ. ಆತನ ಅಧಿಕಾರಕಾಲದಲ್ಲಿ ಯಾವ ಸಾಹಸದ ಕೆಲಸವೂ ನಡೆಯಲಿಲ್ಲ. ಇದೇ ಜನರ ಅಸಮಾಧಾನಕ್ಕೆ ಕಾರಣವಾಯಿತು. 1874ರಲ್ಲಿ ವಿರೋಧಿಪಕ್ಷದವರು ಪ್ರಬಲರಾದರು. ಡಿಸ್ರೇಲಿ ಪ್ರಧಾನನಾದನು.

ಗ್ಲಾಡ್‌ಸ್ಟನ್ ಅಧಿಕಾರ ನಡೆಸುತ್ತಿದ್ದಾಗ ಡಿಸ್ರೇಲಿ ಆತನ ಏರ್ಪಾಟುಗಳಲ್ಲಿ ದೋಷಗಳನ್ನು ಸೂಚಿಸುತ್ತ ಪ್ರತಿಪಕ್ಷವನ್ನು ನಡೆಸುತ್ತಿದ್ದನು. 1874ರಲ್ಲಿ ಕನ್ಸರ್ವೆಟಿವ್ ಪಕ್ಷ ಬಹುಪಕ್ಷವಾಯಿತು. ಡಿಸ್ರೇಲಿ ಮುಖ್ಯಮಂತ್ರಿಯಾಗಿ 1876ರಲ್ಲಿ ಶ್ರೀಮಂತ ಪದವಿಯನ್ನು ಪಡೆದು **ಲಾರ್ಡ್ ಬೀಕನ್ಸ್‌ಫೀಲ್ಡ್** (Earl of Beaconsfield) ಎಂಬ ಬಿರುದಿನಿಂದ ಶ್ರೀಮಂತಸಭೆಯ ಸಭಿಕನಾದನು. ಸಂಧಿವಿಗ್ರಹವನ್ನು **ಡಾರ್ಬಿ** ಶ್ರೀಮಂತನೂ (Earl of Derby) ಹಿಂದುಸ್ತಾನ್ ಆಡಳಿತವನ್ನು **ಸಾಲ್ಸ್‌ಬೆರಿ** ಶ್ರೀಮಂತನೂ (Salisbury) ವಹಿಸಿ ಸಹಾಯಕಮಂತ್ರಿಗಳಾ

**1874-1880**
**ಡಿಸ್ರೇಲಿ ಮಂತ್ರಿ**

ದರು. ಕನ್ಸರ್ವೆಟಿವ್‌ಪಾರ್ಟಿ ಬಲಿಷ್ಠವಾಗಿತ್ತು. ರಾಣಿಯಬಳಿ ಆಪ್ತಸ್ನೇಹಿತನಂತೆ ವರ್ತಿಸಿ ಡಿಸ್ರೇಲಿ ಪ್ರಭುವಿನ ಬೆಂಬಲವನ್ನು ಪಡೆದಿದ್ದನು. ಪ್ರತಿಪಕ್ಷದವರಾದ ಲಿಬರಲ್ ಪಂಗಡಕ್ಕೆ **ಹಾರ್ಟಿಂಗ್ಟನ್** ಶ್ರೀಮಂತನೂ (Hartington) **ಜೋಸೆಫ್ ಚೇಂಬರ್ಲೇನ್**

(Joseph Chamberlain) ಎಂಬಾತನೂ ನಾಯಕರಾಗಿದ್ದರು; ಗ್ಲಾಡ್‌ಸ್ಟನ್ ವಿಶ್ರಾಂತನಾಗಿದ್ದನು. ಆದರೆ ಲಿಬರಲ್ ಪಂಗಡದ ವಿರೋಧಕ್ಕಿಂತ ಕನ್ಸರ್ವೇಟಿವ್ ಪಕ್ಷದ ಮಂತ್ರಿಗಳಿಗೆ ತೊಂದರೆಯಾದುದು ಐರಿಷ್ ಗುಂಪಿನವರಿಂದ. ಐರಿಷ್ ಸಭಿಕರಿಗೆ ಅತಿಚತುರನೂ ಸಮರ್ಥನೂ ಆದ **ಪಾರ್ನೆಲ್** (Parnell) 1879ರಲ್ಲಿ ನಾಯಕನಾಗಿ ಆ ಗುಂಪನ್ನು ಒಟ್ಟುಗೂಡಿಸಿ ಕಾಮನ್ಸ್ ಸಭೆಯಲ್ಲಿ ಲಿಬರಲ್ ಕನ್ಸರ್ವೇಟಿವ್ ಪಕ್ಷಗಳೆರಡನ್ನೂ ಆಟವಾಡಿಸಲು ತೊಡಗಿದನು. ಐರಿಷ್ ಸಭಿಕರಿಗೆ ಬೇಕಾಗಿದ್ದ ಶಾಸನಗಳನ್ನು ಮಾಡಿಸದೆ ಇತರ ವಿಷಯಗಳನ್ನು ಮಂತ್ರಿಗಳೆತ್ತಿಕೊಂಡ ಪ್ರತಿಸಮಯದಲ್ಲೂ ಏನಾದರೊಂದುಬಗೆಯ ವಿಘ್ನವನ್ನೊಡ್ಡಿ ಕಾಲಹರಣಮಾಡುತ್ತ ಮಂತ್ರಿಗಳಿಗೆ ಅವಕಾಶವಿಲ್ಲದಂತೆ ನೆರವೇರಿಸುವುದು ಐರಿಷ್‌ಸಭಿಕರ ಉಪಾಯವಾಯಿತು. ಕನ್ಸರ್ವೇಟಿವ್ ಪಕ್ಷದ ಮಂತ್ರಿಗಳು ಐರಿಷಸಭಿಕರ ಈ ಬಗೆಯ ತುಂಟತನಕ್ಕೆ ಸಿಕ್ಕಿಕೊಂಡರು.

1874ರಿಂದ 1880ರ ವರೆಗೆ ಡಿಸ್ರೇಲಿ ಕಟ್ಟಿದ ಮಂತ್ರಿಮಂಡಲಿಗೆ ಅಧಿಕಾರ ನಡೆಯಿತು. ಕನ್ಸರ್ವೇಟಿವ್ ಪಕ್ಷದವನಾದರೂ ಅತ್ಯವಶ್ಯಕವೆನಿಸಿದ ಸುಧಾರಣೆಗಳನ್ನು ಮಾಡಲು ಮನಸ್ಸುಳ್ಳವನಾದುದರಿಂದ ಹಿಂದೆ ಡಾರ್ಬಿ ಶ್ರೀಮಂತನಿಗೆ ಸಹಾಯಕ ಮಂತ್ರಿಯಾಗಿದ್ದಾಗ ಎರಡನೆ ಪಾರ್ಲಿಮೆಂಟ್ ಸುಧಾರಣೆಯನ್ನು ನಡೆಸಿದ್ದನು. ಪ್ರಧಾನನಾದಕಾಲದಲ್ಲಿ ಅವಶ್ಯವಾದ ತಿದ್ದುಪಾಟುಗಳನ್ನು ಒಳಾಡಳಿತದಲ್ಲಿ ನಡೆಸಿದ್ದಲ್ಲದೆ ಅನ್ಯದೇಶಗಳೊಡನೆ ನಡೆಸಿದ ವ್ಯವಹಾರದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಗೌರವವನ್ನು ಎತ್ತಿಹಿಡಿದನು.

ಕಾರ್ಖಾನೆಗಳಲ್ಲಿಯೂ ದೊಡ್ಡಪಟ್ಟಣಗಳಲ್ಲಿಯೂ ಜನರ **ಆರೋಗ್ಯಪಾಲನೆ**ಗಾಗಿ ನೈರ್ಮಲ್ಯರಕ್ಷಣೆಯ ನಿಯಮನಿಬಂಧನೆಗಳನ್ನು ಬಲವಂತಗೊಳಿಸಿದ ಶಾಸನವು 1875ರಲ್ಲಿ ರೂಪಗೊಂಡಿತು (Public Health Act). ಆ ಕಾನೂನಿನಿಂದ ಜನ ಸಂದಣಿಯಿದ್ದೆಡೆಗಳಲ್ಲಿ ಅನಾರೋಗ್ಯನಿವಾರಣೋಪಾಯಗಳು ರೂಢಿಯಾಗಲು ದಾರಿಯಾಯಿತು. ಅದೇ ವರ್ಷದಲ್ಲಿ ನಗರಗಳ **ವಾಸದ ಮನೆ**ಗಳ ಸಂಬಂಧವಾಗಿ (Artisans' Dwellings Act) ಒಂದು ಕಾನೂನಾಯಿತು. ರೋಗಗಳಿಗೆ ತೌರು ಮನೆಗಳಂತಿದ್ದ ಹಳೆಮನೆಗಳನ್ನು ನಗರಸಭೆಗಳವರು ಆಕ್ರಮಿಸಿಕೊಂಡು ಹೊಸದಾಗಿ ಕಟ್ಟಿಸುವ ಅಸ್ಪದ ಅದರಿಂದ ಒದಗಿತು.

**ಮುಖ್ಯಶಾಸನಗಳು**

**ಕಸಬುದಾರರ ಸಂಘಗಳು** (Trade Unions) ಹಿಂದೆಯೇ ಹುಟ್ಟಿದ್ದವು; ಕಸಬುದಾರರಿಗೆ 1867ರಲ್ಲಿ ಡಿಸ್ರೇಲಿಯ ಪ್ರಯತ್ನದಿಂದ ವೋಟಿನ ಅಧಿಕಾರ ಲಭಿಸಿತ್ತು. ಆ ಸಂಘಗಳಿಗೆ ಅದರಿಂದ ಮುಖ್ಯತೆಯೇರಿತ್ತು. ಆದರೆ ಅವುಗಳಿಗೆ ಕೆಲವು ಅಡ್ಡಿಗಳಿದ್ದವು. ಮುಷ್ಕರ (Strike) ಸಂದರ್ಭಗಳಲ್ಲಿ ತಮ್ಮ

ಐಕಮತ್ಯವನ್ನು ಕಾಪಾಡಿಕೊಳ್ಳುವುದು ಕಷ್ಟವಾಗಿತ್ತು; ಕೆಲಸಕ್ಕೆ ಹೊರಟವರನ್ನು ಸಂಘದವರು ಪಿಕೆಟಿಂಗ್‌ನಡೆಸಿ ಅಡ್ಡಿಪಡಿಸುವುದು ಕಾನೂನಿನಿಂದ ನಿಷಿದ್ಧವಾಗಿತ್ತು. ಆ ನಿಷೇಧವನ್ನು ತಳ್ಳಿಹಾಕಿದ ಶಾಸನವೂ 1875ರಲ್ಲಿ ನಡೆಯಿತು. 1878ರಲ್ಲಿ ಕಾರ್ಖಾನೆಗಳ ಸಂಬಂಧವಾದ ಶಾಸನಗಳೆಲ್ಲವನ್ನೂ ಪರಿಶೋಧಿಸಿ ಒಂದು ಕೋಶ ವನ್ನಾಗಿ ರಚಿಸಲಾಯಿತು.

**ಸಂಧಿವಿಗ್ರಹ**

ಸಂಧಿವಿಗ್ರಹದಲ್ಲಿ ಡಿಸ್ರೇಲಿ ಪ್ರಸಿದ್ಧಿ ಪಡೆದನು. ಆತನು ಸಂಧಾನಗಳಲ್ಲಿ ಸಾಹಸಿ. ತುರ್ಕಿ ರಷ್ಯಗಳ ಸಮಸ್ಯೆಯನ್ನು ಕಟ್ಟಿಕೊಂಡು ತುರ್ಕಿಯನ್ನು ಎತ್ತಿ ಹಿಡಿದನು. ಈಜಿಪ್ಟ್ ರಾಜ್ಯದೊಡನೆ ಸಂಧಾನನಡೆಸುತ್ತ ಸೂಯೆಸ್ ಕಾಲುವೆಯ ಆಡಳಿತದಲ್ಲಿ ಬ್ರಿಟಿಷರಿಗೆ ದೊಡ್ಡಭಾಗವನ್ನು ಉಪಾಯದಿಂದ ಸಂಪಾದಿಸಿದನು. ಹಿಂದುಸ್ತಾನದ ಆಡಳಿತದಲ್ಲಿಯೂ ಡಿಸ್ರೇಲಿಯ ಪ್ರಭಾವವು ತೋರದೆ ಬಿಡಲಿಲ್ಲ. ಆತನ ಪ್ರಧಾನತನದ ಕಾಲದಲ್ಲಿಯೇ ವಿಕ್ಟೋರಿಯ ರಾಜ್ಞಿಯು ಹಿಂದುಸ್ತಾನದ ಸಮ್ರಾಜ್ಞಿಯೆಂಬ ಬಿರುದನ್ನು ವಹಿಸಿದಳು. 1878ರಲ್ಲಿ ಬರ್ಲಿನ್ನಿನಲ್ಲಿ ಬಿಸ್ಮಾರ್ಕನು ನಡೆಸಿದ ಕಾಂಗ್ರೆಸ್ಸಿನಲ್ಲಿ ಬ್ರಿಟನ್ನಿನ ಪರವಾಗಿ ಈ ಬೇಕನ್ಸ್‌ಫೀಲ್ಡ್ ಶ್ರೀಮಂತನು ತಾನೇ ಹೊರಟು ಭಾಗಿಯಾದನು.

1880ರಲ್ಲಿ ಹೊಸಚುನಾವಣೆಗಳು ದೇಶದಲ್ಲಿ ನಡೆದು ಲಿಬರಲ್ ಪಕ್ಷದವರು ಪ್ರಬಲರಾದರು. ಬೇಕನ್ಸ್‌ಫೀಲ್ಡ್ ಶ್ರೀಮಂತನು ಕಟ್ಟಿದ ಮಂತ್ರಿಮಂಡಲಿಗೆ ಅಧಿಕಾರತಪ್ಪಿತು. ಮುಂದಿನವರ್ಷ ಬೇಕನ್ಸ್‌ಫೀಲ್ಡ್ ತೀರಿಕೊಂಡನು. ಕನ್ಸರ್ವೆಟಿವ್ ಪಕ್ಷಕ್ಕೆ ಸಾಲ್ಸ್‌ಬರಿ ಶ್ರೀಮಂತನು ನಾಯಕನಾಗಿರಬೇಕಾಯಿತು.

**2ನೆ ಸಲ ಗ್ಲಾಡ್‌ಸ್ಟನ್**

ಲಿಬರಲ್ ಪಕ್ಷದ ನಾಯಕನಾಗಿ ಗ್ಲಾಡ್‌ಸ್ಟನ್ ಪುನಃ ಪ್ರಧಾನನಾದನು. 1880ರಿಂದ 1885ರ ವರೆಗೆ ಐದುವರ್ಷಕಾಲ ಆತನು ಆಡಳಿತವನ್ನು ವಹಿಸಿದ್ದಾಗ ಐರ್ಲಂಡ್ ಮತ್ತು ಈಜಿಪ್ಟ್‌ಗಳಲ್ಲಿ ಕೆಲವು ಮುಖ್ಯ ಸಂಗತಿಗಳು ನಡೆದವು. ಐರಿಷ್ ಸಭಿಕರ ಗುಂಪಿಗೆ ಮುಖಂಡನಾಗಿದ್ದ ಪಾರ್ನೆಲ್ಲನೊಡನೆ ಗ್ಲಾಡ್‌ಸ್ಟನ್ ಸಮಾಲೋಚನೆ ನಡೆಸಿದ್ದರೆ ಪ್ರಾಯಶಃ ಉತ್ತಮವಾಗಿತ್ತು. 1882ರಲ್ಲಿ ಐರಿಷ್ ದೇಶಭಕ್ತರು ಕೆಲವರು ಡಬ್ಲಿನ್ನಿನಲ್ಲಿ ಒಂದು ಹತ್ಯವನ್ನು ನಡೆಸಿದರು. ಆಗ ಐರಿಷರಲ್ಲಿ ಅದುವರೆಗೂ ಇಟ್ಟಿದ್ದ ಸಹಾನುಭೂತಿಯನ್ನು ಲಿಬರಲ್ ಪಕ್ಷದವರು ಕಳೆದುಕೊಂಡರು. ಈಜಿಪ್ಟಿನಲ್ಲಿ **ಗೋರ್ಡನ್** (Gordon) ಎಂಬ ಇಂಗ್ಲಿಷ್ ದಳಪತಿಯ ಸರ್ವನಾಶವಾದುದೂ ಈ ಕಾಲದಲ್ಲಿಯೇ. ಗ್ಲಾಡ್‌ಸ್ಟನ್ನನ ಈ ಎರಡನೆಯ ಮಂತ್ರಿತನದಕಾಲದಲ್ಲಿ ಒಳಾಡಳಿತದಲ್ಲಿ ಮುಖ್ಯವಾಗಿ ನಡೆದುದು ಮೂರನೆ ಸುಧಾರಣೆಯಕಾನೂನು.

ಎರಡನೆ ಸುಧಾರಣೆಕಾನೂನಿನಿಂದ ಪಟ್ಟಣವಾಸಿಗಳಾಗಿದ್ದ ಕಾಯಕವರ್ಗದವರಿಗೆ ವೋಟಿನ ಅಧಿಕಾರ ದೊರಕಿತ್ತು; ಪಟ್ಟಣನಿವಾಸಿಗಳಲ್ಲದಿದ್ದ ಆ ವರ್ಗದವರಿಗೆ ದೊರಕಲಿಲ್ಲ. 1885ರಲ್ಲಿ ನಡೆದ ಕಾನೂನಿನಿಂದ ಆ ಲೋಪವು ಮಾಯವಾಯಿತು. ಕಸಬುದಾರರೆಲ್ಲರಿಗೂ ವೋಟಿನ ಅಧಿಕಾರ ದೊರಕಿತು. ವರಣಕ್ಷೇತ್ರಗಳು ಪುನಃ ಪರಿಷ್ಕೃತವಾದವು. ಸಣ್ಣ ಪಟ್ಟಣಗಳು ಜಿಲ್ಲೆಗಳ ಲೆಕ್ಕಕ್ಕೆ ಸೇರಿಕೊಂಡವು. ಅರ್ಧಲಕ್ಷ ಜನಸಂಖ್ಯೆಯೊಳಗಿದ್ದ ಪಟ್ಟಣಗಳಿಗೆ ಒಬ್ಬನೇ ಪ್ರತಿನಿಧಿ ಸಾಕೆಂದು ಗೊತ್ತಾಯಿತು. ಪಟ್ಟಣದ ಹೊರಗಿನ ಕಸಬುದಾರರಿಗೂ ವೋಟಿನ ಅಧಿಕಾರ ಪ್ರಾಪ್ತಿಯಾದುದರಿಂದ ವ್ಯವಸಾಯದಲ್ಲಿ ನಿರತರಾಗಿ ರೈತರಂತೆಯೋ ಕೂಲಿಯವರಂತೆಯೋ ಬದುಕುತ್ತ ಗೊತ್ತಾದ ಬಡಭಿಕ್ಷೆಯ ತೆರಿಗೆಕೊಟ್ಟವರಿಗೆಲ್ಲರಿಗೂ ರಾಜಕೀಯಾಧಿಕಾರ ಬಂದುದು ಮುಖ್ಯಾಂಶ.

**3ನೆ ಸುಧಾರಣೆ ಕಾನೂನು 1885**

ಜಮೀನ್ದಾರವರ್ಗದಲ್ಲಿ ಭಾಗ್ಯವಂತರಿಗೆ ಮಾತ್ರ ಪಾರ್ಲಿಮೆಂಟಿನಲ್ಲಿ ಪ್ರಾಬಲ್ಯವಿದ್ದ ಸ್ಥಿತಿಯು ಕ್ರಮದಿಂದ ಬದಲಾಗಿ ಮೊದಲು ಕೈಗಾರಿಕೆ ವ್ಯಾಪಾರಗಳಿಂದ ಧನಿಕರಾದವರಿಗೂ ಆ ತರುವಾಯ ಕಾಯಕವರ್ಗದವರಿಗೂ ರಾಜ್ಯದ ಪ್ರತಿನಿಧಿಸಭೆಯಲ್ಲಿ ಪಾಲುದೊರೆತ ಕಾರಣದಿಂದ ಇಂಗ್ಲಂಡಿನಲ್ಲಿ ಪಲ್ಲಟಗಳೂ ಕಲ್ಲೋಲಗಳೂ ಸಂಭವಿಸಲಿಲ್ಲ. ಸಾಮಾನ್ಯಜನರ ಪ್ರತಿನಿಧಿಗಳು ಸಭೆಯಲ್ಲಿ ಸೇರಿಕೊಂಡ ತರುವಾಯ ಸಾಮಾನ್ಯಜನರ ಕುಂದುಕೊರತೆಗಳನ್ನು ನಿವಾರಿಸುವ ಏರ್ಪಾಟುಗಳೂ ಶಾಸನಗಳೂ ನಡೆದಿದ್ದವು. ಇದಲ್ಲದೆ ಚುನಾವಣೆಗಳ ರೀತಿಯೇ ಬದಲಾಯಿತು. ಚುನಾವಣೆಯಾಗಬೇಕೆಂದಿಷ್ಟಪಟ್ಟವರು ಸಾಮಾನ್ಯಜನರನ್ನು ಮೆಚ್ಚಿಸಬೇಕಾಗಿ ಬಂತು. ಹಿಂದಿನ ಕಾಲದಲ್ಲಿ ಸಾರ್ವಜನಿಕಸಭೆಗಳು ಅಪರೂಪವಾಗಿಯೇ ಇದ್ದವು. ವಿಕ್ಟೋರಿಯ ಕಾಲದಲ್ಲಿ ಪ್ರಚಾರನಡೆಸುವುದಕ್ಕೂ ಜನಾಭಿಪ್ರಾಯವನ್ನು ರೂಪಗೊಳಿಸುವುದಕ್ಕೂ ಅಂತಹ ಸಭೆಗಳು ಸಾಮಾನ್ಯವಾದವು. ಸಾಮಾನ್ಯಜನರಿಗೆ ವೋಟಿನ ಅಧಿಕಾರ ದೊರೆತಬಳಿಕ ಅಂತಹಜನರನ್ನು ಮೆಚ್ಚಿಸಿ ವೋಟುಗಳನ್ನು ಸಂಪಾದಿಸಿಕೊಳ್ಳಲು ಸಾರ್ವಜನಿಕಸಭೆಗಳು ದಿನಚರ್ಯೆಯಾದವು. ಸಾರ್ವಜನಿಕ ಸಭೆಗಳು ಸಾಮಾನ್ಯವಾದಂತೆ ಪಾರ್ಟಿಗಳೂ ವಿಸ್ತಾರವಾದ ವ್ಯವಸ್ಥೆಯನ್ನು ಪಡೆಯಬೇಕಾಯಿತು. ಯಾವ ಪಾರ್ಟಿಯಾದರೂ ಅದಕ್ಕೆ ಸಂಘಬೇಕಾಯಿತು, ವೃತ್ತಪತ್ರಿಕೆಗಳು ಬೇಕಾದವು. ಲಿಬರಲ್ ಮತ್ತು ಕನ್ಸರ್ವೆಟಿವ್ ಸಂಘಗಳೂ ಪತ್ರಿಕೆಗಳೂ ಈರೀತಿ ರೂಪಗೊಂಡು ಚುನಾವಣೆಗಳ ಕಾಲದಲ್ಲಿ ತಮ್ಮ ಪಾರ್ಟಿಪರವಾಗಿ ಪ್ರಚಾರನಡೆಸುವುದಕ್ಕೂ ವರಣಾರ್ಥಿಗಳನ್ನು ನಿಲ್ಲಿಸುವುದಕ್ಕೂ ಸಭೆಯಲ್ಲಿ ಶಿಸ್ತಿನಿಂದ ವರ್ತಿಸುವುದಕ್ಕೂ ತೊಡಗಿದವು.

**ಪರಿಣಾಮಗಳು**

1885ರಲ್ಲಿ ಐರಿಷ್ ಗುಂಪಿನ ಸಭಿಕರು ಗ್ಲಾಡ್‌ಸ್ಟನ್ನನ ಜೊತೆಬಿಟ್ಟರು. ಡಬ್ಲಿನ್ನಿನಲ್ಲಿ ನಡೆದ ಹತ್ಯಕ್ಕೆ ಪ್ರತೀಕಾರದಂತೆ ಗ್ಲಾಡ್‌ಸ್ಟನ್ ಜಾರಿಗೆತಂದ ಕ್ರೂರಶಾಸನ (Coercion Act) ಅವರಿಗೆ ಹಿತವಾಗಿ ತೋರಲಿಲ್ಲ. ಆಗ ಪಾರ್ನೆಲ್ ತನ್ನ ಗುಂಪನ್ನು ಪ್ರತಿಪಕ್ಷಕ್ಕೆ ಒಯ್ಯಲು ಲಿಬರಲ್ ಪಕ್ಷಕ್ಕೆ ಪ್ರಾಬಲ್ಯತಪ್ಪಿತು. ಕನ್ಸರ್ವೆಟಿವ್ ಪಕ್ಷದವರು ಐರಿಷ್‌ಗುಂಪಿನವರ ಬೆಂಬಲದಿಂದ ಕೂಡಿದವರಾಗಿ ಮಂತ್ರಿಗಳಾದರು. ಸಾಲ್ಸ್‌ಬೆರಿ ಶ್ರೀಮಂತನು ಪ್ರಧಾನನೆನಿಸಿದನು. ಆದರೆ ಒಂದು ವರ್ಷಕೂಡ ಆತನ ಅಧಿಕಾರ ನಡೆಯಲಿಲ್ಲ. ಹೋಂರೂಲ್ ಅಥವಾ ಸ್ವದೇಶೀ ಆಡಳಿತಬೇಕೆಂಬ ಐರಿಷರ ಇಷ್ಟಕ್ಕೆ ಕನ್ಸರ್ವೆಟಿವ್ ಪಕ್ಷದವರು ವಿರೋಧಿಗಳೆಂದು ತಿಳಿದಕೂಡಲೆ ಪಾರ್ನೆಲ್ ತನ್ನ ಪಕ್ಷವನ್ನು ಪ್ರತಿಪಕ್ಷವಾಗಿದ್ದ ಲಿಬರಲ್ ಗುಂಪಿನ ಕಡೆಗೊಯ್ದನು. ಆಗ ಲಿಬರಲ್ ಪಕ್ಷ ಬಹುಪಕ್ಷವಾಯಿತು. ಗ್ಲಾಡ್‌ಸ್ಟನ್ 1886ರಲ್ಲಿ ಮೂರನೆಯ ಸಲ ಪ್ರಧಾನನಾದನು. ಐರಿಷರನ್ನು ಸಮಾಧಾನಗೊಳಿಸುವುದು ಅತ್ಯವಶ್ಯಕವೆಂದು ತಿಳಿದು ಗ್ಲಾಡ್‌ಸ್ಟನ್ ಐರ್ಲಂಡಿನಲ್ಲಿ **ಹೋಂರೂಲ್** ಅಥವಾ ಐರಿಷರ ಆಡಳಿತವನ್ನು ತಕ್ಕಮಟ್ಟಿಗೆ ಸ್ಥಾಪಿಸಿಕೊಡುವಂತೆ ಒಂದು ಮಸೂದೆಯನ್ನು ರಚಿಸಿದನು. ಆ ಯೋಚನೆಯನ್ನು ಕನ್ಸರ್ವೆಟಿವ್ ಪಕ್ಷದವರುಮಾತ್ರವಲ್ಲದೆ ಲಿಬರಲ್ ಪಕ್ಷದವರೇ ಒಪ್ಪದೆಹೋದರು. ಮಸೂದೆ ಬಿದ್ದುಹೋಗಿ ಲಿಬರಲ್ ಪಕ್ಷಕ್ಕೆ ಅಧಿಕಾರತಪ್ಪಿ 1886ರಿಂದ 1892ರವರೆಗೆ ಕನ್ಸರ್ವೆಟಿವ್ ಮಂತ್ರಿಮಂಡಲಿಯೊಂದು ಸಾಲ್ಸ್‌ಬೆರಿ ಶ್ರೀಮಂತನ ನಾಯಕತ್ವದಲ್ಲಿ ನಡೆಯುವಂತಾಯಿತು.

**ಐರಿಷ್ ಗುಂಪಿನ ತಕರಾರು**

**3ನೆ ಸಲ ಗ್ಲಾಡ್‌ಸ್ಟನ್**

ಐರ್ಲಂಡಿನ ವೃತ್ತಾಂತವನ್ನು ನಾವು ಬೇರೆಯಾಗಿಯೇ ಕಾಣಬೇಕು. ಪಾರ್ನೆಲ್ಲನ ನೇತೃತ್ವದಲ್ಲಿ ಐರಿಷ್ ಗುಂಪಿನ ಸಭಿಕರು ಲಿಬರಲ್ ಮತ್ತು ಕನ್ಸರ್ವೆಟಿವ್ ಪಕ್ಷಗಳ ಆಟವಾಡಿಸಿದುದನ್ನು ಗುರುತಿಸಿಟ್ಟುಕೊಳ್ಳುವುದಲ್ಲದೆ ಆ ಸಭಿಕರು ಎಷ್ಟೋ ಪ್ರಯತ್ನಗಳನ್ನೂ ಉಪಾಯಗಳನ್ನೂ ನಡೆಸಿ ಕಡೆಗೆ ಹೋಂರೂಲ್ ಗುರಿಯನ್ನು ಇಟ್ಟುಕೊಂಡಾಗ ಲಿಬರಲ್ ಪಕ್ಷದವರು ಕೂಡ ವಿರೋಧಿಗಳಾದುದನ್ನು ಗುರುತಿಡಬೇಕು. ಆ ಪಕ್ಷದವರಲ್ಲನೇಕರಿಗೆ ಗ್ಲಾಡ್‌ಸ್ಟನ್ನನ ಯೋಚನೆಗಳೇ ಹಿತವಾಗಿ ತೋರಲಿಲ್ಲ. ಉಪನಾಯಕರಲ್ಲೊಬ್ಬನಾದ **ಹಾರ್ಟಿಂಗ್ಟನ್ ಶ್ರೀಮಂತ**ನಿಗೆ ಇದ್ದ ಪರಿಸ್ಥಿತಿಯೇ ಉತ್ತಮವೆನಿಸಿತ್ತು. ಮತ್ತೊಬ್ಬನಾದ **ಜೋಸೆಫ್ ಚೇಂಬರ್ಲೇನ್** ಸಮಸ್ತರಿಗೂ ವೋಟಿರಬೇಕೆಂತಲೂ, ಶ್ರೀಮಂತಸಭೆಯ ಅಧಿಕಾರ ನಾಶವಾಗಬೇಕೆಂತಲೂ, ಧನಿಕರಾದವರಿಂದ ಹೆಚ್ಚುಹೆಚ್ಚು ತೆರಿಗೆಗಳನ್ನು ವಸೂಲುಮಾಡಬೇಕೆಂತಲೂ ಅಭಿಪ್ರಾಯಪಡುತ್ತಿದ್ದನು. ಗ್ಲಾಡ್‌ಸ್ಟನ್ನಿಗೂ ಇವರಿಗೂ ಹೊಂದಿಕೆ

**ಲಿಬರಲ್ ಪಕ್ಷದಲ್ಲಿ ಒಡಕು**

**ಕಡಿಮೆ.** ಐರ್ಲಂಡಿನ ವಿಷಯದಲ್ಲಿ ಹೋಂರೂಲೆಂಬುದೇ ಉತ್ತಮೋಪಾಯವೆಂದು ಗ್ಲಾಡ್‌ಸ್ಟನ್ ಮಸೂದೆ ರಚಿಸಿದಾಗ ಇಂಗ್ಲಂಡಿನಿಂದ ಐರ್ಲಂಡ್ ಪ್ರತ್ಯೇಕವಾಗಿ ಬಿಡುವುದೆಂಬ ಶಂಕೆಯನ್ನೆಬ್ಬಿಸಿ ಲಿಬರಲ್ ಪಕ್ಷದವರನೇಕರು ತಾವು **ಯೂನಿಯನಿಸ್ಟ್** (Unionist) ಪಕ್ಷದವರೆಂದುಕೊಂಡರು. ಅಂದರೆ 1800ರಲ್ಲಿ ನಡೆದ ಏಕರಾಷ್ಟ್ರ ಸ್ಥಾಪನೆಯನ್ನು ರಕ್ಷಿಸಿಕೊಳ್ಳತಕ್ಕವರೆನ್ನುತ್ತ ಕನ್ಸರ್ವೆಟಿವ್ ಗುಂಪಿನಲ್ಲಿ ಕಲೆತು ಹೋದರು.

**ಯೂನಿಯನಿಸ್ಟ್** ಎಂಬ ಹೆಸರಿನ ಮಂತ್ರಿಮಂಡಲಿ 1886ರಿಂದ 1892 ರವರೆಗೆ ಅಧಿಕಾರದಲ್ಲಿದ್ದಾಗ ಐರಿಷ್‌ಗುಂಪಿನ ನಾಯಕನಾಗಿದ್ದ ಪಾರ್ನೆಲ್ಲನ ಹೆಸರನ್ನು ಕೆಡಿಸುವ ಪ್ರಯತ್ನ ಪಿತೂರಿಯಾಗಿ ನಡೆದು ಐರಿಷ್ ಗುಂಪಿನಲ್ಲಿಯೇ ಒಡಕುಹುಟ್ಟಿತು. ಅನ್ಯದೇಶವ್ಯವಹಾರದಲ್ಲಿ ನಡೆದಸಂಗತಿಗಳನ್ನು ಪ್ರತ್ಯೇಕವಾಗಿಯೇ ನಾವುಕಾಣಬೇಕು. 1887ರಲ್ಲಿ ವಿಕ್ಟೋರಿಯ ಆಳಿಕೆಯ ಐವತ್ತನೆವರ್ಷದ ಉತ್ಸವ ನಡೆಯಿತು. 1892ರಲ್ಲಿ ಗ್ಲಾಡ್‌ಸ್ಟನ್ ಎಂಭತ್ತುವರ್ಷದವನಾಗಿದ್ದಾಗ್ಯೂ ಅವಿಶ್ರಾಂತ ಕಾರ್ಯಪರತನಾಗಿ ತನ್ನ ಪಕ್ಷಕ್ಕೆ ಬಲವನ್ನು ಪಡೆದು ನಾಲ್ಕನೆಸಲ ಮಂತ್ರಿಮಂಡಲಿಯನ್ನು ಕಟ್ಟಿದನು. ತನ್ನ ಸಂಕಲ್ಪಬಿಡದೆ ಐರ್ಲಂಡಿನ ಆಡಳಿತವನ್ನು ಐರಿಷರಿಗೊಪ್ಪಿಸುವ ಹೋಂರೂಲ್ ಮಸೂದೆಯನ್ನು 1893ರಲ್ಲಿಯೂ ಕಾಮನ್ಸ್ ಸಭೆಯ ಮುಂದಿಟ್ಟನು. ಆ ಸಭೆಯಲ್ಲಿ ಒಪ್ಪಿಗೆಯನ್ನು ಪಡೆದಬಳಿಕ ಶ್ರೀಮಂತಸಭೆಗೆ ಮಸೂದೆ ಹೊರಟು ಅಲ್ಲಿ ಬಿದ್ದುಹೋಯಿತು. ವಿಶೇಷವಾಗಿ ಶ್ರಮಪಟ್ಟು ಕೂಡಿಸಿದ್ದ ಪ್ರಯತ್ನ ವ್ಯರ್ಥವಾದ ತರುವಾಯ ಗ್ಲಾಡ್‌ಸ್ಟನ್ ತನ್ನ ಅಧಿಕಾರವನ್ನು **ರೋಸ್ಬೆರಿ ಶ್ರೀಮಂತ** (Lord Rosebery) ನಿಗೊಪ್ಪಿಸಿ ವಿಶ್ರಾಂತನಾದನು. ಮೂರುವರ್ಷ ವೃದ್ಧಾಪ್ಯದಲ್ಲಿ ಇದ್ದು 1898ರಲ್ಲಿ ಗ್ಲಾಡ್‌ಸ್ಟನ್ ಕಾಲವಶನಾದನು.

**4ನೆಸಲ ಗ್ಲಾಡ್‌ಸ್ಟನ್**

ರೋಸ್ಬೆರಿ ಶ್ರೀಮಂತನು ಲಿಬರಲ್ ನಾಯಕನಾಗಿ ಒಂದು ವರ್ಷಮಾತ್ರ ಪ್ರಧಾನಮಂತ್ರಿಯಾಗಿದ್ದನು. 1895ರಲ್ಲಿ ಕನ್ಸರ್ವೆಟಿವ್ ಪಕ್ಷದವರಿಗೆ ಬಹುಪಕ್ಷ ಪ್ರಾಪ್ತಿಯಾಗಿ **ಸಾಲ್ಸ್‌ಬೆರಿ ಶ್ರೀಮಂತನೇ** ಮೂರನೆಬಾರಿ ಮಂತ್ರಿಮಂಡಲಿಯನ್ನು ಕಟ್ಟಿದನು. ಆಗ ಆಫ್ರಿಕ ವಿಷ್ಯಗಳಲ್ಲಿ ಮುಖ್ಯವಾದ ಸಂಗತಿಗಳು ಕೆಲವು ನಡೆಯುತ್ತಿದ್ದವು. ಒಳನಾಡಿನಲ್ಲಿ ಐರ್ಲಂಡಿನ ಪ್ರಶ್ನೆಯೇ ಜಟಿಲವಾಗಿಯೂ ಪ್ರಬಲವಾಗಿಯೂ ಇತ್ತು. ಐರಿಷ್ ಹೋಂರೂಲೆಂಬುದಕ್ಕೆ ಅವಕಾಶಕೊಡದಿರುವುದೇ ಈ ಮಂತ್ರಿಮಂಡಲಿಯ ಉದ್ದೇಶವಾಯಿತು. 1895ರಿಂದ 1906ರ ವರೆಗೆ ಯೂನಿಯನಿಸ್ಟ್ ಪಕ್ಷದವರು ಅಧಿಕಾರದಲ್ಲಿದ್ದಾಗ 1897ರಲ್ಲಿ ವಿಕ್ಟೋರಿಯರಾಣಿಯ ಆಳಿಕೆಯ ಅರವತ್ತನೆ ವರ್ಷದ ಉತ್ಸವನಡೆಯಿತು. 1901ರಲ್ಲಿ ವಿಕ್ಟೋರಿಯ ರಾಣಿ ತೀರಿಕೊಂಡಳು.

ಗ್ಲಾಡ್‌ಸ್ಟನ್ ಮಂತ್ರಿಯು ತೀರಿಕೊಂಡಾಗಲೇ ಹತ್ತೊಂಭತ್ತನೆ ಶತಮಾನ ಮುಕ್ತಾಯವಾಯಿತೆಂದು ನಾವು ಭಾವಿಸಬಹುದು. ಆ ಶತಮಾನದಲ್ಲಿ ಇಂಗ್ಲಂಡಿನ ಹೊರಗಡೆ ನಡೆದ ಸಂಗತಿಗಳು ಒಳಾಡಳಿತದ ವಿವರಕ್ಕಿಂತಲೂ ಮುಖ್ಯವಾದವುಗಳು. ಅವುಗಳನ್ನು ಒಂದೊಂದಾಗಿ ನಾವು ಕಾಣಬೇಕು.

## ಐರ್ಲಂಡ್ (1800–1922)

**ವಿಚಾರದ ಮುಖ್ಯತೆ**

ಹತ್ತೊಂಭತ್ತನೆಯ ಶತಮಾನದಲ್ಲೆಲ್ಲ ಬ್ರಿಟಿಷ್ ಪಾರ್ಲಿಮೆಂಟ್ ಮತ್ತು ಪಾರ್ಟಿಗಳ ಚರಿತ್ರೆಯಲ್ಲಿ ಐರ್ಲಂಡಿನ ಸಮಸ್ಯೆಯಿಂದ ನಡೆದ ಅನರ್ಥಗಳು ಅಷ್ಟಿಷ್ಟಲ್ಲ. 1829ರಲ್ಲಿ ಟೋರಿಪಕ್ಷ ಒಡೆಯಬಹುದಾಗಿದ್ದುದೂ 1846ರಲ್ಲಿ ಕನ್ಸರ್ವೆಟಿವ್ ಪಕ್ಷ ವೊಡೆದು ದುರ್ಬಲವಾದುದೂ ಆ ಸಮಸ್ಯೆಯ ಮಹಿಮೆಯಿಂದ. 1886ರಲ್ಲಿ ಲಿಬರಲ್ ಪಕ್ಷ ಆ ಸಮಸ್ಯೆಯ ಪ್ರಭಾವದಿಂದಲೇ ಕೆಟ್ಟಿತು. ಶತಮಾನದ ಉತ್ತರಾರ್ಧದಲ್ಲಿ ಐರಿಷ್ ಸಭಿಕರು ಗುಂಪುಗೂಡಿ ಲಿಬರಲ್ ಕನ್ಸರ್ವೆಟಿವ್ ಪಕ್ಷಗಳ ಮಧ್ಯೆನಿಂತು ಎರಡುಪಕ್ಷಗಳನ್ನೂ ಕುಣಿಸಿದುದನ್ನು ಕಂಡೆವು; ಮಂತ್ರಿಪದವಿಯನ್ನು ಕೊಡಿಸುವ ಅಧಿಕಾರ ಆ ಐರಿಷ್ ಸಭಿಕರ ವಶದಲ್ಲಿದ್ದಂತೆ ನಡೆಯಿತು. ಗ್ರೇಟ್ ಬ್ರಿಟನ್ನಿನ ರಾಜಕೀಯ ವಿಚಾರದಲ್ಲಿ ಐರ್ಲಂಡಿನ ಸಮಸ್ಯೆ ಅಷ್ಟು ಮುಖ್ಯವೆನಿಸಿತ್ತು. ಅದರ ಪ್ರಭಾವದಿಂದ ಬ್ರಿಟನ್ನಿನ ಪಾರ್ಲಿಮೆಂಟ್ ಪದ್ಧತಿಗಳೂ ಪಾರ್ಟಿ ಸ್ಪೈರ್ಧೆಗಳೂ ವಕ್ರಗತಿಯನ್ನು ಹಿಡಿದಿರಬೇಕಾಗಿತ್ತು.

**ಶತಮಾನದ ಮೊದಲಲ್ಲಿ**

1800ರಲ್ಲಿ ಕಿರೇಪಿಟ್ ತನ್ನ ಸಂಧಾನಚಾತುರ್ಯವನ್ನಲ್ಲದೆ ವಿಶೇಷವಾದ ಹಣವನ್ನೂ ವೆಚ್ಚಗೊಳಿಸಿ ಯೂನಿಯನ್ ಕಾನೂನನ್ನು ಸಾಧಿಸಿ ಐರಿಷರು ಫ್ರಾನ್ಸಿನೊಂದಿಗೆ ಸೇರಿಕೊಳ್ಳದಂತೆ ನೆರವೇರಿಸಿದನು. ಕ್ಯಾಥಲಿಕ್ಕರಾಗಿದ್ದ ಐರಿಷ್ ಜನರು ನ್ಯಾಯವಾಗಿ ನಿರೀಕ್ಷಿಸಿದಂತೆ ಸಭಿಕರಾಗುವ ಅಧಿಕಾರ ದೊರೆಯದಿರಲು ಆ ಜನರಲ್ಲಿ ಅಸಮಾಧಾನ ಬೇರೂರಿತು. 1803ರಲ್ಲಿ ಎಮ್ಮೆಟ್ಟನ ದಂಗೆಯನ್ನು ಅಡಗಿಸಿದ ತರುವಾಯ ಇಂಗ್ಲಿಷರು ನಪೋಲಿಯನ್ ಯುದ್ಧದಲ್ಲಿ ಸರ್ವಚೈತನ್ಯವನ್ನೂ ಒಡ್ಡಿ ಐರ್ಲಂಡನ್ನು ಮರೆತರು. ಐರ್ಲಂಡಿನಲ್ಲಿ ಕ್ಯಾಥಲಿಕ್ಕರಿಗೂ ಪ್ರಾಟೆಸ್ಟೆಂಟರಿಗೂ ಬೆಳೆಯಬಹುದಾಗಿದ್ದ ಸೌಹಾರ್ದಕ್ಕೆ ರಾಜನ ಮೂರ್ಖದಿಂದ ಅಡ್ಡಿಯಾಯಿತು. ಘೋರ ಯುದ್ಧ ನಡೆಯುತ್ತಿದ್ದ ಕಾಲದಲ್ಲಿ ಐರಿಷರು ತಮ್ಮ ಅಸಮಾಧಾನವನ್ನು ನುಂಗಿಕೊಂಡಿದ್ದರು. 1815ರಲ್ಲಿ ಯುದ್ಧಮುಗಿದ ತರುವಾಯ ಐರಿಷ್ ಕ್ಯಾಥಲಿಕ್ಕರು ತಮ್ಮ ಸ್ಥಿತಿಗತಿಗಳಿಗೆ ಪರಿಹಾರ ಹೇಗೆಂದು ಯೋಚಿಸುತ್ತಿದ್ದಾಗ ಅವರಲ್ಲಿ ಒಳ್ಳೆ

**ನಾಯಕನು** ಸಿದ್ಧನಾದನು. ಆತನೇ **ಡ್ಯಾನಿಯಲ್ ಓ ಕಾನೆಲ್** (Daniel O' Connell).

ಓಕಾನೆಲ್ ಮತದಲ್ಲಿ ಕ್ಯಾಥಲಿಕ್; ವೃತ್ತಿಯಲ್ಲಿ ವಕೀಲನಾಗಿ ಹೆಸರುಪಡೆದವನು. ಮಧ್ಯವಯಸ್ಸಿನಲ್ಲಿ ತನ್ನ ದೇಶಸ್ಥರ ಉದ್ಧಾರವನ್ನು ಜೀವನಕರ್ತವ್ಯವನ್ನಾಗಿಟ್ಟುಕೊಂಡನು. ಸಭೆಗಳಲ್ಲಿ ಭಾಷಣಕೊಡುವ ಚಾತುರ್ಯ ಆತನಿಗೆ ಅದ್ಭುತವಾಗಿತ್ತು; ಜನರನ್ನು ರಂಜಿಸುವುದರಲ್ಲಿ ಅದ್ವಿತೀಯನಾಗಿದ್ದನು. ವಿಧಿಬದ್ಧವಾದ ಮಾರ್ಗದಲ್ಲಿ ಪ್ರಯತ್ನಿಸುವುದು ಆತನ ಇಷ್ಟ. ದೊಂಬಿಗೂ ದಂಗೆಗೂ ವಿರೋಧಿ. ರಾಜಭಕ್ತಿ ಆತನಲ್ಲಿ ವಿಶೇಷವಾಗಿಯೇ ಇತ್ತು. ನಯವಾದ ಪ್ರಯತ್ನ ನಡೆಸಬೇಕೆಂದಿದ್ದ ಆತನಿಗೆ ಮೊದಲು ಕ್ಯಾಥಲಿಕ್ಕರಿಗೆ ಸಭಾಯೋಗ್ಯತೆಯ ಸಂಪಾದನೆಯಾಗತಕ್ಕುದು ಸಾಧನೀಯವೆಂದು ಕಂಡಿತು. 1823ರಲ್ಲಿ **ಕ್ಯಾಥಲಿಕ್ ಅಸೋಸಿಯೇಷನ್** (Catholic Association) ಎಂಬ ಸಂಘವನ್ನು ದೇಶೋವಿಶಾಲವಾಗಿ ಕಟ್ಟಿದನು. ಐರ್ಲಂಡಿನ ಊರೂರಿನಲ್ಲಿಯೂ ಕ್ಯಾಥಲಿಕ್ ಮತದ ಪುರೋಹಿತರ ಸಹಕಾರದಿಂದ ಆ ಸಂಘದಶಾಖೆಗಳು ಸ್ಥಾಪನೆಯಾದವು. ಒಟ್ಟುಗೂಡಿದ ತರು

**ಓಕಾನೆಲ್ಲನ ಸಾಧನೆ**

ವಾಯ ಕ್ಯಾಥಲಿಕ್ಕರು ತಮಗೆ ಅನುಕೂಲವಾದ ಪ್ರಾಟೆಸ್ಟೆಂಟ್ ವರಣಾರ್ಥಿಗಳಿಗೆ ಮಾತ್ರವೇ ಚುನಾವಣೆಗಳಲ್ಲಿ ವೋಟುಗಳನ್ನು ಕೊಟ್ಟರು. 1828ರಲ್ಲಿ **ಕ್ಲೇರ್ ಜಿಲ್ಲೆ**ಯ (County Clare) ಪ್ರತಿನಿಧಿಯ ಸ್ಥಾನ ಖಾಲಿಯಾಯಿತು. ಆ ಸ್ಥಾನಕ್ಕೆ ಓಕಾನೆಲ್ಲನೇ ನಿಂತನು. ಆತನ ಚುನಾವಣೆ ಯಾರ ವಿರೋಧವೂ ಇಲ್ಲದೆ ನಡೆಯಿತು; ಆದರೆ ಸಭಿಕನಾಗಿ ಸಭೆಯನ್ನು ಪ್ರವೇಶಿಸುವ ಅವಕಾಶವಿರಲಿಲ್ಲ. ಮೂರನೆ ಜಾರ್ಜ್‌ದೊರೆಯ ಹೆಡ್ಡತನದಿಂದ ಕ್ಯಾಥಲಿಕ್ಕರಿಗೆ ಸಭಾಯೋಗ್ಯತೆಯಾಗಲಿ ಹುದ್ದೆಗೆಯೋಗ್ಯತೆಯಾಗಲಿ ದೊರೆಯದಿತ್ತು. ಓಕಾನೆಲ್ಲನ ಚುನಾವಣೆ ವಿಜೃಂಭಣೆಯಿಂದ ನಡೆದಾಗ ಪ್ರಧಾನಮಂತ್ರಿ ವೆಲ್ಲಿಂಗ್ಟನ್ ಕ್ಯಾಥಲಿಕ್ಕರಿಗೆ ಪ್ರತಿಕೂಲವಾಗಿಯೇ ವರ್ತಿಸಿದನು. ಆಗ ಓಕಾನೆಲ್ ಎಲ್ಲೆಲ್ಲಿ ಚುನಾವಣೆಗಳಾಗಬಹುದೋ ಅಲ್ಲೆಲ್ಲ ತಾನು ವರಣಾರ್ಥಿಸ್ಥಾನದಲ್ಲಿ ನಿಲ್ಲುವ ಸಂಕಲ್ಪವನ್ನು ಪ್ರಕಟಿಸಿದನು. ಆತನ ವಿರೋಧಿಯಾಗಿ ನಿಂತ ಉಮೇದುವಾರನಿಗೆ ಒಂದುವೋಟಾದರೂ ಸಿಕ್ಕುವಂತಿರಲಿಲ್ಲ. ಐರಿಷಜನರು ಓಕಾನೆಲ್ಲನನ್ನು ಪರಮೋತ್ಸಾಹದಿಂದ ಅನುಸರಿಸುತ್ತಿದ್ದರು. ಕ್ಷಿಪ್ರದಲ್ಲಿಯೇ ಐರ್ಲಂಡಿನ ಕ್ಯಾಥಲಿಕ್ ಜನರು ದಂಗೆಯೆಬ್ಬಿಸಬಹುದೆಂದು ತೋರಿತು. ಅಂತರ್ಯುದ್ಧಬೇಡವೆಂದು ವೆಲ್ಲಿಂಗ್ಟನ್ ನಿಶ್ಚಯಿಸಿ **ಕ್ಯಾಥಲಿಕ್ ಬಿಡುಗಡೆಯ ಶಾಸನ**ವನ್ನೊಪ್ಪಿಕೊಂಡನು. 1829ರಲ್ಲಿ ಕಾನೂನಾಗಿ ಕ್ಯಾಥಲಿಕ್ ಮತಸ್ಥರು ಸಭಿಕರಾಗುವುದಕ್ಕೂ ಸರ್ಕಾರೀ ಹುದ್ದೆದಾರರಾಗುವುದಕ್ಕೂ ಪ್ರಾಟೆಸ್ಟೆಂಟರಿಗಿದ್ದ ಯೋಗ್ಯತೆಯನ್ನು ದಕ್ಕಿಸಿಕೊಂಡರು.

ಐರ್ಲಂಡಿನಿಂದ ಕಾಮನ್ಸ್ ಸಭೆಗೆ ನೂರು ಮಂದಿ ಪ್ರತಿನಿಧಿಗಳು ಬಂದು ಸೇರಿಕೊಳ್ಳುತ್ತಿದ್ದರು. ಓಕಾನೆಲ್ ಅವರಲ್ಲೊಬ್ಬನಾಗಿ ಪ್ಹಿಗ್ ಮಂತ್ರಿಗಳು ನಡೆಸಿದ ಪಾರ್ಲಿಮೆಂಟ್ ಸುಧಾರಣೆಯಲ್ಲಿ ಭಾಗಿಯಾದನು. ತನ್ನ ಜನರ ಪರವಾಗಿ ಸಭಾಪ್ರವೇಶವೆಂಬ ಮೊದಲನೆ ಹೆಜ್ಜೆಯಿಟ್ಟ ಬಳಿಕ ಎರಡನೆ ಹೆಜ್ಜೆಯಾಗಿ **ಟೈತ್** (Tithe) **ವಿರೋಧ**ವನ್ನು ಮೊದಲಿಟ್ಟನು. ಐರ್ಲಂಡಿನಲ್ಲಿ ಸರ್ಕಾರದ ಬಲದಿಂದ ಸ್ಥಾಪಿತವಾಗಿದ್ದ ಪ್ರಾಟೆಸ್ಟೆಂಟ್ ಚರ್ಚಿನ ವೆಚ್ಚಕ್ಕಾಗಿ ರೋಮನ್ ಕ್ಯಾಥಲಿಕ್ಕರಾದ ಐರಿಷರು ತಮ್ಮ ವರಮಾನದ ಹತ್ತನೆ ಪಾಲನ್ನು ಕಾಣಿಕೆಯಾಗಿ ಸಲ್ಲಿಸಬೇಕಾದ ಅನ್ಯಾಯದ ವಿಧಿ ಹಿಂದಿನಿಂದಲೂ ಆಚರಣೆಯಲ್ಲಿತ್ತು.

**ವಿರುದ್ಧಮತಕ್ಕೆ ಕಾಣಿಕೆ**

ಟೈತನ್ನು ಕೊಡಬಾರದೆಂಬ ಚಳುವಳಿ ಬಲಗೊಳ್ಳುತ್ತ ಅದನ್ನು ವಸೂಲಿ ಮಾಡುತ್ತಿದ್ದ ನೌಕರರು ಮಾತ್ರವಲ್ಲದೆ ಕೊಟ್ಟವರೂ ಕೂಡ ಹಿಂಸೆಗೆ ಸಿಕ್ಕಿದರು. ಆಗ ಮಂತ್ರಿಗಳು ಬಲಪ್ರಯೋಗದ ಶಾಸನವನ್ನು (Coercion Act) ಮಾಡಿಸಿಕೊಂಡು ದೊಂಬಿಗಳನ್ನು ಅಡಗಿಸುತ್ತ ಜನರಿಗೆ ತೊಂದರೆಯನ್ನುಂಟುಮಾಡಿದ ನಿಬಂಧನೆಗಳನ್ನು ಜಾರಿಯಲ್ಲಿಟ್ಟರು. ಅದರಿಂದ ಐರಿಷ್‌ಜನರ ಆಕ್ರೋಶ ನಿಲ್ಲಲಿಲ್ಲ. 1835ರಲ್ಲಿ ಮೆಲ್ಬೋರ್ನ್ ಶ್ರೀಮಂತನು ಅಧಿಕಾರ ವಹಿಸಿದಾಗ ಆತನೂ ಓಕಾನೆಲ್ಲನೂ ಒಂದು ರೀತಿಯ ಸಮಾಧಾನಕ್ಕೆ ಬಂದರು. ಮಂತ್ರಿಮಂಡಲಿಯವರೂ ಅಧಿಕಾರಿಗಳೂ ಸಿಪ್ಟುರತೆಯನ್ನು ಬಿಟ್ಟು ಸೌಮ್ಯತನ ವಹಿಸಿ ಹಲಕೆಲವು ಅನುಕೂಲಗಳನ್ನು ಮಾಡಿಕೊಟ್ಟರು. ಐರ್ಲಂಡಿನ ನಗರಸಭೆಗಳು ಸಂಸ್ಕಾರಕ್ಕೊಳಗಾದವು; ಬಡಬಗ್ಗರ ಸಹಾಯಕ್ಕಾಗಿ ಇಂಗ್ಲಂಡಿನಲ್ಲಿದ್ದಂತೆ ಒಂದು ಕ್ರಮ ಏರ್ಪಟ್ಟಿತು. ಟೈತನ್ನು ವರ್ಜಿಸಿ ಕೊಡುವ ಮನಸ್ಸೇನೋ ಪ್ಹಿಗ್ಗರಲ್ಲಿರಲಿಲ್ಲ. ಆದರೆ ತೊಂದರೆ ತಪ್ಪಿಸುವ ಇಷ್ಟವಿತ್ತು. ಇನ್ನು ಮುಂದೆ ಟೈತನ್ನು ಐರಿಷ್ ರೈತನಿಂದ ವಸೂಲ್ಮಾಡಬಾರದೆಂದೂ ಜಮೀನಿನ ಮಾಲೀಕನಿಂದ ವಸೂಲ್ಮಾಡತಕ್ಕದೆಂದೂ ಕಾನೂನು ಮಾಡಿದರು. ಕ್ಯಾಥಲಿಕ್ ರೈತನು ಸ್ವಹಸ್ತದಿಂದ ವಿರುದ್ಧಚರ್ಚಿಗೆ ಕಾಣಿಕೆ ಕೊಡುವುದು ತಪ್ಪಿತು.

ಟೈತ್ ಕಾಣಿಕೆಯ ಅನ್ಯಾಯ ಐರಿಷರ ವಿಷಮಯಜೀವನದಲ್ಲಿ ಒಂದಂಶ ಮಾತ್ರ. ಐರಿಷ್ ಜನರ ದುರವಸ್ಥೆ ನಾನಾಮುಖವಾಗಿತ್ತು. ಸಭಾಪ್ರವೇಶವನ್ನು ಸಾಧಿಸಿದ ಬಳಿಕ ಯೂನಿಯನ್ ಕಾನೂನನ್ನು ರದ್ದುಗೊಳಿಸಿ ಐರ್ಲಂಡಿನಲ್ಲಿ ಪ್ರತ್ಯೇಕವಾದ ಪ್ರತಿನಿಧಿಸಭೆಯನ್ನೂ ಆ ಸಭೆಯನ್ನನುಸರಿಸಿ ವರ್ತಿಸುವ ಸರ್ಕಾರವನ್ನೂ ಸಾಧಿಸಿಕೊಳ್ಳುವುದು ತನ್ನ ಅಂತಿಮಲಕ್ಷ್ಯವೆಂದು ಓಕಾನೆಲ್ಲನು ಮೊದಲಿನಿಂದ ಹೇಳುತ್ತಲೇ ಇದ್ದನು. ಟೈತ್ ಕಾಣಿಕೆಯ ವಿಚಾರ ಒಂದು ಇತ್ಯರ್ಥಕ್ಕೆ ಬಂದಬಳಿಕ ಓಕಾನೆಲ್ಲನು **ಯೂನಿಯನ್** ಕಾನೂನನ್ನು **ರದ್ದುಗೊಳಿಸುವ** ಕಾರ್ಯವನ್ನಿಟ್ಟುಕೊಂಡನು. ಐರ್ಲಂಡಿನ ಊರೂರಿನಲ್ಲಿಯೂ ಜನರ ಸಭೆಸೇರಿಸಿ ಪರಿಸ್ಥಿತಿಯನ್ನು

ತಿಳಿಯಹೇಳಿ ತಮ್ಮ ದ್ವೀಪವನ್ನು ಇಂಗ್ಲಂಡಿಗೆ ಕಟ್ಟಿಟ್ಟ ಕಾನೂನಿನ ರದ್ದು ಮೊದಲು ನಡೆಯತಕ್ಕದೆಂದು ಉದ್ವೇಗಪೂರಿತಭಾಷಣಗಳನ್ನು ಓಕಾನೆಲ್ ಮಾಡಿದನು. ಐರಿಷರು ತಂಡೋಪತಂಡವಾಗಿ ಆ ಸಭೆಗಳಲ್ಲಿ ಸೇರಿದರು.

**ಪೀಲನ ಬಿಂಕ**

ಲಕ್ಷಗಟ್ಟಲೆಯಾಗಿ ಐರಿಷರು ಸಭೆಗೂಡಿ ಓಕಾನೆಲ್ಲನ ಭಾಷಣ ವನ್ನು ಕೇಳಿ ಮೆಚ್ಚುತ್ತ ಉದ್ರಿಕ್ತರಾಗುತ್ತಿದ್ದರು. ಆಗ ಮಂತ್ರಿ ಸರ್ ರಾಬರ್ಟ್ ಪೀಲ್. ಕನ್ಸರ್ವೆಟಿವ್ ಪಕ್ಷದವರು ಆ ಕಾನೂನನ್ನು ಸರ್ವೋಪಾಯಗಳಿಂದ ಉದ್ಧರಿಸತಕ್ಕವರೇ ವಿನಾ ಬದಲಾಯಿಸತಕ್ಕವರಲ್ಲ. ಐರಿಷ್ ಕ್ಯಾಥಲಿಕ್ಕರಲ್ಲಿ ಅವರಿಗೆ ಸ್ವಲ್ಪವಾದರೂ ಸ್ನೈರಣೆಯಿರಲಿಲ್ಲ. ಪೀಲ್ ಸಮಯ ಕಾದಿದ್ದು 1843ರಲ್ಲಿ ಆಕಸ್ಮಿಕರೀತಿಯಲ್ಲಿ ಜಿಗಡಾಯಿಸಿಕೊಂಡನು. ಐರ್ಲಂಡಿನಲ್ಲಿ **ಕ್ಲೊಂಟಾರ್ಫ್** (Clontarf) ಎಂಬೆಡೆಯಲ್ಲಿ ಜನರು ಪ್ರಚಂಡವಾಗಿ ಸಭೆಸೇರುವ ವೇಳೆಯಲ್ಲಿ ಸಭೆಸೇರಕೂಡದೆಂದು ಹುಕುಂ ಹೊರಡಿಸಿ ತಕ್ಕಷ್ಟು ಪೋಲೀಸ್ ಸಿಬ್ಬಂದಿಯನ್ನು ಏರ್ಪಡಿಸಿದನು. ಓಕಾನೆಲ್ಲನನ್ನು ದಸ್ತಗಿರಿಮಾಡಿಸಿ ರಾಜದ್ರೋಹ ಕರವಾದ ಭಾಷಣಮಾಡಿದನೆಂದು ತಪ್ಪುಹೊರೆಸಿ ವಿಚಾರಣೆಗೆ ನಿಲ್ಲಿಸಿ ಸಜಾ ಮಾಡಿಸಿ ದನು. ಶಿಕ್ಷೆ ಮಿತಿಮೀರಿದುದೆಂದು ಶ್ರೀಮಂತ ಸಭೆಯವರು ತರುವಾಯ ಅಭಿಪ್ರಾಯ ಪಟ್ಟು ಬಿಡುಗಡೆಮಾಡಿಸಿದಾಗ್ಗೂ ಓಕಾನೆಲ್ ಅವಮಾನಿತನಾಗಿ ಕೊರಗುತ್ತ ಕೊರಗಿ ನಲ್ಲಿಯೇ 1847ರಲ್ಲಿ ಪ್ರಾಣಬಿಟ್ಟನು.

ಕ್ಯಾಥಲಿಕ್ ಐರಿಷರನ್ನು ಸಮಾಧಾನಗೊಳಿಸುವ ಉದ್ದೇಶದಿಂದ ಪೀಲನು ಅವರದೊಂದು ವಿದ್ಯಾಲಯಕ್ಕೆ (Maynooth College) ಸಹಾಯದ್ರವ್ಯ ಕೊಡಿಸಿ ದನು. ಆದರೆ ಬಿಂಕಬಿಮ್ಮಾನಗಳನ್ನೇ ಬೀರಿ ಐರಿಷರ ಮನಸ್ಸಿನಲ್ಲಿ ಆಕ್ರೋಶವನ್ನೇ ಬಿತ್ತಿದನು. ಓಕಾನೆಲ್ ಅನುಸರಿಸಿದ ವಿಧಿಬದ್ಧಮಾರ್ಗವನ್ನು ಹಿಡಿದು ಉದ್ದೇಶ ವನ್ನು ಸಾಧಿಸಿಕೊಳ್ಳುವ ಯತ್ನ ವ್ಯರ್ಥವೆಂದು ಐರಿಷರಲ್ಲಿ ಕೆಲವರು ಉತ್ಸಾಹಶಾಲಿ ಗಳು ತಿಳಿದರು. 1798ರಲ್ಲಿ ನಡೆದಿದ್ದ ದಂಗೆಯನ್ನು ಸ್ಮರಣೆಯಲ್ಲಿ ತಂದುಕೊಂಡು ಬಲಕಟ್ಟಿ ದಂಗೆಯೆದ್ದೇ ತಮ್ಮ ಪ್ರತ್ಯೇಕತೆಯನ್ನು ಸಾಧಿಸಿಕೊಳ್ಳುವ ಮನಸ್ಸನ್ನು ಬೆಳೆಸಿದರು. ಅದೇ **ತರುಣ ಐರ್ಲಂಡ್** (Young Ireland) ಎಂಬ ಪಕ್ಷ. ಆ ಪಕ್ಷಕ್ಕೆ ಬಲವಿರಲಿಲ್ಲ. ಪರಿಸ್ಥಿತಿ ಹೀಗಿದ್ದಾಗ 1845ರಲ್ಲಿ ಐರ್ಲಂಡಿನ ಆಲೂಗೆಡ್ಡೆ ಬೆಳೆ ಕೊಳೆಯಿತು. ಅದನ್ನೇ ನಂಬಿಕೊಂಡಿದ್ದ ಬಹುಭಾಗದ ಐರಿಷರಿಗೆ ತಿನ್ನಲು ಯಾವ ಆಹಾರವೂ ಇಲ್ಲವಾಯಿತು. ಅದರ ಪರಿಣಾಮ

**ಘೋರಕ್ಷಾಮದ ಪರಿಣಾಮಗಳು**

ವಾಗಿ ಧಾನ್ಯಸಂಬಂಧವಾದಕಾನೂನು ರದ್ದಾದ ಸಂಗತಿಯನ್ನು ಕಂಡೆವು. ಐರ್ಲಂಡಿನಲ್ಲಿ ಪರಿಣಾಮಗಳು ಬೇರೆ ರೀತಿಯಲ್ಲಿ ತೋರಿಕೊಂಡವು. ಆ **ಭಯಂಕರ ಕ್ಷಾಮ**ದಲ್ಲಿ ಅನೇಕರು ಅಸುಗಳನ್ನು ತೊರೆದರು; ಅನೇಕರು ದೇಶಾಂತರ ಹೊರಟು ಅಮೆರಿಕವನ್ನು

ಸೇರಿಕೊಂಡರು. 1841ರಲ್ಲಿದ್ದ ಎಂಭತ್ತು ಲಕ್ಷ ಜನಸಂಖ್ಯೆ ಬರಬರುತ್ತ ಅರ್ಧಕ್ಕಿಳಿದು ಐರ್ಲಂಡಿನ ಜನರಾಶಿ 40 ಲಕ್ಷವಾಯಿತು. ಹೊಟ್ಟೆಗಿಲ್ಲದೆ 10 ಲಕ್ಷ ಜನರು ಪ್ರಾಣ ಬಿಟ್ಟಿದ್ದರು. ಅಮೆರಿಕಕ್ಕೆ ಹೋಗಿ ಸೇರಿಕೊಂಡ ಐರಿಷರು ಸಹಜವಾಗಿ ಇಂಗ್ಲಿಷರ ಆಡಳಿತವನ್ನು ದ್ವೇಷಿಸುತ್ತ ಶಪಿಸುತ್ತ ಇದ್ದರು. ಎರಡನೆ ಪರಿಣಾಮ, ತರುಣ ಐರ್ಲಂಡ್ ಪಾರ್ಟಿಯವರು ದಂಗೆ ನಡೆಸಲು ಸನ್ನಾಹ ನಡೆಸಿದರು. 1848ರಲ್ಲಿ **ಸ್ಮಿತ್ ಓಬ್ರಿಯೆನ್** (Smith O'Brien) ಎಂಬ ದೇಶಭಕ್ತನು ದಂಗೆಕಟ್ಟಿದನು. ಎದ್ದ ದಂಗೆಯನ್ನು ಸರ್ಕಾರದವರು ಸುಲಭವಾಗಿ ಮುರಿದು ದಂಗೆಕೋರರನ್ನು ಗಲ್ಲಿಗೇರಿಸಿಯೋ ಗಡೀಪಾರುಮಾಡಿಯೋ ಅಡಗಿಸಿಬಿಟ್ಟರು. ಆದರೂ ಅವಕಾಶ ದೊರೆತಾಗಲೆಲ್ಲ ಐರಿಷರು ಇಂಗ್ಲಿಷರಮೇಲೆ ಬೀಳುವ ಮನಸ್ಸುಳ್ಳವರಾಗಿಯೇ ಇದ್ದರು. ಅಮೆರಿಕದಲ್ಲಿ ನೆಲೆಸಿದವರು 1858 ರಲ್ಲಿ ನ್ಯೂಯಾರ್ಕ್ ನಗರದಲ್ಲಿ **ಫಿನಯನ್ ಬ್ರದರ್ಹುಡ್** (Fenian Brotherhood) ಎಂಬ ಹೆಸರಿನಿಂದ ಸಂಘಕಟ್ಟಿ ಐರ್ಲಂಡಿನಲ್ಲಿ ಸ್ವತಂತ್ರ ರಾಷ್ಟ್ರ ಸ್ಥಾಪಿಸಲು ಸಂಕಲ್ಪತೊಟ್ಟು ಹಣವನ್ನೂ ಬಂದೂಕುಗಳನ್ನೂ ಕೊಟ್ಟುಕಳುಹಿಸಿ ದಂಗೆಗಳನ್ನು ದೂರದಿಂದ ಎಬ್ಬಿಸಲು ತೊಡಗಿದರು. 1867ರಲ್ಲಿ ಫಿನಯನ್ನರು ಐರ್ಲಂಡಿನಲ್ಲಿ ದಂಗೆಯೆಬ್ಬಿಸಿದರು. ಸಿಕ್ಕಿದ ಕೆಲವರನ್ನು ಇಂಗ್ಲಂಡಿನ ಸೆರೆಮನೆಗಳಲ್ಲಿಟ್ಟಿತ್ತು. ಮಾಂಚೆಸ್ಟರ್ ಪಟ್ಟಣದಲ್ಲಿ ಸೆರೆಸಿಕ್ಕಿದ್ದವರನ್ನು ಬಿಡಿಸಿಕೊಳ್ಳುವ ಪ್ರಯತ್ನವನ್ನು ನಡೆಸಿ ಐರಿಷರು ಒಬ್ಬಾನೊಬ್ಬ ಪೋಲೀಸಿನವನನ್ನು ಕೊಂದರು. ಆ ಚಾಕರನ ಹತ್ಯಕ್ಕಾಗಿ ಸರ್ಕಾರದವರು ಅನೇಕ ಫಿನಯನ್ನರನ್ನು ಗಲ್ಲಿಗೇರಿಸಿದರು. ಈ ಕ್ರೌರ್ಯದಿಂದ ಕ್ರಾಂತಿಕಾರಕ ಗುಂಪಿನವರಿಗೆ ಬಲಬಂದಂತಾಯಿತೇವಿನಾ ಬೇರೆಯಾಗಲಿಲ್ಲ.

ಮೂರನೆ ಪರಿಣಾಮವೆನ್ನಬಹುದಾದುದು ಜಟಿಲ. ಕ್ಷಾಮತೋರಿದಕಾರಣ ಗುತ್ತಿಗೆ ಹಣವನ್ನು ಐರಿಷ್ ರೈತರು ಕೊಡಲು ಅಶಕ್ತರಾದರು. ಭೂಮಿಯ ಮಾಲೀಕರು ಇಂಗ್ಲಂಡಿನಲ್ಲಿ ನೆಮ್ಮದಿಯಿಂದಿದ್ದವರು; ಅವರಿಂದ ನಿಯಮಿತರಾದ ಏಜಂಟರು ಪಾರುಪತ್ಯನಡೆಸುತ್ತಿದ್ದರು. ಗುತ್ತಿಗೆ ಹಣಕೊಡಲಾರದಿದ್ದ ರೈತರನ್ನು ಓಡಿಸಿ ಹೊಸ ರೈತರನ್ನು ಗೊತ್ತುಮಾಡುವುದು ಏಜಂಟರ ಚಾಳಿಯಾಯಿತು. ಗತಿಗೆಟ್ಟ ಐರಿಷರು ಬಹುಸಂಖ್ಯಾಕರಾಗಿದ್ದುದರಿಂದ ರೈತರಾಗಲು ಅನೇಕರು ಸಿದ್ಧರಾಗುತ್ತಿದ್ದರು. ರೈತರನ್ನು ತಗಾದೆಮಾಡಿ ಗುತ್ತಿಗೆಯನ್ನು ವಸೂಲಿಮಾಡುವುದು ಏಜಂಟನ ಕೆಲಸ; ಏಜಂಟನ ಹಿಂಸೆಯನ್ನು ಹೇಗಾದರೂ ತಪ್ಪಿಸಿಕೊಳ್ಳುವುದು ರೈತನ ಕೆಲಸ. ಹೀಗಿರುವಲ್ಲಿ ಭೂಮಿಗಳಿಗೆ ಹೊಸಮಾಲೀಕರು ಹುಟ್ಟಿಕೊಂಡರೆ ಮೇಲಾದೀತೆಂದು ಸರ್ಕಾರದವರು ಭೂಮಿಗಳ ಮಾರಾಟವನ್ನು ಪ್ರೋತ್ಸಾಹಿಸಿದರು. ರೈತರೇ ಕೊಂಡುಕೊಳ್ಳಲೆಂಬ ಮಾತನ್ನು ಆಡಿದರು. ಆದರೆ ರೈತನು ಕೊಳ್ಳುವುದು ಹೇಗೆ? ಮಾರಿದ ಭೂಮಿಗಳನ್ನು ಬೇರೆ

**ರೈತರ ಕಷ್ಟ**

ಧನಿಕರು ಕೊಂಡುಕೊಂಡು ಭೂಮಿಗಳನ್ನು ಹುಲ್ಲುಗಾವಲುಗಳನ್ನಾಗಿಟ್ಟು ಕುರಿ ಸಾಕಲು ಮೊದಲಿಟ್ಟರು. ಐರಿಷರಿಗೆ ಒಂದು ಕಷ್ಟ ತಪ್ಪಿತೆನ್ನುವವೇಳೆಗೆ ಮತ್ತೊಂದು ಕಷ್ಟ ಬರುತ್ತಿತ್ತು.

ಕ್ಯಾಥಲಿಕ್ ರೈತರು ತಮ್ಮ ಪೂರ್ವಿಕರು ಯಜಮಾನರಾಗಿದ್ದ ಭೂಮಿಯ ಚೂರೊಂದರಲ್ಲಿ ಸೇದ್ಯಕ್ಕಿದ್ದೋ ಆರಂಬಗಾರನಾಗಿದ್ದೋ ಬಾಳನ್ನು ತಳ್ಳುತ್ತಿದ್ದ ಸಂಗತಿಯನ್ನು ಇಂಗ್ಲಿಷ್ ಮಂತ್ರಿಮಂಡಲಿಯಲ್ಲಿ **ಗ್ಲಾಡ್‌ಸ್ಟನ್** ಗ್ರಹಿಸಿದನು. ಮತನಿಷ್ಠನಾಗಿದ್ದ ಆತನಿಗೆ ಮತಸಂಬಂಧವಾದ ಅಸಮಾಧಾನವೇ ಮೊದಲು ಕಾಣಿಸಿತು. 1869ರಲ್ಲಿ ಐರ್ಲಂಡಿನ ಪ್ರಾಟೆಸ್ಟೆಂಟ್ ಚರ್ಚನ್ನು ಸರ್ಕಾರದ ಅಧಿಕಾರದಿಂದ ಪ್ರತ್ಯೇಕಿಸಲು ಮಸೂದೆ ರಚಿಸಿ ಪಾರ್ಲಿಮೆಂಟಿನಲ್ಲಿ ಕಾನೂನುಮಾಡಿಸಿದನು. ಪ್ರಾಟೆಸ್ಟೆಂಟ್ ಚರ್ಚೆಂಬುದು ಪ್ರಾಟೆಸ್ಟೆಂಟರಿಟ್ಟುಕೊಂಡಂತೆ ಇರಬೇಕಾಯಿತು. ಆದರೆ ಇದರಿಂದ ಐರಿಷರಿಗೆ ಯಾವ ಸಮಾಧಾನವೂ ಆಗಲಿಲ್ಲ. ಆಗ ಗ್ಲಾಡ್‌ಸ್ಟನ್ ವಿವೇಚನೆಯನ್ನು ತಾಳಿ ಪರಿಸ್ಥಿತಿಯನ್ನು ಪರೀಕ್ಷಿಸಿನೋಡುವಲ್ಲಿ ಭೂಮಿಗಳ ಅವ್ಯವಸ್ಥೆಯೇ ಎಲ್ಲಕ್ಕೂ ಮುಖ್ಯವೆಂದು ತೋರಿತು. 1870ರಲ್ಲಿ **ಭೂಮಿಗಳ** ಸಂಬಂಧವಾಗಿ ಒಂದು **ಕಾನೂನನ್ನು** ನಡೆಸಿದನು. ಭೂಮಿಯನ್ನು ಬಿಟ್ಟು ತೊಲಗೆನ್ನಿಸಿಕೊಂಡ ರೈತನು ನಡೆಸಿದ್ದ ಹೊಸ ಏರ್ಪಾಟುಗಳಿಗೆ ಯಜಮಾನನು ಪರಿಹಾರ ದ್ರವ್ಯ ಕೊಡಬೇಕೆಂಬುದು ಅದರ ಸಾರಾಂಶ. ರೈತರಿಗೆ ಅನುಕೂಲಮಾಡಿಕೊಡಬೇಕೆಂಬುದು ಗ್ಲಾಡ್‌ಸ್ಟನ್ನನ ಉದ್ದೇಶ. ಆದರೆ ಜಮೀನ್ದಾರಗುಂಪಿನ ಸಭಿಕರು ಆತನ ಯೋಚನೆಗಳಿಗೆ ವಿರೋಧಿಗಳು. ಆದ್ದರಿಂದ ರಾವಣಾಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯೆರೆದಂತಾಯಿತು ಗ್ಲಾಡ್‌ಸ್ಟನ್ನಿನ ಏರ್ಪಾಟುಗಳು.

**ಗ್ಲಾಡ್‌ಸ್ಟನ್ನನ ಯೋಚನೆ**

ಓಕಾನೆಲ್ ತರುವಾಯ ಐರಿಷ್ ಸಭಿಕರು ನಾಯಕನಿಲ್ಲದೆ ಇರುತ್ತಿದ್ದರು. ವಿಧಿಬದ್ಧವಾಗಿ ವರ್ತಿಸಿ ಇಷ್ಟಾರ್ಥಸಾಧಿಸಿಕೊಳ್ಳಲು ಪಾರ್ಲಿಮೆಂಟಿನಲ್ಲಿ ಶಾಸನವನ್ನು ನಿರೂಪಿಸುವ ಕರ್ತವ್ಯವನ್ನು ಕ್ರಮವಾಗಿಟ್ಟುಕೊಳ್ಳಲಾಗಲಿಲ್ಲ. 1875ರಲ್ಲಿ **ಐಸಕ್ ಬಟ್** (Isaac Butt) ಎಂಬಾತನು **ಹೋಂರೂಲ್ ಲೀಗ್** ಎಂಬ (Home Rule League) ಸಂಘವನ್ನು ಕಟ್ಟಿದನು. 1879ರಲ್ಲಿ **ಮೈಕಲ್ ಡಾವಿಟ್** (Michael Davitt) ಎಂಬಾತನು **ಲ್ಯಾಂಡ್ ಲೀಗ್** (Land League) ಎಂಬ ರೈತರ ಸಂಘವನ್ನು ಕಟ್ಟಿದನು. ಹೋಂರೂಲ್ ಲೀಗಿನಲ್ಲಿ ಸೇರಿಕೊಂಡು ಪಾರ್ಲಿಮೆಂಟ್‌ಸಭಿಕರು ಒಟ್ಟಾಗಿ ವರ್ತಿಸಿ ಪಾರ್ಲಿಮೆಂಟಿನಲ್ಲಿ ಶಾಸನವನ್ನು ರೂಪಗೊಳಿಸುವ ಕೆಲಸವನ್ನಿಟ್ಟುಕೊಂಡರು. **ಚಾರ್ಲ್ಸ್ ಸ್ಟೂಯರ್ಟ್ ಪಾರ್ನೆಲ್** (Charles Stuart Parnell) ಎಂಬ ಚತುರನಾಯಕನು ಐರಿಷ್ ಸಭಿಕರನ್ನು ಗುಂಪುಕಟ್ಟಿ ಬೇಕಾಗಿದ್ದ

**ಪ್ರಸಿದ್ಧನಾಯಕ ಪಾರ್ನೆಲ್**

ಶಾಸನವನ್ನು ಮಾಡಿಸಿಕೊಳ್ಳುವುದಕ್ಕಾಗಿ ಒಂದುಕಡೆ, ಐರಿಷ್ ರೈತರನ್ನು ಒಟ್ಟುಗೂಡಿಸಿ ಮುಷ್ಕರೋಪಾಯಗಳನ್ನು ಅವಲಂಬಿಸುವಂತೆ ಮತ್ತೊಂದುಕಡೆ ನಡೆಸಲು ತೊಡಗಿದನು.

**ಐರಿಷರ ಮುಷ್ಕರ-ಅಸಹಕಾರ**

1879ರಲ್ಲಿ ಐರ್ಲಂಡಿನಲ್ಲಿ ಬೆಳೆಕೆಟ್ಟಿತು. ಗುತ್ತಿಗೆ ಹಣವನ್ನು ಯಾರೂ ಕೊಡಬಾರದೆಂದು ರೈತರ ಸಂಘ ನಿಶ್ಚಯಿಸಿತು. ಮಾಲೀಕರು ಗುತ್ತಿಗೆ ವಸೂಲಿಯ ಮೊತ್ತಗಳನ್ನು ತಗ್ಗಿಸಿಯಾರೆಂಬ ನಿರೀಕ್ಷೆಯಿತ್ತು. ಆದರೆ ಕೊಡದಿದ್ದ ರೈತರಿಗೆ ಅರ್ಧ ಚಂದ್ರ ಪ್ರಯೋಗವನ್ನೇ ಮಾಲಿಕರು ಮಾಡಿಸಿದರು; ಅಂತಹ ಭೂಮಿಗಳಲ್ಲಿ ಯಾರೂ ರೈತರಾಗಬಾರದೆಂದು ಸಂಘದವರು ನಿಶ್ಚಯಿಸಿದರು. ಸಂಘದ ನಿಶ್ಚಯದಂತೆ ವರ್ತಿಸದಿದ್ದ ಏಜಂಟರುಗಳಿಗೂ ರೈತರುಗಳಿಗೂ ಸಾಮಾಜಿಕ ಬಹಿಷ್ಕಾರವೇರ್ಪಟ್ಟಿತು. **ಕ್ಯಾಪ್ಟನ್ ಬಾಯ್ಕಾಟ್** (Captain Boycott) ಎಂಬಾತನು ಗುತ್ತಿಗೆಹಣದ ವಸೂಲಿಗೆಂದು ಹೊರಟಾಗ ಊರಿನಲ್ಲಿದ್ದವರೆಲ್ಲರೂ ಬಾಗಿಲುಗಳನ್ನು ಮುಚ್ಚಿಕೊಂಡಿದ್ದು ಆತನಿಗೆ ಅನ್ನನೀರಿಲ್ಲದಂತೆ **ಅಸಹಕಾರ**ವನ್ನು ಬೀರಿದರು. ಇವರಿಂದ ಆ ಬಗೆಯ ಅಸಹಕಾರಕ್ಕೆ ಬಾಯ್ಕಾಟ್ ಎಂಬುದು ರೂಢಿಯಾಯಿತು. ಏಜಂಟರಿಗೆಲ್ಲೆಲ್ಲಿಯೂ ಬಾಯ್ಕಾಟೇ ಗತಿ. ಹಾಗೆ ನಡೆಯುವುದರಲ್ಲಿ ಹಿಂಸೆಗಳೂ ಹತ್ಯಗಳೂ ಅಲ್ಲಲ್ಲಿ ನಡೆದವು. ಪ್ರಧಾನಮಂತ್ರಿ ಗ್ಲಾಡ್‌ಸ್ಟನ್ ಭೂಮಿಗಳಸಂಬಂಧವಾಗಿ ರೈತರಿಗೆ ಅನುಕೂಲವಾಗಿ ಶಾಸನ ಮಾಡಿಸುತ್ತಲಿದ್ದರೂ ತಂಟೆಕೋರರನ್ನೂ ತುಂಟರೈತರನ್ನೂ ಅಸಹಕಾರ ಬೀರಿದವರನ್ನೂ ದಂಡಿಸಲು ಕಠಿಣತರವಾದ ಬಲಪ್ರಯೋಗದ ಶಾಸನವನ್ನು ಮಾಡಿಸುತ್ತಿರಬೇಕಾಯಿತು. ಇದರಿಂದ ಆತನ ನೀತಿಯು "ಒಂದು ಕಣ್ಣಿಗೆ ಬೆಣ್ಣೆ, ಮತ್ತೊಂದುಕಣ್ಣಿಗೆ ಸುಣ್ಣ" ಎಂದಹಾಗಿತ್ತು.

**ಐರಿಷ್ ಪಾರ್ಟಿಯ ತಕರಾರು**

ಪಾರ್ಲಿಮೆಂಟಿನಲ್ಲಿ ಪಾರ್ನೆಲ್ಲನ ನೇತೃತ್ವದಲ್ಲಿ ಗುಂಪುಕೂಡಿದ ಐರಿಷ್ ಪಾರ್ಟಿ ತಕರಾರ್ ಕೊಡುವುದರಲ್ಲಿ ಪಾಂಡಿತ್ಯಪಡೆಯಿತು. ಆ ಗುಂಪಿಗೆ ಬೇಕಾದುದು ಐರ್ಲಂಡಿನ ಪ್ರತ್ಯೇಕತೆ. ಅದನ್ನು ಕನ್ಸರ್ವೇಟಿವ್ ಗುಂಪಿನವರು ಕಿವಿಗೆ ಹಾಕಿಕೊಳ್ಳುವವರಲ್ಲ; ಲಿಬರಲ್ ಗುಂಪಿನವರೂ ಒಪ್ಪತಕ್ಕವರಲ್ಲ. ಆದ್ದರಿಂದ ಸಭೆಯಲ್ಲಿ ಪಾರ್ನೆಲ್ ವಿಚಿತ್ರ ಮುಷ್ಕರಕ್ಕೆ ತೊಡಗಿದನು. ಕೊನೆಮೊದಲಿಲ್ಲದೆ ಭಾಷಣಗಳನ್ನು ಮಾಡುತ್ತ ಇತರರಿಗೆ ರೇಜಿಗೆಯನ್ನುಂಟುಮಾಡಿ ಕಾಲಹರಣಮಾಡುವುದು, ಮಂತ್ರಿಪಕ್ಷದವರು ಏನೆತ್ತಿದರೂ ಅದನ್ನು ವಿರೋಧಿಸುವುದು, ನೆಪದಮೇಲೆ ನೆಪವನ್ನೆತ್ತಿ ಆಗಬೇಕಾದ ಕೆಲಸಕ್ಕೆ ಅಡ್ಡಿಯಾಗುವುದು. ಆ ಕಾಲದಲ್ಲಿ ಲಿಬರಲ್ ಕನ್ಸರ್ವೇಟಿವ್ ಪಕ್ಷಗಳು ಸರಿಸುಮಾರಾಗಿ ಸಮಾನಸಂಖ್ಯಾಬಲದಿಂದಿದ್ದುದರಿಂದ ಐರಿಷ್ ಪಾರ್ಟಿ

ಇಬ್ಬರ ಮಧ್ಯೆ ನಿಂತಿತ್ತು. ಐರಿಷ್ ಪಾರ್ಟಿ ಎತ್ತ ಕಡೆ ಸೇರಿದರೆ ಅತ್ತ ಕಡೆ ಬಹು ಪಕ್ಷವಾಗಿದ್ದುದರಿಂದ ಪ್ರಬಲಪಾರ್ಟಿಗಳೆರಡೂ ರಂಗನಾಟವನ್ನಾಡಬೇಕಾಗಿ ಬಂತು. ಗ್ಲಾಡ್‌ಸ್ಟನ್ ಎರಡನೆಸಲ ಮಂತ್ರಿಯಾದಾಗ ಲ್ಯಾಂಡ್ ಲೀಗ್ ಅಥವಾ ರೈತರ ಸಂಘದವರು ಯಾರೂ ಗುತ್ತಿಗೆ ಕೊಡಬಾರದೆಂದು ಅಸಹಕಾರವನ್ನು ಹೆಚ್ಚಿಸಿದರು. ಮಂತ್ರಿಗಳು ಆ ಸಂಘವನ್ನು ಮುರಿದು ಪಾರ್ನೆಲ್ಲನನ್ನೂ ಇತರರನ್ನೂ ಸೆರೆಯಲ್ಲಿಟ್ಟರು. ಇದರಿಂದ ಅಸಹಕಾರವಿಮ್ಮಡಿಯಾಯಿತು. ಆಗ ಲಿಬರಲ್ ನಾಯಕರು ಜೈಲಿನಲ್ಲಿದ್ದ ಪಾರ್ನೆಲ್ಲನೊಡನೆ ಸಂಧಾನನಡೆಸಿ ಯಾವುದೋ ಒಂದೊಪ್ಪಂದವನ್ನು 1882ರಲ್ಲಿ ಮಾಡಿಕೊಂಡರು. ಆ ಬಗೆಯ ಒಪ್ಪಂದದಿಂದ ಯಾವ ಮೇಲೂ ಆಗಲಿಲ್ಲ.

**ಫಿನಯನ್ನರ ಪ್ರತೀಕಾರ**

ಇಷ್ಟು ಕಾಲವೂ ಪಾರ್ನೆಲ್ಲನ ಸಾಧನೆಯಲ್ಲಿ ವಿಶ್ವಾಸವಿಲ್ಲದಿದ್ದ ಫಿನಯನ್ನರು ತಮ್ಮ ಕೆಲಸವನ್ನು ಗೋಪ್ಯವಾಗಿ ನಡೆಸುತ್ತಲೇ ಇದ್ದರು. 1882 ರಲ್ಲಿ ಡಬ್ಲಿನ್ ನಗರದ ಉಪವನದಲ್ಲಿ ಐರಿಷ್ ಕಾರ್ಯದರ್ಶಿ **ಫ್ರೆಡರಿಕ್ ಕಾವೆಂಡಿಷ್ ಶ್ರೀಮಂತನೂ** (Lord Frederick Cavendish) ಉಪಕಾರ್ಯದರ್ಶಿ **ಬರ್ಕ್** (Burke) ಎಂಬಾತನೂ ವಿಹಾರಾರ್ಥವಾಗಿ ತಿರುಗಾಡುತ್ತಿದ್ದಾಗ ಇಬ್ಬರನ್ನೂ ಯಾರೋ ಹತ್ಯಮಾಡಿಬಿಟ್ಟರು. ಹತ್ಯಕ್ಕೂ ತಮಗೂ ಸಂಬಂಧವಿಲ್ಲವೆಂದು ಪಾರ್ನೆಲ್ ಮುಂತಾದ ಸಭಿಕರೆಷ್ಟು ಹೇಳಿದರೂ ಇಂಗ್ಲಿಷರು ಅವರನ್ನು ನಂಬಲಿಲ್ಲ. ಐರಿಷ್ ಜನರನ್ನು ಸರ್ಕಾರದವರು ಕ್ರೂರತನದಿಂದ ಅಡಗಿಸಲು ಮೊದಲಿಟ್ಟರು. ಫಿನಯನ್ನರು ಲಂಡನ್ನಿನಲ್ಲಿಯೇ ಅಡಗಿದ್ದು ಅಲ್ಲಲ್ಲಿ ಡೈನಮೈಟ್ ಎಸೆಯಲಾರಂಭಿಸಿದರು. ಅಂತೂ ಐರಿಷ್ ಸಭಿಕರು ಲಿಬರಲ್ ಪಕ್ಷದ ಮೈತ್ರಿಯನ್ನು ತೊರೆದು ಪ್ರತಿಪಕ್ಷ ಸೇರಿದರು. 1885ರಲ್ಲಿ ಗ್ಲಾಡ್‌ಸ್ಟನ್ ಪಕ್ಷಕ್ಕೆ ಇದರಿಂದ ಅಧಿಕಾರವೇ ತಪ್ಪಿತು.

**ಮೊದಲನೆ ಹೋಂ ರೂಲ್ ಮಸೂದೆ**

1885ರಲ್ಲಿ ಸಾಲ್ಸ್‌ಬೆರಿ ಶ್ರೀಮಂತನು ಕನ್ಸರ್ವೆಟಿವ್ ನಾಯಕನಾಗಿ ಮಂತ್ರಿಯಾದಾಗ ಪಾರ್ನೆಲ್ ಪಾರ್ಟಿಯವರು ಹೋಂ ರೂಲ್ ಶಾಸನವನ್ನು ಬಯಸಿದರು. ಆ ಮಂತ್ರಿಯೊಪ್ಪದಿರಲು ಐರಿಷರು ಲಿಬರಲ್ ಪಕ್ಷದವರೊಡನೆ ಸೇರಿ ಮಂತ್ರಿಗಳನ್ನು ಕೆಡವಿದರು. 1886 ರಲ್ಲಿ ಗ್ಲಾಡ್‌ಸ್ಟನ್ ಸ್ಥಿತಿಗತಿಗಳನ್ನು ತಾಳ್ಮೆಯಿಂದ ತಿಳಿದುಕೊಂಡು **ಹೋಂ ರೂಲ್** ನ್ಯಾಯವೆಂದು ಅಭಿಪ್ರಾಯಪಟ್ಟು ಮಂತ್ರಿಯಾದ ಕೂಡಲೆ ಅದಕ್ಕಾಗಿ ಮಸೂದೆ ತಂದನು. ಆದರೆ ಆತನ ಅನುಯಾಯಿಗಳಲ್ಲಿಯೇ ಅನೇಕರು ವಿರೋಧಿಗಳಾಗಿ ಯೂನಿಯನಿಸ್ಟ್ ಆದರು. ಲಿಬರಲ್ ಪಕ್ಷದ ಒಗ್ಗಟ್ಟು ಒಡೆಯಿತು. ಮಸೂದೆ ಬಿದ್ದು ಹೋದುದಲ್ಲದೆ ಗ್ಲಾಡ್‌ಸ್ಟನ್ನನಿಗೆ ಅಧಿಕಾರವೂ ತಪ್ಪಿತು. ಐರಿಷರಿಗೆ ಇದರಿಂದ ಆಕ್ರೋಶ ಹೆಚ್ಚಿತು.

**ನ್ಯಾಷನಲ್ ಲೀಗ್** (National League) ಎಂಬ ಹೊಸ ಸಂಘವನ್ನು ಕಟ್ಟಿ ರೈತರು ಗುತ್ತಿಗೆ ಹಣಕೊಡಬಾರದೆಂದು ಮುಷ್ಕರವನ್ನು ಮತ್ತೆ ಮೊದಲಿಟ್ಟರು. ಯೂನಿಯನಿಸ್ಟರ ಸಹಕಾರ ಪಡೆದ ಕನ್ಸರ್ವೆಟಿವ್ ಸರ್ಕಾರದವರು ಕ್ರೂರ ಶಾಸನಗಳನ್ನು ನಡೆಸಿ ಗಲಾಟೆಗಳನ್ನು ತತ್ಕಾಲಕ್ಕೆ ಮಾತ್ರ ನಿಲ್ಲಿಸಿದರು.

ಈ ವೇಳೆಗೆ ಪಾರ್ನೆಲ್ಲನ ವಿರೋಧಿಗಳು ಇಂಗ್ಲಂಡಿನಲ್ಲಿ ಆತನ ಹೆಸರನ್ನು ಕೆಡಿಸಲು ನೀಚವಾದೊಂದು ಪಿತೂರಿ ಕಟ್ಟಿದರು. 1887ರಲ್ಲಿ ಸುಳ್ಳು ಕಾಗದವೊಂದನ್ನು ಬನಾಯಿಸಿ ಉಪವನಹತ್ಯೆಗಳ ವೇಳೆಯಲ್ಲಿ ಅದನ್ನು ಪಾರ್ನೆಲ್ ಬರೆದಿದ್ದನೆಂದೂ ಅದರಿಂದ ಹತ್ಯೆಗಳನ್ನು ಆತನು ಮೆಚ್ಚಿದ್ದನೆಂದೂ ಆದ್ದರಿಂದ ಆತನು ಗೋಮುಖವ್ಯಾಘ್ರಮಾತ್ರನೆಂದೂ ಲಂಡನ್ ಟೈಮ್ಸ್ ಪತ್ರಿಕೆಯಲ್ಲಿ ಪ್ರಕಟಿಸಿದರು. ಪಾರ್ನೆಲ್ಲನಲ್ಲಿ ಎಲ್ಲರಿಗೂ ಅನುಮಾನವೇ ಹುಟ್ಟಿ ಆತನನ್ನು ಚಂಡಾಲನಂತೆ ಕಂಡರು. ಆ ಸುಳ್ಳು ಪತ್ರದ ನಿಜಾಂಶವು 1890ರಲ್ಲಿ ಬಯಲಾಯಿತು. ಅನ್ಯಾಯಕ್ಕೆ ಸಿಕ್ಕಿ ಸಂಕಟಕ್ಕೆ ಗುರಿಯಾಗಿದ್ದವನೆಂದು ಆತನನ್ನು ಎಲ್ಲರೂ ಸತ್ಕರಿಸಲು ಮೊದಲಾಯಿತು. ಆದರೆ ಅದೇ ವೇಳೆಯಲ್ಲಿ ಯಾರೋ ದಂಪತಿಗಳು ಜಗಳವಾಡಿ ಅಗಲಿರಲು ಆತನೇ ಕಾರಣನೆಂದು ಒಂದು ವಿವಾಹವಿಯೋಗದ ವಿಚಾರಣೆ ಮೊದಲಾಯಿತು. ಅದರಿಂದ ಆತನ ಹೆಸರು ಕೆಟ್ಟಿತು. ಆತನ ಅನುಯಾಯಿಗಳೇ ಆತನನ್ನು ತ್ಯಜಿಸಿ ಗ್ಲಾಡ್‌ಸ್ಟನ್ನನ ಹಿಂದೆ ಸೇರಿಕೊಂಡರು. 1891ರಲ್ಲಿ ಪಾರ್ನೆಲ್ ತೀರಿಕೊಂಡನು. 1893ರಲ್ಲಿ ಕಡೆಯ ಸಲ ಮಂತ್ರಿತನವನ್ನು ಹೊತ್ತ ಗ್ಲಾಡ್‌ಸ್ಟನ್ ಮತ್ತೆ ಹೋಂರೂಲ್ ಮಸೂದೆಯನ್ನೊಡ್ಡಿದನು. ಅದಕ್ಕೆ ಕನ್ಸರ್ವೆಟಿವ್ ಪಕ್ಷದವರಲ್ಲದೆ ಯೂನಿಯನಿಸ್ಟರೆನಿಸಿದ ಲಿಬರಲ್ ಪಂಗಡದವರೂ ವಿರೋಧಿಗಳಾಗಲು ಅದು ಹಾಳಾಯಿತು. ಗ್ಲಾಡ್‌ಸ್ಟನ್ ಅಧಿಕಾರವನ್ನು ಬಿಟ್ಟುಕೊಟ್ಟು ವಿಶ್ರಾಂತನಾದನು. ಎಷ್ಟು ಪ್ರಯತ್ನಪಟ್ಟರೂ ಐರಿಷ್ ಸಮಸ್ಯೆಯನ್ನು ಪರಿಹರಿಸಲು ಆತನಿಂದ ಆಗದೆಹೋಯಿತು.

**ಪಾರ್ನೆಲ್ಲನಿಗೆ ಅಪಖ್ಯಾತಿ**

ಪಾರ್ನೆಲ್ ಗ್ಲಾಡ್‌ಸ್ಟನ್ನರ ಕಾಲ ಮುಗಿಯಿತು. ಲಿಬರಲ್ ಪಕ್ಷಕ್ಕೆ ಆ ತರುವಾಯ ನಾಯಕನಾದ ರೋಸ್ಬೆರಿ ಶ್ರೀಮಂತನು ಐರ್ಲಂಡನ್ನು ಇಂಗ್ಲಂಡಿಗೆ ಅಧೀನವಾಗಿಟ್ಟು ಒಳಾಡಳಿತವನ್ನು ಐರಿಷರಿಗೊಪ್ಪಿಸುವ ಏರ್ಪಾಟನ್ನು ನಡೆಸಲು ಸಿದ್ಧನಾದನು. ಆದರೆ 1895ರಲ್ಲಿ ಅಧಿಕಾರಕ್ಕೆಬಂದ ಯೂನಿಯನಿಸ್ಟ್ ಪಕ್ಷದವರು 1905ರವರೆಗೆ ಚ್ಯುತಿಯಿಲ್ಲದಿದ್ದರು. 1906ರಲ್ಲಿ ಲಿಬರಲ್ ಪಾರ್ಟಿಗೆ ಅಧಿಕಾರ ದೊರೆತಾಗ್ಯೂ ತಾವು ಇಷ್ಟಪಟ್ಟ ಸುಧಾರಣೆಗಳನ್ನು ನಡೆಸಲಾಗಲಿಲ್ಲ. ಶ್ರೀಮಂತ

**ಲಿಬರಲ್ ಪಾರ್ಟಿಯ ಒಪ್ಪಿಗೆ**

ಸಭೆಯವರ ವಿರೋಧವನ್ನು ಅತಿಕ್ರಮಿಸುವ ದಾರಿಯನ್ನೇರ್ಪಡಿಸಿಕೊಂಡ ತರುವಾಯ 1912ರಲ್ಲಿ **ಲಿಬರಲ್ ಪಕ್ಷ**ದವರು ಒಂದು **ಹೋಂ ರೂಲ್ ಮಸೂದೆ**ಯನ್ನು ತಯಾರಿಸಿದರು. ಈ ಮಧ್ಯೆ ಅಲ್‌ಸ್ಟರ್ ವಿಭಾಗದವರು ಪ್ರಬಲ ವಿರೋಧವನ್ನು ಕಟ್ಟಿ ದಂಗೆಯೆಬ್ಬಿಸುವುದಕ್ಕೂ ಸಿದ್ಧರಾಗುತ್ತಿದ್ದರು.

**ಅಲ್‌ಸ್ಟರ್ ಮುಷ್ಕರ**

ಗ್ಲಾಡ್‌ಸ್ಟನ್ ಕಾಲದಲ್ಲಿಯೇ ಐರಿಷರು ಬಯಸಿದ ಹೋಂ ರೂಲ್ ವಿಷಯದಲ್ಲಿ ಕನ್ಸರ್ವೆಟಿವ್ ಪಂಗಡದ ಶ್ರೀಮಂತರು ವಿರೋಧ ತೋರಿ ಅಲ್‌ಸ್ಟರಿನ ಜನರನ್ನು ಎತ್ತಿಕಟ್ಟಿದರು. ಅಲ್‌ಸ್ಟರಿನವರು ಪ್ರಾಟೆಸ್ಟೆಂಟರು, ನೆಮ್ಮದಿವಂತರು, ಇಂಗ್ಲಿಷರು; ಉಳಿದ ಭಾಗದಲ್ಲಿದ್ದ ಐರಿಷರಿಗೂ ಅವರಿಗೂ ಅನೇಕ ಭೇದಗಳಿದ್ದವು. ಐರ್ಲಂಡಿನ ಆಡಳಿತ ಐರಿಷರಿಗೆ ಪ್ರಾಪ್ತಿಯಾಗುವುದು ಅಲ್‌ಸ್ಟರಿನವರಿಗೆ ಸರಿಬೀಳಲಿಲ್ಲ. 1886ರಲ್ಲಿಯೇ **ರಾನ್ಡಲ್ಫ್ ಚರ್ಚಿಲ್ ಶ್ರೀಮಂತನು** (Lord Randolph Churchill) ಅಲ್‌ಸ್ಟರಿನ ಮುಖ್ಯ ಪಟ್ಟಣವಾಗಿದ್ದ **ಬೆಲ್‌ಫಸ್ಟಿ**ನಲ್ಲಿ (Belfast) ಭಾಷಣ ಮಾಡಿ ಪುನಃ ಹುಟ್ಟಿಕೊಂಡಿದ್ದ ಆರೆಂಜ್ಮೆನ್ ಗುಂಪಿನವರಿಗೆ ಯುದ್ಧವನ್ನಾದರೂ ಮಾಡಿ ಹೋಂ ರೂಲನ್ನು ವಿರೋಧಿಸುವುದು ನ್ಯಾಯವೆಂದೂ ಹಾಗೆ ನಡೆದರೆ ಇಂಗ್ಲಂಡಿನ ಅನೇಕ ಜನರು ತಕ್ಕ ಸಹಾಯವನ್ನೊದಗಿಸಲು ಸಿದ್ಧರೆಂದೂ ಹೇಳಿದನು. ಆ ಮನೋಧರ್ಮವು ಅಲ್‌ಸ್ಟರಿನ ಜನರಲ್ಲಿ ಬಲವಾಗುತ್ತಲೇ ಇತ್ತು. 1912ರಲ್ಲಿ ಹೋಂರೂಲ್ ಮಸೂದೆ ಗೆಲ್ಲುವಂತೆ ತೋರಿದಾಗ ಅಲ್‌ಸ್ಟರಿನವರು ಅದನ್ನು ವಿರೋಧಿಸಲು ದಂಗೆಯನ್ನಾದರೂ ಎಬ್ಬಿಸುವುದಾಗಿ ಪ್ರಕಟಿಸಿದರು. ಐದು ಲಕ್ಷ ಐರಿಷ ಪ್ರಾಟೆಸ್ಟೆಂಟರು ಇಂಗ್ಲಂಡಿನ ಕನ್ಸರ್ವೆಟಿವ್ ಪಂಗಡದ ಪ್ರೋತ್ಸಾಹ ಪಡೆದು ಪ್ರಮಾಣಗಳನ್ನು ಮಾಡಿದರು. 1913ರಲ್ಲಿ ಕಾಮನ್ಸ್ ಸಭೆಯಲ್ಲಿ ಮಸೂದೆ ಒಪ್ಪಿಗೆಯಾದಾಗ ಅಲ್‌ಸ್ಟರ್ ಮುಖಂಡ **ಸರ್ ಎಡ್ವರ್ಡ್ ಕಾರ್ಸನ್** (Sir Edward Carson) ದಂಗೆಯೆಬ್ಬಿಸಲು ಜನರನ್ನು ಸೇರಿಸಿ ಸೈನ್ಯ ಕಟ್ಟಿ ಆಯುಧಗಳನ್ನು ತರಿಸಿದನು. ಅವರಿಗೆ ಸಹಾಯ ಮಾಡಲು ಇಂಗ್ಲಂಡಿನಲ್ಲಿ ಕನ್ಸರ್ವೆಟಿವ್ ಪಂಗಡದವರು ಸನ್ನದ್ಧರಾದರು. ಬ್ರಿಟಿಷ್ ಸೈನ್ಯದಲ್ಲಿ ಅಧಿಕಾರಿಗಳಾಗಿದ್ದವರು ಅಲ್‌ಸ್ಟರ್ ಜನರಲ್ಲಿ ಪಕ್ಷಪಾತ ತೋರಿದರು. ಅಲ್‌ಸ್ಟರಿನವರು ದಂಗೆಯೆದ್ದಾಗ ಅದನ್ನು ಅಡಗಿಸಬೇಕಾದ ಬ್ರಿಟಿಷ್ ಸೈನ್ಯವೇ ಎದುರುಬೀಳುವ ಸಂಭವ ತೋರಿತು.

ಪಾರ್ನೆಲ್ ತರುವಾಯ ಐರಿಷ್ ಸಭಿಕರ ನಾಯಕನಾದ **ರೆಡ್ಮಂಡ್** (Redmond) ಎಂಬಾತನು ಲಿಬರಲ್ ಪಕ್ಷದವರೊಂದಿಗೆ ಹೊಂದಿಕೊಂಡಿದ್ದು ಸಾಧ್ಯವಾದಮಟ್ಟಿಗೂ ಐರಿಷ್ ಜನರನ್ನು ತನ್ನ ಮಾರ್ಗದಲ್ಲಿಯೇ ಇಟ್ಟುಕೊಳ್ಳಲು ಯತ್ನಿಸುತ್ತಿದ್ದನು. ಆದರೆ ಐರಿಷ್‌ಜನರಿಗೆ ಇಂಗ್ಲಿಷರಲ್ಲಿಯೂ ಇಂಗ್ಲಿಷ್ ಪಾರ್ಲಿಮೆಂಟ

**ಸ್ವಾವಲಂಬನದ ದಾರಿ**

ನಲ್ಲಿಯೂ ವಿಶ್ವಾಸ ಮಾಯವಾಗಿತ್ತು. ಪಾರ್ಲಿಮೆಂಟಿನಲ್ಲಿ ನಡೆಯುವ ಶಾಸನವನ್ನು ಒರಟುತನದಿಂದ ವಿರೋಧಿಸಲು ಸಿದ್ಧರಾದ ಕನ್ಸರ್ವೇಟಿವ್ ಮತ್ತು ಯೂನಿಯನಿಸ್ಟ್ ಪಾರ್ಟಿಯವರನ್ನೂ ಅಲ್‌ಸ್ಟರಿನವರಿಗೆ ದೊರೆತ ಪ್ರೋತ್ಸಾಹವನ್ನೂ ಕಂಡವರು ಹೇಗೆತಾನೇ ಇನ್ನೂ ವಿಧಿಬದ್ಧಮಾರ್ಗವನ್ನು ನಂಬಿದ್ದಾರು? ಐರಿಷ್ ಭಕ್ತರು ಕೆಲವರು ಪ್ರಾಚೀನ **ಗೇಲಿಕ್** (Gaelic) ಭಾಷೆಯನ್ನುದ್ಧರಿಸಿ ಆ ಮೂಲಕ ಸ್ವಾವಲಂಬನ ಮಾರ್ಗವನ್ನನುಸರಿಸಿದರು. **ಆರ್ಥರ್ ಗ್ರಿಫಿತ್ಸ್** (Arthur Griffiths) ಎಂಬಾತನು 1900ರಲ್ಲಿ **ಸಿನ್‌ಫೆಯಿನ್** (Sinn Fein–ನಾವು ನಾವೇ) ಎಂಬ ಪಾರ್ಟಿಯನ್ನು ಕಟ್ಟಿ ಇಂಗ್ಲಂಡಿನ ಸಂಬಂಧವಾವುದೂ ಬೇಡವೆನ್ನುತ್ತಲಿದ್ದನು. ಸಿನ್‌ಫೆಯಿನ್ ಪಾರ್ಟಿಯವರು ಅಮೆರಿಕದಲ್ಲಿ ಪ್ರಬಲಗೊಳ್ಳುತ್ತಲೂ ಇದ್ದರು. ರೆಡ್ಮಂಡನ ಮಾರ್ಗದಲ್ಲಿ ಇವರಿಗೆ ವಿಶ್ವಾಸವೇ ಇರಲಿಲ್ಲ. ಕನ್ಸರ್ವೇಟಿವ್ ಪಾರ್ಟಿಯವರೂ ಅಲ್‌ಸ್ಟರಿನವರೂ ವಿಧಿಬದ್ಧ ಮಾರ್ಗವನ್ನು ತ್ಯಜಿಸಿ ಬಲವೇ ನ್ಯಾಯವೆಂಬ ಮಾರ್ಗ ಹಿಡಿದಾಗ 1913ರಲ್ಲಿ **ಮೆಕ್ನೀಲ್** (Macneil) ಎಂಬೊಬ್ಬ ಪಂಡಿತನು ಅಲ್‌ಸ್ಟರಿನವರು ಕಟ್ಟಿದಂತೆ ತಾನೂ ಸೈನ್ಯ ಕಟ್ಟಲು ತೊಡಗಿದನು.

**ಕೈಗೆಬಂದ ತುತ್ತು**

1914 ಜುಲೈ ತಿಂಗಳಲ್ಲಿ ಅಂತರ್ಯುದ್ಧ ರೇಗುವ ಪರಿಸ್ಥಿತಿ ತೋರಿತ್ತು. ರಾಜನಾಗಿದ್ದ 5ನೆ ಜಾರ್ಜ್ ತನ್ನ ಅರಮನೆಗೆ ಪಾರ್ಟಿನಾಯಕರನ್ನು ಕರೆಸಿಕೊಂಡು ಅವರನ್ನು ಸಮಾಧಾನಕ್ಕೆ ತರಲು ಯತ್ನಿಸಿದನು. ಆ ಯತ್ನ ನೆರವೇರಲಿಲ್ಲ. ಅಲ್‌ಸ್ಟರಿನವರು ದಂಗೆಯೆದ್ದು ತಮ್ಮದೇ ಒಂದು ರಾಷ್ಟ್ರಕಟ್ಟಲು ಸಿದ್ಧಮಾಡಿಕೊಂಡರು. ಆಗಸ್ಟ್ ತಿಂಗಳಲ್ಲಿ ಜರ್ಮನ್ ಯುದ್ಧ ಮೊದಲಾಯಿತು. ಆಗ ದಂಗೆ ನಿಂತಿತು. ಅಲ್‌ಸ್ಟರಿನ ಸೈನ್ಯದವರು ಯುದ್ಧಕ್ಕೆ ಹೊರಟರು. ಮಕ್ನೀಲ್ ಕಟ್ಟಿದ ಸೈನ್ಯದಲ್ಲಿ ಕೆಲವರು ಹೊರಟರು; ಉಳಿದವರನ್ನು ಆಗಿನ ಸರ್ಕಾರದವರು ಕೆಲವು ಕಾರಣಗಳಿಂದ ನಂಬಲಿಲ್ಲ. 1915ರಲ್ಲಿ **ಹೋಂರೂಲ್ ಮಸೂದೆ ಶಾಸನ**ದ ಕಡತಕ್ಕೇರಿತು; ಆದರೆ ಯುದ್ಧ ಮುಗಿದ ತರುವಾಯವೇ ಆಚರಣೆಯಲ್ಲಿ ಬರತಕ್ಕುದೆಂದು ಮತ್ತೊಂದು ಶಾಸನವೂ ಜೊತೆಯಲ್ಲಿಯೇ ಆಯಿತು.

ಸಿನ್‌ಫೆಯಿನ್ ಪಾರ್ಟಿಯವರಿಗೆ ಯುದ್ಧಕಾಲವೇ ತಮ್ಮ ಸಮಯವೆನ್ನಿಸಿತು. ಜರ್ಮನರ ಸಹಾಯವನ್ನಾದರೂ ಪಡೆದು ತಮ್ಮ ರಾಷ್ಟ್ರಸ್ವಾತಂತ್ರ್ಯವನ್ನು ಕಟ್ಟಿಕೊಳ್ಳುವ ಯೋಚನೆ ಕೆಲವರಿಗೆ ತೋರಿತು. 1916ರಲ್ಲಿ **ಸರ್ ರಾಜರ್ ಕೇಸ್ಮೆಂಟ್** (Sir Roger Casement) ಎಂಬಾತನು ಗೋಪ್ಯಸಂಧಾನ ನಡೆಸಿ ಜರ್ಮನಿಯಿಂದ ಶಸ್ತ್ರಸಾಮಗ್ರಿಯನ್ನು ತರಿಸಿಕೊಳ್ಳುವ ಯತ್ನದಲ್ಲಿ ಸಿಕ್ಕಿಕೊಂಡು 'ಗಲ್ಲಿಗೇರಿದನು.

ಆ ಯತ್ನ ಹಾಳಾದುದನ್ನು ಕಂಡು ಮಕ್ನೀಲ್ ಹಿಂದೆಗೆದನು. ಆದರೆ **ಪಿಯರ್ಸ್** (Pearse) ಮತ್ತು **ಕಾನೊಲಿ**(Connolly) ಎಂಬವರು ಕೆಲವರನ್ನು ಮಾತ್ರ ಕಟ್ಟಿಕೊಂಡು 1916ರಲ್ಲಿ ಡಬ್ಲಿನ್ನಿನಲ್ಲಿ ದಂಗೆಯೆದ್ದು ಕಚೇರಿಗಳನ್ನು ವಶಪಡಿಸಿಕೊಂಡು ಅನೇಕ ಹತ್ಯಗಳನ್ನು ನಡೆಸಿದರು. ನಿರಪರಾಧಿಗಳಾದವರೂ ಯುದ್ಧದಲ್ಲಿ ಗಾಯಪಟ್ಟು ಹಿಂತಿರುಗಿ ಬಂದಿದ್ದವರೂ ಆ ಹತ್ಯದಲ್ಲಿ ಸಿಕ್ಕಿದರು. ದಂಗೆಯೇನೋ ಸುಲಭವಾಗಿ ಅಡಗಿತು. ದಂಗೆಕೋರರ ಶಿಕ್ಷೆಯೂ ಆಯಿತು. ಆದರೆ ಆ ಶಿಕ್ಷೆಗಳು ನಡೆದ ತರುವಾಯ ದೂರ ಕ್ಷೇತ್ರಗಳಲ್ಲಿದ್ದ ಐರಿಷರು ಕೂಡ ಹಾಹಾಕಾರಪಟ್ಟರು. ಪರಿಸ್ಥಿತಿಯು ಯಾವ ಉಪಾಯಕ್ಕೂ ಒದಗುವಂತೆ ಕಾಣಲಿಲ್ಲ. ಪ್ರಧಾನನಾಗಿದ್ದ **ಲಾಯ್ಡ್ ಜಾರ್ಜ್** (Lloyd George) ಕಾರ್ಸನ್ ರೆಡ್ಮಂಡರನ್ನು ಒಟ್ಟುಗೂಡಿಸಿ ಯಾವುದೋ ಒಂದು ಸಮಾಧಾನಕ್ಕೆ ತಂದನು; ಅದನ್ನು ಕನ್ಸರ್ವೆಟಿವ್ ಪಕ್ಷದವರು ಒಪ್ಪದಾದರು. 1918ರಲ್ಲಿ ಅಲ್‌ಸ್ಟರಿನ ಪ್ರತಿನಿಧಿಗಳೂ ಐರಿಷ್ ಪ್ರತಿನಿಧಿಗಳೂ ಸಭೆಸೇರಿ ಒಪ್ಪಂದ ಮಾಡಿಕೊಳ್ಳುವಂತೆ ಯತ್ನ ನಡೆಯಿತು. ಸಿನ್‌ಫೆಯ್ನ್ ಪಾರ್ಟಿಯವರು ಅದಕ್ಕೆ ಬರಲಿಲ್ಲ; ಸಭೆಯಲ್ಲಿ ಒಪ್ಪಂದವೂ ಆಗಲಿಲ್ಲ.

**ಈಸ್ಟರ್ ದಂಗೆ**

1918ರಲ್ಲಿ ಜರ್ಮನ್ ಯುದ್ಧ ನಿಂತಿತು. ಆಗ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ **ಸಿನ್‌ಫೆಯ್ನ್ ಪಾರ್ಟಿ**ಯವರೇ ಎಲ್ಲೆಲ್ಲಿಯೂ ಜಯಶಾಲಿಗಳಾದರು. 1919ರಲ್ಲಿ ಸಿನ್‌ಫೆಯ್ನ್ ಪಾರ್ಟಿಯವರು ಡಬ್ಲಿನ್ನಿನಲ್ಲಿ ಸೇರಿ ಐರ್ಲಂಡ್ ಸ್ವತಂತ್ರ ರಾಷ್ಟ್ರವೆಂದು ಪ್ರಕಟಣೆಗೊಟ್ಟರು. ಆ ವೇಳೆಗಾಗಲೆ ಪೋಲೀಸ್ ಅಧಿಕಾರಗಳನ್ನು ಹತ್ಯಮಾಡಲು ಮೊದಲಾಗಿತ್ತು. ಆಗ ಇಂಗ್ಲಿಷ್ ಸರ್ಕಾರದವರು ಆತುರಾತುರದಿಂದ ಲಂಡನ್ನಿನಲ್ಲಿ ಪೋಲೀಸ್ ಸಿಬ್ಬಂದಿ ಕೂಡಿಸಿ ಕೊಟ್ಟು ಕಳುಹಿಸಿದರು. **ಮಕ್ರೀಡಿ** (Macready) ಎಂಬ ದಳಪತಿಯು ಕೈಕೆಳಗೆ ಅರ್ಧ ಲಕ್ಷ ಸೈನ್ಯವನ್ನು ಕಳುಹಿದರು. ಸಿನ್‌ಫೆಯ್ನ್ ಪಾರ್ಟಿಯವರು **ಡಿವಲೇರಾ** (De Valera) ಎಂಬಾತನ ಅಧ್ಯಕ್ಷತೆಯಲ್ಲಿ ಸ್ಥಾಪಿಸಿಕೊಂಡಿದ್ದ **ಐರಿಷ್ ರಿಪಬ್ಲಿಕ್** (Irish Republic) ಎಂಬುದನ್ನು ನಾಶಗೊಳಿಸುವುದು ಆ ಪಡೆಗಳ ಕೆಲಸವಾಗಿತ್ತು. ಐರಿಷ್ ರಿಪಬ್ಲಿಕ್ ಎಂಬುದನ್ನು ನಡೆಸಲು ಯತ್ನಿಸುತ್ತಿದ್ದವರಿಗೂ ಈ ಪಡೆಗಳಿಗೂ ನಿರಂತರ ಯುದ್ಧಗಳು ಬೀದಿ ಬೀದಿಯಲ್ಲಿಯೂ ಊರೂರಿನಲ್ಲಿಯೂ ತುಂಟರೀತಿಯಲ್ಲಿ ರೇಗಿದವು. ಐರ್ಲಂಡಿನ ದಕ್ಷಿಣ ಭಾಗದಲ್ಲಿ ಎರಡು ಸರ್ಕಾರಗಳು ಒಂದನ್ನೊಂದು *ದಂಡಿಸುತ್ತ

**ಎರಡು ಸರ್ಕಾರಗಳ ಹಣಾಹಣಿ**

*ಕಾರ್ಕ್ (Cork) ನಗರಾಧ್ಯಕ್ಷ ಮಕ್‌ಸ್ವಿನಿ (Macswiney) ಎಂಬಾತನು ಕಡೆ ಸಲ ಇಂಗ್ಲಿಷರಿಗೆ ಸೆರೆಸಿಕ್ಕಿದ ಬಳಿಕ ಎಪ್ಪತ್ತೆರಡು ದಿನ ಉಪವಾಸವಿದ್ದು ಪ್ರಾಣಬಿಟ್ಟನು. ಆತನ ಮನೋನಿಷ್ಠೆಯೂ ದೇಶಭಕ್ತಿಯೂ ಪ್ರಖ್ಯಾತವಾದುದು.

ಲಿದ್ದಾಗ ಕೊಲ್ಲಿಸುವುದಕ್ಕೂ ಬೆಂಕಿಯಿಡುವುದಕ್ಕೂ ಮೇರೆ ಇಲ್ಲವೆಂಬಂತೆ ನಡೆಯಿತು.

1920ರಲ್ಲಿ ಅಲ್‌ಸ್ಟರಿನಲ್ಲಿ ಬೇರೆ ದಕ್ಷಿಣಐರ್ಲಂಡಿನಲ್ಲಿ ಬೇರೆ ಆಡಳಿತಗಳನ್ನು ಸ್ಥಾಪಿಸಿಕೊಡುವ ಯೋಚನೆ ನಡೆಯಿತು. ಅಲ್‌ಸ್ಟರಿನವರು ಆ ಏರ್ಪಾಟನ್ನು ಒಪ್ಪಿದರು. ಸಿನ್‌ಫೆಯ್ನ್ ಪಾರ್ಟಿಯವರು ಇತರ ಭಾಗಗಳ ಚುನಾವಣೆಗಳಲ್ಲಿ ಗೆದ್ದು ಬ್ರಿಟಿಷರು ನಡೆಸಿದ ಶಾಸನವನ್ನೊಲ್ಲದೆ ಐರಿಷ್ ರಿಪಬ್ಲಿಕ್ಕಿಗೆ ತಾವೇ ಪಾರ್ಲಿಮೆಂಟೆಂದು **ಡೈಲ್ ಐರಿಯನ್** (Daily Eireann) ಎಂಬ ಹೆಸರಿಟ್ಟುಕೊಂಡರು. ಹೊಡೆದಾಟಗಳು ಇನ್ನೂ ನಿಲ್ಲಲಿಲ್ಲ. ಕಡೆಗೆ ಪ್ರಧಾನ ಲಾಯ್ಡ್ ಜಾರ್ಜ್ 1921ರಲ್ಲಿ ಸಿನ್‌ಫೈಯ್ನ್ ಪಾರ್ಟಿಯ ನಾಯಕರನ್ನು ಕರೆಸಿ ಒಪ್ಪಂದ ನಡೆಸಿ **ಐರಿಷ್ ಫ್ರೀಸ್ಟೇಟ್** (Irish Free State) ಎಂಬ ಹೆಸರಿನ ಐರಿಷ್ ರಾಷ್ಟ್ರವನ್ನು ಗೌರವಿಸಿ 1922ರಲ್ಲಿ ಅದಕ್ಕೆ ಡುಮಿನಿಯನ್ ಪದವಿ ಸಲ್ಲುವಂತೆ ಏರ್ಪಡಿಸಿದನು. ಸಿನ್‌ಫೆಯ್ನ್ ಪಾರ್ಟಿಯಲ್ಲಿ ಡಿವಲೇರಾ ಗುಂಪಿನವರು ಅದಕ್ಕೊಪ್ಪದಿದ್ದರು. ಆದರೆ **ಕೋಸ್ಗ್ರೇವ್** (Cosgrave) ಮುಂತಾದ ನಾಯಕರೊಪ್ಪಿದರು. ಐರಿಷ್ ಫ್ರೀ ಸ್ಟೇಟ್ ಎಂಬುದಕ್ಕೆ ಅಧ್ಯಕ್ಷನಾಗಿ ಕೋಸ್ಗ್ರೇವ್ ಗಲಾಟೆಗಳನ್ನು ನಿಲ್ಲಿಸಿದನು. ಮುಂದೆ 1932ರಲ್ಲಿ ಡಿವಲೇರಾ ಅಧಿಕಾರ ಪಡೆಯುವವರೆಗೆ ಇಂಗ್ಲಂಡಿಗೂ ಐರಿಷ್ ಫ್ರೀ ಸ್ಟೇಟಿಗೂ ಸೌಹಾರ್ದವೇ ನಡೆಯಿತು.

**ಸ್ವತಂತ್ರ ಡುಮಿನಿಯನ್**

## ಹಿಂದುಸ್ತಾನ್

ಮೂರನೆ ಜಾರ್ಜ್ ದೊರೆಯ ಆಳಿಕೆ ಮುಗಿದ ಕಾಲಕ್ಕೆ ಹಿಂದುಸ್ತಾನದಲ್ಲಿ ಬ್ರಿಟಿಷರ ಸಾಮ್ರಾಜ್ಯವೆಂಬುದು ಪ್ರಬಲವಾಗಿ ವಾಯುವ್ಯ ವಿನಾ ಉಳಿದೆಲ್ಲ ಭಾಗಗಳೂ ವಶವಾಗಿದ್ದುವು. ಬ್ರಿಟನ್ನಿನಲ್ಲಿ ಯಂತ್ರಯುಗವು ಪ್ರಾರಂಭವಾಗಿ ಕೈಗಾರಿಕೆಯ ಸರಕು ವಿಶೇಷವಾಗಿ ಮಾರಾಟಕ್ಕೆ ಸಿದ್ಧವಾಗುತ್ತಿದ್ದುದೂ ಅದೇ ಕಾಲದಲ್ಲಿಯೇ. ಲಾರ್ಡ್ ಹೇಸ್ಟಿಂಗ್ಸ್ ಗವರ್ನರ್ ಜನರಲ್ ಪದವಿಯನ್ನು ಸ್ವೀಕರಿಸಿದ ಮೊದಲೇ ಈಸ್ಟಿಂಡಿಯ ಕಂಪನಿಯ ವ್ಯಾಪಾರದ ಸರ್ವಮಾನ್ಯವು ರದ್ದಾಗಿತ್ತು. ಹಿಂದುಸ್ತಾನದಲ್ಲಿ ಬ್ರಿಟಿಷರೆಲ್ಲರೂ ವ್ಯಾಪಾರ ಮಾಡಬಹುದಾಯಿತು. ಆ ಕಂಪನಿಗೆ ಟೀ ವ್ಯಾಪಾರವೊಂದು ಮಾತ್ರ ಸರ್ವಮಾನ್ಯವಾಗಿ ಉಳಿಯಿತು.

**ಸರ್ವಮಾನ್ಯದ ನಷ್ಟ**

ಲಾರ್ಡ್ ಹೇಸ್ಟಿಂಗ್ಸ್ ತರುವಾಯ ಅಧಿಕಾರ ವಹಿಸಿದ **ಅಮ್ಹರ್ಸ್ಟ್ ಶ್ರೀಮಂತ**ನ ಕಾಲದಲ್ಲಿ ಬಂಗಾಳ ಕೊಲ್ಲಿಯ ಮೂಡಲಲ್ಲಿ ಇಂಗ್ಲಿಷ್ ವ್ಯಾಪಾರಿಗಳಿಗೆ

ತೊಂದರೆ ತೋರಿ ಬರ್ಮ ಯುದ್ಧ ಮೊದಲಾಯಿತು. ಆ ಯುದ್ಧದ ಫಲಿತಾಂಶವಾಗಿ **ಅಸ್ಸಾಂ, ಅರಕಾನ್, ತೆನಾಸೆರಿಂ** ಪ್ರಾಂತಗಳು ಬ್ರಿಟಿಷರಿಗೆ ವಶವಾದವು. ಭರತಪುರದ ಕೋಟೆ ವಶವಾದುದು ಆ ಕಾಲದಲ್ಲಿಯೇ. ಆ ತರುವಾಯ ಗವರ್ನರ್ ಜನರಲ್ಲಾದ **ಬೆಂಟಿಂಕ್ ಶ್ರೀಮಂತ**ನ ಅಧಿಕಾರ ದೀರ್ಘಕಾಲ ನಡೆಯಿತು. ಆತನ ಕಾಲದಲ್ಲಿ ಆಡಳಿತ ಭದ್ರಗೊಂಡು ದೇಶೀಯ ಜನರಿಗೊಪ್ಪುವ ಕೆಲವು ಏರ್ಪಾಟುಗಳು ನಡೆದವು. 1833ರಲ್ಲಿ ಕಂಪೆನಿಯವರ ವ್ಯಾಪಾರ ನಿಂತು ಹೋಯಿತು. ಆಡಳಿತದಲ್ಲಿ ಸಾಮಾಜಿಕವಾದ ಸುಧಾರಣೆಗಳಲ್ಲದೆ ಶಿಕ್ಷಣ ಸಂಬಂಧವಾದ ಏರ್ಪಾಟೂ ನಡೆಯಿತು. ದಂಡವಿಧಿಕೋಶವೂ ರೂಪಗೊಂಡಿತು.

**1823-1837**

ಹಿಂದುಸ್ತಾನದಲ್ಲಿ ಜನಬಾಹುಳ್ಯವಿದ್ದುದರಿಂದ ಬ್ರಿಟಿಷರು ಇತರ ಭೂಭಾಗಗಳಲ್ಲಿ ನೆಲೆಸಿದಂತೆ ನೆಲೆಸುವುದಾಗಲಿಲ್ಲ. ಒಳನಾಡಿನಲ್ಲಿ ತಮ್ಮ ಶ್ರೇಷ್ಠಬಲವನ್ನು ನೆಲೆಗೊಳಿಸಿ ಹೊರಗಿನಿಂದ ಶತ್ರುಗಳು ಬಾರದಂತೆ ಏರ್ಪಾಟನ್ನು ನಡೆಸಬೇಕಾಗಿತ್ತು. ನಪೋಲಿಯನ್ ಸೆರೆಯಾದ ತರುವಾಯ ಫ್ರೆಂಚರು ಹಿಂದುಸ್ತಾನದಲ್ಲಿ ಯಾವ ಪ್ರಯತ್ನವನ್ನೂ ಮಾಡುವಂತಿರಲಿಲ್ಲ. ಹಿಂದೂಸಾಗರದ ತೀರಗಳೆಲ್ಲ ಬ್ರಿಟಿಷರ ವಶವಾಗಿದ್ದವು. ಆದರೆ ರಷ್ಯ ಚಕ್ರವರ್ತಿ ಹಿರೇ ನಿಕೊಲಾಸ್ ಆಳಿಕೆಯಲ್ಲಿ ಮಧ್ಯ ಏಷ್ಯ ಪ್ರಾಂತವು ರಷ್ಯದ ವಶವಾಯಿತು. ಟಿಲ್ಸಿಟ್ ಕರಾರಾದ ವೇಳೆಯಲ್ಲಿಯೇ ಎಚ್ಚರಿಕೆ ವಹಿಸಿ **ಪಾರ್ಸಿಸ್ತಾನ ಆಫ್‌ಘಾನಸ್ತಾನ ಪಂಜಾಬು** ಸಿಂಧುಗಳ ಪ್ರಭುಗಳೊಂದಿಗೆ ಬ್ರಿಟಿಷರು **ಮೈತ್ರಿ** ಕಟ್ಟಿದ್ದರು. ರಷ್ಯದ ಮೇರೆಯೂ ಆಫ್‌ಘಾನ್ ಮೇರೆಯೂ ಒಂದೇ ಆದಂತೆ ನೆರವೇರಿದಾಗ ಬ್ರಿಟಿಷರು ಕಾಬೂಲಿನ ಪ್ರಭುಗಳನ್ನು ತಮ್ಮ ವಶದಲ್ಲಿಟ್ಟುಕೊಳ್ಳುವುದು ಮೇಲೆಂದು ಭಾವಿಸಿದರು. ಬೆಂಟಿಂಕ್ ತರುವಾಯ ಗವರ್ನರ್‌ಜನರಲ್ ಪದವಿಗೆ ಬಂದ **ಆಕ್ಲೆಂಡ್, ಎಲ್ಲೆನ್ಬರೊ, ಹಾರ್ಡಿಂಜ್** ಶ್ರೀಮಂತರುಗಳ ಕಾಲದಲ್ಲಿ ಮೊದಲನೆ **ಆಫ್‌ಘಾನ್ ಯುದ್ಧ**ವಲ್ಲದೆ **ಸಿಂಧು** ಪ್ರಾಂತದ ಮತ್ತು **ಶತದ್ರು** ನದಿಯ ಪ್ರದೇಶದ ಆಕ್ರಮಣಗಳಾದುವು. ಲಾರ್ಡ್ ಡಾಲ್ಹೌಸೀ ಆಳಿಕೆಯಲ್ಲಿ ಎರಡನೆ ಸಲ ಸಿಕ್ಖರೊಡನೆ ಯುದ್ಧವೂ ನಡೆದು **ಪಂಜಾಬ್** ಪ್ರಾಂತ ಬ್ರಿಟಿಷರ ಸ್ವಾಧೀನವಾಯಿತು. ಬರ್ಮಪ್ರಾಂತವೂ ಬೇರೊಂದು ಯುದ್ಧದಲ್ಲಿ ವಶವಾಯಿತು.

**1837-1856**

ಡಾಲ್ಹೌಸಿ ಶ್ರೀಮಂತನ ಕಾಲದಲ್ಲಿಯೇ ಹಿಂದುಸ್ತಾನದಲ್ಲಿ ಸಂಚಾರ ಸೌಕರ್ಯಗಳು ಹೆಚ್ಚಿದುವು. ಕಾಲುವೆ, ರಸ್ತೆ, ಅಂಚೆ, ತಂತಿಗಳ ವ್ಯವಸ್ಥೆಗಳು ನಡೆದು ವ್ಯಾಪಾರಕ್ಕೂ ಪ್ರಯಾಣಕ್ಕೂ ಅನುಕೂಲವಾಯಿತು. ಆ ಶ್ರೀಮಂತನೇ

ಅಯೋಧ್ಯೆಯ ನವಾಬನ ಆಳಿಕೆಯನ್ನೂ ಬೇರೆ ಎಂಟು ದೇಶೀಯ ಸಂಸ್ಥಾನಗಳ ಪ್ರತ್ಯೇಕ ಆಳಿಕೆಯನ್ನೂ ಕೊನೆಗಾಣಿಸಿದನು. **ಡಾಲ್ಹೌಸಿ ಶ್ರೀಮಂತನು** ಅಧಿಕಾರ ದಿಂದ ನಿವೃತ್ತನಾದ ವೇಳೆಗೆ ಹಿಂದುಸ್ತಾನದ ಜನರಾಶಿಯಲ್ಲಿ ಮುಕ್ಕಾಲು ಪಾಲಿನವರು ಬ್ರಿಟಿಷರ ಪ್ರತ್ಯಕ್ಷ ಪ್ರಜೆಗಳಾಗಿಯೂ ಉಳಿದ ಭಾಗದವರು ದೇಶೀಯ ಸಂಸ್ಥಾನ ಗಳಲ್ಲಿದ್ದುಕೊಂಡು ಪರೋಕ್ಷಪ್ರಜೆಗಳಾಗಿಯೂ ಪರಿಣಮಿಸಿದರು.

ಹಿಂದುಸ್ತಾನ್ ಸಾಮ್ರಾಜ್ಯವನ್ನು ಬ್ರಿಟಿಷರು ಕಟ್ಟಿದ ವೃತ್ತಾಂತದಲ್ಲಿ ಕೆಲವಂಶ ಗಳನ್ನು ಮುಖ್ಯವೆಂದು ಭಾವಿಸಬೇಕು. ಸಮುದ್ರದಕಡೆಯಿಂದ ಪ್ರವೇಶಮಾಡಿ ವ್ಯಾಪಾರಕ್ಕೆ ತೊಡಗಿದವರು ಆರುಸಾವಿರಮೈಲಿ ದೂರದಿಂದ ಹೊರಟು ತಮ್ಮ ಸ್ವದೇಶದ ಹದಿನೈದರಷ್ಟು ವಿಸ್ತಾರವಾದ ಭೂಭಾಗವನ್ನು ಸಂಪಾದಿಸಿದುದೇ ಆಶ್ಚರ್ಯ.

**ಸಾಮ್ರಾಜ್ಯದ ರೀತಿ**

ಮೊದಲು ಹಿಂದುಸ್ತಾನದ ಪರಿಚಯ ಯಾವ ಐರೋಪ್ಯರಿಗೂ ವಿವರವಾಗಿ ಇರಲಿಲ್ಲ. ವ್ಯಾಪಾರವನ್ನು ರಕ್ಷಿಸಿಕೊಳ್ಳಲು ಕೋಟೆ, ಆ ಕೋಟೆಯನ್ನು ಕಾಪಾಡಿಕೊಳ್ಳಲು ರಾಜ್ಯ, ಆ ರಾಜ್ಯವನ್ನು ಭದ್ರವಾಗಿಟ್ಟುಕೊಳ್ಳಲು ನೆರೆರಾಜ್ಯದ ಸಂಪಾದನೆ, ಅದನ್ನು ಸಂರಕ್ಷಿಸಿ ಕೊಳ್ಳಲು ಇನ್ನೂ ಮುಂದಕ್ಕಿದ್ದ ರಾಜ್ಯದ ಆಕ್ರಮಣ—ಹೀಗಾಗಿ ಪ್ರಾಕೃತಿಕವಾದ ಮೇರೆಗಳು ಸ್ವಾಧೀನವಾಗುವವರೆಗೆ ರಾಜ್ಯವಿಸ್ತಾರವನ್ನು ಅನಿವಾರ್ಯವಾಗಿ ಮಾಡಲೇ ಬೇಕಾಯಿತು. ಸಂಚಾರಸಾಧಕಗಳು ಹೆಚ್ಚಿದಂತೆ ಮತ್ತು ಐರೋಪ್ಯ ರಾಷ್ಟ್ರಗಳ ಪ್ರಾಬಲ್ಯ ಪೈಪೋಟಿಗಳು ಹೆಚ್ಚಿದಂತೆ ಬ್ರಿಟಿಷರು ಹಿಂದುಸ್ತಾನದ ರಾಜಕೀಯ ಮೇರೆ ಯನ್ನು ಕಾಕಸಸ್ ಮತ್ತು ಕಪ್ಪು ಸಮುದ್ರದ ಪ್ರದೇಶದಷ್ಟು ದೂರದಲ್ಲಿ ಕಾಣಬೇಕಾ ಯಿತು. ಕ್ರಿಮಿಯ ಯುದ್ಧ ನಡೆಸುವಾಗ ಬ್ರಿಟಿಷ್ ಮಂತ್ರಿಗಳು ಹಿಂದುಸ್ತಾನದ ಭದ್ರತೆಯನ್ನು ಅಂತರಂಗದಲ್ಲಿ ಯೋಚಿಸಿಯೇ ರಷ್ಯದ ಪ್ರಾಬಲ್ಯವನ್ನು ಪ್ರತಿಭಟಿ ಸಿದರು.

ಡಾಲ್ಹೌಸಿ ಶ್ರೀಮಂತನ ಆಡಳಿತದಲ್ಲಿ ಹಿಂದುಸ್ತಾನ್ ಜನರಿಗೆ ಅಸಮಾಧಾನವೂ ಶಂಕಾಭಯಗಳೂ ಹುಟ್ಟಿದ್ದವು. ರಾಜ್ಯಗಳನ್ನು ಕಳಕೊಂಡ ಪ್ರಭುಗಳಲ್ಲಿ ಜನರಿಗೆ ಸಹಾನುಭೂತಿಯೂ ಇತ್ತು. ಬ್ರಿಟಿಷರು ಕಟ್ಟಿದ್ದ ಸಿಪಾಹಿ ಸೈನ್ಯಗಳಲ್ಲಿ ಅಸಮಾಧಾನ ಹೆಚ್ಚಿತ್ತು. 1857ರಲ್ಲಿ **ಸಿಪಾಹಿಗಳು** ಮೊದಲು ದಂಗೆಯೆದ್ದು ಬಿಳಿಯ ಅಧಿಕಾರಿ ಗಳನ್ನು ವಧೆಮಾಡಿದರು. ಬ್ಯಾರಕ್ಪುರ, ಮೀರತ್, ಕಾನ್ಪುರ, ಲಖನೌ, ದಿಲ್ಲಿಗಳಲ್ಲಿ

**1857**

ಈ ದಂಗೆ ರೇಗಿತು. ಅಸಮಾಧಾನಗೊಂಡಿದ್ದ **ನಾನಾಸಾಹೆಬ್** ದಂಗೆಗೆ ನಾಯಕನಾಗಲು ಯತ್ನಿಸಿದನು. ಮೊದಮೊದಲು ಬ್ರಿಟಿಷರು ಸೋತಹಾಗೆ ಕಂಡುಬಂದಾಗ್ಯೂ ಕೆಲವು ತಿಂಗ ಳಲ್ಲಿಯೇ ದಂಗೆಕೋರರನ್ನು ಸೋಲಿಸಿ ಆಗ್ರಾ ಅಯೋಧ್ಯೆ ಪ್ರಾಂತಗಳನ್ನು ಬ್ರಿಟಿಷರು

ವಶಪಡಿಸಿಕೊಂಡರು. ಈ ದಂಗೆ ಕೇವಲ ಸಿಪಾಹಿ ದಂಗೆಯಾಗಿರಲಿಲ್ಲ. ಆದರೆ ಒಟ್ಟು ಹಿಂದುಸ್ತಾನ್ ಜನರು ಸೇರಿ ನಡೆಸಿದ ಪ್ರಯತ್ನವೂ ಆಗಿರಲಿಲ್ಲ. ಪಂಜಾಬಿನ ಸಿಕ್ಖರೂ ನೇಪಾಲದ ಗೋರ್ಖರೂ ಬ್ರಿಟಿಷರ ಪರವಾಗಿಯೇ ಇದ್ದು ದಂಗೆಯನ್ನಡಗಿಸುವುದರಲ್ಲಿ ಸಹಾಯಕರಾಗಿದ್ದರು. ಅನೇಕ ದೇಶೀಯ ಸಂಸ್ಥಾನಾಧಿಪತಿಗಳು ಬ್ರಿಟಿಷರ ಪರವಾಗಿಯೆ ಇದ್ದರು. ಪ್ಲಾಸಿ ಯುದ್ಧಕ್ಕೆ ನೂರು ವರ್ಷದ ತರುವಾಯ ನಡೆದ ಈ ದಂಗೆಯ ಪರಿಣಾಮವಾಗಿ ಈಸ್ಟಿಂಡಿಯ ಕಂಪನಿಯೆಂಬುದು ವಜಾ ಆಯಿತು. ಬೋರ್ಡ್ ಆಫ್ ಕಂಟ್ರೋಲ್ ಎಂಬುದು ಬ್ರಿಟನ್ನಿನ ಮಂತ್ರಿ ಮಂಡಲಿಯ ಉಪಸಭೆಯೇ ಆಯಿತು. ವಿಕ್ಟೋರಿಯ ರಾಣಿ ಆಳಿಕೆಯನ್ನು ತಾನೇ ವಹಿಸಿ ಪ್ರಸಿದ್ಧವಾದ ಒಂದು ಪ್ರಕಟನೆಯನ್ನು ಪ್ರಚುರಪಡಿಸಿದಳು.

ಕ್ಯಾನಿಂಗ್ ಶ್ರೀಮಂತನು ಮೊದಲನೆ ವೈಸರಾಯ್ ಎನಿಸಿದನು. ಆ ತರುವಾಯ ಹಿಂದುಸ್ತಾನದಲ್ಲಿ ಯುದ್ಧಗಳು ನಡೆಯಲಿಲ್ಲ. ಆಡಳಿತದ ಏರ್ಪಾಟುಗಳು ಒಂದೊಂದಾಗಿ ನಡೆದವು. 1876ರಲ್ಲಿ ವಿಕ್ಟೋರಿಯ ರಾಣಿ ಸಮ್ರಾಜ್ಞಿಯೆಂಬ ಬಿರುದನ್ನು ಧರಿಸಿದಳು. ನಡೆದ ಯುದ್ಧಗಳು ಹಿಂದುಸ್ತಾನದ ಮೇರೆಯ ಹೊರಗೆ ಅಫ್‌ಘಾನಸ್ತಾನ್, ಬರ್ಮ, ಭೂತಾನ್, ತಿಬ್ಬತ್ ಭಾಗಗಳಲ್ಲಿ ನಡೆದವು.

ಬ್ರಿಟಿಷರು ಸಂಪಾದಿಸಿದ ಇತರ ಭೂಭಾಗಗಳಿಗೂ ಹಿಂದುಸ್ತಾನಕ್ಕೂ ಜನರಾಶಿಯ ವಿಷಯದಲ್ಲಿ ದೊಡ್ಡ ಭೇದವುಂಟು. ಜನಭರಿತವಾಗಿರುವುದು ಮಾತ್ರವಲ್ಲದೆ ಹಿಂದುಸ್ತಾನ್ ಪ್ರಾಚೀನವಾಗಿಯೂ ಸಜೀವವಾಗಿಯೂ ಇರುವ ಸಂಸ್ಕೃತಿಯುಳ್ಳ ಜನರ ದೇಶ. ಆ ಜನರ ಆಚಾರವಿಚಾರಗಳನ್ನು ತಿಳಿದುಕೊಳ್ಳಲು ಬ್ರಿಟಿಷರು ಪ್ರಯಾಸಪಡಬೇಕಾಯಿತು. ಆಡಳಿತವನ್ನು ಭದ್ರಗೊಳಿಸಿಕೊಂಡಂತೆಲ್ಲ ಭಾರತೀಯರ ಭಾಷಾಸಾಹಿತ್ಯಗಳನ್ನೂ ಆಚಾರಸಂಪ್ರದಾಯಗಳನ್ನೂ ಪರೀಕ್ಷೆಮಾಡಿ ತಿಳಿದುಕೊಂಡರು. ಜನರ ಅಂತರಂಗವೇನೆಂದು ತಿಳಿಯತಕ್ಕುದು ಆಡಳಿತದ ದೃಷ್ಟಿಯಿಂದಲೆ ಅವಶ್ಯವಾಯಿತು. ರಾಜಕೀಯ ಸಾಮ್ರಾಜ್ಯಕ್ಕೆ ಗುರುತಾಗಿ

**ಆರ್ಥಿಕ ಸಾಮ್ರಾಜ್ಯ**

ವಿಕ್ಟೋರಿಯ ಸಾಮ್ರಾಜ್ಞಿಯೆನಿಸಿದಳು; ಆದರೆ ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ಕಾಪಾಡುವುದರಲ್ಲಿ ಭಾರತೀಯರ ವಿರೋಧಕ್ಕೆ ಆಸ್ಪದಕೊಡದಂತೆ ಎಚ್ಚರಿಕೆ ವಹಿಸಿಕೊಂಡಿರಬೇಕಾಯಿತು. ರಾಜಕೀಯ ಸಾಮ್ರಾಜ್ಯಕ್ಕಿಂತಲೂ ಮುಖ್ಯವಾದ ವ್ಯಾಪಾರ ಸಾಮ್ರಾಜ್ಯವು ಕ್ರಮವಾಗಿ ಬೆಳೆಯಿತು. ಜಗತ್ತಿನ ಕಾರ್ಖಾನೆಯಾದ ಬ್ರಿಟನ್ನಿಗೆ ಸಾಮಗ್ರಿಯನ್ನೊದಗಿಸಿ ಸಿದ್ಧವಾದ ಸರಕನ್ನು ಕೊಳ್ಳುವುದುಮಾತ್ರವೇ ಅಲ್ಲ; ಸಂಚಾರ ಸೌಕರ್ಯಗಳಲ್ಲಿಯೂ ಕೈಗಾರಿಕೆಗಳಲ್ಲಿಯೂ ವ್ಯಾಪಾರದಲ್ಲಿಯೂ ಬ್ರಿಟಿಷರ ಕಂಪನಿಗಳು ಅನುಕೂಲಗಳನ್ನು ಪಡೆದವು. ಜಹಜುಗಳ ಯಾನ ರೂಢಿಗೊಂಡ ತರುವಾಯವೂ ಸುಯೆಸ್ ಕಾಲುವೆಯಾದ ತರುವಾಯವೂ ಆರ್ಥಿಕರೀತಿಯ ಸಾಮ್ರಾಜ್ಯವು ಭದ್ರಗೊಂಡಿತು.

**ಭಾರತೀಯ ಜನ**

ಇಂಗ್ಲಿಷ್ ಭಾಷೆಯನ್ನೂ ಪಾಶ್ಚಾತ್ಯ ನಾಗರಿಕತೆಯನ್ನೂ ಬ್ರಿಟಿಷರ ಆಳಿಕೆಯಲ್ಲಿಯೇ ಹಿಂದುಸ್ತಾನಿಜನರು ಪರಿಚಯಮಾಡಿಕೊಂಡುದಲ್ಲದೆ ತಮ್ಮ ದೇಶದ ಐಕ್ಯತೆಯನ್ನು ಹೊಸ ರೀತಿಯಲ್ಲಿ ಕಾಣುವವರಾದರು. ಶತಮಾನದ ಪೂರ್ವಭಾಗದಲ್ಲಿಯೇ ರಾಜಾರಾಮಮೋಹನರಾಯ, ದಾದಾಭಾಯಿ ನೌರೋಜಿ, ದಯಾನಂದ ಸರಸ್ವತಿ, ಶ್ರೀರಾಮಕೃಷ್ಣ ಪರಮಹಂಸ ಮೊದಲಾದವರು ಧಾರ್ಮಿಕ ಸಾಮಾಜಿಕ ವಿಚಾರಗಳಲ್ಲಿ ಉತ್ತೇಜನ ತುಂಬಿದ್ದರು. 1858ರ ತರುವಾಯ ರಾಜಕೀಯ ದಂಗೆಗಳು ಕಡಮೆಯಾದಾಗ್ಯೂ ರಾಜಕೀಯವಾದ ಆಸೆಗಳು ಮಾಯವಾಗಲಿಲ್ಲ. ಪಾಶ್ಚಾತ್ಯ ನಾಗರಿಕತೆಯನ್ನರಿತವರು ಆಡಳಿತದಲ್ಲಿ ಭಾಗಪಡೆಯುವ ಆಸೆಗಳನ್ನು ಬೆಳೆಸಿ ವಿಧಿಬದ್ಧವಾಗಿ ಉದ್ಯಮ ನಡೆಸಲುತೊಡಗಿದರು. 1885ರ ವೇಳೆಗೆ ಅಂತಹವರ ಸಂಘವೊಂದು ಕಾಂಗ್ರೆಸ್ ಎಂಬ ಹೆಸರಿನಿಂದ ಪ್ರಾರಂಭವಾಯಿತು.

ಹಿಂದುಸ್ತಾನ್ ಇತಿಹಾಸವನ್ನು ಬೇರೆಯಾಗಿಯೇ ಓದಬೇಕು. ಬರ್ಮಾ ಪ್ರಾಂತ ತಮ್ಮ ವಶವಾಗುವುದಕ್ಕೆ ಮೊದಲೆ ಬ್ರಿಟಿಷರು ಇನ್ನೂ ಮೂಡಲಿಗೆ ವ್ಯಾಪಾರಕ್ಕಾಗಿ ಹೊರಟು ಚೀನಾ ಸಾಮ್ರಾಜ್ಯದಲ್ಲಿ ಪ್ರವೇಶಿಸಿದ್ದರು. ಹಿಂದೆ ಉಪಭಾರತ ವರ್ಣಿಸಿದ ಭೂಭಾಗದಲ್ಲಿಯೂ ವ್ಯಾಪಾರ ಸಾಮ್ರಾಜ್ಯ ಕಟ್ಟಿದರು. ಅದರ ವೃತ್ತಾಂತವನ್ನು ಮುಂದೆ ಕಾಣಬಹುದು.

## ಅಮೆರಿಕದ ಅಭಿವೃದ್ಧಿ

**ಪ್ರಾರಂಭ**

1783ರಲ್ಲಿ ವರ್ಸೇಲ್ಸ್ ಒಪ್ಪಂದ ನಡೆದು ಸ್ವಾತಂತ್ರ್ಯ ಸ್ಥಾಪನೆಯಾದಾಗ ಇದ್ದುದು ಹದಿಮೂರೇ ಕಾಲೊನಿಗಳು. ಪ್ರತಿ ಕಾಲೊನಿಯೂ ಒಂದು ಸಂಸ್ಥಾನವಾಗಿ ಸ್ವತಂತ್ರವಾದ ಒಳಾಡಳಿತವನ್ನು ಪಡೆದಿತ್ತು. ಹದಿಮೂರಕ್ಕೂ ಒಟ್ಟಿಗೆ ಅನ್ವಯಿಸಿದ ವಿಷಯಗಳಿಗಾಗಿ ಸಂಯುಕ್ತ ಸರ್ಕಾರವೆಂಬುದು ಸ್ಥಾಪನೆ ಆಗಿದ್ದಿತು. ಸರ್ವಾಧ್ಯಕ್ಷನಾದ **ಜಾರ್ಜ್ ವಾಷಿಂಗ್ಟನ್** ಪ್ರಯಾಸದಿಂದ ಆ ಸಂಯುಕ್ತ ಸರ್ಕಾರವನ್ನು ನಡೆಸಿ ಭದ್ರಗೊಳಿಸಿದನು.

**ಕ್ಷೇತ್ರ ವಿಸ್ತರಣ**

ಪಶ್ಚಿಮಕ್ಕೆ ಮಿಸಿಸಿಪ್ಪಿ ನದಿಯೇ ಮೇರೆ. ಆ ನದಿಯ ಪಶ್ಚಿಮಕ್ಕಿದ್ದ ಕ್ಷೇತ್ರ ಸ್ಪೈನಿಗೆ ಸೇರಿತ್ತು. ಉತ್ತರಕ್ಕೆ ಕನಡದಲ್ಲಿ ಬ್ರಿಟಿಷರೂ ಪಶ್ಚಿಮಕ್ಕೆ ಸ್ಪೈನಿನವರೂ ನೆರೆಯವರಾಗಿದ್ದು ಅಮೆರಿಕದವರೊಡನೆ ಸೌಹಾರ್ದದಿಂದ ವರ್ತಿಸದೆ ಇದ್ದರು. ಕಾಲೊನಿಗಳು ಪ್ರತ್ಯೇಕಗೊಂಡಾಗ್ಯೂ ಬ್ರಿಟಿಷರ ವ್ಯಾಪಾರಕ್ಕೆ ಕೊರತೆಯೇನೂ ತೋರಲಿಲ್ಲ.

ಏಕೆಂದರೆ ಕಾಲೊನಿಗಳವರು ಸ್ವಂತವಾಗಿ ಕೈಗಾರಿಕೆಗಳನ್ನೂ ಹಡಗುಗಳನ್ನೂ ಕಟ್ಟಿಕೊಳ್ಳುವುದು ನಿದಾನವಾಯಿತು. ಹದಿನೆಂಟನೆ ಶತಮಾನದ ಕಡೆಕಡೆಗೆ ಕಾಲೊನಿಗಳವರು ಭದ್ರಗೊಂಡರು. ನಪೋಲಿಯನ್ ಸ್ಪೈನಿಗೆ ಸೇರಿದ್ದ **ಪಶ್ಚಿಮ ಪ್ರದೇಶ** (Louisiana) ವನ್ನು ಅವರಿಗೆ ಮಾರಿಬಿಟ್ಟನು. 1822ರಲ್ಲಿ ಸ್ಪೈನಿನಿಂದ **ಫ್ಲಾರಿಡ** (Florida) ಪರ್ಯಾಯ ದ್ವೀಪವನ್ನು ಕೊಂಡುಕೊಂಡರು. 1848ರಲ್ಲಿ ನೈರುತ್ಯ ಭಾಗದಲ್ಲಿ **ಕಾಲಿಫೋರ್ನಿಯ** (California) ಮುಂತಾದ ಕ್ಷೇತ್ರಗಳನ್ನು ಮೆಕ್ಸಿಕೊವಿಂದ ಯುದ್ಧದಲ್ಲಿ ಗೆದ್ದರು. ರಾಕಿ ಪರ್ವತದ ಪಶ್ಚಿಮಕ್ಕೂ ಈ ಹೊಸ ರಾಷ್ಟ್ರದವರು ನುಗ್ಗಿ ಅಲ್ಲಿದ್ದ ತಾಮ್ರವರ್ಣದವರನ್ನು ವಶಪಡಿಸಿಕೊಂಡು ಪೆಸಿಫಿಕ್ ಸಾಗರವನ್ನು ಮೇರೆಯಾಗಿಟ್ಟುಕೊಂಡರು.

1812ರಲ್ಲಿ ಅಮೆರಿಕದವರಿಗೂ ಬ್ರಿಟಿಷರಿಗೂ ಜಗಳ ಹುಟ್ಟಿಕೊಂಡಿತು. ಬರ್ಲಿನ್ ಡಿಕ್ರೀಸ್ ಎಂಬ ಆಜ್ಞೆಗಳನ್ನು ನಪೋಲಿಯನ್ ಸಾರಿ ಬ್ರಿಟನ್ನಿಗೆ ವಿಪತ್ತನ್ನೊಡ್ಡಿದ ಕಾಲ. ಬ್ರಿಟಿಷರು ಸಮುದ್ರಗಳ ಮೇಲೆ ಓಡಾಡುತ್ತ ಶತ್ರುಗಳ ವ್ಯಾಪಾರವನ್ನು ತಡೆಯುತ್ತಿದ್ದ ಕಾಲ. ಸಿಕ್ಕಿದ ಇತರ ಹಡಗುಗಳನ್ನು ದಾರಿಯಲ್ಲಿ ನಿಲ್ಲಿಸಿ ಅವುಗಳಲ್ಲಿದ್ದ ಶತ್ರು ಸಾಮಗ್ರಿಯನ್ನು ಬ್ರಿಟಿಷರು ಆಕ್ರಮಿಸಿಕೊಳ್ಳುತ್ತಿದ್ದರು. ತಮ್ಮ ಹಡಗು ಪಡೆಯಲ್ಲಿ ಕೆಲಸಕ್ಕೆ ಸೇರದೆ ತಪ್ಪಿಸಿಕೊಂಡು ಓಡಿಹೋದ ಕೆಲಸಗಳ್ಳರನ್ನೂ ಅದೇ ರೀತಿ ಹಿಡಿಯುತ್ತಿದ್ದರು. ಅಮೆರಿಕದ ಹಡಗುಗಳನ್ನು ಈ ರೀತಿಯಲ್ಲಿ ಬ್ರಿಟಿಷರು ಮಾರ್ಗಮಧ್ಯೆ ಅಡ್ಡಿಮಾಡಿ ತನಿಖೆ ಮಾಡಿದರು. ಅಮೆರಿಕದವರು ಕೋಪಗೊಂಡು ಯುದ್ಧಕ್ಕೆ ನಿಂತರು. ಸಮುದ್ರದ ಮೇಲೆ ಅಲ್ಲಲ್ಲಿ ಬ್ರಿಟಿಷರ ಹಡಗುಗಳೂ ಅಮೆರಿಕನ್ನರ ಹಡಗುಗಳೂ ಪರಸ್ಪರವಾಗಿ ಜಗಳವನ್ನಾಡಿದವು.

**1812-1814 ಯುದ್ಧ**

ಅಮೆರಿಕದವರು ತಮ್ಮ ನಾಡಿನ ಉತ್ತರಕ್ಕಿದ್ದ ಕನಡ ಪ್ರಾಂತದಲ್ಲಿ ಮುತ್ತಿಗೆ ನಡೆಸುವ ಯೋಚನೆ ನಡೆಸಿದರು. ಆದರೆ ಆ ಪ್ರಾಂತದಲ್ಲಿದ್ದ ಬ್ರಿಟಿಷರೂ ಫ್ರೆಂಚರೂ ಒಟ್ಟುಗೂಡಿ ಮುತ್ತಿಗೆಯನ್ನು ತಡೆದರು. 1814ರಲ್ಲಿ ನಪೋಲಿಯನ್ ರಾಜ್ಯತ್ಯಾಗ ಮಾಡಿದ ತರುವಾಯ ಬ್ರಿಟಿಷರು ಒಂದು ಸೈನ್ಯವನ್ನೊಯ್ದು ಅಮೆರಿಕದಲ್ಲಿ **ವಾಷಿಂಗ್ಟನ್ ಪಟ್ಟಣ**ವನ್ನು ಮುತ್ತಿ ಅದರ ಭಾಗಗಳನ್ನು ನಾಶಗೊಳಿಸಿದರು. ಅದೇ ವರ್ಷ ಎರಡು ಕಡೆಯವರೂ **ಘೆಂಟ್ ಕರಾರ**ನ್ನು (Treaty of Ghent) ನಡೆಸಿ ಜಗಳವನ್ನು ನಿಲ್ಲಿಸಿಕೊಂಡರು.

ಸ್ವಾತಂತ್ರ್ಯ ಯುದ್ಧದ ಕಾಲದಲ್ಲಿ ಉತ್ತರಕ್ಕೆ ಸರೋವರಗಳೇ ಮೇರೆಯಾಗಿದ್ದವು. ಅಮೆರಿಕದವರು ಲೂಯಿಸಿಯಾನ ಕ್ಷೇತ್ರವನ್ನು ಸಂಪಾದಿಸಿಕೊಂಡಾಗಲೂ ರಾಕಿ ಪರ್ವತಶ್ರೇಣಿಯನ್ನು ದಾಟಿ ಪೆಸಿಫಿಕ್‌ಸಾಗರದ ತೀರವನ್ನು ವಶಪಡಿಸಿ

ಕೊಂಡಾಗಲೂ ಕನಡ ಪ್ರಾಂತದ ದಕ್ಷಿಣದಮೇರೆಯೇನೆಂಬ ವಿಚಾರದಲ್ಲಿ ಜಗಳ ಗಳು ಹುಟ್ಟಿ ರೇಗುವಂತಿದ್ದವು. ಆದರೆ ಜಗಳ ರೇಗಲಿಲ್ಲ. 1818ರಲ್ಲಿ ಕ್ಯಾಸಲ್‌ರೇ ಮಂತ್ರಿಯೂ 1846ರಲ್ಲಿ ಪೀಲ್ ಮಂತ್ರಿಯೂ ಸಂಧಾನ ಗಳನ್ನು ನಡೆಸಿ ಜಗಳವಾಗದಂತೆ ನೆರವೇರಿಸಿದರು. ಸರೋವರ ಗಳ ಪಡುವಲಿಗೆ ಕನಡಕ್ಕೂ ಸಂಯುಕ್ತಸಂಸ್ಥಾನಗಳಿಗೂ ಮಧ್ಯೆ 49ನೆ ಉತ್ತರ ಅಕ್ಷಾಂಶರೇಖೆ ಮೇರೆಯಾಗಿರತಕ್ಕುದೆಂಬ ತೀರ್ಮಾನವಾಯಿತು.

**ಮೇರೆ ತೀರ್ಮಾನ**

ಮಧ್ಯ ಅಮೆರಿಕದಲ್ಲಿಯೂ ದಕ್ಷಿಣ ಅಮೆರಿಕದಲ್ಲಿಯೂ ಸ್ಪೈನ್ ಪೋರ್ಚುಗಲ್ ಜನಗಳು ಕಟ್ಟಿದ ಕ್ಷೇತ್ರಗಳಿದ್ದವು (Latin America). ನಪೋಲಿಯನ್ ಆ ಎರಡು ದೇಶಗಳನ್ನಾಕ್ರಮಿಸಿದಾಗ ಆ ಕ್ಷೇತ್ರಗಳ ಜನರು ಸ್ವತಂತ್ರರಾಗಲು ಹವಣಿಸಿದರು. **ಬೊಲಿವರ್** (Bolivar) ಎಂಬ ಶೂರನೊಬ್ಬನು ಆ ಜನರಿಗೆ ನಾಯಕನಾಗಿ ಸ್ವಾತಂತ್ರ್ಯವನ್ನು ಸಾಧಿಸಿದನು. ಆ ಸಮಯದಲ್ಲಿ ಬ್ರಿಟಿಷರು ತಮ್ಮ ವ್ಯಾಪಾರಾನು ಕೂಲ್ಯಗಳನ್ನು ಭದ್ರಪಡಿಸಿಕೊಂಡು ಸ್ವಾತಂತ್ರ್ಯ ದೊರಕು ವಂತೆ ಅವರಿಗೆ ಸಹಾಯ ಮಾಡಿದರು. ವಿಯೆನ್ನ ಕಾಂಗ್ರೆಸ್ ವ್ಯವಸ್ಥೆ ನಡೆದ ತರುವಾಯ ಈ ಕಾಲೊನಿಗಳನ್ನು ಪುನಃ ಸ್ಪೈನಿಗೆ ಸೇರಿಸಲು ಐರೋಪ್ಯ ಪ್ರಭುಗಳು ಯೋಚನೆಮಾಡಿದಾಗ ಕ್ಯಾನಿಂಗ್ ನಡೆಸಿದ ಸಂಧಿವಿಗ್ರಹವನ್ನು ಕಂಡೆವು. ಅಮೆರಿಕದ ಸರ್ವಾಧ್ಯಕ್ಷ ಮನ್ರೋ ಆ ಸಮಯದಲ್ಲಿ ಕೊಟ್ಟ ಪ್ರಕಟನೆ ಮುಖ್ಯವಾದುದು. ಅಮೆರಿಕದವರು ಐರೋಪ್ಯರ ಜಗಳದಲ್ಲಿ ಸೇರದೆ ದೂರವಾಗಿಯೇ ಇರತಕ್ಕ ನೀತಿಯನ್ನು ಅಂದಿನಿಂದ ಗೊತ್ತುಮಾಡಿಕೊಂಡರು. ಲ್ಯಾಟಿನ್ ಅಮೆರಿಕದ ಕ್ಷೇತ್ರಗಳೊಂದಿಗೆ ವ್ಯಾಪಾರವನ್ನು ನಡೆಸುತ್ತಿದ್ದುದಲ್ಲದೆ ಗ್ವಿಯಾನ ಕ್ಷೇತ್ರವನ್ನು ಸಂಪಾದಿಸಿಕೊಂಡಿದ್ದ ಬ್ರಿಟಿಷರಿಗೂ ಅಮೆರಿಕದವರಿಗೂ ಅಲ್ಲಿಂದ ಮುಂದಕ್ಕೆ ಮನಸ್ತಾಪಗಳು ಬೆಳೆದ ಸಂದರ್ಭಗಳು ಆಗಾಗ್ಗೆ ತೋರಿದಾಗ್ಲೂ ಉಭಯತಃ ಸಂಧಾನಗಳಿಂದಲೇ ಇತ್ಯರ್ಥ ಮಾಡಿಕೊಳ್ಳುತ್ತಿದ್ದರು.

**ದಕ್ಷಿಣ ಅಮೆರಿಕ**

1860 ವೇಳೆಗೆ ಅಮೆರಿಕದಲ್ಲಿ ದೊಡ್ಡ ಒಡಕು ಹುಟ್ಟುವ ಪರಿಸ್ಥಿತಿ ಬಲ ಗೊಂಡಿತು. ಔತ್ತರೇಯರಿಗೂ ದಾಕ್ಷಿಣಾತ್ಯರಿಗೂ ಗುಲಾಮರನ್ನು ಕಟ್ಟಿಕೊಳ್ಳುವ ವಿಚಾರದಲ್ಲಿ ಭೇದವಿತ್ತು. ಉತ್ತರದಲ್ಲಿ ನೀಗ್ರೋ ಗುಲಾಮರೇ ಇರಲಿಲ್ಲ. ದಕ್ಷಿಣ ದಲ್ಲಿ ನಲವತ್ತು ಲಕ್ಷ ಗುಲಾಮರಿದ್ದರು. ಬ್ರಿಟಿಷರು 1833ರಲ್ಲಿ ಗುಲಾಮತನ ವನ್ನು ನಿಷೇಧಗೊಳಿಸಿದಾಗ್ಲೂ ಅಮೆರಿಕದ ಇಂಗ್ಲಿಷರು ಗುಲಾ ಮರನ್ನು ಬಿಡದೆಯೇ ಇರುತ್ತಿದ್ದರು. ಆ ವೇಳೆಯಲ್ಲಿ ಗುಲಾಮತನವನ್ನು ವಿರೋಧಿಸಿ ಅದಕ್ಕಾಗಿ ವಾದವಿವಾದ ಗಳನ್ನೂ ಪ್ರಚಾರವನ್ನೂ ಕೈಕೊಂಡವರು ಅಮೆರಿಕದವರಲ್ಲಿಯೇ ತೋರಿಕೊಂಡರು.

**ಅಂತರ್ಯುದ್ಧ**

ದಾಕ್ಷಿಣಾತ್ಯಸಂಸ್ಥಾನಗಳ ಜನರಿಗೆ ಗುಲಾಮತನವನ್ನು ತ್ಯಜಿಸುವುದು ನ್ಯಾಯವಾಗಿ ಕಾಣಲಿಲ್ಲ. ಔತ್ತರೇಯರು ಅದನ್ನು ನಿಲ್ಲಿಸಿಬಿಡುವ ಸಂಕಲ್ಪವನ್ನು ಕಟ್ಟುತ್ತಿದ್ದರು. ಗುಲಾಮತನದ ವಿಚಾರವೊಂದಲ್ಲದೆ ಇತರ ಅಂಶಗಳಲ್ಲಿಯೂ ವಿರೋಧವಿತ್ತು. ದಕ್ಷಿಣ ಸಂಸ್ಥಾನಗಳವರು ಪ್ರತ್ಯೇಕರಾಗುವ ಯೋಚನೆ ಮಾಡಿದರು. ಸಂಯುಕ್ತ ಸರ್ಕಾರದ ಅಧಿಕಾರವನ್ನು ವಿರೋಧಿಸಿದರು. ತಮ್ಮದೇ ಬೇರೆ ಕೂಟವನ್ನು ಕಟ್ಟಿ ಪ್ರತ್ಯೇಕವಾದ ಆಡಳಿತವನ್ನು ಮೊದಲಿಟ್ಟರು. 1860ರಲ್ಲಿ ಅಮೆರಿಕದಲ್ಲಿ ದೊಡ್ಡದಾಗಿ ಅಂತರ್ಯುದ್ಧ ಮೊದಲಾಯಿತು. ಸಂಯುಕ್ತ ಸರ್ಕಾರದ ಪರವಾಗಿ ಸರ್ವಾಧ್ಯಕ್ಷ **ಅಬ್ರಹಾಂ ಲಿಂಕನ್** (Abraham Lincoln) ದಾಕ್ಷಿಣಾತ್ಯರೊಡನೆ ಯುದ್ಧಕ್ಕೆ ತೊಡಗಿದನು. ಐದು ವರ್ಷ ಕಾಲ ಯುದ್ಧ ಅವಿಶ್ರಾಂತವಾಗಿ ಕೆರಳಿತು.

**ಬ್ರಿಟಿಷರೊಡನೆ ಮನಸ್ತಾಪ**

ಅಂತರ್ಯುದ್ಧದ ವಿವರವನ್ನು ಬ್ರಿಟಿಷರು ತಿಳಿದಾಗ ನೆಮ್ಮದಿವಂತರೂ ಶ್ರೀಮಂತರೂ ದಾಕ್ಷಿಣಾತ್ಯರಲ್ಲಿ ಸಹಾನುಭೂತಿಯುಳ್ಳವರಾದರು. ಶ್ರಮಜೀವಿಗಳೂ ಕಾಯಕವರ್ಗದವರೂ ಔತ್ತರೇಯರಿಗೆ ಜಯವಾಗಲೆಂದು ಹಾರೈಸುತ್ತಿದ್ದರು. ಮಂತ್ರಿಮಂಡಲಿಯವರು (ಪಾಮರ್ಸ್ಟನ್ ಮತ್ತು ರಸ್ಸೆಲ್) ನಿಷ್ಪಕ್ಷಪಾತದಿಂದ ವರ್ತಿಸಿದರು. 1861ರಲ್ಲಿ ಔತ್ತರೇಯರು ಬ್ರಿಟಿಷರ **ಟ್ರೆಂಟ್** (Trent) ಎಂಬ ಹಡಗನ್ನು ತಡೆದು ಅದರಲ್ಲಿ ಹೊರಟಿದ್ದ ದಾಕ್ಷಿಣಾತ್ಯ ರಾಯಭಾರಿಗಳನ್ನು ಸೆರೆ ಹಿಡಿದರು. ಆಗ ಇಂಗ್ಲಂಡಿನವರು ಔತ್ತರೇಯರೊಂದಿಗೆ ಯುದ್ಧ ಕಟ್ಟಬೇಕೆಂಬ ಕೂಗೆದ್ದಿತು. ಆದರೆ ರಸ್ಸೆಲ್ ಶ್ರೀಮಂತ ಉಪಾಯವಾಗಿ ಸಂಧಾನ ನಡೆಸಿ ಯುದ್ಧ ತಪ್ಪಿಸಿದನು. ಪುನಃ 1862ರಲ್ಲಿ ಮತ್ತೊಂದು ಸಂದರ್ಭವೊದಗಿತು. ದಾಕ್ಷಿಣಾತ್ಯರಿಗಾಗಿ ಬ್ರಿಟನ್ನಿನಲ್ಲಿ ಯುದ್ಧದ ಹಡಗೊಂದು ತಯಾರಿಯಾಯಿತು. '**ಅಲಬಾಮ**' (Alabama) ಎಂಬ ಆ ಹಡಗು 1862ರಲ್ಲಿ ಬ್ರಿಟನ್ನಿನ ಬರ್ಕನ್ಹೆಡ್ ಬಂದರಿನಿಂದ ಹೊರಟು ಎರಡು ವರ್ಷಕಾಲ ಸಮುದ್ರದಮೇಲೆ ತುಂಟಹಡಗಿನಂತೆ ಓಡಾಡುತ್ತ ಔತ್ತರೇಯರ ಹಡಗುಗಳಿಗೆ ಬಹಳ ತೊಂದರೆಕೊಟ್ಟಿತು. ಅದರ ವಿಚಾರವಾಗಿ ಸಮಯದಲ್ಲಿ ಕೊಟ್ಟಿದ್ದ ಎಚ್ಚರಿಕೆಯನ್ನು ಬ್ರಿಟಿಷರು ಲಕ್ಷ್ಯಮಾಡದಿದ್ದುದು ತಪ್ಪೆಂದು ಔತ್ತರೇಯರು ಕೋಪಗೊಂಡರು. ತಮಗಾದ ನಷ್ಟವನ್ನು ಕಟ್ಟಿಕೊಡಬೇಕೆಂದು ಕೇಳಿದರು. ಸಂಧಾನಪ್ರತಿಸಂಧಾನಗಳಾಗಿ ಕೊನೆಗೆ 1872ರಲ್ಲಿ ಬ್ರಿಟಿಷರು ಪರಿಹಾರದ್ರವ್ಯ ಸಲ್ಲಿಸಿ ಸಮಾಧಾನ ಮಾಡಿಕೊಂಡರು.

ಅಮೆರಿಕದ ಅಂತರ್ಯುದ್ಧದಿಂದ ನಡೆದ ಆರ್ಥಿಕ ಪರಿಣಾಮಗಳು ಮುಖ್ಯ. ಲಾಂಕಾಷೈರಿನ ಗಿರಣಿಗಳಿಗೆ ದಾಕ್ಷಿಣಾತ್ಯ ಸಂಸ್ಥಾನಗಳಿಂದ ಬರುತ್ತಿದ್ದ ಅರಳೆ ನಿಂತುಹೋಗಿ ಅನೇಕ ಗಿರಣಿಗಳು ಕೆಲಸ ನಿಲ್ಲಿಸಬೇಕಾಯಿತು. ಅಲ್ಲಿಯ ಬಟ್ಟೆ ಕೊಂಡು

ಕೊಳ್ಳುತ್ತಿದ್ದ ಹಿಂದುಸ್ತಾನದ ಜನರು ತಾವೇ ಗಿರಣಿಗಳನ್ನು ಕಟ್ಟಿಕೊಳ್ಳುವ ಸಮಯ ವಾಯಿತು. ಯುದ್ಧದಲ್ಲಿ ಔತ್ತರೇಯರು ಗೆದ್ದರು. ಸಂಯುಕ್ತ ಸರ್ಕಾರವು ಭದ್ರಗೊಂಡಿತು. ಗುಲಾಮರನ್ನು ಬಲವಂತದಿಂದ ಬಿಡುಗಡೆ ಮಾಡಿಸಿತು. ಆದರೂ ನೀಗ್ರೋ ಜಾತಿಯವರನ್ನು ಅಮೆರಿಕದ ಬಿಳಿಯರು ಸರಿಸಮಾನರಂತೆ ಕಾಣುವುದು ನೆರವೇರಲಿಲ್ಲ. 19ನೆ ಶತಮಾನದ ಕೊನೆಗೆ ಸಂಯುಕ್ತ ಸಂಸ್ಥಾನಗಳೆಂಬವು 48 ಸಂಸ್ಥಾನಗಳು ಒಟ್ಟುಗೂಡಿರಚಿಸಿಕೊಂಡ ಪ್ರಬಲರಾಷ್ಟ್ರವಾಯಿತು.

ಐರ್ಲಂಡಿನಲ್ಲಿ ಕ್ಷಾಮ ತೋರಿದಾಗ ಅನೇಕರು ಅಮೆರಿಕಕ್ಕೆ ಹೊರಟ ಸಂಗತಿ ಯನ್ನು ಆಗಲೆ ಕಂಡೆವು. ಅಲ್ಲಿ ನೆಲೆಸಿದ ತರುವಾಯ ಐರ್ಲಂಡಿನಲ್ಲಿ ಸ್ವತಂತ್ರವಾದ ರಿಪಬ್ಲಿಕ್ ರಾಷ್ಟ್ರವನ್ನು ಸ್ಥಾಪಿಸುವ ಉದ್ದೇಶದಿಂದ ಫಿನಯನ್ ಸಂಘ ಹುಟ್ಟಿ ದ್ದನ್ನೂ ಐರ್ಲಂಡಿನ ವೃತ್ತಾಂತದಲ್ಲಿ ಕಂಡೆವು. ಐರಿಷರಂತೆ ಐರೋಪ್ಯರನೇಕರು ಹತ್ತೊಂಭತ್ತನೆ ಶತಮಾನದ ಪೂರ್ವಾರ್ಧದಲ್ಲೆಲ್ಲ ತಂಡತಂಡವಾಗಿ ಹೊರಟು ಅಮೆರಿಕದಲ್ಲಿ ನೆಲೆಸಿದರು. ದೇಶವು ಅತಿವಿಶಾಲವಾಗಿದ್ದುದ

**ಜನರಾಶಿ**

ರಿಂದ ಎಷ್ಟು ಜನ ಬಂದರೂ ಅನುಕೂಲವಿತ್ತು. ಜರ್ಮನರು, ಯೆಹೂದ್ಯರು, ಇಟಲಿಯವರು, ಪೋಲರು ಮತ್ತು ಅನೇಕ ಇಂಗ್ಲಿಷರು ಸ್ವದೇಶದಲ್ಲಿದ್ದು ದಾರಿದ್ರ್ಯವನ್ನನುಭವಿಸುವುದಕ್ಕಿಂತ ಅಮೆರಿಕದಲ್ಲಿ ಬದುಕುವುದು ಮೇಲೆಂದು ಹೊರಟು ನೆಲೆಸಿದರು. ಹತ್ತೊಂಭತ್ತನೆ ಶತಮಾನದ ಆದಿಯಲ್ಲಿ ಸುಮಾರು 50 ಲಕ್ಷಗಳಷ್ಟಿದ್ದ ಜನಸಂಖ್ಯೆ ಶತಮಾನದ ಕೊನೆಕೊನೆಗೆ 650 ಲಕ್ಷಗಳಷ್ಟು ಏರಿತು. ನಾನಾ ಜಾತಿಯ ಜನಸಮೂಹಗಳು ಬಂದು ಸೇರಿ ದಾಗ್ಯೂ ಸ್ವಲ್ಪ ಕಾಲದಲ್ಲಿಯೇ ತಾವೆಲ್ಲರೂ ಅಮೆರಿಕನ್ನರೆಂಬ ಭಾವನೆಯನ್ನು ಬೆಳೆಸಿ ದರು. ರಾಷ್ಟ್ರದಲ್ಲೆಲ್ಲ ಸುವ್ಯವಸ್ಥೆಗೊಂಡ ಶಿಕ್ಷಣವೊಂದಲ್ಲದೆ ವೇಗವಾಗಿ ತೋರಿ ಕೊಂಡ ಸಂಚಾರಸೌಕರ್ಯಗಳೂ ಕೈಗಾರಿಕೆಗಳೂ ಆ ಬಗೆಯ ರಾಷ್ಟ್ರಭಾವನೆ ಬಲಗೊಳ್ಳುವುದಕ್ಕೆ ಸಹಾಯಕವಾದವು. ಪಶ್ಚಿಮಾರ್ಧಗೋಳಕ್ಕೆಲ್ಲ ಮುಖ್ಯ ರಾಷ್ಟ್ರ ವಾದುದಲ್ಲದೆ ಅಮೆರಿಕವೆಂಬುದು ಬರಬರುತ್ತ ಒಟ್ಟು ಪೃಥ್ವಿಗೇ ಸಾಹುಕಾರರಾಷ್ಟ್ರ ವಾಯಿತು.

ಹತ್ತೊಂಭತ್ತನೆ ಶತಮಾನದ ಕಡೆಗಾಲದಲ್ಲಿ ಬ್ರಿಟಿಷರಿಗೂ ಅಮೆರಿಕಕ್ಕೂ ಪುನಃ ಮನಸ್ತಾಪಕ್ಕೆ ಅವಕಾಶದೋರಿತು. **ವೆನಿಸ್ಯೂಲ** (Venezuela) ಎಂಬ ರಾಷ್ಟ್ರಕ್ಕೂ ಬ್ರಿಟಿಷ್ **ಗ್ವಿಯಾನ** (Guiana) ಎಂಬ ಪ್ರದೇಶಕ್ಕೂ ದಕ್ಷಿಣ ಅಮೆರಿಕದಲ್ಲಿ ಎಲ್ಲೆಯ ವಿಚಾರವಾಗಿ ವಾದ ಹುಟ್ಟಿತ್ತು. 1895ರಲ್ಲಿ ಅಮೆರಿಕದ

**ವೆನಿಸ್ಯೂಲ ಎಲ್ಲೆ**

ಅಧ್ಯಕ್ಷ **ಕ್ಲೀವ್ಲಂಡ್** (Cleveland) ಆ ವಿವಾದದಲ್ಲಿ ತಾನು ಪ್ರವೇಶಿಸಿ ಒಂದು ಇತ್ಯರ್ಥವನ್ನು ಸೂಚಿಸಿದನು. ಬ್ರಿಟಿಷ್ ಪ್ರಧಾನ ಸಾಲ್ಸ್‌ಬೆರಿ ಶ್ರೀಮಂತನಿಗೆ ಆತನು ಪ್ರವೇಶಮಾಡಿದ್ದು ಒಪ್ಪಲಿಲ್ಲ. ಆದರೆ

ಆ ಅಧ್ಯಕ್ಷನು ಹಿಂದಿನ ಮನ್ರೊ ಪ್ರಕಟನೆಯಂತೆ ತನ್ನ ಪ್ರವರ್ತನೆ ಸರಿಯೆಂದೂ ಅದಕ್ಕಾಗಿ ಯುದ್ಧಕ್ಕೂ ತಾನು ಸಿದ್ಧನೆಂದೂ ಹೇಳಿಬಿಟ್ಟನು. ಕಡೆಗೆ ಪಂಚಾಯತಿಯಾಗಿ ಎಲ್ಲೆಯ ನಿಷ್ಕರ್ಷೆಯಾಯಿತು.

**ಸಾಮ್ರಾಜ್ಯ**

ಶತಮಾನ ಮುಗಿಯುವುದರೊಳಗಾಗಿ ಅಮೆರಿಕದವರು ಸ್ಪೈನಿನೊಡನೆ ಯುದ್ಧ ನಡೆಸಿ (1898) ಜಯಶಾಲಿಗಳಾಗಿ ವೆಸ್ಟಿಂಡೀಸ್ ದ್ವೀಪಗಳಲ್ಲಿ ಕೆಲವನ್ನಲ್ಲದೆ ಪೆಸಿಫಿಕ್ ಸಾಗರದಲ್ಲಿ **ಫಿಲಿಪ್ಪೈನ್ ದ್ವೀಪಗಳನ್ನು** ವಶಪಡಿಸಿಕೊಂಡರು. ಅದಕ್ಕೆ ಹಿಂದೆಯೇ ಅಮೆರಿಕದ ನಾವಿಕರು ಜಪಾನ್ ಮತ್ತು ಚೀನಗಳಲ್ಲಿ ಪ್ರವೇಶಮಾಡಿ ವ್ಯಾಪಾರವನ್ನು ಮೊದಲಿಟ್ಟಿದ್ದರು. ಅಮೆರಿಕದವರು ದ್ವೀಪಭೂಮಿಗಳ ಸಾಮ್ರಾಜ್ಯವನ್ನು ಮಾತ್ರವಲ್ಲದೆ ರಷ್ಯದೊಡನೆ ಒಪ್ಪಂದ ಮಾಡಿಕೊಂಡು **ಅಲಾಸ್ಕ** (Alaska) ಎಂಬ ವಿಸ್ತಾರ ಪ್ರದೇಶವನ್ನು ತಮ್ಮ ಸ್ವಾಧೀನಮಾಡಿಕೊಂಡರು.

ಇಪ್ಪತ್ತನೆ ಶತಮಾನ ಮೊದಲಾಗುವ ವೇಳೆಗೆ ಅಮೆರಿಕನರು ದೊಡ್ಡ ಸಾಮ್ರಾಜ್ಯ ಕಟ್ಟಿಕೊಂಡಿದ್ದರು. ರಾಜಕೀಯವಾಗಿ ಅವರು ಕಟ್ಟಿದ್ದ ಸಾಮ್ರಾಜ್ಯಕ್ಕಿಂತ ಆರ್ಥಿಕವಾಗಿ ಕಟ್ಟಿದುದು ಪ್ರಬಲವಾಗಿಯೇ ಇತ್ತು.

## ಕನಡ ಡುಮಿನಿಯನ್

**ಫ್ರೆಂಚರು**

ಸೆಂಟ್‌ಲಾರೆನ್ಸ್ ನದೀತೀರ ಪ್ರದೇಶದಲ್ಲಿ ಮೊದಲು ನೆಲಸಿದವರು ಫ್ರೆಂಚರು. ಹದಿನೇಳನೆ ಶತಮಾನದಲ್ಲಿಯೇ ಫ್ರೆಂಚರು ನೆಲೆಸಿ ಕ್ವಿಬೆಕ್ ಮತ್ತು ಮಾಂಟ್ರೀಲ್ ಪಟ್ಟಣಗಳನ್ನು ಕಟ್ಟಿಕೊಂಡಿದ್ದರು. ಹದಿನೆಂಟನೆ ಶತಮಾನದಲ್ಲಿ ಉತ್ತರದಕ್ಷಿಣವಾಗಿ ನ್ಯೂ ಆರ್ಲಿಯನ್ಸ್ ನಗರದಿಂದ ಸೆಂಟ್ ಲಾರೆನ್ಸ್ ಮುಖದವರೆಗೆ ಸಾಮ್ರಾಜ್ಯ ಕಟ್ಟುವ ಪ್ರಯತ್ನವನ್ನು ಫ್ರೆಂಚರು ನಡೆಸಿ ಸಪ್ತವಾರ್ಷಿಕ ಯುದ್ಧದಲ್ಲಿ ಸೋತು ಇಂಗ್ಲಿಷರಿಗೆ ಕನಡ ಪ್ರಾಂತವನ್ನು ಬಿಟ್ಟುಕೊಟ್ಟ ವಿವರವನ್ನು ಹಿಂದೆಯೇ ಕಂಡೆವು.

1763ರಲ್ಲಿ ಬ್ರಿಟಿಷರು ಕನಡವನ್ನು ಆಕ್ರಮಿಸಿದಾಗ ಅಲ್ಲಿ 60,000 ಜನ ಮಾತ್ರ ಇದ್ದರು. ಅವರೆಲ್ಲರೂ ಜಾತಿಯಲ್ಲಿ ಫ್ರೆಂಚ್‌ಮಾತ್ರರಲ್ಲದೆ ಮತದಲ್ಲಿ ರೋಮನ್ ಕ್ಯಾಥಲಿಕ್ಕರಾಗಿದ್ದರು. ಅವರನ್ನು ಸಮಾಧಾನದಿಂದಿಟ್ಟುಕೊಳ್ಳದಿದ್ದ ಪಕ್ಷದಲ್ಲಿ ಸಹಜವಾಗಿ ಅವರು ದಂಗೆಯೇಳುವ ಸಂಭವವಿತ್ತು. ಅದನ್ನು ತಿಳಿದ **ಸರ್ ಗೈ ಕಾರ್ಲ್‌ಟನ್** (Sir Guy Carleton) ಎಂಬ ಅಲ್ಲಿಯ ಅಧಿಕಾರಿಯು ನಾರ್ತ್ ಶ್ರೀಮಂತನಿಗೆ ಸಮಯದಲ್ಲಿ ಸಲಹೆಕೊಟ್ಟು 1774ರಲ್ಲಿ **ಕ್ವಿಬೆಕ್ ಕಾನೂನನ್ನು** ಮಾಡಿಸಿದನು.

ಫ್ರೆಂಚ್ ಕ್ಯಾಥಲಿಕ್ಕರು ತಮ್ಮ ಮತವನ್ನು ಅವಲಂಬಿಸಿಕೊಂಡಿದ್ದು ತಮ್ಮ ಪಾದ್ರಿ ಕಾಣಿಕೆಗಳನ್ನು ತಮ್ಮಲ್ಲಿಯೇ ಎತ್ತಿಕೊಳ್ಳುವುದಕ್ಕೂ ತಮ್ಮ ಆಚಾರಸಂಪ್ರದಾಯಗಳನ್ನು ಪಾಲಿಸಿಕೊಳ್ಳುವುದಕ್ಕೂ ಯಾವ ಆತಂಕವೂ ಇರಕೂಡದೆಂದು ಆ ಕಾನೂನಿನಿಂದ ಗೊತ್ತಾಯಿತು. ನಿರಂಕುಶ ಪ್ರಭುತ್ವವನ್ನು ಮಾತ್ರವೇ ಅನುಭವಿಸಿದ್ದ ಫ್ರೆಂಚ್ ಜನರು ಬ್ರಿಟಿಷರಿಗೆ ಪ್ರಜೆಗಳಾದಾಗ ಮತಸಂಪ್ರದಾಯಗಳಿಗೆ ಅಡ್ಡಿಯಿಲ್ಲದಿರುವುದನ್ನು ಕಂಡು ಸಮಾಧಾನಪಟ್ಟರು. ಇಂಗ್ಲಿಷ್ ಕಾಲೊನಿಗಳಲ್ಲಿ ಇಂಗ್ಲಿಷ್ ಜಾತಿಯವರು ದಂಗೆಯೆದ್ದು ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಂಡಾಗ ಕನಡ ಪ್ರಾಂತದ ಫ್ರೆಂಚರು ಬ್ರಿಟಿಷರಿಗೆ ಯಾವ ತೊಂದರೆಯನ್ನೂ ಕೊಡವೆ ಇದ್ದರು.

**ಸಮಾಧಾನ**

ಸ್ವಾತಂತ್ರ್ಯ ಯುದ್ಧ ನಡೆದಾಗ ಕನಡದ ಗವರ್ನರ್ ಕಾರ್ಲ್‌ಟನ್ ಎಚ್ಚರದಿಂದಿದ್ದನು. ಆ ಜಗಳ ನಡೆದಾಗ ಕಾಲೊನಿಗಳ ಜನರಲ್ಲಿ ಒಂದು ಗುಂಪಿನವರು ಸ್ವಾತಂತ್ರ್ಯಕ್ಕೊಪ್ಪದೆ ಬ್ರಿಟಿಷರ ಪಕ್ಷಪಾತಿಗಳಾಗಿದ್ದು ಉತ್ತರದ ಮೇರೆ ದಾಟಿ ಕನಡ ಪ್ರಾಂತದ ಕಡೆ ವಲಸೆ ಹೊರಟರು. ನೋವಸ್ಕೋಷಿಯದಲ್ಲಿಯೂ ಆಂಟೇರಿಯೋ ಸರೋವರದ ತೀರದಲ್ಲಿಯೂ ಆ ಇಂಗ್ಲಿಷ್ ಜಾತಿಯವರು ನೆಲೆಸಿದರು. ಈ ಇಂಗ್ಲಿಷ್ ಗುಂಪಿನವರು ನೆರೆಯವರಾದ ಫ್ರೆಂಚರೊಡನೆ ಹೊಂದಿಕೊಳ್ಳದಾದರು; ಆಗ ನಡೆಯುತ್ತಿದ್ದ ಆಡಳಿತದಲ್ಲಿ ಅತೃಪ್ತಿಯನ್ನು ಸೂಚಿಸಿದರು. ಈ ಪರಿಸ್ಥಿತಿಯನ್ನು ಸರಿಪಡಿಸಲು ಕಿರೇಪಿಟ್ ಮಂತ್ರಿ 1791ರಲ್ಲಿ **ಕನಡ ಕಾನೂನು** ಎಂಬ ಶಾಸನ ಮಾಡಿಸಿದನು. ಕನಡ ಎರಡು ಪ್ರಾಂತಗಳಾಯಿತು—ಫ್ರೆಂಚ್ ಕನಡ ಅಥವಾ ಕೆಳಗಣ ಕನಡ (Lower Canada) ಮತ್ತು ಬ್ರಿಟಿಷ್ ಕನಡ ಅಥವಾ ಮೇಲಣ ಕನಡ (Upper Canada). ಒಂದೊಂದು ಪ್ರಾಂತದ ಆಡಳಿತಕ್ಕೂ ಒಬ್ಬ ಗವರ್ನರ್, ಮಂತ್ರಾಲೋಚನ ಸಭೆ ಮತ್ತು ಪ್ರತಿನಿಧಿ ಸಭೆ ಇರತಕ್ಕುದೆಂದೂ ಪ್ರತಿನಿಧಿಸಭೆಗೆ ಶಾಸನಗಳನ್ನು ರಚಿಸುವ ಮತ್ತು ತೆರಿಗೆಗಳನ್ನು ಗೊತ್ತುಮಾಡಿಕೊಳ್ಳುವ ಅಧಿಕಾರ ಮಾತ್ರ ಇರತಕ್ಕುದೆಂದೂ ಆ ಶಾಸನದಿಂದ ನಿಶ್ಚಯವಾಯಿತು.

**ಪಿಟ್ಟನ ಕಾನೂನು**

ಸಂಯುಕ್ತ ಸಂಸ್ಥಾನಗಳೆಂಬ ಹೊಸ ರಾಷ್ಟ್ರವನ್ನು ನಡೆಸುತ್ತಿದ್ದವರಿಗೆ ಉತ್ತರದಲ್ಲಿದ್ದ ಕನಡ ಪ್ರಾಂತವನ್ನು ವಶಪಡಿಸಿಕೊಂಡು ತಮ್ಮ ರಾಷ್ಟ್ರದಲ್ಲಿ ಸೇರಿಸಿಕೊಳ್ಳಬೇಕೆಂಬ ಅಭಿಲಾಷೆ ಹುಟ್ಟಿತು. ಕನಡದಲ್ಲಿ ನೆಲೆಸಿದ್ದ ಫ್ರೆಂಚರಿಗಾಗಲಿ ಇಂಗ್ಲಿಷರಿಗಾಗಲಿ ಅದು ಅನಿಷ್ಟವಾಗಿತ್ತು. ತಮ್ಮ ಕ್ಯಾಥಲಿಕ್ ಮತಾಚರಣೆಗಳಿಗೆ ಪ್ಯೂರಿಟನ್ ಪ್ರಮುಖವಾದ ಸಂಯುಕ್ತರಾಷ್ಟ್ರದಲ್ಲಿ ಅವಕಾಶವಿರಲಾರದೆಂಬ ಶಂಕೆ ಫ್ರೆಂಚರಿಗೆ. ಬ್ರಿಟನ್ನಿನ ಸಂಬಂಧವನ್ನು ಬಿಡಲಾರದ ಸಂಕಟ ಇಂಗ್ಲಿಷ್ ಗುಂಪಿಗೆ. ಆದುದರಿಂದ

1812ರಿಂದ 1814 ರವರೆಗೆ ಬ್ರಿಟನ್ನಿಗೂ ಅಮೆರಿಕಕ್ಕೂ ಜಗಳವೂ ಯುದ್ಧವೂ ತೋರಿ ಅಮೆರಿಕದವರು ಸೈನ್ಯಗಳನ್ನು ಉತ್ತರಕ್ಕೆ ಕಳುಹಿಸಿ ಕನಡ ಪ್ರಾಂತವನ್ನು ಮುತ್ತಿದಾಗ ಕನಡ ನಿವಾಸಿಗಳು ಸಂಯುಕ್ತರಾಷ್ಟ್ರಕ್ಕೆ ವಿರೋಧವನ್ನೇ ತೋರಿ ಬ್ರಿಟನ್ನಿಗೆ ಸಹಾಯಮಾಡುವವರಾದರು. ತಾಮ್ರವರ್ಣದ ಜನರ ಸ್ನೇಹವನ್ನು ಕಟ್ಟಿ ಮುತ್ತಿಗೆಯನ್ನು ತಡೆದರು. ಸಣ್ಣ ದಳವನ್ನಿಟ್ಟುಕೊಂಡಿದ್ದು ಬ್ರಿಟಿಷ್ ದಳಪತಿ **ಐಸಕ್ ಬ್ರಾಕ್** (Isaac Brock) ಹೊಡೆದಾಡುತ್ತ ಪ್ರಾಣವನ್ನು ಕಳೆದುಕೊಂಡಾಗ್ಗೂ ತನ್ನ ಪಕ್ಷಕ್ಕೆ ಜಯವನ್ನು ಸಂಪಾದಿಸಿದನು. ಘೆಂಟ್ ಕರಾರಿನಿಂದ ಯುದ್ಧನಿಂತಿತು. ಆದರೆ ಸಂಯುಕ್ತ ರಾಷ್ಟ್ರದೊಡನೆ ಜಗಳ ತಪ್ಪಲಿಲ್ಲ. ಆ ರಾಷ್ಟ್ರದವರು ಪಶ್ಚಿಮಕ್ಕೆ ವಿಸ್ತಾರಮಾಡಿಕೊಳ್ಳುತ್ತ ಉತ್ತರದ ಮೇರೆಯನ್ನು ನಿರ್ಣಯ ಮಾಡಿಕೊಳ್ಳುವಾಗ ಪುನಃ ಮನಸ್ತಾಪಗಳು ಹುಟ್ಟಿದವು. ಬ್ರಿಟಿಷ್ ಮಂತ್ರಿ ಕ್ಯಾಸಲ್‌ರೇ 49ನೆ ಅಕ್ಷಾಂಶರೇಖೆ ಮೇರೆಯಾಗಿರತಕ್ಕುದೆಂದು ಸಂಧಾನ ನಡೆಸಿದ ತರುವಾಯ ಮನಸ್ತಾಪಗಳು ಅಡಗಿದವು.

**ಬ್ರಿಟಿಷರಲ್ಲಿ ವಿಶ್ವಾಸ**

ವಿಕ್ಟೋರಿಯ ರಾಣಿಯ ಆಳಿಕೆ ಮೊದಲಾದ ವೇಳೆಗೆ ಕನಡದ ಜನರಲ್ಲಿ ಅಸಮಾಧಾನ ಬೆಳೆದಿತ್ತು. ಅನೇಕ ಕಾರಣಗಳಿಂದ ಪ್ರೇರಿತರಾಗಿ ಬ್ರಿಟಿಷ್ ದ್ವೀಪಗಳಿಂದ ಜನರು ವಲಸೆಹೊರಟು ಕನಡದ ಬ್ರಿಟಿಷ್ ವಿಭಾಗದಲ್ಲಿ ನೆಲೆಸಿದ್ದರು. ಹೊಸದಾಗಿ ಬಂದು ನೆಲೆಸಿದವರನ್ನು ಹಳಬರು ತಾತ್ಸಾರದಿಂದ ಕಾಣುತ್ತ ಆಡಳಿತದ ಅಧಿಕಾರವೆಲ್ಲ ತಮಗೆ ಮಾತ್ರ ಇರುವಂತೆ ಒಳಸಂಧಾನ ನಡೆಸುತ್ತಿದ್ದರು. ಹೊಸದಾಗಿ ನೆಲೆಸಿದ ಬ್ರಿಟಿಷ್ ಗುಂಪಿಗೆ ಅತೃಪ್ತಿ ಬೆಳೆಯಿತು. ಫ್ರೆಂಚ್ ವಿಭಾಗದಲ್ಲಿಯೂ ಇಂಗ್ಲಿಷ್ ಜಾತಿಯ ಗವರ್ನರ್ ತನ್ನ ಜಾತಿಯವರನ್ನೇ ಮಂತ್ರಾಲೋಚನ ಸಭೆಗೆ ಗೊತ್ತುಮಾಡಿಕೊಳ್ಳುತ್ತಿದ್ದನೆಂಬ ಅಸಮಾಧಾನ ಬೆಳೆಯಿತು. ಕಡೆಗೆ ಫ್ರೆಂಚ್ ಜನರು ತಮ್ಮ ಪ್ರತಿನಿಧಿ ಸಭೆಯಲ್ಲಿ ತೆರಿಗೆಗಳನ್ನು ಕೊಡಿಸದೆ ಹೋದರು. 1837ರ ವೇಳೆಗೆ ಎರಡು ಪ್ರಾಂತಗಳಲ್ಲಿಯೂ ದಂಗೆಗಳೆದ್ದವು. ದಂಗೆಗಳು ಪ್ರಬಲಗೊಳ್ಳದಿದ್ದರೂ ಕನಡದ ಜನರು ಕೂಡ ಬ್ರಿಟನ್ನಿಗೆದುರುಬಿದ್ದು ಸ್ವಾತಂತ್ರ್ಯಕ್ಕಾಸೆಪಡಬಹುದಾದ ಸಂಭವ ತೋರಿತು. ಆಗ ಮುಖ್ಯಮಂತ್ರಿಯಾಗಿದ್ದ ಮೆಲ್ಬರ್ನ್ ಶ್ರೀಮಂತನು ಪರಿಸ್ಥಿತಿಯನ್ನು ಪರಿಶೀಲಿಸಿ ಸಮಾಧಾನಕರವಾದ ಏರ್ಪಾಟನ್ನು ಸೂಚಿಸಿಕೊಡುವಂತೆ **ಡರ್ಹಂ ಶ್ರೀಮಂತನನ್ನು** (Lord Durham) ನಿಯೋಗಿಸಿದನು. ಡರ್ಹಂ ಶ್ರೀಮಂತನು ಕಾಲೊನಿಗಳ ವಿಷಯದಲ್ಲಿ ದೂರಾಲೋಚನೆಗಳನ್ನು ನಡೆಸಿದ್ದ ರ್‍ಯಾಡಿಕಲ್ ಗುಂಪಿನವನು. ದಂಗೆಯನ್ನೇನೋ ಅತನು ವೇಗವಾಗಿ ಅಡಗಿಸಿದನು. ಮುಂದಕ್ಕೆ ಕನಡ ಪ್ರಾಂತದ ಆಡಳಿತವಿರತಕ್ಕ ರೀತಿಯನ್ನು ಸೂಚಿಸಿದನು. ಬ್ರಿಟಿಷ್

**ಅಸಮಾಧಾನ**

ದ್ವೀಪಗಳಲ್ಲಿ ಜನರಾಶಿ ಹೆಚ್ಚಿದಂತೆಲ್ಲ ಜನರು ಕಾಲೊನಿಗಳಿಗೆ ಹೊರಟು ನೆಲೆಸುತ್ತಿರ

**ಡರ್ಹ್ಯಾಂ ವರದಿ**

ಬೇಕೆಂದೂ ಕಾಲೊನಿಗಳ ನೆಲಸುಗಾರರು ತಮ್ಮ ಆಡಳಿತವನ್ನು ತಾವೇ ಅನುಭವಿಸುತ್ತ ಬರಬೇಕೆಂದೂ ಆತನ ಅಭಿಪ್ರಾಯ. ಅದಕ್ಕನುಸಾರವಾಗಿ ಮೇಲಣ ಕೆಳಗಣ ಕನಡ ವಿಭಾಗಗಳೊಟ್ಟುಗೂಡಿ ಒಂದೇ ಆಗಿರಬೇಕೆಂದೂ ಅಲ್ಲಿಯ ನಿವಾಸಿಗಳಿಗೆ ಜವಾಬ್ದಾರಿ ಅಥವಾ ಉತ್ತರವಾದಿ ಸರ್ಕಾರ ಸ್ಥಾಪನೆಯಾಗಬೇಕೆಂದೂ ಆತನು ವರದಿಕೊಟ್ಟನು. ಆತನ ವರ್ತನೆಯನ್ನು ತಕ್ಷಣವೇ ಬ್ರಿಟಿಷರು ಮೆಚ್ಚಲಿಲ್ಲ. ಆದರೆ ಒಂದೆರಡು ವರ್ಷಗಳಲ್ಲಿ 1841ರಲ್ಲಿ ಕನಡ ಆಡಳಿತವನ್ನು ವ್ಯವಸ್ಥೆಗೊಳಿಸಿದ ಶಾಸನ ಜಾರಿಗೆ ಬಂತು. ಗವರ್ನರ್, ಮಂತ್ರಿಸಭೆ ಮತ್ತು ಪ್ರತಿನಿಧಿ ಸಭೆಗಳು ಗೊತ್ತಾದವು; ಪ್ರತಿನಿಧಿಸಭೆಯಲ್ಲಿ ಪ್ರಬಲಪಕ್ಷದ ನಾಯಕರನ್ನು ಮಂತ್ರಿಸ್ಥಾನಗಳಲ್ಲಿ ನಿಯೋಗಿಸುವ ಪದ್ಧತಿಯು ಆಚರಣೆಯಲ್ಲಿ ಬಂತು.

ಕನಡವಿಭಾಗವೆಲ್ಲವೂ ಒಂದೇ ಆದ ಬಳಿಕ ಫ್ರೆಂಚ್ ಗುಂಪಿನವರಿಗೆ ಶಂಕೆ ಬಲವಾಯಿತು. ಅವರದು ಅಲ್ಪಸಂಖ್ಯಾಕ ಗುಂಪು. ಭಾಷೆ, ಮತ ಮತ್ತು ಆಚಾರ ಸಂಪ್ರದಾಯಗಳಲ್ಲಿ ಅವರು ಬೇರೆಯಾದವರು. ಬಹುಸಂಖ್ಯಾಕರಾದ ಬ್ರಿಟಿಷರ ಮಧ್ಯೆ ತಮಗೆ ಅನುಕೂಲವಾಗಿರಲಾರದೆಂದು ಅವರಿಗೆ ಯೋಚನೆ ಹಿಡಿಯಿತು. ಇದಲ್ಲದೆ ಅಜ್ಞಾತವಾದ ಪ್ರದೇಶಗಳು ಪರಿಚಿತವಾಗಿ ಹೊಸಹೊಸ ನೆಲಸುಗಳು ರೂಪಗೊಳ್ಳುತ್ತಿದ್ದುದರಿಂದ ಆ ಹೊಸ ಪ್ರದೇಶಗಳ ವ್ಯವಸ್ಥೆಯೂ ನಡೆಯಬೇಕಾಗಿತ್ತು. ಸಂಯುಕ್ತ ಸಂಸ್ಥಾನಗಳು ಕೂಟಕಟ್ಟಿ ಒಂದು ರಾಷ್ಟ್ರಕಟ್ಟಿಕೊಂಡಿದ್ದ ರೀತಿಯಲ್ಲಿ ಕನಡದಲ್ಲಿಯೂ ನಾಲ್ಕು ಪ್ರತ್ಯೇಕ ಸಂಸ್ಥಾನಗಳನ್ನು ಬೇರ್ಪಡಿಸಿ ಆ ನಾಲ್ಕಕ್ಕೂ ಒಟ್ಟಿಗೆ ಫೆಡರಲ್ ಅಥವಾ ಸಂಯುಕ್ತ ಸರ್ಕಾರವನ್ನು ಗೊತ್ತುಪಡಿಸುವುದು ಸೂಕ್ತವೆನಿಸಿತು. 1867ರಲ್ಲಿ ಬ್ರಿಟಿಷ್ ನಾರ್ತ್ ಅಮೆರಿಕ

**ಫೆಡರಲ್ ವ್ಯವಸ್ಥೆ**

ಶಾಸನ (British North America Act) ಜಾರಿಗೆ ಬಂತು. ಕ್ವೆಬೆಕ್ (ಕೆಳಗಣ ಕನಡ), ಆಂಟೇರಿಯೊ (ಮೇಲಣ ಕನಡ), ನೋವಸ್ಕೋಷಿಯ ಮತ್ತು ನ್ಯೂಬ್ರನ್ಸ್‌ವಿಕ್ ಎಂಬ ನಾಲ್ಕು ಬೇರೆ ಸಂಸ್ಥಾನಗಳು ಗೊತ್ತಾಗಿ ಒಳಾಡಳಿತಕ್ಕಾಗಿ ಪ್ರತ್ಯೇಕಗೊಂಡವು. ನಾಲ್ಕಕ್ಕೂ ಅನ್ವಯಿಸಿದ ಫೆಡರಲ್ ವಿಷಯಗಳನ್ನು ನಿರ್ವಹಿಸಲು ಫೆಡರಲ್ ಸರ್ಕಾರವೊಂದು ರಚನೆಯಾಯಿತು. ಕನಡವೆಲ್ಲಕ್ಕೂ **ಡುಮಿನಿಯನ್** ಎಂಬ ಶಬ್ದವು ರೂಢಿಯಾಯಿತು.

ಸೆಂಟ್‌ಲಾರೆನ್ಸ್ ನದಿಗೂ ಪಡುವಲಿಗಿದ್ದ ಪ್ರದೇಶದ ಪರಿಚಯ ಮೊದಲಿರಲಿಲ್ಲ. 1778ರಲ್ಲಿ ಕ್ಯಾಪ್ಟನ್ ಕುಕ್ ಪೆಸಿಫಿಕ್ ಸಾಗರದಲ್ಲಿ ಯಾನಮಾಡಿ ತೀರವನ್ನು

ಗೊತ್ತುಮಾಡಿಕೊಂಡನು. ಆತನ ತರುವಾಯ **ವಾಂಕೂವರ್** (Vancouver) ಎಂಬಾತನು ಆ ತೀರದ ವಿಸ್ತಾರವನ್ನು ಗುರುತುಮಾಡಿಕೊಂಡನು. ಪಶ್ಚಿಮದಲ್ಲಿ ಒಂದು ದ್ವೀಪಕ್ಕೆ ವಾಂಕೂವರ್ ಎಂಬ ಹೆಸರೇ ಆಯಿತು. ರಾಕಿ ಪರ್ವತ ಶ್ರೇಣಿಗೆ ಪಡುವಲಿಗಿದ್ದ ಪ್ರದೇಶವೆಲ್ಲಕ್ಕೂ **ಒರೆಗಾನ್** (Oregon) ಎಂಬ ಹೆಸರಿತ್ತು. ಕನಡದವರೂ ಸಂಯುಕ್ತ ಸಂಸ್ಥಾನಗಳವರೂ ಆ ಪ್ರದೇಶ ತಮ್ಮದೆಂದು ಜಗಳಕ್ಕೆ ನಿಂತರು. 1846ರಲ್ಲಿ ಸಂಧಾನದಿಂದಲೇ ಸಮಾಧಾನವಾಯಿತು. ಹಿಂದೆ ಗೊತ್ತಾಗಿದ್ದ ಅಕ್ಷಾಂಶ ರೇಖೆಯೇ ಮೇರೆಯಾಗಿರಲೆಂದು ಇಬ್ಬರೂ ಒಪ್ಪಿದರು.

**ಪಶ್ಚಿಮತೀರ**

ಅತಿವಿಸ್ತಾರವಾಗಿದ್ದ ಕನಡದ ಮಧ್ಯಭಾಗದ ಉತ್ತರದಲ್ಲಿ ದೇಶಹೇಗಿದೆ ಯೆಂಬುದೇ ಬಹುಕಾಲದವರೆಗೆ ತಿಳಿದಿರಲಿಲ್ಲ. **ಹಡ್ಸನ್ ಕೊಲ್ಲಿ**ಯ ಬಳಿ ಬೇಟೆಯಾಡಿ ಮೃಗಗಳ ಚರ್ಮಗಳನ್ನು ವ್ಯಾಪಾರ ಮಾಡುತ್ತಿದ್ದ ಒಂದು **ಕಂಪನಿ** 1670ರಿಂದಲೂ ಇತ್ತು. 1838ರಲ್ಲಿ ಆ ಕಂಪನಿಯವರು ವಿನಿಪೆಗ್ ಸರೋವರದ ಪಶ್ಚಿಮಕ್ಕಿರುವ ಪ್ರದೇಶದಲ್ಲಿ ಬೇಟೆಯಾಡಿ ವ್ಯಾಪಾರಮಾಡುವ ಅಧಿಕಾರವನ್ನು ಪಡೆದರು. ಪ್ರದೇಶವೆಲ್ಲ ಅರಣ್ಯವಾಗಿಯೇ ಇತ್ತು. 1856ರಲ್ಲಿ ಒರೆಗಾನ್ ಪ್ರದೇಶದಲ್ಲಿ ಚಿನ್ನದ ಗಣಿಗಳು ಕಾಣಿಸಿಕೊಂಡವು. ಅಲ್ಲಿಗೆ ಅನೇಕ ಜನರು ನುಗ್ಗಿದರು. ಕೆಲಕಾಲದ ಮೇಲೆ ಆ ಜನರು ಅಲ್ಲಿಯೆ ಊರನ್ನು ಕಟ್ಟಿಕೊಂಡರು. ಆಗ ಕನಡ ಸರ್ಕಾರದವರು ಹಡ್ಸನ್ ಕಂಪೆನಿಯವರಿಗೆ ಹಣಕೊಟ್ಟು ಆ ಪ್ರದೇಶವೆಲ್ಲವನ್ನೂ ತಮ್ಮ ವಶಕ್ಕೆ ತೆಗೆದುಕೊಂಡು **ಬ್ರಿಟಿಷ್ ಕೊಲಂಬಿಯ** (British Columbia) ಎಂಬ ಹೊಸ ಸಂಸ್ಥಾನವನ್ನು ಕಟ್ಟಿದರು. ಮಧ್ಯಭಾಗದಲ್ಲಿ ದೇಶದ ಪರಿಚಯವಾಗುತ್ತ 1870ರಲ್ಲಿ **ಮಾನಿಟೋಬ** ಎಂಬ ಮತ್ತೊಂದು ಸಂಸ್ಥಾನ ರೂಪಗೊಂಡಿತು. ಅಲ್ಲಿ ನೆಲೆಸಿ ಬೇಟೆಯಿಂದ ಜೀವಿಸುತ್ತಿದ್ದ ಮಿಶ್ರಜಾತಿಯ ಜನರು ದಂಗೆಯೆದ್ದು ಸೋತುಹೋದರು.

**ಕ್ಷೇತ್ರ ವಿಸ್ತಾರ**

ಕನಡದ ಚರಿತ್ರೆಯಲ್ಲಿ ಮುಖ್ಯವೆನಿಸಿದ ರೈಲ್ದಾರಿಯ ಯೋಚನೆ 1870ರಲ್ಲಿ ನಡೆಯಿತು. ಪಶ್ಚಿಮದ ಕೊಲಂಬಿಯವನ್ನು ಪೂರ್ವದ ಸಂಸ್ಥಾನಗಳೊಂದಿಗೆ ಸೇರಿಸಲು ಸಂಚಾರ ಸೌಕರ್ಯವನ್ನು ಕಲ್ಪಿಸಬೇಕಾಗಿತ್ತು. ಪೆಸಿಫಿಕ್ ತೀರದಿಂದ ಅಟ್ಲಾಂಟಿಕ್ ತೀರದವರೆಗೆ ಒಂದೇ ರೈಲು ಮಾರ್ಗವನ್ನು ಹಾಕುವ ಸಾಹಸ ಮೊದಲಾಯಿತು. ನೂರಾರು ಮೈಲಿ ನಿರ್ಜನ ಮತ್ತು ಅಜ್ಞಾತ ಪ್ರದೇಶದಲ್ಲಿ ರೈಲ್ದಾರಿಯನ್ನು ಕಟ್ಟಬೇಕಾಯಿತು. 1886ರ ವೇಳೆಗೆ ಆ ರೈಲ್ದಾರಿ ಸಿದ್ಧವಾಯಿತು. ಆ ತರುವಾಯ **ಆಲ್ಬರ್ಟ** ಮತ್ತು **ಸಸ್ಕಚ್ಚಿವನ್** ಸಂಸ್ಥಾನಗಳು ರೂಪಗೊಂಡವು.

**ಕನೇಡಿಯನ್ ಪೆಸಿಫಿಕ್ ರೈಲ್ವೆ**

ವಾಯುವ್ಯದಲ್ಲಿ ಅಪರಿಚಿತವಾಗಿಯೇ ಬಹುಕಾಲದವರೆಗೂ ಇದ್ದ ಕ್ಷೇತ್ರವನ್ನೂ ಜಿಲ್ಲೆಗಳಾಗಿ ವಿಭಾಗಮಾಡಿಕೊಂಡುದಾಯಿತು.

ಕನಡ ಡುಮಿನಿಯನ್ನಿಗೆ ಮೂಡಲಲ್ಲಿರುವ **ನ್ಯೂಫೌಂಡ್ಲೆಂಡ್** ಎಂಬ ದ್ವೀಪ ಕ್ಷೇತ್ರವು ತೊಂದರೆಯಿಲ್ಲದೆ ಶತಮಾನದ ಮಧ್ಯಭಾಗದಲ್ಲಿ ಡುಮಿನಿಯನ್ ಎನ್ನಿಸಿತು.

## ಆಸ್ಟ್ರೇಲಿಯ

ವಿಸ್ತಾರವಾದ ಭೂಖಂಡಗಳಲ್ಲೊಂದಾದ ಆಸ್ಟ್ರೇಲಿಯದಲ್ಲಿ ಇತರರ ತೊಂದರೆಯಿಲ್ಲದಂತೆ ಅಲ್ಲಿಯ ಆದಿನಿವಾಸಿಗಳು (Bushmen, Black fellows) ಬಹುಕಾಲದವರೆಗೂ ಜೀವಿಸುತ್ತಲಿದ್ದರು. 1606ರಲ್ಲಿ **ಡಚ್ಚರು** ಆ ಖಂಡದ ಉತ್ತರಭಾಗವನ್ನು ಮೊದಲು ಕಂಡವರು. 1642ರಲ್ಲಿ ಡಚ್ಚರವನಾದ **ಟಾಸ್ಮನ್** (Tasman) ಎಂಬಾತನು ಖಂಡದ ದಕ್ಷಿಣಕ್ಕೂ ಹೊರಟು ಅಲ್ಲಿಯ ದ್ವೀಪವನ್ನು ಕಂಡಿದ್ದನು. ಆ ದ್ವೀಪಕ್ಕೆ ಟಾಸ್ಮೇನಿಯ ಎಂಬ ಹೆಸರೇ ಇದೆ. ಈ ರೀತಿ ಭೂಭಾಗದ ಪರಿಚಯವನ್ನು ಮಾಡಿಕೊಂಡಾಗ್ಗೂ ಡಚ್ಚರು ಮಲಯದ್ವೀಪಗಳಲ್ಲಿಯೇ ಆಸಕ್ತರಾಗಿದ್ದು ಆಸ್ಟ್ರೇಲಿಯವನ್ನು ಆಕ್ರಮಿಸದೆ ದೂರವಾಗಿದ್ದುಬಿಟ್ಟರು.

1768-1779ರಲ್ಲಿ **ಕ್ಯಾಪ್ಟನ್ ಕುಕ್** ಎಂಬ ಬ್ರಿಟಿಷ್ ನಾವಿಕಸಾಹಸಿಯು ಪೆಸಿಫಿಕ್ ಸಾಗರದ ದಕ್ಷಿಣಾರ್ಧವನ್ನು ಪರಿಚಯಮಾಡಿಕೊಳ್ಳುವ ಉದ್ದೇಶದಿಂದ ಯಾನಗಳನ್ನು ನಡೆಸಿ ಆಸ್ಟ್ರೇಲಿಯ ಖಂಡವೆಲ್ಲವನ್ನೂ ಪತ್ತೆಮಾಡಿಕೊಂಡನು. ಪೂರ್ವತೀರ ಪ್ರದೇಶವನ್ನು **ನ್ಯೂ ಸೌತ್‌ವೇಲ್ಸ್** ಎಂಬ ಹೆಸರಿನಿಂದ ಕರೆದು ಅಲ್ಲಿ ಬ್ರಿಟಿಷರ ಯಾಜಮಾನ್ಯವನ್ನು ಸ್ಥಾಪಿಸುವ ಯೋಚನೆಯನ್ನು ಕುಕ್ ನಡೆಸಿದಾಗ್ಗೂ ಬ್ರಿಟಿಷರಿಗೆ ಆಸಕ್ತಿ ಹುಟ್ಟಲಿಲ್ಲ. ಕಟ್ಟಕಡೆಗೆ ಸ್ವತಂತ್ರವಾಗಿ ತಪ್ಪಿಸಿಕೊಳ್ಳುವಂತಹ ಕಾಲೊನಿಗಳನ್ನೇಕೆ ಕಷ್ಟಪಟ್ಟು ಕಟ್ಟಬೇಕೆಂಬ ಯೋಚನೆಹಿಡಿದಿತ್ತು. 1787ರಲ್ಲಿ ನ್ಯೂ ಸೌತ್‌ವೇಲ್ಸಿಗೆ ಇಂಗ್ಲಂಡಿನಿಂದ ಗಡಿಪಾರಾದ ಖೈದಿಗಳನ್ನೊಯ್ಯಬಹುದೆಂದು ತೋರಿತು. ಅದುವರೆಗೂ ಅಂತಹ ಖೈದಿಗಳನ್ನು ವೆಸ್ಟಿಂಡೀಸಿಗೂ ಅಮೆರಿಕದ ಕಾಲೊನಿಗಳಿಗೂ ಕಳುಹಿಸುತ್ತಿದ್ದರು. ಅಮೆರಿಕದ ಸ್ವಾತಂತ್ರ್ಯಸ್ಥಾಪನೆಯಾದ ಮೇಲೆ ಆ ಬಗೆಯ ಖೈದಿಗಳನ್ನು ಬೇರೆಡೆಗೆ ಸಾಗಿಸಬೇಕಾಗಿ ಬಂತು.

**ಖೈದಿಗಳ ನೆಲೆ**

ನ್ಯೂ ಸೌತ್‌ವೇಲ್ಸೆಂಬುದೇ ಮೊದಲು ಕಾಲೊನಿಯಾದುದು. ಅಲ್ಲಿಗೆ ಖೈದಿಗಳನ್ನು ಸಾಗಿಸಿಕೊಂಡುಬಂದ ಸೈನ್ಯದಧಿಕಾರಿಗಳೇ ಮೊದಮೊದಲು ಆಡಳಿತವನ್ನು ನಡೆಸುತ್ತಿದ್ದರು. ಪ್ರಾರಂಭದಲ್ಲಿ ಎಲ್ಲರೂ ಜಗಳಗಂಟಿಗಳಾಗಿಯೇ ಇದ್ದರು. ಕಾಲ ಕಳೆಯುತ್ತ ಸಾಮಾಜಿಕನೀತಿಯು ರೂಢಿಯಾಯಿತು. ಖೈದಿಗಳಾಗಿದ್ದವರು ಶಿಕ್ಷೆ

ಮುಗಿದ ಮೇಲೆ ಹೊಲಗಳನ್ನು ರೂಢಿಸಿಕೊಂಡರು. ಆ ಕಾಲದಲ್ಲಿ ಚಿಕ್ಕ ಪುಟ್ಟ ಅಪರಾಧಗಳಿಗೂ ಇಂಗ್ಲಂಡಿನಲ್ಲಿ ಅತಿಕ್ರೂರ ಶಿಕ್ಷೆಗಳಾಗುತ್ತಿದ್ದುದರಿಂದ ಆಸ್ಟ್ರೇಲಿಯಕ್ಕೆ ಹೊರಟ ಖೈದಿಗಳಲ್ಲಿ ಅನೇಕರು ಅದೃಷ್ಟಹೀನರಾದವರೇ ವಿನಾ ಪುಂಡರಾಗಿರಲಿಲ್ಲ. ಆ ಪ್ರದೇಶದಲ್ಲಿದ್ದ ಸೈನ್ಯಾಧಿಕಾರಿಗಳೂ ನಿವೃತ್ತರಾದಾಗ ಹೊಲಗಳನ್ನೂ ಮನೆಗಳನ್ನೂ ಕಟ್ಟಿಕೊಂಡರು. 1797ರಲ್ಲಿ **ಮಕಾರ್ಥರ್** (Macarthur)

**ಮೆರಿನೊ ಕುರಿಗಳು**

ಎಂಬಾತನು ಒಳ್ಳೆಜಾತಿಯ ಕುರಿಗಳನ್ನು ಸಾಕಲು ಮೊದಲಿಟ್ಟನು. ಕುರಿ ಸಾಕಿ ಉಣ್ಣೆ ತೆಗೆದು ಮಾರುವುದು ಬರಬರುತ್ತ ಲಾಭಕರವಾಯಿತು. 1817ರಲ್ಲಿ ಖೈದಿಗಳನ್ನು ಟಾಸ್ಮೇನಿಯಕ್ಕೊಯ್ಯಬೇಕೆಂದು ಗೊತ್ತಾಯಿತು. ನ್ಯೂ ಸೌತ್ ವೇಲ್ಸ್ ನಿರಾತಂಕವಾಗಿ ಅಭಿವೃದ್ಧಿಯಾಗಲು ಅದರಿಂದ ಆಸ್ಪದವಾಗಿ 1823ರಲ್ಲಿ ಸೈನ್ಯದವರ ಆಡಳಿತ ಮುಕ್ತಾಯಗೊಂಡು ಕಾಲೊನಿಯೆನ್ನಿಸಿತು.

**ಕ್ವೀನ್ಸ್‌ಲಂಡ್, ವಿಕ್ಟೋರಿಯ** ಮತ್ತು **ಪಡುವಲ ಭಾಗ**ಗಳಲ್ಲಿಯೂ ಖೈದಿಗಳ ನೆಲೆಯೇ ಮೊದಲು ನಡೆಯಿತು. ಇಂಗ್ಲಂಡಿನಲ್ಲಿ ಪೀಲನ ಪ್ರಯತ್ನದಿಂದ ದಂಡವಿಧಿಕೋಶವು ಸುವ್ಯವಸ್ಥೆಗೊಂಡವೇಳೆಯಲ್ಲಿ ಕೆಲವು ಸುಧಾರಕರು ಕನಡ ಆಸ್ಟ್ರೇಲಿಯಗಳಲ್ಲಿ ಇಂಗ್ಲಿಷ್ ಜಾತಿಯವರು ವಲಸೆಹೊರಟು ನೆಲೆಸುವುದು ಹಿತಕರವೆಂದು ಅಭಿಪ್ರಾಯಪಟ್ಟರು. ಆ ಬಗೆಯ ಪ್ರೋತ್ಸಾಹದಿಂದ ಶತಮಾನದ ಪೂರ್ವಾರ್ಧದಲ್ಲಿ ಕೆಲವರು ಹೊರಟು ಆಸ್ಟ್ರೇಲಿಯದ ಭಾಗಗಳಲ್ಲಿ ನೆಲೆಸಿದರು.

**ಇತರ ಭಾಗಗಳು**

1839ರಲ್ಲಿ ಡರ್ಹಂ ಶ್ರೀಮಂತನು ಕನಡ ಪ್ರದೇಶದ ವ್ಯವಸ್ಥೆಯನ್ನು ನಡೆಸುತ್ತ ಕಾಲೊನಿಗಳೆಂಬವು ಉತ್ತರೋತ್ತರ ತಮ್ಮ ಆಡಳಿತವನ್ನು ಸ್ವತಂತ್ರವಾಗಿ ನಡೆಸಿಕೊಳ್ಳುವಂತೆ ಅಭಿವೃದ್ಧಿಯಾಗತಕ್ಕುದೆಂಬ ನಿಶ್ಚಯವನ್ನು ಪ್ರಚಾರಪಡಿಸಿದನು. 1842ರ ವೇಳೆಗೆ ನ್ಯೂ ಸೌತ್ ವೇಲ್ಸಿನಲ್ಲಿ ಪ್ರತಿನಿಧಿಸಭೆಯೂ ಮೊದಲಾಗಿತ್ತು. 1849-51ರಲ್ಲಿ ವಿಕ್ಟೋರಿಯ ನ್ಯೂಸೌತ್‌ವೇಲ್ಸ್ ಪ್ರದೇಶಗಳಲ್ಲಿ ಬಂಗಾರದ ಗಣಿಗಳು ಕಂಡವು. ಕೂಡಲೆ ಅಲ್ಲಿ ನೆಲೆಸಬೇಕೆಂದು ತಂಡತಂಡವಾಗಿ ಇಂಗ್ಲಿಷ್ ಜನರು ಹೊರಟರು. ಆಗ (1854) **ನ್ಯೂಸೌತ್‌ವೇಲ್ಸ್, ವಿಕ್ಟೋರಿಯ, ಸೌತ್ ಆಸ್ಟ್ರೇಲಿಯ** ಮತ್ತು **ಟಾಸ್ಮೇನಿಯ** ಕಾಲೊನಿಗಳು ಉತ್ತರವಾದಿ ಸರಕಾರಗಳನ್ನು ಸ್ಥಾಪಿಸಿಕೊಂಡವು. ಕ್ವೀನ್ಸ್‌ಲಂಡೆಂಬುದು 1859ರಲ್ಲಿ ಆ ಪದವಿಗೇರಿಕೊಂಡಿತು.

ಕನಡ ಪ್ರಾಂತದಲ್ಲಿ ಬ್ರಿಟಿಷರಿಗೆ ಮೊದಲೇ ಫ್ರೆಂಚರು ನೆಲೆಸಿದ್ದರು. ಆಸ್ಟ್ರೇಲಿಯದಲ್ಲಿ ನೆಲೆಸಿದವರೆಲ್ಲರೂ ಬ್ರಿಟಿಷರೇ. ಅಲ್ಲಿಯ ಆದಿನಿವಾಸಿಗಳು ಬಿಳಿಜಾತಿಯ ಜನರ ಬೇಟೆಗೆ ಸಿಕ್ಕಿರಲಾರವೆ ದುರ್ಬಲರಾಗಿ ಖಂಡದ ಒಳಭಾಗಗಳಲ್ಲಿ ಸೇರಿಕೊಂಡು

ಕ್ರಮೇಣ ಕ್ಷೀಣರಾದರು. ವ್ಯವಸಾಯ ಪಶುಪಾಲನೆಗಳೊಂದಿಗೆ ಗಣಿಗಳ ಕೆಲಸವನ್ನು ಇಟ್ಟುಕೊಂಡು ಬ್ರಿಟಿಷ್ ನೆಲಸುಗಾರರು ವಿಶಾಲವಾದ ಖಂಡದಲ್ಲಿ ಯಾರ ವಿರೋಧವನ್ನೂ ಕಾಣದೆ ಅಭಿವೃದ್ಧಿ ಪಡೆದರು. ಇತರ ಜಾತಿಯ ಜನರನ್ನು ಖಂಡದಲ್ಲಿ ಸೇರಿಸಲಾಗದೆಂದು ಎಲ್ಲರೂ ಒಪ್ಪಿಕೊಂಡು ಅದಕ್ಕಾಗಿ ತಕ್ಕ ಕಾನೂನುಗಳನ್ನು ಮಾಡಿಕೊಂಡರು. ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿದ್ದ ಬ್ರಿಟಿಷರು ಯಾವ ತೊಂದರೆಯನ್ನೂ ಕಾಣದೆ ಪ್ರತ್ಯೇಕರಾಗಿಯೇ ಇದ್ದರು.

**ನಿರಾತಂಕ**

ಹತ್ತೊಂಭತ್ತನೆ ಶತಮಾನದಂತ್ಯದಲ್ಲಿ ಐರೋಪ್ಯರು ದೂರಪ್ರಾಚ್ಯದಲ್ಲಿ ಪೋಟಾಪೋಟಿ ನಡೆಸುತ್ತಿದ್ದಾಗ ಆಸ್ಟ್ರೇಲಿಯದ ಬ್ರಿಟಿಷರೆಲ್ಲರೂ ಒಟ್ಟುಗೂಡುವುದು ಅವಶ್ಯವೆಂದೆನಿಸಿತು. ನ್ಯೂ ಸೌತ್‌ವೇಲ್ಸ್, ವಿಕ್ಟೋರಿಯ, ಕ್ವೀನ್ಸ್‌ಲಂಡ್, ಸೌತ್ ಆಸ್ಟ್ರೇಲಿಯ, ವೆಸ್ಟ್ ಆಸ್ಟ್ರೇಲಿಯ ಮತ್ತು ಟಾಸ್ಮೇನಿಯಗಳೆಂಬ ಪ್ರತ್ಯೇಕ ಕಾಲೊನಿಗಳು 1900ರಲ್ಲಿ ಒಟ್ಟುಸೇರಿ ಸಂಯುಕ್ತ ಸರ್ಕಾರವನ್ನು ರಚಿಸಿಕೊಳ್ಳುವ ಇಷ್ಟವನ್ನು ಬೆಳೆಸಿದವು. ಆ ವರ್ಷ **ಆಸ್ಟ್ರೇಲಿಯನ್ ಕಾಮನ್ವೆಲ್ತ್ ಆಕ್ಟ್** (Australian Commonwealth Act) ಎಂಬ ಶಾಸನವು ಜಾರಿಗೆ ಬಂತು.

**ಕಾಮನ್ವೆಲ್ತ್**

## ನ್ಯೂಸೀಲಂಡ್

ಆಸ್ಟ್ರೇಲಿಯ ಖಂಡಕ್ಕೆ ಆಗ್ನೇಯ ದಿಕ್ಕಿನಲ್ಲಿರುವ ನ್ಯೂಸೀಲಂಡ್ ದ್ವೀಪಗಳನ್ನು ಮೊದಲು ಕಂಡವನು **ಕ್ಯಾಪ್ಟನ್ ಕುಕ್**. 1769ರಲ್ಲಿ ಆತನು ಅಲ್ಲಿ ಯಾನ ನಡೆಸಿ ಅವುಗಳ ವಿಚಾರವನ್ನು ಬ್ರಿಟನ್ನಿನಲ್ಲಿ ತಿಳಿಯಪಡಿಸಿದನು. ಆದರೆ ಹತ್ತೊಂಭತ್ತನೆ ಶತಮಾನದಲ್ಲಿ ಮಾತ್ರವೇ ಬ್ರಿಟಿಷರು ಅಲ್ಲಿ ನೆಲೆಸುವ ಪ್ರಯತ್ನವನ್ನು ಮಾಡಿದುದು.

ನ್ಯೂಸೀಲಂಡಿನ ಆದಿನಿವಾಸಿಗಳು **ಮೆಯೊರಿ** (Maori)ಗಳೆಂಬ ಜನರು. ಅವರು ನಾಗರಿಕರಲ್ಲಿ ಗಣ್ಯರಾಗದಿದ್ದಾಗ್ಗೂ ಧೈರ್ಯಸಾಹಸಗಳಿಂದ ಯುದ್ಧಮಾಡತಕ್ಕವರು. ಮೊದಮೊದಲು ಉತ್ತರ ದ್ವೀಪದಲ್ಲಿ ಬ್ರಿಟಿಷ್ ವ್ಯಾಪಾರಿಗಳೂ ಪ್ರವಾಸಿಗಳೂ ಕಾಣಿಸಿಕೊಂಡರು. ಅವರ ಸಂಪರ್ಕದಿಂದ ಮೆಯೊರಿ ಜನರು ತಮ್ಮ ನೀತಿಯನ್ನು ಕಳೆದುಕೊಂಡು ಭ್ರಷ್ಟನಡತೆಯನ್ನು ಕಲಿಯುವಂತಾಯಿತು. 1820ರ ತರುವಾಯ ಬ್ರಿಟನ್ನಿನ ನಿವಾಸಿಗಳು ಹೊಸ ದೇಶಗಳಲ್ಲಿ ನೆಲಸಿ ಹೊಸ ಕ್ಷೇತ್ರಗಳನ್ನು ಕಟ್ಟಿಕೊಳ್ಳುವುದು ಮೇಲೆಂದು **ವೇಕ್‌ಫೀಲ್ಡ್** (Wakefield) ಎಂಬ ಸುಧಾರಕನ ಪ್ರಭಾವ ಕಾಣಿಸಿಕೊಂಡಿತು. ಬ್ರಿಟಿಷರು ಕೆಲವರು ವಲಸೆ ಹೊರಟರು. 1840ರಲ್ಲಿ ಬ್ರಿಟಿಷ್

**ನಿವಾಸ ಪ್ರಾರಂಭ**

ಮಂತ್ರಿಮಂಡಲಿಯವರು ನೂಸೀಲಂಡ್ ಎಂಬ ದ್ವೀಪಗಳನ್ನು ಆಕ್ರಮಿಸಿಕೊಳ್ಳಲು ನಿಶ್ಚಯಿಸಿದರು.

ಆ ವೇಳೆಗಾಗಲೆ ಮೆಯೊರಿಗಳಿಗೂ ನೆಲಸುಗಾರರಿಗೂ ಜಗಳಗಳು ಹೆಚ್ಚಿದ್ದವು. ದೂರದಿಂದ ಬಂದ ಬೇರೆ ಜಾತಿಯವರು ತಮ್ಮ ದೇಶವನ್ನು ಆಕ್ರಮಿಸಿಕೊಂಡುದನ್ನು ಮೆಯೊರಿಜನರು ಸಹಿಸಲಿಲ್ಲ. 1840ರಲ್ಲಿ ಅವರೊಡನೆ ಒಪ್ಪಂದವೊಂದು ಗೊತ್ತಾಯಿತು. ಬ್ರಿಟಿಷರು ಭೂಮಿಯನ್ನು ಕೊಂಡರೆ ಯಾವನೋ ಒಬ್ಬ ನಾಯಕನೆನಿಸಿದವನಿಂದ ಕೊಂಡುಕೊಳ್ಳಬಾರದೆಂದೂ ಕುಲಸ್ಥರಿಂದಲೇ ಕೊಂಡುಕೊಳ್ಳಬೇಕೆಂದೂ ಆ ಒಪ್ಪಂದದಲ್ಲಿ ನಿಯಮವಿತ್ತು. ಆದರೆ ನೆಲಸುಗಳನ್ನು ಕಟ್ಟುವ ಉದ್ದೇಶದಿಂದ ಸ್ಥಾಪನೆಯಾಗಿದ್ದ ಬ್ರಿಟಿಷ್ ಕಂಪನಿಗಳು ಆ ನಿಯಮವನ್ನು ಅಲಕ್ಷ್ಯಮಾಡಿದವು. ಇದರಿಂದ ಪುನಃ ಜಗಳಗಳೂ ಹೊಡೆದಾಟಗಳೂ ಮೊದಲಾದವು. ಆಗ ಅಧಿಕಾರಿಯಾಗಿದ್ದ **ಸರ್ ಜಾರ್ಜ್ ಗ್ರೇ** (Sir George Grey) ಎಂಬಾತನು ಆ ನಿಯಮವನ್ನು ಪಾಲಿಸಿಕೊಂಡು ಬಂದು ಮೆಯೊರಿಗಳ ವಿಶ್ವಾಸವನ್ನು ಸಂಪಾದಿಸಿದನು. ನಿಯಮದಂತೆ ಭೂಮಿಗಳನ್ನು ಸಂಪಾದಿಸಿ ಬ್ರಿಟಿಷರ ನೆಲಸುಗಳನ್ನು ಕಟ್ಟಿದನು. **ಆಕ್ಲೆಂಡ್, ನ್ಯೂಪ್ಲಿಮತ್, ವೆಲ್ಲಿಂಗ್ಟನ್, ನೆಲ್ಸನ್, ಒಟಾಗೊ, ಕ್ಯಾಂಟರ್ಬೆರಿ**ಯೆಂಬೆಡೆಗಳಲ್ಲಿ ಬ್ರಿಟಿಷರ ಪ್ರಾಂತಗಳು ರಚಿತವಾದವು. 1852ರ ವೇಳೆಗೆ ಸಮಾಧಾನಸ್ಥಿತಿ ನೆಲೆಸಿದ ಬಳಿಕ ಆರು ಪ್ರಾಂತಗಳು ಒಟ್ಟುಗೂಡಿ ಸಂಯುಕ್ತ ರಾಷ್ಟ್ರವೊಂದು ನಿರ್ಮಾಣವಾಯಿತು. ಮೆಯೊರಿಗಳಿಗೆ ವೋಟಿನ ಅಧಿಕಾರವಿಲ್ಲದಂತೆ ಏರ್ಪಡಿಸಿಕೊಂಡು ಬ್ರಿಟಿಷರು ರಾಜಪ್ರತಿನಿಧಿ, ಮಂತ್ರಿಮಂಡಲ ಮತ್ತು ಪ್ರತಿನಿಧಿಸಭೆಗಳು ಕೂಡಿದ ಆಡಳಿತದ ಕ್ರಮವನ್ನು ಸ್ಥಾಪಿಸಿದರು.

**ನೆಲಸುಗಳು**

ಮೆಯೊರಿ ಜನರು ಸಹಜವಾಗಿ ಅತೃಪ್ತಿಪಟ್ಟರು. ತಮ್ಮ ಸ್ವಾತಂತ್ರ್ಯಕ್ಕಾಗಿ ದೀರ್ಘಕಾಲ 1857ರಿಂದ 1871ರವರೆಗೆ ಹೊಡೆದಾಡಿದರು. ಎರಡು ಪಕ್ಷದವರಿಗೂ ಹೋರಾಟದಿಂದ ಆಯಾಸತೋರಿ 1871ರಲ್ಲಿ ಸಮಾಧಾನವಾಯಿತು. 1871ರಲ್ಲಿ ಮೆಯೊರಿಗಳು ಸೋಲನ್ನೊಪ್ಪಿದರು. ಪ್ರತಿನಿಧಿಸಭೆಯಲ್ಲಿ ಅವರ ಪ್ರತಿನಿಧಿಗಳಿಗೂ ಬ್ರಿಟಿಷರು ಎಡೆಗೊಟ್ಟರು. ಬ್ರಿಟಿಷರು ಮೆಯೊರಿಗಳನ್ನು ಹಿಂದಿನಂತೆ ತಿರಸ್ಕಾರಭಾವದಿಂದ ಕಾಣದೆ ಸ್ವಲ್ಪ ಗೌರವದಿಂದ ಕಾಣಲು ತೊಡಗಿದರು. ಆದರೆ ಬ್ರಿಟಿಷರ ಜನಸಂಖ್ಯೆ ಹೆಚ್ಚಿದಂತೆಲ್ಲ ಮೆಯೊರಿ ಜನಸಂಖ್ಯೆ ಕ್ಷೀಣವಾಗುತ್ತಬಂತು.

**ಹೋರಾಟ**

1876ರಲ್ಲಿ ಪ್ರಾಂತವಿಭಾಗವು ರದ್ದಾಯಿತು. ನ್ಯೂಸೀಲಂಡೆಲ್ಲವೂ ಏಕರಾಷ್ಟ್ರವಾಗಿರತಕ್ಕದ್ದೆಂದು ಗೊತ್ತಾಯಿತು. 1907ರಲ್ಲಿ **ಡುಮಿನಿಯನ್** ಪದವಿ ಲಭಿಸಿತು.

# ಆಫ್ರಿಕದಲ್ಲಿ

**ಅಜ್ಞಾತ**

ಹತ್ತೊಂಬತ್ತನೆ ಶತಮಾನದವರೆಗೂ ಐರೋಪ್ಯರಿಗೆ ಆಫ್ರಿಕದ ತೀರಗಳು ವಿನಾ ಒಳಪ್ರದೇಶಗಳ ಪರಿಚಯವೇ ಇರಲಿಲ್ಲ. ಹದಿನೈದನೆ ಶತಮಾನದಲ್ಲಿ ಉತ್ತರದ ಮುಸಲ್ಮಾನ ರಾಜ್ಯಗಳು ತಿಳಿದಿತ್ತು. ಸಹರಾ ಮರುಭೂಮಿಯೊಂದು ಭಯಂಕರ ವಿಸ್ತಾರವನ್ನು ತೋರಿತ್ತು. ಪಶ್ಚಿಮತೀರವನ್ನು ಅವಲಂಬಿಸುತ್ತ ಹಿಂದುಸ್ತಾನಕ್ಕೆ ಸಮುದ್ರಮಾರ್ಗವನ್ನು ಹುಡುಕಿದ ಪೋರ್ಚುಗೀಸರು ಖಂಡದ ದಕ್ಷಿಣಾಗ್ರವನ್ನೂ ಪೂರ್ವತೀರವನ್ನೂ ತಿಳಿದರು. ಆ ತರುವಾಯ ಅಮೆರಿಕಖಂಡದ ಪ್ರದೇಶಗಳನ್ನು ಸಾಹಸದಿಂದ ಸಾಧಿಸಿದ ಐರೋಪ್ಯರು ಹತ್ತೊಂಭತ್ತನೆ ಶತಮಾನದವರೆಗೆ ಆಫ್ರಿಕದ ಒಳಪ್ರದೇಶಗಳ ಗೋಜಿಗೆ ಹೋಗದೆ ಅದೊಂದು **ಕಗ್ಗತ್ತಲೆಖಂಡ**ವೆಂದುಕೊಳ್ಳುತ್ತಿದ್ದರು. ಏಕಂದರೆ ಆಫ್ರಿಕದ ನದಿಗಳ ಮುಖಪ್ರದೇಶಗಳು ಹಡಗುಗಳ ಓಡಾಟಕ್ಕೆ ಅಷ್ಟು ಅನುಕೂಲವಾಗಿರಲಿಲ್ಲ.

**ಇಂಗ್ಲಿಷರ ಪ್ರಯತ್ನ**

ಪೋರ್ಚುಗೀಸರು ಆಕ್ರಮಿಸಿದ್ದ ಗುಡ್‌ಹೋಪ್ ಭೂಶಿರವನ್ನು ಡಚ್ಚರು ಕಿತ್ತುಕೊಂಡರು. ಇಂಗ್ಲಿಷರಾದರೋ ಎಲಿಸಬೆತ್ ರಾಣಿಯ ಕಾಲದಲ್ಲಿ ಆಫ್ರಿಕದ ಪಶ್ಚಿಮತೀರಪ್ರದೇಶಗಳನ್ನು ಪರಿಚಯಮಾಡಿಕೊಂಡು ಗುಲಾಮರನ್ನು ಹಿಡಿದು ಸಾಗಿಸಲು ಮೊದಲಿಟ್ಟರು. ಕಿರಿಯಚಾರ್ಲ್ಸ್‌ನ ಕಾಲದಲ್ಲಿ **ರಾಯಲ್ ಆಫ್ರಿಕನ್ ಕಂಪನಿ** (Royal African Company) ಎಂಬುದು ಆ ಗುಲಾಮರ ವ್ಯಾಪಾರಕ್ಕಾಗಿಯೇ ಹುಟ್ಟಿತ್ತು. ಆ ಸಂದರ್ಭಗಳಲ್ಲಿಯೇ **ಗಾಂಬಿಯ, ಸಿಯೆರಾಲಿಯೋನ್** ಮತ್ತು **ಗೋಲ್ಡ್ ಕೋಸ್ಟ್** ಎಂಬೆಡೆಗಳಲ್ಲಿ ಸಣ್ಣ ನೆಲಸುಗಳನ್ನು ಇಂಗ್ಲಿಷರು ಕಟ್ಟಿದರು. ಸಪ್ತವಾರ್ಷಿಕ ಯುದ್ಧ ನಡೆದವೇಳೆಗೆ ಇಂಗ್ಲಿಷರು ಆಫ್ರಿಕದ ಪೂರ್ವಪಶ್ಚಿಮತೀರಗಳೆರಡನ್ನೂ ಚನ್ನಾಗಿ ತಿಳಿದಿದ್ದುದಲ್ಲದೆ ಹಿಂದುಸ್ತಾನಕ್ಕೆ ಜಲಮಾರ್ಗಮಧ್ಯದಲ್ಲಿ ನಿಲ್ದಾಣಗಳನ್ನೂ ಸಂಪಾದಿಸಿದರು. ಫ್ರಾನ್ಸ್‌ಪಲ್ಲಟಸಂಬಂಧವಾದ ಯುದ್ಧದಲ್ಲಿ ಡಚ್ಚರಿಗೆ ಸೇರಿದ್ದ ಗುಡ್‌ಹೋಪ್ ಭಾಗವು ಲಭಿಸಿತು.

ಆಫ್ರಿಕದಲ್ಲಿ ಬ್ರಿಟಿಷರ ಸಾಮ್ರಾಜ್ಯವು ದಕ್ಷಿಣದಿಂದಲೂ ಉತ್ತರದಿಂದಲೂ ಎರಡು ದಿಕ್ಕುಗಳಿಂದ ಬೆಳೆಯಿತು. ದಕ್ಷಿಣಭಾಗದ ವೃತ್ತಾಂತವನ್ನು ನಾವು ಮೊದಲು ಕಾಣಬಹುದು.

## ದಕ್ಷಿಣ ಆಫ್ರಿಕ

ಗುಡ್‌ಹೋಪ್ ಪ್ರದೇಶದಲ್ಲಿ ಮೊದಲು ನೆಲೆಸಿದವರು ಡಚ್ಚರು. ಅವರಿಗೆ **ಬೋಯರ**ರೆಂದು (Boers) ಹೆಸರು. ನಪೋಲಿಯನ್ನೊಡನೆ ನಡೆದ ಹೋರಾಟ

ಮುಗಿದ ವೇಳೆಯಲ್ಲಿ ಬ್ರಿಟಿಷರು ಆ ಪ್ರದೇಶವನ್ನು ತಾವೇ ಪಕ್ಕಿಸಿಕೊಂಡರು. ಆ ಬೋಯರ ಜಾತಿಯವರು ಬ್ರಿಟಿಷರ ಆಡಳಿತದಲ್ಲಿರಬೇಕಾಗಿಬಂತು. ಜಾತಿಯಲ್ಲಿಯೂ ಭಾಷೆಯಲ್ಲಿಯೂ ಪ್ರತ್ಯೇಕರಲ್ಲದೆ ಮತದಲ್ಲಿಯೂ ಬೋಯರರು ಬೇರೆಯವರಾಗಿದ್ದರು. ಪ್ರದೇಶವಾದರೋ ಕಪ್ಪು ಜನರದು. **ಕಾಫಿರ್, ಜೂಲು, ಬಸೂಟೊ** ಎಂಬ ಹೆಸರಿನ ಗುಂಪುಗಳು ಹಿಂದಿನ ಕಾಲದಿಂದಲೂ ಆಫ್ರಿಕದ ದಕ್ಷಿಣದಲ್ಲಿದ್ದವರು; ಅವರು ನೀಗ್ರೊ ಜಾತಿಯವರಲ್ಲ, **ಬಾಂಟು** ಜಾತಿಯವರು. ಅವರನ್ನಡಗಿಸಿ ಹೊಲಗಳನ್ನೂ ಮನೆಗಳನ್ನೂ ಕಟ್ಟಿಕೊಂಡಿದ್ದ ಬೋಯರರು ಸರಳರೀತಿಯಲ್ಲಿ ಜೀವನವನ್ನು ನಡೆಸುತ್ತಿದ್ದರೂ ಮನೋಧರ್ಮದಲ್ಲಿ ಪ್ಯೂರಿಟನ್ನರಂತೆ ಇದ್ದರು.

**ಕೇಪ್ ನೆಲಸು**

ಬ್ರಿಟಿಷರಿಗೆ 1815-20ರಲ್ಲಿ ತಮ್ಮ ಪ್ರದೇಶವನ್ನು ವಿಸ್ತಾರಗೊಳಿಸಿಕೊಳ್ಳುವ ಉದ್ದೇಶವಿರಲಿಲ್ಲ. ಹಿಂದುಸ್ತಾನದ ರಕ್ಷಣೆಗೆ ಮುಖ್ಯವಾದ ಸಮುಪ್ರತೀರಗಳು ಸ್ವಾಧೀನದಲ್ಲಿದ್ದರೆ ಸಾಕೆಂದಿದ್ದರು. ಇದಲ್ಲದೆ ವೆಸ್ಲಿ ಮುಂತಾದ ಮತಗುರುಗಳ ಬೋಧನೆಯಿಂದ ಬ್ರಿಟಿಷರಲ್ಲಿ ಒಂದು ಬಗೆಯ ಮನೋಧರ್ಮ ಬೆಳೆದಿತ್ತು. 1806ರಲ್ಲಿಯೆ ಗುಲಾಮ್ ವ್ಯಾಪಾರವನ್ನು ನಿಲ್ಲಿಸಿದವರು ವಿಯೆನ್ನಕಾಂಗ್ರೆಸ್ಸಿನಲ್ಲಿ ಆ ವಿಚಾರವನ್ನೆತ್ತಿ ಇತರ ಐರೋಪ್ಯರೂ ತಮ್ಮ ದಾರಿಯಲ್ಲಿ ಹೆಜ್ಜೆಯಿಡಬೇಕೆಂದು ಪ್ರಸ್ತಾಪಿಸಿದ್ದರು. 1828ರಲ್ಲಿ ಕೇಪ್‌ಕಾಲೊನಿ (Cape Colony) ಅಥವಾ ಗುಡ್ ಹೋಪ್ ಪ್ರದೇಶದ ಆಡಳಿತಕ್ಕಾಗಿ ವ್ಯವಸ್ಥೆ ಮಾಡುತ್ತ ಬೋಯರ್ ಜಾತಿಯವರಿಗೂ ಕಪ್ಪು ಜನರಿಗೂ ಭೇದವಿಲ್ಲದಂತೆ ಏರ್ಪಡಿಸಿದರು. ತಮ್ಮನ್ನು ಕಪ್ಪು ಜನರೊಂದಿಗೆ ಸರಿತೂಗಿದರೆಂದು ಬೋಯರರಿಗೆ ಅಸಮಾಧಾನವಾಯಿತು. 1833ರಲ್ಲಿ ಬ್ರಿಟಿಷರು ಗುಲಾಮರೆಲ್ಲರನ್ನೂ ಬಿಡುಗಡೆ ಮಾಡಿದರು. ಆಗ ಬೋಯರರು ಕಟ್ಟಿಕೊಂಡಿದ್ದ ಗುಲಾಮರನ್ನು ಬಿಟ್ಟುಬಿಡಬೇಕಾಯಿತು. ಅದಕ್ಕಾಗಿ ಸಲ್ಲಬೇಕಾದಷ್ಟು ಪರಿಹಾರದ್ರವ್ಯ ಸಲ್ಲಲಿಲ್ಲ; ಸಂದಭಾಗವೂ ತಡವಾಗಿ ಸಂದಾಯವಾಯಿತು. ಜಾತಿ ಮತಭಾಷೆಗಳಲ್ಲಿ ಭಿನ್ನರಾಗಿದ್ದ ಬೋಯರ್ ಜಾತಿಯವರು ಕೇಪ್ ಪ್ರದೇಶವನ್ನು ಬಿಟ್ಟು ಬೇರೆ ಪ್ರದೇಶಗಳಿಗೆ ಹೊರಡಬೇಕೆಂದು ನಿಶ್ಚಯಿಸಿಕೊಂಡರು.

**ಬೋಯರರ ಅಸಮಾಧಾನ**

1836ರಲ್ಲಿ ಬೋಯರ್ ಜನರು ಉತ್ತರಕ್ಕೂ ಪೂರ್ವಕ್ಕೂ ತಮ್ಮ ಮನೆಮಕ್ಕಳನ್ನೂ ದನಕರುಗಳನ್ನೂ ಎತ್ತಿಕೊಂಡು ಹೊರಟರು. ಇದನ್ನು **ಗ್ರೇಟ್ ಟ್ರೆಕ್** (Great Trek) ಎಂದು ಕರೆಯುತ್ತಾರೆ. ಈ ಕೇಪ್ ಪ್ರದೇಶಕ್ಕೆ ಈಶಾನ್ಯದಲ್ಲಿರುವ **ನೆಟಾಲ್** ಭಾಗಕ್ಕೂ ಉತ್ತರದಲ್ಲಿರುವ ಆರೆಂಜ್ (Orange) ನದಿಯನ್ನು ದಾಟಿ

ಬಡಗಣ ಪ್ರದೇಶಗಳಿಗೂ ಬೋಯರರು ಹೊರಟು ಹೊಸದಾಗಿ ನೆಲೆಸಿಕೊಳ್ಳಲು ಯತ್ನಿಸಿದರು. ಹತ್ತು ವರ್ಷಗಳೊಳಗಾಗಿ ಸಾವಿರಾರು ಬೋಯರ್ ಕುಟುಂಬಗಳು ಈ ರೀತಿಯಲ್ಲಿ ಕೇಪ್ ಕಾಲೊನಿಯನ್ನು ತ್ಯಜಿಸಿ ಹೊರಟವು.

**ಬೋಯರರ ಹೊಸ ನೆಲಸುಗಳು**

ಸಮುದ್ರತೀರದ ಮೇಲೆ ಆಸೆ ಕಟ್ಟಿಕೊಂಡಿದ್ದ ಬ್ರಿಟಿಷರು 1843ರಲ್ಲಿ ನೆಟಾಲ್ ಪ್ರಾಂತ ತಮಗೆ ಸೇರತಕ್ಕದೆಂದು ಸ್ಥಾಪಿಸಿಕೊಂಡರು. ಆರೆಂಜ್ ನದಿಯ ಉತ್ತರದಲ್ಲಿಯೂ ತಮ್ಮ ಯಾಜಮಾನ್ಯವನ್ನು ಸ್ಥಾಪಿಸಲು ಯತ್ನಿಸಿದರು. ಆಗ ಬೋಯರರು ನೆಟಾಲನ್ನು ಬಿಟ್ಟು ಪಶ್ಚಿಮಕ್ಕೆ ತಿರುಗಿದರು; ಅವರಲ್ಲಿ ಕೆಲವರು ಇನ್ನೂ ಉತ್ತರಕ್ಕೆ ಹೊರಟು ವಾಲ್ ನದಿಯನ್ನೂ ದಾಟಿಕೊಂಡರು. ಬೋಯರ್ ಜಾತಿಯವರಿಗೆ ಅಸಮಾಧಾನ ಹೆಚ್ಚಿತ್ತು. ಬ್ರಿಟಿಷರು 1852ರಲ್ಲಿ ಅವರೊಡನೆ ಒಪ್ಪಂದ ಮಾಡಿಕೊಂಡು ಅವರು ಆಕ್ರಮಿಸಿಕೊಂಡಿದ್ದ ಉತ್ತರಪ್ರದೇಶಗಳ ಗೋಜಿಗೆ ತಾವು ಬರುವುದಿಲ್ಲವೆಂದು ಹೇಳಿದರು. ಈ ರೀತಿಯಲ್ಲಿ **ಬ್ಲೂಂಫಾಂಟೈನ್** (Bloemfontein) ರಾಜಧಾನಿಯಾದ **ಆರೆಂಜ್ ಫ್ರೀ ಸ್ಟೇಟ್** (Orange Fice State) ಮತ್ತು **ಪ್ರಿಟೋರಿಯ** (Pretoria) ರಾಜಧಾನಿಯಾದ **ಟ್ರಾನ್ಸ್‌ವಾಲ್** (Tiansval) ಎಂಬುವು ಬೋಯರ್ ಜನರ ರಾಷ್ಟ್ರಗಳಾಗಿ ಸ್ವತಂತ್ರವೆನಿಸಿದವು.

ಬೋಯರ್ ಜನರು ತಮಗೆ ತೊಂದರೆಯಿಲ್ಲವೆಂದುಕೊಂಡು ತಮ್ಮ ರಾಷ್ಟ್ರಗಳನ್ನು ಬಲಪಡಿಸಿಕೊಳ್ಳಲು ತೊಡಗಿದರು. ಅವರಿಗೆ ಶತ್ರುಗಳಾಗಿದ್ದವರು ಹಿಂದಿನಿಂದ ಆ ದೇಶವನ್ನನುಭವಿಸುತ್ತಿದ್ದ ಕಪ್ಪು ಜನರು. ಇತ್ತ ಕೇಪ್ ಕಾಲೊನಿಯೆಂಬ ಬ್ರಿಟಿಷ್ ಪ್ರದೇಶದಲ್ಲಿ ಹೊಸದಾಗಿ ಅನೇಕ ಬ್ರಿಟಿಷರು ನೆಲೆಸಿದರು. ಕಾಫಿರ್ ಗುಂಪುಗಳೊಡನೆ ಆಗಾಗ್ಗೆ ಹೊಡೆದಾಟಗಳೇನೋ ಆದವು;

**ಕೇಪ್ ಕಾಲೊನಿ ಪ್ರಾಬಲ್ಯ**

ಆದರೆ ಅವುಗಳ ಫಲಿತಾಂಶವಾಗಿ ಬ್ರಿಟಿಷರ ಪ್ರದೇಶವು ಭದ್ರಗೊಂಡುದಲ್ಲದೆ ವಿಸ್ತಾರವನ್ನೂ ಪಡೆಯಿತು. 1878ರ ವೇಳೆಗೆ ಆರೆಂಜ್ ನದಿಯೇ ಉತ್ತರದ ಎಲ್ಲೆಯಾಯಿತು. ಅಲ್ಲಿ ನೆಲೆಸಿದ ಬ್ರಿಟಿಷರು ಆಡಳಿತದಲ್ಲಿ ಭಾಗವನ್ನೂ ಪಡೆದರು. 1872ರ ವೇಳೆಗೆ ಕೇಪ್ ಕಾಲೊನಿಯ ಬ್ರಿಟಿಷರು ಸ್ವಂತ ನಿರ್ವಾಹವನ್ನು ಸ್ಥಾಪಿಸಿಕೊಂಡರು.

ಬೋಯರರೂ ಬ್ರಿಟಿಷರೂ ಸಮಾಧಾನದಿಂದ ಚಿರಕಾಲವಿರಲಾಗಲಿಲ್ಲ. 1868ರಲ್ಲಿ ಬ್ರಿಟಿಷರು ನೆಟಾಲಿನ ಪಶ್ಚಿಮಕ್ಕಿದ್ದ **ಬಸೂಟೊಲ್ಯಾಂಡ್** (Basutoland) ಎಂಬ ಪ್ರದೇಶವನ್ನು ತಮ್ಮ ಆಶ್ರಯದಲ್ಲಿಟ್ಟುಕೊಂಡರು. 1870ರ ವೇಳೆಗೆ **ಕಿಂಬರ್ಲಿ** (Kimberley) ಎಂಬೆಡೆಯಲ್ಲಿ ವಜ್ರದ ಗಣಿಗಳು ಕಾಣಿಸಿ ಜನರ ನುಗ್ಗಾಟವಾಯಿತು. ಆಗ ಬ್ರಿಟಿಷರು ಆ ಪ್ರದೇಶವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡರು. ಬೋಯರರು

ಕಟ್ಟಿಕೊಂಡಿದ್ದ ಆರೆಂಜ್ ಸಂಸ್ಥಾನಕ್ಕೆ ಪೂರ್ವ ಪಶ್ಚಿಮಗಳಲ್ಲಿ ಈ ರೀತಿಯಲ್ಲಿ ಬ್ರಿಟಿಷ್ ಪ್ರದೇಶಗಳು ಸಿದ್ಧವಾದವು. 1877ರಲ್ಲಿ ವಾಲ್ ನದಿಯ ಉತ್ತರ ಪಾರ್ಶ್ವಕ್ಕಿದ್ದ ಟ್ರಾನ್ಸ್‌ವಾಲ್ ಎಂಬ ಬೋಯರ್ ಸಂಸ್ಥಾನವನ್ನೂ ತಮ್ಮ ಸ್ವಾಧೀನಕ್ಕೆ ತಂದುಕೊಳ್ಳುವ ನಿಶ್ಚಯ ಮಾಡಿದರು. ಟ್ರಾನ್ಸ್‌ವಾಲ್ ಪ್ರಾಂತವನ್ನು ಬ್ರಿಟಿಷರು ಆಕ್ರಮಿಸಿದಾಗ ಆರೆಂಜ್ ಸಂಸ್ಥಾನಕ್ಕೆ ದಿಗ್ಬಂಧನವಾಯಿತು. ಬೋಯರ್ ಜನರಿಗೆ ಅಸಮಾಧಾನ ಹೆಚ್ಚಿತು. ಆದರೆ ಆಗ ಅಸಮಾಧಾನದಿಂದ ಕುದಿಗೊಂಡು ಬ್ರಿಟಿಷರನ್ನು ವಿರೋಧಿಸಿದವರು **ಸೂಲು** ಗುಂಪಿನವರು. ಆ ಗುಂಪಿಗೆ ನಾಯಕನಾಗಿದ್ದ **ಸೆಟಿವಯೊ** (Cetewayo) ಎಂಬಾತನು ಸಾಹಸಿಯಾಗಿ ನಲವತ್ತುಸಾವಿರ ಭಟರನ್ನು ಕೂಡಿಸಿ ಬ್ರಿಟಿಷರೊಡನೆ ಯುದ್ಧಕ್ಕೆ ನಿಂತು **ಇಸಂಧ್ಲ್ವನ** (Isandhlwana) ಎಂಬಲ್ಲಿ ಒಂದು ಬ್ರಿಟಿಷ್ ಸೈನ್ಯವನ್ನು ಸರ್ವನಾಶಗೊಳಿಸಿದನು. ಆದರೆ ಕೂಡಲೆ ಬ್ರಿಟಿಷರು **ಉಲುಂದಿ** (Ulundi) ಎಂಬೆಡೆಯಲ್ಲಿ ಗೆದ್ದು ಸೆಟಿವಯೊವನ್ನು ಸೆರೆಮಾಡಿದರು. ಸೂಲು ಗುಂಪಿನವರು ಶರಣಾಗತರಾದನು. ಟ್ರಾನ್ಸ್‌ವಾಲ್ ಪ್ರಾಂತದ ಆಕ್ರಮಣದಿಂದ ಈ ಸೂಲು ದಂಗೆಯೊಂದು ಪರಿಣಾಮವಾದರೆ ಬೋಯರ್‌ಜನರೇ ಯುದ್ಧಕ್ಕೆ ತೊಡಗಿದುದು ಮತ್ತೊಂದು ಪರಿಣಾಮವಾಯಿತು.

**ಟ್ರಾನ್ಸ್‌ವಾಲ್ ಆಕ್ರಮಣ**

**ಸೂಲು ಯುದ್ಧ**

1881ರಲ್ಲಿ ಬೋಯರ್ ಜನರು ಯುದ್ಧವನ್ನು ಮೊದಲಿಟ್ಟರು. ಬ್ರಿಟಿಷ್ ಸೈನ್ಯವನ್ನು ನಡೆಸುತ್ತಿದ್ದ **ಸರ್ ಜಾರ್ಜ್ ಕಾಲಿ** (Colley) ಅವರಿಗೆ ಸಮನಾಗಿ ಹೋರಾಟವನ್ನು ನಡೆಸಲಾಗಲಿಲ್ಲ. ಕಾಲಿ ನಡೆಸಿದ ಆಕ್ರಮಣ ಪ್ರಯತ್ನಗಳನ್ನು ಬೋಯರರು ತಡೆದು **ಮಜೂಬ ಗುಡ್ಡದ** (Majuba Hill) ಹೋರಾಟದಲ್ಲಿ ಬ್ರಿಟಿಷರನ್ನು ಪೂರ್ತಿಯಾಗಿ ಸೋಲಿಸಿದರು. ಕಾಲಿ ಅಲ್ಲಿಯೇ ಪ್ರಾಣ ಕಳೆದನು. ಈ ಪರಾಭವ ನಡೆದಾಗ ಗ್ಲಾಡ್‌ಸ್ಟನ್ ಪ್ರಧಾನನಾಗಿದ್ದನು. ಶಾಂತಿ ಸಂಧಾನ ನಡೆಯಿತು. ಬ್ರಿಟಿಷರ ಆಶ್ರಯದಲ್ಲಿದ್ದುಕೊಂಡು ಬೋಯರ್‌ರಾಷ್ಟ್ರ ಸ್ವತಂತ್ರವಾಗಿರತಕ್ಕುದೆಂದು 1881ರಲ್ಲಿ ಗೊತ್ತಾಯಿತು. ಯುದ್ಧದಲ್ಲಿ ಸೋತ ಕಾರಣದಿಂದ ಬ್ರಿಟಿಷರು ಬೋಯರರ ಸ್ವಾತಂತ್ರ್ಯವನ್ನೊಪ್ಪಿಕೊಂಡಂತೆ ನಡೆಯಿತು. 1884ರಲ್ಲಿ ಬೋಯರರ ರಾಷ್ಟ್ರ **ಸೌತ್ ಆಫ್ರಿಕನ್ ರಿಪಬ್ಲಿಕ್** (South African Republic) ಎಂಬ ಹೆಸರನ್ನು ಪಡೆಯಿತು. ಒಂದೆರಡು ಅಂಶಗಳಲ್ಲಿ ಮಾತ್ರ ಅಧಿಕಾರವನ್ನು ಳಿಸಿಕೊಂಡು ಬ್ರಿಟಿಷರು ಆ ರಾಷ್ಟ್ರದ ಸರ್ವಸ್ವಾತಂತ್ರ್ಯಕ್ಕೆ ಒಪ್ಪಿಗೆ ಕೊಟ್ಟರು.

**1 ನೆ ಬೋಯರ್ ಯುದ್ಧ**

ಈ ರೀತಿ ಸ್ವತಂತ್ರವಾದ ಬೋಯರ್ ರಾಷ್ಟ್ರಕ್ಕೆ **ಪಾಲ್ ಕ್ರುಗರ್** (Paul Kruger) ಎಂಬಾತನು ಅಧ್ಯಕ್ಷನಾದನು. ಗ್ರೇಟ್ ಟ್ರೆಕ್ ವೇಳೆಯಲ್ಲಿ ಹತ್ತು ವರ್ಷದ

ಹುಡುಗನಾಗಿದ್ದ ಆತನು ಬೋಯರ್ ರಾಷ್ಟ್ರವನ್ನು ಬಲಪಡಿಸಿ ವಿಸ್ತಾರಪಡಿಸುವ ಆಸೆ ಬೆಳೆಸಿದನು. ಆಫ್ರಿಕ ಖಂಡದ ದಕ್ಷಿಣಭಾಗದಲ್ಲಿ ಪ್ರಬಲವಾದ ಬೋಯರ್ ರಾಷ್ಟ್ರಸ್ಥಾಪನೆಯಾಗಬೇಕೆಂಬ ಉದ್ದೇಶದಿಂದ ಸಮಯಕಾಯುತ್ತಿದ್ದನು. ಕ್ರೂಗರನಿಗೆ ಪ್ರತಿಕಕ್ಷಿಯಂತೆ

**ಅಧ್ಯಕ್ಷ ಕ್ರೂಗರ್**

ಕೇಪ್ ಕಾಲೊನಿಯಲ್ಲಿ ನೆಲೆಸಿದ್ದ **ಸೆಸಿಲ್ ರ್ಹೋಡ್ಸ್** (Cecil Rhodes) ಎಂಬ ಇಂಗ್ಲಿಷ್ ಜಾತಿಯವನು ಆಫ್ರಿಕದಲ್ಲಿ ವಿಸ್ತಾರವಾದ ಬ್ರಿಟಿಷ್ ಡುಮಿನಿಯನ್ ರೂಪಗೊಳ್ಳಬೇಕೆಂಬ ಆಸೆಯಿಂದಿದ್ದನು. ಕ್ರೂಗರ್ ನಡೆಸಿದ ವಿಸ್ತಾರ ಪ್ರಯತ್ನಗಳನ್ನು ರ್ಹೋಡ್ಸ್ ತನ್ನ ಎಚ್ಚರಿಕೆಯಿಂದ ಭಂಗಪಡಿಸಿದನು. 1885ರಲ್ಲಿ ಕ್ರೂಗರ್ ಪಶ್ಚಿಮದಿಕ್ಕಿನಲ್ಲಿ

**ಮಂತ್ರಿ ರ್ಹೋಡ್ಸ್**

ಕ್ಷೇತ್ರವನ್ನು ಸಂಪಾದಿಸಿಕೊಳ್ಳಲು ಹೊಂಚುತ್ತಿದ್ದಾಗ ಆ ಪಶ್ಚಿಮ ಪ್ರದೇಶವನ್ನು ಬ್ರಿಟಿಷರು ತಮ್ಮ ಆಶ್ರಯದಲ್ಲಿಟ್ಟುಕೊಂಡು ಅದನ್ನು **ಬೆಚುವಾನಾಲ್ಯಾಂಡ್** (Bechuanaland) ಎಂದರು. 1887ರಲ್ಲಿ ಮೂಡಲಲ್ಲಿ ಕ್ರೂಗರ್ ಯತ್ನಿಸಿದಾಗ ಮೂಡಣ ಪ್ರದೇಶವಾಗಿದ್ದ **ಸೂಲು ಲ್ಯಾಂಡ್** (Zululand)ಎಂಬುದನ್ನು ಬ್ರಿಟಿಷರು ತಮ್ಮ ವಶದಲ್ಲಿಟ್ಟುಕೊಂಡರು. ಉತ್ತರ ದಿಕ್ಕಿನಲ್ಲಿಯಾದರೂ ವಿಸ್ತರಿಸೋಣವೆಂದು ಬೋಯರರು ಯತ್ನಿಸದಂತೆ ಉತ್ತರದಲ್ಲಿ ಬ್ರಿಟಿಷ್ ಸೌತ್ ಆಫ್ರಿಕ ಕಂಪನಿಯೆಂಬುದು 1889ರಲ್ಲಿ ಪ್ರವೇಶಿಸಿ ಆ ಪ್ರದೇಶವೆಲ್ಲವನ್ನೂ ಆಕ್ರಮಿಸಿ **ರ್ಹೊಡೀಸಿಯ** (Rhodesia) ಎಂದು ರ್ಹೋಡ್ಸ್ ಹೆಸರನ್ನೇ ಅದಕ್ಕಿಟ್ಟರು. ಬೋಯರ್ ರಾಷ್ಟ್ರಕ್ಕೆ ಮತ್ತೆ ದಿಗ್ಬಂಧನವಾಯಿತು. ಸುತ್ತಲೂ ಬ್ರಿಟಿಷ್ ಕ್ಷೇತ್ರಗಳು; ಮಧ್ಯೆ ಸಿಕ್ಕಿಕೊಂಡ ಬೋಯರ್ ರಿಪಬ್ಲಿಕ್.

**ಬೋಯರ್ ರಾಷ್ಟ್ರ ದಿಗ್ಬಂಧನ**

ಕ್ಷೇತ್ರ ಸಂಪಾದನೆಯ ಪೋಟಾಪೋಟಿ ಈ ರೀತಿ ನಡೆಯುತ್ತಿದ್ದಾಗ 1886ರಲ್ಲಿ ಟ್ರಾನ್ಸ್‌ವಾಲ್ ಪ್ರಾಂತದಲ್ಲಿ ಬಂಗಾರದ ಗಣಿಗಳು ಪತ್ತೆಯಾದವು. ಅಲ್ಲಿಗೆ ನಾನಾ ಜನರು ಓಡಿದರು. **ಜೋಹಾನೆಸ್ಬುರ್ಗ್** (Johannesburg) ಎಂಬ ಪಟ್ಟಣವೆದ್ದಿತು. ಕೆಲವು ವರ್ಷಗಳಲ್ಲಿ ಹೊಸದಾಗಿ ಬಂದವರ ಸಂಖ್ಯೆ ಬೋಯರರ ಸಂಖ್ಯೆಗಿಂತ ಹೆಚ್ಚಾಯಿತು. ತಾವು ಕಷ್ಟಪಟ್ಟು ಕಟ್ಟಿಕೊಂಡಿದ್ದ ರಾಷ್ಟ್ರಗಳಲ್ಲಿ ಇತರ ಜನರು ಪ್ರವೇಶಮಾಡಿ ಸಂಖ್ಯೆಯಲ್ಲಿ ಮಾತ್ರವಲ್ಲದೆ ಧನದಲ್ಲಿಯೂ ಪ್ರಬಲರಾದುದು ಬೋಯರ್ ಜನರಿಗೆ ಸರಿಬೀಳಲಿಲ್ಲ. ಹೊಸದಾಗಿ ಬಂದವರನ್ನು **ಪರದೇಶಿಗಳೆಂದು** (Uitlanders) ಕರೆದರು. ಅಧ್ಯಕ್ಷ ಕ್ರೂಗರನು ಆ ಪರದೇಶಿಗಳಿಗೆ ರಾಜಕೀಯಾಧಿಕಾರವಿಲ್ಲದಂತೆ ಮಾಡಿದುದಲ್ಲದೆ ಧನಿಕರಾಗಿದ್ದ ಆ ಜನರಿಂದ ಹೆಚ್ಚು ತೆರಿಗೆಗಳನ್ನು ವಸೂಲಿಮಾಡಿದನು. ಬಂಗಾರದ ಬೇಟೆಗಾಗಿ ಬಂದ ಅನ್ಯಜನರನ್ನು ಬೋಯರರು ಸಹಿಸದಿದ್ದುದು

**ಕ್ರೂಗರನ ಆಳಿಕೆ**

ಸಹಜವಾಗಿದ್ದಂತೆ ಆ ಪರದೇಶಿಗಳು ಪ್ರಬಲರಾದರೂ ಅಧಿಕಾರಹೀನರಾಗಿ ಮತ್ತೊಬ್ಬರ ಅಧೀನದಲ್ಲಿರಲೊಡಂಬಡದೆ ಅಸಮಾಧಾನಪಟ್ಟುದು ಕೂಡ ಸಹಜವಾಗಿಯೆ ಇತ್ತು. ಕೇಪ್ ಕಾಲೊನಿಯಲ್ಲಿ ಪ್ರಧಾನನಾಗಿದ್ದ ರ್ಹೋಡ್ಸ್ ಪರದೇಶಿಗಳ ಪಕ್ಷಪಾತಿಯಾಗಿ 1895ರಲ್ಲಿ ಅವರೆಬ್ಬಿಸಬೇಕೆಂದಿದ್ದ ದಂಗೆಗೆ ಸಹಾಯನೀಡುವವನಾಗಿದ್ದನು. ಕೇಪ್‌ಕಾಲೊನಿ ನೆಟಾಲ್ ಪ್ರದೇಶಗಳಲ್ಲಿದ್ದ ಬ್ರಿಟಿಷರಿಗೆ ಕ್ರುಗರನ ಆಡಳಿತದಲ್ಲಿ ದ್ವೇಷವುಂಟಾಗಿತ್ತು. **ಪೋರ್ಚುಗೀಸರ** ಪ್ರಾಂತದ ತೀರದಲ್ಲಿ **ಡೆಲಗೋವ** ಕೊಲ್ಲಿಯವರೆಗೆ ಟ್ರಾನ್ಸ್‌ವಾಲಿನಿಂದ **ರೈಲನ್ನು** ಹಾಕಿಸಲು ಕ್ರುಗರ್ ನಡೆಸಿದ್ದ ಪ್ರಯತ್ನ ಅವರಿಗೆ ಅನಿಷ್ಟವಾಗಿತ್ತು. ದಂಗೆಯೇಳಲು ಸನ್ನಾಹವೇನೋ ನಡೆಯಿತು.

**ಹುಚ್ಚು ಸಾಹಸ**

ಆದರೆ ಒಳ್ಳೆ ಸಮಯದಲ್ಲಿ ನಾಯಕರಾದವರು ಭಿನ್ನಾಭಿಪ್ರಾಯಪಟ್ಟು ಪ್ರಯತ್ನವನ್ನೇ ಬಿಟ್ಟರು. ಆಗ ಟ್ರಾನ್ಸ್‌ವಾಲಿನ ಮೂಡಣ ಮೇರೆಯ ಬಳಿ ಆನೂರು ಸವಾರರನ್ನು ಕಟ್ಟಿಕೊಂಡಿದ್ದ **ಜೇಮ್ಸನ್** (Jameson) ಎಂಬಾತನು ಮಾತ್ರ ಹುಚ್ಚುಸಾಹಸದಿಂದ ಟ್ರಾನ್ಸ್‌ವಾಲನ್ನು ಮುತ್ತಿ ನಾಲ್ಕು ದಿನಗಳಲ್ಲಿ ಶರಣೆಂದು ಅವಮಾನಕರವಾದ ಸೋಲನ್ನು ಕಟ್ಟಿಕೊಂಡನು.

ಜೇಮ್ಸನ್ನನ ಅವಿವೇಕದ ಮುತ್ತಿಗೆಯಿಂದ ಬ್ರಿಟಿಷರಿಗೂ ಬೋಯರರಿಗೂ ದ್ವೇಷ ಹೆಚ್ಚಿತು. ಜರ್ಮನ್ ಚಕ್ರವರ್ತಿಯು ಕ್ರುಗರನನ್ನು ಸನ್ಮಾನಿಸುತ್ತ ತಂತಿ ವರ್ತಮಾನ ಕಳುಹಿಸಿದನು. ಅಧ್ಯಕ್ಷ ಕ್ರುಗರನು ಯುದ್ಧ ಸನ್ನಾಹ ನಡೆಸಿದನು. ಸೆಸಿಲ್ ರ್ಹೋಡ್ಸ್ ತನ್ನ ಅಂದಾಜಿನಂತೆ ಸಂಭವಿಸದಿದ್ದುದನ್ನು ಕಂಡು ಪ್ರಧಾನ ಮಂತ್ರಿಯ ಅಧಿಕಾರದಿಂದ ನಿವೃತ್ತನಾದನು. ಬ್ರಿಟಿಷ್ ಮಂತ್ರಿಗಳು ಸಂಧಾನಗಳಿಗೆ

**2ನೆ ಬೋಯರ ಯುದ್ಧ**

ತೊಡಗಿ ಕಾಲಯಾಪನೆ ಮಾಡಿದರು. ಹೀಗಿರಲು 1899ರಲ್ಲಿ ಕ್ರುಗರ್ ಯುದ್ಧವನ್ನಾರಂಭಿಸಿದನು. ಆರೆಂಜ್ ಸಂಸ್ಥಾನದವರು ಕ್ರುಗರ್ ಕಡೆ ಸೇರಿದರು. ಬಂಗಾರದ ಬೇಟೆಯುವರೆನಿಸಿಕೊಂಡ ಪರದೇಶಿಗಳ ಪರವಾಗಿಯೂ ತಮ್ಮ ಸಾಮ್ರಾಜ್ಯಕ್ಕಾಗಿಯೂ ಬ್ರಿಟಿಷರು ಯುದ್ಧ ನಡೆಸಬೇಕಾಗಿ ಬಂತು.

ಹೊಡೆದಾಟ ಮೊದಲಾದ ಕೂಡಲೆ ಬೋಯರರೇ ಮುಂದಾದರು. ಬೋಯರ ಸೈನ್ಯವೊಂದು ನೆಟಾಲನ್ನು ಮುತ್ತಿ **ಲೇಡಿಸ್ಮಿತ್** (Ladysmith) ಎಂಬಲ್ಲಿ ಅಲ್ಲಿಯ ಬ್ರಿಟಿಷ ದಳವನ್ನು ಬಂಧನದಲ್ಲಿಟ್ಟಿತು. ಮತ್ತೊಂದು **ಕಿಂಬರ್ಲಿ**ಯನ್ನು ಮುತ್ತಿತು. ಮತ್ತೊಂದು ಆರೆಂಜ್‌ನದಿಯನ್ನು ದಾಟಿ ದಕ್ಷಿಣದಲ್ಲಿ **ಕೇಪ್ ಕಾಲೊನಿ**ಯನ್ನು ಆಕ್ರಮಿಸಿತು. ಮೂರೆಡೆಗಳಲ್ಲಿಯೂ ಸಹಾಯಮಾಡಲು ಹೊರಟ ಬ್ರಿಟಿಷ್ ಸೈನ್ಯಗಳೆಲ್ಲವೂ ಸೋತವು. ಲೇಡಿಸ್ಮಿತ್ ಪಟ್ಟಣದ ಸಹಾಯಕ್ಕಾಗಿ ಹೊರಟ ಸೈನ್ಯ

**ಟುಗೇಲನದಿ** (Tugela River) ಯ ಬಳಿ ಬೋಯರರಿಗೆ ಸಿಕ್ಕಿ ಸೋತಿತು. ಕಿಂಬರ್ಲಿ ಕಡೆಗೆ ಹೊರಟ ಸೈನ್ಯವು **ಮೇಜರ್ಸ್‌ಫಾಂಟೈನ್** (Magersfontein) ಎಂಬಲ್ಲಿ ಪರಾಜಯ ಪಡೆಯಿತು. ಮತ್ತೊಂದು ಬ್ರಿಟಿಷ್‌ಸೈನ್ಯ **ಸ್ಟಾರ್ಮ್‌ಬರ್ಗ್** (Stormberg) ಎಂಬಲ್ಲಿ ಬೋಯರರಿಗೆ ಸಿಕ್ಕಿ ಗೆಲ್ಲಲಾರದೆ ಹೋಯಿತು.

**ಬೋಯರರ ಜಯಗಳು**

1899ರ ಡಿಸೆಂಬರ್ ತಿಂಗಳಲ್ಲಿ ಈ ರೀತಿ ಆರು ದಿನಗಳಲ್ಲಿ ಮೂರು ಬ್ರಿಟಿಷ್ ಸೈನ್ಯಗಳು ಮೂರೆಡೆಗಳಲ್ಲಿ ಸೋತವು. ಈ ಸಮಾಚಾರ ತಿಳಿದೊಡನೆ ಬ್ರಿಟನ್ನಿನಿಂದ ಹೊಸ ಸೈನ್ಯಗಳು ಹೊರಟವು. ದಕ್ಷಿಣ ಆಫ್ರಿಕದ ಇತರ ಭಾಗಗಳಲ್ಲಿದ್ದ ಬ್ರಿಟಿಷರು ದಂಡುಕಟ್ಟಿ ಸಹಾಯಕ್ಕೆ ನಿಂತರು. ಕನಡ ಆಸ್ಟ್ರೇಲಿಯ ನ್ಯೂಸೀಲಂಡು ಗಳ ಬ್ರಿಟಿಷರು ಸಹಾಯಮಾಡಲು ಸೈನಿಕರನ್ನು ಕಳುಹಿಸಿದರು. 1900ರಲ್ಲಿ ಮೂರು ಲಕ್ಷದಷ್ಟು ಹೊಸ ಸೈನ್ಯ ಸಿದ್ಧವಾಯಿತು. ಪ್ರಖ್ಯಾತ ದಳಪತಿಗಳಾದ **ರಾಬರ್ಟ್ಸ್ ಶ್ರೀಮಂತನೂ** (Lord Roberts) **ಕಿಚನರ್ ಶ್ರೀಮಂತನೂ** (Lord Kitchener) ದಳಪತಿಗಳಾದರು.

1900ರಲ್ಲಿ ರಾಬರ್ಟ್ಸ್ ಸೈನ್ಯವೆತ್ತಿ ಹೊರಟು ಕಿಂಬರ್ಲಿಯನ್ನು ಬಿಡಿಸಿಕೊಂಡು **ಪಾರ್ಡೆಬರ್ಗ್** (Paardeberg) ಎಂಬಲ್ಲಿ ಬೋಯರಸೈನ್ಯವನ್ನು ಆಕ್ರಮಿಸಿ ಅವರ ದಳಪತಿ **ಕ್ರಾಂಜೆ** (Cronje) ಎಂಬಾತನನ್ನು ಸೆರೆಹಿಡಿದನು. ಲೇಡಿಸ್ಮಿತ್ ಪಟ್ಟಣವೂ ಬಿಡುಗಡೆಯಾಯಿತು. ಸ್ವಲ್ಪಕಾಲದಲ್ಲಿಯೇ **ಬ್ಲೂಂಫಾಂಟೈನ್** ಮತ್ತು **ಪ್ರಿಟೋರಿಯ**ಗಳೆರಡು ರಾಬರ್ಟ್ಸ್ ವಶವಾದವು. ಬೋಯರರು ಈ ರೀತಿಯಲ್ಲಿ ಸೋತು ಹೋಗಲು ಕೆಲವು ಕಾರಣಗಳಿದ್ದವು. ಕೇಪ್ ಕಾಲೊನಿಯಲ್ಲಿದ್ದ ಡಚ್ಚರು ತಮ್ಮನ್ನು ಸೇರಿಕೊಳ್ಳುವರೆಂದೂ ಐರೋಪ್ಯ ಪ್ರಭುಗಳು ಕೆಲವರು ತಮ್ಮ ಪಕ್ಷವಹಿಸುವರೆಂದೂ ಅವರು ನಂಬಿದ್ದರು. ಆ ಯೋಚನೆಗಳು ವ್ಯರ್ಥವೆನಿಸಿದವು. ಬ್ರಿಟಿಷರು ದೊಡ್ಡ ಪ್ರಯತ್ನ ನಡೆಸಿ ತಮ್ಮನ್ನು ಸೋಲಿಸಿ ತಮ್ಮ ರಾಜಧಾನಿಗಳನ್ನು ಹಿಡಿದುಕೊಂಡಾಗ್ಗೂ ಬೋಯರ್ ಮುಖಂಡರಾಗಿದ್ದ **ಸ್ಮಟ್ಸ್** (Smuts), **ಬಾಥ** (Botha), **ಡಿವೆಟ್** (De Wet), **ಸ್ಟೆಯ್ನ್** (Steyn) ಮುಂತಾದವರು ಹೊಡೆದಾಟವನ್ನು ಬಿಡದೆ ಮುಂದು ವರಿಸಿದರು. ಪರಂತು ಕ್ರಮವಾಗಿ ದುರ್ಬಲಗೊಂಡು ಕಡೆಯಲ್ಲಿ ಸೋಲನ್ನೊಪ್ಪಿ ಕೊಂಡರು. 1902ರಲ್ಲಿ ಸಮಾಧಾನವಾಯಿತು. ಟ್ರಾನ್ಸ್‌ವಾಲ್ ಮತ್ತು ಆರೆಂಜ್ ಸಂಸ್ಥಾನಗಳೆಂಬವು ಬ್ರಿಟಿಷರ ಸ್ವಾಧೀನವಾದವು. ಆದರೆ ಶಾಲೆಗಳಲ್ಲಿಯೂ ನ್ಯಾಯಸ್ಥಾನಗಳಲ್ಲಿಯೂ ಬೋಯರರ ಭಾಷೆಯನ್ನುಳಿಸಿಕೊಡುವುದಲ್ಲದೆ ಸಮಯವೊದಗಿದಕೂಡಲೆ ಒಳಾಡಳಿತವನ್ನು ನಿವಾಸಿಗಳಿಗೆ ಬಿಟ್ಟುಕೊಡುವ ವಾಗ್ದಾನವನ್ನು ಬ್ರಿಟಿಷರು ಮಾಡಿ ಸಮಾಧಾನಗೊಳಿಸಿದರು.

**ಬ್ರಿಟಿಷರ ಜಯ**

**ಶಾಂತಿ**

1906ರಲ್ಲಿ ಎರಡು ಸಂಸ್ಥಾನಗಳಲ್ಲಿಯೂ ಆಡಳಿತವನ್ನು ಬ್ರಿಟಿಷ್ ಮಂತ್ರಿ ಮಂಡಲಿಯವರು ಬಿಟ್ಟುಕೊಟ್ಟರು. ಆ ತರುವಾಯ ದಕ್ಷಿಣ ಆಫ್ರಿಕದಲ್ಲಿ ಬ್ರಿಟಿಷರ ಪ್ರದೇಶಗಳೆಲ್ಲವೂ ಒಟ್ಟುಗೂಡಿ ಸಂಯುಕ್ತರಾಷ್ಟ್ರವನ್ನು ಕಟ್ಟುವ ಪ್ರಯತ್ನ ಮೊದಲಾಯಿತು. 1910ರಲ್ಲಿ **ಟ್ರಾನ್ಸ್ ವಾಲ್, ಆರೆಂಜ್, ನೆಟಾಲ್, ಕೇಪ್ ಕಾಲೊನಿ**ಗಳೆಂಬ ನಾಲ್ಕು ಪ್ರಾಂತಗಳಿಗೂ ಒಟ್ಟಾದ ಪ್ರತಿನಿಧಿಸಭೆ ಸೇರಿತು. **ಸೌತ್ ಆಫ್ರಿಕನ್ ಯೂನಿಯನ್**(South African Union)ಎಂಬ ಡುಮಿನಿಯನ್ ಮೊದಲಾಯಿತು.

**ಡುಮಿನಿಯನ್**

ಹಿಂದುಸ್ತಾನಕ್ಕೂ ದಕ್ಷಿಣ ಅಫ್ರಿಕಕ್ಕೂ ವಿಚಿತ್ರವೆನಿಸಿದ ಸಂಬಂಧವುಂಟು. ನೆಟಾಲ್‌ಪ್ರಾಂತದಲ್ಲಿ ಕಬ್ಬು ಕಾಫಿ ಟೀ ಬೆಳೆಗಳು ಸೊಗಸಾಗಿ ಆಗುವುದೆಂದು ಬಿಳಿಯರು ಕಂಡ ಬಳಿಕ ಅವುಗಳಿಗಾಗಿ ಭೂಮಿಗಳನ್ನು ಬಿಡಿಸಿಕೊಂಡು ಗದ್ದೆಗಳನ್ನೂ ತೋಟಗಳನ್ನೂ ಆರಂಭಿಸಿದರು. ಅವುಗಳಲ್ಲಿ ಕೂಲಿಯವರಾಗಿ ಕೆಲಸಮಾಡಲು ನೀಗ್ರೊ ಜಾತಿಯವರು ಒಗ್ಗಲಿಲ್ಲ. ಆದ್ದರಿಂದ ಅವರು ಹಿಂದುಸ್ತಾನಸರ್ಕಾರದವರೊಡನೆ ಪತ್ರವ್ಯವಹಾರ ಬೆಳೆಸಿ ಅವರ ಅನುಮತಿಪಡೆದು ಹಿಂದುಸ್ತಾನದಲ್ಲಿ ಕೂಲಿ ಜನರಿಂದ ಒಪ್ಪಂದ ಬರೆಸಿಕೊಂಡು ಸಾವಿರಾರು ಜನರನ್ನು ಅಲ್ಲಿಗೆ ಒಯ್ದರು. ಆ ಕೂಲಿಜನರ ಹಿಂದೆ ಚಿಲ್ಲರೆಅಂಗಡಿಯಿಟ್ಟು ವ್ಯಾಪಾರಮಾಡತಕ್ಕ ಹಿಂದುಸ್ತಾನಿಯವರೂ ಹೊರಟರು. 1860ರಿಂದ **ಭಾರತೀಯರ** ಪ್ರವೇಶ ನಡೆಯಿತು. ಆ ತರುವಾಯ ಅಲ್ಲಿನ ಭಾರತೀಯರ ಚರಿತ್ರೆಯನ್ನು ಗಾಂಧೀಜಿಯ ವೃತ್ತಾಂತದಲ್ಲಿ ತಿಳಿಯಬೇಕು.

**ಭಾರತೀಯರು**

ದಕ್ಷಿಣ ಆಫ್ರಿಕದ ಯೂನಿಯನ್ನಿನ ಪರಿಸ್ಥಿತಿ ಕನಡ ಆಸ್ಟ್ರೇಲಿಯಗಳಂತಲ್ಲ. ಕನಡದಲ್ಲಿ ನಿವಾಸಿಗಳಾಗಿರುವವರು ಬ್ರಿಟಿಷರು ಮತ್ತು ಫ್ರೆಂಚರು; ಆಸ್ಟ್ರೇಲಿಯ ನ್ಯೂಸೀಲಂಡುಗಳಲ್ಲಿ ಬ್ರಿಟಿಷರು. ದಕ್ಷಿಣ ಆಫ್ರಿಕದಲ್ಲಿ ಬ್ರಿಟಿಷರು ಬೋಯರರು ಬಿಳಿಯರು; ಅವರಿಗಿಂತ ದೊಡ್ಡ ಗುಂಪು ಹಿಂದುಸ್ತಾನಿ ಮತ್ತು ಮಲಯದವರು; ಅವರಿಗಿಂತ ದೊಡ್ಡದು ನೀಗ್ರೋ ಮತ್ತು ಬಾಂಟು ಗುಂಪುಗಳು.

## ಈಜಿಪ್ಟ್

ನಪೋಲಿಯನ್ ಈಜಿಪ್ಟನ್ನು ಬಿಟ್ಟು ಹೊರಟ ತರುವಾಯ ಆ ದೇಶವನ್ನು **ಮಹಮ್ಮದಾಲಿ**ಯೆಂಬೊಬ್ಬ ಶೂರನು ವಶಪಡಿಸಿಕೊಂಡನು. 1806ರಲ್ಲಿ ಆತನೇ ಅಲ್ಲಿಗೆ **ಪಾಷ** ಅಥವಾ ಅಧಿಪತಿಯೆಂದು ತುರ್ಕಿ ಸುಲ್ತಾನನೊಪ್ಪಿದನು. ಹೆಸರಿಗೆ ಮಾತ್ರ ಸುಲ್ತಾನನಿಗೆ ಅಧೀನನಾಗಿದ್ದು ಮಹಮ್ಮದಾಲಿ ತನ್ನ ಸ್ವಂತ ಸಾಮರ್ಥ್ಯದಿಂದ ದಕ್ಷಿಣದಲ್ಲಿ **ಸುಡಾನ್** ಪ್ರದೇಶದ ಭಾಗವನ್ನು ಗೆದ್ದು, **ಖಾರ್ಟೂಂ**

ಪಟ್ಟಣವನ್ನು ಕಟ್ಟಿದನು. ಸಿರಿಯುವನ್ನು ಗೆಲ್ಲಲು ನಡೆದ ಯೋಚನೆಗೆ ಬ್ರಿಟಿಷರು ವಿರೋಧಿಗಳಾದರು. 1848ರಲ್ಲಿ ಮುಹಮ್ಮದಾಲಿ ತಾನು ಕಟ್ಟಿದ ರಾಜ್ಯವನ್ನು ತನ್ನ ಮಗ **ಇಬ್ರಾಹೀಮ**ನಿಗೆ ಬಿಟ್ಟು ಕೊಟ್ಟನು. ಆತನ ವಂಶಸ್ಥರು **ಖೇದೀವ್** ಎಂಬ ಬಿರುದನ್ನು ವಹಿಸಿ ಈಜಿಪ್ಟನ್ನು ಆಳಿದರು. 1854ರಲ್ಲಿ **ಸೈದ್** (Said) ಎಂಬಾತನು ಖೇದೀವನಾಗಿ ತನ್ನ ಮಿತ್ರ **ಫರ್ಡಿನೆಂಡ್ ಡಿ ಲೆಸ್ಸೆಪ್ಸ್** (Ferdinand de Lesseps) ಎಂಬ ಫ್ರೆಂಚರವನಿಗೆ **ಸುಯೆಸ್ ಕಾಲುವೆ**ಯನ್ನು ಪ್ರಾರಂಭಿಸಲು ಅನುಮತಿಕೊಟ್ಟನು.

**ಖೇದೀವ್**

ಕಾಲುವೆ ಸಮಾಚಾರವನ್ನು ಕೇಳಿದ ಕೂಡಲೆ ಬ್ರಿಟಿಷ್ ಮಂತ್ರಿ ಪಾಮರ್ಸ್ಟನ್ ಶ್ರೀಮಂತನು ಅದರಲ್ಲಿ ಫ್ರೆಂಚರ ಪಿತೂರಿಯಿದೆಯೆಂದು ಭಾವಿಸಿ ಅದಕ್ಕೆ ಅಡ್ಡಿ ಮಾಡಿದನು. ಆತನ ಅಡ್ಡಿಯಿಂದ ನಿದಾನ ಮಾತ್ರವಾಯಿತು. 1869 ನವೆಂಬರ್ 17 ನೆ ದಿನ ಕಾಲುವೆಯಲ್ಲಿ ಹಡಗುಗಳ ಓಡಾಟ ಮೊದಲಾಯಿತು. ಹಿಂದುಸ್ಥಾನ ಚೀನಾ ಆಸ್ಟ್ರೇಲಿಯಗಳಿಗೆ ಪ್ರಯಾಣ ಅತಿಸುಲಭವಾಯಿತು.

**ಸುಯೆಸ್ ಕಾಲುವೆ**

ಸೈದ್ 1864ರಲ್ಲಿ ತೀರಿಕೊಂಡಾಗ **ಇಸ್ಮಾಯಿಲ್** ಎಂಬಾತನು **ಖೇದೀವ**ನಾಗಿದ್ದನು. ಈತನಿಗೆ ನೈಲ್‌ನದಿ ಹರಿಯುವ ಪ್ರದೇಶವೆಲ್ಲವನ್ನು ಸ್ವಾಧೀನಪಡಿಸಿಕೊಳ್ಳುವ ಆಸೆಯಲ್ಲದೆ ತನ್ನ ರಾಜ್ಯದಲ್ಲಿ ರೈಲ್ದಾರಿಗಳನ್ನೂ ಬಂದರುಗಳನ್ನೂ ಕಟ್ಟಿಸುವ ಉದ್ದೇಶವಿತ್ತು. ಐರೋಪ್ಯರ ಒಯ್ಯಾರವನ್ನು ಕಲಿತು ಅತಿವ್ಯಯದಿಂದ ಜೀವಿಸುವುದನ್ನೂ ಅಭ್ಯಾಸಮಾಡಿಕೊಂಡಿದ್ದನು. ತೆಂಕಲಲ್ಲಿ ಸುಡಾನ್ ಕ್ಷೇತ್ರವನ್ನು ಗೆದ್ದುಕೊಡುವಂತೆ ಮೊದಲು **ಬೇಕರ್** (Baker) ಆ ತರುವಾಯ **ಗೋರ್ಡನ್** (Gordon) ಎಂಬ ಬ್ರಿಟಿಷರವರನ್ನು ಗೊತ್ತುಮಾಡಿದನು. ಲಕ್ಷ್ಯವಿಲ್ಲದೆ ಹಣವನ್ನು ಚೆಲ್ಲುತ್ತ ತನ್ನ ದೇಶವನ್ನು ಐರೋಪ್ಯ ದೇಶಗಳಂತೆ ಮಾರ್ಪಡಿಸಲು ತೊಡಗಿದನು. ಖೇದೀವನ ಸ್ವಂತ ಜೀವನಕ್ಕೆ ಅಪಾರವಾದ ಹಣಬೇಕಾಗಿ ಬಂತು. ಸುಯೆಸ್ ಕಾಲುವೆ ನಡೆದಾಗ ಐರೋಪ್ಯರಿಂದ ಸುಲಭವಾಗಿ ಸಾಲದೊರಕಿತ್ತು; ಇಸ್ಮಾಯಿಲನು ಪದೇ ಪದೇ ಸಾಲವನ್ನೆತ್ತಿ ವೆಚ್ಚಗೊಳಿಸಿದನು. ಹದಿನಾರು ವರ್ಷಗಳೊಳಗಾಗಿ ಸಾಲವೆಂಬುದು ಮೂವತ್ತು ಲಕ್ಷ ಪೌಂಡುಗಳಿಂದ ಸಾವಿರ ಲಕ್ಷ ಪೌಂಡುಗಳಷ್ಟು ಏರಿತು.

**ಇಸ್ಮಾಯಿಲನ ದುಂದುಗಾರಿಕೆ**

ಬ್ರಿಟನ್ನಿನಲ್ಲಿ ಆಗ **ಡಿಸ್ರೇಲಿ** ಪ್ರಧಾನನಾಗಿದ್ದನು. ಎಲ್ಲೆಲ್ಲಿಯೂ ಸಾಲವೆತ್ತುತ್ತಿದ್ದ ಇಸ್ಮಾಯಿಲ್‌ಪಾಷ ಹಣಕ್ಕಾಗಿ ತನ್ನ ಸೂಯೆಸ್‌ಕಾಲುವೆ ಷೇರುಗಳನ್ನು ಮಾರಬೇಕೆಂದಿರುವನೆಂಬ ಸುದ್ದಿ ಲಂಡನ್ನಿನಲ್ಲಿ **ಗ್ರೀನ್‌ವುಡ್** ಎಂಬೊಬ್ಬನಿಗೆ **ತಿಳಿಯಿತು.**

ಆ ಸುದ್ದಿಗಾರನು ತಕ್ಷಣವೇ ಪ್ರಧಾನನ ಮನೆಗೋಡಿ ವರ್ತಮಾನ ತಿಳಿಸಿದನು. ಆ ಷೇರುಗಳನ್ನು ಕೊಂಡುಕೊಳ್ಳಲು ಸಾಕಾದಷ್ಟು ಹಣ ಆಗ ಬೊಕ್ಕಸದಲ್ಲಿರಲಿಲ್ಲ.

**ಷೇರುಗಳ ಕೊಳ್ಳಾಟ**

ಆದುದರಿಂದ ಸಮಾಚಾರ ತಿಳಿದಕೂಡಲೆ ಡಿಸ್ರೇಲಿ ತನ್ನಂತೆಯೇ ಯೆಹೂದ್ಯನಾಗಿ ಭಾರಿಬ್ಯಾಂಕಿನ ಅಧ್ಯಕ್ಷನಾಗಿದ್ದ **ರಾತ್ಸ್ ಚೈಲ್ಡ್** (Rothschild) ಎಂಬಾತನಲ್ಲಿಗೋಡಿ ಬ್ರಿಟಿಷ್ ಸರ್ಕಾರಕ್ಕೆ ಆ ಷೇರುಗಳನ್ನು ಕೊಳ್ಳುವ ಏರ್ಪಾಟನ್ನು ನಡೆಸಿದನು. ಇದರಿಂದ ಆ ಕಾಲುವೆಯ ಯಾಜಮಾನ್ಯದಲ್ಲಿ ಬ್ರಿಟಿಷರಿಗೆ ಹೆಚ್ಚು ಪಾಲು ದೊರೆತಂತಾಯಿತು. ಆ ಕಾಲುವೆಗಾಗಿ ಒಂದು ಕಂಪನಿ ಹುಟ್ಟಿ ಅದರ ಕಚೇರಿ ಪ್ಯಾರಿಸ್ಸಿನಲ್ಲಿತ್ತು. ಫ್ರಾನ್ಸ್, ಬ್ರಿಟನ್, ಹಾಲಂಡ್ ಮತ್ತು ಈಜಿಪ್ಟ್ ದೇಶಗಳವರು ಅದರಲ್ಲಿ ಷೇರುಗಳನ್ನು ಪಡೆದಿದ್ದರು. ಡಿಸ್ರೇಲಿಯ ಜಾಣತನದಿಂದ ಬ್ರಿಟಿಷರ ಭಾಗವು ಹೆಚ್ಚಾಯಿತು. ಈ ವಿಕ್ರಯ ಗೋಪ್ಯವಾಗಿ ನಡೆಯಿತೆಂದು ಫ್ರೆಂಚರು ಅಸಮಾಧಾನಪಟ್ಟರು.

ಬೆಟ್ಟದಷ್ಟು ಏರಿದ್ದ ಸಾಲವನ್ನು ತೀರಿಸುವ ದಾರಿಕಾಣದೆ ಇಸ್ಮಾಯಿಲನು 1877 ರಲ್ಲಿ ಸಾಲ ತೀರಿಸಲಾಗುವುದಿಲ್ಲವೆಂದನು. ಹೆಚ್ಚು ಸಾಲಕೊಟ್ಟಿದ್ದವರು ಬ್ರಿಟಿಷರು ಮತ್ತು ಫ್ರೆಂಚರು. ಇಬ್ಬರಿಗೂ ಈಜಿಪ್ಟಿನ ಅಗತ್ಯವಿತ್ತು. ಇಬ್ಬರೂ ಸೇರಿ 'ತುರ್ಕಿ ಸುಲ್ತಾನನ ಕಡೆಯಿಂದ ಇಸ್ಮಾಯಿಲನಿಗೆ ಪಟ್ಟವನ್ನು ತಪ್ಪಿಸಿ ಆತನ ಮಗ **ಟ್ಯೂಫಿಕ್** (Tewfik) ಎಂಬವನಿಗೆ ಪಟ್ಟಕಟ್ಟಿಸಿದರು. ಐರೋಪ್ಯ ಸಾಲಗಾರರ ಸಾಲ ತೀರಿಕೊಳ್ಳುವಂತೆ ಏರ್ಪಡಿಸಲು ರಾಜ್ಯದ ಆಯವ್ಯಯವನ್ನು ತಮ್ಮಿಬ್ಬರ ಸುಭರ್ದಿನಲ್ಲಿಟ್ಟುಕೊಂಡರು.

**ಬ್ರಿಟಿಷ್ ಫ್ರೆಂಚರ ಅಧಿಕಾರ**

ಬ್ರಿಟಿಷ್ ಮತ್ತು ಫ್ರೆಂಚ್ ಅಧಿಕಾರಿಗಳು ಟ್ಯೂಫಿಕ್ ಪಾಷನನ್ನು ಉತ್ಸವಮೂರ್ತಿಯಂತಿಟ್ಟು ಆಡಳಿತವನ್ನು ತಾವೇ ನಡೆಸಲು ಮೊದಲಿಟ್ಟರು. ತಮ್ಮ ದೇಶದಲ್ಲಿ ಈ ರೀತಿ ಐರೋಪ್ಯರ ಅಧಿಕಾರ ಸ್ಥಾಪಿತವಾದುದನ್ನು ಕಂಡು ಈಜಿಪ್ಟಿನ ಜನರು ಅಸಮಾಧಾನಗೊಂಡರು. ಈಜಿಪ್ಟ್ ಸೈನ್ಯದಲ್ಲಿ ಅಧಿಕಾರಿಯಾಗಿದ್ದ **ಅರಬಿ ಪಾಷ** (Arabi Pasha) ಎಂಬ ದೇಶಭಕ್ತನು ಜನರಿಗೆ ಮುಖಂಡನಾಗಿ ನಿಂತು ದಂಗೆಯನ್ನೆಬ್ಬಿಸಿದನು. ಆಡಳಿತ ಆತನ ವಶವಾಯಿತು. ಅನೇಕ ಐರೋಪ್ಯರು ದೇಶಬಿಟ್ಟೋಡಿದರು. ಅಲೆಕ್ಸಾಂಡ್ರಿಯ ರೇವುಪಟ್ಟಣವನ್ನು ಅರಬಿಪಾಷನ ಕಡೆಯವರು ವಶಪಡಿಸಿಕೊಂಡು ಬಂದರಿನಲ್ಲಿ ಕಾಣಿಸಿಕೊಂಡ

**ಅರಬಿ ಪಾಷನ ಪ್ರಯತ್ನ**

ಬ್ರಿಟಿಷ್ ಹಡಗುಗಳ ಮೇಲೆ ಪ್ರಯೋಗಿಸಲು ಬತ್ತೇರಿಗಳನ್ನು ಕಟ್ಟಿಕೊಂಡರು. ಆಗ ಬ್ರಿಟಿಷ್ ಮಂತ್ರಿಗಳು ಯುದ್ಧಕ್ಕೆ ಅಣಿಯಾಗಿ 1882ರಲ್ಲಿ **ಅಲೆಕ್ಸಾಂಡ್ರಿಯವನ್ನು** ಮುತ್ತಿದರು. ಫ್ರೆಂಚರು ಬಿಸ್ಮಾರ್ಕನ ಭಯದಿಂದ ತಟಸ್ಥರಾದರು. ಗ್ರೇಟ್ ಬ್ರಿಟನ್ನಿನ ಸೈನ್ಯ

ಗಳನ್ನು ನಡೆಸುತ್ತ **ವುಲ್ಸಿಲಿ** (Wolseley) ಎಂಬ ದಳಪತಿಯು ಅರಬಿ ಪಾಷನ ಸೈನ್ಯವನ್ನು **ಟೆಲೆಲ್‌ಕೆಬೀರ್** (Telelkebir) ಎಂಬೆಡೆಯಲ್ಲಿ ಎದುರಿಸಿ ಧ್ವಂಸಮಾಡಿದನು. ಜಯ ಪಡೆದಮೇಲೆ ಬ್ರಿಟಿಷರು ಅರಬಿಪಾಷನನ್ನು ಸಿಂಹಳದ್ವೀಪಕ್ಕೊಯ್ದು ಟ್ಯೂಫಿಕ್ಕನನ್ನು ಉದ್ಧರಿಸಿ ಈಜಿಪ್ಟಿನಲ್ಲಿ ತಮ್ಮ ಸೈನ್ಯಗಳನ್ನು ಸಿಬಿರಮಾಡಿಸಿದರು.

ಅರಬಿಪಾಷನ ಪ್ರಯತ್ನ ಹಾಳಾಯಿತು. ಆತನ ಅನುಯಾಯಿಗಳು ಅಸಹಾಯರಾಗಿ ಅಲ್ಲಲ್ಲಿ ಅಡಗಿದರು. ಈಜಿಪ್ಟಿನಲ್ಲಿ ಬ್ರಿಟಿಷರ ಯಾಜಮಾನ್ಯ ಭದ್ರಗೊಂಡಿತು. ಆದರೆ ಸ್ವಲ್ಪ ಕಾಲದಲ್ಲಿಯೇ ಈಜಿಪ್ಟಿಗೆ ತೆಂಕಲಲ್ಲಿ ಸುಡಾನ್‌ಪ್ರದೇಶದಲ್ಲಿ ತೊಂದರೆ ತೋರಿತು. ಇಸ್ಮಾಯಿಲ್ ಪಾಷ ಬ್ರಿಟಿಷ್ ದಳಗಳನ್ನು ಪ್ರಯೋಗಿಸಿ ಆ ಪ್ರಾಂತವನ್ನು ವಶಪಡಿಸಿಕೊಂಡಿದ್ದನು. ಟ್ಯೂಫಿಕ್‌ಪಾಷ ಅಲ್ಲಿಗೂ ಪ್ರಭುವೆನಿಸಿದ್ದನು. ಆದರೆ ಸುಡಾನಿನ ಮುಸಲ್ಮಾನ್ ಜನರು ಟ್ಯೂಫಿಕ್ಕನ ಆಡಳಿತವನ್ನೂ ಆ ಮೂಲಕ ನಡೆಯುತ್ತಿದ್ದ ಬ್ರಿಟಿಷರ ಪಾರುಪತ್ಯವನ್ನೂ ಒಲ್ಲದಾದರು. 1881ರಲ್ಲಿ ಆ ಜನರಲ್ಲಿ ಹೊಸದಾಗಿ ಮತಗುರುವೊಬ್ಬಾತನು ಕಾಣಿಸಿಕೊಂಡಿದ್ದನು. ಆತನೇ **ಅಲ್‌ಮಹ್‌ದಿ** (Al Mahdi). ಆತನು ಇಸ್ಲಾಂ ಮತಭಕ್ತನಾಗಿ ತನ್ನ ಶಿಷ್ಯರಲ್ಲಿ ಒಗ್ಗಟ್ಟನ್ನು ತುಂಬಿ ಕಾಫರರಾದ ಐರೋಪ್ಯರ ಅಧಿಕಾರವನ್ನು ಕೊನೆಗಾಣಿಸುವಂತೆ ಪ್ರೇರಿಸಿದನು. ಆತನ ಶಿಷ್ಯರಿಗೆ **ದರ್ವೇಶಿಗಳೆಂದು** ಹೆಸರು. ದರ್ವೇಶಿಗಳ ಗುಂಪು ದಿನೇ ದಿನೇ ಬಲಗೊಳ್ಳುತ್ತಿತ್ತು. ಅವರನ್ನಡಗಿಸಲು ಖೇದೀವ್ ಬಿರುದಿಟ್ಟುಕೊಂಡಿದ್ದ ಟ್ಯೂಫಿಕ್ಕನು ಬ್ರಿಟಿಷ ಸೈನ್ಯವೊಂದನ್ನು **ಹಿಕ್ಸ್** (Hicks) ಎಂಬ ನಾಯಕನ ಕೈಕೆಳಗೆ ಕಳುಹಿಸಿಕೊಟ್ಟನು. ಹಿಕ್ಸ್ ತನ್ನ ಸೈನ್ಯದೊಡನೆ ಸುಡಾನಿನಲ್ಲಿ ಸರ್ವನಾಶಹೊಂದಿದನು (1882). ಸುಡಾನಿನಲ್ಲಿ ಈಜಿಪ್ಟಿನ ಸೈನ್ಯಗಳು ಸಿಕ್ಕಿಕೊಂಡಿದ್ದವು; ಅವುಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಮಾತ್ರವಲ್ಲದೆ ಸುಡಾನ್ ಪ್ರಾಂತವನ್ನುಳಿಸಿಕೊಳ್ಳುವುದಕ್ಕೂ ಬ್ರಿಟಿಷರು ಸಿದ್ಧರಾಗಬೇಕಾಯಿತು. ಹಿಂದೆ ಸುಡಾನ್ ಪ್ರಾಂತದಲ್ಲಿ ಇಸ್ಮಾಯಿಲ್ ಪಾಷನಿಗಾಗಿ ಅಧಿಕಾರ ನಡೆಸಿದ್ದ ಬ್ರಿಟಿಷ್ ದಳಪತಿ **ಗೋರ್ಡನ್** (Gordon) ಎಂಬಾತನನ್ನು ಬ್ರಿಟಿಷ್ ಮಂತ್ರಿಮಂಡಲಿಯವರು ಸೈನ್ಯದೊಡನೆ ಕಳುಹಿಸಿದರು.

**ಸುಡಾನ್ ದಂಗೆ**

ಗೋರ್ಡನ್ ಅತಿಪ್ರಸಿದ್ಧನಾಗಿದ್ದ ದಳಪತಿ. ಚೀನಾ ದೇಶದಲ್ಲಿ ಆತನು 1863-4ರಲ್ಲಿ ಮೂವತ್ತೆರಡು ಲಡಾಯಿಗಳಲ್ಲಿ ಏಕರೀತಿಯಾಗಿ ಜಯವನ್ನು ಸಾಧಿಸಿ ತೈಪಿಂಗ್ ದಂಗೆಯೆಂಬುದನ್ನು ಅಡಗಿಸಿದ್ದನು. ಸುಡಾನಿನ ಸ್ಥಿತಿಗತಿಗಳನ್ನು ಚನ್ನಾಗಿ ತಿಳಿದಿದ್ದವನು. ಬ್ರಿಟಿಷ್ ಜನರಿಗೆ ಆತನಲ್ಲಿ ಬಹಳ ಮೆಚ್ಚುಗೆಯಿತ್ತು. 1884ರಲ್ಲಿ ಸುಡಾನಿನಲ್ಲಿ ಸಿಕ್ಕಿಕೊಂಡಿದ್ದ ಸೈನ್ಯಗಳ ರಕ್ಷಣೆಗಾಗಿಯೂ ಆ ಪ್ರದೇಶದಲ್ಲಿ ಭದ್ರವಾದ ಏರ್ಪಾಟನ್ನು ನಡೆಸುವುದಕ್ಕಾಗಿಯೂ ಹೊರಟ ಆತನು ಅಲ್ಲಿ ತಲುಪಿದೊಡನೆ

**ಸೊಬೇರ್** (Zobeir) ಎಂಬ ಗುಲಾಂ ವ್ಯಾಪಾರಿಯನ್ನು ಅಲ್ಲಿ ಅಧಿಕಾರದಲ್ಲಿಡುವ ಯೋಚನೆ ನಡೆಸಿದನು. ಆ ಯೋಚನೆಗೆ ಮಂತ್ರಿಗಳು ಒಪ್ಪಿಕೊಳ್ಳಲಿಲ್ಲ. ಏತನ್ಮಧ್ಯೆ ಗೋರ್ಡನ್ ಬ್ರಿಟಿಷ್ ಮತ್ತು ಹಿಂದುಸ್ತಾನಿ ದಳಗಳನ್ನು ನಡೆಸುತ್ತ ಅಲ್ ಮಹದಿಯ ಪ್ರಯತ್ನವನ್ನು ಹಾಳುಮಾಡುವ ಕೆಲಸಕ್ಕೆ ತೊಡಗಿದನು. ದರ್ವೇಶಿಗಳು ಆವೇಶಗೊಂಡು ಪ್ರತಿಭಟಿಸಿದರು. ಮೊದಲೇ ಸುಡಾನಿನಲ್ಲಿದ್ದ ಈಜಿಪ್ಟ್ ಸೈನ್ಯಗಳು ಬಂಧನದಲ್ಲಿ ಸಿಕ್ಕಿಕೊಂಡಿರಲು ಗೋರ್ಡನ್ ಮುಂದೆ ನುಗ್ಗಿ ಖಾರ್ಟೂಂ ಪಟ್ಟಣವನ್ನು ಹಿಡಿದಿದ್ದನು. ದರ್ವೇಶಿಗಳು ಆ ಪಟ್ಟಣದ ಸುತ್ತ ಮುತ್ತಿಕೊಂಡು ಗೋರ್ಡನ್ನನಿಗೆ ದಾರಿಯಿಲ್ಲದೆ ನೆರವೇರಿಸಿದರು. ಮುನ್ನೂರು ದಿನ ಗೋರ್ಡನ್ ಅತಿಸಾಹಸದಿಂದ ಮುತ್ತಿಗೆಯನ್ನು ತಡೆದನು. ಆತನ ಸಹಾಯಕ್ಕಾಗಿ ಸೈನ್ಯಗಳನ್ನು ಕಳುಹಿಸುವುದು ತಡವಾಯಿತು. ಕಡೆಗೆ ಹೊರಟ ವುಲ್ಸ್ಲೀಲಿ ಖಾರ್ಟೂಂ ಸೇರುವುದಕ್ಕೆ ಎರಡು ದಿನಗಳ ಹಿಂದೆ ಗೋರ್ಡನ್ ಅತಿಧೈರ್ಯದಿಂದ ಕಾದಾಡುತ್ತ ಪ್ರಾಣ ಬಿಟ್ಟಿದ್ದನು. ಖಾರ್ಟೂಂ ದರ್ವೇಶಿಗಳ ವಶವಾಗಿತ್ತು. ಎಲ್ಲವೂ ನಷ್ಟವಾಯಿತೆಂದುಕೊಂಡು ವುಲ್ಸ್ಲಿಲಿ ಹಿಂತಿರುಗಬೇಕಾಯಿತು. ಸುಡಾನಿನಲ್ಲಿ ಬಂಧನದಲ್ಲಿ ಸಿಕ್ಕಿದ ಸೈನ್ಯಗಳು ಕಡೆಗೆ ದರ್ವೇಶಿಗಳಿಗೆ ಶರಣೆಂದವು. ಸುಡಾನಿನ ತಂಟೆಯೇ ಬೇಡವೆಂದು ಭಾವಿಸಿಕೊಳ್ಳುವಂತಾಯಿತು.

**ಗೋರ್ಡನ್ನಿನ ನಾಶ**

ಬ್ರಿಟಿಷ ಜನರು ಗೋರ್ಡನ್ನನ ಸಾವಿನ ಸುದ್ದಿ ಕೇಳಿ ಅವಮಾನವನ್ನೂ ರೋಷವನ್ನೂ ತಂದುಕೊಂಡರು. ಪ್ರಧಾನನಾಗಿದ್ದ ಗ್ಲಾಡ್‌ಸ್ಟನ್ ನಡೆಸಿದ್ದ ಸಂಧಾನ ನೀತಿಯು ಅನುಚಿತವೆನಿಸಿ ಆತನಿಗೆ ಬೆಂಬಲ ತಪ್ಪಿತು. ಆದರೆ ಈಜಿಪ್ಟ್ ದೇಶದಲ್ಲಿ ಬ್ರಿಟಿಷರ ವರ್ತನೆ ಹೇಗಿರಬೇಕೆಂಬ ಯೋಚನೆ ಮೊದಲಾಯಿತು. ಟ್ಯೂಫಿಕ್ ಕೈಲಾಗದ ದೊರೆ; ಸುಲ್ತಾನನಿಗೆ ಆತನು ಸಾಮಂತ. ಸುಲ್ತಾನನಾದರೂ ಈಜಿಪ್ಟನ್ನು ಉಳಿಸಿಕೊಳ್ಳ ತಕ್ಕವನಾಗಿರಲಿಲ್ಲ. ಇತರ ಐರೋಪ್ಯ ಪ್ರಭುಗಳು ಬ್ರಿಟಿಷರಲ್ಲಿ ಅಸೂಯೆಗಳನ್ನು ಬೆಳೆಸಿಕೊಂಡೇ ಇದ್ದರು. ಈಜಿಪ್ಟನ್ನು ಅಲ್ಲಿಯ ನಿವಾಸಿಗಳಿಗೆ ಬಿಟ್ಟುಕೊಡಲು ಬ್ರಿಟಿಷರಿಗೆ ಇಷ್ಟವಿಲ್ಲ. ಹೀಗಾಗಿ ಕಡೆಗೆ ಬ್ರಿಟಿಷರು ಹಿಂದುಸ್ತಾನದಲ್ಲಿ ಆಶ್ರಿತಸಂಸ್ಥಾನಗಳನ್ನು ಕಟ್ಟಿಕೊಂಡ ರೀತಿಯಲ್ಲಿಯೇ ಟ್ಯೂಫಿಕ್ ಪಾಷನನ್ನು ಗದ್ದುಗೆಯಲ್ಲಿರಿಸಿ ತಮ್ಮ ಸೈನ್ಯಗಳನ್ನು ಅಲ್ಲಲ್ಲಿ ನೆಲೆಗೊಳಿಸಿ ಆಡಳಿತವನ್ನು ಕೆಲಕಾಲ ತಾವೇ ವಹಿಸಿಕೊಂಡಿರಲು ನಿಶ್ಚಯಮಾಡಿದರು. ಈಜಿಪ್ಟಿನಲ್ಲಿ 1882ರಿಂದ ಈ ಬಗೆಯಲ್ಲಿ ಹೆಸರಿಗೊಬ್ಬ ಖೇದೀವನಿದ್ದರೂ ರಾಜ್ಯಭಾರವೆಲ್ಲ ಬ್ರಿಟಿಷರ ಅಧಿಕಾರವಾಯಿತು. **ಕ್ರೋಮರ್ ಶ್ರೀಮಂತನೆಂಬಾತನು** (Lord Cromer) ಮುಖ್ಯಾಧಿಕಾರವನ್ನು ವಹಿಸಿ 1907 ರವರೆಗೆ **ಕಾನ್ಸಲ್-ಜನರಲ್** (Consul-General) ಎನಿಸಿದನು.

**ಈಜಿಪ್ಟಿನಲ್ಲಿ ಬ್ರಿಟಿಷ್ ಪಾರುಪತ್ಯ**

ಕ್ರೋಮರ್ ಶ್ರೀಮಂತನು ಆಡಳಿತ ವಹಿಸಿಕೊಂಡ ಮೇಲೆ ಆಡಳಿತದಲ್ಲಿ ಕ್ರಮ ನೆಲೆಸಿತು. ಲಂಚಕೋರತನವೂ ಬಲವಂತದ ಚಾಕರಿಯೂ ಹಿಂಸೆಯೂ ಕಡಿಮೆಯಾದವು. ನೈಲ್‌ನದಿಯಿಂದ ಕಾಲುವೆಗಳು ಸಿದ್ಧವಾದುದಲ್ಲದೆ **ಅಸ್ಸುವಾನ್** ಎಂಬಲ್ಲಿ ಭಾರಿ ಅಣೆಕಟ್ಟು ಕಟ್ಟಿತು. ಆದರೆ ಬ್ರಿಟಿಷರ ಆಡಳಿತ ಎಷ್ಟು ಸಮರ್ಪಕವಾಗಿದ್ದರೂ ದೇಶದ ಜನರಲ್ಲಿ ಸ್ವಾತಂತ್ರ್ಯದ ಉದ್ದೇಶ ಮಾಯವಾಗಲಿಲ್ಲ. ಈಜಿಪ್ಟ್ ಬ್ರಿಟಿಷರ ವಶವಾದುದನ್ನು ಇತರ ಐರೋಪ್ಯರು ಸಮಾಧಾನದಿಂದ ಸಹಿಸಲೂ ಇಲ್ಲ. ಫ್ರೆಂಚ್ ಜನರಿಗೆ ಬ್ರಿಟಿಷರ ವರ್ತನೆ ಸರಿಬೀಳಲಿಲ್ಲ. ಆದರೆ ಬೇರೆ ಕಾರಣಗಳು ತೋರಿಕೊಂಡ ಬಳಿಕ ಫ್ರೆಂಚರು ಬ್ರಿಟಿಷರ ಸ್ನೇಹಕ್ಕಾಸೆಪಡಬೇಕಾಯಿತು. ಮೊರಾಕೊ ಪ್ರಾಂತ ತಮ್ಮ ವಶದಲ್ಲಿರುವುದಕ್ಕೆ ಬ್ರಿಟಿಷರು ಒಪ್ಪಿದಲ್ಲಿ ಈಜಿಪ್ಟ್ ಬ್ರಿಟಿಷರ ವಶದಲ್ಲಿರಲೆಂದು ಒಪ್ಪಂದ ಮಾಡಿಕೊಂಡರು. ಆಡಳಿತವನ್ನು ತಾವೇ ನಡೆಸುವ ಬ್ರಿಟಿಷರ ಸಂಕಲ್ಪಕ್ಕೆ ಫ್ರೆಂಚರೊಪ್ಪಿಗೆ ಈ ರೀತಿಯಲ್ಲಿ (1904) ದೊರೆಯಿತು.

**ಕ್ರೋಮರನ ಆಡಳಿತ**

ಇತರ ಐರೋಪ್ಯರು ಬ್ರಿಟಿಷರಿಗೆ ಈಜಿಪ್ಟಿನಲ್ಲಿ ತೊಂದರೆ ಕೊಡದಿರಲು ಬ್ರಿಟಿಷರು ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಂಡರು. 1896ರಲ್ಲಿ ದಕ್ಷಿಣದಲ್ಲಿ ಸುಡಾನ್ ಪ್ರದೇಶವನ್ನು ಬ್ರಿಟಿಷರು ಪುನಃ ಸಂಪಾದಿಸಿಕೊಳ್ಳುವ ಯೋಚನೆ ಮಾಡಿದರು. ಆ ಪ್ರದೇಶದ ಭಾಗಗಳನ್ನು ಫ್ರೆಂಚರೂ ಇಟಲಿಯವರೂ ಆಗಲೆ ಆಕ್ರಮಿಸಿದ್ದರು. ಆದ್ದರಿಂದ ವಿಳಂಬಮಾಡದೆ ಬ್ರಿಟಿಷರ ದಳಪತಿ **ಕಿಚನರ್** (Kitchener) ಕರ್ತವ್ಯಕ್ರಮವನ್ನು ಗೊತ್ತುಮಾಡಿಕೊಂಡು 1898ರಲ್ಲಿ ದರ್ವೇಶಿಗಳ ಗುಂಪನ್ನು **ಉಮ್ದುರ್ಮನ್** (Omdurman) ಕದನದಲ್ಲಿ ನಾಶಗೊಳಿಸಿದನು. **ಖಾರ್ಟೂಂ** ಪಟ್ಟಣವೂ ಬೇಗನೆ ವಶವಾಯಿತು. 1899ರಲ್ಲಿ ಸುಡಾನ್ ಪ್ರದೇಶವೆಂಬುದು ಬ್ರಿಟಿಷರಿಗೂ ಈಜಿಪ್ಟಿಗೂ ಸೇರಿದ್ದೆಂದು ಪ್ರಕಟಣೆಯಾಯಿತು.

**ಸುಡಾನಿನ ಗೆಲುವು**

ಇತರ ಐರೋಪ್ಯರು ಕಾರಣಾಂತರಗಳಿಂದ ಬ್ರಿಟಿಷರ ಗೋಜಿಗೆ ಬಾರದಿದ್ದರೂ ಈಜಿಪ್ಟ್ ದೇಶೀಯರೇ ಮುಂದೆ ತೊಂದರೆ ಕೊಡುವವರಾದರು. **ಕ್ರೋಮರ್, ಗಾರ್ಸ್ಟ್** (Gorst), **ಕಿಚನರ್** ಎಂಬುವರು ಬ್ರಿಟಿಷ್ ಕಡೆಯ ಮುಖ್ಯಾಧಿಕಾರಿಗಳಾಗಿ ದೇಶವನ್ನು ತಹಬಂದಿಯಲ್ಲಿಟ್ಟರು. ಆದರೆ ತಮ್ಮ ದೇಶದ ಹುಟ್ಟುವಳಿಯಲ್ಲಿ ಐರೋಪ್ಯರ ಸಾಲದ ಬಡ್ಡಿಗೆಂದು ಮೊದಲವೆಚ್ಚವಾಗುತ್ತಿದ್ದುದಲ್ಲದೆ ಐರೋಪ್ಯರಿಗಾಗಿಯೇ ವಿಶಿಷ್ಟನ್ಯಾಯಸ್ಥಾನಗಳು ನಡೆಯುತ್ತಿದುದೂ ಐರೋಪ್ಯರು ತೆರಿಗೆ ತೆರದೆ ಸುಖವಾಗಿದ್ದುದೂ ದೇಶೀಯರಿಗೆ ಅಹಿತವಾಗಿತ್ತು. ತಮ್ಮ ದೇಶ ತಮ್ಮ ಸ್ವಾಧೀನದಲ್ಲಿರಬೇಕೆಂಬುದು ಅವರ ಆಸೆ. ಅವರಿಗೆ ಸ್ವಲ್ಪ ಕಾಲ

**ಈಜಿಪ್ಟ್ ಜನರ ಅತೃಪ್ತಿ**

ದಲ್ಲಿಯೇ **ಸಾದ್ ಸಘುಲೂಲ್** (Saad Zaghlul) ಎಂಬಾತನು ನಾಯಕನಾದನು. ಅರಬಿ ಪಾಷನ ಸೈನ್ಯದಲ್ಲಿದ್ದ ಆತನು ಈಜಿಪ್ಟ್ ದೇಶಭಕ್ತರಲ್ಲಿ ಅಗ್ರಗಣ್ಯನೆನಿಸಿ ಇಪ್ಪತ್ತನೆ ಶತಮಾನದ ಆದಿಭಾಗದಲ್ಲಿ ಬ್ರಿಟಿಷ್ ಆಡಳಿತಕ್ಕೆ ವಿರೋಧಿಯಾದನು. ಆತನ ವೃತ್ತಾಂತವನ್ನು ನಾವು ಮುಂದೆ ಕಾಣಬೇಕು.

ಆಫ್ರಿಕದ ಇತರ ಭಾಗಗಳಲ್ಲಿ ಐರೋಪ್ಯರ ಆಕ್ರಮಣ ಹೇಗಾಯಿತೆಂಬುದನ್ನು ಕಂಡುಕೊಳ್ಳಬೇಕು.

## ಇತರ ಭಾಗಗಳು

**ಫ್ರೆಂಚರು**

ಬ್ರಿಟಿಷರು ಈಜಿಪ್ಟನ್ನು ವಶಪಡಿಸಿಕೊಳ್ಳುತ್ತಿರಲು ಫ್ರೆಂಚರು ತೊಂದರೆಕೊಡದಿದ್ದುದಕ್ಕೆ ಕಾರಣವಿತ್ತು. 1830 ರಲ್ಲಿ ಫ್ರೆಂಚರು **ಆಲ್ಜಿಯರ್ಸ್** ಪ್ರಾಂತದಲ್ಲಿ ಸ್ಥಳ ಸಂಪಾದನೆಗೆ ಮೊದಲು ಮಾಡಿದ್ದರು. ಲೂಯಿ ಫಿಲೀಪ್ ದೊರೆ ಈಜಿಪ್ಟಿನ ಮುಹಮ್ಮದಾಲಿಪಾಷನಿಗೆ ಸಹಾಯಮಾಡುತ್ತಲಿದ್ದನು. ಆ ತರುವಾಯ ಸ್ವದೇಶದಲ್ಲಿ ತೊಂದರೆಗಳು ತೋರಿದ ಕಾರಣದಿಂದ ಫ್ರೆಂಚರು 1881 ರವರೆಗೆ ಮುಂದೆ ಬೀಳದಿದ್ದರು. ಆ ವರ್ಷ **ಟ್ಯೂನಿಸ್** ಪ್ರಾಂತವನ್ನು ಸೇರಿಸಿಕೊಂಡರು.

**ಐರೋಪ್ಯರ ಪೈಪೋಟಿ**

ಬರ್ಲಿನ್ ಕಾಂಗ್ರೆಸ್ ನಡೆದವೇಳೆಗೆ ಐರೋಪ್ಯರಾಷ್ಟ್ರಗಳಲ್ಲಿ ಜರ್ಮನಿ ಮತ್ತು ಇಟಲಿ ಪ್ರಬಲಗೊಳ್ಳುತ್ತಿದ್ದವು. 1870 ವೇಳೆಗೆ ಆಫ್ರಿಕದ ದಕ್ಷಿಣಭಾಗದಲ್ಲಿ ಸ್ಕಾಟ್ಲೆಂಡಿನ ಮಿಷನರಿ **ಲಿವಿಂಗ್‌ಸ್ಟನ್** (Livingstone) ಎಂಬಾತನು ವಿಶೇಷ ಧೈರ್ಯಸಾಹಸಗಳನ್ನು ವಹಿಸಿ ಪ್ರಯಾಣಮಾಡಿ ದೇಶದ ಪರಿಚಯುವನ್ನು ಪಡೆದನು. ಆಫ್ರಿಕದ ಒಳಭಾಗದಲ್ಲಿ ನಾನಾ ಕುಲಸ್ಥ ಜನರು ಅನಾಗರಿಕರಾಗಿಯೇ ಇದ್ದುದಲ್ಲದೆ ಗುಲಾಮತನವನ್ನು ಸಾಮಾನ್ಯ ಲಕ್ಷಣವಾಗಿ ಪಡೆದಿದ್ದರು. ಅಲ್ಲಿಯ ವಿವರಗಳನ್ನು ಕೇಳಿದವರಲ್ಲಿ ಕೆಲವರು ಆ ಜನರನ್ನು ನಾಗರಿಕರನ್ನಾಗಿ ಶಿಕ್ಷಿಸತಕ್ಕುದು ತಮ್ಮ ಕರ್ತವ್ಯವೆಂದು ಭಾವಿಸಿದರು. 1881 ರ ವೇಳೆಗೆ ಪ್ರಬಲಗೊಂಡಿದ್ದ ಐರೋಪ್ಯ ರಾಷ್ಟ್ರಗಳಿಗೆ ಸಾಮ್ರಾಜ್ಯದಾಸೆಯೂ ಬಲವಾಗಿ ಬೆಳೆದಿತ್ತು. ಮೊದಲೇ ಹೊರಟು ಸಾಮ್ರಾಜ್ಯ ಕಟ್ಟಿಕೊಂಡಿದ್ದ ಬ್ರಿಟಿಷರನ್ನೂ ಫ್ರೆಂಚರನ್ನೂ ಕಂಡು ಇತರ ಐರೋಪ್ಯರು ಅಸೂಯೆಗೊಂಡು ಆತುರದಿಂದ ಆಫ್ರಿಕದ ಭಾಗಗಳನ್ನಾಕ್ರಮಿಸಿಕೊಳ್ಳಲು ತಪಿಸಿದರು. 1884ರಲ್ಲಿ **ಬರ್ಲಿನ್** ನಗರದಲ್ಲಿ ಒಂದು **ಸಮ್ಮೇಳನ** ಸೇರಿತು. ಆಫ್ರಿಕದ ವಿಭಾಗ ಹೇಗೆ ನಡೆಯತಕ್ಕುದೆಂದು ಚರ್ಚೆಯಾಗಿ ಯಾರೆಷ್ಟಾಕ್ರಮಿಸಿಕೊಂಡರೆ ಅವರಿಗಷ್ಟು ಕ್ಷೇತ್ರವೆಂದು ಗೊತ್ತಾಯಿತು. ಹತ್ತು ವರ್ಷಗಳೊಳಗಾಗಿ ಆ ವಿಸ್ತಾರವಾದ ಖಂಡದಲ್ಲಿ ಐರೋಪ್ಯಜಾತಿಗಳವರು

ಪೈಪೋಟಿ ಮಾಡುತ್ತ ಬೇಗ ಬೇಗನೆ ಬೇರೆ ಬೇರೆ ಭಾಗಗಳನ್ನು ಆಕ್ರಮಿಸಿ ಕೊಂಡರು.

ಖಂಡದ ಉತ್ತರಭಾಗದಲ್ಲಿ **ಫ್ರೆಂಚರು** ಸಾಮ್ರಾಜ್ಯ ಕಟ್ಟಿಕೊಂಡಾಗಲೇ **ಬೆಲ್ಜಿಯಂ** ದೊರೆ **ಲಿಯೊಪೋಲ್ಡ್** 1880 ರಲ್ಲಿ ವ್ಯವಹರಿಸಿ ಕಾಂಗೋ ನದಿಯ ಪ್ರದೇಶವನ್ನು ಸಂಪಾದಿಸಿಕೊಂಡನು. **ಪೋರ್ಚುಗಲ್ ದೇಶ**ದವರು ಪೂರ್ವ ಪಶ್ಚಿಮತೀರಗಳಲ್ಲಿ ಕ್ಷೇತ್ರವನ್ನು ಕಟ್ಟಿದರು. 1884-1885 ರಲ್ಲಿ **ಜರ್ಮನರು** ಕ್ಯಾಮರೂನ್ ಮತ್ತು ಟೋಗೋಲ್ಯಾಂಡುಗಳನ್ನಲ್ಲದೆ ಪೂರ್ವ ಪಶ್ಚಿಮತೀರಗಳಲ್ಲಿಯೂ ಆಕ್ರಮಿಸಿಕೊಂಡರು. **ಬ್ರಿಟಿಷರು** ಯಾರಿಗೂ ಹಿಂದೆ ಬೀಳಲಿಲ್ಲ. ಆ ವೇಳೆಗಾಗಲೇ ಕೇಪ್ ಕಾಲೊನಿ, ನೆಟಾಲ್, ಸಿಯೆರಾಲಿಯೋನ್, ಗೋಲ್ಡ್ ಕೋಸ್ಟು ಗಳೆಂಬುವನ್ನು ಸಂಪಾದಿಸಿಕೊಂಡಿದ್ದವರು ಬೆಚುವಾನಾಲ್ಯಾಂಡ್ ರ್ಹೊಡೀಸಿಯಗಳನ್ನೂ ನೈಜೀರಿಯ, ಯುಗಾಂಡ, ಮತ್ತು ಈಸ್ಟ್ ಆಫ್ರಿಕ ಎಂಬ ಕ್ಷೇತ್ರಗಳನ್ನೂ ವಶಕ್ಕಿಸಿಕೊಂಡು ಸೊಮಾಲಿಲ್ಯಾಂಡ್ ಸಾನ್‌ಸಿಬಾರ್ ಪ್ರದೇಶಗಳಲ್ಲಿ ಆಶ್ರಿತ ರಾಷ್ಟ್ರಗಳನ್ನು ಸ್ಥಾಪಿಸಿದರು. ಸೊಮಾಲಿಲ್ಯಾಂಡ್ ಪ್ರದೇಶಕ್ಕುತ್ತರದಲ್ಲಿ **ಇಟಲಿ**ಯವರು ಪ್ರವೇಶಿಸಿ ಎರಿಟ್ರಿಯವನ್ನು ಸ್ಥಾಪಿಸಿದರು. ಅಬಿಸಿನಿಯ ಎಂಬ ಒಂದು ರಾಜ್ಯಮಾತ್ರ ಹಿಂದಿನಂತೆ ಉಳಿಯಿತೇ ವಿನಾ ಉಳಿದ ಎಲ್ಲ ಪ್ರದೇಶಗಳೂ ಐರೋಪ್ಯರ ವಶವಾದವು. ಅದನ್ನು ವಶಪಡಿಸಿಕೊಳ್ಳಲು ಇಟಲಿಯವರು ಆ ಕಾಲದಲ್ಲಿಯೇ ಆಸೆ ಬೆಳೆಸಿದ್ದರು.

ವಿಭಾಗ

ಹತ್ತು ವರ್ಷಗಳೊಳಗಾಗಿ ವಿಸ್ತಾರವಾದ ಭೂಭಾಗವು ಐರೋಪ್ಯರ ಆಕ್ರಮಣಕ್ಕೆ ಸಿಕ್ಕಿಹೋಯಿತು. 1823 ರಲ್ಲಿ ಅಧ್ಯಕ್ಷ ಮನ್ರೋ ತನ್ನ ಪ್ರಕಟನೆ ಕೊಟ್ಟ ತರುವಾಯ ಅಮೆರಿಕಖಂಡಗಳಲ್ಲಿ ಐರೋಪ್ಯರಿಗೆ ಅವಕಾಶವಿಲ್ಲವಾಯಿತು. ಆ ಬಳಿಕ 1878 ವರೆಗೆ ಐರೋಪ್ಯ ರಾಷ್ಟ್ರಗಳು ಸುಸ್ವರೂಪವನ್ನು ಪಡೆಯುವುದರಲ್ಲಿದ್ದವು. ರಾಷ್ಟ್ರಗಳು ರೂಢಿಗೊಂಡಮೇಲೆ ಪ್ರತಿ ರಾಷ್ಟ್ರಕ್ಕೂ ಸಾಮ್ರಾಜ್ಯದಾಸೆ ಹುಟ್ಟಿತು. ಅತಿ ವಿಶಾಲವಾದ ಖಂಡವಾಗಿದ್ದುದರಿಂದ ಐರೋಪ್ಯಗುಂಪುಗಳವರು ತಮ್ಮ ಚೈತನ್ಯಕ್ಕೆ ತಕ್ಕಂತೆ ನುಗ್ಗಿ ಆಕ್ರಮಣಗಳನ್ನು ನಡೆಸಿದರು. ಪರಸ್ಪರವಾಗಿ ಅಸೂಯೆಗಳು ಒಳಗೊಳಗಿದ್ದರೂ ಆಕ್ರಮಣಕ್ಕೆ ಹೊಸಕ್ಷೇತ್ರ ಕಾಣುತ್ತಿದ್ದ ಕಾರಣದಿಂದ ಜಗಳಗಳು ರೇಗಲಿಲ್ಲ. ಆದಾಗ್ಗೂ ಬ್ರಿಟಿಷರು ನೈಲ್ ನದಿಯ ಕ್ಷೇತ್ರವಾದ ಸುಡಾನ್ ಪ್ರದೇಶವನ್ನು ಎರಡನೆಬಾರಿ ಆಕ್ರಮಿಸಿಕೊಂಡಾಗ **ಫಷೋಡ** ಎಂಬಲ್ಲಿಗೆ ಪಶ್ಚಿಮದ ಕಡೆಯಿಂದ ಬಂದ ಫ್ರೆಂಚ್ ದಳಪತಿ **ಮಾರ್ಚಂಡ್** (Marchand) ಎಂಬಾತನಿಗೆ ಉತ್ತರದಕಡೆಯಿಂದ ಅಲ್ಲಿಗೆ ಬಂದಿದ್ದ ಬ್ರಿಟಿಷರು ಎದುರಾದರು. ಇಬ್ಬರಿಗೂ ಜಗಳ ರೇಗಬಹುದಾಗಿತ್ತು. ಆದರೆ ಉಪಾಯವಾಗಿ ಎರಡು ಕಡೆಯವರೂ

ಜಗಳವನ್ನು ತಪ್ಪಿಸಿಕೊಂಡರು. ಉತ್ತರ ಆಫ್ರಿಕದಲ್ಲಿ ಪಶ್ಚಿಮಕ್ಷೇತ್ರ ಫ್ರೆಂಚರಿಗಿರತಕ್ಕುದೆಂದೂ ಈಜಿಪ್ಟ್ ಸುಡಾನುಗಳು ಬ್ರಿಟಿಷರಿಗಿರತಕ್ಕುದೆಂದೂ ಸಮಾಧಾನಮಾಡಿಕೊಂಡರು. ಜರ್ಮನಿ ಸಾಮ್ರಾಜ್ಯವೆಂಬುದು ಪ್ರಾಬಲ್ಯಕ್ಕೇರಿದಂತೆಲ್ಲ ಬ್ರಿಟಿಷರೂ ಫ್ರೆಂಚರೂ ಆಪ್ತರಾಗಬೇಕಾದ ಸಂದರ್ಭವೂ ಇತ್ತು.

**ಬ್ರಿಟಿಷ್-ಫ್ರೆಂಚ್ ಒಪ್ಪಂದ**

ಆಫ್ರಿಕದ ಉತ್ತರಭಾಗದಲ್ಲಿ ಮಾತ್ರವೇ ಹಿಂದಿನಿಂದ ಹೆಸರುವಾಸಿಯಾದ ರಾಜ್ಯಗಳಿದ್ದವು. ಆ ಭಾಗವೆಲ್ಲ ತುರ್ಕಿ ಸುಲ್ತಾನನಿಗೆ ಹೆಸರಿಗೆಮಾತ್ರ ಅಧೀನವಾಗಿತ್ತು. ಬ್ರಿಟಿಷರಿಗೆ ಸಾಮ್ರಾಜ್ಯಸಂಪಾದನೆಯಲ್ಲಿ ಈಜಿಪ್ಟಿನ ಜನರೂ ದಕ್ಷಿಣದಲ್ಲಿ ಬೋಯರ್ ಜನರೂ ತೊಂದರೆಕೊಟ್ಟರು. ಇತರೆಡೆಗಳಲ್ಲಿ ಹೆಚ್ಚು ತೊಂದರೆಯೇ ತೋರಲಿಲ್ಲ. ಆಫ್ರಿಕದ ನಿವಾಸಿಗಳು ನಾನಾ ಕುಲಗಳಾಗಿ ರಾಜಕೀಯ ವ್ಯವಸ್ಥೆಯಲ್ಲಿ ಹಿಂದುಳಿದಿದ್ದುದರಿಂದ ಐರೋಪ್ಯರಿಗೆ ಅಡ್ಡಿ ತೋರಲಿಲ್ಲ. ಸುಲಭವಾಗಿ ಸಾಮ್ರಾಜ್ಯ ಸಂಪಾದನೆಯಾಯಿತು.

## ಏಷ್ಯದಲ್ಲಿ

ಹಿಂದುಸ್ತಾನದ ವೃತ್ತಾಂತವನ್ನು ಬೇರೆಯಾಗಿಟ್ಟುಕೊಂಡು ಕಂಡುದಾಯಿತು. ಮೊದಲು ಹಿಂದುಸ್ತಾನಕ್ಕೆ ಬಂದ ಪರಂಗಿಯುವರಾದ ಪೋರ್ಚುಗೀಸರು **ಗುಡ್ ಹೋಪ್** ಭೂಶಿರದಿಂದ **ಮಲಕ್ಕ**ವರೆಗಿನ ಸಮುದ್ರತೀರವನ್ನು ತಮ್ಮ ಸ್ವಾಧೀನಪಡಿಸಿಕೊಂಡಾಗಲೆ ಹಿಂದುಸಾಗರವನ್ನು ವಶಪಡಿಸಿಕೊಳ್ಳುವ ಅವಶ್ಯತೆ ಐರೋಪ್ಯರಿಗೆ ತಿಳಿಯಿತೆಂದು ಭಾವಿಸಬಹುದು. ಡಚ್ಚರು **ಈಸ್ಟಿಂಡೀಸ್** ಎಂಬ ದ್ವೀಪಗಳಲ್ಲಿ ತಮ್ಮ ಸಾಮ್ರಾಜ್ಯ ಕಟ್ಟಿದರು. ಇತರ ಐರೋಪ್ಯರಿಗೆ ಅವಕಾಶವಿಲ್ಲದಂತೆ ನೆರವೇರಿಸಿಕೊಂಡ ವೇಳೆಗೆ ಬ್ರಿಟಿಷರು ಗುಡ್‌ಹೋಪ್, ಏಡೆನ್, ಆರ್ಮಸ್, ಸಿಂಹಳ, ಮಲಕ್ಕ ಪ್ರದೇಶಗಳನ್ನು ಸಂಪಾದಿಸಿ ಭದ್ರಪಡಿಸಿಕೊಂಡರು. ಹದಿನೆಂಟನೆ ಶತಮಾನದಂತ್ಯದಲ್ಲಿಯೇ **ಪೆನಾಂಗ್** (Penang) ಪ್ರದೇಶವನ್ನೂ ಹತ್ತೊಂಭತ್ತನೆ ಶತಮಾನದ ಪೂರ್ವಾರ್ಧದಲ್ಲಿ **ಮಲಕ್ಕ ಸಿಂಗಪುರ**ಗಳನ್ನೂ ವಶಪಡಿಸಿಕೊಂಡರು. ಮೊದಲನೆ ಬರ್ಮ ಯುದ್ಧವಾದ ಕೂಡಲೆ ಅರಕಾನ್ ಮತ್ತು ತೆನಾಸೆರಿಂ ಪ್ರಾಂತಗಳನ್ನು ಸೇರಿಸಿಕೊಂಡರು.

**ಮೊದಮೊದಲು**

1888ರಲ್ಲಿ ಬ್ರಿಟಿಷರು **ಬೋರ್ನಿಯೋ** ದ್ವೀಪದ ಉತ್ತರಭಾಗದಲ್ಲಿ ಆಧಿಪತ್ಯವನ್ನು ನೆಲೆಗೊಳಿಸಿದರು. **ಬ್ರೂಕ್** (Brooke) ಎಂಬ ಇಂಗ್ಲಿಷರವನು ಆ ಪ್ರದೇಶದ ಜನರ ವಿಶ್ವಾಸವನ್ನು ಸಂಪಾದಿಸಿ ಬ್ರಿಟಿಷ್ ಹಡಗುಗಳ ಸಹಾಯದಿಂದ ಅಲ್ಲಿಯ ಕಡಲ್ಗಳ್ಳರನ್ನು ಅಡಗಿಸಿ **ಸರಾವಾಕ್** (Sarawak) ಎಂಬ ವಿಭಾಗಕ್ಕೆ ರಾಜನೆನಿಸಿದನು.

ಈಸ್ಟಿಂಡೀಸ್ ದ್ವೀಪಗಳಲ್ಲಿ ಬಹುಭಾಗವು ಆ ವೇಳೆಗೆ ಡಚ್ಚರಿಗೂ ಬ್ರಿಟಿಷರಿಗೂ ವಿಭಾಗವಾದಂತೆ ಇತ್ತು. ಅಲ್ಲಿಂದ ಉತ್ತರಕ್ಕೆ ಚೀನ ಜಪಾನ್ ರಾಜ್ಯಗಳೂ ಪೂರ್ವಕ್ಕೆ ಪೆಸಿಫಿಕ್ ಸಾಗರದ ದ್ವೀಪಗಳೂ ಇರುವುವು. ಆ ದಿಕ್ಕುಗಳಲ್ಲಿ ಐರೋಪ್ಯರ ಪ್ರವೇಶ ಮತ್ತು ಆಕ್ರಮಣಗಳ ವೃತ್ತಾಂತವನ್ನು ಅಲ್ಪಸ್ವಲ್ಪವಾಗಿಯಾದರೂ ತಿಳಿಯಬೇಕು. ಐರೋಪ್ಯರ ಇತಿಹಾಸಗಳಲ್ಲಿ ಆ ಭೂಭಾಗಕ್ಕೆ **ಪ್ರಾಚ್ಯಾಂತ** ಅಥವಾ **ದೂರಪ್ರಾಚ್ಯ** (Far East) ಎಂಬ ಹೆಸರು ರೂಢಿ.

**ಚೀನಾ ಸಾಮ್ರಾಜ್ಯ**

ಚೀನ ಎಂಬುದು ಅತಿವಿಸ್ತಾರವಾದ ಸಾಮ್ರಾಜ್ಯವಾಗಿದ್ದುದಲ್ಲದೆ ಅತಿ ಪ್ರಾಚೀನ ಕಾಲದಿಂದಲೂ ಉತ್ತಮ ನಾಗರಿಕತೆಯನ್ನು ಪಡೆದಿತ್ತು. ವ್ಯವಸಾಯ ಉದ್ಯೋಗ ವ್ಯಾಪಾರಗಳಲ್ಲಿ ಹಿಂದಿನ ಕಾಲದಲ್ಲಿಯೇ ನೈಪುಣ್ಯ ನೆಲೆಸಿತ್ತು. ಮುದ್ರಣವನ್ನೂ ಮದ್ದನ್ನೂ ಅವರಿಂದಲೇ ಐರೋಪ್ಯರು ಕಲಿತಿದ್ದುದು. ಆದರೆ ಚೀನೀಯರು ಬೌದ್ಧಮತವನ್ನವಲಂಬಿಸಿ ಶಾಂತಿಯನ್ನೇ ಲಕ್ಷ್ಯವಾಗಿಟ್ಟುಕೊಂಡು ಇತರ ಭೂಭಾಗಗಳನ್ನು ಗೆಲ್ಲುವ ಆಸೆಯನ್ನು ಬೆಳೆಸದೆ ಇರುತ್ತಿದ್ದರು. ಕ್ವೆನ್‌ಲುನ್ ತಿಯನ್ಸ್ವಾನ್ ಪರ್ವತ ಶ್ರೇಣಿಗಳಿಂದಲೂ ಪೆಸಿಫಿಕ್ ಸಾಗರದಿಂದಲೂ ರಕ್ಷಿತರಾಗಿ ಮಹಾನದಿಗಳೆರಡರ ಬಯಲಿನಲ್ಲಿ ಸಾಮ್ರಾಜ್ಯವನ್ನು ಕಟ್ಟಿಕೊಂಡು ಇತರರಿಗೆ ತೊಂದರೆಕೊಡದೆ ಶಾಂತರೀತಿಯಲ್ಲಿ ಬಾಳುತ್ತಿದ್ದರು. ಜಗಳವಾಡಿ ಯುದ್ಧಗಳನ್ನು ನಡೆಸುವುದರಲ್ಲಿ ಅವರು ಕೇವಲ ಹಸುಳೆಯರಂತೆ; ಆದರೆ ತಮ್ಮ ದೇಶ ಸ್ವರ್ಗಸಮಾನವೆಂದೂ ತಮ್ಮ ಚಕ್ರವರ್ತಿ ದೇವತಾಸಮಾನನೆಂದೂ ತಾವೆಲ್ಲರೂ ದಿವ್ಯಜಾತಿಯವರೆಂದೂ ಹೆಮ್ಮೆ ಇತ್ತು.

1672ರಲ್ಲಿ ಈಸ್ಟಿಂಡಿಯ ಕಂಪನಿಯವರು **ಕಾಂಟನ್** (Canton) ಬಂದರಿನಲ್ಲಿ ಕಾಣಿಸಿಕೊಂಡು ವ್ಯಾಪಾರವನ್ನಾರಂಭಿಸಿದರು. ಚೀನೀಯರಿಗೆ ಪರಂಗಿಯವರೊಡನೆ ವ್ಯಾಪಾರ ಇಷ್ಟವಾಗಲಿಲ್ಲ. ಕಂಪನಿಯವರು ವ್ಯಾಪಾರ ನಡೆಸಲು ಚೀನೀ ಅಧಿಕಾರಿಗಳು ನಿರ್ಬಂಧಗಳನ್ನೊಡ್ಡಿದರು. ಸ್ವಲ್ಪ ಕಾಲದಲ್ಲಿ ಕಂಪನಿಯವರು ಅಫೀಮನ್ನು ಹೊತ್ತುಕೊಂಡು ಬಂದು ಚೀನೀಯರಿಗೆ ಮಾರಲಾರಂಭಿಸಿದರು. ಕಂಪನಿಯವರಿಗೆ ಆ ವ್ಯಾಪಾರದಿಂದ ಹೆಚ್ಚು ಲಾಭ; ಆದರೆ ಚೀನೀಯರ ಚೈತನ್ಯ ನಷ್ಟ. ಚೀನೀ ಅಧಿಕಾರಿಗಳು ಆ ವ್ಯಾಪಾರವನ್ನು ನಿಲ್ಲಿಸಲು ಯತ್ನಿಸಿ 1839ರಲ್ಲಿ ಕಂಪನಿಯವರ ಒಂದು ಹಡಗಿನಲ್ಲಿದ್ದ ಅಫೀಂ ಹೇರನ್ನು ವಶಪಡಿಸಿಕೊಂಡರು.

**ಅಫೀಂ ಯುದ್ಧಗಳು**

ಆಗ ಬ್ರಿಟಿಷ್ ಮಂತ್ರಿ ಪಾಮರ್ಸ್ಟನ್ ಸೈನ್ಯ ಕಳುಹಿಸಿ ಯುದ್ಧ ನಡೆಸಿದನು. ಸೋತ ಚೀನೀಜನರು ಪರಿಹಾರ ದ್ರವ್ಯವನ್ನಲ್ಲದೆ **ಹಾಂಗ್‌ಕಾಂಗ್** (Hongkong) ದ್ವೀಪವನ್ನೂ ಬ್ರಿಟಿಷರಿಗೊಪ್ಪಿಸ

ಬೇಕಾಯಿತು. ಬ್ರಿಟಿಷರು ಅಫೀಂ ವ್ಯಾಪಾರವನ್ನು ಹೆಚ್ಚಿಸಿದರು. ಚೀನಾ ಸಮುದ್ರದ ತೀರವೆಲ್ಲವನ್ನು ಪರಿಚಯಮಾಡಿಕೊಂಡು ಎಲ್ಲ ಸ್ಥಳಗಳಲ್ಲಿಯೂ ವ್ಯಾಪಾರವನ್ನು ಕಟ್ಟಿದರು. 1858ರಲ್ಲಿ ಚೀನಿ ಕಳ್ಳನೊಬ್ಬನಿಗೆ ಬ್ರಿಟಿಷರು ರಕ್ಷಣೆಯನ್ನು ನೀಡಿದ್ದರು. ಚೀನೀಯರು ಆ ಕಳ್ಳನನ್ನು ಹಿಡಿದರು. ಅದು ತಪ್ಪೆನಿಸಿ ಯುದ್ಧವಾಯಿತು. ಚೀನೀಯರು ಸೋತು ಕ್ಷಮೆ ಬೇಡಬೇಕಾಯಿತು.

ಆ ವೇಳೆಗೆ ಇತರ ಐರೋಪ್ಯರೂ ಸಾಮ್ರಾಜ್ಯ ಸಂಪಾದನೆಯ ಆಸೆಕಟ್ಟಿಕೊಂಡು ಯತ್ನಶೀಲರಾಗಿದ್ದರು. ಫ್ರೆಂಚರು ತಮ್ಮ ಪಾದ್ರಿಗಳನ್ನು ಚೀನೀಯರು ಅನ್ಯಾಯವಾಗಿ ಹತ್ಯಮಾಡಿದರೆಂದು ಚೀನದಲ್ಲಿ ಪ್ರವೇಶಿಸಿ ಚೀನಕ್ಕೆ ದಕ್ಷಿಣದಲ್ಲಿ **ಅನಾಂ, ಕಾಂಬೋಡಿಯ** ಪ್ರದೇಶಗಳನ್ನು ಸಂಪಾದಿಸಿಕೊಂಡರು. ಉತ್ತರದಲ್ಲಿ ಸೈಬೀರಿಯ

**ಫ್ರೆಂಚರು, ರಷ್ಯದವರು**

ಪ್ರಾಂತವನ್ನು ವಶಪಡಿಸಿಕೊಳ್ಳುತ್ತ ರಷ್ಯದವರು ಚೀನದ ಉತ್ತರಮೇರೆಯಲ್ಲಿ ಪ್ರವೇಶಿಸಿ ಅಮೂರ್ (Amur) ನದಿಯ ಪ್ರದೇಶವನ್ನು ದಕ್ಕಿಸಿಕೊಂಡು **ಪೋರ್ಟ್ ಆರ್ಥರ್** (Port Arthur) ಎಂಬ ಬಂದರಿಗಾಸೆಪಟ್ಟರು.

ಚೀನ ಸಾಮ್ರಾಜ್ಯವು ದುರ್ಬಲವಾಗಿದ್ದುದರಿಂದ ಈ ರೀತಿ ಐರೋಪ್ಯರಿಗೆ ಅತಿ ಸುಲಭವಾಯಿತು. ಆದರೆ ಐರೋಪ್ಯರಲ್ಲಿಯೇ ಪರಸ್ಪರ ಅಸೂಯೆಗಳು ಪ್ರಬಲವಾಗಿದ್ದವು; ಚೀನಾ ಜನಭರಿತವಾದ ಭೂಭಾಗವಾಗಿದ್ದಿತು; ಆದ್ದರಿಂದ ಕಾಲೊನಿ ಕಟ್ಟಲು ಅನುಕೂಲವಾಗಿರಲಿಲ್ಲ. ಫ್ರೆಂಚರು ಚೀನಸಾಮ್ರಾಜ್ಯದ ದಕ್ಷಿಣ ಭಾಗಗಳನ್ನು ವಶಪಡಿಸಿಕೊಂಡ ತರುವಾಯ ಐರೋಪ್ಯರಲ್ಲಿ ಪ್ರಬಲರೆನಿಸಿದವರೆಲ್ಲರೂ ಚೀನವನ್ನು ಅಕ್ರಮಿಸಿಕೊಳ್ಳುವ ಉದ್ಯಮದಲ್ಲಿ ತೊಡಗಿದ್ದರು. ಆಗ ಪರಂಗಿಯವರು ತಮ್ಮಲ್ಲಿ ಅಸೂಯೆಗಳನ್ನು ಬೆಳೆಸಿದ್ದರೂ ಪರಸ್ಪರವಾಗಿ ಒಪ್ಪಂದಗಳನ್ನು

**ಆರ್ಥಿಕ ಸಾಮ್ರಾಜ್ಯ ಸ್ಥಾಪನೆ**

ನಡೆಸಿಕೊಂಡು ಚೀನದ ವ್ಯಾಪಾರವನ್ನು ಭಾಗಮಾಡಿಕೊಳ್ಳಲು ತೊಡಗಿದರು. ಬ್ರಿಟಿಷರು, ಫ್ರೆಂಚರು, ಜರ್ಮನರು, ಅಮೆರಿಕನರು ಪ್ರಬಲರಾಗಿ ಚೀನದಲ್ಲಿ ಸಾಲಕೊಡುವುದಕ್ಕೂ ರೈಲ್ವಾರಿಗಳನ್ನು ಕಟ್ಟಿಕೊಡುವುದಕ್ಕೂ ಕರಾರುಗಳನ್ನು ಮಾಡಿಕೊಂಡು ಆರ್ಥಿಕರೀತಿಯ ಸಾಮ್ರಾಜ್ಯಗಳನ್ನು ಕಟ್ಟಿಕೊಂಡರು. **ಷಾಂಗ್ ಹೈ** (Shanghai) ಎಂಬುದು ಐರೋಪ್ಯರೆಲ್ಲರಿಗೂ ಸೇರಿತು. ಸಮುದ್ರತೀರದ ಸ್ಥಳಗಳಲ್ಲದೆ ನದೀತೀರಗಳಲ್ಲಿಯೂ ಐರೋಪ್ಯರ ಮಳಿಗೆಗಳೂ ಕೋಠಿಗಳೂ ಸಿದ್ಧವಾದವು.

ನಿಪ್ಪನ್ ಅಥವಾ ಜಪಾನ್ ರಾಜ್ಯದ ವೃತ್ತಾಂತ ಬೇರೆರೀತಿಯದು. ಚೀನ ಸಾಮ್ರಾಜ್ಯದ ಒತ್ತಿನಲ್ಲಿದ್ದು ಮತಾಚಾರವಿಚಾರಗಳಲ್ಲಿ ಚೀನೀಯರನ್ನನುಕರಿಸಿದಾಗ್ಯೂ

ಜಪಾನ್ ಯಾವಕಾಲದಲ್ಲಿಯೂ ಪರಾಕ್ರಾಂತವಾಗಲಿಲ್ಲ. ಪರಂಗಿಯವರು ಕಾಣಿಸಿಕೊಂಡಾಗ ಜಪಾನೀ ಜನರು ಅವರನ್ನು ತಮ್ಮ ದೇಶದೊಳಕ್ಕೆ ಬಿಡಕೂಡದೆಂದು ನಿರ್ಧರಿಸಿಕೊಂಡಿದ್ದರು. 1853 ರವರೆಗೂ ಪರಂಗಿಯವರು ಅಲ್ಲಿ ಪ್ರವೇಶಿಸಲಾಗಲಿಲ್ಲ. ಆ ವರ್ಷ ಅಮೆರಿಕದ ಜಹಜುಗಳು ಬಂದು ಬಲವಂತಮಾಡಿ ಜಪಾನೀ ಬಂದರುಗಳಲ್ಲಿ ಪ್ರವೇಶಮಾಡಿದವು. ಅಂದಿನಿಂದ ಜಪಾನೀ ಜನರು ಜಗತ್ತಿನಲ್ಲಿ ಪ್ರವೇಶಮಾಡಿದಂತಾಯಿತು. 1867ರಲ್ಲಿ **ಷೋಗುನ್ನನ** (Shogunate) ರಾಜ್ಯಭಾರಕ್ರಮ ಕೊನೆಗಂಡಿತು. **ಮೈಜಿ** (Meiji) **ಯುಗ**ವೆಂಬುದು **ಮುತ್ಸಿಹಿಟೊ** (Mutsihito) ಎಂಬ ಚಕ್ರವರ್ತಿಯ ಆಳಿಕೆಯಿಂದ ಮೊದಲಾಯಿತು. ಆ ಚಕ್ರವರ್ತಿ 1867ರಿಂದ 1912 ರವರೆಗೆ ಆಳಿಕೆ ನಡೆಸಿ ಜಪಾನ್ ರಾಜ್ಯವನ್ನು ಸರ್ವವಿಧಗಳಲ್ಲಿಯೂ ಐರೋಪ್ಯ ರಾಷ್ಟ್ರಗಳಿಗೆ ಸಮಾನ ಬಲವುಳ್ಳುದಾಗಿ ನೆರವೇರಿಸಿದನು.

ಜಪಾನ್

ಚೀನದಲ್ಲಿ ಐರೋಪ್ಯರು ಪ್ರವೇಶಿಸಿ ಸಾಮ್ರಾಜ್ಯಗಳನ್ನು ಕಟ್ಟಿಕೊಳ್ಳುತ್ತಿದ್ದುದನ್ನು ಕಂಡು ಆ ವೇಳೆಗೆ ಪ್ರಬಲರಾಗಿದ್ದ ಜಪಾನೀಯರು 1895ರಲ್ಲಿ ಚೀನದಮೇಲೆ ಯುದ್ಧಕ್ಕೆ ಹೊರಟರು. ಜಯಶಾಲಿಗಳಾಗಿ ಮಾಂಚೂರಿಯ ಭಾಗವನ್ನೂ **ಪೋರ್ಟ್ ಆರ್ಥರ್** ಬಂದರನ್ನೂ ದಕ್ಕಿಸಿಕೊಂಡರು. ಆಗ ರಷ್ಯ, ಫ್ರಾನ್ಸ್ ಮತ್ತು ಜರ್ಮನಿಗಳವರು ಜಪಾನೀಯರನ್ನು ಸಹಿಸದೆ ಒಟ್ಟಾಗಿ ಜಪಾನೀಯರನ್ನು ಅಡಗಿಸಲು ತೊಡಗಿ ಆ ಪ್ರದೇಶಗಳನ್ನು ಕಿತ್ತುಕೊಂಡರು. ಜಪಾನೀಯರಿಗೆ ಬೇಡವೆಂದು ತಾವೇ ಆಕ್ರಮಿಸಿದರು. **ಪೋರ್ಟ್ ಆರ್ಥರ್** ರಷ್ಯಕ್ಕೆ ಸೇರಿತು. 1897ರಲ್ಲಿ ಜರ್ಮನರು **ಕಿಯಾಚೌ** (Kiaochau) ಹಿಡಿದರು. ಬ್ರಿಟಿಷರು **ವೈಹೈವೈ** (Wei-haiwei) ಎಂಬುದನ್ನೂ ಫ್ರೆಂಚರು **ಕ್ವಾಂಗ್ ಚುವನ್** (Kwang Chuan) ಎಂಬುದನ್ನು ಆಕ್ರಮಿಸಿದರು. ಚೀನದ ಆರ್ಥಿಕಜೀವನವನ್ನು ತಮ್ಮ ವಶದಲ್ಲಿಟ್ಟುಕೊಂಡು ಸಮುದ್ರತೀರವನ್ನು ಈ ರೀತಿಯಲ್ಲಿ ಆಕ್ರಮಿಸಿದಾಗ ಬ್ರಿಟಿಷರೂ ಅಮೆರಿಕದವರೂ ಚೀನದ ವ್ಯಾಪಾರವು ಎಲ್ಲರಿಗೂ ಸೇರುವಂತಿರಬೇಕೆಂದು ಅಭಿಪ್ರಾಯಪಟ್ಟರು.

**ಜಪಾನ್—ಚೀನ ಯುದ್ಧ 1895**

1900 ವೇಳೆಗೆ ಐರೋಪ್ಯರು ಚೀನವನ್ನು ಅನೇಕವಿಧಗಳಲ್ಲಿ ಆಕ್ರಮಿಸಿಕೊಂಡಿದ್ದರು. ಚೀನೀಯರಿಗೆ ಸಹಜವಾಗಿ ಆಕ್ರೋಶವುಂಟಾಯಿತು. ಅವರಲ್ಲಿ ದೇಶಭಕ್ತರಾಗಿದ್ದವರು ಗುಂಪುಕಟ್ಟಿಕೊಂಡು ಬಿಳಿಯರನ್ನು ವಿರೋಧಿಸಲು ತೊಡಗಿದರು. ಅವರೇ **ಬಾಕ್ಸರ್ ಗುಂಪು** (Boxer). 1901ರಲ್ಲಿ ಆ ಗುಂಪಿನವರು **ಪಿಕಿನ್** (Pekin) ಪಟ್ಟಣದಲ್ಲಿ ಪ್ರಬಲರಾಗಿ ಐರೋಪ್ಯನಿಯೋಗಿಗಳ ನೆಲೆಗಳನ್ನು ಮುತ್ತಿದರು. ಚೀನ

**ಚೀನೀ ದಂಗೆ**

ಚಕ್ರವರ್ತಿಯ ಕಡೆಯವರು ಪ್ರಕಟವಾಗಿ ಅವರಿಗೆ ಸಹಾಯಮಾಡದಿದ್ದರೂ ಅವರನ್ನು ಅಡಗಿಸಲಿಲ್ಲ. ಐರೋಪ್ಯರೆಲ್ಲರೂ ಸೇರಿ ಯುದ್ಧ ನಡೆಸಿ ಆ ಗುಂಪನ್ನು ಅಡಗಿಸಿ ಅದಕ್ಕಾಗಿ ಚೀನದಿಂದ ಸಲ್ಲಬೇಕಾದ ಅಪರಾಧದ ಹಣವನ್ನು ಗೊತ್ತು ಮಾಡಿದರು.

ಪೆಸಿಫಿಕ್ ಸಾಗರದ ಭಾಗಗಳಲ್ಲಿಯೂ ಸರಿಸುಮಾರಾಗಿ ಆಫ್ರಿಕದಲ್ಲಿ ನಡೆದಂತೆ ನಡೆಯಿತು. ಅಲ್ಲಿಯೂ ಬ್ರಿಟಿಷರೇ ಮೊದಲು. 1874ರಲ್ಲಿ ಬ್ರಿಟಿಷರು **ಫೀಜೀ** (Fiji) ದ್ವೀಪಗಳನ್ನು ವಶಪಡಿಸಿಕೊಂಡರು. ಆವೇಳೆಗೆ ಜರ್ಮನರು ವ್ಯಾಪಾರ ಸಂಘವೊಂದನ್ನು ಕಟ್ಟಿ ಆಸ್ಟ್ರೇಲಿಯದ ಉತ್ತರದಲ್ಲಿ ಒಂದೆರಡು ದ್ವೀಪಗಳಲ್ಲಿದ್ದು ಕೊಂಡು **ನ್ಯೂಗಿನಿ** (New Guinea) ಎಂಬ ವಿಸ್ತಾರವಾದ ದ್ವೀಪವನ್ನು ಆಕ್ರಮಿಸಿ ಕೊಳ್ಳುವಂತೆ ಕಂಡಿತು. 1883ರಲ್ಲಿ ಆಸ್ಟ್ರೇಲಿಯದ ಬ್ರಿಟಿಷರು ತಾವೇ ಮುಂದಾಗಿ ನ್ಯೂಗಿನಿಯ ದಕ್ಷಿಣ ತೀರದಲ್ಲಿ ಬ್ರಿಟಿಷ್ ಧ್ವಜವನ್ನು ನೆಟ್ಟರು.

**ಪೆಸಿಫಿಕ್ ದ್ವೀಪಗಳ ವಿಭಾಗ**

ಒಂದು ತಿಂಗಳೊಳಗಾಗಿ ಜರ್ಮನರು ನ್ಯೂಗಿನಿಯ ಉತ್ತರ ಭಾಗವನ್ನು ಆಕ್ರಮಿಸಿಕೊಂಡರು. ಕೂಡಲೆ **ಬ್ರಿಟಿಷರು, ಫ್ರೆಂಚರು, ಜರ್ಮನರು, ಅಮೆರಿಕನರು** ಪೈಪೋಟಿ ಮೇಲೆ ದ್ವೀಪಗಳನ್ನು ವಶಪಡಿಸಿಕೊಂಡು ತಮ್ಮಲ್ಲಿಯೇ ಹಂಚಿಕೆಯ ಒಪ್ಪಂದಗಳನ್ನು ಮಾಡಿಕೊಂಡರು. ನ್ಯೂಗಿನಿಯ ಉತ್ತರಕ್ಕೂ ಪೂರ್ವಕ್ಕೂ ಇರುವ ದ್ವೀಪಗಳು ಜರ್ಮನಿಗೆ, ಮಾರ್ಕ್ವಿಸಾಸ್-ಸೊಸೈಟಿ-ನ್ಯೂಕ್ಯಾಲಿಡೋನಿಯ ದ್ವೀಪಗಳು ಫ್ರೆಂಚರಿಗೆ, ಹವಾಯ್ ಮುಂತಾದವು ಅಮೆರಿಕನ್ನರಿಗೆ ಸೇರಿರತಕ್ಕುದೆಂದು ಗೊತ್ತಾಯಿತು.

ಹತ್ತೊಂಭತ್ತನೆ ಶತಮಾನ ಮುಗಿಯುವುದರೊಳಗಾಗಿ ಅಮೆರಿಕನ್ನರು ಸ್ಪೈನಿನೊಡನೆ ಯುದ್ಧಮಾಡಿ ಫಿಲಿಪೈನ್ ದ್ವೀಪಗಳನ್ನೂ ವೆಸ್ಟಿಂಡೀಸ್ ದ್ವೀಪಗಳಲ್ಲಿ ಕೆಲವನ್ನೂ ಗೆದ್ದಿದ್ದರು. ಪೆಸಿಫಿಕ್ ಸಾಗರದಲ್ಲಿ ಅಮೆರಿಕನ್ನರು ಚೀನ ಜಪಾನುಗಳೊಡನೆ ವ್ಯವಹಾರಕ್ಕೆ ತೊಡಗಿದ ತರುವಾಯ ಸಾಮ್ರಾಜ್ಯ ಕಟ್ಟುವ ಪೈಪೋಟಿಯಲ್ಲಿ ಪ್ರವೇಶಿಸಿದರು. ಇಪ್ಪತ್ತನೆ ಶತಮಾನ ಮೂಡಿದವೇಳೆಗೆ ಐರೋಪ್ಯರಲ್ಲಿ ಸಾಮ್ರಾಜ್ಯದ ಪೈಪೋಟಿ ಬಲವಾಗಿ ನೆಲೆಗೊಂಡಿತ್ತು.

# ಹತ್ತೊಂಭತ್ತನೆ ಶತಮಾನ—ಕಾಲಸ್ಥಿತಿ

**ಚರಿತ್ರೆಯ ವ್ಯಾಪ್ತಿ**

ಬರಬರುತ್ತ ಬ್ರಿಟಿಷರ ಚರಿತ್ರೆಯೆಂಬುದು ಜಗತ್ತಿನ ಚರಿತ್ರೆಯಾಗಿಹೋಯಿತೆನ್ನಿಸುವುದಲ್ಲವೆ? ಪೃಥ್ವಿಯ ಎಲ್ಲ ಖಂಡಗಳಲ್ಲಿಯೂ ಪ್ರವೇಶಿಸಿ ರಾಜ್ಯಕಟ್ಟಿದ ಜನರ ವೃತ್ತಾಂತ ಹಾಗಾಗಲೇಬೇಕು. ಬ್ರಿಟಿಷರಂತೆ ಇತರ ಐರೋಪ್ಯರೂ ಇತರ ಭೂಭಾಗಗಳಲ್ಲಿ ನುಗ್ಗಿ ಪೋಟಾಪೋಟಿಗೆ ಮೊದಲಿಟ್ಟಾಗ ಅವರ ವೃತ್ತಾಂತವನ್ನು ನಾವು ತಿಳಿಯಬೇಕಾಗಿ ಬಂತು. ಆದ್ದರಿಂದ ಬ್ರಿಟಿಷರ ವೃತ್ತಾಂತವೆಂಬುದು ಸರಿಸುಮಾರಾಗಿ ಐರೋಪ್ಯರ ಚರಿತ್ರೆಯಂತೆಯೇ ಕಾಣುವುದು. ಹತ್ತೊಂಭತ್ತನೆ ಶತಮಾನದಲ್ಲಿ ಎಲ್ಲ ಖಂಡಗಳಲ್ಲಿಯೂ ಎಲ್ಲ ಸಾಗರಗಳಲ್ಲಿಯೂ ಐರೋಪ್ಯರ ಆಕ್ರಮಣ ನಡೆದುದರಿಂದ ಆ ಶತಮಾನದ ವೃತ್ತಾಂತದಲ್ಲಿ ಬಲು ಮುಖ್ಯವಾಗಿ ಕಾಣುವುದು ಪೃಥ್ವಿಯ ನಾನಾದೇಶಗಳಲ್ಲಿ ಐರೋಪ್ಯರ ಕಲ್ಲೋಲ. ಐರೋಪ್ಯರ ನಾಗರಿಕತೆಯೆಂಬುದು ಆ ಜನರೊಂದಿಗೆ ಪ್ರತಿ ದೇಶದಲ್ಲಿಯೂ ಪ್ರವೇಶಿಸಿತು. ಇದೇ ಎಲ್ಲಕ್ಕಿಂತಲೂ ದೊಡ್ಡ ಸಂಗತಿ. ಆ ದೊಡ್ಡ ಸಂಗತಿಯ ಅಂಗಗಳಲ್ಲಿ ರಾಜಕೀಯಘಟನೆಗಳನ್ನು ಮಾತ್ರ ನಾವು ಸಂಕ್ಷೇಪವಾಗಿ ಇದುವರೆಗೂ ಕಂಡೆವು. ಇತರ ಅಂಗಗಳೆನಿಸುವ ಅಂಶಗಳನ್ನು ಗ್ರೇಟ್‌ಬ್ರಿಟನ್ನಿನ ಚರಿತ್ರೆಯ ಮೂಲಕ ಸ್ಥೂಲವಾಗಿಯಾದರೂ ಕಾಣಬೇಕು. ಹತ್ತೊಂಭತ್ತನೆ ಶತಮಾನವೆಂಬುದು ನಿನ್ನೆ ಕಳೆದ ಶತಮಾನ. ನಮಗೆ ಅತಿ ಸಮೀಪ; ಆದ್ದರಿಂದ ಮುಖ್ಯ.

**ವಾಹನ**

ಐರೋಪ್ಯರ ಆಕ್ರಮಣಕ್ಕೆ ಪೃಥ್ವಿಯು ಸಾಲದೆನ್ನುವಂತೆ ಸಾಮ್ರಾಜ್ಯಗಳ ಪೈಪೋಟಿ ನಡೆದ ಸಂಗತಿಯಲ್ಲಿ ಪೃಥ್ವಿ ಚಿಕ್ಕದಾಗಿ ಪರಿಣಮಿಸಿದ ಅಂಶವನ್ನು ಮೊದಲು ಗಮನಿಸಬಹುದು. ದೂರವಾಗಿದ್ದುದು ಸಮೀಪವಾಗಿ ಹೋದುದು ಅದಕ್ಕೆ ಮೂಲ. ದೂರಗಳನ್ನು ಗೆದ್ದುದು ವೇಗಸಂಚಾರಿಗಳಾದ ವಾಹನಗಳಿಂದ. ಹದಿನೆಂಟನೆ ಶತಮಾನದ ಕೊನೆಯಲ್ಲಿಯೂ ಹತ್ತೊಂಭತ್ತನೆಶತಮಾನದ ಮೊದಲಲ್ಲಿಯೂ ಬ್ರಿಟನ್ನಿನಲ್ಲಿ ಕುದುರೆಗಾಡಿಯೇ ವೇಗಸಂಚಾರಕ್ಕಿದ್ದುದು. ಸುದ್ದಿ ಸಮಾಚಾರಗಳನ್ನು ಅತಿ ವೇಗವಾಗಿ ತರಿಸಿಕೊಂಡವರು ಪಾರಿವಾಳಗಳಿಂದ ತರಿಸಿಕೊಳ್ಳುತ್ತಿದ್ದರು. ರಸ್ತೆ ಕಾಲುವೆಗಳ ಮೇಲೆ ಹೊರಟ ವಾಹನಗಳು ಮೊದಲು ನಿದಾನವಾಗಿಯೇ ಇದ್ದುದರಿಂದ ಗಣಿಗಳಲ್ಲಿಯೂ ಕಾರ್ಖಾನೆಗಳಲ್ಲಿಯೂ ಹೆಚ್ಚು ಸರಕು ಉತ್ಪತ್ತಿಯಾದಾಗ ಅಲ್ಲಿಂದ ಬೇಗ ಸಾಗದೆ ಇತ್ತು. ಹತ್ತೊಂಭತ್ತನೆ ಶತಮಾನದ ಆದಿಯಲ್ಲಿ ಸಾಮಾನನ್ನು ಸಾಗಿಸುವ ಗಾಡಿಗಳಿಗಾಗಿ ಕಬ್ಬಿಣದ ಕಂಬಿಗಳನ್ನು ಪಯೋಗಿಸುತ್ತಿದ್ದರು. ತರುವಾಯ ಹಬೆಯ ಶಕ್ತಿಯಿಂದ ವೇಗವಾಗಿ ಚಲಿಸುವ ರೈಲುಯಂತ್ರವನ್ನು **ಜಾರ್ಜ್ ಸ್ಟೀವನ್ಸನ್**

(George Stephenson) ಎಂಬ ಯಂತ್ರೋದ್ಯೋಗಿಯು ನಿರ್ಮಿಸಿದನು. 1825ರಲ್ಲಿ ಇಂಗ್ಲಂಡಿನಲ್ಲಿ ರೈಲುಗಾಡಿ ಮೊದಲಾಯಿತು. ಹೊಸದರಲ್ಲಿ ಜನರು ಅನುಮಾನಶಂಕೆಗಳಿಂದ ಕೂಡಿ ಅದನ್ನು ಪಯೋಗಿಸದೆ ಇದ್ದರು. 1840ರ ವೇಳೆಗೆ ಶಂಕಾಭಯಗಳು ತೊಲಗಿದ್ದವು. ರೈಲ್ವೆ ಕಂಪನಿಗಳಲ್ಲಿ ಹೆಚ್ಚು ಸಂಪಾದನೆ ತೋರಿತು. ಆಗ ರೈಲ್ವೆ ಕಂಪನಿಗಳ ಷೇರುಗಳಿಗಾಗಿ ಜನರಲ್ಲಿ ಆಸೆಯೇರಿ ಹಿಂದೆ ಸೌತ್‌ಸೀ ಕಂಪನಿ ಭಂಗದ ಕಾಲದಲ್ಲಿ ನಡೆದಂತೆ ಮೋಸವೂ ನಡೆದು ಕೆಲವರು ನಷ್ಟಪಟ್ಟರು. ಕಾಲಕ್ರಮದಲ್ಲಿ ರೈಲ್ವೆಗಳು ಸಾಮಾನ್ಯವಾಗಿಹೋದವು.

ರೈಲ್ವೆ

ಜಹಜೆಂಬುದು ರೈಲಿಗಿಂತ ಮೊದಲೆ ತೋರಿಕೊಂಡಿತ್ತು. 1827ರ ವೇಳೆಗೆ ಅಟ್ಲಾಂಟಿಕ್‌ಸಾಗರವನ್ನು ದಾಟುವ ಜಹಜು ಸಿದ್ಧವಾಗಿತ್ತು. ಹಿಂದಿನಂತೆ ಪಟವಸ್ತ್ರಗಳನ್ನು ಕಟ್ಟಿಕೊಂಡು ಗಾಳಿಯ ಸಹಾಯದಿಂದ ಓಡಾಡುವ ಹಡಗುಗಳಿಗೆ ಬದಲಾಗಿ ಹಬೆಯ ಶಕ್ತಿಯನ್ನು ಪಯೋಗಿಸಿಕೊಂಡು ಚಲಿಸುವ ಜಹಜುಗಳು ಎಲ್ಲೆಲ್ಲಿಯೂ ಕಾಣಿಸಿಕೊಂಡವು. ಅದೇವೇಳೆಗೆ ಹಡಗು ಕಟ್ಟುವುದರಲ್ಲಿ ಕಬ್ಬಿಣದ ಉಪಯೋಗವೂ ಮೊದಲಾಯಿತು. 1869ರಲ್ಲಿ **ಸುಯೆಸ್‌ಕಾಲುವೆಯು** ಸಿದ್ಧವಾದ ತರುವಾಯ ಸಮುದ್ರಯಾನದಲ್ಲಿ ಮಹತ್ಪರಿಣಾಮ ತೋರಿತು. ಭಾರಿ ಜಹಜುಗಳು ಆ ಕಾಲದಿಂದ ರೂಪಗೊಂಡವು. ಪೂರ್ವಕ್ಕೂ ಪಶ್ಚಿಮಕ್ಕೂ ಕ್ರಮವಾಗಿ ಜಹಜುಗಳನ್ನು ನಡೆಸಿ ಸಂಪಾದನೆ ಮಾಡುವ ಕಂಪನಿಗಳು ಬಲಗೊಂಡವು. ಬ್ರಿಟಿಷರು ಹಡಗು ಕಟ್ಟುವ ಉದ್ಯೋಗದಲ್ಲಿಯೂ ಹಡಗು ನಡೆಸುವ ವಿದ್ಯೆಯಲ್ಲಿಯೂ ಅಗ್ರಗಣ್ಯರಾದರು. ಹತ್ತಿ, ಕಬ್ಬಿಣ, ಕಲ್ಲಿದ್ದಲುಗಳ ಕಾರ್ಖಾನೆ ಕೈಗಾರಿಕೆಗಳಲ್ಲದೆ ಹಡಗಿನ ತಯಾರಿಯೂ ಬ್ರಿಟಿಷರ ಬದುಕಿನಲ್ಲಿ ಮುಖ್ಯವೆನಿಸಿತು.

ಜಹಜು

ಪ್ರಯಾಣಸೌಕರ್ಯದಂತೆಯೆ ಸಮಾಚಾರವಾಹಕಗಳು ವಿಕ್ಟೋರಿಯ ಆಳಿಕೆಯಲ್ಲಿ ವೃದ್ಧಿಗೊಂಡವು. ಹಿರೇಚಾರ್ಲ್ಸ್‌ನ ಕಾಲದಿಂದ ಕುದುರೆಗಾಡಿಗಳಲ್ಲಿ ಕಾಗದಪತ್ರಗಳನ್ನು ಸ್ಥಳದಿಂದ ಸ್ಥಳಕ್ಕೊಯ್ಯುವ ಏರ್ಪಾಟು ನಡೆಯುತ್ತಿತ್ತು. ಆದರೆ ನಿದಾನ ಮತ್ತು ಹೆಚ್ಚು ವೆಚ್ಚ. 1840ರಲ್ಲಿ **ಸರ್ ರೋಲಂಡ್ ಹಿಲ್** (Sir Rowland Hill) ಎಂಬಾತನ ಪ್ರಯತ್ನದಿಂದ ಅಂಚೆ ಇಲಾಖೆಯೆಂಬುದು ಸುವ್ಯವಸ್ಥೆಗೊಳಗಾದುದಲ್ಲದೆ ಸುಲಭವೆಚ್ಚದಿಂದ ಕಾಗದಗಳನ್ನು ತಲಪಿಸುವ ಅನುಕೂಲವೂ ನೆಲೆಸಿತು. **ಪೆನ್ನಿ ಪೋಸ್ಟೇಜ್** (Penny Postage) ಎಂಬ ಆ ಅನುಕೂಲ ಬ್ರಿಟನ್ನಿನಲ್ಲಿ 1840ರಲ್ಲಿ ತೋರಿದ ತರುವಾಯ ರೈಲ್ವೆಗಳಲ್ಲಿಯೂ ಜಹಜುಗಳಲ್ಲಿಯೂ ಕಾಗದಪತ್ರಗಳು ದೇಶ

ಅಂಚೆ

ದಿಂದ ದೇಶಕ್ಕೆ ಕ್ರಮದಿಂದ ಸಾಗುವ ಏರ್ಪಾಟುಗಳು ನಡೆದವು. ಅಂಚೆ ಇಲಾಖೆಗೆ ಸಂಬಂಧಿಸಿದಂತೆ 1844ರಲ್ಲಿ ತಂತಿ ಮೂಲಕ ಸಮಾಚಾರ ಕಳುಹಿಸುವ ಏರ್ಪಾಟು ಮೊದಲಾಯಿತು. ಒಳದೇಶ ದಲ್ಲಲ್ಲದೆ ದೂರದೇಶಗಳಿಗೂ ತಂತಿಯ ವ್ಯವಸ್ಥೆ ನಡೆಯಿತು. 1876ರಲ್ಲಿ **ಟೆಲಿಫೋನ್** ಉಪಯೋಗಕ್ಕೆ ಬಂತು. ಶತಮಾನದ ಕೊನೆಕೊನೆಗೆ ತಂತಿಗಳಿಲ್ಲದೆ ಸಮಾಚಾರವನ್ನು ಆಕಾಶದ ಮೂಲಕ ಕಳುಹಿಸುವ **ವೈರ್ಲೆಸ್** ಎಂಬುದೂ ಪ್ರಾರಂಭವಾಯಿತು.

**ತಂತಿ**

ಸಮಾಚಾರವಾಹಿನಿಗಳು ಹೆಚ್ಚಿದಂತೆ ವರ್ತಮಾನಪತ್ರಿಕೆಗಳು ವಿಜೃಂಭಿಸ ಬೇಕಷ್ಟೆ. ಆದರೆ ಶತಮಾನದ ಮೊದಲಲ್ಲಿ ಪತ್ರಿಕೆಗಳಿಗೆ ಹೆಚ್ಚು ಸುಂಕದ ತೊಂದರೆ ಇತ್ತು. ಹಬೆಯ ಶಕ್ತಿಯನ್ನು ಯಂತ್ರಗಳಿಗೆ ಉಪಯೋಗಿಸಿದ ತರುವಾಯವೂ ವೃತ್ತಪತ್ರಿಕೆಗಳಿಗೆ ಕೆಲವುಕಾಲ ತೊಂದರೆಯಾಗಿತ್ತು. ಪಾರ್ಲಿ ಮೆಂಟಿನ ಸುಧಾರಣೆ ನಡೆದು ಪಾರ್ಟಿಗಳ ವ್ಯವಸ್ಥೆ ಬಲ ಗೊಂಡಂತೆ ಆ ತೊಂದರೆಗಳು ಮಾಯವಾದವು. ಹಬೆ ಯಂತ್ರಗಳ ವೃದ್ಧಿಯಲ್ಲದೆ ವಿದ್ಯುಚ್ಛಕ್ತಿಯ ಉಪಯೋಗವೂ ಮೊದಲಾದಬಳಿಕ ವೃತ್ತಪತ್ರಿಕೆಗಳು ಬಲಗೊಂಡವು. ಜನಶಿಕ್ಷಣವು ವ್ಯಾಪ್ತಿಪಡೆದಂತೆಲ್ಲ ಪತ್ರಿಕೆಗಳು ಬಲಗೊಂಡವು. ವೃತ್ತಪತ್ರಿಕೆಗಳು ಶತಮಾನದಕಡೆಗೆ ಜನವಾಣಿಯಾದವು. ಜನ ಶಿಕ್ಷಣಕ್ಕೆ ಮಾತ್ರವಲ್ಲದೆ ಜನಾಭಿಪ್ರಾಯಪ್ರಕಟನೆಗೂ ವೃತ್ತಪತ್ರಿಕೆಗಳು ಸಾಧಕ ಗಳಾದವು.

**ವೃತ್ತಪತ್ರಿಕೆ**

ಹಬೆಯ ಪ್ರಯೋಗದಲ್ಲಿ ವಿಜ್ಞಾನಶಾಸ್ತ್ರದಿಂದ ನಡೆಯಬಹುದಾದ ಪ್ರಯೋಜನ ಕಾಣಿಸಿತು. ಶಾಸ್ತ್ರವನ್ನು ತಿಳಿದಷ್ಟೂ ಅನುಕೂಲ ತೋರುವುದೆಂದು ಬ್ರಿಟಿಷ್ ಜನರಿಗೂ ಇತರ ಐರೋಪ್ಯರಿಗೂ ಸ್ಪಷ್ಟವಾದುದಲ್ಲದೆ ಹೆಚ್ಚು ಸಂಪಾದನೆಗೆ ದಾರಿಯೂ ಆಯಿತು. ಆದ್ದರಿಂದ ಹತ್ತೊಂಭತ್ತನೆ ಶತಮಾನದಲ್ಲಿ ಬ್ರಿಟಿಷರು ವೈಜ್ಞಾನಿಕಶಾಸ್ತ್ರಗಳ ಸಾಧನೆಯಲ್ಲಿಯೂ ಆ ಶಾಸ್ತ್ರಗಳ ಪ್ರಯೋಗದಲ್ಲಿಯೂ ಸಾಹಸಿ ಗಳಾದರು. ವಿದ್ಯುಚ್ಛಕ್ತಿಯಶಾಸ್ತ್ರ ಅಭಿವೃದ್ಧಿಯಾದಂತೆ ಡೈನಮೊ, ಟರ್ಬೀನ್ ಮುಂತಾದವು ರೂಪಗೊಂಡವು. 1887ರಲ್ಲಿ ಮೋಟಾರ್‌ಕಾರ್ ಸಿದ್ಧವಾಯಿತು. ಯಂತ್ರ, ಹಬೆ, ಕಾರ್ಖಾನೆ, ರೈಲ್ವಾರಿ, ಜಹಜು ಮುಂತಾದವು ತೋರಿ ಆರ್ಥಿಕಪ್ರಳಯ ನಡೆದಂತೆಲ್ಲ ಶಾಸ್ತ್ರಸಾಧನೆ ಮಹತ್ವ ಪಡೆದು ಜನಜೀವನದಲ್ಲಿ ದೊಡ್ಡ ಪರಿಣಾಮಗಳು ತೋರಿದವು. ರಸಶಾಸ್ತ್ರಪ್ರಯೋಗದಿಂದ ಕಾರ್ಖಾನೆಗಳಲ್ಲಿ ಹೆಚ್ಚು ಲಾಭ ಕಾಣಿಸಿದಂತೆಲ್ಲ ಧನ ವಂತರು ಶಾಸ್ತ್ರಜ್ಞರನ್ನು ಪ್ರೋತ್ಸಾಹಿಸಿದರು. **ಫೋಟೋಗ್ರಾಫ್, ಟೈಪ್‌ರೈಟರ್,**

**ಶಾಸ್ತ್ರವೃದ್ಧಿ, ಪ್ರಯೋಗ**

ಬೆಂಕಿಪೆಟ್ಟಿಗೆಗಳಂತೆ ಹುಟ್ಟಿಕೊಂಡ ಹೊಸ ಅನುಕೂಲಗಳನ್ನು ಎಣಿಸಲು ಸಾಧ್ಯವಿಲ್ಲ. ಆದರೆ ಜೀವಶಾಸ್ತ್ರಜ್ಞರು ನಡೆಸಿದ ಸಾಹಸದಿಂದ ವೈದ್ಯಚಿಕಿತ್ಸಾವಿಭಾಗಗಳಲ್ಲಿ ತೋರಿ ಕೊಂಡ ಹೊಸ ಪ್ರಯೋಗಗಳು ಅದ್ಭುತ. ಶತಮಾನದ ಮಧ್ಯಭಾಗದಲ್ಲಿ ಶಸ್ತ್ರ ಚಿಕಿತ್ಸೆಯಶಾಸ್ತ್ರ ಅಚ್ಚರಿಗಳನ್ನೇ ತೋರಿತು. 1859ರಲ್ಲಿ **ಡಾರ್ವಿನ್** ಎಂಬ ಜೀವ ಶಾಸ್ತ್ರಜ್ಞನು ಪ್ರಾಣಿಗಳಲ್ಲಿ ಜಾತಿಭೇದಮೂಲ (Origin of Species) ವೆಂಬ ಗ್ರಂಥ ವನ್ನು ಪ್ರಕಟಿಸಿದ ತರುವಾಯ ಜನರ ಬುದ್ಧಿವಿಚಾರಗಳಲ್ಲಿ ಮಹಿಮಾಮಯ ಪರಿಣಾಮವಾಯಿತು.

ಪ್ರಕೃತಿಯ ರಹಸ್ಯಗಳನ್ನು ಭೇದಿಸಿಕೊಂಡು ಶಾಸ್ತ್ರಜ್ಞಾನಕ್ಕಾಗಿ ತನುಮನ ಧನಗಳನ್ನು ಅರ್ಪಿಸಿದ ಬ್ರಿಟಿಷರೂ ಐರೋಪ್ಯರೂ ಎಷ್ಟೋಮಂದಿ. ಶುದ್ಧ ಜ್ಞಾನ ಕ್ಕಾಗಿ ತಪಸ್ವಿಗಳಂತೆ ಪ್ರಯಾಸಪಟ್ಟ ಆ ವಿದ್ವಾಂಸರ ಪ್ರೋತ್ಸಾಹಪೋಷಣೆಗಳಿಗಾಗಿ ಬ್ರಿಟನ್ನಿನಲ್ಲಿ ಸಂಘಗಳು ಹುಟ್ಟಿಕೊಂಡುದು ಆ ಜನರಲ್ಲಿ ವಿಶೇಷ. ಆ ವಿದ್ವಾಂಸರ ಸಾಧನೆಯನ್ನು ಪ್ರಯೋಗಿಸಿ ಉದ್ಯೋಗಕೈಗಾರಿಕೆ ವ್ಯಾಪಾರಗಳಲ್ಲಿ ಪರಿಣಾಮಕಾರಕ ವಾದ ಯೋಚನೆಗಳನ್ನು ನಡೆಸಿದವರಿಗೆ ಬ್ರಿಟಿಷ್‌ಜಾತಿಯ ಧನವಂತರೆಲ್ಲರೂ ಪ್ರೋತ್ಸಾಹ ನೀಡುತ್ತಿದ್ದರು. ಶಾಸ್ತ್ರಪ್ರಯೋಗದಿಂದ ಸಂಪಾದನೆ ಹೆಚ್ಚುವು ದೆಂಬುದು ಸಾಮಾನ್ಯವಾದುದಲ್ಲದೆ ವಿಸ್ತಾರಸಾಮ್ರಾಜ್ಯದ ರಕ್ಷಣೆಗೂ ಆ ಪ್ರಯೋಗ ಸಿದ್ಧಿಯೇ ಮೂಲವೆಂದು ಜನರಲ್ಲಿ ನಾಟಿತು. ಕಾರ್ಖಾನೆಗಳಲ್ಲಿ ಯಂತ್ರಪ್ರಯೋಗ ವಾದಂತೆ ಯುದ್ಧದ ಇಲಾಖೆಗಳಲ್ಲಿಯೂ ನಡೆಯಿತು. ಐರೋಪ್ಯರು ಯಂತ್ರ ಗಳನ್ನು ಅನುಕರಿಸಿದ ಶಿಸ್ತಿನಿಂದ ಕೂಡಿಕೊಂಡು ಯಂತ್ರಪ್ರಯೋಗವನ್ನೂ ಇಟ್ಟು ಕೊಂಡು ಪೃಥ್ವಿಯ ಬೇರೆ ಬೇರೆ ಭಾಗಗಳಲ್ಲಿ ಸಾಮ್ರಾಜ್ಯಕಟ್ಟಿದರು.

ಯಂತ್ರಶಾಸ್ತ್ರಸಾಧನೆಯೆಂಬುದು ಐರೋಪ್ಯರ ಜೀವನವನ್ನು ಬದಲಾಯಿಸಿತು. ಐರೋಪ್ಯರ ನಾಗರಿಕತೆಯೆನ್ನುವುದಕ್ಕೆ ಅದೇ ಮೂಲ. ಇತರ ಖಂಡಗಳಲ್ಲಿ ಐರೋಪ್ಯರು ಸಾಮ್ರಾಜ್ಯ ಕಟ್ಟಿದಾಗ ಪೃಥ್ವಿಯಲ್ಲೆಲ್ಲ ಐರೋಪ್ಯನಾಗರಿಕತೆಯೆಂಬುದು ವ್ಯಾಪ್ತಿಪಡೆಯಿತು. ಹತ್ತೊಂಭತ್ತನೆ ಶತಮಾನದಲ್ಲಿ ಐರೋಪ್ಯ

**ಐರೋಪ್ಯನಾಗರಿಕತೆ**

ರಾಷ್ಟ್ರಗಳಲ್ಲಿ ಜನಸ್ವಾಮ್ಯ, ಪ್ರಾತಿನಿಧ್ಯತತ್ತ್ವ, ಜಾತಿಬದ್ಧ ರಾಷ್ಟ್ರ ಗಳು ರಾಜಕೀಯವಾಗಿಯೂ ಕಾರ್ಖಾನೆ ವ್ಯಾಪಾರಸಾಹಸ ಗಳು ಆರ್ಥಿಕವಾಗಿಯೂ ಪ್ರಯತ್ನಕ್ಕೆ ಗುರಿಯಾದಂತೆ ಪೃಥ್ವಿಯ ಇತರ ಭಾಗಗಳ ಚರಿತ್ರೆಯಲ್ಲಿ ಐರೋಪ್ಯರ ಆಕ್ರಮಣಪ್ರಯತ್ನಗಳೂ ಐರೋಪ್ಯನಾಗರಿಕತೆಯ ವ್ಯಾಪ್ತಿಯೂ ಮುಖ್ಯ ಘಟನೆಗಳಾದವು.

ಒಳನಾಡಿನ ಚರಿತ್ರೆಯಲ್ಲಿ ಕಾರ್ಖಾನೆಗಳ ಸಂಬಂಧವಾಗಿಯೂ ನಿರ್ಗತಿಕರ ಸಂಬಂಧವಾಗಿಯೂ ಶಾಸನಗಳಲ್ಲದೆ ಸುಂಕಗಳನ್ನು ರದ್ದುಗೊಳಿಸಿದ ಶಾಸನವೂ

ನಡೆಯಿತಷ್ಟೆ. 1846 ರವರೆಗೆ ಬ್ರಿಟಿಷ್ ವ್ಯವಸಾಯಕ್ಕೆ ರಕ್ಷಣೆಯಿತ್ತು. ಆ ತರುವಾಯ ಪರದೇಶೀ ಗೋಧಿಯು ಇಂಗ್ಲಂಡಿನಲ್ಲಿ ಮಾರಾಟವಾಗುವುದಕ್ಕೆ ಆತಂಕವಿಲ್ಲವಾಯಿತು. ಕ್ರಿಮಿಯ ಯುದ್ಧಕಾಲದಲ್ಲಿಯೂ ಅಮೆರಿಕದ ಅಂತರ್ಯುದ್ಧಕಾಲದಲ್ಲಿಯೂ ಪರದೇಶೀಧಾನ್ಯ ವಿಶೇಷವಾಗಿ ಬರಲಿಲ್ಲ. 1870ರ ತರುವಾಯ ಅಮೆರಿಕ, ಕನಡ ಗಳಿಂದ ಗೋಧಿ ಬ್ರಿಟನ್ನಿಗೆ ಬಂದು ಅಗ್ಗವಾಗಿ ದೊರಕಲು ಮೊದಲಾಯಿತು. ಆ ಪೈಪೋಟಿಯಿಂದ ಬ್ರಿಟನ್ನಿನಲ್ಲಿ ಗೋಧಿ ಬೆಳೆಗೆ ಲಾಭ ಕಡಿಮೆಯಾಗಿ ಭೂಮಿಗಳಲ್ಲಿ ವ್ಯವಸಾಯ ತಗ್ಗಿ ಪಶುಪಾಲನೆ ಹೆಚ್ಚಿತು. 1890ರ ತರುವಾಯ ಆರ್ಜೆಂಟೀನ್, ನ್ಯೂಸೀಲಂಡ್, ಆಸ್ಟ್ರೇಲಿಯಗಳಿಂದ ಮಾಂಸ ಬರಲಾರಂಭವಾಗಿ ಬ್ರಿಟಿಷ್ ಪಶು ಪಾಲಕರು ಪೈಪೋಟಿಗೆ ಸಿಕ್ಕಿದರು. ಆರಂಬ ಮಾಡಿ ಬದುಕುತ್ತಿದ್ದ ರೈತರೇ ಇಲ್ಲ ವಾಗಿತ್ತು. ಭೂಮಿಗಳ ಒಡೆಯರೊಂದುಕಡೆ ಕೂಲಿಗಾರರೊಂದುಕಡೆ ಅಥವಾ ಧನವಂತರು ದರಿದ್ರರು ಎಂಬ ಗುಂಪುಗಳು ಸ್ಥಿರವಾಗಿದ್ದವು.

**ಧನಿಕರು ದರಿದ್ರರು** 1834ರಲ್ಲಿ ಸಿರ್ಗತಿಕರ ಶಾಸನವಾದತರುವಾಯ ಕೆಲಸಕಾಣದ ಕೂಲಿಯವರು ಕಾರ್ಖಾನೆಗಳಲ್ಲಿಯೋ ರೈಲುಗಣಿಗಳಲ್ಲಿಯೋ ಕೆಲಸವನ್ನು ಹುಡುಕಿಕೊಳ್ಳಬೇಕಾಯಿತು. ಡಿಸ್ರೇಲಿ ನಡೆಸಿದ ಒಂದು ಶಾಸನದಿಂದ ಕಾರ್ಖಾನೆ ಪಟ್ಟಣಗಳಲ್ಲಿ ಆರೋಗ್ಯನಿಯಮಗಳಿಗನುಸಾರವಾಗಿ ಮನೆಗಳೂ ಕೇರಿಗಳೂ ಇರತಕ್ಕುದೆಂದು ಗೊತ್ತಾಗಿದ್ದರೂ ಯಾವ ಪಟ್ಟಣವನ್ನು ಕಂಡಾಗ್ಗೂ ಧನವಂತರ ಉಪ್ಪರಿಗೆಗಳೊಂದುಕಡೆಯಾದರೆ ದರಿದ್ರಜನರ ಕೇರಿಗಳಿನ್ನೊಂದುಕಡೆಯಾಗಿ ಸ್ವರ್ಗ ನರಕಗಳು ಒಟ್ಟುಗೂಡಿದಂತೆ ಕಾಣಿಸಿತು. ಸಮಾಜಸ್ಥಿತಿಯಲ್ಲಿ ಧನವಂತರು ದರಿದ್ರ ರೆಂಬ ವಿಭಾಗ ಕಾಲಕಳೆಯುತ್ತ ಸ್ಫುಟವಾಯಿತು. ಬಡವನಾಗಿದ್ದವನು ಧನವಂತ ನಾದ ತರುವಾಯ ಬೇರೆ ವರ್ಗಕ್ಕೆ ಸೇರಿಕೊಳ್ಳುವವನಾದನು. ಆದ್ದರಿಂದ ಬಡವರೆಂಬು ವವರು ಬಡವರಾಗಿಯೇ ಉಳಿದುಕೊಳ್ಳಬೇಕಾಯಿತು. ಯಂತ್ರಯುಗದ ವ್ಯವಸ್ಥೆ ಯಲ್ಲಿ ದೇಶದ ಸಂಪತ್ತು ಸೌಭಾಗ್ಯಗಳು ಹೆಚ್ಚಿದಂತೆ ಧನಿಕರು ಮತ್ತಷ್ಟು ಧನಿಕರಾ ಗುವ ಮತ್ತು ದರಿದ್ರರು ದರಿದ್ರರಾಗಿಯೇ ಇರುವ ಗತಿ ಅನಿವಾರ್ಯಲಕ್ಷಣವಾಯಿತು.

ಬ್ರಿಟನ್ನಿನ ಪಾರ್ಲಿಮೆಂಟಿನಲ್ಲಿ ಈ ಶತಮಾನಕಾಲದಲ್ಲಿ ಮೂರುಬಾರಿ ಸುಧಾರಣೆ ಗಳು ನಡೆದಾಗ್ಗೂ ಆಡಳಿತವೆಂಬುದು ನೆಮ್ಮದಿವಂತರ ವಶದಲ್ಲಿಯೇ ಉಳಿಯಿತು. ನೆಮ್ಮದಿವಂತವರ್ಗದವರೆಂದರೆ ಧನಿಕರೂ ಪ್ರಬಲರೂ ಆಗಿ ಆತ್ಮತೃಪ್ತಿ ಪಡೆದವರು. ವಿಕ್ಟೋರಿಯರಾಣಿಯ ಆಳಿಕೆಯ ಕಾಲ ಬ್ರಿಟಿಷರ ಆತ್ಮತೃಪ್ತಿಯಕಾಲ. ಲಿಬರಲ್ ಕನ್ಸರ್ವೆಟಿವ್ ಪಕ್ಷಗಳು ಅಧಿಕಾರಪ್ರಾಪ್ತಿಗಾಗಿ ವಿರೋಧಿಗಳೇ ವಿನಾ ಇತರ ವಿಧಗಳಲ್ಲಿ ಪರಸ್ಪರವಿರೋಧಿಗಳೆಂದು ಭಾವಿಸಿದರೆ ತಪ್ಪಾಗುವುದು. ಎಂಟಾಣೆಗೂ ಅರ್ಧ ರೂಪಾಯಿಗೂ ಎಷ್ಟು ಭೇದವೋ ಅಷ್ಟೇ ಭೇದ ಅವುಗಳಿಗೆ ವಾಸ್ತವವಾಗಿ. ಎರಡು ಪಕ್ಷಗಳಲ್ಲಿಯೂ ದೇಶಭಕ್ತಿಯಲ್ಲದೆ ಹೆಮ್ಮೆಯೂ ಆತ್ಮತೃಪ್ತಿಯೂ ಭದ್ರಗೊಂಡಿದ್ದವು.

ಪೃಥ್ವಿಯಲ್ಲೆಲ್ಲ ಬ್ರಿಟನ್ ಅತ್ಯುತ್ತಮವೆಂದೂ ಬ್ರಿಟಿಷ್ ಆಡಳಿತಕ್ರಮವೇ ಅತ್ಯುತ್ಕೃಷ್ಟವೆಂದೂ ನಂಬಿದ್ದ ಆ ಪಕ್ಷವಿಪಕ್ಷಗಳಸದಸ್ಯರಲ್ಲಿ ಆತ್ಮತೃಪ್ತಿಯು ವಿಚಿತ್ರರೂಪವನ್ನು ಪಡೆಯಿತು. ಬ್ರಿಟಿಷರ ಸಾಮ್ರಾಜ್ಯ ವಿಸ್ತಾರಗೊಂಡಂತೆ ನೆಮ್ಮದಿವಂತಗುಂಪಿನ ಹೆಮ್ಮೆಯೂ ಹೆಚ್ಚಿತು. ಆಡಳಿತದಲ್ಲಿ ಅಧಿಕಾರವುಳ್ಳವರು ಪ್ರಜೆಗಳ ಜೀವನದಲ್ಲಿ ಪ್ರವೇಶಮಾಡದೆ ತಟಸ್ಥರಾಗಿರಬೇಕಾದುದು ನ್ಯಾಯವೆಂದು ಅವರಿಗೆ ತೋರಿತ್ತು. ಹಾಗೆಮಾಡಿದರೆ ಪ್ರಜಾಸ್ವಾತಂತ್ರ್ಯಕ್ಕೆ ಘಾತವಾಗುವುದೆಂದು ಅವರ ಅಭಿಪ್ರಾಯ. ಯಂತ್ರಯುಗದ ಲಕ್ಷಣವಾಗಿ ತೋರಿಕೊಂಡ ಕೂಲಿನಾಲಿಜನರ ಕಷ್ಟನಿವಾರಣೆಗಾಗಿ ಆ ಕಾರಣದಿಂದ ಹತ್ತೊಂಭತ್ತನೆ ಶತಮಾನದಲ್ಲಿ ಹೆಚ್ಚು ಪ್ರಯತ್ನ ನಡೆಯಲಿಲ್ಲ.

**ಬ್ರಿಟಿಷರ ಆತ್ಮತೃಪ್ತಿ**

ಆದರೆ ಕಾರ್ಖಾನೆಗಳಲ್ಲಿಯೂ ಗಿರಣಿಗಳಲ್ಲಿಯೂ ಕೂಲಿಗಾರರು ಗುಂಪು ಗುಂಪಾಗಿಯೇ ಇರತಕ್ಕವರಾದುದರಿಂದ ಶಿಕ್ಷಣ ಹರಡಿದಂತೆಲ್ಲ ಅವರು ತಮ್ಮ ಸಂಘಗಳನ್ನು ಕಟ್ಟಿಕೊಂಡು ರಾಜಕೀಯಾಧಿಕಾರಪ್ರಾಪ್ತಿಗಾಗಿಮಾತ್ರವಲ್ಲದೆ ಇತರ ಅನುಕೂಲಗಳಿಗಾಗಿಯೂ ಸಂಘಪ್ರಯತ್ನಗಳನ್ನು ಕೈಕೊಂಡರು. **ಪರಸ್ಪರ ಸಹಾಯ ಸಂಘ**ಗಳೆಂಬವು ಈ ಪರಿಸ್ಥಿತಿಯಲ್ಲಿ ತೋರಿಕೊಂಡವು. 1844ರಲ್ಲಿ ಮೊದಲನೆ ಸೊಸೈಟಿಯು ಹುಟ್ಟಿತು. ತಮಗೆ ಬೇಕಾದ ಪದಾರ್ಥಗಳನ್ನು ರಾಶಿಯಲ್ಲಿ ಕೊಂಡುಕೊಂಡು ನ್ಯಾಯವಾದ ಬೆಲೆಗೆ ಮಾರಿಕೊಳ್ಳುತ್ತ ಬಂದಲಾಭವನ್ನು ತಾವೇ ಹಂಚಿಕೊಳ್ಳುವ ಆ ಉಪಾಯವು ಬೇಗಬೇಗನೆ ಎಲ್ಲೆಡೆಗಳಲ್ಲಿಯೂ ಬಡಬಗ್ಗರಿಗೆ ಇಷ್ಟವಾಯಿತು. ಕೋ-ಆಪರೇಟಿವ್ ಸಂಘಗಳಲ್ಲದೆ ಪ್ರತಿ ಕಸಬಿನವರೂ ತಮ್ಮ ಸಂಘವೊಂದನ್ನು ಕಟ್ಟಿಕೊಳ್ಳಲಾರಂಭಿಸಿದರು. **ಟ್ರೇಡ್ ಯೂನಿಯನ್ನು** (Trade Unions)ಗಳೆಂಬವುಗಳು ಪ್ರಬಲಗೊಳ್ಳಲು ಶತಮಾನಾಂತ್ಯದಲ್ಲಿ ಅನುಕೂಲವಾಯಿತು. ಆ ತರುವಾಯ ಕಾಮನ್ಸ್ ಸಭೆಯಲ್ಲಿ ಕೂಲಿಗಾರರ ಪ್ರತಿನಿಧಿಗಳು ಹಲಕೆಲವರು ಕಾಣಿಸಿಕೊಂಡರು. ಆದರೆ **ಲೇಬರ್ ಪಾರ್ಟಿ** (Labour Party) ಎಂಬುದು ರೂಪಗೊಳ್ಳಲು ನಿದಾನವಾಯಿತು.

**ಶ್ರಮಜೀವಿಗಳ ವರ್ಗ**

ಕಬ್ಬಿಣ, ಕಲ್ಲಿದ್ದಲು, ಹತ್ತಿ ಮತ್ತು ಹಡಗುಗಳ ಕೈಗಾರಿಕೆಗಳು ಹೆಚ್ಚಿದಂತೆ ಸಾಮ್ರಾಜ್ಯವೂ ವಿಸ್ತಾರವಾದುದರಿಂದ ಬ್ರಿಟಿಷರ ಐಶ್ವರ್ಯ ಈ ಶತಮಾನದಲ್ಲಿ ಅತಿಶಯವಾಯಿತು. ಧನವಂತರಾದವರು ತಮ್ಮ ಬಂಡವಾಳವನ್ನು ಬಡ್ಡಿಗೆಕೊಟ್ಟೋ ವ್ಯಾಪಾರದಲ್ಲಿ ಇಟ್ಟೋ ಸಂಪಾದನೆ ಹೆಚ್ಚಿಸಿಕೊಳ್ಳುತ್ತಲೇ ಇರಬೇಕು. ಬ್ರಿಟಿಷರು ಐಶ್ವರ್ಯವಂತರಾಗುತ್ತ ತಮ್ಮ ಸಂಪಾದನೆಯನ್ನು ಬಂಡವಾಳವಾಗಿಟ್ಟು ಹೊಸ ಕೈಗಾರಿಕೆಗಳಲ್ಲಿಯೂ ತೊಡಗಿದರು, ಇತರರಿಗೆ ಸಾಲ ಕೊಟ್ಟು ಬಡ್ಡಿಯ ಸಂಪಾದನೆಗೂ

**ಆರ್ಥಿಕ ಸಾಮ್ರಾಜ್ಯ**

ತೊಡಗಿದರು. ಪೃಥ್ವಿಯ ನಾನಾ ದೇಶಗಳು ವಶವಾದಂತೆ ಬ್ರಿಟಿಷರ ಕಂಪನಿಗಳು ಆ ದೇಶಗಳಲ್ಲಿ ಮಾರ್ಗಸೌಕರ್ಯಗಳನ್ನೂ ಕೈಗಾರಿಕೆಗಳನ್ನೂ ತಮ್ಮ ಬಂಡವಾಳದಿಂದ ಕಟ್ಟಿ ಲಾಭಪಡೆದವು. ಈಜಿಪ್ಟಿನಲ್ಲಿ ಸಾಲಕೊಟ್ಟಂತೆ ಇತರ ದೇಶಗಳಲ್ಲಿಯೂ ಸಾಲ ಕೊಟ್ಟರು. ಲಂಡನ್ ನಗರವು ಒಟ್ಟು ಪೃಥ್ವಿಗೆ ಹಣದ ಪೇಟೆಯಾಗಿ ಪರಿಣಮಿಸಿತ್ತು. ಶತಮಾನದ ಅಂತ್ಯದಲ್ಲಿ ಅಮೆರಿಕನರೂ ಇದೇರೀತಿ ವರ್ತಿಸಿದರು. ಸಾಮ್ರಾಜ್ಯ ಕಟ್ಟಿಕೊಂಡವರಿಗೆಲ್ಲರಿಗೂ ಇದು ಮೇಲ್ಪಙ್ತಿಯಾಯಿತು.

ಮತಭೇದಗಳು ತೊಲಗಿದಂತೆ ಶಾಸನಗಳ ವೃತ್ತಾಂತದಿಂದ ಕಾಣುವುದು. 1829ರಲ್ಲಿ ಕ್ಯಾಥಲಿಕ್ಕರನ್ನು ತಿರಸ್ಕರಿಸುತ್ತಿದ್ದ ಪದ್ಧತಿಯೇನೋ ಆಡಳಿತದಲ್ಲಿ ಮಾಯ ವಾಯಿತು. ಆದರೆ ಬ್ರಿಟನ್ನಿನಲ್ಲಿ ಇತರ ಶಾಖೆಗಳು ಈ ಶತಮಾನದಲ್ಲಿ ಹುಟ್ಟಿ ಕೊಂಡು ಬಲಿಷ್ಠವಾದವು. ಆ ಶಾಖೆಗಳ ಭೇದಾಭೇದಗಳು ನಮಗೆ ಮುಖ್ಯವಲ್ಲ. ಹದಿನೆಂಟನೆ ಶತಮಾನಾಂತದಲ್ಲಿ ವೆಸ್ಲಿ ಸ್ಥಾಪಿಸಿದ ಮೆಥಡಿಸ್ಟ್ ಎಂಬ ಪಂಥವಲ್ಲದೆ **ಇವ್ಯಾಂಜೆಲಿಕಲ್** (Evangelical) ಪಂಥವೆಂಬುದೂ ತೋರಿತ್ತು. ಹತ್ತೊಂಭತ್ತನೆ ಶತಮಾನದಲ್ಲಿ ಇತರ ಪಂಥಗಳೂ ತೋರಿದವು. ಎಲ್ಲ ಪಂಥಗಳವರೂ ಪ್ರಚಾರಕಾರ್ಯವನ್ನು ಇಟ್ಟುಕೊಂಡರು. ಸಾಮ್ರಾಜ್ಯವಿಸ್ತಾರವಾದಹಾಗೆ ಅಧೀನದೇಶಗಳ ನಿವಾಸಿಗಳಲ್ಲಿ ತಮ್ಮ ಮತಪ್ರಚಾರ ಮಾಡಲು ಒಂದೊಂದು ಶಾಖೆಯವರೂ ಪ್ರಚಾರಸಂಘಗಳನ್ನು ಅಥವಾ ಮಿಷನೆರಿಸಂಘಗಳನ್ನು ಕಟ್ಟಿ ಪ್ರಚಾರಕರನ್ನು ಕೊಟ್ಟು ಕಳುಹಿಸಿದರು. ಮಿಷನೆರಿ ಸಂಘಗಳವರು ಬ್ರಿಟಿಷ್‌ಸಾಮ್ರಾಜ್ಯದ ವಿಭಾಗಗಳಲ್ಲಿ ಆಸ್ಪತ್ರೆಗಳನ್ನೂ ಶಾಲೆಗಳನ್ನೂ ಅಲ್ಲದೆ ಕೈಗಾರಿಕೆಗಳನ್ನೂ ಸ್ಥಾಪಿಸಿದರು. ಬ್ರಿಟನ್ನಿನಲ್ಲಿಯೇ **ಹೈಚರ್ಚ್** (High-Church) **ಲೋಚರ್ಚ್** (Low-Church) ಮತ್ತು **ಬ್ರಾಡ್‌ಚರ್ಚ್** (Broad-Church) ಗಳೆಂಬ ಶಾಖೆಗಳಲ್ಲದೆ 1830 ರ ತರುವಾಯ ರೋಮನ್‌ಕ್ಯಾಥಲಿಕ್ ಶಾಖೆಯ ಚರ್ಚುಗಳೂ ವೃದ್ಧಿಗೊಂಡವು.

**ಮತಪ್ರಚಾರಕ ಸಂಘಗಳು**

ಹತ್ತೊಂಭತ್ತನೆಯ ಶತಮಾನದಲ್ಲಿ ಬ್ರಿಟಿಷ್‌ಸಾಮ್ರಾಜ್ಯವು ಅತಿವಿಸ್ತಾರವಾಗಿ ಹರಡಿದುದು ದೊಡ್ಡ ಸಂಗತಿ. ಆ ಸಾಮ್ರಾಜ್ಯದ ವಿಭಾಗಗಳಲ್ಲಿ ಬೇರೆಬೇರೆ ವರ್ಗಗಳು ವಿಂಗಡವಾದವು. ಕನಡ, ನ್ಯೂಫೌಂಡ್ಲಂಡ್, ಆಸ್ಟ್ರೇಲಿಯ, ನ್ಯೂಸೀಲಂಡ್ ಕ್ಷೇತ್ರ ಗಳಲ್ಲಿ ಬ್ರಿಟಿಷ್‌ಜಾತಿಯ ನೆಲಸುಗಾರರು ಮುಖ್ಯನಿವಾಸಿಗಳಾದರು. ದಕ್ಷಿಣ ಆಫ್ರಿಕ ದಲ್ಲಿ ಬ್ರಿಟಿಷರೂ ಬೋಯರರೂ ಅಲ್ಲದೆ ಹಿಂದುಸ್ತಾನದ ಜನರೂ ಆಫ್ರಿಕದ ಜನರೂ ಬೇರೆಬೇರೆ ಗುಂಪುಗಳಾಗಿದ್ದರು. ಬೋಯರರ ಯುದ್ಧ ಗಳಾದತರುವಾಯ ಬಿಳಿಯರು ಯಜಮಾನರಾದರು. ಇನ್ನು ಈಜಿಪ್ಟ್, ಸುಡಾನ್, ಗ್ವಿಯಾನ, ಸಿಂಹಳ ಮುಂತಾದ ಇತರ ಕ್ಷೇತ್ರಗಳಲ್ಲಿ ಬ್ರಿಟಿಷರಿಗೆ ಯಾಜಮಾನ್ಯ ದೊರಕಿದರೂ ಅಲ್ಲಿಯ ನಿವಾಸಿಗಳು ಬೇರೆ

**ವರ್ಣವೈಷಮ್ಯ**

ಗುಂಪಿನವರು . ಸಾಮ್ರಾಜ್ಯಸಂಪಾದನೆಗಾಗಿ ಬ್ರಿಟಿಷರಂತೆಯೇ ಫ್ರೆಂಚರೂ ಜರ್ಮನರೂ ಡಚ್ಚರೂ ಮುಂತಾದ ಐರೋಪ್ಯರು ಯತ್ನಿಸಿ ಖಂಡಗಳನ್ನೆಲ್ಲ ಆಕ್ರಮಿಸಿದ ತರುವಾಯ ಏಷ್ಯ ಆಫ್ರಿಕ ಖಂಡಗಳವರಿಗೂ ಐರೋಪ್ಯರಿಗೂ ಸಾಮಾಜಿಕವಾದ ವಿರೋಧಗಳು ಬರಬರುತ್ತ ಹೆಚ್ಚಿದವು. ಬಿಳಿಯ ಜನರಿಗೂ ಜಗತ್ತಿನ ಇತರ ಜನರಿಗೂ ದ್ವೇಷ ಹೆಚ್ಚಿತು. ವರ್ಣದ್ವೇಷವೆಂಬುದು ಆಡಳಿತದ ನೀತಿಯಲ್ಲಿ ಅನಿವಾರ್ಯ ಲಕ್ಷಣವಾಯಿತು .

# ವಿಂಡ್ಸರ್ ಮನೆತನ

**ವಿಕ್ಟೋರಿಯ** = ಆಲ್ಬರ್ಟ್
(1837—1901)



ವಿಕ್ಟೋರಿಯ = 3ನೆ ಫ್ರೆಡರಿಕ್
(ಜರ್ಮನ್ ಚಕ್ರವರ್ತಿ)

ಆಲ್‌ಫ್ರೆಡ್

ಆರ್ಥರ್
ಕನ್ನಾಟಿನ ಡ್ಯೂಕ್

ಲಿಯೊಪೋಲ್ಡ್
ಆಲ್ಬನಿಯ ಡ್ಯೂಕ್

**7ನೆ ಎಡ್ವರ್ಡ್**
= ಡೆನ್ಮಾರ್ಕಿನ
ಆಲೆಕ್ಸಾಂಡ್ರ
(1901–1910)

2ನೆ ವಿಲಿಯಂ
ಜರ್ಮನ್ ಚಕ್ರವರ್ತಿ



ಆಲ್ಬರ್ಟ್ ವಿಕ್ಟರ್

**5ನೆ ಜಾರ್ಜ್**
= ಮೇರಿ
(1910—1936)

ಲೂಯಿ

ವಿಕ್ಟೋರಿಯ

ಮಾಡ್



**ಎಡ್ವರ್ಡ್**
(1936)
(ವಿಂಡ್ಸರಿನ ಡ್ಯೂಕ್)

**6ನೆ ಜಾರ್ಜ್**
(1936—)

ಮೇರಿ

ಹೆನ್ರಿ
(ಗ್ಲಾಸ್ಟರ್ ಡ್ಯೂಕ್)

ಜಾರ್ಜ್
(ಕೆಂಟಿನ ಡ್ಯೂಕ್)

ಜಾನ್

ಎಲಿಸಬೆತ್ ಮೇರಿ
ರಾಜಕುಮಾರಿ

ಮಾರ್ಗರೆಟ್ ರೋಸ್
ರಾಜಕುಮಾರಿ

# ಇಪ್ಪತ್ತನೆ ಶತಮಾನ

**ಮುಖ್ಯ ವಿಭಾಗಗಳು :**

1. ಒಳಾಡಳಿತ 1901–1914
2. ಸಂಧಿವಿಗ್ರಹ 1900—1914
3. ಐರೋಪ್ಯ ಯುದ್ಧ 1914—1918
4. ಶಾಂತಿಸ್ಥಾಪನೆ, ಒಪ್ಪಂದಗಳು

## ಒಳಾಡಳಿತ (1901–1914)

ವಿಕ್ಟೋರಿಯ ತರುವಾಯ ದೊರೆಯೆನಿಸಿದ **7 ನೇ ಎಡ್ವರ್ಡ್** ಅಧಿಕಾರವಹಿಸಿದಾಗ ಅರುವತ್ತು ವರ್ಷದಾಟಿ ಅನುಭವಸ್ಥನಾಗಿದ್ದನು. ತಾಯಿಯ ಪ್ರತಿನಿಧಿಯಾಗಿ ಅನೇಕ ಸಂದರ್ಭಗಳಲ್ಲಿ ವರ್ತಿಸಿದ್ದುದಲ್ಲದೆ ಯೂರೋಪಿನಲ್ಲಿಯೂ ಇತರ ಭೂಭಾಗಗಳಲ್ಲಿಯೂ ಪ್ರಯಾಣಮಾಡಿದ್ದನು. ತಾನು ಯಾವ ಒಂದು ಪಾರ್ಟಿಯನ್ನೂ ಸೇರಿಕೊಳ್ಳದೆ ಪಾರ್ಟಿಗಳ ಪೈಪೋಟಿಗಳಲ್ಲಿ ನ್ಯಾಯುವನ್ನೂ ಸಮಾಧಾನವನ್ನೂ ಉಂಟುಮಾಡುತ್ತಿದ್ದನು. ಅನ್ಯರಾಷ್ಟ್ರಗಳ ಪ್ರಭುಗಳೊಂದಿಗೆ ಸ್ನೇಹವನ್ನು ನಡೆಸುತ್ತ ಶಾಂತಿಯನ್ನು ಕಾಪಾಡಿದನು. ಪಟ್ಟಕ್ಕೆ ಬಂದಾಗ ವಾರ್ಧಿಕ್ಯದಲ್ಲಿಯೇ ಇದ್ದಾತನು 1910 ರವರೆಗೆ ಮಾತ್ರ ಆಳಿ ತೀರಿಕೊಂಡನು. ಆತನ ತರುವಾಯ ಪಟ್ಟವನ್ನೇರಿದ **ಐದನೆ ಜಾರ್ಜ್** ನಾವಿಕತನದಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿದ್ದನು. ಬ್ರಿಟಿಷ್ ಸಾಮ್ರಾಜ್ಯದ ಭಾಗಗಳೆಲ್ಲವನ್ನೂ ಸ್ವಂತವಾಗಿ ಕಂಡು ಜನರ ಭಕ್ತಿಗೆ ಪಾತ್ರನಾಗಿದ್ದನು. ಆಡಳಿತದ ಅಂಶಗಳನ್ನು ವ್ಯಾಸಂಗಮಾಡಿ ತಿಳಿದುಕೊಂಡು ವೈಪರೀತ್ಯಗಳಾಗದಂತೆ ಹೆಚ್ಚು ಶ್ರಮಪಡುತ್ತಿದ್ದನು. ಇಬ್ಬರು ದೊರೆಗಳೂ ತಮ್ಮ ಶ್ರೇಷ್ಠ ಪದವಿಯ ಗೌರವವನ್ನು ಕೀರ್ತಿದಾಯಕವಾಗಿ ಕಾಪಾಡಿದರು.

**ದೊರೆಗಳು**

ಗ್ಲಾಡ್‌ಸ್ಟನ್ ಮಂತ್ರಿಯು ನಿರೂಪಿಸಿದ ಐರಿಷ್ ಹೋಂ ರೂಲ್ ಮಸೂದೆಯನ್ನು ಲಿಬರಲ್ ಪಾರ್ಟಿಯಲ್ಲಿಯೇ ಅನೇಕರು ವಿರೋಧಿಸಿದ್ದರಷ್ಟೆ. ಯೂನಿಯನಿಸ್ಟ್ ಎಂಬ ಹೆಸರನ್ನಿಟ್ಟುಕೊಂಡ ಆ ಪಂಗಡದವರು ಕನ್ಸರ್ವೆಟಿವ್ ಪಾರ್ಟಿಯ ಜೊತೆ ಸೇರಿಕೊಂಡಿದ್ದರು. 1895ರಲ್ಲಿ **ಸಾಲ್ಸ್‌ಬೆರಿ ಶ್ರೀಮಂತ**ನ ನಾಯಕತ್ವದಲ್ಲಿ ಮೊದಲಾದ ಮಂತ್ರಿಕೂಟವು ವಿಕ್ಟೋರಿಯರಾಣಿ ತೀರಿಕೊಂಡಾಗಲೂ ಏಳನೆ ಎಡ್ವರ್ಡ್ ಪಟ್ಟವೇರಿದಾಗಲೂ ಅಧಿಕಾರದಲ್ಲಿತ್ತು. 1902ರಲ್ಲಿ ಬೋಯರ್ ಯುದ್ಧವು ಮುಗಿದ ವೇಳೆಗೆ ಸಾಲ್ಸ್‌ಬೆರಿ ಶ್ರೀಮಂತನು ದೇಹದೌರ್ಬಲ್ಯದಿಂದ ನಿವೃತ್ತನಾಗಿ ಸ್ವಲ್ಪ ಕಾಲದಲ್ಲಿಯೇ ತೀರಿಕೊಂಡನು. **ಬಾಲ್‌ಫೋರ್** (Balfour) ಎಂಬಾತನು

**ಕನ್ಸರ್ವೆಟಿವ್ + ಯೂನಿಯನಿಸ್ಟ್**

ಪ್ರಧಾನನಾಗಿ ಕನ್ಸರ್ವೇಟಿವ್ + ಯೂನಿಯನಿಸ್ಟ್ ಮಂತ್ರಿಮಂಡಲಿಯನ್ನು 1906ರ ವರೆಗೆ ನಡೆಸಿದನು.

ಕನ್ಸರ್ವೇಟಿವ್ ಪಾರ್ಟಿಗೆ ನಾಯಕನಾದ ಬಾಲ್‌ಫೋರ್ ಒಳ್ಳೆವಿದ್ವಾಂಸನಾಗಿದ್ದನು. ತನ್ನ ಅಭಿಮತವೇನೆಂಬುದನ್ನು ನಿಶ್ಚಯರೂಪದಲ್ಲಿ ಪ್ರಕಟಿಸಿ ವಾದ ಪ್ರತಿವಾದಗಳಲ್ಲಿ ಸಿಕ್ಕಿಕೊಳ್ಳದೆ ಯೂನಿಯನಿಸ್ಟರನ್ನೂ ಕನ್ಸರ್ವೇಟಿವ್‌ಗಳನ್ನೂ ಒಂದು ನೊಗಕ್ಕೆ ಕಟ್ಟಿ ತಳ್ಳಿದನು. ಆತನಿಗೆ ಬೆಂಬಲಕೊಟ್ಟವರಲ್ಲಿಯೇ ಅನೇಕ ಪಂಗಡಗಳು ಪರಸ್ಪರವಿರೋಧಿಗಳಾಗಿ ತೋರಿಕೊಂಡವು. 1902ರಲ್ಲಿ **ಶಿಕ್ಷಣ** ಸಂಬಂಧವಾದ ಒಂದು ಕಾನೂನು ನಡೆಯಿತು. ಪ್ರಾಥಮಿಕ ಶಿಕ್ಷಣದ ಆಡಳಿತವನ್ನು ಸುವ್ಯವಸ್ಥೆಗೊಳಿಸಲು ಜಿಲ್ಲಾಸಭೆಗಳಿಗೊಪ್ಪಿಸಲಾಯಿತು. ನಾನ್ ಕನ್ಫಾರ್ಮಿಸ್ಟ್ ಮತಶಾಖೆಯವರು ತಾವು ಕೊಟ್ಟ ತೆರಿಗೆ ಹಣದಿಂದ ಅನ್ಯಶಾಖೆಗಳವರ ಶಾಲೆಗಳಿಗಾಗಿ ಜಿಲ್ಲಾಸಭೆಗಳ ಮೂಲಕ ವೆಚ್ಚವಾಗುವುದನ್ನೊಪ್ಪಲಾರದೆ ಅಸಹಕಾರವನ್ನು ಪ್ರಾರಂಭಿಸಿದರು. ಲಿಬರಲ್ ಪಕ್ಷದವರಿಗೂ ನಾನ್‌ಕನ್ಫಾರ್ಮಿಸ್ಟ್ ಶಾಖೆಯವರಿಗೂ ಹಿಂದಿನಿಂದ ಮೈತ್ರಿಯಿದ್ದುದರಿಂದ ಆ ಕಾನೂನಿಗೆ ಲಿಬರಲ್‌ಪಕ್ಷದವರೂ ವಿರೋಧ ತೋರಿದರು. **ಮದ್ಯದ** ಅಂಗಡಿಗಳ ಸಂಬಂಧವಾಗಿ ನಡೆದ ಮತ್ತೊಂದು ಕಾನೂನಿಗೂ ಕೆಲವರು ವಿರೋಧಿಗಳಾದರು. ಬಾಲ್‌ಫೋರ್ ಮಂತ್ರಿಮಂಡಲಿಯವರು ಯಾವ ಕಾನೂನನ್ನು ನಡೆಸಿದರೂ ವಿರೋಧತೋರುವ ಗುಂಪುಗಳು ಹಲಕೆಲವಾದರೂ ಸಿದ್ಧವಾಗುವಂತಿತ್ತು. ಆದರೆ ಪಾರ್ಟಿಗಳ ಬೆನ್ನು ಮುರಿದಂತೆ ನಡೆದುದು ಬೇರೊಂದು ಸಂದರ್ಭದಲ್ಲಿ. ಗ್ಲಾಡ್‌ಸ್ಟನ್ನನ ಅನುಯಾಯಿಯಾಗಿದ್ದು ಐರ್ಲಂಡಿನ ವಿಚಾರದಲ್ಲಿ ಭಿನ್ನಾಭಿಪ್ರಾಯಪಟ್ಟು ಬೇರೆಯಾದ **ಜೋಸೆಫ್ ಚೇಂಬರ್ಲೇನ್** ಅದಕ್ಕೆ ಕಾರಣಕರ್ತನಾದನು.

**ಶಾಸನಗಳಲ್ಲಿ ಅತೃಪ್ತಿ**

ಧಾನ್ಯದ ಕಾನೂನು ರದ್ದಾದ ಕಾಲದಿಂದ ಬ್ರಿಟಿಷರು ನಿರಾತಂಕವ್ಯಾಪಾರ (Free Trade)ದ ಸೂತ್ರಗಳನ್ನು ಹಿಡಿದಿದ್ದರು. ಅದರಿಂದ ಬ್ರಿಟಿಷರ ಕೈಗಾರಿಕೆ ವ್ಯಾಪಾರಗಳು ಅಭಿವೃದ್ಧಿಗೊಂಡು ಐಶ್ವರ್ಯ ಹೆಚ್ಚಿದಂತೆ ಕಾಣುತ್ತಿತ್ತು. ಹತ್ತೊಂಭತ್ತನೆ ಶತಮಾನದಲ್ಲೆಲ್ಲ ಬ್ರಿಟಿಷರು ಜಗತ್ತಿನಲ್ಲಿ ಅಗ್ರಗಣ್ಯರಾಗಿದ್ದರು. ಶತಮಾನದ ಕಡೆಕಡೆಗೆ ಇತರರಾಷ್ಟ್ರಗಳವರು ಬ್ರಿಟಿಷರೊಡನೆ **ಪೋಟಾಪೋಟಿಗೆ** ತೊಡಗಿದ್ದರು. ಅನ್ಯರಾಷ್ಟ್ರಗಳು ಮಾತ್ರವಲ್ಲದೆ ಡುಮಿನಿಯನ್ನುಗಳೂ ತಮ್ಮ ಸ್ವಂತ ಕೈಗಾರಿಕೆ ವ್ಯಾಪಾರಗಳು ಅಭಿವೃದ್ಧಿಗೊಳ್ಳಬೇಕೆಂದು ಆಸೆ ಬೆಳೆಸಿ ಪರದೇಶೀ ವಸ್ತುಗಳ ವ್ಯಾಪಾರದಲ್ಲಿ ಸುಂಕಗಳನ್ನು ಗೊತ್ತುಮಾಡಿದರು. ಜಗತ್ತೆಲ್ಲ ಒಂದಾಗಿ ಜಗತ್ತಿಗೆ ಕಾರ್ಖಾನೆಯೆನಿಸಿದ ಬ್ರಿಟನ್ನಿಗೆ ಇತರ ದೇಶಗಳು ನಿರಾತಂಕವಾಗಿ ಸಾಮಗ್ರಿಕೊಟ್ಟುಕಳುಹಿಸಿ

**ಶುಲ್ಕಾರೋಪವಾದ**

ಬ್ರಿಟನ್ನಿನ ಕೈಗಾರಿಕೆ ಸರಕನ್ನು ನಿರಾತಂಕವಾಗಿ ತರಿಸಿಕೊಳ್ಳುವರೆಂಬುದು ಕನಸಾಯಿತು. ಇತರ ದೇಶಗಳು ಬ್ರಿಟನ್ನಿನಂತೆಯೇ ಐಶ್ವರ್ಯಪಡೆಯಲು ಸ್ಪರ್ಧಿಸುತ್ತಿದ್ದವು. ಬ್ರಿಟನ್ನಿನಲ್ಲಿ ವ್ಯವಸಾಯವು ಕ್ಷೀಣವಾಗುತ್ತಲೂ ಇತ್ತು. ಡುಮಿನಿಯನ್ನುಗಳೂ ಕಾಲೊನಿಗಳೂ ಸ್ವಂತ ಅಭಿವೃದ್ಧಿಯ ದೃಷ್ಟಿಯನ್ನು ಸಹಜವಾಗಿ ಬೆಳೆಸಿಕೊಂಡವು. ಕಾಲಕ್ರಮದಲ್ಲಿ ಡುಮಿನಿಯನ್ನುಗಳೂ ಕಾಲೊನಿಗಳೂ ಬ್ರಿಟನ್ನಿನಿಂದ ಪ್ರತ್ಯೇಕವಾಗಿಬಿಡುವ ಶಂಕೆಯೂ ತೋರಿತು. ಇಂತಹ ಪರಿಸ್ಥಿತಿಯಲ್ಲಿ ಜೋಸೆಫ್ ಚೇಂಬರ್ಲೇನ್ ದೊಡ್ಡದಾದ ವಾದವೊಂದನ್ನು ಮೊದಲಿಟ್ಟು ಅದನ್ನು ಪ್ರಚಂಡರೀತಿಯಲ್ಲಿ ಪ್ರಚುರಪಡಿಸಲು 1903ರಲ್ಲಿ ತನ್ನ ಮಂತ್ರಿತನದಿಂದ ನಿವೃತ್ತನಾದನು. ಆತನ ವಾದದಲ್ಲಿ ಮುಖ್ಯಾಂಶಗಳು:

(1) ನಿರಾತಂಕವ್ಯಾಪಾರನೀತಿಯೆಂಬುದು ಹಿಂದಿನ ಕಾಲಕ್ಕೊಪ್ಪಿರಬಹುದಾದರೂ ದೇಶವಿದೇಶಗಳು ಕೈಗಾರಿಕೆವ್ಯಾಪಾರಗಳಿಗಾಗಿ ಸ್ಪರ್ಧಿಸುವ ಕಾಲದಲ್ಲಿ ಒಪ್ಪುವುದಿಲ್ಲ. ಬ್ರಿಟನ್ನಿನ ಐಶ್ವರ್ಯವೃದ್ಧಿಯಾದುದಕ್ಕೆ ಎಲ್ಲ ದೇಶಗಳಿಂಗಿತಲೂ ಮೊದಲು ಬ್ರಿಟನ್ ಕೈಗಾರಿಕೆ ಕಾರ್ಖಾನೆಗಳನ್ನು ಸ್ಥಾಪಿಸಿಕೊಂಡ ಅಂಶವು ಕಾರಣವೇ ವಿನಾ ನಿರಾತಂಕವ್ಯಾಪಾರದ ನೀತಿಯಲ್ಲ. ಪೋಟಾಪೋಟಿ ದಿನೇದಿನೇ ಹೆಚ್ಚುತ್ತಿದ್ದ ಕಾಲವಾದುದರಿಂದ ಬ್ರಿಟನ್ನಿನಲ್ಲಿಯೂ ಸುಂಕಗಳು ಗೊತ್ತಾಗಬೇಕು.

(2) ಪೃಥ್ವಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯವೆಂಬುದು ಒಂದು ಬಂಧವಾಗಿರಬೇಕಾದುದು ಅವಶ್ಯ. ಕೈಗಾರಿಕೆ ವ್ಯಾಪಾರಗಳಲ್ಲಿ ಡುಮಿನಿಯನ್ನುಗಳಿಗೂ ಬ್ರಿಟನ್ನಿಗೂ ಪೋಟಾಪೋಟಿ ರೇಗುತ್ತಹೋದರೆ ಸಾಮ್ರಾಜ್ಯವೆಂಬುದು ಭಗ್ನವಾದೀತು. ಆದ್ದರಿಂದ ಬ್ರಿಟನ್ನಿಗೂ ಸಾಮ್ರಾಜ್ಯದ ವಿಭಾಗಗಳಿಗೂ ನಡೆಯುವ ವ್ಯಾಪಾರದಲ್ಲಿ ಪರಸ್ಪರವಾದ ಆಪ್ತತೆ ಬೆಳೆಯಬೇಕು; ಪರಸ್ಪರವಾಗಿ ಪಕ್ಷಪಾತವನ್ನು ಕಟ್ಟಬೇಕು. ಬ್ರಿಟಿಷ್ ಸಾಮ್ರಾಜ್ಯದ ಎಲ್ಲ ವಿಭಾಗಗಳಲ್ಲಿಯೂ ಸಾಮ್ರಾಜ್ಯದ ವಸ್ತುಸಾಮಗ್ರಿಗಳಿಗೆ ಪಕ್ಷಪಾತ ನೆಲೆಸುವಂತೆ ಸುಂಕಗಳ ನಿಷ್ಕರ್ಷೆಯಾಗತಕ್ಕದ್ದು.

ಈ ರೀತಿ **ಶುಲ್ಕ ಸಂಸ್ಕಾರ** (Tariff Reform) ಮತ್ತು **ಸಾಮ್ರಾಜ್ಯ ಪಕ್ಷಪಾತ** (Imperial Preference) ಎಂಬ ತತ್ತ್ವಗಳನ್ನೊಳಗೊಂಡ ವಾದವನ್ನು ಜೋಸೆಫ್ ಚೇಂಬರ್ಲೇನ್ ಮೊದಲಿಟ್ಟಾಗ ಯೂನಿಯನಿಸ್ಟ್ ಸಂಗಡದಲ್ಲಿಯೇ ಒಡಕು ಹುಟ್ಟಿತು. ಕೆಲವರು ಪೂರ್ವಪಕ್ಷ; ಅನೇಕರು ಪ್ರತಿಪಕ್ಷ. ಸುಂಕಗಳು ಗೊತ್ತಾದರೆ ಆಹಾರ ಪದಾರ್ಥಗಳ ಬೆಲೆಯೇರುವುದೆಂದೂ ಬಹುಭಾಗದ ಜನರಿಗೆ ಸಾಕಾದಷ್ಟು ಆಹಾರ ದೊರಕದೆ ಹೋಗುವುದೆಂದೂ ಪ್ರತಿವಾದಿಗಳು ಪ್ರಬಲಿ

ಸಿದರು. 1905ರಲ್ಲಿ ಈ ವಾದ ಪ್ರತಿವಾದಗಳ ಬಿರುಸಿನಲ್ಲಿ ಪ್ರಧಾನ ಬಾಲ್‌ಫೋರ್ ತನ್ನ ಮಂತ್ರಿಮಂಡಲಿಯನ್ನುಳಿಸಿಕೊಳ್ಳಲಾರದೆ ರಾಜಿನಾಮೆಕೊಟ್ಟನು. ಲಿಬರಲ್ ಪಕ್ಷದವರು ಅಧಿಕಾರವನ್ನು ಸ್ವೀಕರಿಸಿಕೊಂಡರು. ಕನ್ಸರ್ವೆಟಿವ್ ಪಕ್ಷದವರು ದುರ್ಬಲರಾದರು.

ಲಿಬರಲ್ ಪಕ್ಷದವರು 1905ರಲ್ಲಿ ಮಂತ್ರಿಗಳಾಗಿ ಹೊಸ ಚುನಾವಣೆಗಳನ್ನು ನಡೆಸಿದರು. ಫಲಿತಾಂಶವಾಗಿ ಲಿಬರಲ್ ಪಕ್ಷವೇ ಬಲಿಷ್ಠ ಪಕ್ಷವಾಯಿತು. ಹೋಂ ರೂಲ್ ಆಸೆಯಿಂದಿದ್ದ ಐರಿಷ್ ಗುಂಪಿನವರು ಅವರನ್ನೇ ಆಶ್ರಯಿಸಿದರು. ಲೇಬರ್ ಪಾರ್ಟಿಯೆಂದು ಮೆಲ್ಲಮೆಲ್ಲಗೆ ತಲೆಯೆತ್ತುತ್ತಿದ್ದ ಕೂಲಿಗಾರ ವರ್ಗದ ಪ್ರತಿನಿಧಿಗಳೂ ಲಿಬರಲ್ ಪಕ್ಷಕ್ಕೆ ಬೆಂಬಲಕೊಟ್ಟರು. 1905ರಲ್ಲಿ ಅಧಿಕಾರಕ್ಕೆ ಬಂದ ಲಿಬರಲ್ ಪಕ್ಷಕ್ಕೆ 1915 ರವರೆಗೆ ಚ್ಯುತಿಯಿಲ್ಲದೆ ನಡೆಯಿತು. 1905ರಿಂದ 1908 ರವರೆಗೆ **ಕ್ಯಾಂಬೆಲ್ ಬಾನರ್ಮನ್** (Campbell-Bannerman) ಎಂಬಾತನೂ ಆ ತರುವಾಯ **ಆಸ್ಕ್ವಿತ್** (Asquith) ಎಂಬಾತನೂ ನಾಯಕರು. ಇವರಲ್ಲದೆ **ಮೋರ್ಲೆ** (Morley), **ಸರ್ ಎಡ್ವರ್ಡ್ ಗ್ರೇ** (Sir Edward Grey) **ಹಾಲ್ಡೇನ್** (Haldane) **ಲಾಯ್ಡ್ ಜಾರ್ಜ್** (Lloyd George), **ವಿನ್ಸ್ಟನ್ ಚರ್ಚಿಲ್** (Winston Churchill) ಎಂಬ ಪ್ರಸಿದ್ಧರೂ ಪಾರ್ಟಿನಾಯಕರಾಗಿದ್ದರು. ಅವರಲ್ಲಿ ಸಾಮ್ರಾಜ್ಯವಾದಿಗಳಾಗಿ ಬ್ರಿಟನ್ನಿನ ಯುದ್ಧಸನ್ನಾಹವು ಹೆಚ್ಚುತ್ತಿರಬೇಕೆಂದವರೂ ಇದ್ದರು, ಶಾಂತಿ ಸಂಧಾನಗಳೇ ಪರಮ ಕರ್ತವ್ಯವೆಂದವರೂ ಇದ್ದರು. ಐರ್ಲಂಡಿನ ವಿಷಯದಲ್ಲಿ ಲಿಬರಲ್ ಪಕ್ಷದ ಅನೇಕರಿಗೆ ಹೋಂ ರೂಲ್ ಶಾಸನ ಮಾಡಿಸುವ ಇಷ್ಟವಿತ್ತು. 1906ರಲ್ಲಿ ತೀರಿಕೊಂಡ ಜೋಸೆಫ್ ಚೇಂಬರ್ಲೇನನ ಶುಲ್ಕಸಂಸ್ಕಾರದ ಗಡಿಬಿಡಿಯಲ್ಲಿ ಯೂನಿಯನಿಸ್ಟ್ ಪಂಗಡವೆಂಬುದು ಒಡೆದು ಹೋಗಿತ್ತು. ಆದ್ದರಿಂದ ಹೋಂ ರೂಲ್ ಪ್ರಸ್ತಾಪಕ್ಕೆ ವಿರೋಧವು ಪ್ರಬಲವಾಗಿದ್ದುದು ಯೂನಿಯನಿಸ್ಟ್ ಪಂಗಡದಲ್ಲಲ್ಲ, ಕನ್ಸರ್ವೆಟಿವ್ ಗುಂಪಿನಲ್ಲಿ. ಆ ಗುಂಪಿನವರಿಗೆ ಶ್ರೀಮಂತಸಭೆಯೆಂಬುದು ಕೋಟೆಯಂತಿತ್ತು.

ಲಿಬರಲ್ ಪಕ್ಷದವರು ಧನವಂತರಿಂದ ಹೆಚ್ಚಾಗಿ ತೆರಿಗೆಯೆತ್ತಿ ಸಾಮಾನ್ಯವರ್ಗದವರಿಗೆ ಅನುಕೂಲ ಮಾಡಿಕೊಡುವ ಇಷ್ಟವುಳ್ಳವರಾಗಿದ್ದರು. ಶ್ರೀಮಂತ ಸಭೆಯವರು ಅಂತಹ ಏರ್ಪಾಟುಗಳಿಗೆ ಸದಾ ವಿರೋಧವನ್ನೇ ಒಡ್ಡುತಲಿದ್ದರು. ಆದ್ದರಿಂದ ಲಿಬರಲ್ ಪಾರ್ಟಿಯ ಮಂತ್ರಿಮಂಡಲಿಯವರು ಶ್ರೀಮಂತಸಭೆಗೆ ಸಂಸ್ಕಾರವಾಗಬೇಕೆಂದು ಹೇಳಲಾರಂಭಿಸಿದರು. ಆಯವ್ಯಯದ ಪಟ್ಟಿ ಅಥವಾ ಬಡ್ಜೆಟ್ ಎಂಬುದನ್ನು ಶ್ರೀಮಂತ ಸಭೆಯವರು ತಿದ್ದುವುದೂ ತಿರಸ್ಕರಿಸುವುದೂ

**ಲಿಬರಲ್ ಮಂತ್ರಿಮಂಡಲಿ**

**ಹೊಸ ಬಗೆಯ ತೆರಿಗೆ**

ಸಂಪ್ರದಾಯದಲ್ಲಿರಲಿಲ್ಲ. 1909ರಲ್ಲಿ ಬೊಕ್ಕಸದ ಮಂತ್ರಿ **ಲಾಯ್ಡ್ ಜಾರ್ಜ್ ಹೊಸ** ರೀತಿಯಲ್ಲಿ ಬಡ್ಜೆಟ್ ತಯಾರಿಸಿದನು. ಜರ್ಮನಿಯೊಡನೆ ಪೈಪೋಟಿಯಲ್ಲಿ ಯುದ್ಧದ ಹಡಗುಗಳನ್ನು ಕಟ್ಟಿಸಲು ಹೆಚ್ಚು ಹಣಬೇಕಾಗಿತ್ತು. ಇನ್ಷ್ಯೂರೆನ್ಸ್ ಮುಂತಾದ ಅವಶ್ಯವಾದ ಹೊಸ ಏರ್ಪಾಟುಗಳಿಗೂ ಹಣ ಬೇಕಾಗಿತ್ತು. ಆದ್ದರಿಂದ ಲಾಯ್ಡ್ ಜಾರ್ಜ್ ಹೊಸ ತೆರಿಗೆಗಳನ್ನು ಸೂಚಿಸಿ ಧನವಂತರಮೇಲೆಯೇ ಬೀಳುವ ತೆರಿಗೆಗಳನ್ನು ಗೊತ್ತುಮಾಡಿದನು. ಆಸ್ತಿವಂತತಂದೆಸತ್ತು ಮಗನಿಗೆ ಆ ಆಸ್ತಿ ಬರುವಾಗ ತೆರಿಗೆ, ವರ್ಷಕ್ಕೆ £ 5000 ಕ್ಕಿಂತ ಹೆಚ್ಚು ವರಮಾನವಿದ್ದವರಿಗೊಂದು ಹೆಚ್ಚು ತೆರಿಗೆ, ಅತಿಯಾಗಿ ಬೆಲೆಯೇರಿದ ಭೂಮಿ ಕೈಕೈ ಬದಲಾದಾಗ ತೆರಿಗೆ—ಈ ರೀತಿ ಧನಾಢ್ಯರಿಂದ ಮಾತ್ರವೇ ತೆರಿಗೆಯೆತ್ತುವ ಏರ್ಪಾಟನ್ನು ಸಭೆ ಮುಂದಿಟ್ಟನು. ಶ್ರೀಮಂತ ಸಭೆಯವರು ಒರಟುತನದಿಂದ ಆ ಬಡ್ಜೆಟ್ಟನ್ನು ತಿರಸ್ಕರಿಸಿದರು. ಆಗ ದೇಶದಲ್ಲಿ ಗೊಂದಲ ತೋರಿತು. ಮಂತ್ರಿಮಂಡಲಿಯವರು ಹೊಸ ಚುನಾವಣೆ ನಡೆಸಿ ಮತ್ತೆ ತಾವೇ ಮಂತ್ರಿಗಳಾಗಿ ಶ್ರೀಮಂತ ಸಭೆಯ ಅಧಿಕಾರವನ್ನು ಕತ್ತರಿಸುವ ಕಾನೂನನ್ನು ಒಡ್ಡಿದರು. 1910ರಲ್ಲಿ ಹೊಸ ದೊರೆಯೆನಿಸಿದ ಐದನೆ ಜಾರ್ಜ್ ಸಾಕಾದಷ್ಟು ಹೊಸ ಶ್ರೀಮಂತರನ್ನು ಗೊತ್ತು ಮಾಡುವುದಾಗಿ ಬೆದರಿಸಿದ ತರುವಾಯ ಶ್ರೀಮಂತ ಸಭೆಯವರು ಆ ಕಾನೂನಿಗೊಪ್ಪಿದರು. **ವೀಟೊ ಆಕ್ಟ್**(Veto Act) ಎಂದು ಹೆಸರಾದ ಆ ಕಾನೂನಿಂದ ಶ್ರೀಮಂತಸಭೆಯವರಿಗೆ ಹಣಸಂಬಂಧವಾದ ಮಸೂದೆಗಳನ್ನು ತಿರಸ್ಕರಿಸುವ ಅಧಿಕಾರವಿಲ್ಲವೆಂದು ನಿರ್ಧರವಾದುದಲ್ಲದೆ ಇತರ ಮಸೂದೆಗಳನ್ನು ಎರಡು ವರ್ಷಕ್ಕಿಂತ ಹೆಚ್ಚು ಕಾಲ ತಡೆದಿಡುವ ಅಧಿಕಾರವೂ ಇಲ್ಲವಾಯಿತು. ನಿರಂತರವಾಗಿ ಮೂರು ಸೆಷನ್ನುಗಳಲ್ಲಿ ಕಾಮನ್ಸ್ ಸಭೆಯವರು ಒಪ್ಪಿಕೊಂಡ ಮಸೂದೆಯು ಕಾನೂನಾಗತಕ್ಕುದೆಂದು ಗೊತ್ತಾಯಿತು. ಶ್ರೀಮಂತ ಸಭೆಯ ಅಧಿಕಾರನಾಶವಲ್ಲದೆ ಈ ಕಾನೂನಿನಿಂದ ಮತ್ತೊಂದಂಶವೂ ಸಿಷ್ಕರ್ಷೆಯಾಯಿತು. ಒಂದು ಬಾರಿ ಚುನಾವಣೆಯಾದ ಪಾರ್ಲಿಮೆಂಟ್ ಸಭೆಯು ಐದು ವರ್ಷಗಳಿಗಿಂತ ಹೆಚ್ಚು ಕಾಲ ಇರಕೂಡದಾಯಿತು. ಅಂದರೆ ಸಾರ್ವತ್ರಿಕ ಚುನಾವಣೆಗಳು ಐದು ವರ್ಷಗಳಿಗೊಮ್ಮೆಯಾದರೂ ನಡೆಯಲೇ ಬೇಕಾಯಿತು. ಕಾಮನ್ಸ್ ಸಭಿಕರಿಗೆ ವಾರ್ಷಿಕವಾಗಿ £ 400 ಸಂಬಳವೂ ಗೊತ್ತಾಯಿತು.

**ಶ್ರೀಮಂತ ಸಭೆಯ ದಮನ 1911**

ಕಾಮನ್ಸ್ ಸಭೆಯು ಅಧಿಕಾರಪ್ರಾಬಲ್ಯಗಳನ್ನು ಈ ರೀತಿ ಹೆಚ್ಚಿಸಿಕೊಂಡ ಬಳಿಕ ಲಿಬರಲ್ ಮಂತ್ರಿಮಂಡಲಿಯವರು ತಮ್ಮ ಬಡ್ಜೆಟ್ಟನ್ನು ಆಚರಣೆಗೆ ತಂದು ಸಾಮಾನ್ಯ ವರ್ಗದವರಿಗೂ ಕೂಲಿಗಾರ ವರ್ಗದವರಿಗೂ ಅನುಕೂಲ ಮಾಡಿಕೊಟ್ಟ ಹೊಸ ಏರ್ಪಾಟುಗಳನ್ನು ನಡೆಸಿದರು. ಎಪ್ಪತ್ತು ವರ್ಷ ದಾಟಿ ವೃದ್ಧರಾಗಿ

ಕಷ್ಟಪಡಲು ಶಕ್ತಿಯಿಲ್ಲದಿದ್ದವರಿಗೆಲ್ಲರಿಗೂ ವಾರಕ್ಕೆ 5 ಷಿಲಿಂಗ್ ವೃದ್ಧವೇತನ ಗೊತ್ತಾಯಿತು. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ಆರೋಗ್ಯ ಪರೀಕ್ಷೆಯಲ್ಲದೆ ಆಹಾರಸೌಕರ್ಯಕ್ಕೂ ಏರ್ಪಾಟಾಯಿತು. ವಾಸಗೃಹಗಳ ನಿರ್ಮಾಣದಲ್ಲಿಯೂ ಪಟ್ಟಣಗಳ ಬಡಾವಣೆಗಳಲ್ಲಿಯೂ ಆರೋಗ್ಯನಿಯಮಗಳ ಅನುಸರಣೆಗೆ ಮಾರ್ಗವೇರ್ಪಟ್ಟಿತು. ಗಣಿಗಳಲ್ಲಿ ದಿನಕ್ಕೆ 8 ಗಂಟೆ ಮಾತ್ರ ಕೆಲಸ ತೆಗೆಯಬೇಕೆಂಬ ನಿಯಮವೂ ಆಯಿತು. ಕೆಲಸದ ವೇಳೆಯಲ್ಲಿ ಅಂಗಭಂಗವಾದಲ್ಲಿ ಅದಕ್ಕೆ ಪರಿಹಾರದ್ರವ್ಯ ಕೊಡಬೇಕೆಂಬ ನಿಶ್ಚಯ ರೂಪಗೊಂಡಿತು. 1911ರಲ್ಲಿ ಕಾಯಕವರ್ಗದವರಿಗೂ ಕೂಲಿಗಾರ ವರ್ಗದವರಿಗೂ ದೊಡ್ಡ ಇನ್‌ಷ್ಯೂರೆನ್ಸ್ ವ್ಯವಸ್ಥೆ ಮೊದಲಾಯಿತು.

**ಅನುಕೂಲಗಳು**

1906ರಲ್ಲಿ ಕಾಯಕ ವರ್ಗದ ಸಂಘಗಳು ಅಥವಾ ಶ್ರೇಣಿಗಳು (Trade Unions) ಚೈತನ್ಯ ಪಡೆದವು. ಆ ವರ್ಷದಲ್ಲಿಯೇ **ಲೇಬರ್ ಪಾರ್ಟಿ**ಯೆಂಬುದು ರೂಪಗೊಂಡಿತು. ಆದರೆ ಚುನಾವಣೆಗಳಲ್ಲಿ ಹೋರಾಡುವುದಕ್ಕೆ ಮಾತ್ರವಲ್ಲದೆ ಸಭಿಕರಾಗಿರುವುದಕ್ಕೂ ಸಾಕಾದಷ್ಟು ಹಣವಿಲ್ಲದೆ ಆ ಪಾರ್ಟಿಯವರಿಗೆ ಕಷ್ಟವಾಗಿತ್ತು. 1911ರಲ್ಲಿ ಸಭಿಕರಿಗೆ ವೇತನ ಗೊತ್ತಾದ ಮೇಲೆ ಅನುಕೂಲವಾಯಿತು. 1910ರಲ್ಲಿ ಆ ಪಾರ್ಟಿಯಲ್ಲಿ ನಲವತ್ತು ಸಭಿಕರು ಮಾತ್ರ ಇದ್ದರು.

**ಲೇಬರ್**

ಐರಿಷ್ ಗುಂಪಿನ ನಾಯಕ **ಜಾನ್ ರೆಡ್ಮಂಡ್** (John Redmond) ಲಿಬರಲ್ ಮಂತ್ರಿಗಳಿಗೆ ಬೆಂಬಲವನ್ನು ಕೊಡುತ್ತಿದ್ದನು. 1912ರಲ್ಲಿ ಮಂತ್ರಿಮಂಡಲಿಯವರು ಒಂದು ಹೋಂರೂಲ್ ಮಸೂದೆಯನ್ನು ಮೊದಲಿಟ್ಟರು. ಅದಕ್ಕೆ ಅಲ್‌ಸ್ಟರ್ ಗುಂಪಿನ ಪರವಾಗಿ **ಕಾರ್ಸನ್** (Carson) ಮತ್ತು **ಸ್ಮಿತ್** (F. E. Smith, Lord Birkenhead) ಎಂಬಿಬ್ಬರು ಪರಮವಿರೋಧಿಗಳಾಗಿ ಕನ್ಸರ್ವೆಟಿವ್ ಗುಂಪಿನ ಬೆಂಬಲವನ್ನು ಸಂಪಾದಿಸಿಕೊಂಡು ದಂಗೆಯೆಬ್ಬಿಸುವುದಕ್ಕೆ ಸಿದ್ಧರಾದರು. ಆ ಮಸೂದೆಗಾದ ಗತಿಯನ್ನು ಐರ್ಲಂಡಿನ ವೃತ್ತಾಂತದಲ್ಲಿ ಕಂಡುದಾಯಿತು.

ಏಳನೇ ಎಡ್ವರ್ಡ್ ದೊರೆತನಕ್ಕೇರಿದ ಕಾಲದಲ್ಲಿ ಬ್ರಿಟನ್ನಿನಲ್ಲಿ ಮಹಿಳೆಯರು ಪ್ರಬಲವಾದ ಒಂದು ಚಳುವಳಿ ನಡೆಸುತ್ತಿದ್ದರು. ಹತ್ತೊಂಭತ್ತನೆ ಶತಮಾನಾಂತದಲ್ಲಿ ಪುರುಷರಂತೆಯೇ ಸ್ತ್ರೀಯರೂ ಅಕ್ಷರಾಭ್ಯಾಸಮಾಡಿ ಶಿಕ್ಷಿತರಾಗಿದ್ದರು. ರಾಜಕೀಯಾಧಿಕಾರ ಅಥವಾ ವೋಟಿನ ಅಧಿಕಾರ ಸ್ತ್ರೀಯರಿಗೂ ಇರತಕ್ಕುದೆಂಬ ವಾದ ಮೊದಲಾಗಿತ್ತು. **ಮಿಸೆಸ್ ಪಾಂಕ್‌ಹರ್ಸ್ಟ್** (Mrs. Pankhurst) ಎಂಬಾಕೆ ಆ ಚಳುವಳಿಯಲ್ಲಿ ಮುಂದಾಳು. ವಿಧಿಯುಕ್ತವಾದ ರೀತಿಯಲ್ಲಿ ಇಷ್ಟಾರ್ಥ

ನೆರವೇರದಿರಲು ಸ್ತ್ರೀಯರು ಗುಂಪುಗೂಡಿ ಸಭೆಗಳಲ್ಲಿ ಗೊಂದಲವೆಬ್ಬಿಸಿ ಮನೆ ಬಾಗಿಲುಗಳನ್ನು ಮುರಿದು ದಾಂಧಲೆ ನಡೆಸಿ ಕಡೆಗೆ ಜೈಲಿಗೂ

**ಸ್ತ್ರೀಯರ ಚಳುವಳಿ**

ಹೊರಟು ಅಲ್ಲಿ ಉಪವಾಸ ಮುಷ್ಕರಗಳನ್ನು ನಡೆಸಿದ್ದರು. 1918ರಲ್ಲಿ ಜರ್ಮನಿ ಯುದ್ಧ ಮುಗಿದಿದ್ದ ವೇಳೆಯಲ್ಲಿ ಪಾರ್ಲಿಮೆಂಟ್ ಮತ್ತೊಮ್ಮೆ ಸಂಸ್ಕಾರಕ್ಕೊಳಗಾದಾಗ ಮೂವತ್ತು ವರ್ಷ ದಾಟಿದ ಸ್ತ್ರೀಯರಿಗೆ ವೋಟಿನ ಅಧಿಕಾರ ಪ್ರಾಪ್ತಿಯಾಯಿತು. 1928ರಲ್ಲಿ ಆ ವಯಸ್ಸಿನ ನಿರ್ಬಂಧವೂ ಹೋಯಿತು. ಪುರುಷರಂತೆ ಸ್ತ್ರೀಯರೂ ಪ್ರಾಪ್ತವಯಸ್ಕರಾದ ಕೂಡಲೆ (21ನೆ ವರ್ಷ) ವೋಟುದಾರರಾದರು.

## ಸಂಧಿವಿಗ್ರಹ 1900—1914

ಹತ್ತೊಂಭತ್ತನೆ ಶತಮಾನದ ಯೂರೋಪಿನ ಚರಿತ್ರೆಯಲ್ಲಿ ಜರ್ಮನಿ ಇಟಲಿ ದೇಶಗಳು ಐಕ್ಯತೆಯನ್ನೂ ಸ್ವಾತಂತ್ರ್ಯವನ್ನೂ ಪಡೆದುದು ದೊಡ್ಡ ಘಟನೆಗಳು. 1870ರಲ್ಲಿ ಜರ್ಮನಿಯನ್ನು ಬಲಪಡಿಸಿಕೊಂಡಬಳಿಕ ಫ್ರಾನ್ಸಿಗೆ ಸೇರಿದ್ದ ಆಲ್ಸಾಸ್ ಲೊರೇನ್ ಪ್ರಾಂತವನ್ನು ಬಿಸ್ಮಾರ್ಕ್ ಸಾಧಿಸಿದಾಗ ಜರ್ಮನಿ ಕೈಗಾರಿಕೆಯ ಅಭಿವೃದ್ಧಿಗೆ ಬಹಳ ಸಹಾಯವಾಯಿತು. ಆದರೆ ಆ ಸಂಗತಿಯಿಂದ

**ಬಿಸ್ಮಾರ್ಕನ ನೀತಿ**

ಫ್ರೆಂಚರ ಹಗೆತನದ ಸಂಪಾದನೆಯೂ ಆಯಿತು. ಆ ಫ್ರಾನ್ಸನ್ನು ನಿಸ್ಸಹಾಯಗೊಳಿಸಲು ಬಿಸ್ಮಾರ್ಕನು ಚತುರತನದಿಂದ ಆಸ್ಟ್ರಿಯ, ಇಟಲಿಗಳೊಡನೆ **ಟ್ರಿಪ್ಲ್ ಅಲಯನ್ಸ್** (Triple Alliance, 1882) ಎಂಬ ವ್ಯೂಹವನ್ನು ಕಟ್ಟಿದನು. ಬಾಲ್ಕನ್ ಕ್ಷೇತ್ರಗಳಲ್ಲಿ ರಷ್ಯ ಮತ್ತು ಆಸ್ಟ್ರಿಯಗಳೆರಡೂ ಪೈಪೋಟಿಮಾಡತಕ್ಕವಾಗಿದ್ದುದರಿಂದ ಬಿಸ್ಮಾರ್ಕ್ ಅತಿಜಾಣತನದಿಂದ ಆಯೆರಡು ರಾಷ್ಟ್ರಗಳೊಂದಿಗೂ ಮೈತ್ರಿಯಿರುವಂತೆ ಸಂಧಾನಪರನಾದುದಲ್ಲದೆ ರಷ್ಯದೊಡನೆ ಎಚ್ಚರದಿಂದ ಸ್ನೇಹಕಟ್ಟಿ ನಡೆಸುತ್ತಿದ್ದನು.

ಬಿಸ್ಮಾರ್ಕನು ನಿವೃತ್ತನಾದ ತರುವಾಯ ಜರ್ಮನಿಯ ಪ್ರಭುಗಳು ಆಸ್ಟ್ರಿಯದೊಂದಿಗೆ ಆಪ್ತತೆಯನ್ನು ಕಾಪಾಡುತ್ತ ರಷ್ಯದೊಡನೆ ಉಪೇಕ್ಷೆಯಿಂದಿದ್ದರು. ರಷ್ಯದವರು ಬಾಲ್ಟಿಕ್ ಮತ್ತು ಕಪ್ಪುಸಮುದ್ರಗಳ ಪ್ರದೇಶಗಳನ್ನೂ ಪೆಸಿಫಿಕ್ ತೀರಗಳನ್ನೂ ಒಟ್ಟುಗೂಡಿಸುವಂತೆ ರೈಲ್ದಾರಿಗಳನ್ನು ಹಾಕಿಸಿಕೊಳ್ಳಲು ಇಷ್ಟ

**ಫ್ರಾನ್ಸ್ ರಷ್ಯಗಳ ಮೈತ್ರಿ**

ಪಟ್ಟರು. ಫ್ರೆಂಚರು ಆ ಉದ್ಯಮದಲ್ಲಿ ಸಹಕರಿಸಿ ರಷ್ಯದವರ ಮೈತ್ರಿಯನ್ನು ಕಟ್ಟಿದರು. ಇದು **ಡ್ಯುಯಲ್ ಅಲಯನ್ಸ್** (Dual Alliance) ಎನ್ನಿಸಿತು. ಯೂರೋಪಿನಲ್ಲಿ ಟ್ರಿಪ್ಲ್ ಅಲಯನ್ಸ್ ಮತ್ತು ಡ್ಯೂಯಲ್ ಅಲಯನ್ಸ್‌ಗಳು ಪರಸ್ಪರ ವಿರೋಧಿಗಳಂತೆ

ಕಂಡವು. ಎರಡು ಕಡೆಯವರೂ ತಮ್ಮ ಯುದ್ಧಸನ್ನಾಹಗಳಿಗೆ ಹೆಚ್ಚುಹೆಚ್ಚು ಗಮನಕೊಟ್ಟು ದೊಡ್ಡದೊಡ್ಡ ಸೈನ್ಯಗಳನ್ನು ಕಟ್ಟಲು ತೊಡಗಿದರು.

ಹತ್ತೊಂಭತ್ತನೆ ಶತಮಾನದ ಅಂತ್ಯದಲ್ಲಿ ಐರೋಪ್ಯಜಾತಿಗಳವರು ಆಫ್ರಿಕ ಏಷ್ಯಗಳಲ್ಲಿ ಸಾಮ್ರಾಜ್ಯಸಂಪಾದನೆಗೂ ವ್ಯಾಪಾರಪ್ರಾಬಲ್ಯಕ್ಕೂ ನಾವು ತಾವೆಂದು ಪೋಟಾಪೋಟಿ ನಡೆಸಿದರು. ಪೋಟಾಪೋಟಿ ನಡೆದಕಾಲದಲ್ಲಿ ಇಂಗ್ಲಿಷರಿಗೂ ಫ್ರೆಂಚ ರಿಗೂ ವೈಷಮ್ಯರೇಗುವಂತೆಯೆ ಇತ್ತು. ಸುಡಾನ್‌ಪ್ರದೇಶದಲ್ಲಿ ಬ್ರಿಟಿಷರು ನುಗ್ಗಿದಾಗ ಪಶ್ಚಿಮದಕಡೆಯಿಂದ ಫ್ರೆಂಚರು ಅಲ್ಲಿಗೆ ನುಗ್ಗಿಬಂದು ಆ ಪ್ರದೇಶ ತಮ್ಮದಾಗಬೇಕೆಂದು ಹಟತೊಡುವಂತಿತ್ತು. ಆದರೆ ಜರ್ಮನಿಯ ಪ್ರಾಬಲ್ಯವನ್ನು ನೆನೆದು ಫ್ರೆಂಚರು ಬ್ರಿಟಿಷರ ಮೈತ್ರಿಗಾಸೆಪಟ್ಟರು. ಆಫ್ರಿಕ ಏಷ್ಯಗಳಲ್ಲಿ ಐರೋಪ್ಯರು ಪರಸ್ಪರವಾಗಿ ಹೊಡೆದಾಟ ನಡೆಸದೆ ಕೇವಲ ಸಂಧಾನಗಳಿಂದಲೇ ತಮ್ಮತಮ್ಮ ಸಾಮ್ರಾಜ್ಯ ವಿಸ್ತಾರಗಳನ್ನು ಗೊತ್ತುಮಾಡಿಕೊಂಡರು.

**ಬ್ರಿಟಿಷ್ ಫ್ರೆಂಚ್ ಸ್ಪೈಪೋಟಿ**

ಸರಿಸುಮಾರಾಗಿ ಏಕಕಾಲದಲ್ಲಿ ಐಕ್ಯತೆಯನ್ನೂ ಸ್ವಾತಂತ್ರ್ಯವನ್ನೂ ಸಾಧಿಸಿಕೊಂಡ ಇಟಲಿ, ಜಪಾನ್ ಮತ್ತು ಜರ್ಮನಿಗಳಲ್ಲಿ ಜರ್ಮನಿಯು ಬೇಗನೆ ಪ್ರಬಲಗೊಳ್ಳಲು ಅನುಕೂಲಗಳಿದ್ದವು. ಕಬ್ಬಿಣ ಕಲ್ಲಿದ್ದಲು ಗಣಿಗಳು ಯಥೇಷ್ಟವಾಗಿದ್ದುದಲ್ಲದೆ ಜರ್ಮನ್‌ಜಾತಿಯವರಲ್ಲಿ ಶ್ರಮಸಹಿಷ್ಣುತೆಯೂ ವಿಧೇಯತೆಯೂ ದೊಡ್ಡ ಗುಣಗಳಾಗಿದ್ದವು. ಜರ್ಮನಿಯನ್ನು ಒಟ್ಟುಗೂಡಿಸಿದ ತರುವಾಯ ಬಿಸ್ಮಾರ್ಕ್ ದೂರಾಲೋಚನೆಯಿಂದ ಶಾಂತಿಯನ್ನು ನೆಲೆಗೊಳಿಸಿ ಜರ್ಮನಿಯ ರೈಲ್ವಾರಿಗಳೂ ಉದ್ಯೋಗಕೈಗಾರಿಕೆಗಳೂ ಸ್ಥಲಜಲಸೈನ್ಯಗಳೂ ಅಭಿವೃದ್ಧಿಯಾಗಲು ಆಸ್ಪದವನ್ನು ಕಲ್ಪಿಸಿಕೊಟ್ಟನು. 1884 ರವರೆಗೂ ಹೊರಗಿನ ಸಾಮ್ರಾಜ್ಯಕ್ಕಾಗಿ ಜರ್ಮನರು ಉದ್ಯಮಿಸಲಿಲ್ಲ. ಆಫ್ರಿಕ ಏಷ್ಯಗಳಲ್ಲಿ ಸಾಮ್ರಾಜ್ಯಪ್ರಯತ್ನವನ್ನು ಜರ್ಮನರು ಕೈಗೊಂಡುದು ಸಾವಕಾಶವಾಯಿತು. ಆ ವೇಳೆಗೆ ಆಫ್ರಿಕದ ಉತ್ತಮಭಾಗಗಳು ಇತರರ ಪಾಲಾಗಿತ್ತು. ಆಫ್ರಿಕದ ವಾಯುವ್ಯಭಾಗವೆಲ್ಲವೂ ಫ್ರೆಂಚರಿಗೆ ಸೇರಿಹೋಗಿತ್ತು. ಆದ್ದರಿಂದ ಜರ್ಮನರಿಗೆ ಫ್ರೆಂಚರಲ್ಲಿ ಅಸಮಾಧಾನಬೆಳೆಯಿತು. ಫ್ರೆಂಚರಲ್ಲಿ ಬ್ರಿಟಿಷರಿಗೂ ಜರ್ಮನರಿಗೂ ಸ್ಪೈಪೋಟಿಕಂಡ ಆ ಸಮಯದಲ್ಲಿ ಬ್ರಿಟನ್‌ಜರ್ಮನಿಗಳು ಫ್ರೆಂಚರಿಗೆ ವಿರೋಧವಾಗಿ ಒಟ್ಟುಗೂಡಬಹುದಾಗಿತ್ತು. ಆದರೆ ವ್ಯಾಪಾರಪ್ರಪಂಚದಲ್ಲಿ ಬ್ರಿಟಿಷರಿಗೂ ಜರ್ಮನರಿಗೂ ಸ್ಪೈಪೋಟಿ ಬೆಳೆಯುತ್ತಲೇ ಇತ್ತು. ಬ್ರಿಟಿಷರ ನೌಕಾಪ್ರಾಬಲ್ಯವು ತಮ್ಮ ಅಭಿವೃದ್ಧಿಗೆ ಅಡ್ಡಿಯೆಂದು ಜರ್ಮನರು ಭಾವಿಸಿಕೊಂಡು ತಾವೂ ಹಡಗುಪಡೆಯನ್ನು ಬಲಪಡಿಸಿಕೊಳ್ಳುತ್ತಿದ್ದರು. ಹತ್ತೊಂಭತ್ತನೆ ಶತಮಾನದ

**ಜರ್ಮನಿಗೆ ಸಾಮ್ರಾಜ್ಯದಾಸೆ**

ಕಡೆಕಡೆಗೆ ಬ್ರಿಟಿಷರೂ ಜರ್ಮನರೂ ಪೈಪೋಟಿಮೇಲೆ ಹಡಗುಗಳನ್ನು ಕಟ್ಟಿಕೊಳ್ಳು ತ್ತಿದ್ದರು. 1904ರಲ್ಲಿ ಬ್ರಿಟಿಷರು ತಮ್ಮ ಪ್ರಧಾನನೌಕಾಬಲವನ್ನು ಭೂಮಧ್ಯ ಸಮುದ್ರದಿಂದ ಸಾಗಿಸಿ ಜರ್ಮನಿಗೆದುರಾಗಿ ಉತ್ತರಸಮುದ್ರದಲ್ಲಿಟ್ಟುಕೊಂಡರು.

**ರಷ್ಯ ಜಪಾನ್ ಯುದ್ಧ**

ಅತಿಪೂರ್ವದಲ್ಲಿ ಜಪಾನಿಗೂ ರಷ್ಯಕ್ಕೂ ಜಗಳರೇಗಿತು. ಜಪಾನಿನೊಡನೆ ಯುದ್ಧಮಾಡುತ್ತ ರಷ್ಯದವರು ಮೂಡಲಿಗೆ ಮುಖಮಾಡಿ ಕೊಂಡಿದ್ದಾಗ ಜರ್ಮನರು ತಮ್ಮೊಡನೆ ಜಗಳಕಟ್ಟಬಹುದೆಂದು ಫ್ರೆಂಚರಿಗೆ ತೋರಿತು. ಬ್ರಿಟಿಷರ ಮೈತ್ರಿಗಾಗಿ ಫ್ರೆಂಚರು ಆಸೆಪಡುವಂತಾಯಿತು. ಸಾಮ್ರಾಜ್ಯಸಂಪಾದನೆಯ ಪೈಪೋಟಿಯಲ್ಲಿ ಫ್ರೆಂಚರು ಬ್ರಿಟಿಷರಿಗೆ ಅನುಕೂಲರಾಗಿಯೇ ವರ್ತಿಸಿದ್ದರು. ಆಗ ಬ್ರಿಟಿಷ್ ಸಂಧಿವಿಗ್ರಹಿ ಲ್ಯಾನ್ಸ್‌ಡೌನ್ ಶ್ರೀಮಂತನು (Lord Lansdowne) ಫ್ರಾನ್ಸಿನೊಡನೆ ಸಂಧಾನಕ್ಕೊಪ್ಪಿ

**ಬ್ರಿಟಿಷರು ಕಟ್ಟಿದ ವ್ಯೂಹ**

"ಆಂತಾಂತ್" (Entente) ಎಂಬ ಹೆಸರಿನ ಸ್ನೇಹವನ್ನು ಕಟ್ಟಿದನು. ಮೊರಾಕೊ ಪ್ರಾಂತದಲ್ಲಿ ಫ್ರೆಂಚರ ಪ್ರಾಬಲ್ಯವನ್ನೂ ಈಜಿಪ್ಟಿನಲ್ಲಿ ಬ್ರಿಟಿಷರ ಪ್ರಾಬಲ್ಯವನ್ನೂ ಪರಸ್ಪರವಾಗಿ ಒಪ್ಪಿದರು. 1907ರಲ್ಲಿ ರಷ್ಯದವರು ಕೂಡ ಬ್ರಿಟಿಷರ ಸ್ನೇಹವನ್ನು ಕಟ್ಟಿದರು. ಬ್ರಿಟನ್, ಫ್ರಾನ್ಸ್ ಮತ್ತು ರಷ್ಯಗಳದು ಒಂದು ವ್ಯೂಹವಾಯಿತು.

ಜರ್ಮನ್ ಚಕ್ರವರ್ತಿಯಾಗಿದ್ದ 2 ನೆ ವಿಲಿಯಂ ಹೆಬ್ಬಾಸೆಯುಳ್ಳವನಾಗಿದ್ದನು. ಆ ರಾಷ್ಟ್ರದಲ್ಲಿ ಸೈನ್ಯಮುಖ್ಯರು ಅತಿಪ್ರಬಲರಾಗಿದ್ದರು. ಆಲ್ಸಾಸ್‌ಲೊರೇನ್ ವಿಷಯದಲ್ಲಿ ಮಾತ್ರವಲ್ಲದೆ ಆಫ್ರಿಕದಲ್ಲಿಯೂ ಜರ್ಮನ್‌ಬಲಮುಖ್ಯರಿಗೆ ಫ್ರಾನ್ಸ್ ಹಗೆಯಾಗಿ ಕಾಣುತ್ತಿತ್ತು. ಸಾಮ್ರಾಜ್ಯ ಕಟ್ಟುವ ಆಸೆ ಹೆಚ್ಚಾಗಿಯೇ ಇತ್ತು. ಜರ್ಮನ್ ಕೈಸರನು ತುರ್ಕಿ ಸುಲ್ತಾನನ ಸ್ನೇಹವನ್ನು ಕಟ್ಟಿಕೊಂಡಿದ್ದು ಬರ್ಲಿನ್ ನಗರದಿಂದ ತುರ್ಕಿಮೂಲಕ ಬಗದಾದಿನವರೆಗೆ ಜರ್ಮನರ ಸುಭರ್ದಿನಲ್ಲಿ ರೈಲ್ದಾರಿ

**ಬರ್ಲಿನ್ ಬಗದಾದ್ ರೈಲ್ವೆ ಯೋಚನೆ**

ಹಾಕಿಸುವ ಸಂಧಾನದಲ್ಲಿ ತೊಡಗಿದ್ದನು. ಆ ರೈಲ್ದಾರಿಯು ಆ ರೀತಿ ಜರ್ಮನರ ವಶದಲ್ಲಿ ಸಿದ್ಧವಾಗಿದ್ದರೆ ಜರ್ಮನ್ ವ್ಯಾಪಾರವು ಸಮುದ್ರ ಮಾರ್ಗಗಳನ್ನು ತಪ್ಪಿಸಿಕೊಂಡು ಭೂಮಾರ್ಗಗಳ ಮೂಲಕವೇ ನಡೆಯಬಹುದಾಗಿತ್ತು. ತುರ್ಕಿಯಲ್ಲಿ ಜರ್ಮನರು ಈ ರೀತಿ ಪ್ರವೇಶಮಾಡಿದುದು ಬ್ರಿಟಿಷರಿಗೆ ಸರಿಬೀಳಲಿಲ್ಲ. ಹಿಂದೆ ರಷ್ಯದವರು ಪ್ರಬಲರಾಗಿ ತುರ್ಕಿಯನ್ನು ವಶಪಡಿಸಿಕೊಂಡಿದ್ದಿದ್ದರೆ ಯಾವ ಅಪಾಯ ತೋರಬಹುದಾಗಿತ್ತೋ ಅದೇ ಅಪಾಯ ಜರ್ಮನರಿಂದ ಸಂಭವಿಸುವಂತೆ ಆಯಿತು. ತುರ್ಕಿಯಲ್ಲಿ ಜರ್ಮನರು ಪ್ರಬಲರಾಗುವ ಅಂಶ ರಷ್ಯದವರಿಗೂ ಅನಿಷ್ಟವಾಗಿತ್ತು.

ಇಪ್ಪತ್ತನೆ ಶತಮಾನದ ಆದಿಯಲ್ಲಿ ಈ ರೀತಿ ಐರೋಪ್ಯರಾಷ್ಟ್ರಗಳಲ್ಲಿ ಎರಡು ಭಾರಿ ವ್ಯೂಹಗಳಾಗಿದ್ದು ಪ್ರತಿರಾಷ್ಟ್ರದವರೂ ತಮ್ಮ ಯೋಗ್ಯತೆ ಮೀರಿದ ಯುದ್ಧಬಲ ವನ್ನು ಕಟ್ಟಿಕೊಳ್ಳುತ್ತಿದ್ದರು. ಒಬ್ಬರ ಮೇಲೊಬ್ಬರಿಗೆ ಗುಮಾನಿಯೇ ದೃಢವಾಗಿತ್ತು. ಜಗಳಕ್ಕೆ ಕಾರಣ ತೋರಿದೊಡನೆ ಎಲ್ಲರೂ ಸಭೆಸೇರಿ ಇತ್ಯರ್ಥಮಾಡಿ ಕೊಳ್ಳುವ ಪ್ರಯತ್ನ ನಡೆದರೂ ಫಲದಾಯಕವಾಗಿ ಮುಗಿಯುತ್ತಿರಲಿಲ್ಲ. ಬಾಲ್ಕನ್ ಕ್ಷೇತ್ರಗಳ ವಿಷಯದಲ್ಲಿ ಆಸ್ಟ್ರಿಯ ಮತ್ತು ರಷ್ಯ ಹಗೆಗಳು, ಆಲ್ಸಾಸ್ ಲೊರೇನ್ ಮತ್ತು ಉತ್ತರಆಫ್ರಿಕದಲ್ಲಿ ಜರ್ಮನಿ ಫ್ರಾನ್ ಹಗೆಗಳು, ಕೈಗಾರಿಕೆ ವ್ಯಾಪಾರಗಳಲ್ಲಿಯೂ ನೌಕಾ ಬಲರಚನೆಯಲ್ಲಿಯೂ ಜರ್ಮನ್ ಬ್ರಿಟಿಷ್ ವಿರೋಧಿಗಳು. ಹೀಗಿರುವಲ್ಲಿ ಯಾವ ಸಂಭವವಾದರೂ ಜಗಳರೇಗುವಂತಿತ್ತು. ಇಪ್ಪತ್ತನೆ ಶತಮಾನದ ಆದಿಭಾಗವೆಲ್ಲವೂ ಯುದ್ಧರೇಗುವ ಮೊದಲು ಪ್ರತಿಕಕ್ಷಿಗಳು ನಡೆಸಬಹುದಾದ ದೃಷ್ಟಿಯುದ್ಧದಂತಿತ್ತು.

ದೃಷ್ಟಿಯುದ್ಧ

1904 ರಲ್ಲಿ ಬ್ರಿಟನ್ ಮತ್ತು ಫ್ರಾನ್ಸ್ ಮೈತ್ರಿ ಕಟ್ಟಿದಾಗ ಫ್ರೆಂಚರಿಗೆ ಮೊರಾಕೊ ಸೇರಬಹುದೆಂದು ಬ್ರಿಟಿಷರೊಪ್ಪಿದರಷ್ಟೆ. ಆದರೆ ಆ ಪ್ರಾಂತದಲ್ಲಿ ಸ್ಪೈನಿಗೂ ಆಸೆಯಿತ್ತು, ಜರ್ಮನಿಗೂ ಆಸೆಯಿತ್ತು. **ಟಾಂಜಿಯರ್** (Tangier) ಎಂಬೆಡೆಯಲ್ಲಿ ಜರ್ಮನ್ ಕೈಸರ್ ಸ್ವತಃ ಬಂದಿದ್ದು ಜರ್ಮನರಿಗೆ ಅಲ್ಲಿ ಪ್ರದೇಶಲಾಭ ವಾಗಬೇಕೆಂಬುದನ್ನು ಸ್ಪಷ್ಟಪಡಿಸಿದನು. ಮೊರಾಕೋ ಪ್ರಾಂತದ ಇತ್ಯರ್ಥಕ್ಕಾಗಿ ಐರೋಪ್ಯರ ಸಮ್ಮೇಳನ ನಡೆಯಲೆಂದನು. 1906ರಲ್ಲಿ **ಆಲ್ಜೆಸೈರಾಸ್** (Algeciras) ಸಮ್ಮೇಳನ ನಡೆಯಿತು; ಯಾವುದೋ ಒಂದು ತೀರ್ಮಾನವಾಯಿತು. ಹಗೆತನಗಳು ಮಾತ್ರ ಆರಲಿಲ್ಲ. 1911ರಲ್ಲಿ ಫ್ರೆಂಚರು ಮೊರಾಕೊ ಪ್ರಾಂತಕ್ಕೆ ಒಂದು ಸೈನ್ಯವನ್ನು ಕಾರಣಾಂತರದಿಂದ ಕಳುಹಿಸಿಕೊಟ್ಟರು. ಆಗ ಕೈಸರನು ಅಲ್ಲಿಗೆ ಜರ್ಮನ್ ಯುದ್ಧದಹಡಗೊಂದನ್ನು (Panther) ಕಳುಹಿಸಿದನು. ಯುದ್ಧ ರೇಗುವಂತೆಯೆ ಇತ್ತು. ಆದರೆ ಫ್ರೆಂಚರು ಕಾಂಗೊ ಪ್ರದೇಶದಲ್ಲಿ ಜರ್ಮನರಿಗೆ ಸ್ವಲ್ಪ ಭಾಗವನ್ನು ಬಿಟ್ಟುಕೊಟ್ಟು ಹೊಡೆದಾಟವಾಗದಂತೆ ನೆರವೇರಿಸಿಕೊಂಡರು.

ಅಪಾಯದ ಸಂದರ್ಭ

1908ರಲ್ಲಿ ತುರ್ಕಿಯಲ್ಲಿ ಒಂದು ಪಲ್ಲಟ ನಡೆಯಿತು. **ಅಬ್ದುಲ್ ಹಮೀದ್** (Abdul Hamid) ಎಂಬ ಸುಲ್ತಾನನ ಆಳಿಕೆಯನ್ನು **ತರುಣ ತುರುಷ್ಕ** (Young Turk Party) ಗುಂಪಿನವರು ಕೊನೆಗಾಣಿಸಿ ಕ್ರಮಬದ್ಧವಾದ ಆಡಳಿತವನ್ನು ಕಟ್ಟಲು ಉದ್ಯಮಿಸಿದರು. ಹೊಸದಾಗಿ ಸೈನ್ಯವನ್ನು ಶಿಕ್ಷಿಸುವುದರಲ್ಲಿ ಜರ್ಮನರು ಸಹಾಯಕರಾದರು. ಇಸ್ತಾಂಬೂಲ್ ರಾಷ್ಟ್ರದಲ್ಲಿ ಸ್ವಲ್ಪ ಕಾಲ ಅವ್ಯವಸ್ಥೆ ತೋರಿದಂತಿದ್ದಾಗ ಆಸ್ಟ್ರಿಯದ ಪ್ರಭು ಆತುರಪಟ್ಟು ಹಿಂದೆ ತನ್ನ ಸುಭದ್ರಿಗೆ ಮಾತ್ರ ಬಂದಿದ್ದ ಬಾಸ್ನಿಯ ಹರ್ಸ್‌ಗೊವೀನ

ಆಸ್ಟ್ರಿಯ ಪ್ರಭು

ಪ್ರಾಂತಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡುಬಿಟ್ಟನು. ಇದರಿಂದ ರಷ್ಯದ ಚಕ್ರವರ್ತಿಗೆ ಅಸಮಾಧಾನವಾದುದು ಮಾತ್ರವೇ ಅಲ್ಲ. ತುರ್ಕಿಯ ಮೇಲೆ ಬಿದ್ದು ಸಿಕ್ಕಿದಷ್ಟನ್ನು ದಕ್ಕಿಸಿಕೊಳ್ಳುವುದು ಜಾಣತನವೆಂದು ಐರೋಪ್ಯರಲ್ಲಿ ಭಾವನೆ ಯಾಯಿತು. 1911ರಲ್ಲಿ ಇಟಲಿಯವರು ತುರ್ಕಿಯೊಡನೆ ಜಗಳ ಕಿತ್ತು ಉತ್ತರ ಆಫ್ರಿಕದಲ್ಲಿ **ಟ್ರಿಪೋಲಿ** ಪ್ರದೇಶವನ್ನಾಕ್ರಮಿಸಿದರು. ಅದೇ ಒಳ್ಳೆ ಸಮಯವೆಂದು ಗ್ರೀಸ್ ಮಂತ್ರಿ **ವೆನ್ಸೆಲಾಸ್** (Venezelos) ಎಂಬಾತನು ಗ್ರೀಸ್, ಬಲ್ಗೇರಿಯ, ಸರ್ಬಿಯ, ಮಾಂಟಿನೀಗ್ರೋಗಳನ್ನು ಒಟ್ಟುಗೂಡಿಸಿ **ಬಾಲ್ಕನ್ ಲೀಗ್** (Balkan League) ಎಂಬ ವ್ಯೂಹಕಟ್ಟಿ ತುರ್ಕಿಯ ಮೇಲೆ ಪ್ರೇರಿಸಿದನು. 1912ರಲ್ಲಿ ಈ ಬಾಲ್ಕನ್ ವ್ಯೂಹದವರು ತುರ್ಕಿಯನ್ನು ಸೋಲಿಸಿಬಿಟ್ಟರು. ಯೂರೋಪಿನಲ್ಲಿ ಸೇರಿದ್ದ ಭೂಭಾಗಗಳೆಲ್ಲವನ್ನೂ ತುರ್ಕಿ ಕಳೆದುಕೊಂಡಿತು.

**ಬಾಲ್ಕನ್ ಯುದ್ಧಗಳು** 1913ರಲ್ಲಿ ಜಯಶಾಲಿಗಳಾಗಿದ್ದ ಬಾಲ್ಕನ್ ರಾಷ್ಟ್ರಗಳವರು ತಮ್ಮ ತಮ್ಮಲ್ಲಿಯೇ ಯಾದವೀ ಕಲಹಗಳನ್ನು ಕಿತ್ತು ಹೊಡೆದಾಡಿದರು. ಆಗ ಬ್ರಿಟನ್, ರಷ್ಯ, ಜರ್ಮನಿಗಳ ಮಂತ್ರಿಪ್ರಮುಖರು ಸಂಧಾನಗಳನ್ನು ನಡೆಸಿ ಆ ಜಗಳಗಳನ್ನು ಒಂದು ತೀರ್ಮಾನಕ್ಕೆ ತಂದರು. ಆದರೆ ಆಸ್ಟ್ರಿಯದ ಪ್ರಭುವು ಬೇರೆ ಯೋಚನೆಗಳನ್ನೂ ಆಸೆಗಳನ್ನೂ ಬೆಳೆಸುತ್ತಲೇ ಇದ್ದನು.

ಆಸ್ಟ್ರಿಯ ಹಂಗರಿ ಸಾಮ್ರಾಜ್ಯವೆಂಬುದು ನಾನಾ ಜಾತಿಗಳ ನಾನಾ ಪ್ರದೇಶಗಳ ಸಮೂಹ. ಅಲ್ಲಿಯ ಪ್ರಭು ನಿರಂಕುಶನಾಗಿಯೇ ಇದ್ದನು. ಆತನ ಪ್ರಜೆಗಳಲ್ಲಿ ಜರ್ಮನ್ ಜಾತಿಯವರಲ್ಲದೆ ಮಗ್ಯಾರ್ (Magyar) ಜಾತಿಯವರೂ ಸ್ಲಾವ್ (Slav) ರಾಶಿಯ ಅನೇಕ ಗುಂಪಿನವರೂ ಇದ್ದರು. ಸ್ಲಾವ್ ರಾಶಿಯೆಲ್ಲವೂ ಒಟ್ಟುಗೂಡಬೇಕೆಂಬ ಉದ್ಯಮ (Pan Slav Movement) ಆತನ ಪ್ರಭುತ್ವಕ್ಕೆ ತೊಂದರೆಕೊಡತಕ್ಕುದಾಗಿತ್ತು. ಆ ಉದ್ಯಮಕ್ಕೆ ಸರ್ಬಿಯ ರಾಜ್ಯವೇ ಕೇಂದ್ರ. ಆ ರಾಜ್ಯವು ಸ್ವತಂತ್ರವಾಗಿದ್ದುದು ಆಸ್ಟ್ರಿಯ ಪ್ರಭುವಿಗೆ ಸರಿಬೀಳಲಿಲ್ಲ.

**ಆಸ್ಟ್ರಿಯ-ಸರ್ಬಿಯ** ಸರ್ಬಿಯ ರಾಜ್ಯಕ್ಕೆ ಸಮುದ್ರತೀರ ಬೇಕೆನಿಸಿತ್ತು; ಆದರೆ ಆಸ್ಟ್ರಿಯ ಬಿಟ್ಟುಕೊಟ್ಟ ಹೊರತು ಸಿಕ್ಕುವಂತಿರಲಿಲ್ಲ. ಹೀಗೆ ಆಸ್ಟ್ರಿಯ ಸರ್ಬಿಯಗಳಿಗೆ ವೈಷಮ್ಯವಿದ್ದಾಗ ಆಸ್ಟ್ರಿಯಪ್ರಭುವು ತಾನೇ ಮೊದಲು ಜಗಳಕ್ಕೆ ಸಿದ್ಧನಾಗಿ ಸರ್ಬಿಯನ್ನರಿಗೆ ರಷ್ಯನ್ನರು ಸಹಾಯನೀಡುವುದಕ್ಕೆ ಮೊದಲೆ ಸರ್ಬರನ್ನು ಅಡಗಿಸಲು ಮನಮಾಡಿ ಸಮಯವನ್ನು ಹೊಂಚುತ್ತಿದ್ದನು. 1914 ಜೂನ್ ತಿಂಗಳಲ್ಲಿ ಆಸ್ಟ್ರಿಯದ ರಾಜಕುಮಾರನು **ಸೆರಾಜೆವೊ** (Serajevo) ಎಂಬ ಸರ್ಬ್ ಪಟ್ಟಣದಲ್ಲಿ ಆಕಸ್ಮಿಕವಾಗಿ ಅಪಮೃತ್ಯುವಿಗೆ ಸಿಕ್ಕಿದನು. ಆಗ ಆಸ್ಟ್ರಿಯದವರು ಬಹಳ ಅವಮಾನಕರವಾದ ಷರತ್ತುಗಳನ್ನು ಹೊರೆಸಿ ಸರ್ಬಿಯಕ್ಕೆ ವೀರನಿರೂಪವನ್ನು ಕೊಟ್ಟು ಕಳುಹಿಸಿದರು. ರಷ್ಯದವರ ಸಲಹೆ ಕೇಳಿದ ಸರ್ಬರು

ಆ ಷರತ್ತುಗಳಿಗೊಡಂಬಡುವಂತಿತ್ತು. ಆದರೆ ಅಷ್ಟರಲ್ಲಿಯೆ ಆಸ್ಟ್ರಿಯದವರು ಸರ್ಬಿಯವನ್ನು ಆಕ್ರಮಿಸಿ ಯುದ್ಧವನ್ನು ಪ್ರಾರಂಭಿಸಿದರು. ಆಗ ಸರ್ಬಿಯ ಪರವಾಗಿ ರಷ್ಯದವರು ಸೈನ್ಯಗಳನ್ನು ಜಮಾಯಿಸಿ ಆಸ್ಟ್ರಿಯದ ಮೇಲೆ ಯುದ್ಧಕ್ಕೆ ಸಿದ್ಧರಾದರು. ಆಸ್ಟ್ರಿಯ ಪರವಾಗಿ ಜರ್ಮನರು ರಷ್ಯ

**ಯುದ್ಧ ಪ್ರಾರಂಭ**

ದೊಂದಿಗೆ ಯುದ್ಧಕ್ಕೆ ತೊಡಗಿದರು. ರಷ್ಯದ ಪರವಾಗಿ ಫ್ರೆಂಚರು ಜರ್ಮನಿಯೊಂದಿಗೆ ಯುದ್ಧವನ್ನಾರಂಭಿಸಿದರು. ಜರ್ಮನಿಯವರು ಪೂರ್ವ ಪಶ್ಚಿಮಗಳೆರಡರಲ್ಲಿಯೂ ಯುದ್ಧವನ್ನು ನಡೆಸಲು ಸೈನ್ಯಗಳನ್ನು ಮೇರೆ ದಾಟಿಸಿದರು.

ಫ್ರಾನ್ಸಿನೊಡನೆ ಯುದ್ಧ ಎಂದಾದರೂ ಒದಗುವುದೆಂದು ತಿಳಿದಿದ್ದ ಜರ್ಮನಿಯ ಸೈನ್ಯಮುಖ್ಯರು ಯುದ್ಧಪ್ರಾರಂಭದಲ್ಲಿಯೇ ಬೆಲ್ಜಿಯಂ ಮೂಲಕ ತಮ್ಮ ಸೈನ್ಯಗಳನ್ನು ಹೊರಡಿಸಿ ಫ್ರಾನ್ಸನ್ನು ಉತ್ತರದಲ್ಲಿ ಮುತ್ತುವ ಯೋಚನೆ ಮಾಡಿಕೊಂಡಿದ್ದರು. ಅದರಂತೆ ಜರ್ಮನ್ ಸೈನ್ಯಗಳು ಬೆಲ್ಜಿಯಂ ದೇಶದಲ್ಲಿ ನುಗ್ಗಿದವು. ಫ್ರೆಂಚರ ಸಹಾಯಕ್ಕೆ ಹೊರಡುವುದು ಕರ್ತವ್ಯವಾಗಿದ್ದರೂ ಬ್ರಿಟಿಷರು

**ಬೆಲ್ಜಿಯಂ**

ನಿದಾನಿಸಿದ್ದರು. ಬೆಲ್ಜಿಯಂ ರಾಜ್ಯವು ಜರ್ಮನಿಯ ಪಾದಾಕ್ರಾಂತವಾದಾಗ ಬೆಲ್ಜಿಯಂ ಸಮುದ್ರತೀರವು ಜರ್ಮನಿಗೆ ವಶವಾಗುವ ಸಂಭವ ಕಂಡಿತು. ಹಿಂದಿನಿಂದಲೂ ಆ ತೀರಪ್ರದೇಶ ಯಾವ ಪ್ರಬಲ ಐರೋಪ್ಯ ರಾಷ್ಟ್ರಕ್ಕೂ ಸೇರದಿರಬೇಕೆಂಬುದು ಬ್ರಿಟಿಷರ ಸಂಧಾನ ಲಕ್ಷ್ಯ. ಬೆಲ್ಜಿಯಂ ರಾಜ್ಯದ ತಾಟಸ್ಥ್ಯವನ್ನೆಲ್ಲರೂ ಗೌರವಿಸುವುದಾಗಿ ನಾಲ್ಕನೆ ವಿಲಿಯಂ ದೊರೆಯ ಕಾಲದಲ್ಲಿ ವಾಗ್ದಾನ ನಡೆದಿತ್ತು. ಜರ್ಮನಿಯವರು ಆ ವಾಗ್ದಾನವನ್ನು ಮುರಿದರೆಂದು ಬ್ರಿಟಿಷರು ಆಗಸ್ಟ್ ತಿಂಗಳಲ್ಲಿ ಯುದ್ಧಕ್ಕೆ ಸೇರಿದರು. ಸಂಧಿವಿಗ್ರಹಿ **ಸರ್ ಎಡ್ವರ್ಡ್ ಗ್ರೇ** ಕಾಮನ್ಸ್ ಸಭೆಯಲ್ಲಿ ಭಾಷಣಮಾಡಿ ಸ್ಥಿತಿಗತಿಗಳನ್ನು ವಿವರಿಸಿ ಯುದ್ಧ ನಿಶ್ಚಯಮಾಡಿಸಿದನು.

ಇದೇ ಘೋರ ಯುದ್ಧವೆಂಬುದು. ಜರ್ಮನಿ ಮತ್ತು ಆಸ್ಟ್ರಿಯಗಳೊಂದು ಪಕ್ಷ; ರಷ್ಯ, ಫ್ರಾನ್ಸ್ ಮತ್ತು ಬ್ರಿಟನ್ ಪ್ರತಿಪಕ್ಷ. ಯುದ್ಧವು ಮುಂದುವರಿಯುತ್ತ ಇತರ ರಾಷ್ಟ್ರಗಳೂ ಸೇರಿಕೊಂಡವು. ಬ್ರಿಟನ್ ಮೊದಲಿಟ್ಟ

**ಪಕ್ಷವಿಪಕ್ಷಗಳು**

ಸ್ವಲ್ಪ ಕಾಲದಲ್ಲಿಯೇ ಜಪಾನ್ ಜರ್ಮನಿಗೆದುರಾಗಿ ಯುದ್ಧಕ್ಕೆ ತೊಡಗಿತು. 1915ರಲ್ಲಿ ಇಟಲಿಯೂ ಜರ್ಮನಿಗೆ ವಿರೋಧವಾಗಿ ಯುದ್ಧಕ್ಕಾರಂಭಿಸಿತು. 1916ರಲ್ಲಿ ಪೋರ್ಚುಗಲ್, ರುಮೇನಿಯ, ಗ್ರೀಸ್ ರಾಜ್ಯಗಳವರೂ 1917ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳವರೂ ಜರ್ಮನಿಗೆ ಹಗೆಗಳಾಗಿ ಯುದ್ಧದಲ್ಲಿ ಸೇರಿದರು. ಆ ತರುವಾಯ ಮಿತ್ರಮಂಡಲಿ (ಬ್ರಿಟನ್ +

ಫ್ರಾನ್ಸ್) ಪಕ್ಷವನ್ನು ಅಮೆರಿಕದ ಇತರರಾಷ್ಟ್ರಗಳೂ ಬಹುವಾಗಿ ಸೇರಿದವು. ಜರ್ಮನಿಯ ಪಕ್ಷವನ್ನು 1914ರಲ್ಲಿ ತುರ್ಕಿ, 1915ರಲ್ಲಿ ಬಲ್ಗೇರಿಯ ರಾಜ್ಯಗಳು ಮಾತ್ರ ಸೇರಿಕೊಂಡವು.

## ಐರೋಪ್ಯರ ಘೋರ ಯುದ್ಧ (1914–1918)

ಇಪ್ಪತ್ತನೆ ಶತಮಾನದಲ್ಲಿ ನಡೆದ ಈ ಯುದ್ಧದ ರೀತಿಗೂ ಹಳೆಯ ಕಾಲದ ಯುದ್ಧಗಳ ರೀತಿಗೂ ಅಜಗಜಾಂತರ. ಫರಾನ್ಸಿ ಮಹಾಪಲ್ಲಟದ ತರುವಾಯ ಪ್ರತಿ ರಾಷ್ಟ್ರದಲ್ಲಿಯೂ ಸಮಸ್ತ ಪೌರರು ಯುದ್ಧಸನ್ನದ್ಧರಾಗಬೇಕಾದ ಅವಶ್ಯ ಬರಬರುತ್ತ ಹೆಚ್ಚಿತು. ಯುದ್ಧವೆಂಬುದು ಹಲಕೆಲವು ಸೈನ್ಯಗಳು ಎದುರುಬದುರಾಗಿ ಹೋರಾಡುವುದಲ್ಲ; ರಾಷ್ಟ್ರರಾಷ್ಟ್ರಗಳು ಸರ್ವವಿಧಗಳಲ್ಲಿಯೂ ಹಗೆತನ ಸಾಧಿಸುತ್ತ ಪರಸ್ಪರವಾಗಿ ನಾಶಗೊಳಿಸುವುದಾಯಿತು. ಯುದ್ಧವೆಂದರೆ ಅಪರಿಮಿತವಾದ ವೆಚ್ಚ ನಡೆಯಬೇಕು. ಆದ್ದರಿಂದ ಯುದ್ಧಕ್ಕೆ ತೊಡಗಿದ ರಾಷ್ಟ್ರದಲ್ಲಿ ತೆರಿಗೆಗಳು ಮಾತ್ರವಲ್ಲದೆ ಸಾಲಸೋಲಗಳೂ ಏರುತ್ತ ಹೋಗುವುವು. ಆಯುಧ ಪ್ರಯೋಗದಲ್ಲಿಯೂ ದೊಡ್ಡ ವ್ಯತ್ಯಾಸ. ಶಾಸ್ತ್ರಜ್ಞಾನ ಹೆಚ್ಚಿದಂತೆ ಯಂತ್ರಾಯುಧಗಳು ಭಯಂಕರಗಳಾದವು. ಇಪ್ಪತ್ತನೆ ಶತಮಾನದ ಆದಿಯಲ್ಲಿ ವಿರಾಡ್ರೂಪದಿಂದ ಜ್ವಲಿಸಿದ ಈ ಯುದ್ಧದಲ್ಲಿ ಆಕಾಶಗಾಮಿಗಳೂ ಜಲಾಂತರ್ಗಾಮಿಗಳೂ ಆದ ಯಂತ್ರಗಳಲ್ಲದೆ ಬಾಂಬು, ವಿಷವಾಯು, ಕೃತ್ರಿಮ ಮೋಡ, ಜಲಜ್ವಾಲೆ, ಟ್ಯಾಂಕು ಮುಂತಾದ ಅನೇಕಾನೇಕ ರಾಕ್ಷಸ ವಿಧಾನಗಳು ಪ್ರಯೋಗವಾದವು. ಆದ್ದರಿಂದ ಈ ಯುದ್ಧದಲ್ಲಿ ಹಿಂದಿನಕಾಲದಂತೆ ಕದನಗಳು ಕಾಣುವುದಿಲ್ಲ.

**ಯುದ್ಧದ ರೀತಿ**

1914ರಲ್ಲಿ ಯುದ್ಧ ಪ್ರಾರಂಭವಾದಾಗ ಜರ್ಮನರು ಹಲಕೆಲವು ತಿಂಗಳುಗಳಲ್ಲಿ ಜಯ ಲಭಿಸಬಹುದೆಂದು ನಿರೀಕ್ಷಿಸಿದರು. ರಷ್ಯದ ಸೇನೆಗಳು ಒಟ್ಟುಗೂಡಿ ಓಡಾಡುವುದು ನಿದಾನವಾದುದರಿಂದ ಜರ್ಮನರು ತಮಗೆ ಮೊದಲಲ್ಲಿ ಆಪತ್ತು ತೋರಬಹುದೆಂದು ಚಿಂತಿಸುವಹಾಗಿರಲಿಲ್ಲ. ಫ್ರಾನ್ಸಿನವರು ರೋಷದಿಂದ ಯುದ್ಧ ನಡೆಸತಕ್ಕವರು. ಆದರೆ ಬೆಲ್ಜಿಯಂಮೂಲಕ ಫ್ರಾನ್ಸಿನವಾಯವ್ಯದಲ್ಲಿ ಮುತ್ತಿದರೆ ಫ್ರೆಂಚರು ಬೇಗನೆ ಸೋತಾರೆಂದು ಜರ್ಮನರು ಭಾವಿಸಲು ಕಾರಣವಿತ್ತು. ಜರ್ಮನರ ಯುದ್ಧಸನ್ನಾಹವು ವಾಸ್ತವವಾಗಿ ಅದ್ಭುತವಾಗಿತ್ತು. ರಷ್ಯ ಸೈನ್ಯಗಳು ಒಟ್ಟುಗೂಡುವುದರೊಳಗಾಗಿ ಫ್ರಾನ್ಸಿನಲ್ಲಿ ವೇಗದಿಂದ ಮುತ್ತಿಗೆನಡೆಸಿ ಫ್ರೆಂಚರನ್ನು ಸೋಲಿಸಿ ತರುವಾಯ ರಷ್ಯದವರನ್ನು ಸೋಲಿಸಿಕೊಳ್ಳುವ ಕ್ರಮವನ್ನು ಅವರು ಇಟ್ಟುಕೊಂಡರು. ಬ್ರಿಟಿಷರಿಗೆ ಐರ್ಲಂಡಿನಲ್ಲಿ ಅಂತರ್ಯುದ್ಧವೊದಗುವಂತಿದ್ದುದರಿಂದಲೂ ನೌಕಾಬಲವೇ ವಿಶೇಷ

**ಜರ್ಮನರ ಯೋಚನೆ**

ವಾಗಿದ್ದುದರಿಂದಲೂ ಜರ್ಮನರಿಗೆ ಈ ಕಾರ್ಯಕ್ರಮವು ಬೇಗನೆ ಮುಗಿದೀತೆಂದು ತೋರಿತು.

ಬೆಲ್ಜಿಯಂ ರಾಜ್ಯದಲ್ಲಿ ಜರ್ಮನ್ ಸೈನ್ಯಗಳು ನುಗ್ಗಿಕೊಂಡು ಹೊರಟು **ಲಿಯೇಜ್** (Liege) ಮುಂತಾದ ಪಟ್ಟಣಗಳನ್ನು ಒಂದೊಂದಾಗಿ ಹಿಡಿದವು. ಬೆಲ್ಜಿಯಂ ರಾಜ್ಯವನ್ನು ದಾಟಿ ಫ್ರಾನ್ಸಿನೊಳಗೆ ಜರ್ಮನರು ಪ್ರವೇಶಿಸಿದವೇಳೆಗೆ ಫ್ರೆಂಚರು ಅತಿಕ್ಷಿಪ್ರತೆಯಿಂದ ಸಿದ್ಧರಾಗಿ ಎದುರಿಸಿದರು.

**ಫ್ರಾನ್ಸಿನ ಮುತ್ತಿಗೆ**

ಬ್ರಿಟಿಷರೂ ಬೇಗನೆ ಯುದ್ಧಭೂಮಿಗೆ ಸೈನ್ಯಗಳನ್ನು ಕಳುಹಿಸಿದರು. ಜರ್ಮನರು ನಿರೀಕ್ಷಿಸಿದಷ್ಟು ವೇಗದಲ್ಲಿ ಜಯಲಾಭವಾಗಲಿಲ್ಲ. ಅತ್ತ ರಷ್ಯದವರು ಮೂಡಲಪ್ರಷ್ಯವನ್ನು ಮುತ್ತಲು ಎರಡು ದೊಡ್ಡ ಸೈನ್ಯಗಳನ್ನು ಕಳುಹಿಸಿದರು. ಆಗ ಜರ್ಮನರು ಫ್ರಾನ್ಸಿನಲ್ಲಿದ್ದ ತಮ್ಮ ಸೈನ್ಯಗಳಲ್ಲಿ ಎರಡು ಭಾಗಗಳನ್ನು ಅಲ್ಲಿಂದೆತ್ತಿ ಮೂಡಲಿಗೆ ಕಳುಹಿಸಬೇಕಾಯಿತು. ಈ ಕಾರಣದಿಂದ ಜರ್ಮನ್ ಸೈನ್ಯಗಳು ದುರ್ಬಲಗೊಂಡಾಗ್ಯೂ ಅವು ಫ್ರಾನ್ಸಿನಲ್ಲಿ ನುಗ್ಗಿ ಪ್ಯಾರಿಸ್ ಕಡೆಗೆ ಹೊರಡುತ್ತಿದ್ದವು. ಫ್ರೆಂಚ್ ಸರ್ಕಾರದವರು ಪ್ಯಾರಿಸ್ಸನ್ನು ಬಿಟ್ಟು ಬೋರ್ಡೊ (Bordeaux) ಪಟ್ಟಣಕ್ಕೆ ಹೊರಟರು. ಆದರೆ **ಮಾರ್ನ್** (Marne) ನದಿಯಬಳಿ ಫ್ರೆಂಚರೂ ಬ್ರಿಟಿಷರೂ ಸೇರಿ ಜರ್ಮನರನ್ನು ಬಲವಾಗಿ ಅಡ್ಡಿಪಡಿಸಿ ಹಿಮ್ಮೆಟ್ಟಿಸಿದರು. ಹಿಮ್ಮೆಟ್ಟುತ್ತ **ಆಯಿಸ್ನ್** (Aisne) ನದಿಯಬಳಿ ಜರ್ಮನರು ನಿಂತು ಸಮುದ್ರತೀರದವರೆಗೂ ವ್ಯಾಪಿಸಿ ಫ್ರಾನ್ಸಿಗೆ ಉತ್ತರದಲ್ಲಿ

**ಕಂದಕ ಯುದ್ಧ**

ಬೃಹದ್ರೂಪದ ಕೋಟೆಕಟ್ಟಿದಂತೆ ಕಂದಕಗಳನ್ನು ತೋಡಿ ಬೇಲಿಕಟ್ಟಿ ಬತ್ತೇರಿಗಳನ್ನಿಟ್ಟು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಬ್ರಿಟಿಷರೂ ಫ್ರೆಂಚರೂ ಜರ್ಮನರ ಎದುರಿನಲ್ಲಿ ತಾವೂ ಕಂದಕಗಳನ್ನು ತೋಡಿಕೊಂಡರು. ಎದುರುಬದುರಾಗಿ ಭಾರಿಸೈನ್ಯಗಳು ಈ ರೀತಿಯಲ್ಲಿ ಹಳ್ಳಗಳನ್ನು ತೋಡಿಕೊಂಡು ದೀರ್ಘಕಾಲ ಕಳೆಯಬೇಕಾಗಿ ಬಂತು.

ಮೂಡಲಲ್ಲಿ ಪ್ರಷ್ಯವನ್ನು ಮುತ್ತಿದ ರಷ್ಯ ಸೈನ್ಯಗಳನ್ನು ಜರ್ಮನ್ ದಂಡನಾಯಕರಲ್ಲಿ ಅತಿ ಪ್ರಸಿದ್ಧರಾದ **ಹಿಂಡೆನ್ಬುರ್ಗ್** (Hindenburg) ಮತ್ತು **ಲೂಡೆನ್ಡಾರ್ಫ್** (Ludendorf) ಎಂಬಿಬ್ಬರು ಎದುರಿಸಿದರು. **ಟಾನೆನ್ಬುರ್ಗ್** (Tannenburg) ಕದನವೆಂಬುದರಲ್ಲಿಯೂ **ಮಸೂರಿಯನ್ ಸರೋವರಗಳ** ಬಳಿ ಹೋರಾಟದಲ್ಲಿಯೂ (Masurian Lakes) ರಷ್ಯದವರು ಸೋತರು.

**ರಷ್ಯದ ಸೋಲು**

ಇತರೆಡೆಗಳಲ್ಲಿಯೂ ರಷ್ಯನ್ನರು ಸೋತು ಹಿಮ್ಮೆಟ್ಟಬೇಕಾಯಿತು. ಜರ್ಮನರು ಮುಂದೆನುಗ್ಗಿ ರಷ್ಯ ಸಾಮ್ರಾಜ್ಯದಲ್ಲಿ ತಮ್ಮ ಸೈನ್ಯಗಳನ್ನು ಅಟ್ಟಿದರು. ಬಾಲ್ಟಿಕ್ ತೀರದಿಂದ **ಕಾರ್ಪೇಥಿಯನ್**

ಶ್ರೇಣಿವರೆಗಿರುವ ವಿಶಾಲ ಭೂಭಾಗದಲ್ಲಿ ಜರ್ಮನ್ ರಷ್ಯನ್ ಸೈನ್ಯಗಳು ಎದುರು ಬದುರಾಗಿ ಹೊಂಚುತ್ತ ಹೋರಾಡುತ್ತಲಿರಬೇಕಾಯಿತು.

ಮೊದಲನೆ ವರ್ಷದಲ್ಲಿಯೆ ತುರ್ಕಿಯ ಸುಲ್ತಾನನು ಜರ್ಮನಿಯ ಕಡೆ ಸೇರಿದನು. ಆಗ ಬ್ರಿಟಿಷರು ತುರ್ಕಿಯನ್ನೆಲ್ಲಿಯಾದರೂ ಮುತ್ತುವ ಯೋಚನೆ ನಡೆಸಿದರು. ಡಾರ್ಡನೆಲ್ಸ್ ಮಾರ್ಗವನ್ನು ವಶಪಡಿಸಿಕೊಂಡು ರಷ್ಯದೊಡನೆ ಸೇರಿಕೊಳ್ಳುವ ಉದ್ದೇಶದಿಂದ **ಗ್ಯಾಲಿಪೋಲಿ** (Gallipoli) ಎಂಬ ಸಣ್ಣ ಪರ್ಯಾಯದ್ವೀಪವನ್ನು ಮುತ್ತುವ ಉದ್ಯಮವನ್ನಿಟ್ಟುಕೊಂಡರು. ಸ್ಥಲ ಸೈನ್ಯಗಳೂ ಜಲ ಸೈನ್ಯಗಳೂ ಒಟ್ಟುಗೂಡಿ ಆ ಪ್ರದೇಶವನ್ನು ಮುತ್ತಿದವು. ಆದರೆ ಜಯ ಲಭಿಸಲಿಲ್ಲ. **ಸಲೋನಿಕ** (Salonica) ಎಂಬ ಒಂದು ಸ್ಥಳಮಾತ್ರ ವಶವಾಯಿತು. ಅದೇವೇಳೆಗೆ ರಷ್ಯದವರು ಪೋಲಂಡನ್ನು ಜರ್ಮನರ ವಶಮಾಡಿ ಓಸ್ಮೆಟ್ಟಿದರು. ಜರ್ಮನಿಯ ಪಕ್ಷವನ್ನು ಸೇರಿಕೊಂಡ ಬಲ್ಗೇರಿಯ ರಾಷ್ಟ್ರದವರು ಸೆರ್ಬರಮೇಲೆ ಯುದ್ಧ ಕಟ್ಟಿದರು. ಸೆರ್ಬಿಯದವರು ಜರ್ಮನಿ ಆಸ್ಟ್ರಿಯ ಮತ್ತು ಬಲ್ಗೇರಿಯಗಳೆಂಬ ಮೂರು ರಾಷ್ಟ್ರಗಳವರನ್ನು ಎದುರಿಸಲಾರದೆ ಅಡಗಿದರು.

**ಗ್ಯಾಲಿಪೋಲಿ ಪ್ರಯತ್ನ**

1915ರಲ್ಲಿ ಗ್ಯಾಲಿಪೋಲಿ ಮತ್ತು ಸೆರ್ಬಿಯಗಳಲ್ಲಿ ಬ್ರಿಟಿಷರ ಪಕ್ಷಕ್ಕೆ ಜಯವೊದಗಲಿಲ್ಲ. ಫ್ರಾನ್ಸಿನ ಉತ್ತರಭಾಗದಲ್ಲಿ ಕಂದಕಗಳ ಹೋರಾಟವು ನಡೆಯುತ್ತಲೇ ಇತ್ತು. ಅತ್ತ ಕಡೆ ವೇಗದಿಂದ ಜಯಪಡೆಯಬೇಕೆಂದಿದ್ದ ಜರ್ಮನರ ಕಾರ್ಯಕ್ರಮಕ್ಕೆ ಅಡ್ಡಿಯೇನೋ ಆಯಿತು. ಅಯಿಸ್ನ್ ನದಿಯ ಪಕ್ಕದಲ್ಲಿ ಜರ್ಮನರು ಗುಲ್ಮ ರಚನೆಮಾಡಿಕೊಂಡತರುವಾಯ ಸಮುದ್ರತೀರವನ್ನು ವಶಪಡಿಸಿಕೊಳ್ಳಲು ಯತ್ನಿಸಿ **ಇಪ್ರೆ** (Ypres) ಬಳಿ ಬ್ರಿಟಿಷರೊಡನೆ ಹೋರಾಟನಡೆಸಿದರು. ಬ್ರಿಟಿಷರು ಮುಂದೆನುಗ್ಗಿ **ನ್ಯೂವ್ ಷಾಪೆಲ್** (Neuve Chapelle) ಮತ್ತು **ಲೂಸ್** (Loos) ಎಂಬೆಡೆಗಳಲ್ಲಿ ಜರ್ಮನರನ್ನು ಆಕ್ರಮಿಸಿದರು. ಫ್ರೆಂಚರು ಅದೇ ಸಮಯದಲ್ಲಿ **ಷಾಂಪೆಯ್ನ್** (Champaigne) ಮತ್ತು **ಆರ್ಟ್ವಾ** (Artois) ಪ್ರದೇಶಗಳಲ್ಲಿ ಮುಂದೆನುಗ್ಗಿ ಜರ್ಮನರನ್ನು ಆಕ್ರಮಿಸಲು ಪ್ರಯತ್ನಿಸಿದರು. ಕಂದಕಗಳು ಎದುರುಬದುರಾಗಿ ಉತ್ತರ ಸಮುದ್ರದಿಂದ ಸ್ವಿಟ್ಸರ್ಲಂಡ್‌ವರೆಗೆ ನೂರಾರು ಮೈಲಿಗಳ ವಿಸ್ತಾರಪಡೆದಿದ್ದುದಲ್ಲದೆ ಸೈನ್ಯಗಳನ್ನು ಲಕ್ಷಗಟ್ಟಲೆಯಾಗಿಯೇ ಎಣಿಸಬೇಕಾಗಿತ್ತು. ಎದುರುಬದುರಾಗಿ ಕಂದಕಗಳಲ್ಲಿದ್ದುಕೊಂಡು ಒಬ್ಬರನ್ನೊಬ್ಬರು ಹೊಂಚಿ ಹಲಕೆಲವು ಗಜಗಳಷ್ಟು ಮುಂದಕ್ಕೆ ನುಗ್ಗಿ ವಶಪಡಿಸಿಕೊಳ್ಳುವುದಕ್ಕಾಗಿ ಲಕ್ಷಾಂತರ ಪ್ರಾಣಗಳು ನಷ್ಟವಾಗುತ್ತಿದ್ದವು. ಇಪ್ರೇ ಬಳಿ ಎರಡನೆ ಹೋರಾಟವಾದಾಗ ಜರ್ಮನರು ವಿಷವಾಯುವನ್ನು ಪ್ರಯೋಗಿಸಿದರು.

**ಪಶ್ಚಿಮ ರಣಕ್ಷೇತ್ರ**

1915ರಲ್ಲಿ ಬ್ರಿಟಿಷ್-ಫ್ರೆಂಚರ ಪಕ್ಷಕ್ಕೆ ದೊಡ್ಡ ಜಯವಾವುದೂ ಲಭಿಸಲಿಲ್ಲ. ಜರ್ಮನರಾದರೋ ಮೂಡಲಲ್ಲಿ ರಷ್ಯದಲ್ಲಿಯೂ ಆಗ್ನೇಯದಲ್ಲಿ ಬಾಲ್ಕನ್ ಕ್ಷೇತ್ರದಲ್ಲಿಯೂ ಜಯಶಾಲಿಗಳಾಗಿದ್ದರು. ಆದರೆ ಅದೇವರ್ಷ

**ಇಟಲಿಯವರು**

ಇಟಲಿಯವರು ಬ್ರಿಟಿಷರಕಡೆ ಸೇರಿ ಆಸ್ಟ್ರಿಯದಮೇಲೆ ಯುದ್ಧಕ್ಕೆ ಹೊರಟರು. ಬ್ರಿಟನ್ನಿನಲ್ಲಿಯೂ ಮಂತ್ರಿಮಂಡಲಿಯು ಪುನರ್ವ್ಯವಸ್ಥೆಗೊಳಗಾಗಿತ್ತು. ಎಲ್ಲ ಪಕ್ಷಗಳ ಪ್ರಮುಖರೂ ಮಂತ್ರಿಮಂಡಲಿಯಲ್ಲಿ ಸೇರಿಕೊಂಡಿದ್ದರು. ಕೊಯಲಿಷನ್ ಮಂತ್ರಿಕೂಟವು ಸಿದ್ಧವಾಗಿತ್ತು.

ಜರ್ಮನರಿಗೆ ಬ್ರಿಟಿಷರೇ ತಮ್ಮ ಮುಖ್ಯಶತ್ರುಗಳೆಂದು ತೋರಿತು. ಬೆಲ್ಜಿಯಂ ಮತ್ತು ಫ್ರಾನ್ಸ್ ಜನರ ಸಹಾಯಕ್ಕಾಗಿ ಸೈನ್ಯಗಳನ್ನು ಕೊಟ್ಟು ಕಳುಹಿಸಿದ್ದಲ್ಲದೆ ಬ್ರಿಟಿಷರು ಜರ್ಮನಿಯ ಶತ್ರುಗಳಿಗೆಲ್ಲರಿಗೂ ಬೇಕಾದ ಸಾಲಗಳನ್ನು ಕೊಡುತ್ತ ವ್ಯಾಪಾರಸಾಮಗ್ರಿಯನ್ನು ಸಮುದ್ರದಮೇಲೊಯ್ದು ಒದಗಿಸುತ್ತಲಿದ್ದರು. 1916ರಲ್ಲಿ ಜರ್ಮನರು ಮೊದಲು ಫ್ರೆಂಚರನ್ನು ರಭಸದಿಂದ ತಾಗಿ ಸೋಲಿಸಿಬಿಡಬೇಕೆಂದು **ವೆರ್ಡೂನ್** (Verdun) ಎಂಬಲ್ಲಿ ಫ್ರೆಂಚರನ್ನು ಆಕ್ರಮಿಸಿದರು. ಎರಡು ಕಡೆಗಳಲ್ಲಿಯೂ ಅಪಾರನಷ್ಟ ಸಂಭವಿಸಿತು. ಆದರೆ ಫ್ರೆಂಚರು ಶರಣೆನ್ನಲಿಲ್ಲ. ಆ ವೇಳೆಗೆ ಬ್ರಿಟಿಷರೂ ತಮ್ಮ ಸೈನ್ಯಗಳನ್ನು ಹೆಚ್ಚಿಸಿಕೊಂಡಿದ್ದರು. **ಸಾಮ್** (Somme) ನದಿಯಬಳಿ ಬ್ರಿಟಿಷರೂ ಫ್ರೆಂಚರೂ ಸೇರಿ ಜರ್ಮನರನ್ನು ಆಕ್ರಮಿಸಿದರು. ಮತ್ತೆ ಅಪಾರವಾಗಿ ಪ್ರಾಣನಷ್ಟವಾಯಿತು. ಜಯಾಪಜಯಗಳು ನಿರ್ಧರವಾಗಲಿಲ್ಲ.

ಅತ್ತ ಪೋಲಂಡಿನಲ್ಲಿ ಪರಾಜಯಪಡೆದ ಬಳಿಕ ರಷ್ಯದವರು ಚೇತರಿಸಿಕೊಂಡು ಪುನಃ ಸನ್ನಾಹಮಾಡಿ ಆಸ್ಟ್ರಿಯ ಹಂಗರಿ ರಾಷ್ಟ್ರವನ್ನು ಮುತ್ತಿದರು. ಇಟಲಿಯವರೂ ಆ ರಾಷ್ಟ್ರವನ್ನು ತೆಂಕಲಿಂದಮುತ್ತಿ **ಇಸಾನ್ಸೊ**(Isonzo)ನದಿಬಳಿಗೆದ್ದಿದ್ದರು. ರಷ್ಯನ್ನರು ಜಯಶಾಲಿಗಳಾಗಬಹುದೆಂದು ಭಾವಿಸಿ **ರುಮೇನಿಯ** ರಾಷ್ಟ್ರದವರು ರಷ್ಯದ ಪಕ್ಷವನ್ನು ಸೇರಿ ಯುದ್ಧದಲ್ಲಿ ಪ್ರವೇಶಿಸಿದರು.

**ಬಾಲ್ಕನ್ ಕಡೆ ಜರ್ಮನ್ ಜಯ**

ಆಗ ಆಸ್ಟ್ರಿಯ ಹಂಗರಿಯ ಸಹಾಯಕ್ಕಾಗಿ ಜರ್ಮನರು ಬಾಲ್ಕನ್ ಕ್ಷೇತ್ರಗಳಕಡೆ ತಮ್ಮ ಸೈನ್ಯಗಳನ್ನು ಹೊರಡಿಸಬೇಕಾಯಿತು. ವೇಗದಿಂದ ನುಗ್ಗಿಬಂದ ಜರ್ಮನರು ರಷ್ಯದವರನ್ನೋಡಿಸಿದ್ದಲ್ಲದೆ ರುಮೇನಿಯವನ್ನು ಮುತ್ತಿ ಆ ರಾಷ್ಟ್ರದ ಅರ್ಧಭಾಗವನ್ನು ವಶಪಡಿಸಿಕೊಂಡರು.

ಅತಿಪೂರ್ವದಿಕ್ಕಿನಲ್ಲಿ ಜಪಾನ್ 1914ರ ಆಗಸ್ಟ್ ತಿಂಗಳಲ್ಲಿಯೇ ಬ್ರಿಟಿಷರ ಪಕ್ಷವನ್ನು ಸೇರಿ ಚೀನತೀರದಲ್ಲಿ ಜರ್ಮನರು ಸಂಪಾದಿಸಿಕೊಂಡಿದ್ದ **ಕಿಯಾಚೌ** ಎಂಬ ಸ್ಥಳವನ್ನು ಆಕ್ರಮಿಸಿಕೊಂಡಿದ್ದರು. ಪೆಸಿಫಿಕ್ ಸಾಗರದಲ್ಲಿ ಜರ್ಮನರಿಗೆ ನೆಲೆಯೇ

ಇಲ್ಲದಾಗಿತ್ತು. ಜರ್ಮನರು ದೊಡ್ಡ ಹಡಗುಪಡೆಯನ್ನು ಕಟ್ಟಿಕೊಂಡಿದ್ದಾಗ್ಯೂ ಬ್ರಿಟಿಷರ ಬಲಕ್ಕೆ ಸಮನಾದಬಲವನ್ನು ಪಡೆದಿರಲಿಲ್ಲ. ಯುದ್ಧದ ಪ್ರಾರಂಭದಲ್ಲಿಯೇ ಬ್ರಿಟಿಷ್ ನೌಕಾಬಲಮುಖ್ಯರು ಅತಿಜಾಗ್ರತಿಯಿಂದ ಜರ್ಮನ್ ಯುದ್ಧದಹಡಗುಗಳು ಜರ್ಮನ್ ಬಂದರುಗಳನ್ನು ಬಿಟ್ಟುಹೊರಡದಂತೆ ಅಡ್ಡಗಟ್ಟಿದ್ದರು. ಶತ್ರುಬಲವನ್ನು ಬಂಧನದಲ್ಲಿಡುವುದಲ್ಲದೆ ಬ್ರಿಟಿಷ್ ನೌಕಾಬಲದವರು ಬೇರೆ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದರು. ಬ್ರಿಟಿಷ್ ದ್ವೀಪಗಳ ಸುತ್ತಲೂ ಕೋಟೆಗಟ್ಟಿಕೊಂಡಂತೆ ಇದ್ದು ಸ್ವದೇಶರಕ್ಷಣೆಯನ್ನು ನಿರ್ವಹಿಸಿದರು. ಬ್ರಿಟನ್ನಿನಿಂದ ಫ್ರಾನ್ಸಿಗೆ ಹಡಗುಗಳಲ್ಲಿ ಲಕ್ಷಾಂತರ ಸೈನಿಕರನ್ನು ಸಾಗಿಸಿಕೊಡುತ್ತಿದ್ದರು. ಶತ್ರುಗಳ ವ್ಯಾಪಾರದ ಹಡಗುಗಳನ್ನು ಯಾವ ಸಮುದ್ರದಲ್ಲಾದರೂ ತಡೆದು ಜರ್ಮನರ ಹೊರಗಣ ವ್ಯಾಪಾರ ನಾಸ್ತಿಯೆನಿಸಿದರು. ತಮ್ಮ ಪಕ್ಷದ ಅಥವಾ ಮಿತ್ರಮಂಡಲಿಯುವರ ಹೊರ ವ್ಯಾಪಾರವನ್ನು ನಡೆಸುತ್ತಿದ್ದ ಹಡಗುಗಳನ್ನು ರಕ್ಷಿಸಿದರು. ಎಲ್ಲಕ್ಕೂ ಮೇಲಾಗಿ ಸಮುದ್ರಮಾರ್ಗಗಳನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ಬ್ರಿಟನ್ನಿಗೆ ಅತ್ಯವಶ್ಯಕವಾಗಿ ಹೊರಗಿನಿಂದಲೇ ಬರಬೇಕಾಗಿದ್ದ ಆಹಾರಪದಾರ್ಥಗಳು ಬಂದುಸೇರುವಂತೆ ಏರ್ಪಡಿಸಿದರು.

**ಬ್ರಿಟಿಷ್ ನೌಕಾಬಲದ ಪ್ರಭಾವ**

ಜಗದ್ವ್ಯಾಪಿಯಾಗಿ ಬಲವತ್ತಮವಾಗಿದ್ದ ಬ್ರಿಟಿಷ್ ನೌಕಾಬಲಕ್ಕೆದುರಾಗಿ ಮೊದಮೊದಲು ಜರ್ಮನ್ ಯುದ್ಧದಹಡಗುಗಳು ಬೀಳಲಿಲ್ಲ. 1914ರಲ್ಲಿ ಭೂಮಧ್ಯ ಸಮುದ್ರದಲ್ಲಿ ಕಾಣಿಸಿದ ಎರಡು ಜರ್ಮನ್ ಹಡಗುಗಳು ಹೇಗೋ ತಪ್ಪಿಸಿಕೊಂಡು ಸುಳಿದಾಡುತ್ತಿದ್ದು ಕಡೆಗೆ ದಕ್ಷಿಣಅಮೆರಿಕದಬಳಿ **ಫಾಕ್ಲೆಂಡ್ ದ್ವೀಪಗಳ** ( Falkland Isles) ಒತ್ತಿನಲ್ಲಿ ಬ್ರಿಟಿಷರಿಗೆ ಸಿಕ್ಕಿ ಧ್ವಂಸವಾದವು. 1915ರಲ್ಲಿ ಜರ್ಮನ್ ಹಡಗುಗಳು ಬ್ರಿಟನ್ನಿನ ಉತ್ತರದಲ್ಲಿ ಅಲ್ಲಲ್ಲಿ ಓಡಾಡುತ್ತಿದ್ದುವು. ಗುಪ್ತಗಾಮಿಗಳಂತೆ ಸಂಚರಿಸುತ್ತಿದ್ದವು. 1916ರಲ್ಲಿ ಡೆನ್ಮಾರ್ಕಿನ ಉತ್ತರದಲ್ಲಿ **ಜೂಟ್ಲೆಂಡ್** (Jutland)ಬಳಿ ನೌಕಾಬಲಗಳು ಎದುರುಬದುರಾಗಿ ಹೋರಾಡಿದವು. ಆ ಹೋರಾಟದಲ್ಲಿ ಎರಡುಪಕ್ಷಗಳವರೂ ಜಯಲಾಭವಾಯಿತೆಂದು ಭಾವಿಸಿದರು. ಆ ಬಳಿಕ ಜರ್ಮನ್ ಹಡಗುಗಳು **ಕೀಲ್** ಕಾಲುವೆಯಲ್ಲಿ ಅಡಗಿದ್ದು ಪುನಃ ಹೊರಗೆಕಾಣಿಸಿಕೊಳ್ಳದೆ ಇರಬೇಕಾಯಿತು.

**ಜಲಯುದ್ಧಗಳು**

ಸಮುದ್ರದ ಮೇಲೆ ಬ್ರಿಟಿಷರೊಡನೆ ಸಮಾನರಾಗಿ ಹೋರಾಡಲು ಜರ್ಮನಿಗಾಗಲಿಲ್ಲ. ಆದರೆ ಜರ್ಮನರು ಜಲಾಂತರ್ಗಾಮಿಗಳಾದ ಸಬ್ಮೆರೀನ್ (Submarine) ಎಂಬವುಗಳನ್ನು ಕಟ್ಟಿಕೊಂಡಿದ್ದುದಲ್ಲದೆ ಟಾರ್ಫಿಡೋ, ಮೈನ್ ಮುಂತಾದ ಅನೇಕ ಪ್ರಯೋಗಗಳನ್ನು ಸಾಧಿಸಿಕೊಂಡಿದ್ದರು. 1917ರಲ್ಲಿ ಜರ್ಮನರು ಬ್ರಿಟಿಷರ

ವ್ಯಾಪಾರವನ್ನು ನಾಶಗೊಳಿಸಬೇಕೆಂದು ಉದ್ದೇಶಪಟ್ಟರು. ಬ್ರಿಟನ್ನಿಗೆ ಪದಾರ್ಥವನ್ನು ಹೊತ್ತು ತರುತ್ತಿದ್ದ ಹಡಗುಗಳನ್ನು ಸಮುದ್ರದಲ್ಲಿ ತಮ್ಮ ಜಲಾಂತರ್ಗಾಮಿಗಳ ಪ್ರಯೋಗದಿಂದ ಮುಳುಗಿಸಲು ಮೊದಲು ಮಾಡಿದರು. ಬ್ರಿಟಿಷರ ಹಡಗುಗಳಲ್ಲದೆ ಬ್ರಿಟನ್ನೊಂದಿಗೆ ಮೈತ್ರಿಯಿಂದಿದ್ದ ದೇಶಗಳ ಹಡಗುಗಳಿಗೂ ಈ ಅಪಾಯ ತಟ್ಟಿತು. ಬ್ರಿಟನ್ನಿಗೆ ಸಾಮಾನು ಹೊರುವ ಯಾವ ಹಡಗನ್ನಾದರೂ ಎಚ್ಚರಿಕೆ ಕೊಡದೆ ತಮ್ಮ ಸಬ್ಮೆರೀನುಗಳಿಂದ ಧ್ವಂಸಗೊಳಿಸುವುದಾಗಿ ಜರ್ಮನರು ಪ್ರಕಟಿಸಿದರು. ಆ ಪ್ರಕಟಣೆಯಿಂದ ಅಮೆರಿಕದವರಿಗೆ ಮೊದಲೇ ಇದ್ದ ಅಸಮಾಧಾನ ಹೆಚ್ಚಿತು. 1915ರಲ್ಲಿಯೇ **ಲೂಸಿಟಾನಿಯ** (Lusitania) ಎಂಬ ಬ್ರಿಟಿಷ್ ಹಡಗು ಮುಳುಗಿದಾಗ ಅದರಲ್ಲಿದ್ದ ಅಮೆರಿಕನ್ನರು ಪ್ರಾಣ ಕಳೆದಿದ್ದರು. 1917ರಲ್ಲಿ ಜರ್ಮನರು ತಮ್ಮ ಸಬ್ಮೆರೀನುಗಳನ್ನು ಸರ್ವತ್ರ ಪ್ರಯೋಗಿಸುವುದಾಗಿ ಪ್ರಕಟಿಸಿದಾಗ ಅಮೆರಿಕದ **ಅಧ್ಯಕ್ಷ ವಿಲ್ಸನ್** (President Wilson) ಜರ್ಮನಿಯ ಮೇಲೆ ಯುದ್ಧ ಕಟ್ಟಿದನು. ಇದನ್ನು ತಿಳಿದ ಜರ್ಮನರ ಮನಸ್ಸಿನಲ್ಲಿ ಅಮೆರಿಕದ ಸೈನ್ಯ ಸಹಾಯಗಳು ಅಟ್ಲಾಂಟಿಕ್ ದಾಟಿ ಬರುವುದರೊಳಗಾಗಿ ಬ್ರಿಟನ್ನಿನಲ್ಲಿ ಜನರಿಗೆ ಆಹಾರವಿಲ್ಲದಂತೆ ನೆರವೇರಿಸಲು ಸಾಧ್ಯವೆಂಬ ನಂಬಿಕೆಯಿತ್ತು. ವಾಸ್ತವವಾಗಿ ಜರ್ಮನಿಯ ವ್ಯಾಪಾರವೂ ಬಂಧಿತವಾಗಿತ್ತು. ಸಬ್ಮೆರೀನುಗಳ ಹಾವಳಿಯಿಂದ ಬ್ರಿಟನ್ನಿಗೂ ಕಷ್ಟಕಾಲವೊದಗಿತು. 1917ರಲ್ಲಿ ಬ್ರಿಟನ್ನಿನಿಂದ ಹೊರಟ ನಾಲ್ಕು ಹಡಗುಗಳಿಗೊಂದರಂತೆ ಮಾರ್ಗದಲ್ಲಿ ಧ್ವಂಸವಾಗಲಾರಂಭವಾಯಿತು. ಇದ್ದ ಆಹಾರ ಸಾಮಗ್ರಿ ಸಾಲದೆಬಂದು ಬ್ರಿಟಿಷ್ ಸರ್ಕಾರದವರು ಪದಾರ್ಥದ ಹಂಚಿಕೆಯನ್ನು ಕ್ರಮಗೊಳಿಸಿ ಆದಷ್ಟು ಕಾಲವನ್ನು ತಳ್ಳಬೇಕಾಯಿತು. ಆದರೆ ಅಮೆರಿಕದವರು ಯುದ್ಧದಲ್ಲಿ ಸೇರಿಕೊಂಡು ತಮ್ಮ ಸಮಸ್ತ ಹಡಗುಗಳನ್ನು ಮಿತ್ರಮಂಡಲಿಯವರ ಪ್ರಯೋಜನಕ್ಕೆಂದು ಬಿಟ್ಟುಕೊಡಲು ಸಿದ್ಧರಾದರು. ಬ್ರಿಟಿಷರೂ ಅಮೆರಿಕನ್ನರೂ ಸಬ್ಮೆರೀನುಗಳನ್ನು ಅಡಗಿಸಲು ಉಪಾಯವನ್ನು ಸಾಧಿಸಿದರು. ಬೇಗ ಬೇಗ ಹೊಸ ಹಡಗುಗಳನ್ನು ಕಟ್ಟಿಕೊಂಡರು. ತಮ್ಮ ವ್ಯಾಪಾರ ರಕ್ಷಣೆಗೆ ಹೊಸ ಏರ್ಪಾಟನ್ನೂ ನಡೆಸಿಕೊಂಡರು.

**ಸಬ್ಮೆರೀನ್ ಹಾವಳಿ**

**ಅಮೆರಿಕದ ಪ್ರವೇಶ**

ಸಬ್ಮೆರೀನುಗಳ ಪ್ರಯೋಗದಲ್ಲಿ ತಮ್ಮ ಆಸೆಯನ್ನಿಟ್ಟುಕೊಂಡು ಜರ್ಮನರು 1917ರಲ್ಲಿ ಪಶ್ಚಿಮರಣರಂಗದಲ್ಲಿ ಹೊಸ ಆಕ್ರಮಣ ಪ್ರಯತ್ನವನ್ನು ನಡೆಸದೆ **ಹಿಂಡೆನ್ಬರ್ಗ್ ರೇಖೆ** (Hiudenburg Line) ಎಂಬ ಮೇರೆಯನ್ನು ಭದ್ರಪಡಿಸಿಕೊಂಡು ಕಾಲನಿರೀಕ್ಷೆಯಲ್ಲಿದ್ದರು. ಬ್ರಿಟಿಷರೂ ಫ್ರೆಂಚರೂ ಆಗ ಜರ್ಮನರು ಬಿಟ್ಟುಕೊಟ್ಟಿದ್ದ ರುದ್ರಭೂಮಿಯಂತಹ ಪ್ರವೇಶವನ್ನು ವಶಪಡಿಸಿಕೊಳ್ಳುವುದಕ್ಕೂ

ಆಗಾಗ್ಗೆ ಜರ್ಮನರ ಗುಲ್ಮಗಳನ್ನು ಮುತ್ತುವುದಕ್ಕೂ ತೊಡಗಿದರು. ಈ ಪ್ರಯತ್ನ ದಲ್ಲಿಯೂ ಅಪಾರವಾದ ನಷ್ಟಗಳು ಸಂಭವಿಸಿದವು.

1917ರಲ್ಲಿ ಸಬ್ಮೆರೀನುಗಳ ಹಾವಳಿ ಅಮೆರಿಕದ ಪ್ರವೇಶಗಳಲ್ಲದೆ ಮತ್ತೊಂದು ಬೃಹದ್ಘಟನೆ ಸಂಭವಿಸಿತು. ರಷ್ಯದಲ್ಲಿ ಮಹಾಪಲ್ಲಟ ನಡೆದು ವಿನೂತನವಾದ **ಬೊಲ್ಷೆವಿಕ್‌ರಾಷ್ಟ್ರ ಸ್ಥಾಪನೆ**ಯಾಯಿತು. ಆ ಹೊಸ ರಾಷ್ಟ್ರವನ್ನು ಕಟ್ಟಿದ **ಲೆನಿನ್** Lenin) ಜರ್ಮನಿಯೊಡನೆ ಯುದ್ಧವನ್ನು ನಿಲ್ಲಿಸಿದನು. 1918ರಲ್ಲಿ ರಷ್ಯದವರು ಜರ್ಮನಿಯೊಡನೆ **ಬ್ರೆಸ್ಟ್‌ಲಿಟೋವ್ಸ್ಕ್** (Brest Litovsk) ಎಂಬಲ್ಲಿ ಕರಾರು ನಡೆಸಿಕೊಂಡು ಹೋರಾಟದಿಂದ ದೂರ ವಾದರು. ಆ ಕಾರಣದಿಂದ ಜರ್ಮನರು ತಮ್ಮ ಸರ್ವ ಚೈತನ್ಯವನ್ನೂ ಪಶ್ಚಿಮದಲ್ಲಿ ಒಡ್ಡಲು ಸಾಧ್ಯವಾಯಿತು. ತೆಂಕಲಲ್ಲಿ ಪ್ರಬಲ ಗೊಳ್ಳುತ್ತಿದ್ದ ಇಟಲಿಯವರನ್ನು ಅಡಗಿಸಲು ಜರ್ಮನ್ ಸೈನ್ಯಗಳು ಹೊರಟು **ಕಪೊರೆಟ್ಟೊ** (Caporetto) ಎಂಬಲ್ಲಿ ಇಟಲಿಯವರನ್ನು ಸೋಲಿಸಿಬಿಟ್ಟವು. ಬಾಲ್ಕನ್ ಕ್ಷೇತ್ರಕ್ಕೂ ಮೂಡಲಲ್ಲಿ ತುರ್ಕಿ ಆ ವೇಳೆಗೆ ಸೋತಿತ್ತು. ಬ್ರಿಟಿಷರು ಮೆಸೊಪೊಟೇಮಿಯದಲ್ಲಿಯೂ ಪಾಲೆಸ್ಟೈನಿನಲ್ಲಿಯೂ ಜಯಗಳನ್ನು ಪಡೆಯು ತ್ತಿದ್ದರು. ಆದರೆ ಜರ್ಮನ್ ದಳಪತಿ ಲೂಡೆನ್ಡಾರ್ಫ್ ಪಶ್ಚಿಮ ರಣರಂಗದಲ್ಲಿ ದೊಡ್ಡ ಪ್ರಯತ್ನವನ್ನಿಟ್ಟುಕೊಂಡನು. ಮಿತ್ರಮಂಡಲಿಯವರಿಗೆ ಕಷ್ಟವಾಗಿದ್ದರೂ ಜರ್ಮನಿಗೆ ಹೆಚ್ಚು ಕಷ್ಟಕಾಲವಾಗಿತ್ತು. ಜರ್ಮನಿಯ ಒಳನಾಡಿನಲ್ಲಿ ಆಹಾರ ಪದಾರ್ಥಗಳಿಗೆ ಕಷ್ಟವಾಗಿತ್ತು. ಆದ್ದರಿಂದ ಹೇಗಾದರೂ ಸಾಹಸ ಮಾಡಿದ ಹೊರತು ದುರ್ಗತಿ ಸಿದ್ಧವೆಂದು ತಿಳಿದು ಆ ದಳಪತಿ ಸರ್ವಶಕ್ತಿಯನ್ನೂ ಪಶ್ಚಿಮ ರಣಭೂಮಿಯಲ್ಲಿ ಪ್ರಯೋಗಿಸಿ ಬ್ರಿಟಿಷರನ್ನೂ ಫ್ರೆಂಚರನ್ನೂ ಗೆಲ್ಲಲು ಹವಣಿಸಿದನು.

**ರಷ್ಯ-ಪಲ್ಲಟ**

**ಜರ್ಮನರ ಕಡೆಯ ಉದ್ಯಮ**

ಸಾಮ್ ನದಿಯ ಬಳಿಯಿದ್ದ ಬ್ರಿಟಿಷರ ಮೇಲೆ ಜರ್ಮನರು ಮೊದಲು ಬಿದ್ದು ಬ್ರಿಟಿಷರನ್ನು ಹಿಮ್ಮೆಟ್ಟಿಸಿದರು. ಹಿಂದೆ 1914ರಲ್ಲಿ ಎಷ್ಟು ದೂರ ಫ್ರಾನ್ಸಿನಲ್ಲಿ ನುಗ್ಗಿದ್ದರೋ ಆ ಮಾರ್ನ್ ನದಿಯ ಮಗ್ಗುಲಿಗೆ ಜರ್ಮನರು ವೇಗದಿಂದಲೂ ರಭಸ ದಿಂದಲೂ ನುಗ್ಗಿದರು. ಆ ವೇಳೆಗೆ ಅನುಭವ ಪಡೆದಿದ್ದ ಬ್ರಿಟಿಷರೂ ಫ್ರೆಂಚರೂ ರಣಭೂಮಿಯಲ್ಲಿ ಏಕನಾಯಕನಿರಬೇಕೆಂದು ನಿಶ್ಚಯಮಾಡಿ **ಮಾರ್ಷಲ್ ಫಾಕ್** (Marshal Foch) ಎಂಬಾತನನ್ನು ಸಮಸ್ತ ಸೈನ್ಯಾಧಿಪತ್ಯಕ್ಕೆ ಗೊತ್ತುಮಾಡಿಕೊಂಡರು. ಅಮೆರಿಕದ ಸೈನ್ಯಗಳೂ ಬಂದಿಳಿ ದವು. ಜುಲೈ ತಿಂಗಳ ವೇಳೆಗೆ ಫಾಕ್ ಎಲ್ಲ ಬಲವನ್ನೂ ಒಟ್ಟುಗೂಡಿಸಿಕೊಂಡು ತಾನೇ ಆಕ್ರಮಣಕ್ಕೆ ತೊಡಗಿ ಜರ್ಮನರನ್ನು ಪುನಃ ಹಿಂಡೆನ್ಬುರ್ಗ್‌ರೇಖೆಗೆ ಅಟ್ಟಿದನು.

**ಮಿತ್ರಮಂಡಲಿಯ ಜಯ**

ಆ ವೇಳೆಗೆ ಮೂಡಲಲ್ಲಿ ಬಲ್ಗೇರಿಯ ಸೋತಿತ್ತು. ಇಟಲಿಯವರು ಆಸ್ಟ್ರಿಯದವರನ್ನು **ವಿಟ್ಟೋರಿಯೊ ವೆನೆಟೊ** (Vittorio Veneto) ಎಂಬಲ್ಲಿ ಸೋಲಿಸಿದ್ದರು. ಆಸ್ಟ್ರಿಯ ಹಂಗರಿ ರಾಷ್ಟ್ರವು ಧ್ವಂಸವೇ ಆಗಿತ್ತು. ಇನ್ನು ಮೂಡಲಿಗೆ ಪ್ಯಾಲೆಸ್ಟೈನಿನಲ್ಲಿ ದಳಪತಿ ಅಲ್ಲೆನ್ಬಿ (Allenby) ತುರುಷ್ಕ ಸೈನ್ಯಗಳನ್ನು ನಾಶಗೊಳಿಸಿ **ಸಿರಿಯವನ್ನು** ಮುತ್ತಿ **ದಮಾಸ್ಕಸ್** ನಗರವನ್ನು ಹಿಡಿದುಕೊಂಡಿದ್ದನು. ಈ ರೀತಿ ಎಲ್ಲೆಲ್ಲಿಯೂ ಪರಾಜಯಗಳೇ ಸಂಭವಿಸಿದ್ದನ್ನು ಕಂಡು ಜರ್ಮನ್ ಸೈನ್ಯಮುಖ್ಯರು ತಮ್ಮ ಪ್ರಯತ್ನವೆಲ್ಲ ನಾಶವಾದುದನ್ನು ತಿಳಿದರು. ಲೂಡೆನ್ಡಾರ್ಫ್ ತನ್ನ ರಾಜಿನಾಮೆ ಕೊಟ್ಟನು. ಜರ್ಮನಿಯ ಒಳನಾಡಿನಲ್ಲಿ ಅಲ್ಲಕಲ್ಲೋಲವಾಗುತ್ತಿತ್ತು. ಚಕ್ರವರ್ತಿ ರಾಜಧಾನಿಯನ್ನು ಬಿಟ್ಟೋಡಿದನು. ಕೀಲ್ ಕಾಲುವೆಯಲ್ಲಿದ್ದ ಜರ್ಮನಿ ಹಡಗುಗಳ ಹುದ್ದೆದಾರರು ದಂಗೆಯೆದ್ದಿದ್ದರು. ಆಗ ತಾತ್ಕಾಲಿಕವಾಗಿ ಸ್ಥಾಪಿತವಾಗಿದ್ದ ಹೊಸ ಜರ್ಮನ್ ರಾಷ್ಟ್ರದೊಡನೆ ಮಿತ್ರಮಂಡಲಿಯವರು ಹೋರಾಟ ನಿಲ್ಲಿಸುವ ನಿಶ್ಚಯವನ್ನು ನವೆಂಬರ್ 11ನೆ ದಿನ ಮಾಡಿದರು.

**ಜರ್ಮನಿಯೊಳಗೆ ಅವ್ಯವಸ್ಥೆ**

ಮಿತ್ರಮಂಡಲಿಯಲ್ಲಿ ಸೇರಿದ್ದ ಬ್ರಿಟಿಷರು ಫ್ರೆಂಚರು ಅಮೆರಿಕದವರು ಮತ್ತು ಇಟಲಿಯವರು ಜಯಶಾಲಿಗಳಾಗಿದ್ದರು. ರಷ್ಯದಲ್ಲಿ ಭಾರಿ ಪಲ್ಲಟ ನಡೆದು ಒಳಜಗಳಗಳೂ ಯುದ್ಧಗಳೂ ರೇಗುತ್ತಿದ್ದವು. ಆಸ್ಟ್ರಿಯ ಹಂಗರಿಯೆಂಬ ಚಕ್ರಾಧಿಪತ್ಯದ ರೂಪವೇ ಅಳಿಸಿಹೋಗಿತ್ತು. ಜರ್ಮನಿಯಲ್ಲಿ ಸಾಮ್ರಾಜ್ಯವೆಂಬುದು ನಾಶವಾದುದಲ್ಲದೆ ಆಹಾರಪದಾರ್ಥಗಳಿಲ್ಲದೆ ಜನರ ಬದುಕೇ ಘೋರವಾಗಿತ್ತು. ಜರ್ಮನಿ ಸಂಪಾದಿಸಿಕೊಂಡಿದ್ದ ಅನ್ಯಕ್ಷೇತ್ರಗಳೆಲ್ಲವೂ ನಷ್ಟವಾಗಿದ್ದವು. ತುರ್ಕಿಯ ಸುಲ್ತಾನನ ಸಾಮ್ರಾಜ್ಯ ಒಡೆದುದು ಮಾತ್ರವಲ್ಲದೆ ಆಡಳಿತದಲ್ಲಿಯೂ ಪಲ್ಲಟ ಸಂಭವಿಸಿತ್ತು. ಜಗತ್ಪ್ರಳಯದಂತೆ ನಡೆದಿದ್ದ ನಾಲ್ಕು ವರ್ಷಗಳ ಯುದ್ಧದಲ್ಲಿ 500 ಲಕ್ಷ ಸೈನಿಕರು ಹೋರಾಡಿದ್ದುದಲ್ಲದೆ 5000 ಕೋಟಿ ಪೌಂಡುಗಳನ್ನು ಮೀರಿದಷ್ಟು ವೆಚ್ಚವಾಗಿತ್ತು. ಯುದ್ಧದಲ್ಲಿ ಪ್ರಾಣಬಿಟ್ಟವರ ಸಂಖ್ಯೆಯೇ 80 ಲಕ್ಷಗಳಷ್ಟು, ಗಾಯಪಟ್ಟವರೂ ನಷ್ಟಪಟ್ಟವರೂ ಅಗಣ್ಯ. ಖೈದಿಗಳಾದವರೂ ತಬ್ಬಲಿಗಳಾದವರೂ ಅನಾಥರಾದವರೂ ದೇಶಭ್ರಷ್ಟರಾದವರೂ 270 ಲಕ್ಷಗಳಿಗೆ ಹೆಚ್ಚು ಮಂದಿಯಾದರು. ಮಿತ್ರಮಂಡಲಿಯವರಿಗೂ ನಷ್ಟವಾಗಿತ್ತು. ಫ್ರಾನ್ಸಿನ ಸಾಲವು ಒಂದಕ್ಕೆ ಹನ್ನೆರಡರಷ್ಟು ಏರಿತ್ತು. ಗ್ರೇಟ್ ಬ್ರಿಟನ್ನಿನಲ್ಲಿ ಯುದ್ಧ ಪೂರ್ವದಲ್ಲಿ ರಾಷ್ಟ್ರಋಣವೆಂಬುದು £ 7080 ಲಕ್ಷಗಳಷ್ಟಿತ್ತು; ಯುದ್ಧಾಂತದಲ್ಲಿ £ 74350 ಲಕ್ಷಗಳಾಯಿತು.

**ಅಪಾರನಷ್ಟ**

ಹೋರಾಟವನ್ನು ನಿಲ್ಲಿಸಿದ ತರುವಾಯ ಮಿತ್ರಮಂಡಲಿಯ ಪ್ರತಿನಿಧಿಗಳು ಪ್ಯಾರಿಸ್‌ನಗರದಲ್ಲಿ ಸೇರಿ ಶಾಂತಿಯ ಕರಾರುಗಳ ವಿಚಾರವನ್ನು ಮೊದಲಿಟ್ಟರು.

ಶಾಂತಿಸ್ಥಾಪನೆಯ ಪ್ರಯತ್ನ

ಮಿತ್ರಮಂಡಲಿಯಲ್ಲಿ ಸೇರಿದ್ದ ಪ್ರತಿರಾಷ್ಟ್ರದ ಪ್ರತಿನಿಧಿಯೂ ಅಲ್ಲಿಗೆ ಬಂದಿದ್ದಾಗ್ಯೂ ಅತಿ ಪ್ರಬಲವಾಗಿದ್ದ ಅಮೆರಿಕ, ಗ್ರೇಟ್ ಬ್ರಿಟನ್, ಫ್ರಾನ್ಸ್ ಮತ್ತು ಇಟಲಿಯ ಪರವಾಗಿ **ಅಧ್ಯಕ್ಷ ವಿಲ್ಸನ್** (Wilson), **ಲಾಯ್ಡ್ ಜಾರ್ಜ್** (Lloyd George), **ಕ್ಲೆಮಾಂಕೋ** (Clemenceau) ಮತ್ತು **ಅರ್ಲಾಂಡೋ** (Orlando) ಎಂಬವರು ಮುಖ್ಯಸ್ಥರಾಗಿ ವಾದವಿವಾದಗಳನ್ನೂ ನಿಷ್ಕರ್ಷೆಗಳನ್ನೂ ನಡೆಸಬೇಕಾಯಿತು.

## ಶಾಂತಿಸ್ಥಾಪನೆಯ ಒಪ್ಪಂದಗಳು

ವಿಲ್ಸನ್ನನ ಉದ್ದೇಶಗಳು

ಪ್ಯಾರಿಸ್ ನಗರದಲ್ಲಿ ಸೇರಿದ ಮಿತ್ರಮಂಡಲಿಯ ಪ್ರಮುಖರು ಜಗತ್ತನ್ನೇ ಪುನಃ ಕಟ್ಟುವ ಕೆಲಸವನ್ನು ನಿರ್ವಹಿಸಬೇಕಾಗಿತ್ತು. ಅಮೆರಿಕದ ಅಧ್ಯಕ್ಷ ವಿಲ್ಸನ್ ಯುದ್ಧದಲ್ಲಿ ಸೇರಿಸಿಕೊಳ್ಳುವ ಮೊದಲು ತನ್ನ ಉದ್ದೇಶಗಳನ್ನು ಎಲ್ಲರಿಗೂ ತಿಳಿಯಪಡಿಸಿದ್ದನು. ಇಷ್ಟು ಪ್ರಲಯಕಾರಕವಾದ ಯುದ್ಧ ಪುನಃ ಘಟಿಸದಂತೆ ನೆರವೇರಿಸುವುದು ಎಲ್ಲರ ಮನಸ್ಸಿನಲ್ಲಿಯೂ ಇತ್ತು. ವಿಲ್ಸನ್ ದೂರದೃಷ್ಟಿಯುಳ್ಳವನಾಗಿದ್ದನು. ರಾಷ್ಟ್ರಗಳು ಜಾತಿಬಂಧಗಳಂತಿದ್ದು ಅನ್ಯೋನ್ಯತೆಯಿಂದಿರಬೇಕೆಂಬುದೂ ಮನಸ್ತಾಪಗಳು ತೋರಿದಾಗ ನ್ಯಾಯವಾದರೀತಿಯಲ್ಲಿ ಪರಿಹಾರವಾಗಬೇಕೆಂಬುದೂ ಪುನಃ ಜಗತ್ತಿನಲ್ಲಿ ಯುದ್ಧ ಸಂಭವಿಸಬಾರದೆಂಬುದೂ ಆತನ ಲಕ್ಷ್ಯದಲ್ಲಿತ್ತು. ನಾನಾ ರಾಷ್ಟ್ರಗಳ ಮಧ್ಯೆ ಪಂಚಾಯತಿ ನಡೆಸಿ ಜಗತ್ತಿನಲ್ಲಿ ನ್ಯಾಯಶಾಂತಿಗಳನ್ನು ಕಾಪಾಡಿಕೊಂಡಿರತಕ್ಕ ಸಮಸ್ತರಾಷ್ಟ್ರಗಳ ಕೂಟವೊಂದು ಸ್ಥಾಪನೆಯಾಗಬೇಕೆಂದು ಆತನು ಹೇಳುತ್ತಿದ್ದನು.

ಜಯಶಾಲಿಗಳ ಆಸೆಗಳು

ಅಲ್ಲಕಲ್ಲೋಲವಾಗಿದ್ದ ಯೂರೋಪಿನಲ್ಲಿ ಒಂದು ಕುಲವೋ ಜಾತಿಯೋ ಎನಿಸಿದ್ದವರು ಪ್ರತ್ಯೇಕರಾಗಿ ಸ್ವತಂತ್ರರಾಷ್ಟ್ರ ನಿರ್ಮಾಣಮಾಡಿಕೊಳ್ಳುವುದಾದರೆ ಸ್ವಾತಂತ್ರ್ಯಸಾಧನೆಯ ಯುದ್ಧಗಳಿಗೆ ಅವಕಾಶವಿಲ್ಲದೆಹೋದೀತೆಂದು ವಿಲ್ಸನ್ನನ ಮನಸ್ಸಿನಲ್ಲಿ. ಆದ್ದರಿಂದ ಆತನು ಮಧ್ಯಯೂರೋಪಿನಲ್ಲಿ ಒಂದೊಂದು ಜಾತಿಯವರೂ ಪ್ರತ್ಯೇಕವಾಗಿ ರಾಷ್ಟ್ರಕಟ್ಟಿಕೊಳ್ಳಲೆಂದನು. ಫ್ರೆಂಚರಿಗೆ ಆಲ್ಸಾಸ್ ಲೊರೇನ್ ಹಿಂದಿರುಗಿಬರಬೇಕಾಗಿದ್ದುದಲ್ಲದೆ ನಡೆದಿದ್ದ ಅಪಾರನಷ್ಟವನ್ನು ಶತ್ರುಗಳಿಂದ ಕಟ್ಟಿಸಿಕೊಳ್ಳುವ ಉದ್ದೇಶವಿತ್ತು. ಬ್ರಿಟಿಷರಿಗೆ ಯೂರೋಪಿನಲ್ಲಿ ಗೋಷ್ಪಾದದಷ್ಟು ಭೂಮಿಯಮೇಲೂ ಆಸೆಯಿರಲಿಲ್ಲ; ಆದರೆ ಸಬ್ಮೆರೀನುಗಳ ಹಾವಳಿಯನ್ನು ಅನುಭವಿಸಿದ್ದುದರಿಂದ ಶತ್ರುಗಳು ನಡೆಸಿದ್ದ ದೌಷ್ಟ್ಯವೆಲ್ಲವನ್ನೂ ಕ್ಷಮಿಸಿ ಮರೆತುಬಿಡುವ ಸಿದ್ಧತೆಯಿರಲಿಲ್ಲ. ಜರ್ಮನರನ್ನು ದಂಡಿಸಿ ಅವರಿಂದ ತಮ್ಮ ನಷ್ಟಕ್ಕೆ ತಕ್ಕಷ್ಟು ಪರಿಹಾರದ್ರವ್ಯವನ್ನು ಪಡೆಯುವ ಉದ್ದೇಶ ಫ್ರೆಂಚರಲ್ಲಿಯೂ ಬ್ರಿಟಿಷರಲ್ಲಿಯೂ ಇತ್ತು.

ಮಿತ್ರಮಂಡಲಿಯಲ್ಲಿ ಗಣ್ಯರಾಗಿದ್ದ ಇತರರಾಷ್ಟ್ರಗಳವರಿಗೆ ಜಯದಿಂದ ತಮಗೆ ಲಾಭ ವಾಗುವ ಆಸೆಯಿತ್ತು. ಯುದ್ಧವೇಳೆಯಲ್ಲಿ ಪರಸ್ಪರವಾಗಿ ನಡೆಸಿಕೊಂಡಿದ್ದ ಗೋಪ್ಯ ವಾಗ್ದಾನಗಳ ವಿಚಾರವೂ ಇತ್ತು. ಸರ್ವರಿಗೂ ನ್ಯಾಯವೂ ಕ್ಷೇಮವೂ ಆಗಿರುವಂತೆ ನೆರವೇರಿಸಬೇಕೆಂದಿದ್ದ ವಿಲ್ಸನ್ ಬಳಿಗೆ ಪ್ರತಿಪಕ್ಷದವರೂ ನಿಯೋಗಿಗಳನ್ನು ಕಳುಹಿಸಿ ಕೊಟ್ಟರು. ವಿಪರೀತಗಳಾಗದಂತೆ ನಡೆಸಬೇಕೆಂದಿದ್ದ ಆತನಿಗೂ ಇತರರಿಗೂ ಬರಬರುತ್ತ ಹೊಂದಿಕೆ ಕಡಿಮೆಯಾಯಿತು. ಆದರೆ ಅತ್ಯಾಸೆಗಳನ್ನು ಯಾರೂ ಸಾಧಿಸಿಕೊಳ್ಳುವಹಾಗಾಗಲಿಲ್ಲ. ಎಷ್ಟೋ ಗೋಷ್ಠಿಗಳೂ ಚರ್ಚೆಗಳೂ ನಡೆದಬಳಿಕ ಪ್ಯಾರಿಸ್ಸಿನಲ್ಲಿಯೇ ಎಲ್ಲ ಕರಾರುಗಳೂ ನಡೆದವು. ಎಲ್ಲ ಕರಾರುಗಳಿಗೂ ಒಟ್ಟಿಗೆ **ವರ್ಸೈಲ್ಸ್ ಕರಾರೆನ್ನುವುದು** ರೂಢಿಯಾದರೂ ಜರ್ಮನಿಯ ವಿಚಾರವಾಗಿ ನಡೆದು ದಕ್ಕೆ ಮಾತ್ರವೇ ಅದು ಸರಿಯಾದ ಹೆಸರು. ಆಸ್ಟ್ರಿಯ, ಬಲ್ಗೇರಿಯ, ತುರ್ಕಿ, ಹಂಗರಿಗಳೊಡನೆ ಬೇರೆಬೇರೆಯಾದ ಕರಾರುಗಳೇ ನಡೆದವು.

1918ರ ನವೆಂಬರ್ 11ನೆ ದಿನ ಯುದ್ಧಮುಕ್ತಾಯವನ್ನು ಗೊತ್ತುಮಾಡಿ ಕೊಂಡಾಗಲೇ ಜರ್ಮನರು ತಮ್ಮ ಯುದ್ಧದ ಹಡಗುಗಳನ್ನೂ ವಿಮಾನಗಳನ್ನೂ ಫಿರಂಗಿಗಳನ್ನೂ ಒಪ್ಪಿಸಬೇಕೆಂದು ನಿಶ್ಚಯವಾಗಿತ್ತು. ತಮ್ಮ ಯುದ್ಧದ ಹಡಗು ಗಳನ್ನು ಜರ್ಮನರು ತಾವಾಗಿಯೇ ನಾಶಮಾಡಿಬಿಟ್ಟರು. ಅದರಿಂದ ಆ ಹಡಗುಗಳ ಹಂಚಿಕೆ ಹೇಗೆಂದು ರಾಜ್ಯಗಳಿಗೆ ಆಸ್ಪದವಿಲ್ಲವಾಯಿತು.

**ಜರ್ಮನಿಯ ಪತನ**

ಪುನಃ ಸೈನ್ಯಗಳನ್ನು ಪೋಷಿಸಿ ಶಸ್ತ್ರಾಸ್ತ್ರಸಂದೋಹವನ್ನು ಕಟ್ಟುವುದಿಲ್ಲವೆಂದು ಜರ್ಮನರು ಒಪ್ಪಿಕೊಳ್ಳಬೇಕಾಯಿತು. ಜರ್ಮನಿಯಲ್ಲಿ ಆಗ ತಾತ್ಕಾಲಿಕವಾದ ಸರ್ಕಾರವೊಂದು **ಎಬರ್ಟ್** (Ebert) ಎಂಬಾ ತನ ಅಧ್ಯಕ್ಷತೆಯಲ್ಲಿ ನಡೆಯುತ್ತಿತ್ತು. ಘೋರಯುದ್ಧ ನಡೆಸಿದ ಅಪರಾಧ ತಮ್ಮ ದೆಂದು ಒಪ್ಪಿಕೊಂಡು ಪುನಃ ಯುದ್ಧಸನ್ನಾಹಮಾಡುವುದಿಲ್ಲವೆಂದು ಆ ಸರ್ಕಾರದವರು ಪ್ರಮಾಣಮಾಡಬೇಕಾಯಿತು. ಯುದ್ಧದಲ್ಲಿ ಗೆದ್ದಿದ್ದ ರಾಷ್ಟ್ರಗಳಿಗಾಗಿದ್ದ ನಷ್ಟವನ್ನು ಪರಿಹರಿಸುವುದಕ್ಕಾಗಿ ತಕ್ಕಷ್ಟು ದ್ರವ್ಯವನ್ನು ಸಲ್ಲಿಸಲು ಸಿದ್ಧರಾಗಬೇಕಾಯಿತು. ಮಿತ್ರಮಂಡಲಿಯವರಿಗಾಗಿದ್ದ ಹಡಗುಗಳ ನಷ್ಟಕ್ಕಾಗಿ ತಮ್ಮ ವ್ಯಾಪಾರದ ಹಡಗು ಗಳನ್ನು ಒಪ್ಪಿಸಬೇಕಾಯಿತು.

ಮತ್ತೆ ಯುದ್ಧಸನ್ನಾಹನಡೆಸದಂತೆ ಪರಾಜಿತ ರಾಷ್ಟ್ರಗಳನ್ನು ಬಲವಂತಗೊಳಿಸಿ ದಾಗ ಮಿತ್ರಮಂಡಲಿಯವರ ಮನಸ್ಸಿನಲ್ಲಿ ಉತ್ತರೋತ್ತರ ಸರ್ವರಾಷ್ಟ್ರಗಳಲ್ಲಿಯೂ ಯುದ್ಧತ್ಯಾಗದ ನೀತಿಯನ್ನು ನೆಲೆಗೊಳಿಸುವ ಉದ್ದೇಶವಿತ್ತು.

**ಯುದ್ಧತ್ಯಾಗದ ದೂರಲಕ್ಷ್ಯ**

ಯುದ್ಧವೆಂಬುದೇ ಪುನಃ ಸಂಭವಿಸದಂತೆ ಎಲ್ಲ ರಾಷ್ಟ್ರಗಳವರೂ ಸೈನ್ಯಸನ್ನಾಹಗಳನ್ನು ತ್ಯಜಿಸಿ ತಮ್ಮ ಮನಸ್ತಾಪಗಳನ್ನು

**ಸರ್ವರಾಷ್ಟ್ರಕೂಟದಲ್ಲಿ**

ಪಂಚಾಯತನದಿಂದ ತೀರಿಸಿಕೊಳ್ಳುವಹಾಗೆ ಏರ್ಪಡಿಸ

ಬೇಕೆಂಬುದು ವಿಲ್ಸನ್ನನಿಗೆ ಮುಖ್ಯ ಕರ್ತವ್ಯವೆಂದೆನಿಸಿತ್ತು. ಲೀಗ್ ಆಫ್ ನೇಷನ್ಸ್ (League of Nations) ಎಂಬ ಹೆಸರಿನಿಂದ ಪ್ರಾರಂಭವಾದ ಆ ಸಕಲರಾಷ್ಟ್ರಕೂಟಕ್ಕೆ ಮೊದಮೊದಲು ಪರಾಜಿತ ರಾಷ್ಟ್ರಗಳನ್ನು ಸೇರಿಸಲಿಲ್ಲ.

**ಸಕಲರಾಷ್ಟ್ರಕೂಟ**

'ಬೊಲ್ಷೆವಿಕ್ ಸರ್ಕಾರವನ್ನು ಸ್ಥಾಪಿಸಿಕೊಂಡಿದ್ದ ರಷ್ಯವನ್ನೂ ಸೇರಿಸಲಿಲ್ಲ. ಅಮೆರಿಕದವರೂ ಸೇರಿಕೊಳ್ಳಲಿಲ್ಲ. ಸ್ವಿಟ್ಸರ್ಲಂಡ್ ರಾಷ್ಟ್ರದ **ಜಿನೀವ** (Geneva) ಪಟ್ಟಣದಲ್ಲಿ ಈ ಲೀಗ್ ಆಫ್ ನೇಷನ್ಸ್ ಎಂಬುದು ಪ್ರಾರಂಭವಾಯಿತು.

ಯುದ್ಧ ಮುಗಿಯುವುದರೊಳಗಾಗಿಯೇ ಆಸ್ಟ್ರಿಯ ಹಂಗರಿಯೆಂಬ ಚಕ್ರಾಧಿಪತ್ಯವೆಂಬುದು ನಾಶವಾಗಿತ್ತಷ್ಟೆ. ಪ್ಯಾರಿಸ್ಸಿನಲ್ಲಿ ನಡೆದ ಏರ್ಪಾಟುಗಳಿಂದ ಆ ಚಕ್ರಾಧಿಪತ್ಯದ ಸ್ಥಾನದಲ್ಲಿ ಸ್ವತಂತ್ರವಾಗಿ ಜನಸ್ವಾಮ್ಯತತ್ತ್ವದಿಂದ ಘೋಷಿತವಾದ ಹೊಸರಾಷ್ಟ್ರಗಳು ಹುಟ್ಟಿದವು. ರಷ್ಯಕ್ಕೂ ಪಶ್ಚಿಮ ಯುರೋ

**ಹೊಸರಾಷ್ಟ್ರಗಳು**

ಪಿಗೂ ನಡುವೆ ಉತ್ತರದಿಂದ ದಕ್ಷಿಣಕ್ಕೆ **ಫಿನ್ಲಂಡ್** (Finland), **ಎಸ್ತೋನಿಯ** (Esthonia), **ಲಟ್ವಿಯ** (Latvia), **ಲಿಥುಯೇನಿಯ** (Lithuania), **ಪೋಲಂಡ್** (Poland) ಎಂಬ ಸ್ವತಂತ್ರರಾಷ್ಟ್ರಗಳು ರಚಿತವಾದವು. ಆಸ್ಟ್ರಿಯ ಬೇರೆ, ಹಂಗರಿ ಬೇರೆಯಾಯಿತು. ಶತಮಾನಗಟ್ಟಲೆ ತಮ್ಮ ಸ್ವಾತಂತ್ರ್ಯಕ್ಕಾಗಿ ತಪಿಸಿದ್ದ ಪೋಲ್ ಜಾತಿಯವರ ರಾಷ್ಟ್ರ ಪುನರುದ್ಧಾರವಾಯಿತು. ಅವರಿಗೆ ಬಾಲ್ಟಿಕ್ ತೀರದಲ್ಲಿ ಬಂದರಿರಲೆಂದು ಮೂಡಣ ಪ್ರಷ್ಯಕ್ಕೂ ಜರ್ಮನರಿಗೂ ಮಧ್ಯೆ ಒಂದು ಪಟ್ಟಿ ಬಿಟ್ಟುಕೊಟ್ಟು ತೀರದಲ್ಲಿದ್ದ ಡಾನ್ಸಿಗ್ (Danzig) ಬಂದರನ್ನು ಸರ್ವರಾಷ್ಟ್ರಕೂಟದ ಸುಫರ್ದಿನಲ್ಲಿಟ್ಟರು. ಪೋಲಂಡಿಗೆ ಪಶ್ಚಿಮದಲ್ಲಿ ಜರ್ಮನಿಗೂ ಆಸ್ಟ್ರಿಯಕ್ಕೂ ಮಧ್ಯೆಇರುವಂತೆ **ಸೆಕೊಸ್ಲೋವೇಕಿಯ** (Czecho Slovakia) ಎಂಬ ಹೊಸರಾಷ್ಟ್ರವೂ ರೂಪಗೊಂಡಿತು. ಬಾಲ್ಕನ್ ಕ್ಷೇತ್ರದಲ್ಲಿ **ಜೂಗೊ ಸ್ಲಾವಿಯ** (Jugo Slavia) ಎಂಬ ಹೊಸರಾಜ್ಯವೂ ಸಿದ್ಧವಾಯಿತು.

ಜರ್ಮನಿಯೆಂಬುದು ಕಿರಿದಾಯಿತು. ಮೂಡಲಲ್ಲಿ ಪೋಲಂಡಿಗೆ ಬಿಟ್ಟುಕೊಟ್ಟ ಭಾಗವನ್ನಲ್ಲದೆ ಪಡುವಲಲ್ಲಿ **ಅಲ್ಸಾಸ್ ಲೊರೇನ್** ಪ್ರಾಂತವನ್ನು ಫ್ರಾನ್ಸಿಗೆ ಬಿಟ್ಟುಕೊಡಬೇಕಾಯಿತು. ಕಬ್ಬಿಣ ಕಲ್ಲಿದ್ದಲ ಪ್ರದೇಶವೆನಿಸಿದ್ದ **ಸಾರ್** (Saar) ನದಿಯ ಪ್ರದೇಶವನ್ನೂ ಹದಿನೈದು ವರ್ಷಗಳವರೆಗೆ ಫ್ರಾನ್ಸಿಗೆ ಬಿಟ್ಟುಕೊಡಬೇಕಾಯಿತು. ಹೊರಗಣ ಸಾಮ್ರಾಜ್ಯವೆಂಬುದು ಪೂರ್ಣವಾಗಿ

**ಅನ್ಯಕ್ಷೇತ್ರಗಳು**

ನಷ್ಟವಾಯಿತು. ಜಪಾನಿಗೆ ಮೊದಲೇ **ಕಿಯಾಚೌ** ವಶವಾಗಿತ್ತು. **ಆಫ್ರಿಕದಲ್ಲಿ** ಜರ್ಮನರು ಆಕ್ರಮಿಸಿದ್ದ ನೈರುತ್ಯ ಪ್ರದೇಶವೂ ಮೂಡಣ ಪ್ರದೇಶವೂ ಬ್ರಿಟಿಷರ ಪಾಲಿಗೆ ಬಂತು. ಬ್ರಿಟಿಷರಿಗೆ

ತುರ್ಕಿಯಿಂದ ಮೆಸೊಪೊಟೇಮಿಯ ಅಥವಾ **ಇರಾಕ್** ಎಂಬ ಪ್ರದೇಶವೂ **ಪ್ಯಾಲೆಸ್ಟೈನ್** ಎಂಬ ಪ್ರಾಂತವೂ ಲಭಿಸಿದವು.

ಇವಿಷ್ಟೂ ಪ್ಯಾರಿಸ್ಸಿನಲ್ಲಿ ನಡೆದ ಕರಾರುಗಳ ಮುಖ್ಯಾಂಶಗಳು ಮಾತ್ರ. ಹಿಂದಿನ ಯುದ್ಧಗಳು ಮುಗಿದ ತರುವಾಯ ನಡೆದ ಕರಾರುಗಳಲ್ಲಿ ಅಸಮಾಧಾನಕ್ಕೆಡೆಯಿದ್ದು ಮತ್ತೊಂದು ಯುದ್ಧರೇಗಲು ಕಾರಣವನ್ನೊದಗಿಸಿಟ್ಟಂತೆ ವರ್ಸೇಲ್ಸ್ ಕರಾರುಗಳಲ್ಲಿಯೂ ನಡೆಯಿತು. ಅವುಗಳ ವಿವರವನ್ನಾಗಲಿ ಇಪ್ಪತ್ತನೆ ಶತಮಾನದ ಚರಿತ್ರೆಯನ್ನಾಗಲಿ ಸ್ಪಷ್ಟಗೊಳಿಸಿಕೊಳ್ಳುವುದು ಸುಲಭವಾಗುವುದಿಲ್ಲ. 1918 ರ ತರುವಾಯ ಬ್ರಿಟಿಷರ ಚರಿತ್ರೆಯೆಂಬುದು ಪೃಥ್ವಿಯ ಚರಿತ್ರೆಯಷ್ಟು ವಿಶಾಲವಾಗಿರುವುದಲ್ಲದೆ ಅನೇಕ ವಿಚಾರಗಳು ಜಟಿಲವಾಗಿರತಕ್ಕವು. ಕೇವಲ ಹೆಗ್ಗುರುತುಗಳನ್ನು ಮಾತ್ರ ಗಮನಿಸಿಕೊಳ್ಳುವ ನಾವು 1918ರ ತರುವಾಯ ನಡೆದ ಸಂಗತಿಗಳಲ್ಲಿ ಹಲ ಕೆಲವನ್ನು ಮಾತ್ರ ಕಾಣಬಹುದು.

# ಯುದ್ಧದ ತರುವಾಯ

## ಒಳಾಡಳಿತ

ಬ್ರಿಟಿಷರು ಯುದ್ಧದಲ್ಲಿ ಪ್ರವೇಶಿಸಿದಾಗ ಲಿಬರಲ್ ಪಾರ್ಟಿಯವರು ಮಂತ್ರಿ ಪದವಿಗಳನ್ನು ನಿರ್ವಹಿಸುತ್ತಲಿದ್ದರು. ಸ್ವಲ್ಪಕಾಲ ಕಳೆದಕೂಡಲೆ ಯುದ್ಧ ಬೇಗನೆ ಮುಗಿಯತಕ್ಕುದಲ್ಲವೆಂದೆನಿಸಿತು. ಅತಿವಿಸ್ತಾರವಾಗಿ ಕೆರಳಿಕೊಂಡ ಯುದ್ಧದ ಸಮಯದಲ್ಲಿ ಸರ್ವಪ್ರಯತ್ನ ನಡೆಯುವುದುಚಿತವೆಂದು 1915ರಲ್ಲಿ ಲಿಬರಲ್ ಪಾರ್ಟಿಯವರು ಇತರ ಪಾರ್ಟಿಗಳ ನಾಯಕರನ್ನೂ ತಮ್ಮೊಡನೆ ಸೇರಿಸಿಕೊಂಡು

**ಮಂತ್ರಿಮಂಡಲಿ**

**ಕೊಯಲಿಷನ್ ಮಂತ್ರಿಮಂಡಲಿ** (Coalition Ministry) ಯನ್ನು ಕಟ್ಟಿದರು. ಲಿಬರಲ್ ಪಾರ್ಟಿಯ ನಾಯಕನಾಗಿದ್ದ **ಆಸ್‌ಕ್ವಿತ್** (Asquith) ಪ್ರಧಾನಮಂತ್ರಿಯಾಗಿಯೇ ಇದ್ದನು. ಯುದ್ಧ ಸಾಮಗ್ರಿಯ ತಯಾರಿಯನ್ನು **ಲಾಯ್ಡ್ ಜಾರ್ಜ್** ಮಂತ್ರಿ ವಹಿಸಿದ್ದನು. **ಕಿಚನರ್ ಶ್ರೀಮಂತನು** ಯುದ್ಧಮಂತ್ರಿಯಾಗಿದ್ದು ಜನರಿಗೆ ಉತ್ಸಾಹಧೈರ್ಯಗಳನ್ನು ಕೊಟ್ಟು ಹೊಸಹೊಸ ಸೈನ್ಯಗಳನ್ನು ಕೂಡಿಸಿದನು.

1916ರಲ್ಲಿ ಬ್ರಿಟನ್ನಿನಲ್ಲಿಯೂ ಬಲವಂತವಾಗಿ ಜನರನ್ನು ಸೇನೆಗೆ ಸೇರಿಸುವ ಏರ್ಪಾಟನ್ನು (Conscription) ನಡೆಸಬೇಕಾಯಿತು. ಆ ವರ್ಷದಲ್ಲಿಯೇ ಕಿಚನರ್ ಶ್ರೀಮಂತನು ರಷ್ಯಕ್ಕೆ ಸಮುದ್ರಯಾನಮಾಡುತ್ತ ಮಧ್ಯದಲ್ಲಿ ತೀರಿಕೊಂಡುದಲ್ಲದೆ ಪ್ರಧಾನಪದವಿಯಿಂದ ಆಸ್‌ಕ್ವಿತ್ ಚ್ಯುತನಾದನು. ಕೊಯಲಿಷನ್ ಮಂತ್ರಿಮಂಡಲಿಗೆ ಲಾಯ್ಡ್ ಜಾರ್ಜ್ ಮುಖಂಡನಾದನು.

**ಪರಿಸ್ಥಿತಿ**

ಸರ್ವವ್ಯಾಪಿಯಾದ ಯುದ್ಧ ನಡೆಸುವುದರಲ್ಲಿ ಹಡಗುಗಳು, ಗಣಿಗಳು, ರೈಲುಗಳು ಮುಂತಾದ ದೊಡ್ಡ ಉದ್ಯೋಗಗಳೆಲ್ಲವೂ ಸರ್ಕಾರದ ಸುಭದ್ರಿನಲ್ಲಿ ನಡೆಯಬೇಕಾಯಿತು. ಪ್ರಜೆಯಾದವನು ವಿಧಿಬಲದಿಂದ ಸೈನ್ಯದಲ್ಲಿ ಸೇರಿಕೊಳ್ಳಬೇಕಾದುದಲ್ಲದೆ ಹೆಚ್ಚುಹೆಚ್ಚು ತೆರಿಗೆಯನ್ನೂ ತೆರುತ್ತಲಿರಬೇಕಾಯಿತು. ಸ್ವಲ್ಪಕಾಲದಲ್ಲಿಯೇ ಆಹಾರಪದಾರ್ಥವನ್ನು ಸರ್ಕಾರದವರು ಲೆಕ್ಕವಿಟ್ಟು ಇಷ್ಟಿಷ್ಟೆಂದು ಹಂಚಿಮಾರುವ ಏರ್ಪಾಟನ್ನೂ ಕೈಕೊಳ್ಳಬೇಕಾಯಿತು. ಯುದ್ಧಕ್ಷೇತ್ರಗಳಲ್ಲಿ ಹೋರಾಟಕ್ಕೆ ಹೊರಟಿದ್ದ ಸೈನ್ಯಗಳಿಗೆ ತಕ್ಕ ಸಾಮಗ್ರಿಯನ್ನು ಒದಗಿಸುತ್ತಲಿರುವುದು ಒಟ್ಟು ದೇಶದ ಕೆಲಸವಾಯಿತು. ಜನರ ಜೀವನದಲ್ಲಿ ಸರ್ಕಾರದವರು ತಮ್ಮ ಅಧಿಕಾರವನ್ನು ಎಲ್ಲ ಅಂಶಗಳಲ್ಲಿಯೂ ತೋರಬೇಕಾಗಿ ಬಂತು. ಜನರಾಶಿಗೂ ಹೊಸಬಗೆಯ ಜೀವನವು ಅಭ್ಯಾಸವಾಯಿತು.

ಕೊಯಲಿಷನ್ ಮಂತ್ರಿಮಂಡಲಿಯವರು 1917ರಲ್ಲಿ ಪಾರ್ಲಿಮೆಂಟ್ ಸುಧಾರಣೆಯೊಂದನ್ನು ನಡೆಸಬೇಕೆಂದು ಉದ್ದೇಶಪಟ್ಟು ಕಾನೂನುನಡೆಸಿದರು. 1918ರಲ್ಲಿ

ಸ್ತ್ರೀಯರಿಗೆ ವೋಟಿನ ಅಧಿಕಾರವನ್ನು ಕೊಡಿಸಿದ ಆ ಶಾಸನ ಜಾರಿಗೆ ಬಂತು.

**ಪಾರ್ಲಿಮೆಂಟ್ ಸುಧಾರಣೆ**

ವರಣಕ್ಷೇತ್ರಗಳು ಪುನಃ ಪರಿಷ್ಕೃತವಾಗಿ 50,000 ಪ್ರಜಾಬಲ ಪಡೆಯುದಿದ್ದ ಸ್ಥಳಗಳಿಗೆ ಪ್ರಾತಿನಿಧ್ಯತಪ್ಪಿತು. ವರಣ ವಿಧಾನಗಳೂ ಸುಲಭಗೊಂಡವು. ಸಾರ್ವತ್ರಿಕಚುನಾವಣೆಗಳು ಎಲ್ಲೆಡೆಗಳಲ್ಲಿಯೂ ಏಕಕಾಲದಲ್ಲಿ ನಡೆಯಬೇಕೆಂಬ ಅಂಶವೂ ಆ ಕಾನೂನಿನಲ್ಲಿ ಇತ್ತು. ಆ ಕಾನೂನಿನಪ್ರಕಾರ 1918ರ ಕೊನೆಯಲ್ಲಿ ಯುದ್ಧ ಮುಕ್ತಾಯವಾದ ತರುವಾಯ ಹೊಸ ಚುನಾವಣೆಗಳು ನಡೆದವು. ಕೊಯಲಿಷನ್ ಮಂತ್ರಿಮಂಡಲಿಯೇ ಮುಂದೆಯೂ ನಡೆಯತಕ್ಕುದಾಯಿತು.

ಯುದ್ಧ ಮುಗಿದಕೂಡಲೆ ತಮ್ಮ ಕಷ್ಟವೆಲ್ಲ ಪರಿಹಾರವಾಗುವುದೆಂದಿದ್ದ ಜನರಿಗೆ ಅಸಮಾಧಾನವೇ ಪ್ರಾಪ್ತಿಯಾಗುವಂತಿತ್ತು. ಸೈನ್ಯಗಳು ಹಿಂತಿರುಗಿ ಚದರಿದಂತೆ ಸೈನಿಕರಿಗೆ ಉದ್ಯೋಗಗಳಿಲ್ಲದೆ ನಿರುದ್ಯೋಗಸಮಸ್ಯೆ ತನ್ನ ತಲೆಯನ್ನು ಮೇಲೆಮೇಲೆ ಎತ್ತಿತ್ತು. ಯುದ್ಧಕ್ಕಾಗಿ ಹುಟ್ಟಿಕೊಂಡಿದ್ದ ಕಾರ್ಖಾನೆಗಳ ಕೆಲಸವೂ ನಿಂತಿತು.

**ಜನರ ಅಸಮಾಧಾನ**

ವ್ಯಾಪಾರವೂ ಅಸ್ತವ್ಯಸ್ತವಾಗಿತ್ತು. ಶಾಂತಿಸಂಧಾನಗಳಲ್ಲಿಯೂ ಕರಾರುಗಳಲ್ಲಿಯೂ ಪ್ರಧಾನಮಂತ್ರಿ ಲಾಯ್ಡ್ ಜಾರ್ಜ್ ನಿರತನಾಗಿದ್ದನು. ಐರ್ಲಂಡಿನಲ್ಲಿ ಅಂತರ್ಯುದ್ಧವಿನ್ನೂ ಮುಗಿದಿರಲಿಲ್ಲ. ಅದೇವೇಳೆಗೆ ತುರ್ಕಿಯೊಡನೆ ಹೊಸದಾಗಿ ಯುದ್ಧ ಮೊದಲಾಗುವಂತಿತ್ತು. ಲಾಯ್ಡ್ ಜಾರ್ಜ್ ಸಿನ್‌ಫೈನ್‌ಪಾರ್ಟಿಯವರೊಡನೆ ನಡೆಸಿದ ಏರ್ಪಾಟನ್ನು ಬ್ರಿಟನ್ನಿನಲ್ಲಿ ಅನೇಕರು ಒಪ್ಪಲಿಲ್ಲ. ಜನರಲ್ಲಿ ಅಸಮಾಧಾನವು ನಾನಾ ಕಾರಣಗಳಿಂದ ಹೆಚ್ಚುತ್ತಿತ್ತು. ಆದ್ದರಿಂದ 1922ರಲ್ಲಿ ಕನ್ಸರ್ವೆಟಿವ್ ಪಾರ್ಟಿಯವರು ಲಾಯ್ಡ್ ಜಾರ್ಜ್ ಮಂತ್ರಿಗೆ ವಿರೋಧಿಗಳಾದರು. ಕೊಯಲಿಷನ್ ಮಂಡಲಿಯು ಧ್ವಂಸವಾಗಿ ಕನ್ಸರ್ವೆಟಿವ್ ಪಕ್ಷದವರು ಬಹುಪಕ್ಷಪಡೆದು ಅಧಿಕಾರ ಕೈಗೊಂಡರು.

**ಬೋನರ್ ಲಾ** (Bonar Law) ಎಂಬಾತನು ಕನ್ಸರ್ವೆಟಿವ್ ನಾಯಕನಾಗಿದ್ದನು. ಆತನು ಪ್ರಧಾನನಾದ ಬಳಿಕ ಜರ್ಮನಿಯಿಂದ ತಪ್ಪುಕಾಣಿಕೆಯನ್ನೆತ್ತುವುದಕ್ಕೂ ಅಮೆರಿಕದವರಿಂದ ಯುದ್ಧವೇಳೆಯಲ್ಲಿ ಎತ್ತಿದ್ದ ಸಾಲವನ್ನು ತೀರಿಸುವುದಕ್ಕೂ ಏರ್ಪಾಡುಗಳನ್ನು ನಡೆಸುವುದೇ ಮುಖ್ಯ ಕೆಲಸವಾಯಿತು. ಅಧಿಕಾರ ಸ್ವೀಕರಿಸಿದ ಏಳು ತಿಂಗಳುಗಳಲ್ಲಿ ಬೋನರ್ ಲಾ ಕಾಲವಾದನು. **ಸ್ಟಾನ್ಲಿ ಬಾಲ್ಡ್‌ವಿನ್** (Stanley Baldwin) ಎಂಬಾತನು ಕನ್ಸರ್ವೆಟಿವ್ ಮುಖಂಡನೂ ಪ್ರಧಾನಿಯೂ ಆದನು.

**ಕನ್ಸರ್ವೆಟಿವ್ ಪಕ್ಷ**

ಅಮೆರಿಕದಿಂದೆತ್ತಿದ್ದ ಸಾಲವನ್ನು ತೀರಿಸುವುದಕ್ಕಾಗಿ ಬ್ರಿಟಿಷರು ತೆರಿಗೆಗಳನ್ನು ಹೆಚ್ಚಾಗಿಯೇ ಎತ್ತುತ್ತಿರಬೇಕಾಗಿತ್ತು. ಜರ್ಮನಿಯಿಂದ ಪರಿಹಾರಧನವನ್ನು ಬರಮಾಡಿಕೊಳ್ಳುವುದು ಹೇಗೆಂಬುದು ವಿಷಮಸಮಸ್ಯೆಯಾಗಿ ಹೋಯಿತು. ಏತನ್ಮಧ್ಯೆ

ನಾಲ್ಕು ವರ್ಷಗಳ ಯುದ್ಧದ ಪರಿಣಾಮವಾಗಿ ದೇಶದೇಶದಲ್ಲಿಯೂ ಆರ್ಥಿಕ ದುಃಸ್ಥಿತಿಯೇ ನೆಲೆಸಿದ್ದಿತು. ಬ್ರಿಟಿಷ್ ಕೈಗಾರಿಕೆ ವ್ಯಾಪಾರಗಳು ಕ್ಷೀಣಗತಿಯನ್ನೇ ಆಶ್ರಯಿಸುವಂತಿದ್ದುದರಿಂದ ನಿರುದ್ಯೋಗವು ಹೆಚ್ಚುತ್ತಿತ್ತು. ಅಂತಹ ಪರಿಸ್ಥಿತಿಯಲ್ಲಿ ಬಾಲ್ಡ್ವಿನ್ ಕೈಗಾರಿಕೆಗಳನ್ನು ಊರ್ಜಿತಗೊಳಿಸಲು ಸುಂಕಗಳನ್ನು ಗೊತ್ತು ಮಾಡುವ ನೀತಿಯನ್ನು ಹಿಡಿಯಬೇಕೆಂಬ ಅಭಿಪ್ರಾಯ ಬೆಳೆಸಿದನು. ಸುಂಕಗಳಿರಬೇಕೇ ಬೇಡವೇ ಎಂಬ ವಿಚಾರ ನಿರ್ಣಯಕ್ಕಾಗಿ ಹೊಸ ಚುನಾವಣೆಗಳು ನಡೆಯಬೇಕಾಗಿ ಬಂದು ಕನ್ಸರ್ವೇಟಿವ್ ಪಕ್ಷ ದುರ್ಬಲವಾಯಿತು. 1923ರಲ್ಲಿ ಅನ್ಯಪಕ್ಷದವರು ಆಡಳಿತವನ್ನು ಕಟ್ಟಿಕೊಳ್ಳಬೇಕಾಗಿ ಬಂತು.

ಅನ್ಯಪಕ್ಷದವರೆಂದರೆ ಯಾರು? ಹತ್ತೊಂಭತ್ತನೆ ಶತಮಾನದಲ್ಲಿ ಪ್ರಬಲಪಕ್ಷಗಳೆರಡೇ ಆದರೂ ಮೂರನೆಯದಾಗಿ ಐರಿಷ್ ಗುಂಪಿದ್ದಿತು. 1923ರಿಂದ ಐರಿಷ್ ಗುಂಪಿಲ್ಲ. ಆದರೆ ಮತ್ತೊಂದು ಗುಂಪು ಮೂರನೆಯದಾಗಿತ್ತು. ಇಪ್ಪತ್ತನೆ ಶತಮಾನದ ಹಿಂದಿನಿಂದಲೂ ಲೇಬರ್ ಪಾರ್ಟಿಯೆಂಬುದು ಬೆಳೆಯುತ್ತಿದ್ದು ಯುದ್ಧ ಮುಗಿಯುವ ವೇಳೆಗೆ ಹೆಸರಾಗಿತ್ತು. ಲಿಬರಲ್ ಕನ್ಸರ್ವೇಟಿವ್ ಪಾರ್ಟಿಗಳಲ್ಲಿ ಲೇಬರ್ ಸಭಿಕರಿಗೆ ಲಿಬರಲ್ ಗುಂಪಿನವರೊಂದಿಗೇ ಮೈತ್ರಿ. 1923ರಲ್ಲಿ ಕನ್ಸರ್ವೇಟಿವ್ ಪಕ್ಷಕ್ಕೆ ಪ್ರಾಬಲ್ಯ ನಷ್ಟವಾದುದು ಪ್ರತಿಪಕ್ಷದಲ್ಲಿ ಒಟ್ಟುಗೂಡಿದ್ದ ಲಿಬರಲ್ ಮತ್ತು ಲೇಬರ್ ಪಾರ್ಟಿಗಳಿಂದ. ಆ ಎರಡರಲ್ಲಿ ಲಿಬರಲ್ ಗುಂಪಿಗೆ ಸಂಖ್ಯೆ ಸಾಲದಾಗಿತ್ತು. ಲೇಬರ್ ಲಿಬರಲ್ ಗುಂಪುಗಳೊಟ್ಟುಗೂಡಿ ಮಂತ್ರಿಮಂಡಲಿಯನ್ನು ಕಟ್ಟಬೇಕಾಗಿತ್ತು; ತಾವಾಗಿ ತಾವೇ ಅಧಿಕಾರ ನಡೆಸುವಷ್ಟು ಸಂಖ್ಯಾಬಲ ಎರಡು ಗುಂಪುಗಳಲ್ಲಿ ಯಾವುದಕ್ಕೂ ಇಲ್ಲ. ಆದ್ದರಿಂದ ಲೇಬರ್ ಪಾರ್ಟಿಯವರು ಲಿಬರಲ್ ಪಾರ್ಟಿಯವರ ಸಹಕಾರ ಪಡೆದು ಪ್ರಾರಂಭಿಸಿದರು ಅಧಿಕಾರವನ್ನು. ಆದರೆ ಆ ಎರಡು ಗುಂಪುಗಳಲ್ಲಿಯೂ ಅಭಿಪ್ರಾಯಭೇದಗಳು ಬಲವಾಗಿಯೇ ಇದ್ದವು; ಎಲ್ಲ ವಿಚಾರಗಳಲ್ಲಿಯೂ ಒಮ್ಮನಸ್ಸಿರಲಿಲ್ಲ. ಲೇಬರ್ ಪಾರ್ಟಿಯ ನಾಯಕ **ರ್‍ಯಾಮ್ಸೆ ಮಕ್ಡಾನಲ್ಡ್** (Ramsay Macdonald) ಪ್ರಧಾನನಾಗಿ ಮಂತಿ ಕೂಟವನ್ನು ರಚಿಸಿಕೊಂಡನು. ಆದರೆ ಲಿಬರಲ್ ಲೇಬರ್ ಪಾರ್ಟಿಗಳವರು ಒಟ್ಟುಗೂಡಿ ಏಕರೀತಿಯಲ್ಲಿ ಕಾರ್ಯನಿರ್ವಹಿಸುವುದಾಗಲಿಲ್ಲ. ಒಳಗೊಳಗೆ ಪರಸ್ಪರ ಅನುಮಾನಗಳು ಇದ್ದೇ ಇದ್ದವು.

**ಲೇಬರ್ ಪಾರ್ಟಿಗೆ ಅಧಿಕಾರ**

ಲೇಬರ್ ಪಾರ್ಟಿಯವರು ಸರ್ವಸಮತ್ವವಾದಿಗಳೆಂದೂ ರಷ್ಯದಲ್ಲಿ ಹೊಸದಾಗಿ ನೆಲೆಸಿದ್ದ ಬೋಲ್ಷೆವಿಕ್ ಸರ್ಕಾರದ ಅಭ್ಯುದಯಾಕಾಂಕ್ಷಿಗಳೆಂದೂ ಗುಮಾನಿಯುಂಟಾಗಿ ಬರಬರುತ್ತ ಹೆಚ್ಚಿತು. ಬ್ರಿಟನ್ನಿನಲ್ಲಿಯೂ ಕಮ್ಯೂನಿಸ್ಟ್ (Communist)

ಪಾರ್ಟಿಯೆಂಬುದೊಂದಿತ್ತು. ಆ ಪಾರ್ಟಿಗೂ ಕನ್ಸರ್ವೆಟಿವ್ ಪಾರ್ಟಿಗೂ ಪರಮ ವಿರೋಧವೇ. ಪರಿಸ್ಥಿತಿ ಹೀಗಿರುವಲ್ಲಿ ಮುಕ್ಡಾನಲ್ಡ್ ನಡೆಸುತ್ತಿದ್ದ ಗುಂಪಿಗೆ ಕಷ್ಟ ವಾಗಿತ್ತು. ಹೊಸಚುನಾವಣೆಗಳು ನಡೆಯುಬೇಕಾದ ಸಂದರ್ಭ ಬಂತು. ಆಗ ರಷ್ಯದ **ಸಿನೊವಿಯೆಫ್**(Zinovieff) ಎಂಬಾತನು ಕಮ್ಯೂನಿಸ್ಟ್ ಪಾರ್ಟಿಯವರಿಗೆ ಬರೆದಿದ್ದು ದೆಂಬ ಕಾಗದವೊಂದನ್ನು ಕನ್ಸರ್ವೆಟಿವ್ ಗುಂಪಿನವರು ಪ್ರಕಟಿಸಿ ಜನರಲ್ಲಿ ಅನುಮಾನ ವನ್ನು ಬಲಪಡಿಸಿದರು. ಅದರಿಂದ ಚುನಾವಣೆಗಳಲ್ಲಿ ಲೇಬರ್ ಪಾರ್ಟಿಯವರಿಗೆ ಸಂಖ್ಯಾಬಲ ಕಡಿಮೆಯಾಗುವಂತೆ ಪರಿಣಮಿಸಿತು. 1923ರಲ್ಲಿ ಅಧಿಕಾರ ವಹಿಸಿ ಕೊಂಡ ಲೇಬರ್ ಪಾರ್ಟಿಯವರು ಯಾವ ಕಾರ್ಯಕ್ರಮವನ್ನೂ ಜರುಗಿಸಲಾರದೆ 1924ರಲ್ಲಿಯೇ ಅಧಿಕಾರಭ್ರಷ್ಟರಾದರು. ಕನ್ಸರ್ವೆಟಿವ್‌ಗುಂಪಿನವರು ಬಲ ಸಂಪಾದಿಸಿ ದರು. ಬಾಲ್ಡ್ವಿನ್ ಪುನಃ ಪ್ರಧಾನನಾಗಿ 1929 ರವರೆಗೆ ಅಧಿಕಾರ ನಡೆಸಿದನು.

ದೇಶದ ಕೈಗಾರಿಕೆ ವ್ಯಾಪಾರಗಳನ್ನು ಉದ್ಧರಿಸುವುದು ಅಗತ್ಯ ಕೆಲಸವಾಗಿತ್ತು. **ಬಾಲ್ಡ್ವಿನ್** ಮತ್ತು **ವಿನ್‌ಸ್ಟನ್ ಚರ್ಚಿಲ್** ಇಬ್ಬರೂ ಅದಕ್ಕಾಗಿ ಕೆಲವು ಏರ್ಪಾಟು ಗಳನ್ನು ನಡೆಸಿದರು. ಆದರೆ ಹೊರಗಣ ವ್ಯಾಪಾರದಲ್ಲಿ ನಿರೀಕ್ಷಿಸಿದ್ದ ಅನುಕೂಲ ಒದಗಲಿಲ್ಲ. ಕಲ್ಲಿದ್ದಲಿನ ರಫ್ತು ಇಳಿದುಹೋಯಿತು. ಆ ವ್ಯಾಪಾರ ಕೆಟ್ಟಾಗ ಗಣಿಗಳ ಮಾಲೀಕರು ಕೂಲಿ ದರಗಳನ್ನು ತಗ್ಗಿಸಿಯೋ ಕೆಲಸದ ಹೊತ್ತನ್ನು ಹೆಚ್ಚಿಸಿಯೋ ಕಷ್ಟದಿಂದ ಪಾರಾಗಬೇಕೆಂದುಕೊಂಡರು. ಗಣಿಗಳ ಕಾರ್ಮಿಕರಿಗೆಲ್ಲ ಅಸಮಾಧಾನವಾಗಿ ಕಡೆಗೆ 1926 ರಲ್ಲಿ ಮಹಾಮುಷ್ಕರಕ್ಕಿಟ್ಟು ಕೊಂಡಿತು. ಕಾರ್ಮಿಕರ ಸಂಘಗಳೆಲ್ಲ ಅನ್ಯೋನ್ಯವಾಗಿ ವ್ಯವಹರಿಸುತ್ತ ಎಲ್ಲ ಉದ್ಯೋಗಗಳಲ್ಲಿಯೂ ಕೆಲಸ ನಿಲ್ಲಿಸ ಬೇಕೆಂಬ ನಿಶ್ಚಯವಾಯಿತು. ಕೆಲಸಗಾರರೆಲ್ಲರೂ ಒಟ್ಟು ಗೂಡಿ ಆಡಳಿತವನ್ನು ನಿರ್ಬಂಧಗೊಳಿಸಲು ಮುಷ್ಕರವನ್ನು ನಡೆಸಿದರು. ಬ್ರಿಟನ್ನಿನಲ್ಲಿ ಮಹಾಪಲ್ಲಟವೊಂದು ಘಟಿಸುವಂತಾಯಿತು. ಆದರೆ ಕೆಲಸಗಾರರು ಕ್ರಮವಾಗಿ ವರ್ತಿಸುತ್ತ ಅನರ್ಥಗಳಿಗೆ ಅವಕಾಶಕೂಡಲಿಲ್ಲ. ಮುಷ್ಕರ ನಡೆದ ಉದ್ಯೋಗ ಗಳಲ್ಲಿ ಕೆಲಸವನ್ನು ತಾತ್ಕಾಲಿಕವಾಗಿ ನಡೆಸಲು ಸಾಮಾನ್ಯಜನರು ತಾವಾಗಿಯೇ ಮುಂದಾಗಿ ಬಂದು ಅಗತ್ಯ ಕೆಲಸಗಳನ್ನು ನಡೆಸಿದರು. ಆದರೆ ಸ್ವಲ್ಪಕಾಲ ಕಳೆಯು ವುದರಲ್ಲಿ ದೇಶದಲ್ಲಿ ಸಾಕಾದಷ್ಟು ಆಹಾರಪದಾರ್ಥಗಳಿಲ್ಲದಂತಾದುದನ್ನು ಕಂಡು ಕಾರ್ಮಿಕರ ಸಂಘಗಳು ಸಂಧಾನಕ್ಕೊಗ್ಗಿದವು. ಗಣಿಗಳ ಕಾರ್ಮಿಕರ ಸಂಘದವರು ಕೆಲಕಾಲ ಒಪ್ಪದಿದ್ದು ಕಡೆಗೆ ಒಪ್ಪಿಕೊಂಡರು.

ಮಹಾಮುಷ್ಕರ
1926

ಮಹಾಮುಷ್ಕರ ನಿಂತಕೂಡಲೆ ಕನ್ಸರ್ವೆಟಿವ್ ಮಂತ್ರಿಗಳು ಕಾರ್ಮಿಕರ ಸಂಘಗಳ ದಮನಕ್ಕಾಗಿ ಒಂದು ಶಾಸನವನ್ನು ನಡೆಸಿದರು. (Trades Disputes

Act, 1927) ಇನ್ನು ಮುಂದೆ ಕೆಲಸ ನಿಲ್ಲಿಸಿ ಮುಷ್ಕರ ನಡೆಸುವುದೂ, ಒಂದು ಸಂಘದವರ ಸಹಾಯಕ್ಕೆಂದು ಮತ್ತೊಂದು ಸಂಘದವರು ಮುಷ್ಕರವನ್ನ ವಲಂಬಿಸುವುದೂ, ಸಂಘಗಳ ಸದಸ್ಯರಿಂದ ರಾಜಕೀಯಕರ್ತವ್ಯಗಳಿಗಾಗಿ ಹಣವನ್ನೆತ್ತುವುದೂ ವಿಧಿಯಿಂದ ನಿಷಿದ್ಧವಾಯಿತು. ಈ ಕಾನೂನಿನಿಂದ ಶ್ರಮಜೀವಿಗಳೆಲ್ಲರಿಗೂ ಅಸಮಾಧಾನವಾಯಿತು. ಬದುಕಿನ ಪರಿಸ್ಥಿತಿ ಬರಬರುತ್ತ ಕೆಡುತ್ತಿತ್ತೇ ವಿನಾ ಮೇಲಾಗಲಿಲ್ಲ.

**ದುಃಸ್ಥಿತಿ**

ನಿರುದ್ಯೋಗವೆಂಬುದು ದಿನೇ ದಿನೇ ಹೆಚ್ಚಾಗಿ ವ್ಯಾಪಿಸುತ್ತಿತ್ತು. ಯುದ್ಧ ಪೂರ್ವಕಾಲದಲ್ಲಿ ಕೈಗಾರಿಕೆ ವ್ಯಾಪಾರಗಳು ನಡೆಯುತ್ತಿದ್ದಂತೆ ಪುನಃ ನಡೆಯುವುದು ಕನಸಾಗಿ ಕಂಡಿತು. ಆಗ ಕನ್ಸರ್ವೆಟಿವ್ ಮಂತ್ರಿಮಂಡಲಿಯವರು ನಿರುದ್ಯೋಗಿಗಳಿಗಾಗಿ ಭಿಕ್ಷೆನೀಡುವ ಏರ್ಪಾಟನ್ನು ಮಾಡಿದರು. ನಿರುದ್ಯೋಗಿಗಳಾದವರಿಗೆ ಭಿಕ್ಷಾದಾನ (Unemployment doles)ದಿಂದ ಜನರು ನಿರಾಹಾರಿಗಳಾಗಿ ಪ್ರಾಣಬಿಡದಂತೆ ಮಾತ್ರ ಆಯಿತು. ಜನರ ಅಸಮಾಧಾನವೇನೂ ತಗ್ಗಲಿಲ್ಲ. ಪುನಃ ಲೇಬರ್ ಪಾರ್ಟಿಯವರಲ್ಲಿ ಜನರಿಗೆ ವಿಶ್ವಾಸ ಹೆಚ್ಚಿತು. 1929ರಲ್ಲಿ ಕನ್ಸರ್ವೆಟಿವ್ ಪಕ್ಷಕ್ಕೆ ಅಧಿಕಾರ ತಪ್ಪಿತು. ಮಕ್ಡಾನಲ್ಡ್ ಪುನಃ ಮಂತ್ರಿಮಂಡಲಿಯನ್ನು ಕಟ್ಟಿದನು. ಲಾಯ್ಡ್ ಜಾರ್ಜ್ ನಡೆಸುತ್ತಿದ್ದ ಲಿಬರಲ್ ಪಾರ್ಟಿಗಂತೂ ದೌರ್ಬಲ್ಯವೇ ಹೆಚ್ಚಿತು.

ಎರಡನೆ ಸಲ ಲೇಬರ್ ಪಾರ್ಟಿಯವರು ಅಧಿಕಾರಕ್ಕೆ ತೊಡಗಿದವೇಳೆಗೆ ದೇಶ ವಿದೇಶಗಳಲ್ಲಿ ಆರ್ಥಿಕದುಃಸ್ಥಿತಿಯು ಸಾಂಕ್ರಾಮಿಕವಾಗಿ ಹರಡುತ್ತಿತ್ತು. ಕಾಲಸ್ಥಿತಿ ಮತ್ತಷ್ಟು ಕೆಟ್ಟಿತು. ಉತ್ಪತ್ತಿ ಸಾಲದೆ ನಿರುದ್ಯೋಗಿಭಿಕ್ಷೆಯನ್ನೂ ನಿಲ್ಲಿಸಬೇಕಾದ ಸ್ಥಿತಿಯೊದಗಿತು. ಆಗ ಲೇಬರ್ ಪಾರ್ಟಿಯ ಮುಖಂಡರಲ್ಲೊಬ್ಬನಾಗಿ ಆಯವ್ಯಯ ಸಚಿವನಾಗಿದ್ದ **ಫಿಲಿಪ್ ಸ್ನೋಡೆನ್** (Philip Snowden) ಕೆಲವು ಆಲೋಚನೆಗಳನ್ನು ನಡೆಸಿದನು. ಇತರರು ಅವುಗಳನ್ನೊಪ್ಪಲಿಲ್ಲ. ದುಃಸ್ಥಿತಿಯೆಂಬುದು ಬರಬರುತ್ತ ತೀವ್ರವಾಯಿತು. ಹೊರಗಡೆ ಸಾಲವೆತ್ತುವುದೂ ಕಷ್ಟವಾಗಿಹೋಯಿತು. ದೇಶದ ಸಾಮಾನ್ಯ ಜೀವನವೇ ನಡೆಯದೆ ಯುದ್ಧಕಾಲದಷ್ಟು ಕಷ್ಟವಾಯಿತು. ರಾಜ್ಯಭಾರವನ್ನು ಹೊತ್ತಿದ್ದ ಲೇಬರ್ ಪಕ್ಷದಲ್ಲಿ ಸ್ನೋಡೆನ್ನನ ಆಲೋಚನೆಗಳು ಸರ್ವಸಮ್ಮತವಾಗದೆ ಆ ಪಕ್ಷವೇ ಒಡೆಯಿತು. ಆಗ

**2ನೆ ಸಲ ಲೇಬರ್ ಪಾರ್ಟಿ**

ಮಕ್ಡಾನಲ್ ಮುಂತಾದವರು ಇತರ ಪಾರ್ಟಿಗಳ ನಾಯಕರನ್ನೂ ಸೇರಿಸಿಕೊಂಡು ಸರ್ವಪಕ್ಷಗಳಕೂಟದಂತಹ ಮಂತ್ರಿಮಂಡಲಿಯ ರಚನೆಯಾಗಬೇಕೆಂದು ನಿಶ್ಚಯಿಸಿದರು. ವಿಪತ್ಕಾಲಕ್ಕೆ ಎಲ್ಲರೂ ಒಟ್ಟುಗೂಡಿ ರಾಷ್ಟ್ರವನ್ನುಳಿಸಿಕೊಳ್ಳಬೇಕೆಂದು ಬಹುಜನರ ಇಷ್ಟವಾಯಿತು. ಹೊಸ ಚುನಾವಣೆಗಳು ನಡೆದು **ನ್ಯಾಷನಲ್ ಸರ್ಕಾರ** (National Government)ವೆಂಬುದು 1931ರಲ್ಲಿ ರಚನೆಯಾಯಿತು. ಅಧಿಕಾರ ವಹಿಸಿದಕೂಡಲೆ ಹಣಸಂಬಂಧವಾದ

ಏರ್ಪಾಟನ್ನೂ ಆಮದುಸುಂಕಗಳನ್ನೆತ್ತುವ ಏರ್ಪಾಟನ್ನೂ ಹೊಸ ಮಂತ್ರಿಕೂಟದವರು ನಡೆಸಿದರು. ನಿರಾತಂಕವ್ಯಾಪಾರವಾದವೆಂಬುದನ್ನು ಮೊದಲಿಟ್ಟ ಬ್ರಿಟಿಷರು ಈಗ ಅದನ್ನು ತ್ಯಜಿಸಬೇಕಾಯಿತು.

ಲೇಬರ್ ಪಾರ್ಟಿಯವರ ಪ್ರಾಬಲ್ಯ ಸ್ವಲ್ಪಕಾಲದಲ್ಲಿಯೇ ನಷ್ಟವಾಯಿತು. ಕನ್ಸರ್ವೆಟಿವ್ ಪಾರ್ಟಿಯವರು ಅತಿಪ್ರಾಬಲ್ಯವನ್ನು ಸಂಪಾದಿಸಿಕೊಂಡು ಮಂತ್ರಿಮಂಡಲಿಯನ್ನು ರಚಿಸಿದರು. ಅಲ್ಲಿಂದ ಮುಂದೆ ಜರ್ಮನಿಯಲ್ಲಿ ನಾಟ್ಸಿಪಕ್ಷದವರ ಚರಿತ್ರೆಯನ್ನೂ ಇತ್ತೀಚೆಗೆ ಬ್ರಿಟನ್ನಿನಲ್ಲಿ ನಡೆದ ಸಂಗತಿಗಳನ್ನೂ ಬೇರೆಡೆಗಳಲ್ಲಿ ಕಂಡು ತಿಳಿದುಕೊಳ್ಳಬೇಕು.

## ಡುಮಿನಿಯನ್ನುಗಳು

ಇಪ್ಪತ್ತನೆ ಶತಮಾನದ ಆದಿಗೆ ಡುಮಿನಿಯನ್ನುಗಳೆಂಬವು ಐದು; ಕನಡ, ನ್ಯೂಫೌಂಡ್ಲಂಡ್, ಆಸ್ಟ್ರೇಲಿಯ, ನ್ಯೂಸೀಲಂಡ್ ಮತ್ತು ಸೌತ್‌ಆಫ್ರಿಕನ್ ಯೂನಿಯನ್. 1922ರಲ್ಲಿ ಐರಿಷ್ ಫ್ರೀಸ್ಟೇಟೆಂಬುದು ಆರನೆಯದಾಯಿತು. ಆರು ಕ್ಷೇತ್ರಗಳಲ್ಲಿಯೂ ನೆಲೆಸಿದ್ದ ಬ್ರಿಟಿಷ್ ನಿವಾಸಿಗಳ ವಶದಲ್ಲಿಯೇ ಒಳಾಡಳಿತ ನಡೆಯುತಕ್ಕುದಾಗಿತ್ತು. ಎರಡನೆ ಬೋಯರ್ ಯುದ್ಧಕಾಲದಲ್ಲಿ ಕನಡ, ಆಸ್ಟ್ರೇಲಿಯ ಮತ್ತು ನ್ಯೂಸೀಲಂಡ್‌ಗಳ ಬ್ರಿಟಿಷ್ ನಿವಾಸಿಗಳು ಸೈನ್ಯಕಟ್ಟಿ ಬ್ರಿಟನ್ನಿನ ಸಹಾಯಕ್ಕೊದಗಿದ್ದರು. ಡುಮಿನಿಯನ್ನುಗಳಲ್ಲದೆ ಕಾಲೊನಿಗಳೆಂದೂ ಆಶ್ರಿತರಾಷ್ಟ್ರಗಳೆಂದೂ ಇದ್ದ ರಾಶಿಯ ಆಡಳಿತ ಇಂಗ್ಲಂಡಿನ ಮಂತ್ರಿಗಳ ಅಧೀನದಲ್ಲಿ ಇರುತ್ತಿತ್ತು.

ಅತಿದೂರಪ್ರದೇಶಗಳಿಂದ ಕೂಡಿದ್ದ ಸಾಮ್ರಾಜ್ಯದ ಒಗ್ಗಟ್ಟನ್ನು ರಕ್ಷಿಸಿಕೊಳ್ಳುವುದು ಹೇಗೆಂದು ಹತ್ತೊಂಭತ್ತನೆ ಶತಮಾನದ ಕೊನೆಯಲ್ಲಿ ಅನೇಕರಬುದ್ಧಿಗೆ ವಿಚಾರವಾಗಿತ್ತು. ಜೋಸೆಫ್ ಚೇಂಬರ್ಲೇನ್ ಆ ವಿಚಾರವನ್ನೇ ಹಿಡಿದು ಸಾಮ್ರಾಜ್ಯಪಕ್ಷಪಾತತತ್ತ್ವದಿಂದ ಕೂಡಿದ ಶುಲ್ಕನೀತಿಯನ್ನು ಆಲೋಚಿಸಿದ್ದನು. 1909ರಲ್ಲಿ ಬ್ರಿಟಿಷ್ ಸಾಮ್ರಾಜ್ಯವೆಲ್ಲವೂ ಪೃಥ್ವಿಯಲ್ಲಿ ಏಕದೇಹದಂತೆ ಸಂಧಿವಿಗ್ರಹಗಳಲ್ಲಿ ವ್ಯವಹರಿಸುತ್ತ ವ್ಯೂಹಕಟ್ಟಿಕೊಂಡಿರುವ ವಿಚಾರಕ್ಕಾಗಿ ದೊಡ್ಡ ಸಮ್ಮೇಳನ ನಡೆಯಿತು. ಡುಮಿನಿಯನ್ನುಗಳಲ್ಲಿ ಪ್ರತ್ಯೇಕವಾದ ಸೈನ್ಯರಚನೆಗಳು ಆವೇಳೆಗೆ ಮೊದಲಾಗಿದ್ದವು.

**ಡುಮಿನಿಯನ್ನುಗಳ ಬಯಕೆ**

1911ರಲ್ಲಿ ಸಾಮ್ರಾಜ್ಯ ಸಮ್ಮೇಳನ ನಡೆದಾಗ ಡುಮಿನಿಯನ್ನುಗಳ ಪ್ರತಿನಿಧಿಗಳು ಸಂಧಿವಿಗ್ರಹನಿರ್ವಾಹದಲ್ಲಿ ತಮಗೂ ಅಧಿಕಾರವಿರಬೇಕೆಂದು ವಾದಿಸಿದರು. ಪ್ರಧಾನ ಆಸ್‌ಕ್ವಿತ್ ಹಾಗಾಗಲಾರದೆಂದು ನುಡಿದನು.

1914ರಲ್ಲಿ ಘೋರವಾಗಿ ಜರ್ಮನ್ ಯುದ್ಧ ಕೆರಳಿದಾಗ ಸಾಮ್ರಾಜ್ಯವಿಭಾಗಗಳಿಂದ ಯಥೇಷ್ಟವಾದ ಸೈನ್ಯಸನ್ನಾಹವೂ ಸಹಾಯವೂ ಒದಗಿತು. 1917ರಲ್ಲಿ

ಒಂದು ಸಾಮ್ರಾಜ್ಯಸಮ್ಮೇಳನ ನಡೆಯಿತು. ಡುಮಿನಿಯನ್ನುಗಳ ಪ್ರತಿನಿಧಿಗಳು ಒಟ್ಟುಗೂಡಿ ಬ್ರಿಟಿಷರ ಸಂಧಿವಿಗ್ರಹನಿರ್ವಾಹದಲ್ಲಿ ತಮಗೆ ಬ್ರಿಟನ್ನೊಂದಿಗೆ ಸರಿಸಮಾನವಾದ ಪ್ರಾಬಲ್ಯ ಲಭಿಸುವ ವ್ಯವಸ್ಥೆಯಾಗಬೇಕೆಂದು ಒತ್ತಿ ಹೇಳಿದರು. ಯುದ್ಧ ಮುಗಿದ ತರುವಾಯ ಪ್ರತಿಡುಮಿನಿಯನ್ನಿನವರೂ ಸ್ವತಂತ್ರರಾಷ್ಟ್ರದಂತೆ ಪ್ರತ್ಯೇಕಸೈನ್ಯಕಟ್ಟಿದ್ದುದಲ್ಲದೆ ಸಮ್ಮೇಳನಗಳಲ್ಲಿ ತಮ್ಮ ಸ್ವಂತಪ್ರತಿನಿಧಿಯನ್ನಿಟ್ಟರು. ಪ್ಯಾರಿಸಿನಲ್ಲಿ ನಡೆದ ಶಾಂತಿಸಂಧಾನಗಳಲ್ಲಿ ಡುಮಿನಿಯನ್ನುಗಳ ಪ್ರತಿನಿಧಿಗಳು ಮುಖ್ಯರಾಗಿಯೇ ಇದ್ದರು.

**ಯುದ್ಧಕಾಲದ ಒಗ್ಗಟ್ಟು**

1922ರಲ್ಲಿ ಬ್ರಿಟನ್ನಿಗೂ ತುರ್ಕಿಗೂ ನಡೆಯುತ್ತಿದ್ದ ವ್ಯವಹಾರ ಕನಡ ಡುಮಿನಿಯನ್ನಿನವರಿಗೆ ತಮಗೆ ಸಂಬಂಧವಿಲ್ಲದ ವಿಚಾರವೆಂದೆನಿಸಿತು. ಬ್ರಿಟನ್ನಿನ ಸಂಧಿವಿಗ್ರಹದ ಪ್ರತ್ಯಂಶದಲ್ಲಿಯೂ ತಾವೇಕೆ ಭಾಗಿಗಳಾಗಬೇಕೆಂದು ಕೇಳುತ್ತ ಡುಮಿನಿಯನ್ನುಗಳು ಪ್ರತ್ಯೇಕವಾಗಿಯೇ ರಾಯಭಾರಗಳನ್ನೂ ಒಪ್ಪಂದಗಳನ್ನೂ ನಡೆಸುವ ಅಧಿಕಾರವನ್ನು ಬಯಸಿದರು.

1926ರಲ್ಲಿ ಮತ್ತೊಮ್ಮೆ ಸಾಮ್ರಾಜ್ಯ ಸಮ್ಮೇಳನ ಕೂಡಿತು. ಅದರಲ್ಲಿ ಐರಿಷ್ ಫ್ರೀ ಸ್ಟೇಟ್ ಎಂಬ ಹೊಸ ರಾಷ್ಟ್ರದ ಪ್ರತಿನಿಧಿಯೂ ಬಂದಿದ್ದನು. ಬ್ರಿಟನ್ನಿಗೂ ಡುಮಿನಿಯನ್ನುಗಳಿಗೂ ಸರಿಸಮಾನತೆಯನ್ನು ಹೇಗೆ ಸ್ಥಾಪಿಸಬೇಕೆಂಬ ಆಲೋಚನೆ ದೀರ್ಘವಾಗಿ ನಡೆಯಿತು. ಚರ್ಚೆಗಳೆಲ್ಲ ಮುಗಿದ ತರುವಾಯ 1930ರಲ್ಲಿ ನೆರೆದ ಸಮ್ಮೇಳನದಲ್ಲಿ ನಿರೂಪಣೆಯಾಗಿ 1931ರಲ್ಲಿ ಲಂಡನ್ನಿನ ಬ್ರಿಟಿಷ್ ಪಾರ್ಲಿಮೆಂಟಿನವರು ಅದನ್ನು **ವೆಸ್ಟ್‌ಮಿನಿಸ್ಟರ್ ಕಾನೂನು** (Statute of Westminster) ಎಂಬುದರಲ್ಲಿ ಒಪ್ಪಿದರು. ಅದರಿಂದ ಲಂಡನ್ನಿನ ಪಾರ್ಲಿಮೆಂಟಿನವರು ಡುಮಿನಿಯನ್ನುಗಳಿಗಾಗಿ ತಾವೇ ಸ್ವತಂತ್ರವಾಗಿ ಶಾಸನವನ್ನು ರಚಿಸುವ ಅಧಿಕಾರವನ್ನು ಬಿಟ್ಟುಕೊಟ್ಟರು. ಒಳಾಡಳಿತ ಮಾತ್ರವಲ್ಲದೆ ಹೊರ ವಿಷಯಗಳಲ್ಲಿಯೂ ಡುಮಿನಿಯನ್ನುಗಳು ಸ್ವತಂತ್ರವಾಗಿ ವ್ಯವಹರಿಸಲು ಅಧಿಕಾರ ಪಡೆದವು. ಯುದ್ಧವಾಗಲಿ, ಕರಾರಾಗಲಿ, ಸಂಧಾನವಾಗಲಿ ಪ್ರತಿ ಡುಮಿನಿಯನ್ನಿನವರೂ ಪ್ರತ್ಯೇಕವಾಗಿ ನಡೆಸಬಹುದಾಯಿತು. ಆದರೆ ಇದರಿಂದ ಡುಮಿನಿಯನ್ನುಗಳು ಬೇರೆ ಬೇರೆಯಾಗಿ ಒಗ್ಗಟ್ಟನ್ನು ಕಳೆದವೆಂದು ಭಾವಿಸಬಾರದು. ಒಗ್ಗಟ್ಟಿನಿಂದ ದೃಢವಾಗಿ ವರ್ತಿಸುವುದಕ್ಕಾಗಿಯೇ ಈ ರೀತಿಯ ಸ್ವತಂತ್ರಾಧಿಕಾರವನ್ನು ಪ್ರತಿ ಡುಮಿನಿಯನ್ನಿನಲ್ಲಿಯೂ ಸ್ಥಾಪಿಸಿಕೊಂಡರು. ಬ್ರಿಟಿಷ್ ಸಾಮ್ರಾಜ್ಯವೆಂಬ ಹೆಸರು ರೂಢಿಯಲ್ಲಿದ್ದಾಗ್ಗೂ ಅದರ ಅರ್ಥ ಬದಲಾಯಿತು. **ಬ್ರಿಟಿಷ್ ಕಾಮನ್ವೆಲ್ತ್** ಅಥವಾ **ಬ್ರಿಟಿಷ್ ಸಮುದಾಯಬಂಧ**ವೆಂಬುದು ಆ ಅರ್ಥವನ್ನು ಕಾಣಿಸುವುದು. ಆ ಸಮುದಾಯ ಬಂಧದಲ್ಲಿ ಸಂಯುಕ್ತ ರಾಷ್ಟ್ರ (United

**ಸಮಾನ ರಾಷ್ಟ್ರಗಳ ಬಂಧ**

Kingdom), ಐರಿಷ್ ಫ್ರೀ ಸ್ಟೇಟ್, ಕನಡ, ಆಸ್ಟ್ರೇಲಿಯ, ನ್ಯೂಸೀಲಂಡ್ ಮತ್ತು ಸೌತ್ ಆಫ್ರಿಕಗಳೆಂಬ ಆರು ಪ್ರತ್ಯೇಕ ರಾಷ್ಟ್ರಗಳು ಸರಿಸಮಾನತೆಯಿಂದ ಕೂಟಕಟ್ಟಿ ಒಬ್ಬನೇ ಪ್ರಭುವನ್ನೊಪ್ಪಿ ಜಾತಿಬಾಂಧವ್ಯಗಳನ್ನೂ ಆರ್ಥಿಕ ಐಕಮತ್ಯವನ್ನೂ ರಕ್ಷಿಸಿಕೊಂಡಿರುವುವು.

ಹಿಂದುಸ್ಥಾನ್, ಬರ್ಮ, ಸಿಂಹಳ, ಪ್ಯಾಲೆಸ್ಟೈನ್, ವೆಸ್ಟಿಂಡೀಸಿನಲ್ಲಿ ಬ್ರಿಟಿಷ್ ಭಾಗ ಮುಂತಾದವುಗಳ ಪದವಿಯೂ ವೃತ್ತಾಂತವೂ ಬೇರೆ. ಅವು ಡುಮಿನಿಯನ್ನುಗಳಾಗಿಲ್ಲ.

## ಇತರ ರಾಷ್ಟ್ರಗಳು

ಬ್ರಿಟನ್ ಫ್ರಾನ್ಸ್ ಅಮೆರಿಕ ರಾಷ್ಟ್ರಗಳವರು ಜರ್ಮನಿಯೊಡನೆ ನಡೆಯುತ್ತಿದ್ದ ಯುದ್ಧವನ್ನು 1918ರಲ್ಲಿ ಮುಕ್ತಾಯಗೊಳಿಸಿಕೊಂಡರು. ಪ್ಯಾರಿಸ್ಸಿನಲ್ಲಿ ಶಾಂತಿ ಸ್ಥಾಪನೆಯ ವಿಚಾರಗಳಿಗಾಗಿ ಸಭೆಗಳೂ ಉಪಸಭೆಗಳೂ ಕರಾರುಗಳೂ ನಡೆಯುತ್ತಲೇ ಇದ್ದವು. ಅದೇವೇಳೆಯಲ್ಲಿ ರಷ್ಯ ತುರ್ಕಿಗಳಲ್ಲಿ ಅತಿಮುಖ್ಯವಾದ ಘಟನೆಗಳು ಮೇಲಿಂದಮೇಲೆ ಸಂಭವಿಸಿದವು. ಅವುಗಳ ವೃತ್ತಾಂತವನ್ನು ವಿವರವಾಗಿ ನಾವು ಕಾಣಲಾಗುವುದಿಲ್ಲ. ಅತಿಮುಖ್ಯಾಂಶಗಳನ್ನು ಮಾತ್ರ ಗುರುತುಮಾಡಿಕೊಳ್ಳಬೇಕು.

ಹತ್ತೊಂಭತ್ತನೆ ಶತಮಾನದಲ್ಲಿ ಬ್ರಿಟಿಷರಿಗೂ ಫ್ರೆಂಚರಿಗೂ ಶಂಕಾಭಯಗಳನ್ನು ಉಂಟುಮಾಡುತ್ತಿದ್ದ ರಷ್ಯ ಸಾಮ್ರಾಜ್ಯವು ಈ ಯುದ್ಧದಲ್ಲಿ ನಾಶವಾಯಿತು. ಅಲ್ಲಿ ಶತಮಾನಗಳಿಂದ ಆಳಿದ್ದ **ರೋಮನೋಫ್** (Romanoff) ರಾಜವಂಶ ನಷ್ಟವಾಯಿತು. ಸೆರ್ಬಿಯಪರವಾಗಿ ಯುದ್ಧಮೊದಲಿಟ್ಟ **2ನೆ ನಿಕೊಲಾಸ್** ಚಕ್ರವರ್ತಿಯ ಆಳಿಕೆ ನಿರಂಕುಶಪ್ರವರ್ತನೆಗೆ ಹೆಸರುವಾಸಿಯಾಗಿತ್ತು. ಇಪ್ಪತ್ತನೆ ಶತಮಾನ ಮೊದಲಾದಾಗ ಆತನು ತನ್ನ ರಾಷ್ಟ್ರದಲ್ಲಿ ಪ್ರತಿನಿಧಿಗಳ ಸಭೆ (Duma)ಯೊಂದನ್ನು ಸ್ಥಾಪಿಸಿದ್ದಾಗ್ಗೂ ಆ ಸಭೆಗೆ ಅಧಿಕಾರವೇ ಇರಲಿಲ್ಲ. ಜರ್ಮನಿಯೊಡನೆ ಘೋರ

**ಬೋಲ್ಷೆವಿಕ್ ಪಲ್ಲಟ**

ಯುದ್ಧಕ್ಕೆ ತೊಡಗಿದತರುವಾಯ ರಷ್ಯದ ಜನರಲ್ಲಿ ನಾನಾ ಕಾರಣಗಳಿಂದ ಅಡಗಿದ್ದ ಅಸಮಾಧಾನವು ಮತ್ತಷ್ಟು ಹೆಚ್ಚಿತು. 1917ರಲ್ಲಿ ರಷ್ಯದ ಸೈನ್ಯಗಳಲ್ಲಿದ್ದ ಸೈನಿಕರು ಸೈನ್ಯಗಳನ್ನು ತ್ಯಜಿಸಿ ತಮ್ಮೂರುಗಳಿಗೆ ಓಡಿದರು. ರಾಜಧಾನಿ ಸೆಂಟ್‌ಪೀಟರ್ಸ್‌ಬುರ್ಗ್ ಅಥವಾ ಪೆಟ್ರೊಗ್ರಾಡಿನಲ್ಲಿ ಪ್ರಳಯದಂತಹಪಲ್ಲಟ ಮೊದಲಾಯಿತು. ಚಕ್ರವರ್ತಿಯು ತನ್ನ ರಾಜ್ಯತ್ಯಾಗಮಾಡಿಕೊಟ್ಟನು. ಯಾವುದೋ ಒಂದುಬಗೆಯ ಸರ್ಕಾರ ಸ್ಥಾಪನೆಯಾಯಿತು. ಗಡೀಪಾರಾಗಿದ್ದ ದೇಶಭಕ್ತ **ಲೆನಿನ್** (Lenin) ಎಂಬಾತನು ಪ್ರಯಾಸದಿಂದ ಆ ವೇಳೆಗೆ ರಾಜಧಾನಿಗೆ ಹಿಂತಿರುಗಿಬಂದು ತನ್ನ ಪಕ್ಷಕ್ಕೆ ಅಧಿಕಾರದೊರಕುವಂತೆ ಏರ್ಪಡಿಸಿದನು. ಅದೇ

**ಬೋಲ್ಷೆವಿಕ್ ಪಕ್ಷ.** ಆ ಪಕ್ಷದವರು ಸರ್ವಸಮತ್ವವಾದವನ್ನು ಸಾಧಿಸಲು ಸರ್ವೋಪಾಯಗಳನ್ನೂ ಅವಲಂಬಿಸಲು ಸಿದ್ಧರಾಗಿದ್ದರು. ಬೋಲ್ಷೆವಿಕ್ ಪಕ್ಷದವರು ಮತ್ತೊಂದು ಪಲ್ಲಟವನ್ನು ನಡೆಸಿ ತಮ್ಮ ಆಡಳಿತವನ್ನು ಕಟ್ಟಿದರು. ಮತ್ತಾವ ರಾಷ್ಟ್ರದಲ್ಲಿಯೂ ಇಲ್ಲದಿದ್ದ ರೀತಿಯ ಸರ್ಕಾರ ಸ್ಥಾಪನೆಯಾಯಿತು. ಇತರ ರಾಷ್ಟ್ರಗಳಲ್ಲಿಯೂ ಅದೇರೀತಿಯ ಸರ್ಕಾರ ಸ್ಥಾಪನೆಯಾಗುವ ಕರ್ತವ್ಯವನ್ನೂ ಆ ಪಕ್ಷದವರು ಇಟ್ಟುಕೊಂಡಿದ್ದರು. ಬೋಲ್ಷೆವಿಕ್ ಪಕ್ಷದವರು ಇತರ ರಾಷ್ಟ್ರಗಳಿಂದ ಭಿನ್ನವಾದ ರೀತಿಯ ರಾಷ್ಟ್ರವನ್ನು ಕಟ್ಟಿ ಜರ್ಮನಿಯೊಂದಿಗೆ ಪ್ರತ್ಯೇಕವಾಗಿ **ಬ್ರೆಸ್ಟ್‌ಲಿಟೋವ್‌ಸ್ಕ್** ಕರಾರನ್ನು ನಡೆಸಿ ಸೋತೆವೆಂದೊಪ್ಪಿಕೊಂಡರು. ಬ್ರಿಟನ್ ಫ್ರಾನ್ಸ್ ಇಟಲಿ ಮುಂತಾದವರ ಮೈತ್ರಿಯನ್ನು ಬಿಟ್ಟರು.

ಹೊಸರಾಷ್ಟ್ರಕ್ಕೆ **ಮಾಸ್ಕೋ** ರಾಜಧಾನಿಯಾಯಿತು. ಸ್ವಲ್ಪಕಾಲದಲ್ಲಿ ಬೋಲ್ಷೆವಿಕ್ ಪಕ್ಷದವರು ಯುದ್ಧಕ್ಕೆ ತೊಡಗಬೇಕಾಯಿತು. ಜರ್ಮನಿ ಸೋತುಹೋದ ಬಳಿಕ ಮಿತ್ರಮಂಡಲಿಯವರು ಬೋಲ್ಷೆವಿಕ್ ರಾಷ್ಟ್ರವನ್ನು ತಮ್ಮೆಲ್ಲರ ವೈರಿಯೆಂದು ಭಾವಿಸಿ ರಷ್ಯವನ್ನು ಮುತ್ತಿದರು. ರಷ್ಯದೊಳಗೂ ಹೊರಗೂ ಬೋಲ್ಷೆವಿಕ್ಕರಿಗೆ ಶತ್ರುಗಳು ತೋರಿದರು. ಅತಿಪ್ರಯಾಸಪಟ್ಟು ಹೊಸರಾಷ್ಟ್ರದವರು ಹೋರಾಟ ನಡೆಸಿ ತಮ್ಮ ರಾಷ್ಟ್ರವನ್ನುಳಿಸಿಕೊಂಡರು. ರಷ್ಯವೆಂಬ ವಿಶಾಲಭೂಭಾಗದ ಬೇರೆ ಬೇರೆ ಪ್ರಾಂತಗಳಲ್ಲಿ **ಸೋವಿಯೆಟ್** ಎಂಬ ರೀತಿಯ ರಿಪಬ್ಲಿಕ್ಕುಗಳನ್ನು ನೆಲೆಗೊಳಿಸಿ ಎಲ್ಲ ಸೋವಿಯೆಟ್ಟುಗಳಿಗೂ ಅನ್ವಯಿಸಿದ ಸಂಯುಕ್ತರೀತಿಯ ಕೂಟರಾಷ್ಟ್ರವನ್ನು ಕೇಂದ್ರದಲ್ಲಿ ಸ್ಥಾಪಿಸಿದರು.

**ಸೋವಿಯೆಟ್ ಕೂಟರಾಷ್ಟ್ರ**

ಮೊದಮೊದಲಲ್ಲಿ ಸೋವಿಯೆಟ್ ರಾಷ್ಟ್ರದವರು ಕ್ರೂರಕೃತ್ಯಗಳನ್ನು ನಡೆಸಬೇಕಾಗಿತ್ತು. ಇತರ ಎಲ್ಲ ಐರೋಪ್ಯ ರಾಷ್ಟ್ರಗಳವರು ಬೋಲ್ಷೆವಿಕ್ ಪಾರ್ಟಿಯೆಂದರಾಗಲಿ ಸೋವಿಯೆಟ್‌ರಾಷ್ಟ್ರವೆಂದರಾಗಲಿ ಯಾವ ಸಂಬಂಧವನ್ನೂ ಒಲ್ಲದೆ ದೂರ ದೂರವಾಗಿದ್ದರು. ಶಾಂತಿ ನೆಲೆಸಿದ ತರುವಾಯ ಬೋಲ್ಷೆವಿಕ್ ಪಾರ್ಟಿಯವರು ಇತರ ರಾಷ್ಟ್ರಗಳಲ್ಲಿ ಪಲ್ಲಟವನ್ನು ಪ್ರೇರಿಸುವ ಯೋಚನೆಯನ್ನು ಬಿಟ್ಟು ತಮ್ಮ ಸ್ವಂತ ರಾಷ್ಟ್ರವನ್ನು ಸುವ್ಯವಸ್ಥೆಗೊಳಿಸುವ ಉದ್ಯಮಗಳಲ್ಲಿ ತೊಡಗಿದರು. ನಾನಾ ಮುಖವಾದ ಕಷ್ಟಗಳನ್ನು ಪಟ್ಟು ಹೊಸ ರಾಷ್ಟ್ರವನ್ನುದ್ಧರಿಸಿ ರಷ್ಯದ ನಿವಾಸಿಗಳೆಲ್ಲರಿಗೂ ತಂದೆಯೆನಿಸಿದ್ದ ಲೆನಿನ್ 1924ರಲ್ಲಿ ತೀರಿಕೊಂಡನು. ಆತನ ತರುವಾಯ ಸೋವಿಯೆಟ್ ಕೂಟರಾಷ್ಟ್ರಕ್ಕೆ ಆತನ ಶಿಷ್ಯನಾದ **ಸ್ಟಾಲಿನ್** (Stalin) ನಾಯಕನಾದನು. ರಷ್ಯದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಿ ವ್ಯಾಪಾರವನ್ನು ವೃದ್ಧಿಗೊಳಿಸಲು ಐದು ವರ್ಷಗಳ ಕರ್ತವ್ಯ

**ಸ್ಟಾಲಿನ್ನನ ನೀತಿ**

ಕ್ರಮವನ್ನು ಗೊತ್ತುಮಾಡಿ ಅದರಂತೆ ಭಾರಿ ಪ್ರಯತ್ನವನ್ನು ಆತನು ನಿರ್ವಹಿಸಿದನು. ಇತರ ರಾಷ್ಟ್ರಗಳೊಂದಿಗೆ ಸ್ನೇಹವೂ ಒದಗುತ್ತ ಬಂದಿತು.

1919ರಲ್ಲಿ **ತುರ್ಕಿಯ** ಸಂಬಂಧವಾಗಿ ಪ್ಯಾರಿಸ್ಸಿನಲ್ಲಿ ಸೆವೆರ್ಸ್ (Sevres) ಕರಾರೆಂಬುದು ನಡೆದ ವೇಳೆಗೆ ತುರ್ಕಿಯಲ್ಲಿಯೂ **ಪಲ್ಲಟ** ಸಂಭವಿಸಿತ್ತು. ಜರ್ಮನಿಯಲ್ಲಿ ಮೈತ್ರಿಯನ್ನು ಬೆಳೆಸಿ ಸುಲ್ತಾನನು ಬ್ರಿಟಿಷರಿಗೆ ವಿರೋಧವಾಗಿ ಯುದ್ಧ ನಡೆಸಿದನಷ್ಟೆ. ಆಗ ಬ್ರಿಟಿಷರು ತುರ್ಕಿಯ ಸುಲ್ತಾನನೊಂದಿಗೆ ಯುದ್ಧನಡೆಸುತ್ತ ಗ್ಯಾಲಿಪೋಲಿ ಮಾತ್ರವಲ್ಲದೆ ಮೆಸೊಪೊಟೇಮಿಯ ಮತ್ತು ಸಿರಿಯಗಳಲ್ಲಿಯೂ ಯುದ್ಧ ನಡೆಸಿದ್ದರು. ಅರಬ್ಬಿ ಜನರಿಗೆ ಪ್ರೋತ್ಸಾಹಕೊಟ್ಟು ಅರಬ್ಬಿ ಕುಲದವರು ತುರ್ಕಿಯ ಅಧೀನರಾಗಿರದೆ ಸ್ವತಂತ್ರಗೊಂಡು ತಮ್ಮ ಆಶ್ರಯದಲ್ಲಿ ರಾಷ್ಟ್ರಗಳನ್ನು ಕಟ್ಟಿಕೊಳ್ಳುವಂತೆ ನೆರವೇರಿಸಿದ್ದರು. ಅರಬ್ಬಿಸ್ಥಾನ ಪ್ರತ್ಯೇಕ ರಾಷ್ಟ್ರವಾಯಿತು. ಮೆಸೊಪೊಟೇಮಿಯವೆಂಬುದು **ಇರಾಕ್** (Iraq) ಎಂಬ ಹೆಸರಿನಿಂದ ಹೊಸ ರಾಜ್ಯವಾಗಿ ಬ್ರಿಟಿಷರ ಆಶ್ರಯದಲ್ಲಿ ಸೇರಿತು. ಅರಬ್ಬಿಸ್ಥಾನಕ್ಕೂ ತುರ್ಕಿಗೂ ಮಧ್ಯೆ **ಪ್ಯಾಲೆಸ್ಟೈನ್** ಮತ್ತು **ಸಿರಿಯ**ಗಳೆಂಬ ಹೊಸರಾಷ್ಟ್ರಗಳು ಹುಟ್ಟಿಕೊಂಡು ಬ್ರಿಟಿಷರ ಮತ್ತು ಫ್ರೆಂಚರ ಆಶ್ರಯದಲ್ಲಿ ಸೇರಿಕೊಂಡವು.

**ಅರಬ್ಬಿ ರಾಷ್ಟ್ರಗಳು**

ಹೀಗಾದುದು ತುರ್ಕಿಯ ಭಂಗವೆನ್ನಿಸಿತ್ತು. ಅಲ್ಲಿಯ ಜನರಲ್ಲಿ ತರುಣಪಕ್ಷ ತೋರಿದುದನ್ನು ಹಿಂದೆ ಕಂಡೆವು. ಆ ಪಕ್ಷದವರಿಗೆ ಸುಲ್ತಾನನ ದೌರ್ಬಲ್ಯವೂ ಸಹಿಸಲಿಲ್ಲ; ತಮ್ಮ ರಾಷ್ಟ್ರಕ್ಕಾದ ಅವಮಾನವೂ ಸಹಿಸಲಿಲ್ಲ. ಸಿರಿಯ ಇರಾಕ್ ಈಜಿಪ್ಟ್ ಮುಂತಾದ ಭಾಗಗಳು ನಷ್ಟವಾಗಿದ್ದುದಲ್ಲದೆ ತುರ್ಕಿಯೆಂಬುದಕ್ಕೆ ಅಪಾಯ ತೋರಿತ್ತು. ಇಸ್ತಾಂಬೂಲ್ ನಗರ ಮಿತ್ರಮಂಡಲಿಯವರ ವಶವಾಗಿದ್ದಿತು. ಸೋತುಹೋದ ತುರ್ಕಿಯಲ್ಲಿ ತಮಗೆ ಭಾಗಬರಬೇಕೆಂದು ಇಟಲಿಯವರು ಆಸೆಪಡುತ್ತಿದ್ದರು. ಅದೇ ವೇಳೆಯಲ್ಲಿ ಗ್ರೀಕರು ಈಜಿಯನ್ ದ್ವೀಪಗಳನ್ನಲ್ಲದೆ ಏಷ್ಯ ಮೈನರಿನಲ್ಲಿ ವಿಸ್ತಾರ ಪ್ರದೇಶಗಳನ್ನು ಸಂಪಾದಿಸಿಕೊಳ್ಳಲು ಸಿದ್ಧರಾಗುತ್ತಿದ್ದರು. ಇಟಲಿಯವರಿಗೆ ಅವಕಾಶವಿಲ್ಲದಂತೆ ಎಸಗಲು ಗ್ರೀಕರು ಏಷ್ಯಮೈನರ್ ಪ್ರದೇಶವನ್ನು ಮುತ್ತಿದರು. ಸುಲ್ತಾನನೆನಿಸಿದ್ದಾತ ಇದನ್ನು ತಡೆಯಲಾರದೆ ಇದ್ದನು. ಅಂತಹ ಸಂದರ್ಭದಲ್ಲಿ ತರುಣ ತುರುಷ್ಕಪಕ್ಷದಲ್ಲಿದ್ದ **ಕೆಮಾಲ್ ಪಾಷ** ಎಂಬಾತನು **ಅಂಕಾರ** (Ankara) ಎಂಬಲ್ಲಿ ತನ್ನ ಸ್ವಂತ ಪ್ರಭಾವದಿಂದ ತುರುಷ್ಕರಲ್ಲಿ ದೇಶಭಕ್ತಿಯನ್ನು ತುಂಬಿ ಹೊಸದಾದ ರಾಷ್ಟ್ರ ಕಟ್ಟಿದನು. ದೇಶವನ್ನು ಮುತ್ತಿದ್ದ ಗ್ರೀಕರನ್ನು ಸೋಲಿಸಿ ಹೊಸ ಸಂಧಾನಗಳೂ ಕರಾರುಗಳೂ ನಡೆಯುವಂತೆ ನೆರವೇರಿಸಿದನು. 1923ರಲ್ಲಿ **ಲೌಸಾನ್**

**ಗ್ರೀಕರ ಸೋಲು**

(Lausanne) **ಕರಾರೆಂಬುದು** ಹೊಸದಾಗಿ ನಡೆಯಿತು. ಇಸ್ತಾಂಬೂಲನ್ನು ತುರುಷ್ಕರಿಗೆ ಬಿಟ್ಟುಕೊಟ್ಟು ಏಷ್ಯಮೈನರ್‌ಪ್ರದೇಶ ಅವರದೆಂದು ಮಿತ್ರಮಂಡಲಿಯವರು ಆ ಕರಾರಿನಲ್ಲಿ ಒಪ್ಪಿದರು. ತುರ್ಕಿ ರಾಷ್ಟ್ರಕ್ಕೆ ಆತರುವಾಯ ಯುದ್ಧದ ತೊಂದರೆ ತೋರಲಿಲ್ಲ. ಮುಸ್ತಫಾ ಕೆಮಾಲ್‌ಪಾಷ ಅಧ್ಯಕ್ಷನಾಗಿ ಸರ್ವಾಧಿಕಾರ ನಡೆಸಿ ತುರ್ಕಿಯನ್ನು ಹೊಸ ತುರ್ಕಿಯನ್ನಾಗಿ ರಚಿಸಿ ಉದ್ಧರಿಸಿದನು.

**ಹೊಸ ತುರ್ಕಿ**

ಯುದ್ಧ ಪ್ರಾರಂಭವಾದಾಗಲೆ ಈಜಿಪ್ಟ್ ದೇಶವನ್ನು ಬ್ರಿಟಿಷರು ತಮ್ಮ ಆಶ್ರಿತ ರಾಷ್ಟ್ರವೆಂದು ಪ್ರಕಟಿಸಿ ತುರ್ಕಿಗೂ ಅದಕ್ಕೂ ಇದ್ದ ಸಂಬಂಧವನ್ನು ಮುರಿದರು. ಜರ್ಮನಿಯ ಪರವಾಗಿ ಯುದ್ಧದಲ್ಲಿ ಪ್ರವೇಶಿಸಿದ ಸುಲ್ತಾನನಿಗೆ ಈಜಿಪ್ಟ್ ಅಧೀನವಾಗಿ ಆ ಕಾಲದಲ್ಲಿ ಇರುವುದೆಂತು? ಖೇದೀವ್ ಎಂಬ ಬಿರುದು ಹೋಗಿ ಅಲ್ಲಿಯ ಪ್ರಭುವಿಗೆ ಈಜಿಪ್ಟಿನ ಸುಲ್ತಾನನೆಂಬ ಹೆಸರಾಯಿತು. ಆಡಳಿತವೆಲ್ಲವೂ ಬ್ರಿಟಿಷರ ಅಧೀನವಾಗಿಯೇ ಇತ್ತು. ಯುದ್ಧ ಮುಗಿದತರುವಾಯ ಈಜಿಪ್ಟಿನ ಜನರು ತಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರಕಬೇಕೆಂದು ಆಸೆಪಟ್ಟರು.

**ಈಜಿಪ್ಟಿನಲ್ಲಿ**

ಅಧ್ಯಕ್ಷ ವಿಲ್ಸನ್ ಕೊಟ್ಟಿದ್ದ ಪ್ರಕಟನೆಗನುಸಾರವಾಗಿ ಈಜಿಪ್ಟಿಗೆ ಸ್ವಾತಂತ್ರ್ಯ ಸಿದ್ಧಿಯಾಗತಕ್ಕುದೆಂದು ದೇಶಭಕ್ತರ ನಾಯಕ **ಸಘುಲೂಲ್ ಪಾಷ** ಚಳುವಳಿಯನ್ನು ನಡೆಸಿದನು. ಆದರೆ ಪ್ಯಾರಿಸ್ಸಿನಲ್ಲಿ ನಡೆದ ಸಭೆ ಸಮ್ಮೇಳನಗಳಲ್ಲಿ ಆ ವಿಚಾರಕ್ಕೆ ತಕ್ಕಷ್ಟು ಗೌರವ ನಡೆಯಲಿಲ್ಲ. ಬ್ರಿಟಿಷರ ಆಡಳಿತವೇ ಈಜಿಪ್ಟಿನಲ್ಲಿ ಸ್ಥಿರವಾಯಿತು. ಇದರಿಂದ ಜನರು ಬ್ರಿಟಿಷರಿಗೆ ವಿರೋಧಿಗಳಾಗಿ ಮುಷ್ಕರವನ್ನೂ ದೊಂಬಿಗಳನ್ನೂ ನಡೆಸಿದರು. ಮುಂದಿನ ಆಡಳಿತ ಹೇಗೆ ನಡೆಯಬೇಕೆಂದು ಪರೀಕ್ಷೆಮಾಡಲು ಬ್ರಿಟಿಷ್ ಮಂತ್ರಿಮಂಡಲಿಯವರು **ಮಿಲ್ನರ್ ಶ್ರೀಮಂತನ** (Lord Milner) ಅಧ್ಯಕ್ಷತೆಯಲ್ಲಿ ವಿಚಾರಕಸಭೆಯೊಂದನ್ನು ರಚಿಸಿ ಕಳುಹಿಸಿದರು. ಆ ವಿಚಾರಕಸಭೆಗೆ ಈಜಿಪ್ಟಿನ ಜನರು ಅಸಹಕಾರವನ್ನು ಒಡ್ಡಿದರು. ಕಡೆಗೆ ಸಘುಲೂಲ್ ಪಾಷನೊಂದಿಗೆ ಮಿಲ್ನರ್ ಶ್ರೀಮಂತನು ಸಂಧಾನನಡೆಸಿದನು. ಸಂಧಿವಿಗ್ರಹನಿರ್ವಾಹವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ಸೂಯೆಸ್ ಕಾಲುವೆ ಮುಂತಾದ ತಮ್ಮ ಆಸ್ತಿಗಳ ರಕ್ಷಣೆಗೆ ತಕ್ಕಷ್ಟು ಸೈನ್ಯಬಲವನ್ನು ಈಜಿಪ್ಟಿನಲ್ಲಿಟ್ಟು ಉಳಿದ ಆಡಳಿತವೆಲ್ಲವನ್ನೂ ಈಜಿಪ್ಟಿನ ಜನರಿಗೆ ಬಿಟ್ಟುಕೊಡುವಂತೆ ಷರತ್ತುಗಳುಳ್ಳ ಒಪ್ಪಂದ ನಡೆಯತಕ್ಕುದೆಂದು ನಿಶ್ಚಯವಾಯಿತು.

**ವಫ್ಧ್ ಪಕ್ಷದ ಯತ್ನ**

ಆದರೆ ಒಪ್ಪಂದ ನಡೆಸುವುದರಲ್ಲಿ ನಿದಾನವಾಯಿತು. ಈಜಿಪ್ಟಿನ ದೇಶಭಕ್ತರು ಉದ್ರೇಕಗೊಂಡರು. ಅಲ್ಲಲ್ಲಿ ದಂಗೆಗಳೂ ದೊಂಬಿಗಳೂ ಪುನಃ ರೇಗಿದವು. ಬ್ರಿಟಿಷ್

ಅಧಿಕಾರಿಗಳು ಆಗ ಅವುಗಳನ್ನು ಅಡಗಿಸಿ ಜನರಿಗೆ ನಾಯಕನಾಗಿದ್ದ ಸಘುಲೂಲನನ್ನು ಗಡೀಪಾರುಮಾಡಿದರು. ಕಡೆಗೆ ಈಜಿಪ್ಟ್ ಸ್ವತಂತ್ರದೇಶವೆಂದೂ ತಮ್ಮ ವಶದಲ್ಲಿ ಸಂಧಿವಿಗ್ರಹನಿರ್ವಾಹವಲ್ಲದೆ ಸಂಚಾರಸೌಕರ್ಯಗಳೂ ಐರೋಪ್ಯನಿವಾಸಿಗಳ ರಕ್ಷಣೆಯೂ ಸುಡಾನ್ ಪ್ರದೇಶದ ಆಡಳಿತವೂ ಇರತಕ್ಕದೆಂದೂ ಬ್ರಿಟಿಷರು ಪ್ರಕಟನೆಗೊಡಿಸಿದರು. ಪ್ರಕಟನೆಯಿಂದ ಸಘುಲೂಲ್ ಪಾಷನ ಅನುಯಾಯಿಗಳಿಗೆ ತೃಪ್ತಿಯಾಗಲಿಲ್ಲ. ಜನರ ಅಸಮಾಧಾನವೂ ತಗ್ಗಲಿಲ್ಲ. 1924ರಲ್ಲಿ **ಕೈರೋ** ಪಟ್ಟಣದಲ್ಲಿ ಸುಡಾನಿನ ಮುಖ್ಯಾಧಿಕಾರಿ **ಸರ್ ಲೀ ಸ್ಟಾಕ್** (Sir Lee Stack) ಹತ್ಯಕ್ಕೊಳಗಾದನು. ಆಗ ಬ್ರಿಟಿಷರು ಆಡಳಿತವನ್ನು ಭದ್ರಪಡಿಸಲು ದಬ್ಬಾಳಿಕೆಯನ್ನು ನಡೆಸಿದರು. ಬ್ರಿಟಿಷರಿಗೂ ದೇಶಭಕ್ತ ಪಕ್ಷಕ್ಕೂ ಈ ರೀತಿಯ ಘರ್ಷಣೆಯು ಪುನಃ ಪುನಃ ನಡೆದು ಕಡೆಗೆ 1938ರಲ್ಲಿ ಒಪ್ಪಂದವಾಯಿತು.

**ಬ್ರಿಟಿಷರ ನೀತಿ**

## ಯುದ್ಧದ ಋಣ—ತಪ್ಪುಕಾಣಿಕೆಗಳು

ವರ್ಸೇಲ್ಸ್ ಅರಮನೆಯಲ್ಲಿ 1918ರಲ್ಲಿ ಶಾಂತಿಸಂಧಾನಗಳಿಗೆ ತೊಡಗಿದಾಗ ಜರ್ಮನಿಯಲ್ಲಿ ರಾಷ್ಟ್ರಪಲ್ಲಟವಾಗಿ ಹೋಗಿದ್ದಿತಷ್ಟೆ. ಕರಾರಿನ ಅಂಶಗಳು ಇತ್ಯರ್ಥವಾಗುವವರೆಗೆ ಜರ್ಮನಿಯ ವ್ಯಾಪಾರಕ್ಕೆ ಮಿತ್ರಮಂಡಲಿಯವರು ಅವಕಾಶಕೊಡಲಿಲ್ಲ. ದಿಗ್ಬಂಧನವನ್ನು 1919ರ ಮಧ್ಯದವರೆಗೂ, ಅಂದರೆ ಹೋರಾಟ ನಿಂತ ಏಳೆಂಟು ತಿಂಗಳ ಕಾಲದಲ್ಲಿಯೂ, ರಚಿಸಿಯೇ ಇಪ್ಪರು. ಹೊಸದಾಗಿ ಹುಟ್ಟಿಕೊಂಡು ಕಷ್ಟದಿಂದ ನಡೆಯುತ್ತಿದ್ದ ಎಬರ್ಟ್ ಸರ್ಕಾರದವರು ಆಹಾರವಿಲ್ಲದೆ ಅಸುಗಳನ್ನು ಜನರು ತೊರೆಯುತ್ತಿದ್ದುದನ್ನು ಸಹಿಸಿಕೊಂಡಿರಬೇಕಾಯಿತು. ಕಡೆಗೆ ಮಿತ್ರಮಂಡಲಿಯವರು ಷರತ್ತುಗಳನ್ನು ತಾವೇ ನಿಶ್ಚಯಿಸಿದರು. ಯುದ್ಧ ನಡೆಸಿದ ತಪ್ಪು ಜರ್ಮನಿಯವರದೆಂದು ನಿರ್ಧರಿಸಿ ಜರ್ಮನರು ಆ ತಪ್ಪನ್ನೊಪ್ಪಿಕೊಂಡು ಮಿತ್ರಮಂಡಲಿಯವರಿಗಾಗಿದ್ದ ನಷ್ಟವನ್ನು ಕಟ್ಟಿಕೊಡಬೇಕೆಂದು ಗೊತ್ತುಮಾಡಿದರು. ಆ ಷರತ್ತುಗಳನ್ನು ಜರ್ಮನ್ ಪ್ರತಿನಿಧಿಗಳೊಪ್ಪಿಕೊಂಡು ತಮ್ಮ ದೇಶವನ್ನು ದಿಗ್ಬಂಧನದಿಂದ ಪಾರುಮಾಡಿಸಿದರು.

**ಜರ್ಮನಿಯ ಸ್ಥಿತಿ**

ಜರ್ಮನಿಯಲ್ಲಿ ಹುಟ್ಟಿಕೊಂಡಿದ್ದ ಹೊಸರಾಷ್ಟ್ರದಿಂದ ನಷ್ಟದ ಹಣವನ್ನು ಮಿತ್ರಮಂಡಲಿಯವರು ಬರಮಾಡಿಕೊಳ್ಳುವುದು ಹೇಗೆಂಬುದು ಬರಬರುತ್ತ ಅತಿವಿಷಮವಾದ ಸಮಸ್ಯೆಯಾಯಿತು. ಹಡಗುಗಳನ್ನು ಕಳಕೊಂಡು ಕೈಗಾರಿಕೆಗಳಿಲ್ಲದೆ ಇದ್ದ ಜರ್ಮನಿಯು ಯಾವರೀತಿಯಲ್ಲಿ ಹಣವನ್ನು ಜಯಶಾಲಿರಾಷ್ಟ್ರಗಳಿಗೆ ಸಲ್ಲಿಸಬಹುದೆಂಬ ಪ್ರಶ್ನೆಗೆ ಸಮಾಧಾನಕರವಾದ ಉತ್ತರವೇ ದೊರಕಲಿಲ್ಲ. 1921ರಲ್ಲಿ ಜರ್ಮನಿಯಿಂದ ಮಿತ್ರ

**ತಪ್ಪುಕಾಣಿಕೆವಿಚಾರ**

ರಾಷ್ಟ್ರಗಳಿಗೆ £ 6000,000,000 ಸಂದಾಯವಾಗಬೇಕೆಂದು ಲೆಕ್ಕಕಟ್ಟಿತ್ತು. ಅಷ್ಟನ್ನು ಜರ್ಮನಿ ಕೈಗಾರಿಕೆ ಸಾಮಾನಿನರೂಪದಲ್ಲಿ ಸ್ವೀಕರಿಸಿದಪಕ್ಷದಲ್ಲಿ ತಮ್ಮ ಸ್ವಂತ ಕೈಗಾರಿಕೆ ವ್ಯಾಪಾರಗಳಿಗೆ ಲೋಪವಾಗುವುದೆಂಬ ಶಂಕೆಯಿತ್ತು. ಆದಾಗ್ಗೂ ಫ್ರೆಂಚರೂ ಬೆಲ್ಜಿಯನ್ನರೂ ಆತುರಪಟ್ಟು ಜರ್ಮನಿಯಿಂದ ಹಣಬರಮಾಡಿಕೊಳ್ಳಲು 1923ರಲ್ಲಿ **ರೂರ್** (Ruhr) ಪ್ರಾಂತವನ್ನು ಆಕ್ರಮಿಸಿಕೊಂಡು ಅಲ್ಲಿಯ ಕಾರ್ಖಾನೆಗಳ ಲಾಭವನ್ನು ತಾವೇ ಪಡೆದುಕೊಳ್ಳುವ ಪ್ರಯತ್ನ ಮಾಡಿದರು. ಆದರೆ ಅಲ್ಲಿಯ ಜರ್ಮನ್ ಕೆಲಸಗಾರರು ಅಸಹಕಾರವನ್ನಾರಂಭಿಸಿದರು. ಫ್ರೆಂಚರಿಗೆ ಲಾಭವಾಗಲಿಲ್ಲ. ಜರ್ಮನಿಯ ಆರ್ಥಿಕ ಜೀವನ ಅಲ್ಲಕಲ್ಲೋಲವಾಯಿತು. ಸರ್ಕಾರ ನಡೆಯುವುದಕ್ಕೆ ಹಣಸಾಲದೆ ಹೋಯಿತು. ಫ್ರಾನ್ಸಿನಲ್ಲಿಯೂ ತೊಂದರೆಗಳಾದವು. ಯಾವಲಾಭವನ್ನೂ ಕಾಣದೆ ಫ್ರೆಂಚರು ರೂರ್ ಪ್ರದೇಶವನ್ನು 1924ರಲ್ಲಿ ಬಿಟ್ಟು ಹೊರಟುಬಂದರು.

**ರೂರ್ ಆಕ್ರಮಣ**

ಈ ಮಧ್ಯೆ ಸಾಲಗಳ ಲೆಕ್ಕ ದೊಡ್ಡ ಭೂತದಂತಾಗಿತ್ತು. ಮಿತ್ರರಾಷ್ಟ್ರಗಳಲ್ಲಿ ಅನೇಕ ರಾಷ್ಟ್ರಗಳು ಬ್ರಿಟನ್ನಿನಿಂದ ಸಾಲಗಳನ್ನು ತೆಗೆದಿದ್ದವು. ಬ್ರಿಟನ್ನಿನವರು ಅಮೆರಿಕದಿಂದ ಸಾಲ ತೆಗೆದಿದ್ದರು. ಜರ್ಮನಿಯಿಂದ ಬರಬೇಕಾದ ಹಣ ಬಂದ ಹೊರತು ಸಾಲತೀರಿಸಲಾಗದೆಂದು ಸಾಲಗಾರ ರಾಷ್ಟ್ರಗಳೆಲ್ಲವೂ ಹೇಳಬೇಕಾಗಿ ಬಂತು. ಸಾಲವಾಗಿ ಕೊಟ್ಟ ಹಣ ಹಿಂತಿರುಗಿ ಬರುವುದಕ್ಕೆ ಜರ್ಮನಿಯ ಕೈಗಾರಿಕೆ ವ್ಯಾಪಾರಗಳು ಊರ್ಜಿತಗೊಳ್ಳುವಂತೆ ನಡೆಯಬೇಕಾಯಿತು. ಅಮೆರಿಕದವರು ಹಳೆಸಾಲಗಳನ್ನು ಬರಮಾಡಿಕೊಳ್ಳಲು ಹೊಸ ಸಾಲಗಳನ್ನು ಕೊಡಲಾರಂಭಿಸಿದರು. ಸಾಲಸೋಲಗಳ ವಿಚಾರವು ಅತಿಜಟಿಲವಾಗಿ ಹೋಯಿತು.

**ಸಾಲಗಳ ಜಡೆ**

ಜರ್ಮನಿಯಿಂದ ಬರಮಾಡಿಕೊಳ್ಳಬೇಕಾದ ಹಣವನ್ನು ಲೆಕ್ಕಮಾಡಲು ಒಂದು ಬಾರಿ **ಡಾಸ್** (Dawes) ಎಂಬಾತನು ಪ್ರಯತ್ನಮಾಡಿ ಒಂದು ಗೊತ್ತುವಳಿ ನಡೆಸಿದನು. ಅದು ಅಸಾಧ್ಯವೆಂದು ಕೆಲವರ್ಷಗಳಲ್ಲಿ ಕಂಡುಬಂದ ಬಳಿಕ **ಯಂಗ್** (Young) ಎಂಬಾತನು ಮತ್ತೊಮ್ಮೆ ಲೆಕ್ಕಮಾಡಿ ಇನ್ನೊಂದು ಸಿರ್ಧರಮಾಡಿಸಿದನು.

ದೇಶವಿದೇಶಗಳ ಲೆಕ್ಕಾಚಾರಗಳು ಯಾರಿಗಾದರೂ ಹುಚ್ಚು ಹಿಡಿಸುವಷ್ಟು ಬೆಳೆದವು. ಪರಿಸ್ಥಿತಿ ಹೀಗಿರಲು 1929ರಲ್ಲಿ ಅಮೆರಿಕದಲ್ಲಿ ಪ್ರಳಯದಂತೆ ಷೇರ್ ಬಜಾರಿನಲ್ಲಿ ಘಟಿಸಿತು. ಅಲ್ಲಿಂದ ಪ್ರಾರಂಭವಾಯಿತು ಒಟ್ಟು ಜಗತ್ತಿನಲ್ಲೆಲ್ಲ ಕೃತ್ರಿಮವಾದ ದುರ್ಭಿಕ್ಷ. ಪ್ರತಿ ದೇಶದಲ್ಲಿಯೂ ಇಕ್ಕಟ್ಟಾಯಿತು. 1932ರಲ್ಲಿ ಐರೋಪ್ಯರಾಷ್ಟ್ರ ಪ್ರತಿನಿಧಿಗಳು ಲೌಸಾನಿನಲ್ಲಿ ಸಮ್ಮೇಳನ ಸೇರಿ ಜರ್ಮನಿಯಿಂದ ಹಣವನ್ನು ಬರಮಾಡಿ

**ಆರ್ಥಿಕ ವಿಪತ್ತು**

ಕೊಳ್ಳುವುದು ಆಗುವುದಿಲ್ಲವೆಂದೊಪ್ಪಿದರು. ಅಮೆರಿಕದವರಿಗೆ ಕೊಡಬೇಕಾದ ಸಾಲವನ್ನು ಐರೋಪ್ಯ ರಾಷ್ಟ್ರಗಳವರು ಕೊಡಲಾರದೆ ಹೋದರು.

ಐತನ್ಮಧ್ಯೆ ಪ್ರತಿರಾಷ್ಟ್ರದವರೂ ತಮ್ಮ ಸ್ವಂತ ಯೋಗಕ್ಷೇಮದಲ್ಲಿ ಆಸಕ್ತರಾಗಿ ಹೊರವ್ಯಾಪಾರದಲ್ಲಿ ಸುಂಕಗಳನ್ನು ಹೇರಿದರು. ದೇಶದಿಂದ ದೇಶಕ್ಕೆ ವ್ಯಾಪಾರ ನಡೆಯುವುದು ಕಷ್ಟವಾಯಿತು. ಹೊಸರಾಷ್ಟ್ರಗಳವರು ಹಿಂದಿನ ಬಾಕಿಗಳನ್ನೊಪ್ಪಲಾರೆವೆನ್ನುತ್ತಿದ್ದರು. ಜಯಶಾಲಿಗಳಾದ ರಾಷ್ಟ್ರಗಳಲ್ಲಿ ವೆಚ್ಚಕ್ಕೆ ತಕ್ಕಷ್ಟು ಆದಾಯ ವೇಳುವುದು ಕಷ್ಟವಾಯಿತು. ಜರ್ಮನಿಯಲ್ಲಿ ಎರಡು ಪಲ್ಲಟಗಳಾಗಿ **ನಾಟ್ಸಿ ಪಾರ್ಟಿ**ಯವರು ಪ್ರಬಲರಾಗುತ್ತಲಿದ್ದರು. ಆ ಪಕ್ಷದವರು ಯುದ್ಧದ ತಪ್ಪನ್ನು ತಮ್ಮ ಮೇಲೆ ಇತರರು ಹೊರೆಸಿದ್ದು ಅನ್ಯಾಯವೆಂದು ಉಗ್ರರಾಗಿ ಅದರ ಪ್ರತೀಕಾರಕ್ಕಾಗಿ ಸನ್ನಾಹ ಮಾಡುತ್ತಿದ್ದರು. ಆ ಪಾರ್ಟಿಯವರು ಸ್ವಲ್ಪ ಕಾಲದಲ್ಲಿಯೇ ಜರ್ಮನಿಯ ಆಡಳಿತವನ್ನು ವಶಪಡಿಸಿಕೊಂಡು ಜರ್ಮನಿಯಲ್ಲಿ ಸೈನ್ಯಕಟ್ಟಲು ತೊಡಗಿದರು. ಕೂಡಲೆ ಫ್ರಾನ್ಸ್ ಮುಂತಾದ ಇತರ ರಾಷ್ಟ್ರಗಳವರೂ ತಮ್ಮ ಯೋಗ್ಯತೆಗೆ ಮೀರಿದ ವೆಚ್ಚವನ್ನು ಸಂಗ್ರಾಮ ಸಿದ್ಧತೆಯ ಅಂಗಗಳಿಗಾಗಿ ನಡೆಸುತ್ತಿರಬೇಕಾಯಿತು. 1933ರಲ್ಲಿ ಜರ್ಮನಿಯವರು ಲೀಗ್ ಆಫ್ ನೇಷನ್ಸ್ ಬಿಟ್ಟು ಬೇರೆಯಾದರು. ಅಲ್ಲಿಂದೀಚೆಗೆ ನಡೆದ ಸಂಗತಿಗಳನ್ನು ಇಲ್ಲಿ ವಿವರವಾಗಿ ಕಾಣಲಾರೆವು. ಮುಖ್ಯವಾದ ಕೆಲವನ್ನು ಗುರುತಿಟ್ಟುಕೊಳ್ಳಬಹುದು.

**ವಿಪರ್ಯಾಸ**

1934ರಲ್ಲಿ ಜರ್ಮನಿಯ ಅಧ್ಯಕ್ಷ ಹಿಂಡೆನ್ಬುರ್ಗ್ ತೀರಿಕೊಂಡನು. ನಾಟ್ಸಿ ಪ್ರಮುಖ ಹೆರ್ ಹಿಟ್ಲರ್ ಸರ್ವಾಧಿಕಾರಿಯಾದನು. 1935ರಲ್ಲಿ ಸಾರ್ ಪ್ರದೇಶವು ಫ್ರಾನ್ಸ್ ಸ್ವಾಧೀನತಪ್ಪಿ ಜರ್ಮನಿಗೆ ಸೇರಿಕೊಂಡಿತು. 1938ರಲ್ಲಿ ನಾಟ್ಸಿಗಳು ಆಸ್ಟ್ರಿಯವನ್ನು ಆಕ್ರಮಿಸಿಕೊಂಡರು.

## ಸರ್ವರಾಷ್ಟ್ರ ಕೂಟ

ಮೊದಲು ವಿಲ್ಸನ್ ಮನಸ್ಸಿನಲ್ಲಿ ಹುಟ್ಟಿ ಪ್ಯಾರಿಸ್ಸಿನ ಶಾಂತಿ ಸಂಧಾನಗಳ ಸಮಯದಲ್ಲಿ ರೂಪಗೊಂಡ ಕೂಟ **ಲೀಗ್ ಆಫ್ ನೇಷನ್ಸ್** ಎಂಬುದು. ಜಿನೀವ ಪಟ್ಟಣದಲ್ಲಿ ಅದರ ಕಚೇರಿಗಳು ಸ್ಥಾಪಿತವಾದವು. ಅಮೆರಿಕನ್ನರು ಅದನ್ನು ಸೇರಿಕೊಳ್ಳಲಿಲ್ಲ. ಬೋಲ್ಷೆವಿಕ್ ಪಕ್ಷ ಪ್ರಬಲವಾಗಿದ್ದ ರಷ್ಯವನ್ನು ಸೇರಿಸಲಾಗಲಿಲ್ಲ. ಸೋತು ಅಪರಾಧಿಯೆನಿಸಿದ ಜರ್ಮನಿಯನ್ನು ಸೇರಿಸಲಿಲ್ಲ. ಸೇರಿದ ರಾಷ್ಟ್ರಗಳಲ್ಲಿ ಮುಖ್ಯವಾದವುಗಳು ಗ್ರೇಟ್ ಬ್ರಿಟನ್, ಫ್ರಾನ್ಸ್, ಇಟಲಿ, ಜಪಾನ್ ಮುಂತಾದ ಜಯಶಾಲಿಗಳಾದ ರಾಷ್ಟ್ರಗಳು. 1926 ರಲ್ಲಿ ಜರ್ಮನಿಯನ್ನು ಸೇರಿಸಿಕೊಳ್ಳಲಾಯಿತು. ಒಟ್ಟು

**ಪ್ರಾರಂಭ**

ಪೃಥ್ವಿಗೆ ಸಂಬಂಧಪಟ್ಟ ಹಲಕೆಲವು ವಿಷಯಗಳಲ್ಲಿ ಈ ಸಂಘದಿಂದ ಒಳ್ಳೆ ಕೆಲಸ ನಡೆಯಿತು. ದೇಶವಿದೇಶಗಳಲ್ಲಿ ಶ್ರಮಜೀವಿಗಳ ಸ್ಥಿತಿಗತಿಗಳ ಪರೀಕ್ಷೆ ನಡೆಸುವುದರಲ್ಲಿಯೂ ಅಫೀಂ ಮುಂತಾದ ಮಾದಕ ಪದಾರ್ಥಗಳ ವ್ಯಾಪಾರವನ್ನು ನಿಷೇಧಗೊಳಿಸುವುದರಲ್ಲಿಯೂ ಉಪಯೋಗವಾಯಿತು. **ದಿ ಹೇಗ್** (The Hague) ಎಂಬ ಪಟ್ಟಣದಲ್ಲಿ ರಾಷ್ಟ್ರಗಳಿಗೆ ಪರಸ್ಪರವಾಗಿ ತೋರಿದ ಮನಸ್ತಾಪಗಳನ್ನೂ ವ್ಯಾಜ್ಯಗಳನ್ನೂ ತೀರ್ಮಾನಿಸಲು ಒಂದು ನ್ಯಾಯಸ್ಥಾನವೂ ನಡೆಯಿತು.

ಯುದ್ಧವೆಂಬುದು ಪುನಃ ತೋರಿಕೊಳ್ಳದಂತೆ ನೆರವೇರಿಸುವುದು ಈ ಸಂಘದ ಉದ್ದೇಶಗಳಲ್ಲಿ ಮುಖ್ಯವಾಗಿತ್ತು. ಯಾವ ರಾಷ್ಟ್ರದವರಾದರೂ ಮುಂದೆಬಿದ್ದು ಮತ್ತೊಬ್ಬರನ್ನು ಬಲದಿಂದ ಆಕ್ರಮಿಸಿದಾಗ ಅಪರಾಧಿರಾಷ್ಟ್ರವನ್ನು ಅಡಗಿಸಲು ಈ ಸಂಘಕ್ಕೆ ಸ್ವಂತಸೈನ್ಯಬಲವೆಂಬುದಿರಲಿಲ್ಲ. ಕೆಲವು ಸಣ್ಣ ರಾಷ್ಟ್ರಗಳು ತಮ್ಮ ಜಗಳಗಳನ್ನು ಸಂಘದ ಮೂಲಕ ಇತ್ಯರ್ಥಮಾಡಿಕೊಂಡಾಗ್ಗೂ ಪ್ರಬಲ ರಾಷ್ಟ್ರಗಳ ಮಧ್ಯೆ ನ್ಯಾಯವನ್ನು ನೆಲೆಗೊಳಿಸುವ ಶಕ್ತಿ ಸಾಮರ್ಥ್ಯಗಳು ಸಂಘಕ್ಕಿರಲಿಲ್ಲ. ಸಂಘಕ್ಕೆ ಸೈನ್ಯ ಬೇಡವೆಂದ ಪ್ರಬಲ ರಾಷ್ಟ್ರಗಳವರು ಬೇರೆ ಸಭೆಗಳನ್ನೂ ಸಮ್ಮೇಳನಗಳನ್ನೂ ನಡೆಸಿ ರಾಷ್ಟ್ರಗಳು ಸಂಗ್ರಾಮ ಸನ್ನಾಹ ಪ್ರಯತ್ನವನ್ನು ತ್ಯಜಿಸುವಂತೆ ಯತ್ನಿಸುವುದಾಗಿ ಹೇಳಿಕೊಂಡು ಅದಕ್ಕಾಗಿ ಕೆಲವು **ಶಸ್ತ್ರಾಸ್ತ್ರತ್ಯಾಗದ** ಸಭೆಗಳನ್ನು (Disarmament Conference) ನಡೆಸಿದವು. ಆ ಸಭೆಗಳಲ್ಲಿ ಉದ್ದೇಶ ಸಫಲವಾಗಲಿಲ್ಲ. ಯುದ್ಧತ್ಯಾಗದ ಉದ್ದೇಶವು ಸಫಲವಾಗದಿರುವುದನ್ನು ಕಂಡು ಜರ್ಮನಿಯವರು ಸಂಗ್ರಾಮ ಸಿದ್ಧತೆಯನ್ನು ಮೊದಲಿಟ್ಟರು. ಇತರ ರಾಷ್ಟ್ರಗಳವರು ಪೋಟಾಪೋಟಿಯಿಂದ ತಮ್ಮ ಮೇರೆಗಳನ್ನು ಬಲಪಡಿಸಿಕೊಳ್ಳುವುದಕ್ಕೂ ಸ್ಥಳಜಲಾಕಾಶ ಸೈನ್ಯಗಳನ್ನು ಹೆಚ್ಚಿಸಿಕೊಳ್ಳುವುದಕ್ಕೂ ತೊಡಗಿದರು.

**ದೌರ್ಬಲ್ಯ**

**ಯುದ್ಧತ್ಯಾಗ ವಿಚಾರ**

ಯುದ್ಧವಾಗದಂತೆ ನೆರವೇರಿಸಿಕೊಳ್ಳುವ ಉದ್ಯಮ ಮತ್ತೊಂದು ಬಗೆಯಲ್ಲಿಯೂ ನಡೆಯಿತು. 1925ರಲ್ಲಿ ಫ್ರಾನ್ಸ್, ಬ್ರಿಟನ್, ಜರ್ಮನಿ, ಇಟಲಿ ಮತ್ತು ಬೆಲ್ಜಿಯಂ ರಾಷ್ಟ್ರಗಳು ಒಟ್ಟುಗೂಡಿ ತಮ್ಮಲ್ಲಿ ಒಬ್ಬರು ಮತ್ತೊಬ್ಬರ ಮೇಲೆ ಯುದ್ಧ ಕಟ್ಟುವುದಿಲ್ಲವೆಂದೂ ಯಾರಾದರೂ ಆಕ್ರಾಂತರಾದರೆ ಇತರರೆಲ್ಲರೂ ಆ ರಾಷ್ಟ್ರದ ಸಹಾಯಕ್ಕೆ ಹೊರಡಬೇಕೆಂದೂ ಪರಸ್ಪರವಾಗಿ **ಲೊಕಾರ್ನೊ** (Locarno) ಗೊತ್ತುವಳಿ ನಡೆಸಿಕೊಂಡರು. ಇಂತಹ ಗೊತ್ತುವಳಿಗಳನ್ನು ಫ್ರಾನ್ಸ್ ಬೆಲ್ಜಿಯಂ ರಾಷ್ಟ್ರಗಳು ಸೆಕೊಸ್ಲೊವೇಕಿಯ ಪೋಲಂಡುಗಳೊಂದಿಗೆ ನಡೆಸಿಕೊಂಡವು. ಆಗ ಬ್ರಿಟನ್ನಿನವರು ಮಧ್ಯಯೂರೋಪಿನ ಜಗಳಗಳಲ್ಲಿ ತಾವು ಪ್ರವೇಶಮಾಡಲಾರೆವೆಂದು

**ಕ್ಷೇಮಸಿದ್ಧಿ ವ್ಯೂಹ ರಚನೆ**

ಹೇಳಿ ದೂರವಾದರು. ಇಂತಹ ಗೊತ್ತುವಳಿಗಳು ಹಿಂದೆ ಪ್ರಾಬಲ್ಯ ಸಮುತ್ವವನ್ನು ಎತ್ತಿಹಿಡಿಯಲು ಯೂರೋಪಿನಲ್ಲಿ ನಡೆದ ವ್ಯೂಹ ಪ್ರತಿವ್ಯೂಹಗಳಂತೆ ಕಂಡವು.

1928 ಅಮೆರಿಕದ **ಕೆಲ್ಲಾಗ್** ( Kellogg ) ಎಂಬಾತನು ಮುಂದೆ ನಿಂತು ಯುದ್ಧತ್ಯಾಗದ ಸಂಕಲ್ಪವನ್ನು ಪ್ರಬಲ ರಾಷ್ಟ್ರಗಳಿಂದ ಮಾಡಿಸುವ ಪ್ರಯತ್ನ ಮಾಡಿದನು. ಬ್ರಿಟನ್ನಿನವರು ಆ ಸಂಕಲ್ಪವನ್ನು ಸಂಪೂರ್ಣವಾಗಿ ಮಾಡಲಾರದಾದರು. 1933ರಲ್ಲಿ ಪುನಃ ನಾಲ್ಕು ಪ್ರಬಲರಾಷ್ಟ್ರಗಳಾದ ಗ್ರೇಟ್ ಬ್ರಿಟನ್, ಫ್ರಾನ್ಸ್, ಜರ್ಮನಿ, ಇಟಲಿಗಳವರು ಪರಸ್ಪರ ಸಹಾಯದಿಂದ ಶಾಂತಿಯನ್ನು ಕಾಪಾಡಬೇಕೆಂದು ಗೊತ್ತುಮಾಡಿಕೊಂಡರು. ಆದರೆ ಸ್ವಲ್ಪ ಕಾಲದಲ್ಲಿ ಜರ್ಮನಿಯಲ್ಲಿ ನಾಟ್ಸಿ ಪಕ್ಷದವರು ಪ್ರಬಲರಾಗಿ ಯುದ್ಧಸಿದ್ಧತೆಗಾಗಿ ಸೈನ್ಯಗಳನ್ನು ಕಟ್ಟಲು ತೊಡಗಿದರು. ಆ ಪಕ್ಷಕ್ಕೆ ಮುಖಂಡನಾದ ಹೆರ್ ಹಿಟ್ಲರ್ ಬೇಗಬೇಗನೆ ಪ್ರತಿಪಕ್ಷದವರನ್ನು ಅಡಗಿಸಿ ಜರ್ಮನಿಗೆಲ್ಲ ಸರ್ವಾಧಿಕಾರಿಯಾದನು.

**ಇಟಲಿ ಜಪಾನುಗಳ ಪ್ರಯತ್ನ**

ಯುದ್ಧ ಮುಗಿದ ಅನಂತರ ರಷ್ಯದಲ್ಲಿಯೂ ತುರ್ಕಿಯಲ್ಲಿಯೂ ಬೇರೆಬೇರೆಯಾದರೂ ಹೊಸರಾಷ್ಟ್ರಗಳ ರಚನೆಯಾದುದು ಮಾತ್ರವಲ್ಲ. 1923 ತರುವಾಯ ಇಟಲಿಯಲ್ಲಿ **ಫಾಸಿಸ್ಮ್** (Fascism) ಎಂಬ ನೂತನರೀತಿಯು ಬಲಗೊಂಡಿತು. **ಮುಸ್ಸೊಲೀನಿ** (Mussolini) ಎಂಬಾತನು ಹೊಸಪಕ್ಷವನ್ನು ಕಟ್ಟಿ ಸರ್ವಾಧಿಕಾರಿಯಾದನು. ಜನಸ್ವಾಮ್ಯ, ಪ್ರಾತಿನಿಧ್ಯ ತತ್ತ್ವಗಳಿಗೆ ವಿರೋಧರೀತಿಯಲ್ಲಿ ಸರ್ವಾಧಿಕಾರಿತನವೆಂಬುದು ಇಟಲಿಯಲ್ಲಿ ಬೆಳೆದು ರೂಢಿಗೊಂಡು ಜರ್ಮನಿಯಲ್ಲಿಯೂ ತೋರಿಕೊಂಡಿತು. ಇಟಲಿಯವರು ಸಾಮ್ರಾಜ್ಯಕಟ್ಟುವ ಆಸೆಯನ್ನು ಬೆಳೆಸಿ ಕಡೆಗೆ ಆಫ್ರಿಕದಲ್ಲಿ **ಅಬಿಸ್ಸಿನಿಯ** ರಾಜ್ಯವನ್ನು ಆಕ್ರಮಿಸಿದರು. ಅತಿಪ್ರಾಚ್ಯದಲ್ಲಿ ಜಪಾನಿನವರು **ಮಂಚೂರಿಯ**ದಲ್ಲಿ ಪ್ರವೇಶಿಸಿ ಯುದ್ಧಬಲದಿಂದ ಆಕ್ರಮಣನಡೆಸಿದ್ದರು. ಈ ಎರಡುಸಂದರ್ಭಗಳಲ್ಲಿಯೂ ಲೀಗ್ ಆಫ್ ನೇಷನ್ಸ್ ಎಂಬ ಸಂಘದವರು ಯುದ್ಧವನ್ನು ನಿಲ್ಲಿಸಲಾರದೆ ಹೋದರು. ತಮ್ಮ ಆಸೆಗಳಿಗೆ ವಿರೋಧವೆಂದು ತೋರಿದ ಕೂಡಲೆ ಇಟಲಿ ಜಪಾನ್ ರಾಷ್ಟ್ರಗಳವರು ಆ ಸಂಘವನ್ನು ಬಿಟ್ಟುಬಿಟ್ಟರು. ಲೀಗ್ ಅತಿ ದುರ್ಬಲಸ್ಥಿತಿಗೆ ಬಂತು.

ಯಾವುದೋ ಮೂಲೆಯಲ್ಲಿ ಹುಟ್ಟಿ ಕೊರಕಲುಗಳಲ್ಲಿ ಹರಿದು ಕ್ರಮವಾಗಿ ಉಪನದಿಗಳನ್ನು ಕೂಡಿಕೊಂಡು ಸಾಗರದಲ್ಲಿ ಸೇರಿಕೊಳ್ಳುವ ನದಿಯಂತೆ ಈ ಚರಿತ್ರೆ ತೋರುವುದಲ್ಲವೆ? ಸಾಮ್ರಾಜ್ಯವೆಂಬುದು ವಿಸ್ತಾರಗೊಳ್ಳುವುದಕ್ಕೆ ಮೊದಲು ಬ್ರಿಟಿಷರ ಚರಿತ್ರೆ ಸುಲಭ; ಸಾಮ್ರಾಜ್ಯ ಬೆಳೆದಂತೆಲ್ಲ ವಿಸ್ತಾರ, ವಿಶಾಲ. ಬ್ರಿಟಿಷರ ಹಿಂದೆಯೆ ಇತರ ಐರೋಪ್ಯರೂ ಪೃಥ್ವಿಯಲ್ಲಿ ಸಾಮ್ರಾಜ್ಯಗಳನ್ನು ಕಟ್ಟಿಕೊಂಡು ಪೋಟಾಪೋಟಿ ಕಟ್ಟಿದ್ದರಿಂದ ಬ್ರಿಟಿಷರ ಚರಿತ್ರೆಯೆಂಬುದು ಒಟ್ಟು ಪೃಥ್ವಿಯ ಚರಿತ್ರೆಯಂತೆ ಆಯಿತು.

ಇದು ಸಣ್ಣ ಪುಸ್ತಕ. ವಿಷಯವನ್ನು ಗುರುತಿಟ್ಟುಕೊಳ್ಳುವುದಕ್ಕೆಷ್ಟೋ ಅಷ್ಟೇ ವಿವರವುಳ್ಳುದು. ಆದರೆ ನಮ್ಮ ಸ್ವಂತಕಾಲದಲ್ಲಿ ನಡೆಯುವ ಸಂಗತಿಗಳ ಪರಸ್ಪರ ಸಂಬಂಧಗಳನ್ನು ತಿಳಿದುಕೊಳ್ಳಲು ಸಹಾಯವಾಗುವುದರಿಂದ ಇದನ್ನೋದಿ ಕೊಳ್ಳುವುದು ಕೇವಲ ಪರೀಕ್ಷೆಗಾಗಿ ಅಲ್ಲ.

ಭಾರತೀಯರಾದ ನಮಗೆ ಬ್ರಿಟಿಷರ ಸಂಬಂಧ ದೃಢವಾಗಿ ಉಂಟು. ಇಪ್ಪತ್ತನೆ ಶತಮಾನದಲ್ಲಿ ಪ್ರತಿ ವಿದ್ಯಾವಂತನೂ ಜಗತ್ತಿನಲ್ಲಿ ನಡೆವ ವಿದ್ಯಮಾನಗಳನ್ನು ತಿಳಿಯಲೇ ಬೇಕು. ಆದ್ದರಿಂದ ನಾವು ಜಗತ್ತಿನಲ್ಲಿ ಬಾಳುವುದಕ್ಕಾಗಿಯೆ ಈ ಚರಿತ್ರೆಯನ್ನು ತಿಳಿಯಬೇಕು. ತಿಳಿದು ದಿನದಿನವೂ ಸಂಭವಿಸುವ ಘಟನೆಗಳನ್ನು ಅರ್ಥಮಾಡಿ ಕೊಂಡು ಯೋಗ್ಯಭಾರತೀಯರಾಗಿ ಜಗತ್ತಿನಲ್ಲಿ ಬಾಳುವುದು ಹೇಗೆಂದು ಸಿರ್ಧರ ಮಾಡಿಕೊಳ್ಳಬೇಕು.

## ಇದೇ ಗ್ರಂಥಕರ್ತರಿಂದ:

| | | |
|---|---|---|
| 1. | ಒಡೆಯರಕಾಲದ ಕಥೆಗಳು .... .... | 0—8—0 |
| 2. | ಭಾರತೀಯ ಇತಿಹಾಸಪ್ರವೇಶಿಕಾ (ಮೊದಲನೆಭಾಗ) | 2—8—0 |
| 3. | ಭಾರತೀಯ ಪೌರನೀತಿಯ ಕೈಪಿಡಿ .... | 2—8—0 |
| 4. | ಕನ್ಯಾಶುಲ್ಕ (ಅನುವಾದ) .... .... | 1—0—0 |
| 5. | ಗಾಂಧೀಜಿಯ ಹಾಸ್ಯಪ್ರವೃತ್ತಿ .... .... | 0—6—0 |
| 6. | An Introduction to Indian Civics .... | 2—0—0 |
| 7. | ಬ್ರಿಟಿಷರ ಚರಿತ್ರೆ: (ಮೊದಲನೆ ಭಾಗ) .... | 0–12—0 |
| 8. | ,, (ಎರಡನೆ ಭಾಗ) .... | 0–12—0 |
| 9. | ,, (ಮೂರನೆ ಭಾಗ) .... | 0–12—0 |
| 10. | ,, (ನಾಲ್ಕನೆ ಭಾಗ) .... | 1—2—0 |
| 11. | ,, (ಭಾಗ 1, 2 ಒಟ್ಟಿಗೆ) .... | 1—6—0 |
| 12. | ,, (ಭಾಗ 3, 4 ಒಟ್ಟಿಗೆ) .... | 1–12—0 |
| 13. | ,, ೪ ಭಾಗಗಳು ಒಟ್ಟಿಗೆ, ಕ್ಯಾಲಿಕೊ ಪ್ರತಿ | 3—0—0 |